
ಋಗ್ವೇದಸಂಹಿತಾ
ಭಾಗ-೨೨
ಐದನೆಯ ಅಷ್ಟಕದ ೪-೫ ಅಧ್ಯಾಯಗಳು
ಏಳನೆಯ ಮಂಡಲದ ಸೂಕ್ತಗಳು—೨೦-೮೦

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೨೨

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೨೨

ಐದನೆಯ ಅಷ್ಟಕದ ೩—೫ ಅಧ್ಯಾಯಗಳು.

ಏಳನೆಯ ಮಂಡಲದ ಸೂಕ್ತಗಳು ೨೦—೪೦



*Translated with Exhaustive Critical Notes*
*and Explanations*

by

**Asthana Mahavidwan**

**H. P VENKATA RAO**

*Editor*

———

Printed at

SRI SHAKTHI ELECTRIC PRESS,

MYSORE

1954

Published by the gracious permission of

His Highness

Sri Jayachamarajendra Wadiyar Bahadur,

G C B, G C S I, Maharaja of Mysore



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯ ವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್**
**ಜಿ ಸಿ ಬಿ, ಜಿ.ಸಿ ಎಸ್.ಐ ರವರು**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ



Translator & Editor

**ಆಸ್ಥಾನ ಮಹಾವಿದ್ವಾನ್ H P ವೆಂಕಟರಾವ್**

---

## ಸಹಾಯಕ ವಿದ್ವನ್ಮಂಡಲಿ

1 **ಬ್ರ॥ ಶ್ರೀ॥ G N ಚಕ್ರವರ್ತಿ,** M A
Professor of Sanskrit St Philomina's College, Mysore

2 **ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು,** ಸಾಹಿತ್ಯ ವ್ಯಾಕರಣವಿದ್ವಾನ್,
ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ, ಮೈಸೂರು

3 **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H ಗಂಗಾಧರಶಾಸ್ತ್ರಿಗಳು,** ಜ್ಯೋತಿಷ ವಿದ್ವಾನ್
ಮತ್ತು ಕರ್ನಾಟಕ ಭಾಷಾಪಂಡಿತರು

4 **ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು

5 **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತವಿದ್ವಾನ್

6 **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನಪಂಡಿತರು

7 **ಬ್ರ॥ ಶ್ರೀ॥ ವೆಂಕಟರಮಣಾಚಾರ್,** M A, B L, ಸಾಹಿತ್ಯವಿದ್ವಾನ್

8. **ಬ್ರ॥ ಶ್ರೀ॥ S ರಂಗನಾಥನ್,** ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ

9 **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯವಿದ್ವಾನ್
Govt Oriental Research Institute, Mysore

10 **ಬ್ರ॥ ಶ್ರೀ॥ S ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು,
Govt Oriental Research Institute, Mysore

# ಪೀಠಿಕೆ.

ಏಳನೆಯ ಮಂಡಲದ ೨೦ನೇ ಸೂಕ್ತದಿಂದ ೮೦ನೇ ಸೂಕ್ತದವರೆಗಿರುವ ಈ ಮೂರು ಅಧ್ಯಾಯಗಳಲ್ಲಿ (೫ನೇ ಅಷ್ಟಕದ ೩ನೇ ಅಧ್ಯಾಯದಿಂದ ಐದನೇ ಅಧ್ಯಾಯದವರೆಗೆ) ಅನೇಕ ಮುಖ್ಯ ವಿಷಯಗಳು ಪ್ರತಿಪಾದಿತವಾಗಿವೆ ಅವುಗಳಲ್ಲಿ ಕೆಲವು ಅಂಶಗಳು ಈ ಭಾಗದಲ್ಲಿ ಮಾತ್ರ ವೈಶಿಷ್ಟ್ಯವನ್ನು ಹೊಂದಿವೆ ತತ್ತ್ವತ್ರಯದ ಪೂರ್ಣವಾದ ಜ್ಞಾನವನ್ನು ಹೊಂದಿದ ವಸಿಷ್ಠಪುತ್ರರ ಸ್ತುತಿ, ತ್ರ್ಯಂಬಕಸಂಜ್ಞಕನಾದ ರುದ್ರದೇವನ ಸ್ತುತಿ ಇವೆಲ್ಲವೂ ಇಲ್ಲಿ ಪ್ರತಿಪಾದಿತವಾಗಿರುವ ಮುಖ್ಯಾಂಶಗಳು ಇವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಪರಿಶೀಲಿಸಲಾಗುತ್ತದೆ

೧) ರುದ್ರ ಮತ್ತು ತ್ರ್ಯಂಬಕರ ತಾದಾತ್ಮ್ಯ ಮತ್ತು ತ್ರ್ಯಂಬಕನ ವಿಶೇಷಸ್ವರೂಪ
೨) ಸಾರಮೇಯಸಂಜ್ಞಕವಾದ ವರುಣನ ಶ್ವಾನ
೩) ದಧಿಕ್ರಾದೇವತೆಯ ಸ್ವರೂಪ
೪) ನಿರ್ಋತಿಯ ವೈಯಕ್ತಿಕರೂಪ
೫) ವಸಿಷ್ಠಪುತ್ರರ ತತ್ತ್ವಜ್ಞಾನ ಮತ್ತು ಅವರ ಮಾಹಾತ್ಮ್ಯ
೬) ಅಹಿರ್ಬುಧ್ನ್ಯ ಮತ್ತು ಅಜಏಕಪಾದ್ದೇವತೆಗಳ ನಿಜರೂಪ ಇತ್ಯಾದಿ

## ೧) ತ್ರ್ಯಂಬಕಸಂಜ್ಞಕವಾದ ರುದ್ರದೇವತೆಯ ಮಂಗಳಸ್ವರೂಪ

ಈ ಭಾಗದಲ್ಲಿ ಏಳನೆಯ ಮಂಡಲದ ಐವತ್ತೊಂಭತ್ತನೇ ಸೂಕ್ತದ ಕೊನೆಯ ಮಂತ್ರವು **ರುದ್ರ**ದೇವತಾಕ್ರವೆಂದು ಪ್ರಕೀರ್ತಿತವಾಗಿದೆ. ಆದರೆ ಆ ಮಂತ್ರವು **ತ್ರ್ಯಂಬಕ**ನ ಮಾಹಾತ್ಮ್ಯವನ್ನು ಪ್ರಶಂಸಿಸುತ್ತದೆ **ರುದ್ರ**ಮೂರ್ತಿಯು ಭಯಂಕರವಾದ ರೂಪವನ್ನು ಹೊಂದಿರುವುದಂದೂ, ಸಾಧಾರಣವಾದ ಮಾನವನ ದೃಷ್ಟಿಗೆ ಅಷ್ಟು ಹಿತಕರವಾಗಿಲ್ಲವೆಂದೂ ಪುರಾಣಾದಿಗಳಲ್ಲಿ ಪ್ರಸಿದ್ಧವಾಗಿದೆ ಬ್ರಾಹ್ಮಣಾದಿಗಳಲ್ಲಿಯೂ ಸಹ ಈ ಅಂಶವು ಅನೇಕ ಕಡೆಗಳಲ್ಲಿ ವಿವೃತವಾಗಿವೆ ಋಕ್ಸಂಹಿತೆಯಲ್ಲಿಯೂ ಈ ಸ್ವರೂಪವು ಅನೇಕಕಡೆಗಳಲ್ಲಿ ವರ್ಣಿತವಾಗಿದೆ ಉದಾಹರಣೆಗೆ

**ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹತ್ನುಮುಗ್ರಂ ।**
**ಮೃಳಾ ಜರಿತ್ರೇರುದ್ರ ಸ್ತವಾನೋಽನ್ಯಂ ತೇ ಅಸ್ಮನ್ನಿ ವಪಂತು ಸೇನಾಃ ॥**

(ಋ ಸಂ ೨ ೩೩ ೧೧)

ರಥದಲ್ಲಿ ಕುಳಿತಿರುವವನೂ, ತರುಣನೂ, ಪ್ರಸಿದ್ಧನೂ, ಭಯಂಕರನೂ, ವನದಲ್ಲಿರುವ ದುಷ್ಟಮೃಗವು ಕೊಲ್ಲುವಂತೆ ಪ್ರಾಣಿಗಳನ್ನು ನಾಶಮಾಡುವವನೂ, ಆದ ರುದ್ರನನ್ನು ಪ್ರಶಂಸಿಸಿರಿ ಎಂದು ರುದ್ರನ ಭಯಂಕರರೂಪವು ವರ್ಣಿತವಾಗಿವೆ. ಈ ಉಗ್ರರೂಪವಿರುವುದರಿಂದಲೇ, ಇವನ ಸ್ವರೂಪಕ್ಕೆ ಬೆದರಿದ ಮಾನವವರ್ಗವು ಇವನ ರಕ್ಷಣೆಯನ್ನೇ ಕೋರುತ್ತವೆ

**ಮಾ ನಸ್ತೋಕೇ ತನಯೇ ಮಾ ನ ಆಯೌ ಮಾ ನೋ ಗೋಷು ಮಾ ನೋಂ ಅಶ್ವೇಷು ರೀರಿಷಃ।**
**ವೀರಾನ್ ಮಾ ನೋ ರುದ್ರ ಭಾಮಿತೋ ವಧೀರ್ಹವಿಷ್ಮಂತಃ ಸದಮಿತ್ವಾ ಹವಾಮಹೇ॥**

(ಋ. ಸಂ. ೧-೧೧೪-೮)

ಎಲೈ ಉಗ್ರರೂಪನಾದ ರುದ್ರನೇ, ನಮ್ಮ ಪುತ್ರಾದಿಗಳನ್ನಾಗಲಿ, ಪೌತ್ರಾದಿಗಳನ್ನಾಗಲಿ ಅಥವಾ ನಮ್ಮ ಜೀವವನ್ನಾಗ ಹಿಂಸಿಸಬೇಡ ನಮ್ಮ ವೀರಪುರುಷರನ್ನು ಹಿಂಸಿಸಬೇಡ ನಿನಗೆ ಸರ್ವದಾ ಹವಿಸ್ಸುಗಳನ್ನರ್ಪಿಸುತ್ತ ನಿನಗೆ ತೃಪ್ತಿಯನ್ನು ಉಂಟುಮಾಡುತ್ತೇನೆ ನಮ್ಮ ಮೇಲೆ ಕೋಪವನ್ನು ತೋರಿಸಿ ನಮಗೆ ಹಿಂಸೆಯನ್ನಾಗಲಿ ಅಥವಾ ಭಯವನ್ನಾಗಲಿ ಉಂಟುಮಾಡಬೇಡ ಎಂದು ದೈನ್ಯದಿಂದ ಭಯಂಕರನಾದ ರುದ್ರನು ಪ್ರಾರ್ಥಿತನಾಗಿದ್ದಾನೆ.

ಈ ರೀತಿಯಲ್ಲಿ ವರ್ಣಿತನಾಗಿರುವ ಲೋಕನಾಶಕನೆಂದು ಪ್ರಸಿದ್ಧನಾಗಿರುವ **ರುದ್ರನು** ೭-೫೯-೧೨ರಲ್ಲಿ ಲೋಕಕ್ಕೆ ಪುಷ್ಟಿದಾಯಕನೆಂದೂ ಮಂಗಳಕರನೆಂದೂ ಪ್ರಶಂಸಿತನಾಗಿದ್ದಾನೆ ಮತ್ತು **ತ್ರ್ಯಂಬಕನೆಂದು** ಪ್ರಕೃತದಲ್ಲಿ ನಿರ್ದಿಷ್ಟನಾಗಿದ್ದಾನೆ **ತ್ರ್ಯಂಬಕನೆಂದರೆ** ಮೂರುಕಣ್ಣುಳ್ಳವನೆಂದು ಲೋಕಪ್ರಸಿದ್ಧವಾದ ಅರ್ಥವಿರುತ್ತದೆ ಎರಡು ಭೌತಿಕವಾದ ಕಣ್ಣುಗಳು ಇನ್ನೊಂದು ಅಲೌಕಿಕವಾದ ದಿವ್ಯಚಕ್ಷುಸ್ಸು ಆದರೆ, ಸಾಯಣರು ಇಲ್ಲಿ ಈ ಪದಕ್ಕೆ ಆಧ್ಯಾತ್ಮಿಕ ತತ್ತ್ವವನ್ನು ವಿವರಿಸುವ ಅರ್ಥವನ್ನು ಹೇಳಿದ್ದಾರೆ.

**ತ್ರಯಾಣಾಂ ಬ್ರಹ್ಮವಿಷ್ಣುರುದ್ರಾಣಾಮಂಬಕಂ ಪಿತರಂ ತ್ರ್ಯಂಬಕಂ ।**

ಬ್ರಹ್ಮ, ವಿಷ್ಣು ಮತ್ತು ರುದ್ರ ಈ ಮೂವರಿಗೂ ಪಿತೃವಾದುದರಿಂದ **ತ್ರ್ಯಂಬಕನೆಂಬ** ಹೆಸರು ಪ್ರಸಿದ್ಧವಾಗಿದೆ ಯೆಂದು ಸಾಯಣರು ತಿಳಿಸಿದ್ದಾರೆ. ಆದುದರಿಂದಲೇ, ಸೃಷ್ಟಿಸ್ಥಿತಿಲಯಕ್ಕೆಲ್ಲ ಈ ಪ್ರಧಾನತತ್ತ್ವವೇ ಮೂಲವೆಂಬುದೂ ಪ್ರಶಂಸಿತವಾಗಿದೆ

**ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುರ್ಯ ಇಮಾಲ್ಲೋಕಾನೀಶತ ಈಶನೀಭಿಃ ।**
**ಪ್ರತ್ಯಙ್ಜನಾಸ್ತಿಷ್ಠತಿ ಸಂಚುಕೋಚಾಂತಕಾಲೇ ಸಂಸೃಜ್ಯ ವಿಶ್ವಾ ಭುವನಾನಿ ಗೋಪಾಃ ॥**
(ಶ್ವೇ ೩ ೩-೨)

**ಯಾವ** ರುದ್ರನು ಈ ಲೋಕವನ್ನೆಲ್ಲ ಉತ್ಪನ್ನಮಾಡಿ ರಕ್ಷಿಸುವನೋ ಅವನನ್ನು ಬಿಟ್ಟರೆ ಎರಡನೆಯ ಮಹಾತತ್ತ್ವ ವಾವುದೂ ಇಲ್ಲ. ಲೋಕಕ್ಕೆಲ್ಲ ಅವನೊಬ್ಬನೇ ಪ್ರಭುವು. ಸಕಲಭೂತಗಳ ಹೃದಯದಲ್ಲಿಯೂ ಅವನೊಬ್ಬನೇ ಅಂತರ್ಯಾಮಿಯಾಗಿದ್ದಾನೆ. ಲೋಕಗಳನ್ನೆಲ್ಲ ವಿಸ್ತರಿಸಿ ಪ್ರಕಟಿಸಿದನಂತರ ಪುನಃ ಅವುಗಳ ಲಯಕ್ಕೆಲ್ಲ ಅವನೊಬ್ಬನೇ ಕಾರಣನಾಗುತ್ತಾನೆ ಎಂದು ಅವನ ಸಕಲ ಶಕ್ತಿಗಳನ್ನೂ ವರ್ಣಿಸಿದೆ. ಸೃಷ್ಟಿಯಾದನಂತರ ಲೋಕರಕ್ಷಣೆಗೆ ಯಾವ ಶಕ್ತಿಯು ಅವಶ್ಯವಾಗಿರುವುದೋ ಆ ಶಕ್ತಿಯು ಮಾತ್ರ ಪ್ರಕೃತಭಾಗದಲ್ಲಿ ವರ್ಣಿತವಾಗಿದೆ. **ಸುಗಂಧಿಂ ಪುಷ್ಟಿವರ್ಧನಂ** ಎಂಬ ವಿಶೇಷಣಗಳು ಈ ಅಂಶವನ್ನು ತಿಳಿಸುತ್ತವೆ ಲೋಕಪುಷ್ಟಿಕಾರಕನಾದುದರಿಂದಲೇ, ರುದ್ರನ ಈ ಶಕ್ತಿಯನ್ನು ಬೆಳೆಸಲು **ತ್ರ್ಯಂಬಕಯಾಗವನ್ನಾಚರಿಸಿ** ಅವನಿಗೆ ತುಷ್ಟಿಯನ್ನುಂಟುಮಾಡಿ ಅವನ ಅನುಗ್ರಹವನ್ನು ಸಂಪಾದಿಸಬೇಕೆಂದು ಅನೇಕ ಕಡೆಗಳಲ್ಲಿ ತಿಳಿಸಿದೆ

**ತಾನ್ಯವಹಂತ । ಯತ್ತ್ರ್ಯಂಬಕೈರಯಜಂತ । ಅದ ಪುನರೇತ್ಯ ಜಪಂತಿ । ಅವ ರುದ್ರಮದೀಮಹ್ಯವ ದೇವಂ ತ್ರ್ಯಂಬಕಂ । ಯಥಾ ನೋ ವಸ್ಯಸಸ್ಕರದ್ಯಥಾ ನಃ ಶ್ರೇಯ-**

**ಸಸ್ಕರದ್ಯಥಾ ನೋ ವ್ಯವಸಾಯಯಾತ್ । ಭೇಷಜಮಸಿ ಭೇಷಜಂಗವೇಽಶ್ವಾಯ ಪುರುಷಾಯ ಭೇಷಜಗ್ಂಸುಖಂ ॥**

(ತೈ. ಬ್ರಾ ೧.೬.೧೦)

ದಿವ್ಯರೂಪನೂ, ತ್ರ್ಯಂಬಕಸಂಜ್ಞಕನೂ ಆದ ರುದ್ರದೇವನಿಗೆ ಹವಿಸ್ಸನ್ನರ್ಪಿಸಿರಿ ಅವನಿಗೆ ತೃಪ್ತಿಯನ್ನುಂಟುಮಾಡುವುದರಿಂದ ನಮಗೆಲ್ಲ ಧನಸಂಪತ್ತುಗಳ ಪುಷ್ಟಿಯು ಲಭಿಸುತ್ತದೆ. ಎಲ್ಲ ವಿಧವಾದ ಕ್ಷೇಮವೂ ಲಭಿಸುವುದು ಪಶು ಪುತ್ರಾದಿಗಳಿಗೆ ಸಂಭವಿಸುವ ಸಕಲ ರೋಗಗಳಿಗೂ ಅವನೊಬ್ಬನೇ ವೈದ್ಯನು ಎಂದು ಪ್ರಶಂಸಿಸಿ, ಈ ರುದ್ರನಿಗೆ **ತ್ರ್ಯಂಬಕ**ನೆಂಬ ಹೆಸರು ಹೇಗೆ ಪ್ರಸಿದ್ಧವಾಯಿತು ಎಂಬುದಕ್ಕೆ ಹಿಂದೆ ಹೇಳಿದುದಕ್ಕಿಂತಲೂ ಬೇರೆ ವಿಧವಾದ ನಿರ್ವಚನವನ್ನು ಈರೀತಿ ತಿಳಿಸಿದೆ

**ಸ ಜುಹೋತಿ । ಏಷ ತೇ ರುದ್ರ ಭಾಗಃ ಸಹ ಸ್ವಸ್ರಾಂಬಿಕಯಾ ತಂ ಜುಷಸ್ವ ಸ್ವಾಹೇತ್ಯಂಬಿಕಾ ಹ ವೈ ನಾಮಾಸ್ಯ ಸ್ವಸಾ ತಯಾಸ್ಯೈಷ ಸಹ ಭಾಗಸ್ತದ್ಯದಸ್ಯೈಷ ಸ್ತ್ರಿಯಾ ಸಹ ಭಾಗಸ್ತಸ್ಮಾತ್ ತ್ರ್ಯಂಬಕಾ ನಾಮ ॥**

**ತ್ರಂಬಕಾ**ಸಂಜ್ಞಕವಾದ ಹವಿಸ್ಸನ್ನು ಸ್ವೀಕರಿಸುವುದರಿಂದ ರುದ್ರನಿಗೆ ಈ ಹೆಸರು ರುದ್ರನ ತಂಗಿಯು ಅಂಬಿಕಾ ಎಂಬುವಳು. ಸ್ತ್ರೀರೂಪಳಾದ ಅಂಬಿಕೆಯೊಂದಿಗೆ ರುದ್ರನು ಈ ಹವಿಸ್ಸನ್ನು ಸ್ವೀಕರಿಸುವುದರಿಂದ ತ್ರ್ಯಂಬಕಾ ಎಂಬ ಹೆಸರು ಎಂಬ ನಿರ್ವಚನವನ್ನು ತಿಳಿಸಿದೆ ರುದ್ರನಿಗೆ ಈ ಹವಿಸ್ಸನ್ನರ್ಪಿಸುವುದರಿಂದ ಲೋಕಪುಷ್ಟಿಯೆಂದು ಪ್ರಶಂಸಿಸಿದೆ

ಯಾವ ತ್ರ್ಯಂಬಕಸಂಜ್ಞಕನಾದ ರುದ್ರನು ಸೃಷ್ಟಿಗೂ, ಸ್ಥಿತಿಗೂ ಲಯಕ್ಕೂ ಕಾರಣನೋ ಅವನೇ ಮೋಕ್ಷಮಾರ್ಗಕ್ಕೆ ದರ್ಶಕನು ಎಂದೂ ಸಹ ವರ್ಣಿತನಾಗಿದ್ದ ಮತ್ತು ಮುಕ್ತಿಯನ್ನು ಒದಗಿಸಲಿ ಎಂದೂ ಪ್ರಾರ್ಥಿಸಿದೆ **ವಿನಾಸೇಯಂ ರುದ್ರಸ್ಯ ಸುಮ್ನಂ** (ಋ ಸಂ ೨-೩೩-೬) ಇತ್ಯಾದಿ ಸಂಹಿತಾವಾಕ್ಯಗಳು ರುದ್ರನ ಈ ಮಹತ್ತ್ವವನ್ನು ತಿಳಿಸುತ್ತವೆ ಹೀಗೆ ಯಾವ ರುದ್ರನು ಭಯಂಕರನೆಂದು ಲೋಕಪ್ರಸಿದ್ಧನಾಗಿರುವನೋ, ಅದೇ ರುದ್ರನು ತ್ರ್ಯಂಬಕಸಂಜ್ಞಕನಾಗಿ ಲೋಕರಕ್ಷಕನೆಂದೂ, ಮುಕ್ತಿದಾಯಕನೆಂದೂ ಈ ಭಾಗದಲ್ಲಿ ಪ್ರಶಂಸಿತನಾಗಿದ್ದಾನೆ

## ೨) ಸಾರಮೇಯಸಂಜ್ಞಕವಾದ ವರುಣನ ಶ್ವಾನ

**ವಸಿಷ್ಠ**ಋಷಿಯು ವರುಣನಗೃಹಕ್ಕೆ ಹೋದಾಗ ಅವನನ್ನು ಸಾರಮೇಯನೆಂಬ ಶ್ವಾನವು ಅಟ್ಟಿಸಿಕೊಂಡು ಬಂದಿತು ಎಂಬ ಒಂದು ಪ್ರಕರಣವು ಈ ಭಾಗದಲ್ಲಿ ವಿವೃತವಾಗಿದೆ ಈ ಸಂದರ್ಭದಲ್ಲಿ ವಸಿಷ್ಠನು ವರುಣನ ಮನೆಗೆ ಹೋದ ನಿಮಿತ್ತವೇನು? ಈ ಸಾರಮೇಯವು ಅವನನ್ನು ಏತಕ್ಕೆ ಅಟ್ಟಿಸಿಕೊಂಡುಬಂದಿತು? ಆಗ ವಸಿಷ್ಠನು ಮಾಡಿದ ಉಪಾಯವೇನು ಎಂಬುದರ ವಿಷಯದಲ್ಲಿ ನಿಷ್ಕೃಷ್ಟವಾದ ಸ್ಥಿತಿಯು ತಿಳಿಯುವುದು ಶ್ರಮವಾಗಿದೆ. ಈ ಕಥೆಯ ಸಂದರ್ಭವು ಪ್ರಕೃತದಲ್ಲಿ ಎರಡು ವಿಧವಾಗಿ ತಿಳಿಸಲ್ಪಟ್ಟಿದೆ ವಸಿಷ್ಠನು ವರುಣನ ಮನೆಗೆ ಮಲಗುವುದಕ್ಕಾಗಿ ಹೋದನೆಂದು ಒಂದು ಕಥೆಯೂ, ಹಸಿವಿನಿಂದ ಬಳಲಿದ ವರುಣನು ವರುಣನ ಮನೆಯಲ್ಲಿ ಅನ್ನವನ್ನು ಕದಿಯಲು ಹೋದನೆಂದು ಇನ್ನೊಂದು ಕಥೆಯೂ ತಿಳಿಸಿವೆ ಪ್ರಕೃತದಲ್ಲಿ ಈ ವಿವರಣವು ಅಷ್ಟು ಅವಶ್ಯವಿಲ್ಲ ಇವನನ್ನು ಕಂಡು ಅಟ್ಟಿಸಿಕೊಂಡು ಬಂದ ನಾಯಿಗೆ **ಸಾರಮೇಯ** ಎಂಬ ಹೆಸರು ಬರಲು ಕಾರಣವೇನು, ಈ ನಾಯಿಯ ಸ್ವರೂಪವೇನು ಎಂಬುದನ್ನು ಪರಿಶೀಲಿಸುವುದು ಪ್ರಕೃತದಲ್ಲಿ ಅವಶ್ಯವಾಗಿರುತ್ತದೆ.

ವಸಿಷ್ಠನು ಈ ಸಾರಮೇಯವನ್ನು ನಿರ್ದೇಶಿಸಿ ಸಂಭಾಷಣವನ್ನು ಮಾಡುವ ಕ್ರಮವನ್ನು ಪರಿಶೀಲಿಸಿದರೆ, ಈ ಸಾರಮೇಯಕ್ಕೂ ಸಹ ವಿವೇಚನಸಾಮರ್ಥ್ಯವನ್ನುಂಟುಮಾಡುವ ಪ್ರಯತ್ನವು ಸ್ಪಷ್ಟವಾಗಿದೆ ಮತ್ತು ತಾನು ತಸ್ಕರನೂ ಅಲ್ಲ ಮತ್ತು ಚೋರನೂ ಅಲ್ಲ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದಾನೆ ಇಂದ್ರಭಕ್ತನಾದ ತನ್ನನ್ನು ಅಟ್ಟಿಸಿಕೊಂಡು ಬರುವುದು ಅನುಚಿತವೆಂದು ಆ ಸಾರಮೇಯಕ್ಕೆ ತಿಳಿಸುತ್ತಾನೆ

ಈ ಸಾರಮೇಯವು ಸರಮೆಯ ಕುಲದಲ್ಲಿ ಉತ್ಪನ್ನವಾದುದೆಂದು ತಿಳಿಸಿದೆ ಮುಂದೆ ೧೦-೧೪-೧೦, ೧೧ನೇ ಮಂತ್ರಗಳಲ್ಲಿ ಇವೇ ಸರಮೆಯ **ಪುತ್ರ**ರಾದ ಸಾರಮೇಯಗಳು ಯಮನ ಹತ್ತಿರವಿರುವ ನಾಯಿಗಳೆಂದೂ ಅವು ವಿಕಾರ ರೂಪವನ್ನು ಹೊಂದಿರತಕ್ಕವೆಂದೂ ಪ್ರಸಿದ್ಧವಾಗಿವೆ ಇಲ್ಲಿ ಏಕವಚನವಿದೆ ಒಂದೇ ಸಾರಮೇಯಪದರ್ಥ ಈ ಸಾರಮೇಯವು ಮುಂದೆ ವರ್ಣಿತವಾಗುವ ಸಾರಮೇಯಗಳಿಗಿಂತಲೂ ಭಿನ್ನವೇ ಅಥವಾ ಆವೆರಡರಲ್ಲೊಂದೇ ಎಂಬುದನ್ನು ಪ್ರಕೃತದಲ್ಲಿ ತಿಳಿಯಬೇಕು ಅದಕ್ಕಿಂತಲೂ ಪೂರ್ವಭಾವಿಯಾಗಿ **ಸರಮಾ** ಎಂಬ ದೇವಶುನಿಯ ಸ್ವರೂಪವೇನೆಂದು ತಿಳಿದು ಅನಂತರ ಸಾರಮೇಯಗಳ ರೂಪವನ್ನರಿಯಬೇಕಾಗಿರುವುದರಿಂದ, **ಸರಮಾ** ಎಂಬುವಳ ವಿಷಯವು ಯಾವ ಯಾವ ಕಡೆ ಹೇಗೆ ವರ್ಣಿತವಾಗಿದೆ ಎಂಬುದನ್ನು ತಿಳಿಯಬೇಕಾಗಿದೆ

**ದೇವಶುನಿ**ಯೆಂದು ಸರಮೆಯ ವಿವರಣೆಯಿದ್ದರೂ ಸಹ **ಸರಮೆಯು** ಕೇವಲ ನಾಯಿಯ ಜಾತಿಗೆ ಸೇರಿದ ಪ್ರಾಣಿಯೆಂದು ಋಕ್ಸಂಹಿತೆಯಲ್ಲಿ ಎಲ್ಲೂ ವರ್ಣಿತವಾಗಿಲ್ಲ ಈ ವಿಷಯದಲ್ಲಿ ಆಂಗ್ಲಪಂಡಿತರ ಅಭಿಪ್ರಾಯಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ತಿಳಿಸಲಾಗುವುದು

This indicatas, though it does not conclusively prove, that Sarama, who figures as the messenger of Indra, in the myth of the Panis, was treated as a dog and this tradition, which is not expressly set out in the Rig-Veda, is the account of the later texts and of Yaska, who calls her the bitch of the dogs

(Religion and Philosophy of the Vedas, Keith p. 192)

ಇಂದ್ರನು ಪಣಿಗಳಿಂದ ಅಪಹೃತವಾದ ಗೋವುಗಳನ್ನು ಕಂಡುಹಿಡಿಯಲು ಹೊರಟಾಗ **ಸರಮೆಯು** ಇಂದ್ರನ ದೂತಿಯಾಗಿದ್ದಳು ಎಂಬ ವಿವರಣೆಯಲ್ಲಿ ಸರಮೆಯನ್ನು ಶ್ವಾನಜಾತಿಗೆ ಸೇರಿದವಳೆಂದು ಎಲ್ಲೂ ಋಕ್ಸಂಹಿತಾಭಾಗವಾವುದೂ ಸ್ಪಷ್ಟವಾಗಿ ತಿಳಿಸಿಲ್ಲ. ಆದರೆ ನಾಯಿಯ ಜಾತಿಗೆ ಸೇರಿದವಳೆಂದು ಯಾಸ್ಕರು ಮತ್ತು ಉಳಿದ ನಿರ್ವಚನಕಾರರೂ ತಿಳಿಸಿದ್ದಾರೆ ಇದಕ್ಕೆ ಸಂಹಿತಾವಾಕ್ಯಗಳಲ್ಲಿ ಸರಿಯಾದ ಆಧಾರವಿಲ್ಲ ಎಂದು A B Keith ಎಂಬುವರು ತಿಳಿಸಿದ್ದಾರೆ. ಅಲ್ಲದೇ—

There is nothing in Rig-Veda directly showing that Sarama was there conceived as a bitch, though in the later Vedic literature she is regarded as such etc

(Vedic Mythology by Macdonnel P 151).

ಎಂದು ಮಾಕ್‌ಡೊನೆಲ್ ಎಂಬ ಆಂಗ್ಲ ಪಂಡಿತರೂ ಸಹ ಮೇಲೆ ಕೀತ್ ಹೇಳಿರುವ ಅಭಿಪ್ರಾಯವನ್ನೇ ತಿಳಿಸಿದ್ದಾರೆ. ಋ ಸಂ. ೧೦-೧೦೮-೨ ರಲ್ಲಿ ಅವಳನ್ನು ಇಂದ್ರಸ್ಯ ದೂತೀ ಎಂದು ಮಾತ್ರ ತಿಳಿಸಿದೆ. ಆದರೆ, ಬ್ರಾಹ್ಮಣಗಳಲ್ಲಿ

ಹೇಳಿರುವ ಕಥೆಯಲ್ಲಿ ಸರಮೆಯ ಸ್ವಭಾವವು ಅತ್ಯಂತ ಸ್ಪಷ್ಟವಾದುದಲ್ಲವೆಂದು ತಿಳಿಯುತ್ತದೆ. ಇಂದ್ರನ ಕೆಲಸಕ್ಕಾಗಿ ಕಳುಹಲ್ಪಟ್ಟವಳು ಪಣಿಗಳ ಆಕರ್ಷಣೆಗೆ ಒಳಗಾಗಿ ಇಂದ್ರನಿಗೇ ದ್ರೋಹಮಾಡಲು ಬಯಸುತ್ತಾಳೆ. ಜೈಮಿನೀಯ ಬ್ರಾಹ್ಮಣದಲ್ಲಿ ಉಕ್ತವಾಗಿರುವ ಕಥೆಯು ಇದಕ್ಕೆ ಕೊಂಚ ವ್ಯತ್ಯಸ್ತವಾಗಿದೆ. ಇದರಲ್ಲಿ ಹೇಳಿರುವಂತೆ ಇಂದ್ರನು ಸುಪರ್ಣನನ್ನು ಆ ಕಾರ್ಯಕ್ಕಾಗಿ ಕಳುಹಿಸಿ ಅವನು ನಂಬಿಕೆಗರ್ಹನಲ್ಲವೆಂದು ತಿಳಿದಮೇಲೆ, ಸರಮೆಯನ್ನು ಕಳುಹುತ್ತಾನೆ. ಇವಳು ನಂಬಿಕೆಗೆ ಪಾತ್ರಳಾಗುತ್ತಾಳೆ. ಮತ್ತು ತನ್ನ ಸೇವೆಯ ಫಲವಾಗಿ ಇಂದ್ರನಿಂದ ತನ್ನ ಮಕ್ಕಳಿಗೆ ಆಹಾರವನ್ನು ಪಡೆಯುತ್ತಾಳೆ. ಈ ಒಂದಂಶವು ಎಲ್ಲ ಕಥೆಗಳಲ್ಲಿಯೂ ಒಂದೇ ರೀತಿ ಹೇಳಲ್ಪಟ್ಟಿದೆ. ಇವಳ ಮಕ್ಕಳಾರು? ಆ ಅನ್ನವು ಹೇಗೆ ಹಂಚಲ್ಪಟ್ಟಿತು ಎಂಬುದಕ್ಕೆ ಋಕ್ಸಂಹಿತೆಯಲ್ಲಿಯೇ ಕೆಲವೆಡೆಗಳಲ್ಲಿ ವಿವರ ದೊರೆಯುತ್ತದೆ. ಉದಾಹರಣೆಗೆ—

**ಸ್ವಾಧ್ಯೋ ದಿವ ಆ ಸಪ್ತ ಯಹ್ವೀ ರಾಯೋ ದುರೋ ವ್ಯೃತಜ್ಞಾ ಅಜಾನನ್ ।**
**ವಿದದ್ಗವ್ಯಂ ಸರಮಾ ದೃಳ್ಹಮೂರ್ವಂ ಯೇನಾ ನು ಕಂ ಮಾನುಷೀ ಭೋಜತೇ ವಿಟ್ ॥**

(ಋ ಸಂ ೧-೭೨-೮)

ಮಹತ್ತ್ವರೂಪವುಳ್ಳವೂ ಜಗತ್ತಿಗೆ ಉಪಕಾರಕಗಳೂ ಆದ ಸಪ್ತನದಿಗಳು ದ್ಯುಲೋಕದಿಂದ ಪೃಥ್ವಿಗಭಿಮುಖವಾಗಿ ಹರಿಯುತ್ತವೆ. ಇವುಗಳಲ್ಲಿ ಮಹರ್ಷಿಗಳು ಸಂಪತ್ತಿನ ಮೂಲವನ್ನು ಕಂಡರಿತರು. ಸರಮೆಯೂ ಸಹ ಪಶುಸಂಪತ್ತನರಿತು ಆ ಸಂಪತ್ತನ್ನು ಜಗತ್ತಿಗೆ ಒದಗಿಸಿದಳು. ಮಾನವ ಸಮೂಹವು ಅದೇ ಅನ್ನಸಂಪತ್ತನ್ನು ಈಗ ಅನುಭವಿಸುತ್ತಿದೆ ಎಂದು ಮೇಲಿನ ಮಂತ್ರವು ತಿಳಿಸುತ್ತದೆ. ಈ ಸಂದರ್ಭವು ಸರಮೆಯನ್ನು ದೇವಶುನಿಯೆಂದು ನಿರ್ದೇಶಿಸಿಲ್ಲ. ಹೀಗೆಯೇ ಒಂದೆರಡುದಾಹರಣೆಗಳನ್ನು ಮಾತ್ರ ಪರಿಶೀಲಿಸಬಹುದು.

**ವಿದದ್ಯದೀ ಸರಮಾ ರುಗ್ಣಮದ್ರೇರ್ಮಹಿ ಪಾಥಃ ಪೂರ್ವ್ಯಂ ಸಧ್ರ್ಯಕ್ಕಃ ।**
**ಅಗ್ರಂ ನಯತ್ಸುಪದ್ಯಕ್ಷರಾಣಾಮಚ್ಛಾ ರವಂ ಪ್ರಥಮಾ ಜಾನತೀ ಗಾತ್ ॥**

(ಋ ಸಂ ೩-೩೧-೬)

ಎಂಬಲ್ಲಿ, ಸರಮೆಯು ಗುಹೆಗಳಿಂದ ಕೂಡಿದ ಪರ್ವತದ ಪ್ರವೇಶದ್ವಾರವನ್ನು ಕಂಡುಹಿಡಿದ ತತ್ಫಲವಾಗಿ ಇಂದ್ರನಿಂದ ಅನೇಕವಿಧವಾದ ಸಹಾಯವನ್ನು ಪಡೆದಳೆಂದು ತಿಳಿಸಿದೆ. ಅಪಹೃತವಾದ ಪಶುಗಳನ್ನು ಕಂಡುಹಿಡಿದು ಆ ಎಲ್ಲ ಪಶುಗಳ ಕ್ಷೀರವನ್ನು ತಾನು ಇಂದ್ರನಿಂದ ಪಡೆದು ತನ್ನ ಮಕ್ಕಳಿಗೆ ಹಂಚಿದಳು ಎಂದಿರುವ ಈ ವರ್ಣನೆಯಲ್ಲಿ ಅವಳು ಮಾನವಲೋಕಕ್ಕೆ ಮಾಡಿದ ಉಪಕಾರವು ತಿಳಿಯುತ್ತದೆ. ಹೀಗೆಯೇ, ಇನ್ನೊಂದುದಾಹರಣೆಯನ್ನು ಮಾತ್ರ ನೋಡಿದರೆ,

**ಅನೂನೋದತ್ರ ಹಸ್ತಯತೋ ಅದ್ರಿರಾರ್ಚನ್ಯೇನ ದಶ ಮಾಸೋ ನವಗ್ವಾಃ ।**
**ಋತಂ ಯತೀ ಸರಮಾ ಗಾ ಅವಿಂದದ್ವಿಶ್ವಾನಿ ಸತ್ಯಾಂಗಿರಾಶ್ಚಕಾರ ॥**

(ಋ ಸಂ ೫-೪೫-೭)

ಈ ಯಾಗಕಾಲದಲ್ಲಿ ಋತ್ವಿಕ್ಕುಗಳಿಂದ ಚಾಲಿತವಾದ ಅದ್ರಿಯು ಶಬ್ದಮಾಡತೊಡಗಿತು. ಆಗ ನವಗ್ವರು ದಶಮಾಸ ಸಂಜ್ಞಕವಾದ ಯಾಗವನ್ನಾಚರಿಸಿದರು. (ಹತ್ತುತಿಂಗಳಕಾಲ ಯಜ್ಞವನ್ನಾಚರಿಸಿದರು) ಆಗ ಸರಮೆಯು ಸತ್ಯ

ಮಾರ್ಗವನ್ನು ಅನುಸರಿಸಿ ಅಲ್ಲಿ ಸಂಚರಿಸುತ್ತ ಗೋವುಗಳನ್ನು ಕಂಡುಹಿಡಿದಳು. ಇದು ಅಂಗಿರಸ್ಸುಗಳ ಯಾಗಕ್ಕೆ ಸಹಾಯಮಾಡಿ ಲೋಕೋಪಕಾರವಾಯಿತು ಎಂದಿರುತ್ತದೆ. ಈ ಸಂದರ್ಭಗಳಲ್ಲಿ **ಸರಮಾ**ಸ್ವರೂಪವನ್ನು ಹೇಗೆ ವಿವರಿಸಿದೆ ಎಂಬುದನ್ನು ಗಮನಿಸಬೇಕು.

**ಋತಂ ಸತ್ಯಂ ಯಜ್ಞಂ ವಾ ಯತೀ ಪ್ರಾಪ್ನುವತೀ ಸರಮಾ ಸರಣಶೀಲಾ ಸ್ತುತಿರೂಪಾ ವಾಕ್ ।**
(ಸಾ. ಭಾ.)

ಸತ್ಯಮಾರ್ಗವನ್ನನುಸರಿಸಿದವಳೂ, ಸ್ತುತಿರೂಪಳೂ, ಸಂಚಾರಶಾಲಿನಿಯೂ ಆದ **ವಾಗ್ದೇವಿ**ಯೆಂದು ಸಾಯಣರು ಅರ್ಥಮಾಡಿದ್ದಾರೆ ಹೀಗೆಯೇ, ಇವರ ಮುಂದಿನ ಮಂತ್ರದಲ್ಲೂ ಸಹ

**ಉತ್ಸ ಆಸಾಂ ಪರಮೇ ಸಧಸ್ಥ ಋತಸ್ಯ ಪಥಾ ಸರಮಾ ವಿದದ್ಗಾಃ ।**
(ಋ. ಸಂ ೫.೪೫.೮)

**ಋತಸ್ಯ ಸತ್ಯಸ್ಯ ಪಥಾ ಮಾರ್ಗೇಣ ಸರಮಾ ವಾಕ್ ದೇವಶುನೀ ವಾ ನಿಗೂಢಾ ।**
(ಸಾ ಭಾ)

ಸತ್ಯಮಾರ್ಗದಲ್ಲಿ ಸಂಚರಿಸುವ ವಾಗ್ದೇವಿ ಅಥವಾ ದೇವಶುನೀ ಎಂಬ ವೈಕಲ್ಪಿಕವಾದ ಅರ್ಥವನ್ನು ತಿಳಿಸಿದ್ದಾರೆ. ಇವೆಲ್ಲಕ್ಕಿಂತಲೂ ಅಧಿಕವಾಗಿ ಮುಂದೆ ೧೦ನೇ ಮಂಡಲದ ೧೦೮ನೇ ಸೂಕ್ತವು ಸರಮೆಯ ಸ್ವರೂಪವನ್ನು ಇನ್ನೂ ವಿಶದವಾಗಿ ತಿಳಿಸುತ್ತದೆ ಆ ಸಂದರ್ಭದಲ್ಲಿ ಈ ವಿಷಯವನ್ನು ಇನ್ನೂ ವಿಶದವಾಗಿ ಪರಿಶೀಲಿಸಬಹುದು ಪ್ರಕೃತದಲ್ಲಿ, ಆ ಸೂಕ್ತದ ಸಾರಾಂಶವನ್ನು ಮಾತ್ರ ಗಮನಿಸಲಾಗುತ್ತದೆ.

ಇಲ್ಲಿ ಸರಮೆಗೂ ಪಣಿಗಳಿಗೂ ನಡೆಯುವ ಸಂಭಾಷಣೆಯು ವರ್ಣಿತವಾಗಿದೆ ಪಣಿಗಳು ಸರಮೆಯನ್ನು ಸಮಾಧಾನಪಡಿಸಲು ಪ್ರಯತ್ನಿಸುತ್ತಾರೆ. ಆದರೆ ಸರಮೆಯು ಇಂದ್ರನ ಮತ್ತು ಅಂಗಿರಸ್ಸುಗಳ ಪ್ರಭಾವವನ್ನು ವರ್ಣಿಸಿ ಪಣಿಗಳನ್ನು ಎಚ್ಚರಿಸುತ್ತಾಳೆ ಇಲ್ಲಿ ಸರಮೆಯ ವ್ಯವಹಾರವು ಅತ್ಯಂತ ಶ್ಲಾಘ್ಯವಾಗಿರುತ್ತದೆ. ತನ್ನ ದೌತ್ಯಕೃತ್ಯವನ್ನರಿತು ತನ್ನ ಘನತೆಗೆ ತಕ್ಕಂತೆ ವ್ಯವಹರಿಸುತ್ತಾಳೆ ಕರ್ತವ್ಯಜ್ಞಾನವು ಪೂರ್ಣವಾಗಿರುತ್ತದೆ ಪಣಿಗಳನ್ನು ಚೋರರು ಎಂದು ಧೈರ್ಯವಾಗಿ ಹೇಳಿದಾಗ ಅವರಿಗೇ ಆಶ್ಚರ್ಯವಾಗುತ್ತದೆ. ಅವರು ಅವಳಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. **ರಸಾ** ನದಿಯೂ ಸಹ ತನಗೆ ಸಹಾಯಮಾಡಿತು ಎಂದು ಹೇಳಿದಾಗನೆಯೇ ಅವರ ಗೌರವವು ಅವಳಲ್ಲಿ ಅಧಿಕವಾಗುತ್ತದೆ. ತನ್ನ ದಣಿಯಾದ ಇಂದ್ರನು ಅವರನ್ನೆಲ್ಲ ನಾಶಮಾಡಬಲ್ಲವನೆಂದು ಧೈರ್ಯವಾಗಿ ಹೇಳುತ್ತಾಳೆ. ಅವರ ಆಕರ್ಷಣೆಗೆ ಕೊಂಚವೂ ಮರುಳಾಗದೆ ಧೈರ್ಯವಾಗಿ ಅದನ್ನು ತಿರಸ್ಕರಿಸುತ್ತಾಳೆ. ರಾಜದೂತನಿಗೆ ಯೋಗ್ಯವಾದ ಪ್ರಭಾವವನ್ನು ತೋರಿಸುತ್ತಾಳೆ. . ಈ ಸಂಭಾಷಣೆಯಲ್ಲಿ ಉತ್ತಮವಾದ ಕಳೆಯಿರುತ್ತದೆ

ಹೀಗೆ ಅನೇಕ ಸಂದರ್ಭಗಳಲ್ಲಿ ವರ್ಣಿತವಾಗಿರುವ **ಸರಮಾ** ಎಂಬ ವ್ಯಕ್ತಿಯ ಸ್ವರೂಪವನ್ನು ಗಮನಿಸಿದರೆ **ಸಂಹಿತಾವಾಕ್ಯಗಳಲ್ಲೆಲ್ಲೂ ಅವಳನ್ನು** ದೇವಶುನಿಯೆಂದು ನಿರ್ದೇಶಿಸಿಲ್ಲವೆಂಬುದು ಸ್ಪಷ್ಟವಾಗಿದೆ ತೈತ್ತಿರೀಯ ಬ್ರಾಹ್ಮಣದಲ್ಲಿ ಇದೇ ಪ್ರಕರಣವನ್ನು ವಿವರಿಸುತ್ತ ಸರಮೆಯ ವಿಷಯವನ್ನು ಹೇಳುವಾಗ ಕಥಾಸಂದರ್ಭವು ಕೊಂಚ ವ್ಯತ್ಯಸ್ತವಾಗಿರುತ್ತದೆ.

**ವಿದದ್ವತೀ ಸರಮಾ ರುಗ್ಣಮದ್ರೇಃ । ಮಹಿ ಪಾಥಃ ಪೂರ್ವ್ಯಗ್ಂ ಸಧ್ರಿಯಕ್ಕಃ** ॥

(ತೈ ಬ್ರಾ. ೨.೫.೮ ೧೦)

ಎಂಬ ಋಕ್ಸಂಹಿತಾವಾಕ್ಯವನ್ನೇ ವಿವರಿಸಿ ಈ ಸಂದರ್ಭವನ್ನು ತಿಳಿಸುವಾಗಲೂ ಸಹ ಮೂಲದಲ್ಲಿ ದೇವಶುನಿಯೆಂಬ ನಿರ್ದೇಶವಿಲ್ಲ. ಭಾಷ್ಯದಲ್ಲಿ ಮಾತ್ರ **ಸರಮಾ ಕಾಚಿತ್ ಶುನೀ ಶ್ವಮೂರ್ತಿಧಾರಿಣೀ ದೇವತಾ।** ನಾಯಿಯ ರೂಪವನ್ನು ಧರಿಸಿದ ಒಬ್ಬ ದೇವತಾಸ್ತ್ರೀ ಎಂದು ವಿವರಿಸಿದೆ. ಮಾನವರಿಗೆ ಹಿತಕಾರಿಯಾದ ದಿವ್ಯವ್ಯಕ್ತಿಯೆಂದು ಮಾತ್ರ ಸದ್ಯಕ್ಕೆ ನಿಷ್ಕರ್ಷಿಸಬಹುದು

ಇಂತಹ ದಿವ್ಯಸ್ತ್ರೀಯ ಹೊಟ್ಟೆಯಲ್ಲಾಗಲಿ ಅಥವಾ ಅವಳ ವಂಶದಲ್ಲಾಗಲಿ ಜನಿಸಿದ ವ್ಯಕ್ತಿಯೂ ಸಹ ದಿವ್ಯತ್ವವನ್ನು ಹೊಂದಿರಬೇಕೆಂಬುದು ಸ್ಪಷ್ಟವಾಗಿದೆ ಆದರೆ, **ಸಾರಮೇಯ** ಎಂಬ ಪದವು ಯಾವ ಯಾವ ಸಂದರ್ಭದಲ್ಲಿ ಯಾವ ಯಾವ ಅರ್ಥವನ್ನು ಕೊಡಬಲ್ಲದು ಎಂಬುದೇ ಪ್ರಕೃತ ವಿಮರ್ಶೆಯ ಗುರಿಯಾಗಿರುತ್ತದೆ ಇಲ್ಲಿ ಮುಖ್ಯವಾಗಿ ಕೆಲವು ವಾಕ್ಯಗಳನ್ನು ಆಧಾರವಾಗಿಟ್ಟುಕೊಂಡು ಈ ವಿಷಯವನ್ನು ಸೂಕ್ಷ್ಮವಾಗಿ ವಿಮರ್ಶಿಸಲಾಗುತ್ತದೆ ಅವುಗಳಾವುವೆಂದರೆ—

ಋ ಸಂ. ೧೦-೧೪-೧೦, ೧೧, ೧೨. ಅ ವೇ. ೧೮-೨-೧೧, ೧೨, ೧೩ ತೈ. ಆ. ೬-೩ ೧, ೨.

ಈ ವಾಕ್ಯಗಳಲ್ಲಿ ಸಾರಮೇಯಗಳನ್ನು ಕ್ರೂರವಾದ ಪ್ರಾಣಿಗಳೆಂದು ನಿರ್ದೇಶಿಸಿದೆ ಅಲ್ಲದೇ—ಋ ಸಂ ೧-೧೮-೩, ೭-೫೫-೨, ೩, ೪ ಇತ್ಯಾದಿ ಸ್ಥಳಗಳಲ್ಲೂ ಅವುಗಳ ಕ್ರೌರ್ಯವು ಸ್ಪಷ್ಟವಾಗಿದೆ

ಯಮನ ನಾಯಿಗಳೆಂದು ಪ್ರಸಿದ್ಧವಾದ ಈ ಪ್ರಾಣಿಗಳು ನಾಶಕಾರಕವಾದ ದಂಷ್ಟ್ರಗಳನ್ನು ಹೊಂದಿ ಭಯಂಕರವಾಗಿರುವುದೆಂದು ಇಲ್ಲಿ ವರ್ಣಿತವಾಗಿದೆ ಆದರೆ, ಇಲ್ಲಿ ಕೇವಲ ವ್ಯಾಖ್ಯಾರ್ಥವೇ ಅಥವಾ ಲಕ್ಷಣಾರ್ಥವೇ ಎಂಬುದನ್ನು ಗಮನಿಸಬೇಕು. ಋ ಸಂ. ೧೦-೧೪-೧೦, ೧೧, ೧೨ ನೇ ಮಂತ್ರಗಳಲ್ಲಿ ವಿವೃತವಾಗಿರುವ ಸಾರಮೇಯಗಳ ನಿಜವಾದ ರೂಪವೇನು ಎಂದು ತಿಳಿಯಲು ಇದಕ್ಕೆ ಸಹಕಾರಿಯಾದ ಇತರ ಮಂತ್ರಗಳನ್ನೂ ಆಧಾರವಾಗಿ ತೆಗೆದುಕೊಳ್ಳಬೇಕಾಗುತ್ತದೆ **ರಕ್ಷಿತಾರೌ ಚತುರಕ್ಷೌ** ಈ ವಿಶೇಷಣಗಳ ಅರ್ಥವೇನು ಎಂಬುವನ್ನೂ ವಿಮರ್ಶಿಸಬೇಕಾಗಿರುತ್ತದೆ ಈ ಯಮಶ್ವಾನಗಳಾವುವು ಎಂಬುದರ ವಿಷಯದಲ್ಲಿ ಈ ರೀತಿ ಕಥಾಸಂದರ್ಭವಿರುತ್ತದೆ

> **ಕಾಲಕಂಜಾ ವೈ ನಾಮಾಸುರಾ ಆಸನ್ । ತೇ ಸುವರ್ಗಾಯ ಲೋಕಾಯಾಗ್ನಿಮಚಿನ್ವತ । ಪುರುಷ ಇಷ್ಟಕಾಮುಪಾದಧಾತ್ಪುರುಷ ಇಷ್ಟಕಾಂ । ಸ ಇಂದ್ರೋ ಬ್ರಾಹ್ಮಣೋ ಬ್ರುವಾಣ ಇಷ್ಟಕಾಮುಪಾಧತ್ತ । ಏಷಾ ಮೇ ಚಿತ್ರಾ ನಾಮೇತಿ । ತೇ ಸುವರ್ಗಂ ಲೋಕಮಾಪ್ರಾರೋಹನ್ । ಸ ಇಂದ್ರ ಇಷ್ಟಕಾಮಾವೃಹತ್ । ತೇಽವಾಕೀರ್ಯಂತ । ಯೇಽವಾಕೀರ್ಯಂತ । ತ ಊರ್ಣಾವಭಯೋಽಭವನ್ । ದ್ವಾವುದಪತತಾಂ । ತೌ ದಿವ್ಯೌ ಶ್ವಾನಾವಭವತಾಂ ॥**
>
> (ತೈ ಬ್ರಾ ೧-೧-೨-೪,೬)

ಕಾಲಕಂಜರೆಂಬ ಅಸುರರಿದ್ದರು ಅವರು ಸ್ವರ್ಗಲೋಕವನ್ನು ಸಂಪಾದಿಸಲು ಅಗ್ನಿವೇದಿಕೆಯನ್ನು ರಚಿಸಿದರು ಆ ವೇದಿಕೆಗೆ ಮಾನವರೇ ಇಟ್ಟಿಗೆಗಳಾದರು ಆಗ ಇಂದ್ರನು ಬ್ರಾಹ್ಮಣರೂಪದಲ್ಲಿ ಬಂದು ತಾನೂ ಒಂದು ಇಟ್ಟಿಗೆಯ ರೂಪದಲ್ಲಿ ಕುಳಿತನು ನಂತರ " **ಚಿತ್ರಾ**ನಾಮಕವಾದ ಈ ಇಟ್ಟಿಗೆಯು ನನ್ನನ್ನುದ್ದೇಶಿಸಿದೆ " ಯೆಂದನು ಆಗ ಆ ಅವರು ಸ್ವರ್ಗವನ್ನು ಹತ್ತಲು ಆರಂಭಿಸಿದರು ಒಡನೆಯೇ ಇಂದ್ರನು ತನ್ನ ಇಟ್ಟಿಗೆಯನ್ನು ಎಳೆದನು ಕೂಡಲೇ ಅವರು ಕೆಳಕ್ಕೆ ಬಿದ್ದರು ಕೆಳಕ್ಕೆ ಬಿದ್ದೊಡನೆಯೇ ಅವರು ಜೇಡರ ಹುಳುಗಳಾದರು ಅವುಗಳಲ್ಲಿ ಎರಡು

ಮಾತ್ರ ಮೇಲಕ್ಕೆ ಹಾರಿದವು. ಅವೇ ದೇವಲೋಕದ ಶ್ವಾನಗಳೆಂದು ಪ್ರಸಿದ್ಧವಾದವು ಎಂದು ಕಥೆಯಿರುತ್ತದೆ. ಈ ಕಥೆಯನ್ನೇ ತಿಳಿಸುತ್ತ,

**ಯಾ ಉತ್ತಮಾ ಆಸ್ತಾಂ ತಾ ಯಮಶ್ವಾ ಅಭವತಾಂ ।**

(ಮೈ ಸಂ ೧-೬-೯)

ಯಾವ ಹುಳುಗಳು ಉತ್ತಮವಾದ ಸ್ಥಿತಿಯನ್ನು ಹೊಂದಿದ್ದವೋ ಅವೇ **ಯಮಶ್ವಾನ**ಗಳೆಂದು ಪ್ರಸಿದ್ಧವಾದವು ಎಂದು ಸ್ಪಷ್ಟವಾಗಿ ಮೈತ್ರಾವಣೀಯ ಸಂಹಿತೆಯಲ್ಲಿ ತಿಳಿಸಿದೆ ಈ ಕಥೆಗೂ ಅಥರ್ವವೇದದ ವಾಕ್ಯಕ್ಕೂ ಸಾಮಂಜಸ್ಯವಿದೆಯೋ ಎಂಬುದೂ ಒಂದು ಸಂಶಯಾಸ್ಪದವಾದ ವಿಷಯವಾಗಿದೆ

**ಅಪ್ಸು ತೇ ಜನ್ಮ ದಿವಿ ತೇ ಸಧಸ್ಥಂ ಸಮುದ್ರೇ ಅಂತರ್ಮಹಿಮಾ ತೇ ಪೃಥಿವ್ಯಾಂ ।**
**ಶುನೋ ದಿವ್ಯಸ್ಯ ಯನ್ಮಹಸ್ತೇನಾ ತೇ ಹವಿಷಾ ವಿಧೇಮ ॥**

(ಅ ವೇ ೬-೮೦-೧)

ಎಲೈ ದಿವ್ಯಶ್ವಾನವೇ, ಉದಕವೇ ನಿನ್ನ ಉತ್ಪತ್ತಿಸ್ಥಾನವು ಸ್ವರ್ಗವೇ ನಿನ್ನ ವಾಸಸ್ಥಾನವು ಸಮುದ್ರಮಧ್ಯದಲ್ಲೂ, ಪೃಥ್ವಿಯಲ್ಲೂ ನಿನ್ನ ಮಹತ್ತ್ವವಿರುತ್ತದೆ ಇಂತಹ ಪ್ರಭಾವವುಳ್ಳ ನಿನ್ನನ್ನುದ್ದೇಶಿಸಿ ಈ ಹವಿಸ್ಸನ್ನರ್ಪಿಸುತ್ತೇನೆ ಸ್ವೀಕರಿಸು ಎಂದು ದಿವ್ಯಶ್ವಾನದ ಮಹಿಮೆಯನ್ನು ಪ್ರಶಂಸಿಸಿದೆ

ಋಕ್ಸಂಹಿತೆಯಲ್ಲಿ ಯಾವ **ಚತುರಕ್ಷೌ** ಎಂಬ ವಿಶೇಷಣವಿರುವುದೋ ಅದೇ ವಿಶೇಷಣವುಳ್ಳ ವರ್ಣನೆಯೂ ಮೇಲಿನ ಅಂಶವನ್ನು ಇನ್ನೂ ಅಧಿಕವಾಗಿ ಪುಷ್ಟೀಕರಿಸುತ್ತದೆ ಉದಾಹರಣೆಗೆ ತೈತ್ತಿರೀಯಬ್ರಾಹ್ಮಣದಲ್ಲಿ ಅಶ್ವಮೇಧ ಯಾಗ ಪ್ರಕರಣದಲ್ಲಿ ವರ್ಣಿತವಾಗಿರುವ **ಶ್ವಾ ಚತುರಕ್ಷ ।** ಎಂಬ ವಿಶೇಷಣವೂ ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. (ತೈ ಬ್ರಾ ೩-೮-೪-೨)

ಈ ಶ್ವಾನವು ದುಷ್ಟವಾದುದರಿಂದ ಇದರ ಹನನವು ಎಂದು ಈ ಪ್ರಕರಣವು ತಿಳಿಸುತ್ತದೆ ದಿವ್ಯಸ್ವರೂಪವನ್ನು ಹೊಂದಿದ ಅಶ್ವವು ತನ್ನ ವಿರೋಧಿಯಾದ ಈ ದುಷ್ಟಶ್ವಾನವನ್ನು ಹನನಮಾಡುತ್ತದೆಯೆಂದು ಈ ಪ್ರಕರಣದ ಸಾರಾಂಶ.

ಹೀಗೆ, ನಾನಾ ವಿಧವಾಗಿರತಕ್ಕ ವಿವರಣಗಳಲ್ಲಿ ಒಂದು ಸಾಮಂಜಸ್ಯವು ಸಾಧ್ಯವೇ ? ಯಮನ ಎರಡು ಶ್ವಾನಗಳ ಉತ್ಪನ್ನವು ಯಜ್ಞಮೂಲವಾಗಿದೆಯೆಂಬುದರ ಅರ್ಥವೇನು ? ಇವುಗಳ ಹನನವು ಹೇಗೆ, ಇತ್ಯಾದಿ ವಿಷಯಗಳನ್ನು ನಿಸ್ಪೃಷ್ಟವಾಗಿ ತಿಳಿಸುವುದು ಬಹಳ ಕ್ಲಿಷ್ಟವಾದ ಪ್ರಯತ್ನವಾಗುತ್ತದೆ ಆದರೂ ಸಹ ವೈದಿಕವಾಕ್ಯಗಳ ಆಧಾರದ ಮೇಲೆ, ಈ ದಿವ್ಯಶ್ವಾನಗಳು ಯಾವ ತತ್ತ್ವಗಳನ್ನು ಪ್ರತಿಬಿಂಬಿಸುತ್ತವೆ ಎಂದು ಮಾತ್ರ ಸೂಕ್ಷ್ಮವಾಗಿ ಇಲ್ಲಿ ತಿಳಿಸಲಾಗುತ್ತದೆ

**ಶ್ಯಾಮ** ಮತ್ತು **ಶಬಲಾ** ಎಂದು ಪ್ರಸಿದ್ಧವಾದ ಎರಡು ಶ್ವಾನಗಳ ಸ್ವರೂಪವೇನು ? ಇವಕ್ಕೂ ಯಜ್ಞಕ್ಕೂ ಏನು ಸಂಬಂಧ? ಇಲ್ಲಿರುವ ಯಾಜ್ಞಿಕಪ್ರಕ್ರಿಯೆಯೇನು ಎಂಬುದನ್ನು ತಿಳಿಸುತ್ತ ಕೌಷೀತಕೀಬ್ರಾಹ್ಮಣದಲ್ಲಿ ಈ ವಿವರಣೆಯಿರುತ್ತದೆ

**ಸಾಯಮಸ್ತಮಿತೇ ಪುರಾ ತಮಸಸ್ತಸ್ಮಿನ್ ಕಾಲೇ ಜುಹುಯಾತ್ಸ ದೇವಯಾನಃ ಕೇತುಃ । ಪ್ರಾತಃ ಪುರೋಽದಯಾತ್ ಅಪಹತೇ ತಮಸಿ ತಸ್ಮಿನ್ ಕಾಲೇ ಜುಹುಯಾತ್ ಸ ದೇವಯಾನಃ ಕೇತುಃ । ಅಥೋ ಯೋಽತೋಽನ್ಯಥಾಗ್ನಿಹೋತ್ರಂ ಜುಹೋತಿ ಶ್ಯಾಮಶಬಲೌ ಹಾಸ್ಯಾಗ್ನಿ**

**ಹೋತ್ರಂ ವಿಹಿದತೋಽಹರ್ವೈ ಶಬಲೋ ರಾತ್ರಿಃ ಶ್ಯಾಮಸ್ಸ ಯೋ ಮಹಾರಾತ್ರೇ ಜುಹೋತಿ ಶ್ಯಾಮೋ ಹಾಸ್ಯಾಗ್ನಿಹೋತ್ರಂ ವಿಹಿದತ್ಯಥ ಯೋ ಮಹಾಹ್ನೇ ಜುಹೋತಿ ಶಬಲೋ ಹಾಸ್ಯಾ-ಗ್ನಿಹೋತ್ರಂ ವಿಹಿದತಿ ॥**

(ಕೌ ಬ್ರಾ ೨೯)

ಸಾಯಂಕಾಲದಲ್ಲಿ ಸೂರ್ಯಾಸ್ತಮಯವಾದನಂತರ ಕತ್ತಲು ಆವಿರ್ಭವಿಸುವುದಕ್ಕೆ ಪೂರ್ವವೇ ಅಗ್ನಿಹೋತ್ರಕರ್ಮವನ್ನಾಚರಿಸಬೇಕು, ಅದೇ ದೇವತೆಗಳ ಆಗಮನಕಾಲವು ಪ್ರಾತಃಕಾಲದಲ್ಲಿಯೂ ಸಹ ಸೂರ್ಯೋದಯಕ್ಕೆ ಪೂರ್ವಭಾವಿಯಾಗಿ ಕತ್ತಲು ನಾಶವಾದೊಡನೇ ಹವಿಸ್ಸನ್ನರ್ಪಿಸತಕ್ಕದ್ದು ಅದೂ ಸಹ ದೇವಯಾನಕಾಲವು ಇದಲ್ಲದೇ, ಕಾಲಾತಿಕ್ರಮವಾದಾಗ ಈ ಕರ್ಮವನ್ನಾಚರಿಸಿದಾಗ ಈ ಕರ್ಮವನ್ನಾಚರಿಸಿದರೆ, ಆಗ **ಶ್ಯಾಮ** ಮತ್ತು **ಶಬಲ** ಎಂಬೆರಡೂ ಸಹ ಇವನ ಕರ್ಮವನ್ನು ಫಲಹೀನವನ್ನಾಗಿ ಮಾಡುತ್ತವೆ ಅಹಸ್ಸಿಗೆ **ಶಬಲ**ನೆಂದೂ, ರಾತ್ರಿಗೆ **ಶ್ಯಾಮ**ನೆಂದೂ ಹೆಸರು ಮಧ್ಯರಾತ್ರಿಯಲ್ಲಿ ಕರ್ಮವನ್ನಾಚರಿಸಿದರೆ **ಶ್ಯಾಮ** ಸಂಜ್ಞಕವಾದ ರಾತ್ರಿಯೂ ಮಧ್ಯಾಹ್ನದಲ್ಲಿ ಆಚರಿಸಿದರೆ **ಶಬಲ** ಸಂಜ್ಞಕವಾದ ಅಹಸ್ಸೂ ಸಹ ಇವನ ಕರ್ಮವನ್ನು ನಾಶಮಾಡುತ್ತವೆ ಎಂದಿರುತ್ತದೆ ಅಶ್ವಮೇಧಯಾಗದಲ್ಲಿ ಅರ್ಪಿತವಾದ ಅಶ್ವದ ಭಾಗವನ್ನು ಆಯಾ ದೇವತೆಗಳನ್ನುದ್ದೇಶಿಸಿ ಅರ್ಪಿಸುವಾಗ ತೈತ್ತಿರೀಯಸಂಹಿತೆಯಲ್ಲಿ **ಶ್ಯಾಮ** ಮತ್ತು **ಶಬಲ** ಎಂಬ ಸಂಜ್ಞೆಯುಳ್ಳ ದೇವತೆಗಳಿಗೂ ಅರ್ಪಿತವಾಗುವಾಗ ಈ ರೀತಿ ತಿಳಿಸಿರುತ್ತದೆ

**ಸೂರ್ಯಚಂದ್ರಮಸೌ ವೃಕ್ಕಾಭ್ಯಾಗ್‌ಂ ಶ್ಯಾಮಶಬಲೌ ಮತಸ್ನಾಭ್ಯಾಂ ವ್ಯುಷ್ಟಿಗ್‌ಂ ರೂಪೇಣ ನಿಮ್ರುಕ್ತಿಮರೂಪೇಣ ॥**

(ತೈ ಸಂ ೫ ೭-೧೯ ೧)

ಮಾಂಸಕಾಯದ ಆಕಾರದಲ್ಲಿರುವ ಮಾಂಸವು **ಶ್ಯಾಮ** ಮತ್ತು **ಶಬಲ** ಸಂಜ್ಞಕರಾದ **ಸೂರ್ಯ** ಮತ್ತು **ಚಂದ್ರರಿಗೆ** ಅರ್ಪಿತವಾಗತಕ್ಕದ್ದು ಎಂದು ವಿಧಿಯಿದೆ **ಶ್ಯಾಮ** ಮತ್ತು **ಶಬಲೆ**ಗಳು ಸರಮೆಯ ಪುತ್ರರೆಂದು ಬೇರೆ ಕಡೆಗಳಲ್ಲಿ ತಿಳಿಸಿದೆ

**ತತ್ಸತ್ಯಂ ಯತ್ತೇ ಸರಮಾ ಮಾತಾ ಸೀಸರಃ ಪಿತಾ ಶ್ಯಾಮಶಬಲೌ ಭ್ರಾತರೌ ॥**

(ಪಾರಸ್ಕರಗೃಹ್ಯಸೂತ್ರ ೧ ೧೬-೨೪)

ಇತ್ಯಾದಿ ವಾಕ್ಯಗಳು ಯಮನ ಶ್ವಾನಗಳಿಂದ ಶ್ಯಾಮ ಮತ್ತು ಶಬಲಗಳನ್ನು ನಿರ್ದೇಶಿಸಿವೆ

ಆದರೆ, ತೈತ್ತಿರೀಯ ಸಂಹಿತೆಯಲ್ಲಿ ಉಕ್ತವಾಗಿರುವ **ಶ್ಯಾಮ, ಶಬಲ** ಎಂಬ ರಾತ್ರಿ ಮತ್ತು ಅಹಸ್ಸುಗಳ ಪರ್ಯಾಯ ಪದಗಳು ಸೂಚಿಸುವ ತತ್ತ್ವಗಳೂ, ಮುಂದೆ ಸೂತ್ರಾದಿಗಳಲ್ಲಿ ಇದೇ **ಶ್ಯಾಮ** ಮತ್ತು **ಶಬಲ** ಪದಗಳು ಸೂಚಿಸುವ ತತ್ತ್ವಗಳೂ ಬೇರೆಬೇರೆಯಾದ ಪದಾರ್ಥವಿಶೇಷಗಳು ಎಂದು ಹೇಳುವ ಹಾಗಿಲ್ಲ ಇವೆರಡಕ್ಕೂ ತಾದಾತ್ಮ್ಯವನ್ನು ತೋರಿಸತಕ್ಕ ವೈದಿಕವಾಕ್ಯಗಳೂ ಇರುತ್ತವೆ ತೈತ್ತಿರೀಯ ಸಂಹಿತೆಯಲ್ಲಿ ಅಶ್ವಮೇಧ ಪ್ರಕರಣದಲ್ಲಿ ಯಾವ **ಚಂದ್ರನನ್ನು ಶ್ಯಾಮ**ವೆಂದು ನಿರ್ದೇಶಿಸಿದೆಯೋ ಅದೇ ಚಂದ್ರನನ್ನು ಶತಪಥಬ್ರಾಹ್ಮಣದಲ್ಲಿ **ದಿವ್ಯಶ್ವಾ**-ದೇವಲೋಕದ ಶ್ವಾನವೆಂದು ನಿರ್ದೇಶಿಸಿದೆ

**ಅಥೈಷ ಪಶ್ಚಾದ್ದದೃಶೇ ಸ ಹ್ಯೇಷ ದಿವ್ಯಃ ಶ್ವಾ ಸ ಯಜಮಾನಸ್ಯ ಪಶೂನಭ್ಯವೇಕ್ಷತೇ ॥**

(ಶ ಬ್ರಾ ೧೧ ೧ ೫ ೧)

ಮುಂದೆ ಗೋಚರವಾಗತಕ್ಕ ಚಂದ್ರನೇ ಯಮನ ಶ್ವಾನಗಳಲ್ಲಿ ಒಂದಾದ ದಿವ್ಯಶ್ವಾನವು ಎಂದು ಪ್ರಶಂಸಿಸಿದೆ ಇನ್ನೊಂದು ಸೂರ್ಯನೆಂದು ನಿಷ್ಕೃಷ್ಟವಾದ ವಿಷಯವೇ ಆಗಿರುತ್ತದೆ

**ಶ್ಯಾಮಾಚ್ಛಬಲಂ ಪ್ರಪದ್ಯೇ ಶಬಲಾಚ್ಛ್ಯಾಮಂ ಪ್ರಪದ್ಯೇ ॥**

(ಛಾ ಉ ೮. ೧೩.)

ಇತ್ಯಾದಿ ಸ್ಥಳಗಳಲ್ಲಿಯೂ ಸಹ ಸೂರ್ಯಾಚಂದ್ರಮಸ್ಸುಗಳನ್ನೇ ನಿರ್ದೇಶಿಸಿದೆಯೆಂದು ಕೆಲವರ ಮತವಾಗಿದೆ ಈ ಸೂರ್ಯಾಚಂದ್ರಮಸ್ಸುಗಳೇ, ಜಗತ್ತನ್ನು ಕಾಯುವ ದಿವ್ಯಶ್ವಾನಗಳೆಂದರೆ ತಪ್ಪಾಗಲಾರದು

"The conclusion derived from all these statements is that in the Samhitas and Brahmanas the two dogs of Yama are familiarly identified with the Sun and the Moon."

(Bloomfield, Journal of American Oriental Society Vol 15 P, 171)

ಮೇಲಿನ ಸಂಹಿತಾ ಮತ್ತು ಬ್ರಾಹ್ಮಣ ವಾಕ್ಯಗಳ ಆಧಾರಗಳ ಮೇಲೆ, ಇಲ್ಲಿ ವರ್ಣಿತವಾಗಿರುವ ಯಮನ ಶ್ವಾನಗಳು **ಸೂರ್ಯ** ಮತ್ತು **ಚಂದ್ರ**ರನ್ನು ನಿರ್ದೇಶಿಸುವೆಯೆಂದು ನಿಷ್ಕೃಷ್ಟವಾಗಿ ಹೇಳಬಹುದು ಎಂದು Bloomfield ಎಂಬ ಆಂಗ್ಲಪಂಡಿತರೂ ಸಹ ತಮ್ಮಾಭಿಪ್ರಾಯವನ್ನು ತಿಳಿಸಿದ್ದಾರೆ

## ೨. ದಧಿಕ್ರಾದೇವತಾ

ಈ ಭಾಗದಲ್ಲಿ ಏನಯ ಮಂಡಲದ ೪೪ನೇ ಸೂಕ್ತದಲ್ಲಿ ಪ್ರಶಂಸಿತನಾಗಿರುವ **ದಧಿಕ್ರಾ** ದೇವತೆಯ ಸ್ವರೂಪವೇನೆಂಬುದನ್ನು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ ಇಂದ್ರನ ಇಪ್ಪತ್ತಾರು ಹೆಸರುಗಳಲ್ಲಿ ಇದೊಂದು ಎಂಬುದಾಗಿ ಬೃಹದ್ದೇವತಾವಾಕ್ಯದಿಂದ ತಿಳಿಯುತ್ತದೆ ಇಂದ್ರನಿಗೆ ಈ ಹೆಸರು ಏತಕ್ಕೆ ಪ್ರಸಿದ್ಧವಾಯಿತು ಎಂಬುವದನ್ನು ತಿಳಿಸುತ್ತಾ ಈ ಪದದ ನಿರ್ವಚನವನ್ನು ಬೃಹದ್ದೇವತೆಯಲ್ಲಿ ಈ ರೀತಿ ತಿಳಿಸಿದೆ

**ಅಪಾಮಂಬರಗರ್ಭೇಷು ಆದಧತ್ಸೋऽಷ್ಟಮಾಸಿಕಂ ।**
**ಯತ್ಕ್ರಂದತ್ಯಸಕೃನ್ಮಧ್ಯೇ ದಧಿಕ್ರಾಸ್ತೇನ ಕಥ್ಯತೇ ॥**

(ಬೃ ದೇ ೨ ೫೬ )

ಅಂತರಿಕ್ಷಸ್ಥನಾದ ಜಲಗರ್ಭವನ್ನು ಧರಿಸಿರುವುದರಿಂದಲೂ ಅಭ್ರಗಳ ನಡುವೆ ಎಂಟು ತಿಂಗಳು ಗರ್ಜನಶಬ್ದವನ್ನು ಮಾಡುವುದರಿಂದಲೂ ಇಂದ್ರನಿಗೆ ದಧಿಕ್ರಾ ಎಂಬ ಹೆಸರು ಎಂದು ತಾತ್ಪರ್ಯ ಈ ನಿರ್ವಚನವು ನಿರುಕ್ತಕಾರರು ಹೇಳಿರುವ ಮೂರು ವಿವರಣೆಗಳಲ್ಲಿ ಒಂದು ಮಾತ್ರ ಇದೇ ಪದದ ತಾತ್ಪರ್ಯವನ್ನು ವಿವರಿಸುತ್ತ ನಿರುಕ್ತಕಾರರು,

**ದಧತ್ಕ್ರಾಮತಿ ವಾ ದಧತ್ಕ್ರಂದತಿ ವಾ ದಧದಾಕಾರೀ ಭವತೀತಿ ವಾ ॥**

(ನಿ. ೨ ೨೭ )

ಉದಕಗರ್ಭವನ್ನು ಧರಿಸಿ ಸಂಚರಿಸುತ್ತವದರಿಂದಾಗಲಿ, ಅಥವಾ ಅದನ್ನು ಧರಿಸಿ ಗರ್ಜನಮಾಡುವುದರಿಂದಾಗಲಿ ಅಥವಾ ಅದರ ರೂಪವನ್ನೇ ಹೊಂದುವುದರಿಂದಾಗಲಿ **ದಧಿಕ್ರಾ** ಎಂಬ ಹೆಸರು ಎಂದು ತಿಳಿಸಿದ್ದಾರೆ (ಈ ದಧತ್ಕರ್ಮಸಿರುವುದರಿಂದಲೇ ಇಂದ್ರನಿಗೆ **ಧಾತೃ**ವೆಂಬ ಹೆಸರೂ ಉಂಟು ಎಂದು ಬೃಹದ್ದೇವತೆಯು ವಿವರಿಸುತ್ತದೆ ಆದರೆ ಸಾಯಣರು ಬ್ರಾಹ್ಮಣವಾಕ್ಯವನ್ನುದಾಹರಿಸಿ ಇದು **ಅಗ್ನಿಯ** ಪರ್ಯಾಯನಾಮವೆಂದು ತಿಳಿಸಿದ್ದಾರೆ

ಆದಿತ್ಯನು ಸರ್ವಲೋಕಕ್ಕೂ ಪ್ರಭುವಾಗಿ, ಪೃಥಿವ್ಯಾದಿ ಮೂರು ಲೋಕಗಳಲ್ಲೂ ಸಹ **ಅಗ್ನಿ**, ಇಂದ್ರ, ಮತ್ತು **ಆದಿತ್ಯ**ರೂಪದಲ್ಲಿ ಮೂರು ಲೋಕಗಳಲ್ಲಿಯೂ ವೈಯಕ್ತಿಕವಾದ ಪ್ರಭಾವವನ್ನು ಬೀರಿ ಮೂರು ಲೋಕಗಳಿಗೂ ಮಾರ್ಗದರ್ಶಕನಾಗಿರುತ್ತಾನೆ. ಪಾರ್ಥಿವವಾದ ರಾಜನು ಈ ದಿವ್ಯತತ್ತ್ವಗಳನ್ನರಿಯಬೇಕಾದರೆ, ಈ ತತ್ತ್ವಜ್ಞಾನವುಳ್ಳ ಪುರೋಹಿತನಿದ್ದೇ ಇರಬೇಕು. ಈ ದಿವ್ಯಜ್ಞಾನವು ವಸಿಷ್ಠಪುತ್ರರಿಗಿದ್ದಿತು ಎಂದು ಈ ಪ್ರಕರಣವು ತಿಳಿಸುತ್ತದೆ. ಅದು ಹೇಗೆಂದರೆ —

> **ತ್ರಯಃ ಕೃಣ್ವಂತಿ ಭುವನೇಷು ರೇತಸ್ತಿಸ್ರಃ ಪ್ರಜಾ ಆರ್ಯಾ ಜ್ಯೋತಿರಗ್ರಾಃ ।**
> **ತ್ರಯೋ ಘರ್ಮಾಸ ಉಷಸಂ ಸಚಂತೇ ಸರ್ವಾ ಇತ್ತಾ ಅನು ವಿದುರ್ವಸಿಷ್ಠಾಃ ॥**

(ಋ ಸಂ ೭ ೩೩ ೭)

**ಭೂರ್ಭುವಸ್ಸ್ವಃ** ಎಂಬ ಮೂರು ಲೋಕಗಳಿಗೂ ಅಧಿಪತಿಗಳಾದ ಇಂದ್ರಾಗ್ನಿ ಮತ್ತು ಆದಿತ್ಯರ ದಿವ್ಯಸ್ವರೂಪವನ್ನು ವಸಿಷ್ಠಪುತ್ರರು ಅರಿತಿದ್ದಾರೆ ಎಂದು ಇವರ ಪ್ರಶಂಸೆಯಿದೆ. ಇಂತಹ ದಿವ್ಯಜ್ಞಾನವುಳ್ಳ ಪುರೋಹಿತನಿರುವ ರಾಜನು ತನ್ನ ರಾಜ್ಯವನ್ನು ಋತದ ಮಾರ್ಗಕ್ಕೆ ಅನುಸಾರವಾಗಿ ನಿರ್ವಹಿಸಿ ಲೋಕಕ್ಷೇಮಕ್ಕೆ ಸಾಧನನಾಗುತ್ತಾನೆ ಎಂದು ಪ್ರಶಂಸಿಸಿದೆ.

## ೭ ಅಜ ಏಕಪಾತ್

---

**ಅಜ ಏಕಪಾತ್** ಎಂಬ ದೇವತೆಯ ಸ್ವರೂಪವನ್ನು ಅನೇಕ ವಿಧಗಳಲ್ಲಿ ವಿವರಿಸಿವೆ. ಕಲವರು, ಜನ್ಮರಹಿತನಾದ ಈಶ್ವರನೆಂದೂ, ಇನ್ನು ಕಲವರು ಒಂದೇ ಕಾಲುಳ್ಳ ಆಡೆಂದೂ (ಇದು ಆಂಗ್ಲಪಂಡಿತರಲ್ಲಿ ಒಬ್ಬರು ಹೇಳುವುದು. ಅನೇಕ ಆಂಗ್ಲಪಂಡಿತರೇ ಈ ಅರ್ಥವನ್ನು ಒಪ್ಪುವುದಿಲ್ಲ) ಮತ್ತು ಏಕಪಾದವುಳ್ಳ ಆದಿತ್ಯನೆಂದು ಕಲವರೂ ತಿಳಿಸುತ್ತಾರೆ. ಸೂರ್ಯನೆಂದರ್ಥಮಾಡುವುದೇ ವೈದಿಕವಾಕ್ಯಗಳಿಗೆ ಅನುಸಾರವಾಗಿರುತ್ತದೆ.

> ಅಜ ಏಕಪಾದುದಗಾತ್ಪುರಸ್ತಾತ್ । **ವಿಶ್ವಾ ಭೂತಾನಿ ಪ್ರತಿ ಮೋದಮಾನಃ । ತಸ್ಯ ದೇವಾಃ ಪ್ರಸವಂ ಯಂತಿ ಸರ್ವೇ ।**

(ತೈ ಬ್ರಾ ೩-೧-೨೮)

**ಅಜಏಕಪಾದ್ದೇವತೆಯು** ಪೂರ್ವದಿಕ್ಕಿನಲ್ಲಿ ಆವಿರ್ಭೂತನಾಗಿದ್ದಾನೆ. ಇವನು ಲೋಕಕ್ಕೆಲ್ಲ ಹರ್ಷವನ್ನುಂಟುಮಾಡುತ್ತಾನೆ. ಇವನ ನಿರ್ದೇಶವನ್ನನುಸರಿಸಿ ಸಕಲ ದೇವತೆಗಳೂ ವ್ಯವಹರಿಸುವರು ಎಂಬ ವರ್ಣನವು ಸೂರ್ಯನನ್ನು ದ್ಯೋತಿಸಿರುತ್ತದೆ. ನಿರುಕ್ತವಾಕ್ಯಕ್ಕೆ ವ್ಯಾಖ್ಯೆಯನ್ನು ಬರೆಯುವಾಗ ದುರ್ಗಾಚಾರ್ಯರು ಈ ಪದವು ಅಗ್ನಿಯನ್ನಾಗಲಿ ಅಥವಾ ಸೂರ್ಯನನ್ನಾಗಲಿ ನಿರ್ದೇಶಿಸುತ್ತದೆ ಎಂದು ತಿಳಿಸಿದ್ದಾರೆ. (ನಿ ಭಾ ೧೨-೨೯)

ಋಕ್ಸಂಹಿತೆಯಲ್ಲಿ **ಅಹಿರ್ಬುಧ್ನ್ಯ** ಮತ್ತು **ಅಜಏಕಪಾತ್** ಎಂಬ ಎರಡು ದೇವತೆಗಳನ್ನು ಒಟ್ಟಿಗೆ ಪ್ರಶಂಸಿಸುವ ಭಾಗಗಳು ಅನೇಕವಿವೆ.

ಇತಿ ಪ್ರಾಚೀನವೂ, ಅತಿಗಹನವೂ, ಅತಿ ವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಬೇಕೆಂಬ ಘನವಾದ ಉದ್ದೇಶದಿಂದ ಕರ್ನಾಟಕಸಿಂಹಾಸನಾಧೀಶ್ವರರೂ ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿಪರರೂ ಆದ **ಶ್ರೀ ಜಯಚಾಮರಾಜೇಂದ್ರಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ ಸಿ ಎಸ್, ಐ.** ಮಹಾಪ್ರಭುಗಳವರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಿಸುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ ಅವರ ಕುಟುಂಬಕ್ಕೂ ರಾಜಕುಮಾರಿಯರಿಗೂ, **ಶ್ರೀಕಂಠದತ್ತ ನರಸಿಂಹರಾಜ ಒಡೆಯರ್**, ಎಂಬ ಶುಭನಾಮಾಂಕಿತರಾದ ರಾಜಕುಮಾರರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪ್ರತಿಪಾದ್ಯನಾದ ಸರ್ವೇಶ್ವರನು ಐಹಿಕಫಲಗಳಾದ ಆಯುರಾರೋಗ್ಯೈಶ್ವರ್ಯಾದಿಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಆಧ್ಯಾತ್ಮಜ್ಞಾನವನ್ನೂ ಇತೋಽಪ್ಯಧಿಕವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಶ್ರೀಜಯನಾಮ ಸಂ॥ ಜ್ಯೇಷ್ಠ ಶುದ್ಧ ದ್ವಿತೀಯಾ ಗುರುವಾರ
ತಾ॥ 3 6-1954

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್



|| ಶ್ರೀಃ ||

# ವಿ ಷ ಯಾ ನು ಕ್ರ ಮ ಣಿ ಕೆ



## ಐದನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯ

## ಏಳನೆಯ ಮಂಡಲ

—o—

ಐದನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ಸಮಾಪ್ತವು.

---

## ನಾಲ್ಕನೆಯ ಅಧ್ಯಾಯ

---

## ಐದನೆಯ ಅಧ್ಯಾಯವು

ಐದನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು ಸಮಾಪ್ತವು.

---

ವಿಷಯಾನುಕ್ರಮಣಿಕೆ ಸಮಾಪ್ತವು



## ಸಂಕೇತಾಕ್ಷರಗಳ ವಿವರಣೆಯು



ಅಥ. ಸಂ.— ಅಥರ್ವವೇದಸಂಹಿತಾ
ಆಪ ಸೂ — ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.— ಆಪಸ್ತಂಬಧರ್ಮಸೂತ್ರ
ಆಪ. ಪ. ಸೂ.— ಆಪಸ್ತಂಬಪರಿಭಾಷಾಸೂತ್ರ
ಆ. ಸೂ. ಅಥವಾ ಆ— ಆಶ್ವಲಾಯನಶ್ರೌತಸೂತ್ರ
ಉ. ಸೂ.— ಉಣಾದಿ ಸೂತ್ರ
ಋ ಸಂ.— ಋಗ್ವೇದಸಂಹಿತಾ
ಐ. ಆ.— ಐತರೇಯಾರಣ್ಯಕ
ಐ. ಉ — ಐತರೇಯೋಪನಿಷತ್
ಐ. ಬ್ರಾ — ಐತರೇಯಬ್ರಾಹ್ಮಣ
ಛಾ. ಉ — ಛಾಂದೋಗ್ಯೋಪನಿಷತ್
ಜೈ. ಪೂ ಸೂ.— ಜೈಮಿನೀಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ ವಿ.— ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ — ತಾಂಡ್ಯಮಹಾಬ್ರಾಹ್ಮಣ
ತೈ ಆ — ತೈತ್ತಿರೀಯ ಆರಣ್ಯಕ
ತೈ. ಬ್ರಾ.— ತೈತ್ತಿರೀಯಬ್ರಾಹ್ಮಣ
ತೈ ಸಂ.— ತೈತ್ತಿರೀಯ ಸಂಹಿತಾ
ನಿ.— ನಿರುಕ್ತ, ನಿಘಂಟು
ಪಾ ಸೂ — ಪಾಣಿನೀಯ ಸೂತ್ರ
ಪಾ. ಶಿ.— ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ ಸೂ — ಫಿಟ್ಸೂತ್ರ
ಬ್ರ ಸೂ — ಬ್ರಹ್ಮಸೂತ್ರ
ಮ. ಭಾ — ಮಹಾಭಾರತ
ಮ. ಸ್ಮೃ — ಮನುಸ್ಮೃತಿ
ಮೈ. ಸಂ — ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.— ಯಾಜ್ಞವಲ್ಕ್ಯಸ್ಮೃತಿ
ವಾ. ಸಂ — ವಾಜಸನೇಯಸಂಹಿತಾ
ವಾ. ಪು — ವಾಯುಪುರಾಣ
ವಿ. ಪು.— ವಿಷ್ಣು ಪುರಾಣ
ವೇ. ಸೂ.— ವೇದಾಂತಸೂತ್ರ
ಶ. ಬ್ರಾ.— ಶತಪಥಬ್ರಾಹ್ಮಣ
ಸಾ. ಸಂ — ಸಾಮವೇದಸಂಹಿತಾ ಇತ್ಯಾದಿ
ಬೃ. ದೇ — ಬೃಹದ್ದೇವತಾ



ॐ

॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

**ಸಾಯಣಭಾಷ್ಯಸಹಿತಾ**

# ಋಗ್ವೇದ ಸಂಹಿತಾ

**(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)**

**ಭಾಗ ೨೨**

## ॥ ಪಂಚಮಾಷ್ಟಕೇ ತೃತೀಯೋಧ್ಯಾಯಃ ॥

**ಐದನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು**

## ಏಳನೆಯ ಮಂಡಲದ ಸೂಕ್ತಗಳು, ೨೦-೩೩

## ಪೀಠಿಕೆ.

ಏಳನೆಯ ಮಂಡಲದಲ್ಲಿ ೧೮ನೆಯ ಸೂಕ್ತದಿಂದ ೩೩ನೆಯ ಸೂಕ್ತದವರೆಗೆ ಇರುವ ಒಟ್ಟು ೧೬ ಸೂಕ್ತಗಳು ಇಂದ್ರದೇವತಾಕವು. ಅವುಗಳಲ್ಲಿ ೧೮-೧೯ನೆಯ ಸೂಕ್ತಗಳು ಹಿಂದಿನ ಅಧ್ಯಾಯದಲ್ಲಿ ಎಂದರೆ ಋ. ಸಂ. ಭಾಗ ೨೧ರಲ್ಲಿ ಸೇರಿವೆ. ಆದ್ದರಿಂದ ಈ ಭಾಗದಲ್ಲಿ ೨೦ ರಿಂದ ೩೩ರವರೆಗ ಇರುವ ೧೪ ಸೂಕ್ತಗಳು ಇಂದ್ರನ ಪರವಾಗಿವೆ. ಇಂದ್ರನ ವಿಷಯವಾಗಿ ನಾವು ಋ. ಸಂ. ಭಾಗ—೫ ಪುಟ 569-582 ಮತ್ತು ಭಾಗ—೧೬ ಪುಟ 631-683 ಗಳಲ್ಲಿಯೂ ಮತ್ತು ಇತರಕಡೆಗಳಲ್ಲಿಯೂ ವಿಸ್ತಾರವಾಗಿ ವಿವರಿಸಿರುವುದರಿಂದ ಇಲ್ಲಿಂದ ಮುಂದಕ್ಕೆ ಆವಶ್ಯಕತ ತೋರಿಬಂದ ಕಡೆಯಲ್ಲಿ ಮಾತ್ರ ವಿಶೇಷ ಸಂಗತಿಗಳನ್ನು ವಿವರಿಸಲಾಗುವುದು.

## ಇಪ್ಪತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಅಥ ತೃತೀಯೋಽಧ್ಯಾಯ ಆರಭ್ಯತೇ ॥ ಉಗ್ರೋ ಜಜ್ಞ ಇತಿ ದಶರ್ಚಂ ತೃತೀಯಂ ಸೂಕ್ತಂ-ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ತಥಾ ಚಾನುಕ್ರಮ್ಯತೇ । ಉಗ್ರೋ ದಶೇತಿ ॥ ಆಭಿಪ್ಲವಿಕೇ ಚ-**

**ತುರ್ಥೇಽಹನಿ ನಿಷ್ಕೇವಲ್ಯ ಏತತ್ಸೂಕ್ತಂ ನಿವಿದ್ಧಾನಂ । ಸೂತ್ರಿತಂ ಚ । ಚತುರ್ಥಸ್ಯೋಗ್ರೋ ಜಜ್ಞ ಇತಿ ನಿಷ್ಕೇವಲ್ಯಂ । ಆ ೭-೭ । ಇತಿ ॥ ಮಹಾವ್ರತೇಽಪಿ ನಿಷ್ಕೇವಲ್ಯ ಏತತ್ಸೂಕ್ತಂ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಉಗ್ರೋ ಜಜ್ಞೇ ವೀರ್ಯಾಯ ಸ್ವಧಾವಾನುದು ಬ್ರಹ್ಮಾಣ್ಯೈರತ ಶ್ರವಸ್ಯಾ । ಐ. ಆ ೫-೨-೨ । ಇತಿ ॥ ಸೌಮಿಕಚಾತುರ್ಮಾಸ್ಯೇಷು ವೈಶ್ವದೇವಸ್ಯ ಸ್ಥಾನೇ ಪ್ರಥಮಂ ಪೃಷ್ಠ್ಯಮಹಃ । ತತ್ರಾಪಿ ನಿಷ್ಕೇವಲ್ಯ ಏತತ್ಸೂಕ್ತಂ ನಿವಿದ್ಧಾನಂ । ಸೂತ್ರಿತಂ ಚ । ಜನಿಷ್ಠಾ ಉಗ್ರ ಉಗ್ರೋ ಜಜ್ಞ ಇತಿ ಮಧ್ಯಂದಿನಃ । ಆ ೯-೨ । ಇತಿ ॥**

**ಅನುವಾದವು**— ಹಿಂದಿನ ಭಾಗದಲ್ಲಿ ಐದನೆಯ ಅಷ್ಟಕದ ಎರಡನೆಯ ಅಧ್ಯಾಯದ ವಿವರಣೆಯು ಮುಗಿದಿರುವುದರಿಂದ ಈಗ ಮೂರನೆಯ ಅಧ್ಯಾಯದ ವಿವರಣೆಯನ್ನು ಪ್ರಾರಂಭಿಸಲಾಗುವುದು. **ಉಗ್ರೋ ಜಜ್ಞೇ** ಎಂಬ ಈ ಸೂಕ್ತವು ಏಳನೆಯ ಮಂಡಲದ ಎರಡನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಇಂದ್ರನು ದೇವತೆಯು, ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ **ಉಗ್ರೋ ದಶ** ಎಂದು ಹೇಳಿರುವುದು ಅಭಿಪ್ಲವಸಂಬಂಧವಾದ ಯಾಗಗಳಲ್ಲಿ ನಾಲ್ಕನೆಯ ದಿವಸ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಈ ಸೂಕ್ತವನ್ನು ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಚತುರ್ಥಸ್ಯೋಗ್ರೋ ಜಜ್ಞ ಇತಿ ನಿಷ್ಕೇವಲ್ಯಂ** ಎಂಬ ಸೂತ್ರದಿಂದ (ಆ ೭-೭) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ಸಹ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ **ಉಗ್ರೋ ಜಜ್ಞೇ ವೀರ್ಯಾಯ ಸ್ವಧಾವಾನುದು ಬ್ರಹ್ಮಾಣ್ಯೈರತ ಶ್ರವಸ್ಯಾ** ಎಂಬ ವಾಕ್ಯದಿಂದ (ಐ ಆ ೫-೨-೨) ನಿರ್ದಿಷ್ಟವಾಗಿರುವುದು ಮತ್ತು ಸೋಮಸಂಬಂಧವಾದ ಚಾತುರ್ಮಾಸ್ಯವೆಂಬ ಯಾಗಗಳಲ್ಲಿ ವೈಶ್ವದೇವಸ್ಥಾನದಲ್ಲಿ ಮೊದಲು ಪೃಷ್ಠ್ಯವೆಂಬ ಯಾಗದ ಮೊದಲನೆಯ ದಿನದ ಕರ್ಮವನ್ನು ಆಚರಿಸುವಾಗ ನಿಷ್ಕೇವಲ್ಯಶಸ್ತ್ರಮಂತ್ರಗಳ ಮಧ್ಯದಲ್ಲಿ ಈ ಸೂಕ್ತವನ್ನು ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ್ರಸೂತ್ರದ **ಜನಿಷ್ಠಾ ಉಗ್ರ ಉಗ್ರೋ ಜಜ್ಞ ಇತಿ ಮಧ್ಯಂದಿನಃ** ಎಂಬ ಸೂತ್ರದಿಂದ (ಆ ೯ ೨) ವಿವೃತವಾಗಿರುವುದು

## ಸೂಕ್ತ—೨೦

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೨೦ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ ೧, ೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಉಗ್ರೋ ಜಜ್ಞೇ ವೀರ್ಯಾಯ ಸ್ವಧಾವಾಞ್ಚಕ್ರಿರಪೋ ನರ್ಯೋ ಯತ್ಕರಿಷ್ಯನ್ ।

ಜಗ್ಮಿರ್ಯುವಾ ನೃಷದನಮವೋಭಿಸ್ತ್ರಾತಾ ನ ಇಂದ್ರ ಏನಸೋ ಮಹಶ್ಚಿತ್ ॥

ಪದಪಾಠಃ

ಉಗ್ರಃ । ಜಜ್ಞೇ । ವೀರ್ಯಾಯ । ಸ್ವಧಾऽವಾನ್ । ಚಕ್ರಿಃ । ಅಪಃ । ನರ್ಯಃ । ಯತ್ । ಕರಿಷ್ಯನ್ ।

ಜಗ್ಮಿಃ । ಯುವಾ । ನೃऽಸದನಂ । ಅವಃऽಭಿಃ । ತ್ರಾತಾ । ನಃ । ಇಂದ್ರಃ । ಏನಸಃ । ಮಹಃ । ಚಿತ್ ॥

ಸಾಯಣಭಾಷ್ಯಂ

ಸ್ವಧಾವಾನ್ ಬಲವಾನುಗ್ರ ಓಜಸ್ವ್ಯುದ್ಗೂರ್ಣೋ ವೇಂದ್ರೋ ವೀರ್ಯಾಯ ವೀರ್ಯಂ ಕರ್ತುಂ ಜಜ್ಞೇ । ಬಭೂವ । ನರ್ಯೋ ನರಹಿತಃ ಸನ್ ಯತ್ಕರ್ಮ ಕರಿಷ್ಯನ್ ಭವತಿ ತದಪಃ ಕರ್ಮ ಚಕ್ರಿಃ ಕರ್ತ್ರೈವ ॥ ಚಕ್ರಿರಿತಿ ಕಿನ್‌ಪ್ರತ್ಯಯಸ್ಯ ಲಿಡ್ವದ್ಭಾವಾನ್ನ ಲೋಕಾವ್ಯಯನಿಷ್ಠಾ ಖಲರ್ಥತೃನಾಮಿತಿ ಷಷ್ಠೀಪ್ರತಿಷೇಧಃ ॥ ಅಪಿ ಚ ನೃಷದನಂ ಯಜ್ಞಗೃಹಂ ಯುವಾ ನಿತ್ಯತರುಣಃ ಸನ್ ಅವೋಭೀ ರಕ್ಷಣೈಃ ಸಾರ್ಧಂ ಜಗ್ಮಿರ್ಗಂತಾ ಮಹಶ್ಚಿನ್ಮಹತೋऽಪ್ಯೇನಸಃ ಪಾಪಾನ್ನೋऽಸ್ಮಾಕಂ ತ್ರಾತಾ ರಕ್ಷಿತಾ ಚ ಭವೇತಿ ॥

ಪ್ರತಿಪದಾರ್ಥ

**ಸ್ವಧಾವಾನ್**—ಶಕ್ತಿಯುತನೂ । **ಉಗ್ರಃ**—ಅತ್ಯದ್ಭುತವಾದ ಪರಾಕ್ರಮವುಳ್ಳವನೂ ಆದ । **ಇಂದ್ರಃ**—ಇಂದ್ರನು । **ವೀರ್ಯಾಯ**—ವೀರ್ಯಕರ್ಮಗಳನ್ನಾಚರಿಸಲು । **ಜಜ್ಞೇ**—ಉತ್ಪನ್ನನಾಗಿದ್ದಾನೆ । **ನರ್ಯಃ**—ಮಾನವರಿಗೆ ಹಿತಕಾರಿಯಾಗಿ । **ಯತ್**—ಯಾವ ಕರ್ಮವನ್ನು । **ಕರಿಷ್ಯನ್**—ಮಾಡಲು ಸಂಕಲ್ಪಿಸುವನೋ । **ಅಪಃ**—ಆ ಕರ್ಮವನ್ನು । **ಚಕ್ರಿಃ**—ಖಂಡಿತವಾಗಿಯೂ ನಿರ್ವಹಿಸುತ್ತಾನೆ । **ಯುವಾ**— ನಿತ್ಯತರುಣನಾದ ಇಂದ್ರನು । **ಅವೋಭಿಃ** — ತನ್ನ ರಕ್ಷಣೆಗಳೊಡನೆ । **ನೃಷದನಂ** — ಯಜ್ಞಗೃಹವನ್ನು । **ಜಗ್ಮಿಃ** — ಪ್ರವೇಶಿಸಿ । **ಮಹಶ್ಚಿತ್** — ಅತ್ಯಧಿಕವಾದ । **ಏನಸಃ** — ಪಾಪದಿಂದಲೂ (ಬಿಡಿಸಿ) । **ನಃ** — ನಮಗೆ । **ತ್ರಾತಾ** — ರಕ್ಷಕನಾಗಿರುತ್ತಾನೆ

ಭಾವಾರ್ಥ

ಶಕ್ತಿಯುತನೂ ಅತ್ಯದ್ಭುತವಾದ ಪರಾಕ್ರಮವುಳ್ಳವನೂ ಆದ ಇಂದ್ರನು ವೀರ್ಯಕರ್ಮಗಳನ್ನಾಚರಿಸಲು ಉತ್ಪನ್ನನಾಗಿದ್ದಾನೆ. ಮಾನವರಿಗೆ ಹಿತಕಾರಿಯಾಗಿ ಯಾವ ಕರ್ಮವನ್ನು ಮಾಡಲು ಸಂಕಲ್ಪಿಸುವನೋ ಆ ಕರ್ಮವನ್ನು ಖಂಡಿತವಾಗಿಯೂ ನಿರ್ವಹಿಸುತ್ತಾನೆ ನಿತ್ಯತರುಣನಾದ ಇಂದ್ರನು ತನ್ನ ರಕ್ಷಣೆಗಳೊಡನೆ ಯಜ್ಞಗೃಹವನ್ನು ಪ್ರವೇಶಿಸಿ ಅತ್ಯಧಿಕವಾದ ಪಾಪದಿಂದ ಬಿಡಿಸಿ ನಮ್ಮನ್ನು ರಕ್ಷಿಸುತ್ತಾನೆ

English Translation

The fierce and powerful (Indra) has been born for heroic (deeds); friendly to man he is the accomplisher of whatever act he undertakes to perform, ever youthful, he invests the (Sacrificial) hall with defences (against interruption), be our preserver, Indra, from heinous sin

ಸಂಹಿತಾಪಾಠಃ

ಹಂತಾ ವೃತ್ರಮಿಂದ್ರಃ ಶೂಶುವಾನಃ ಪ್ರಾವೀನ್ನು ವೀರೋ ಜರಿತಾರಮೂತೀ ।
ಕರ್ತಾ ಸುದಾಸೇ ಅಹ ವಾ ಉ ಲೋಕಂ ದಾತಾ ವಸು ಮುಹುರಾ ದಾ-
ಶುಷೇ ಭೂತ್ ॥ ೧ ॥

ಪದಪಾಠಃ

ಹಂತಾ । ವೃತ್ರಂ । ಇಂದ್ರಃ । ಶೂಶುವಾನಃ । ಪ್ರ । ಆವೀತ್ । ನು । ವೀರಃ । ಜರಿತಾರಂ । ಊತೀ ।
ಕರ್ತಾ । ಸುऽದಾಸೇ । ಅಹ । ವೈ । ಊಂ ಇತಿ । ಲೋಕಂ । ದಾತಾ । ವಸು । ಮುಹುಃ । ಆ । ದಾ-
ಶುಷೇ । ಭೂತ್ ॥ ೨ ॥

ಸಾಯಣಭಾಷ್ಯಂ

ಇಂದ್ರಃ ಶೂಶುವಾನೋ ವರ್ಧಮಾನಃ ಸನ್ ವೃತ್ರಮಸುರಂ ಹಂತಾ ಭವತಿ ॥ ತೃನಂತತ್ವಾ-ದತ್ರ ಷಷ್ಠ್ಯಭಾವಃ ॥ ವೀರೋ ವೀರಃ ಸನ್ ಜರಿತಾರಂ ಸ್ತೋತಾರಂ ನು ಕ್ಷಿಪ್ರಮೂತೀ ಊತ್ಯಾ ರಕ್ಷ-ಯಾ ಪ್ರಾವೀತ್ । ಪ್ರಾರಕ್ಷಚ್ಚ । ಸುದಾಸೇ ರಾಜ್ಞೇ ಲೋಕಂ ಜನಪದಂ ಕರ್ತಾ ಚ । ಯದ್ವಾ । ಸುದಾ-ಸೇ ಕಲ್ಯಾಣದಾನಾಯ ಯಜಮಾನಾಯ ಲೋಕಂ ಕರ್ತಾ ಚ ಭವತಿ ॥ ಇಹಾಪ್ಯುತ್ತರತ್ರಾಪಿ ತೃನಂತ-ತ್ವಾತ್‌ಷಷ್ಠ್ಯಭಾವಃ । ಅಹ ವಾ ಉ ಇತಿ ತ್ರಯಃ ಪೂರಣಾಃ ॥ ದಾಶುಷೇ ಯಜಮಾನಾಯ ವಸು ಧನಂ ಮುಹುರ್ಭೂಯೋ ಭೂಯೋ ದಾತಾ ಚ ಭೂತ್ । ಅಭೂತ್ । ಆ ಇತಿ ಚಾರ್ಥೇ ॥

ಪ್ರತಿಪದಾರ್ಥ

**ಇಂದ್ರಃ**— ಇಂದ್ರನು । **ಶೂಶುವಾನಃ**—ವೃದ್ಧಿಯನ್ನು ಹೊಂದುತ್ತಾ। **ವೃತ್ರಂ**— ಅಸುರನನ್ನು । **ಹಂತಾ**—ಕೊಲ್ಲುವವನಾಗುತ್ತಾನೆ । **ವೀರಃ** — ಪರಾಕ್ರಮಿಯಾದ ಇಂದ್ರನು । **ಜರಿತಾರಂ** — ಸ್ತೋತೃವನ್ನು । **ನು**—ಶೀಘ್ರವಾಗಿ ।**ಊತೀ**—ರಕ್ಷಣೆಗಳಿಂದ । **ಪ್ರಾವೀತ್**—ರಕ್ಷಿಸಿದ್ದಾನೆ. । **ಸುದಾಸೇ**—ಸುದಾಸನೆಂಬ ರಾಜನಿಗೆ । **ಲೋಕಂ**— ರಾಜ್ಯವನ್ನು । **ಕರ್ತಾ**—ಒದಗಿಸಿಕೊಡುವವನಾಗುತ್ತಾನೆ । **ಅಹ ವಾ ಉ**—ಅಲ್ಲದೆ । **ದಾಶುಷೇ**—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ । **ವಸು**—ಧನವನ್ನು । **ಮುಹುಃ**—ಅನೇಕವೇಳೆ । **ದಾತಾ ಭೂತ್**—ಒದಗಿಸಿಕೊಡುತ್ತಾನೆ.

ಭಾವಾರ್ಥ

ವೃದ್ಧಿಯನ್ನು ಹೊಂದತಕ್ಕ ಇಂದ್ರನು ವೃತ್ರಹಂತಕನಾಗುತ್ತಾನೆ. ಪರಾಕ್ರಮಿಯಾದ ಇಂದ್ರನು ಸ್ತೋತೃವನ್ನು ರಕ್ಷಣೆಗಳಿಂದ ರಕ್ಷಿಸಿದ್ದಾನೆ. ಸುದಾಸನೆಂಬ ರಾಜನಿಗೆ ರಾಜ್ಯವನ್ನು ಒದಗಿಸಿಕೊಡುತ್ತಾನೆ. ಹವಿಸ್ಸನ್ನರ್ಪಿಸುವ ಯಜಮಾನನಿಗೆ ಅಪಾರವಾದ ಧನದಾನವನ್ನು ಅನೇಕವೇಳೆ ಮಾಡುತ್ತಾನೆ.

## English Translation

Indra, dilating in bulk, is the slayer of Vritra: the hero defends his worshipper promptly with his protection, whether he be the giver of dominion to Sudas, or the donor repeatedly of wealth to the offerer (of oblation)

ಸಂಹಿತಾಪಾಠಃ

ಯುಧ್ಮೋ ಅನರ್ವಾ ಖಜಕೃತ್ಸಮದ್ವಾ ಶೂರಃ ಸತ್ರಾಷಾಡ್ ಜನುಷೇಮ-
ಷಾಳ್ಹಃ ।
ವ್ಯಾಸ ಇಂದ್ರಃ ಪೃತನಾಃ ಸ್ವೋಜಾ ಅಧಾ ವಿಶ್ವಂ ಶತ್ರೂಯಂತಂ ಜಘಾನ ॥

ಪದಪಾಠಃ

ಯುಧ್ಮಃ । ಅನರ್ವಾ । ಖಜಽಕೃತ್ । ಸಮತ್ಽವಾ । ಶೂರಃ । ಸತ್ರಾಷಾಟ್ । ಜನುಷಾ । ಈಂ ।
ಅಷಾಳ್ಹಃ ।
ವಿ । ಆಸ । ಇಂದ್ರಃ । ಪೃತನಾಃ । ಸುಽಓಜಾಃ । ಅಧ । ವಿಶ್ವಂ । ಶತ್ರುಽಯಂತಂ । ಜಘಾನ ॥ ೩ ॥

ಸಾಯಣಭಾಷ್ಯಂ

ಯುಧ್ಮೋ ಯೋದ್ಧಾನರ್ವಾಭಿಗಂತೃರಹಿತೋ ಯುದ್ಧೇಷ್ವಪರಾಙ್ಮುಖೋ ವಾ ಖಜಕೃದ್ಯುದ್ಧಕೃತ್ । ಖಲೇ ಖಜ ಇತಿ ಯುದ್ಧನಾಮಸು ಪಾಠಾತ್ । ಸಮದ್ವಾ । ಸಮತ್ ಕಲಹಃ । ತದ್ವಾನ್ ಶೂರಃ ಶೌರ್ಯೋಪೇತೋ ಜನುಷಾ ಜನ್ಮನಾ ಸ್ವಭಾವತ ಏವ ಸತ್ರಾಷಾಟ್ ಬಹೂನಾಮಭಿಭವಿತಾಷಾಳ್ಹಃ ಸ್ವಯಂ ಚ ಕೇನಾಪ್ಯನಭಿಭೂತಃ ಸ್ವೋಜಾಃ ಸುಬಲ ಈಮಯಮಿಂದ್ರಃ ಪೃತನಾಃ ಶತ್ರೂಣಾಂ ಸೇನಾ ವ್ಯಾಸ । ವಿಕ್ಷಿಪತಿ । ಅಧಾಪಿ ಚ ಶತ್ರೂಯಂತಂ ಶಾತ್ರವಮಾಚರಂತಂ ವಿಶ್ವಂ ಸರ್ವಂ ಜಘಾನ ಹಂತಿ ॥

ಪ್ರತಿಪದಾರ್ಥ

**ಯುಧ್ಮಃ**—ಶ್ರೇಷ್ಠವಾದ ಯೋಧನೂ, । **ಅನರ್ವಾ**—ಪರಾಙ್ಮುಖನಾಗದಿರುವವನೂ, । **ಖಜಕೃತ್**—ಯುದ್ಧಕುಶಲನೂ । **ಸಮದ್ವಾ**—ಯುದ್ಧದಲ್ಲೇ ಆಸಕ್ತಿಯುಳ್ಳವನೂ । **ಶೂರಃ**—ಶೂರನೂ । **ಜನುಷಾ**—ಜನ್ಮದಿಂದಲೇ । **ಸತ್ರಾಷಾಟ್**—ಅನೇಕರನ್ನು ಸೋಲಿಸುವವನೂ । **ಅಷಾಳ್ಹಃ**—ಅಪ್ರತಿಹತನೂ । **ಸ್ವೋಜಾಃ**—ಉತ್ತಮವಾದ ಶಕ್ತಿಯುಳ್ಳವನೂ ಆದ । **ಈಂ ಇಂದ್ರಃ**—ಇದೇ ಇಂದ್ರನು । **ಪೃತನಾಃ**—ಶತ್ರುಸೇನೆಗಳನ್ನು । **ವಿ ಆಸ**—ಚದುರಿಸುತ್ತಾನೆ. । **ಅಧ**—ಮತ್ತು । **ಶತ್ರೂಯಂತಂ**—ತನಗೆ ವಿರುದ್ಧವಾಗಿರುವ । **ವಿಶ್ವಂ**—ಸಕಲರನ್ನೂ । **ಜಘಾನ**—ನಾಶಮಾಡುತ್ತಾನೆ.

ಭಾವಾರ್ಥ

ಶ್ರೇಷ್ಠವಾದ ಯೋಧನೂ, ಪರಾಙ್ಮುಖನಾಗದಿರುವವನೂ, ಯುದ್ಧಕುಶಲನೂ, ಯುದ್ಧದಲ್ಲೇ ಆಸಕ್ತಿಯುಳ್ಳವನೂ, ಶೂರನೂ, ಜನ್ಮದಿಂದಲೇ ಅನೇಕರನ್ನು ಸೋಲಿಸುವವನೂ, ಅಪ್ರತಿಹತನೂ, ಉತ್ತಮವಾದ ಶಕ್ತಿಯುಳ್ಳವನೂ ಆದ ಇದೇ ಇಂದ್ರನು ಶತ್ರುಸೇನೆಗಳನ್ನು ಚದರಿಸುತ್ತಾನೆ. ಮತ್ತು ತನಗೆ ವಿರುದ್ಧವಾಗಿ ವ್ಯವಹರಿಸುವ ಸಕಲ ಶತ್ರುಗಳನ್ನೂ ನಾಶಮಾಡುತ್ತಾನೆ.

English Translation

A warrior who turns not back in battle, a combatant, one engaged in tumults, a hero, victorious over (his) foes from birth, invincible, of great vigor this Indra, scatters (hostile) hosts and slays all (his) adversaries.

ಸಂಹಿತಾಪಾಠಃ

ಉಭೇ ಚಿದಿಂದ್ರ ರೋದಸೀ ಮಹಿತ್ವಾ ಪಪ್ರಾಥ ತವಿಷೀಭಿಸ್ತುವಿಷ್ಮಃ ।
ನಿ ವಜ್ರಮಿಂದ್ರೋ ಹರಿವಾನ್ಮಿಮಿಕ್ಷನ್ತ್ಸಮಂಧಸಾ ಮದೇಷು ವಾ ಉವೋಚ ॥

ಪದಪಾಠಃ

ಉಭೇ ಇತಿ । ಚಿತ್ । ಇಂದ್ರ । ರೋದಸೀ ಇತಿ । ಮಹಿಽತ್ವಾ । ಆ । ಪಪ್ರಾಥ । ತವಿಷೀಭಿಃ । ತುವಿಷ್ಮಃ ।
ನಿ । ವಜ್ರಂ । ಇಂದ್ರಃ । ಹರಿಽವಾನ್ । ಮಿಮಿಕ್ಷನ್ । ಸಂ । ಅಂಧಸಾ । ಮದೇಷು । ವೈ । ಉವೋಚ ॥೪॥

ಸಾಯಣಭಾಷ್ಯಂ

**ಹೇ ತುವಿಷ್ಮೋ ಬಹುಧನೇಂದ್ರ ಮಹಿತ್ವಾ ಮಹತ್ತ್ವೇನ ತವಿಷೀಭಿರ್ಬಲೈಶ್ಚೋಭೇ ಚಿದುಭೇ ಅಪಿ ರೋದಸೀ ದ್ಯಾವಾಪೃಥಿವ್ಯಾವಾ ಪಪ್ರಾಥ । ಆಪೂರಿತವಾನಸಿ । ಅಥ ಪರೋಕ್ಷಸ್ತುತಿಃ । ಹರಿವಾನಶ್ವವಾನಿಂದ್ರೋ ವಜ್ರಂ ನಿ ಮಿಮಿಕ್ಷನ್ ಶತ್ರುಷು ಪ್ರಾಪಯನ್ ಮದೇಷು ಯಜ್ಞೇಷು ನಿವಿತ್ಸು ವಾಂಧಸಾ ಸೋಮೇನ ಸಮುವೋಚ । ಸಂಸೇವ್ಯತೇ ಸಂಗಚ್ಛತೇ ವಾ ॥ ಉಚ ಸಮವಾಯ ಇತಿ ಧಾತುಃ । ವಾ ಇತಿ ಪೂರಣಃ ॥**

ಪ್ರತಿಪದಾರ್ಥ

**ತುವಿಷ್ಮಃ**—ಅತ್ಯಧಿಕವಾದ ಧನವುಳ್ಳ । **ಇಂದ್ರ**—ಎಲೈ ಇಂದ್ರನೇ, । **ಮಹಿತ್ವಾ**—ಮಾಹಾತ್ಮ್ಯವುಳ್ಳ । **ತವಿಷೀಭಿಃ**—ನಿನ್ನ ಶಕ್ತಿಗಳಿಂದ । **ಉಭೇ ಚಿತ್ ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ ಸಹ । **ಆ ಪಪ್ರಾಥ**—ವ್ಯಾಪಿಸಿದ್ದೀಯೆ. । **ಹರಿವಾನ್**—ಅಶ್ವಯುಕ್ತನಾದ । **ಇಂದ್ರಃ**—ಇಂದ್ರನು । **ವಜ್ರಂ**—ವಜ್ರಾಯುಧವನ್ನು । **ನಿಮಿಮಿಕ್ಷನ್** — ಶತ್ರುಗಳಮೇಲೆ ಪ್ರಯೋಗಿಸುತ್ತಾ । **ಮದೇಷು** — ಹರ್ಷಜನಕವಾದ ಯಜ್ಞಗಳಲ್ಲಿರುವ । **ಅಂಧಸಾ**—ಸೋಮರೂಪವಾದ ಅನ್ನದೊಂದಿಗೆ । **ಸಂ ಉವೋಚ ವೈ**— ಕೂಡಿಕೊಳ್ಳುತ್ತಾನೆ

ಭಾವಾರ್ಥ

ಅತ್ಯಧಿಕವಾದ ಧನವುಳ್ಳ ಎಲೈ ಇಂದ್ರನೇ, ಮಾಹಾತ್ಮ್ಯದಿಂದ ಯುಕ್ತವಾದ ನಿನ್ನ ಶಕ್ತಿಗಳಿಂದ ದ್ಯಾ: ಪೃಥಿವಿಗಳೆರಡನ್ನೂ ಸಹ ವ್ಯಾಪಿಸಿದ್ದೀಯೆ ಅಶ್ವಯುಕ್ತನಾದ ಇಂದ್ರನು ವಜ್ರಾಯುಧವನ್ನು ಶತ್ರುಗಳ ಮೇ ಪ್ರಯೋಗಿಸುತ್ತಾ ಹರ್ಷಜನಕವಾದ ಯಜ್ಞಗಳಲ್ಲಿರುವ ಸೋಮರೂಪವಾದ ಅನ್ನದೊಂದಿಗೆ ಕೂಡಿಕೊಳ್ಳುತ್ತಾನೆ.

English Translation

Opulent Indra, you have filled both heaven and earth with your ma nitude, your energies Indra, the lord of horses, brandishing the thunderbol is gratified at sacrifices by the (sacrificial) food

ಸಂಹಿತಾಪಾಠ:

ವೃಷಾ ಜಜಾನ ವೃಷಣಂ ರಣಾಯ ತಮು ಚಿನ್ನಾರೀ ನರ್ಯಂ ಸಸೂವ ।
ಪ್ರ ಯಃ ಸೇನಾನೀರಧ ನೃಭ್ಯೋ ಅಸ್ತೀನಃ ಸತ್ವಾ ಗವೇಷಣಃ ಸ ಧೃಷ್ಣುಃ

ಪದಪಾಠ:

ವೃಷಾ । ಜಜಾನ । ವೃಷಣಂ । ರಣಾಯ । ತಂ । ಊಂ ಇತಿ । ಚಿತ್ । ನಾರೀ । ನರ್ಯಂ । ಸಸೂವ ।
ಪ್ರ । ಯಃ । ಸೇನಾऽನೀಃ । ಅಧ । ನೃऽಭ್ಯಃ । ಅಸ್ತಿ । ಇನಃ । ಸತ್ವಾ । ಗೋऽಏಷಣಃ । ಸಃ । ಧೃಷ್ಣುಃ

ಸಾಯಣಭಾಷ್ಯಂ

ವೃಷಾ ಸೇಕ್ತಾ ಪಿತಾ ಕಶ್ಯಪೋ ವೃಷಣಂ ಕಾಮಾನಾಂ ವರ್ಷಿತಾರಮಿಂದ್ರಂ ರಣಾಯ ಯುದ್ಧಾ ರ್ಥಂ ಜಜಾನ ॥ ಜನ ಜನನ ಇತಿ ಧಾತುಃ ॥ ನರ್ಯಂ ನರಹಿತಂ ತಮು ತಮೇವೇಂದ್ರಂ ನಾರೀ ಚಿ ದಿತಿರಪಿ ಸಸೂವ । ಸುಷುವೇ । ಅಥಾಪಿ ಚ ಯ ಇಂದ್ರೋ ನೃಭ್ಯೋ ನೃಣಾಂ ಸೇನಾನೀಃ ಸೇನಾನಾ ನೇತಾ ಸನ್ ಪ್ರಾಸ್ತಿ ಪ್ರಭವತಿ ಸ ಇಂದ್ರ ಇನಃ ಸರ್ವಸ್ಯ ಜಗತ ಈಶ್ವರೋ ಭವತಿ । ನಿಯುತ್ವಾನಿನ ಇತಿ ಶ್ವರನಾಮಸು ಪಾಠಾತ್ । ಸತ್ವಾ ಶತ್ರೂಣಾಂ ಸಾದಕಶ್ಚ ಗವೇಷಣೋ ಗವಾಮನ್ವೇಷ್ಟಾ ಚ ಧೃಷ ಶತ್ರೂಣಾಂ ಧರ್ಷಕಶ್ಚ ಭವತೀತಿ ಶೇಷಃ ॥

ಪ್ರತಿಪದಾರ್ಥ

**ವೃಷಾ**—ಪಿತೃವಾದ ಕಶ್ಯಪನು । **ವೃಷಣಂ**—ಕಾಮವರ್ಷಕನಾದ ಇಂದ್ರನನ್ನು । **ರಣಾಯ**—ಯು ರ್ಥವಾಗಿಯೇ । **ಜಜಾನ**—ಉತ್ಪನ್ನಮಾಡಿದನು । **ನರ್ಯಂ**—ಮಾನವರಿಗೆ ಹಿತಕಾರಿಯಾದ । **ತಮು**—ಅ ಇಂದ್ರನನ್ನು । **ನಾರೀ ಚಿತ್**—ಮಾತೆಯಾದ ಅದಿತಿಯೂ ಸಹ । **ಸಸೂವ**—ಹಡೆದಳು । **ಅಧ**—ಅನಂತ **ಯಃ** — ಯಾವ ಇಂದ್ರನು । **ನೃಭ್ಯಃ ಸೇನಾನೀಃ** — ಮಾನವರಿಗೆಲ್ಲಾ ನೇತೃವಾಗಿ । **ಪ್ರ ಅಸ್ತಿ**—ನಾಯ

ಪ್ರಭಾವವನ್ನು ಬೀರುವನೋ | **ಸಃ**—ಅದೇ ಇಂದ್ರನು | **ಇನಃ**—ಸಕಲ ಜಗತ್ತಿಗೂ ಈಶ್ವರನಾಗಿರುತ್ತಾನೆ | **ಸತ್ವಾ**—ಜಯಶಾಲಿಯೂ | **ಗವೇಷಣಃ**—ಗೋವುಗಳನ್ನು ಹುಡುಕಿ ತರುವವನೂ | **ಧೃಷ್ಣುಃ**—ಶತ್ರುಧರ್ಷಕನೂ ಆಗಿರುತ್ತಾನೆ.

**ಭಾವಾರ್ಥ**

ಪಿತೃವಾದ ಕಶ್ಯಪನು ಕಾಮವರ್ಷಕನಾದ ಇಂದ್ರನನ್ನು ಯುದ್ಧಾರ್ಥವಾಗಿಯೇ ಉತ್ಪನ್ನಮಾಡಿದನು. ಮಾನವರಿಗೆ ಹಿತಕಾರಿಯಾದ ಆದೇ ಇಂದ್ರನನ್ನು ಮಾತೆಯಾದ ಅದಿತಿಯೂ ಸಹ ಹಡೆದಳು ಅನಂತರ, ಯಾವ ಇಂದ್ರನು ಮಾನವರ ಸೇನೆಗೆಲ್ಲಾ ನಾಯಕನಾಗಿ ತನ್ನ ಪ್ರಭಾವವನ್ನು ಬೀರುವನೋ ಅದೇ ಇಂದ್ರನು ಸಕಲ ಜಗತ್ತಿಗೂ ಈಶ್ವರನಾಗಿರುತ್ತಾನೆ ಜಯಶಾಲಿಯೂ, ಗೋವುಗಳನ್ನು ಹುಡುಕಿ ತರುವವನೂ ಶತ್ರುಧರ್ಷಕನೂ ಆಗಿರುತ್ತಾನೆ.

## English Translation

(His) progenitor begot Indra, the showerer (of benefits) for (the purpose of) war his mother brought him forth the benefactor of man the leader of armies who is chief over men, he is the lord, the conqueror, the recoverer of the cows, the subduer of foes

**ಸಂಹಿತಾಪಾಠಃ**

ನೂ ಚಿತ್ಸ ಭ್ರೇಷತೇ ಜನೋ ನ ರೇಷನ್ಮನೋ ಯೋ ಅಸ್ಯ ಘೋರಮಾವಿ-
ವಾಸಾತ್ |
ಯಜ್ಞೈರ್ಯ ಇಂದ್ರೇ ದಧತೇ ದುವಾಂಸಿ ಕ್ಷಯತ್ಸ ರಾಯ ಋತಪಾ
ಋತೇಜಾಃ || ೬ ||

**ಪದಪಾಠಃ**

ನು | ಚಿತ್ | ಸಃ | ಭ್ರೇಷತೇ | ಜನಃ | ನ | ರೇಷತ್ | ಮನಃ | ಯಃ | ಅಸ್ಯ | ಘೋರಂ | ಆऽವಿವಾ
ಸಾತ್ |
ಯಜ್ಞೈಃ | ಯಃ | ಇಂದ್ರೇ | ದಧತೇ | ದುವಾಂಸಿ | ಕ್ಷಯತ್ | ಸಃ | ರಾಯೇ | ಋತಽಪಾಃ | ಋತೇऽ
ಜಾಃ || ೬ ||

**ಸಾಯಣಭಾಷ್ಯಂ**

ಯೋ ಜನೋಽಸ್ಯೇಂದ್ರಸ್ಯ ಘೋರಂ ಶತ್ರೂಣಾಂ ಬಾಧಕಂ ಮನೋ ಯಜ್ಞೈರಾವಿವಾಸಾತ್ ಪರಿಚರತಿ ಸ ಜನಃ | ನು ಇತಿ ಪ್ರತಿಷೇಧೇ ವರ್ತತೇ | ಚಿದಿತ್ಯೇವಕಾರಾರ್ಥೇ | ನೂ ಚಿತ್ ನೈವ ಭ್ರೇಷತೇ | ಸ್ಥಾನಾತ್ ನ ಭ್ರಶ್ಯತಿ | ನ ರೇಷತ್ | ನೈವ ಕ್ಷೀಯೇತ | ಅಪಿ ಚ ಯೋ ಜನೋ ದುವಾಂಸಿ ಪರಿಚರಣ-ಸಾಧನಾನಿ ಸ್ತೋತ್ರಶಸ್ತ್ರಾಣೀಂದ್ರೇ ದಧತೇ ನಿಧತ್ತೇ ತಸ್ಮೈ ಜನಾಯ ಋತಪಾ ಯಜ್ಞಪಾತಾ ಋತೇ-ಜಾ ಯಜ್ಞೇ ಜಾತಶ್ಚ ಸ ಇಂದ್ರೋ ರಾಯೇ ಧನಾಯ ಕ್ಷಯತ್ | ನಿವಸತಿ | ಭವೇದಿತ್ಯರ್ಥಃ ||

ಪ್ರತಿಪದಾರ್ಥ

ಯಃ—ಯಾವ ಮಾನವನು | ಅಸ್ಯ—ಈ ಇಂದ್ರನ | ಘೋರಂ—ಶತ್ರುಗಳಿಗೆ ಭಯಂಕರವಾದ | ಮನಃ—ಮನಸ್ಸನ್ನು | ಯಜ್ಞೈಃ—ಯಜ್ಞಕರ್ಮಗಳಿಂದ | ಆವಿವಾಸಾತ್—ಉಪಚರಿಸುವನೋ | ಸಃ ಜನಃ—ಅದೇ ಮಾನವನು | ನೂ ಚಿತ್ ಭ್ರೇಷತೇ—ಖಂಡಿತವಾಗಿಯೂ ತನ್ನ ಪದಚ್ಯುತಿಯನ್ನು ಹೊಂದುವುದಿಲ್ಲ | ನ ರೇಷತ್—ಯಾವ ನಷ್ಟವನ್ನೂ ಹೊಂದುವುದಿಲ್ಲ | ಯಃ—ಯಾವ ಮಾನವನು | ದುವಾಂಸಿ—ಉಪಚಾರಸಾಧನವಾದ ಸ್ತುತಿಸ್ತ್ರಾದಿಗಳನ್ನು | ಇಂದ್ರೇ—ಇಂದ್ರನಲ್ಲಿ | ದಧತೇ—[illegible] | ಋತಪಾಃ—ಯಜ್ಞಪಾಲಕನೂ | ಋತೇಜಾಃ—ಯಜ್ಞದಲ್ಲಿ ಉತ್ಪನ್ನನಾದವನೂ ಆದ | ಸಃ—ಅದೇ ಇಂದ್ರನು | ರಾಯೇ—ಧನಾರ್ಥವಾಗಿ (ಧನವನ್ನು ಕೊಡಲು) | ಕ್ಷಯತ್—ಆಗಮಿಸುತ್ತಾನೆ |

ಭಾವಾರ್ಥ

ಯಾವ ಮಾನವನು ಶತ್ರುಗಳಿಗೆ ಭಯಂಕರವಾದ ಇಂದ್ರನ ಮನಸ್ಸನ್ನು ಯಜ್ಞಕರ್ಮಗಳಿಂದ ಉಪಚರಿಸುವನೋ ಅದೇ ಮಾನವನು ಖಂಡಿತವಾಗಿಯೂ ತನ್ನ ಪದಚ್ಯುತಿಯನ್ನು [illegible] ಯಾವ ಮಾನವನು ಉಪಚಾರಸಾಧನವಾದ ಸ್ತುತಿಸ್ತ್ರಾದಿಮಂತ್ರಗಳನ್ನು ಇಂದ್ರನಿಗೆ ಅರ್ಪಿಸುವನೋ ಅಂತಹ ಮಾನವನಿಗೆ ಯಜ್ಞ-ಯಜ್ಞದಲ್ಲಿ ಉತ್ಪನ್ನನಾದವನೂ ಆದ ಅದೇ ಇಂದ್ರನು ಧನವನ್ನು ಕೊಡಲು ಆಗಮಿಸುತ್ತಾನೆ

English Translation

He who devotes his mind to the terrible Indra never falls (from his condition), nor will he perish: the protector of sacred rites, the progeny of sacrifice bestows riches on him who offers to Indra praises and prayers with sacrifices

ಸಂಹಿತಾಪಾಠಃ

ಯದಿಂದ್ರ ಪೂರ್ವೋ ಅಪರಾಯ ಶಿಕ್ಷನ್ನಯಜ್ಜ್ಯಾಯಾನ್ಕನೀಯಸೋ ದೇಷ್ಣಂ ।
ಅಮೃತ ಇತ್ಪರ್ಯಾಸೀತ ದೂರಮಾ ಚಿತ್ರ ಚಿತ್ರ್ಯಂ ಭರಾ ರಯಿಂ ನಃ ।೨॥

ಪದಪಾಠಃ

ಯತ್ । ಇಂದ್ರ । ಪೂರ್ವಃ । ಅಪರಾಯ । ಶಿಕ್ಷನ್ । ಅಯತ್ । ಜ್ಯಾಯಾನ್ । ಕನೀಯಸಃ । ದೇಷ್ಣಂ । ಅಮೃತಃ । ಇತ್ । ಪರಿ । ಆಸೀತ । ದೂರಂ । ಆ । ಚಿತ್ರ । ಚಿತ್ರ್ಯಂ । ಭರ । ರಯಿಂ । ನಃ ॥ ೨ ॥

ಸಾಯಣಭಾಷ್ಯಂ

ಹೇ ಚಿತ್ರ ಚಾಯನೀಯೇಂದ್ರ ಯದ್ಧನಂ ಪೂರ್ವಃ ಪಿತಾ ಜ್ಯೇಷ್ಠೋ ಭ್ರಾತಾ ವಾಪರಾಯ ಪುತ್ರಾಯ ಕನೀಯಸೇ ವಾ ಶಿಕ್ಷನ್ ಪ್ರಯಚ್ಛನ್ । ಶಿಕ್ಷತಿರ್ದಾನಕರ್ಮಾ ಪ್ರೀಣಾತಿ ಶಿಕ್ಷತೀತಿ ದಾನಕರ್ಮ-

ಸು ಸಾರಾತ್ । ಭವತೀತಿ ಶೇಷಃ । ಯಚ್ಚ ದೇಷ್ಣಂ ದೇಯಂ ಧನಂ ಜ್ಯಾಯಾನ್ ಜ್ಯೇಷ್ಠಃ ಕನೀಯ-ಸೋಽಯತ್ ಪ್ರಾಪ್ನುಯಾತ್ । ಯಚ್ಚಾಪಿ ಧನಂ ಪಿತೃತೋ ಲಬ್ಧ್ವಾ ಪುತ್ರೋಽಮೃತ ಇತ್ ಅಮೃತ ಏವ ಸನ್ ಪಿತೃಗೃಹಂ ವಿಹಾಯ ದೂರಂ ಪರ್ಯಾಸೀತ ಆಸ್ತೇ ತತ್ ತ್ರಿವಿಧಂ ಚಿತ್ರ್ಯಂ ಚಾಯನೀಯಂ ರಯಿಂ ಧನಂ ನೋಽಸ್ಮಭ್ಯಮಾ ಭರ । ಆಹರ ॥

ಪ್ರತಿಪದಾರ್ಥ

**ಚಿತ್ರ**—ಆಕರ್ಷಕವಾದ ರೂಪವುಳ್ಳ । **ಇಂದ್ರ**—ಎಲೈ ಇಂದ್ರನೇ । **ಯತ್**—ಯಾವ ಧನವನ್ನು । **ಪೂರ್ವಃ**—ಪ್ರಥಮೋತ್ಪನ್ನನಾದ ಪಿತೃವು । **ಅಪರಾಯ**—ತನ್ನ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನಿಗೆ । **ಶಿಕ್ಷನ್**—ಕೊಡುವನೋ । **ದೇಷ್ಣಂ**—ನ್ಯಾಯವಾಗಿ ಕೊಡಬೇಕಾದ ಯಾವ ಧನವನ್ನು । **ಜ್ಯಾಯಾನ್**—ದೊಡ್ಡವನಾದವನು । **ಕನೀಯಸಃ**—ಚಿಕ್ಕವನಿಗೆ । **ಅಯತ್**—ಹೊಂದಿಸುವನೋ । (**ಯತ್**—ಯಾವ ಧನವನ್ನು ಹೊಂದಿದನಂತರ) । **ಅಮೃತ ಇತ್**—ಜೀವಂತನಾಗಿರುವಾಗಲೇ ಪುತ್ರನು । **ದೂರಂ**—ಪಿತೃವಿನಿಂದ ಬೇರೆಯಾಗಿ । **ಪರ್ಯಾಸೀತ**—ಸ್ವತಂತ್ರವಾಗಿ ವಾಸಮಾಡುವನೋ । **ಚಿತ್ರ್ಯಂ**—ಆಕರ್ಷಕವಾದ । **ರಯಿಂ**—ಆ ಎಲ್ಲಾ ಧನವನ್ನೂ । **ನಃ**—ನಮಗೆ । **ಆ ಭರ**—ತಂದುಕೊಡು

ಭಾವಾರ್ಥ

ಆಕರ್ಷಕವಾದ ರೂಪವುಳ್ಳ ಎಲೈ ಇಂದ್ರನೇ, ಯಾವ ಧನವನ್ನು ಪ್ರಥಮೋತ್ಪನ್ನನಾದ ಪಿತೃವು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನಿಗೆ ಕೊಡುವನೋ, ನ್ಯಾಯವಾಗಿ ಕೊಡಬೇಕಾದ ಯಾವ ಧನವನ್ನು ದೊಡ್ಡವನಾದವನು ಚಿಕ್ಕವನಿಗೆ ಹೊಂದಿಸುವನೋ, ಮತ್ತು ಯಾವ ಧನವನ್ನು ಹೊಂದಿದನಂತರ ಜೀವಂತನಾಗಿರುವಾಗಲೇ ಪುತ್ರನು ಪಿತೃವಿನಿಂದ ಬೇರೆಯಾಗಿ ಸ್ವತಂತ್ರವಾಗಿ ವಾಸಮಾಡುವನೋ, ಆಕರ್ಷಕವಾದ ಆ ಎಲ್ಲಾ ಧನವನ್ನೂ ನಮಗೆ ತಂದುಕೊಡು

## English Translation

That (wealth) Indra, which the prior has given to the posterior which the elder may accept from the younger with which (the son) yet liveing dwells far away (separated from his father), confer, wonderful Indra, such precious riches upon us

ಸಂಹಿತಾಪಾಠಃ

ಯಸ್ತ ಇಂದ್ರ ಪ್ರಿಯೋ ಜನೋ ದದಾಶದಸನ್ನಿರೇಕೇ ಅದ್ರಿವಃ ಸಖಾ ತೇ ।
ವಯಂ ತೇ ಅಸ್ಯಾಂ ಸುಮತೌ ಚನಿಷ್ಠಾಃ ಸ್ಯಾಮ ವರೂಥೇ ಅಘ್ನತೋ ನೃಪೀತೌ ॥

ಪದಪಾಠಃ

ಯಃ । ತೇ । ಇಂದ್ರ । ಪ್ರಿಯಃ । ಜನಃ । ದದಾಶತ್ । ಅಸತ್ । ನಿರೇಕೇ । ಅದ್ರಿವಃ । ಸಖಾ । ತೇ ।
ವಯಂ । ತೇ । ಅಸ್ಯಾಂ । ಸುಮತೌ । ಚನಿಷ್ಠಾಃ । ಸ್ಯಾಮ । ವರೂಥೇ । ಅಘ್ನತಃ । ನೃಪೀತೌ ॥ ೮ ॥

ಸಾಯಣಭಾಷ್ಯಂ

ಹೇ ಇಂದ್ರ ಯಸ್ತೇ ತುಭ್ಯಂ ಪ್ರಿಯಃ ಸಖಾ ಜನೋ ದದಾಶತ್ ಹವೀಂಷಿ ದದ್ಯಾತ್ ಹೇ ಅದ್ರಿವಃ ಸ ಸಖಾ ತೇ ತವ ನಿರೇಕೇ ದಾನೇಽಸತ್ । ಸ್ಯಾತ । ವಯಂ ಚ ವನಿಷ್ಠಾ ಅಘ್ನತೋಽಹಿಂಸತಸ್ತೇ ತವಾಸ್ಯಾಂ ಸುಮತಾವನುಗ್ರಹಬುದ್ಧೌ ವರ್ತಮಾನಾಶ್ಚನಿಷ್ಠಾಃ ಸ್ತುತಿಮತ್ತರಾ ಅತಿಶಯೇನಾನ್ನವಂತೋ ವಾ । ಚನೋಽನ್ನಂ । ನೃಪೀತೌ ನೃಣಾಂ ರಕ್ಷಕೇ ವರೂಥೇ ಗೃಹೇ ವರಣೀಯೇ ವಾ ಧನೇ ಸ್ಯಾಮ । ವಸೇಮ ಭವೇಮ ವಾ ॥

ಪ್ರತಿಪದಾರ್ಥ

ಅದ್ರಿವಃ—ವಜ್ರಾಯುಧಧಾರಿಯಾದ । ಇಂದ್ರ—ಎಲೈ ಇಂದ್ರನೇ । ಯಃ—ಯಾವ ಮಾನವನು । ತೇ—ನಿನಗೆ । ಪ್ರಿಯಃ ಜನಃ—ಪ್ರೀತಿಪಾತ್ರನಾದ ಮಿತ್ರನಾಗಿ । ದದಾಶತ್—ಹವಿಸ್ಸುಗಳನ್ನರ್ಪಿಸುವನೋ । ಸಖಾ—ನಿನ್ನ ಆಪ್ತ ಮಿತ್ರನು । ತೇ—ನಿನ್ನ । ನಿರೇಕೇ—ದಾನಕ್ಕೆ ಪಾತ್ರನಾಗಿ । ಅಸತ್—ಇರಲಿ । ವಯಂ—ವಸಿಷ್ಠವಂಶೋತ್ಪನ್ನರಾದ ನಾವು ಸಹ । ಅಘ್ನತಃ—ಹಿಂಸಾರಹಿತನಾದ । ತೇ—ನಿನ್ನ । ಅಸ್ಯಾಂ ಸುಮತೌ—ಈ ಅನುಗ್ರಹಬುದ್ಧಿಯಲ್ಲಿದ್ದು । ಚನಿಷ್ಠಾಃ—ಪ್ರಭೂತವಾದ ಅನ್ನವಂತರಾಗಿ । ನೃಪೀತೌ—ಮಾನವರಿಗೆ ರಕ್ಷಕವಾದ । ವರೂಥೇ—ಗೃಹದಲ್ಲಿ । ಸ್ಯಾಮ—ಇರುವಂತಾಗಲಿ ।

ಭಾವಾರ್ಥ

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಯಾವ ಮಾನವನು ನಿನಗೆ ಪ್ರೀತಿಪಾತ್ರನಾದ ಮಿತ್ರನಾಗಿ ಹವಿಸ್ಸುಗಳನ್ನರ್ಪಿಸುವನೋ ನಿನ್ನ ಆಪ್ತ ಮಿತ್ರನು ನಿನ್ನ ದಾನಕ್ಕೆ ಪಾತ್ರನಾಗಿರಲಿ. ವಸಿಷ್ಠವಂಶೋತ್ಪನ್ನರಾದ ನಾವೂ ಸಹ ಹಿಂಸಾರಹಿತನಾದ ನಿನ್ನ ಅನುಗ್ರಹಬುದ್ಧಿಯಲ್ಲಿದ್ದು ಪ್ರಭೂತವಾದ ಅನ್ನವಂತರಾಗಿ ಮಾನವರಿಗೆ ರಕ್ಷಕವಾದ ಗೃಹದಲ್ಲಿರುವಂತಾಗಲಿ.

English Translatson

May the man who is dear to you, Indra, present (oblations) may he be your friend, weilder of the thunderbolt he(assiduous)in donations may we be abounding in food through this favour of you who are devoid of cruelty, (may we be in the enjoyment of) a dwelling giving shelter to men

ಸಂಹಿತಾಪಾಠಃ

ಏಷ ಸ್ತೋಮೋ ಅಚಿಕ್ರದದ್ವೃಷಾ ತ ಉತ ಸ್ತಾಮುರ್ಮಘವನ್ನಕ್ರಪಿಷ್ಟ ।
ರಾಯಸ್ಕಾಮೋ ಜರಿತಾರಂ ತ ಆಗನ್ತ್ವಮಂಗ ಶಕ್ರ ವಸ್ವ ಆ ಶಕೋ ನಃ ॥

ಪದಪಾಠಃ

ಏಷಃ । ಸ್ತೋಮಃ । ಅಚಿಕ್ರದತ್ । ವೃಷಾ । ತೇ । ಉತ । ಸ್ತಾಮುಃ । ಮಘವನ್ । ಅಕ್ರಪಿಷ್ಟ ।

ರಾಯಃ । ಕಾಮಃ । ಜರಿತಾರಂ । ತೇ । ಆ । ಅಗನ್ । ತ್ವಂ । ಅಂಗ । ಶಕ್ರ । ವಸ್ವಃ । ಆ । ಶಕಃ । ನಃ ॥

ಸಾಯಣಭಾಷ್ಯಂ

ಹೇ ಮಘವನ್ ಧನವನ್ನಿಂದ್ರ ತೇ ತ್ವದರ್ಥಂ ವೃಷಾ ಸೇಕ್ತೈಷ ಸ್ತೋಮಃ ಸೋಮಃ ಸೂಯಮಾನೋಽಚಿಕ್ರದತ್ । ಕ್ರಂದತಿ । ಉತಾಪಿ ಚ ಸ್ತಾಮುಃ ಸ್ತೋತಾಕ್ರಪಿಷ್ಟ । ಅಸ್ತೌತ್ । ಅಪಿ ಚ ಹೇ ಶಕ್ರ ತೇ ತವ ಜರಿತಾರಂ ಸ್ತೋತಾರಂ ಮಾಂ ರಾಯೋ ಧನಸ್ಯ ಕಾಮೋಽಭಿಲಾಷ ಆಗನ್ । ಆಗತಃ । ಅತಸ್ತ್ವಂ ವಸ್ವೋ ಧನಂ ॥ ಕರ್ಮಣಿ ಷಷ್ಠೀ ॥ ನೋಽಸ್ಮಭ್ಯಮಂಗ ಕ್ಷಿಪ್ರಮಾ ಶಕಃ । ಧೇಹಿ ॥

ಪ್ರತಿಪದಾರ್ಥ

**ಮಘವನ್**—ಧನವಂತನಾದ ಎಲೈ ಇಂದ್ರನೇ । **ತೇ**—ನಿನ್ನನ್ನುದ್ದೇಶಿಸಿ । **ವೃಷಾ**—ಕಾಮವರ್ಷಕವಾದ **ಏಷಃ ಸ್ತೋಮಃ**—ಈ ಸ್ತುತಿಯು । **ಅಚಿಕ್ರದತ್**—ಪಠಿತವಾಗುತ್ತಿದೆ । **ಉತ**—ಮತ್ತು । **ಸ್ತಾಮುಃ**—ಸ್ತೋತೃವೂ ಸಹ । **ಅಕ್ರಪಿಷ್ಟ**—ಸ್ತುತಿಸಿದ್ದಾನೆ । **ಶಕ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಜರಿತಾರಂ**—ಸ್ತುತಿಕರ್ತನಾದ ನನ್ನನ್ನು । **ರಾಯಃ**—ಧನದ । **ಕಾಮಃ**—ಅಭಿಲಾಷೆಯು । **ಆಗನ್**—ವ್ಯಾಪಿಸಿದ । **ತ್ವಂ**—ನೀನು । **ವಸ್ವಃ**—ಧನವನ್ನು । **ನಃ**—ನಮಗೆ । **ಅಂಗ**—ಕ್ಷಿಪ್ರವಾಗಿ । **ಆ ಶಕಃ**—ಒದಗಿಸು ।

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ ನಿನ್ನನ್ನುದ್ದೇಶಿಸಿ ಕಾಮವರ್ಷಕವಾದ ಈ ಸ್ತುತಿಯು ಪಠಿತವಾಗುತ್ತಿದೆ. ಮತ್ತು ಸ್ತೋತೃವೂ ಸಹ ಸ್ತುತಿಸಿದ್ದಾನೆ ಎಲೈ ಇಂದ್ರನೇ, ನಿನ್ನ ಸ್ತುತಿಕರ್ತನಾದ ನನ್ನನ್ನು ಧನದ ಅಭಿಲಾಷೆಯು ವ್ಯಾಪಿಸಿದೆ ನಮಗೆ ಕ್ಷಿಪ್ರವಾಗಿ ಧನವನ್ನು ಒದಗಿಸು

English Translation

For you, Maghavan, this showering soma ( libation ) cries aloud to you the worshipper has recited praises . the desire of riches has fallen upon your adorer, therfore Shakra, bestow quickly upon us wealth.

ಸಂಹಿತಾಪಾಠಃ

ಸ ನ ಇಂದ್ರ ತ್ವಯತಾಯಾ ಇಷೇ ಧಾಸ್ತ್ಮನಾ ಚ ಯೇ ಮಘವಾನೋ ಜುನಂತಿ ।

ವಸ್ವೀ ಷು ತೇ ಜರಿತ್ರೇ ಅಸ್ತು ಶಕ್ತಿರ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

ಪದಪಾಠಃ

ಸಃ | ನಃ | ಇಂದ್ರ | ತ್ವಯತಾಯೈ | ಇಷೇ | ಧಾಃ | ತ್ಮನಾ | ಚ | ಮಘವಾನಃ | ಜುನಂತಿ | ವಸ್ಯೇ | ಸು | ತೇ | ಜರಿತ್ರೇ | ಅಸ್ತು | ಶಕ್ತಿಃ | ಯೂಯಂ | ಪಾತ | ಸ್ವಸ್ತಿಭಿಃ | ಸದಾ | ನಃ ||೧೦||

ಸಾಯಣಭಾಷ್ಯಂ

ಹೇ ಇಂದ್ರ ಸ ತ್ವಂ ತ್ವಯತಾಯಾ ಇಷೇ ತ್ವಯಾ ದತ್ತಮನ್ನಂ ಭೋಕ್ತುಂ ನೋಽಸ್ಮಾನ್ ಧಾಃ | ಧಾರಯ | ಯೇ ಚ ಮಘವಾನೋ ಹವಿಷ್ಮಂತಸ್ತ್ಮನಾ ಸ್ವಯಮೇವ ಜುನಂತಿ ಹವೀಂಷಿ ತ್ವಾಂ ಪ್ರತಿ ಪ್ರೇರಯಂತಿ ತಾನಪಿ ತ್ವಯತಾಯಾ ಇಷೇ ಧಾಃ | ಅಪಿ ಚ ವಸ್ಯೇಷ್ವತ್ಯಂತಂ ಪ್ರಶಸ್ತಾಸು ಸ್ತುತಿಷು ತೇ ತವ ಜರಿತ್ರೇ ಸ್ತೋತ್ರೇ ಮಹ್ಯಂ ಶಕ್ತಿಃ ಸಾಮರ್ಥ್ಯಮಸ್ತು | ಯದ್ವಾ | ಜರಿತ್ರೇ ಮಹ್ಯಂ ತೇ ತವ ವಸ್ಯೇಷು ಪ್ರಶಸ್ತಾ ಶಕ್ತಿರ್ದಾನಮಸ್ತು | ಸ್ಪಷ್ಟಮನ್ಯತ್ ||

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ | ಸಃ—ನೀನು ಧಾಃ—ಶಕ್ತರನ್ನಾಗಿ ಮಾಡು | ಯೇ ಚ—ಯಾರು ಯಾರು | ಮಘವಾನಃ—ಹವಿಷ್ಮಂತರಾಗಿದ್ದು | ತ್ಮನಾ—ಸ್ವಪ್ರೇರಣೆಯಿಂದಲೇ | ಜುನಂತಿ—ನಿನಗೆ ಹವಿಸ್ಸನ್ನರ್ಪಿಸುವರೋ | (ಅವರನ್ನೂ ಆ ಅನ್ನಕ್ಕೆ ಪಾತ್ರರನ್ನಾಗಿ ಮಾಡು) ವಸ್ಯೇ ಷು—ಅತ್ಯಂತ ಪ್ರಶಸ್ತವಾದ ಸ್ತುತಿಗಳಿಂದ | ತೇ—ನಿನ್ನ | ಜರಿತ್ರೇ—ಸ್ತುತಿಕರ್ತನಾದ ನನಗೆ | ಶಕ್ತಿಃ—ಸಾಮರ್ಥ್ಯವು | ಅಸ್ತು—ಇರಲಿ | (ಎಲೈ ಇಂದ್ರಾದಿ ದೇವತೆಗಳೇ | ಯೂಯಂ—ನೀವು | ನಃ—ನಮ್ಮನ್ನು | ಸದಾ—ಯಾವಾಗಲೂ | ಸ್ವಸ್ತಿಭಿಃ—ಕಲ್ಯಾಣಗಳಿಂದ | ಪಾತ—ರಕ್ಷಿಸಿರಿ |

ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ದತ್ತವಾದ ಅನ್ನವನ್ನನುಭವಿಸಲು ನಮ್ಮನ್ನು ಶಕ್ತರನ್ನಾಗಿ ಮಾಡು. ಯಾರು ಯಾರು ಹವಿಷ್ಮಂತರಾಗಿದ್ದು ಸ್ವಪ್ರೇರಣೆಯಿಂದಲೇ ನಿನಗೆ ಹವಿಸ್ಸನ್ನರ್ಪಿಸುವರೋ ಅವರನ್ನೂ ಆ ಅನ್ನಕ್ಕೆ ಪಾತ್ರರನ್ನಾಗಿ ಮಾಡು. ಅತ್ಯಂತ ಪ್ರಶಸ್ತವಾದ ಸ್ತುತಿಗಳಿಂದ ನಿನ್ನನ್ನು ಸ್ತುತಿಸುವ ನನಗೆ ಸಾಮರ್ಥ್ಯವಿರಲಿ. ಎಲೈ ಇಂದ್ರಾದಿ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣದಿಂದ ರಕ್ಷಿಸಿರಿ

## English Translation

Enable us, Indra, (to partake of) food granted by you as well as those who, opulent (in sacrificial presentations), spontaneously offer (you oblations) may there be power in your adorer (to repeat) many laudations and ever cherish us with blessings.

---

# ಇಪ್ಪತ್ತೊಂದನೆಯ ಸೂಕ್ತವು

ಸಾಯಣಭಾಷ್ಯಂ

**ಅಸಾವಿ ದೇವಮಿತಿ ದಶರ್ಚಂ ಚತುರ್ಥಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ತಥಾ ಚಾನುಕ್ರಾಂತಂ । ಅಸಾವೀತಿ ॥ ಮಾಧ್ಯಂದಿನಸವನೇ ಮೈತ್ರಾವರುಣಸ್ಯೋನ್ನೀಯಮಾನಮಿದಂ ಸೂಕ್ತಂ । ಅಸಾವಿ ದೇವಮಿಹೋಪ ಯಾತೇತ್ಯನುಸವನಂ । ಆ-೫ ೫ । ಇತಿ ॥ ಇಂದ್ರಸ್ಯ ವೃತ್ರಘ್ನಃ ಪಶಾವಭಿ ಕ್ರತ್ವೇತಿ ವಪಾಯಾ ಅನುವಾಕ್ಯಾ । ಸೂತ್ರಿತಂ ಚ । ಅಭಿ ಕ್ರತ್ವೇಂದ್ರ ಭೂರಧ ಜ್ಮನ್ ತ್ವಂ ಮಹಾ ಇಂದ್ರ ತುಭ್ಯಂ ಹ ಕ್ಷಾಃ । ಆ - ೩ ೮ । ಇತಿ ॥**

**ಅನುವಾದವು—ಅಸಾವಿ ದೇವಂ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು ಇದರಲ್ಲಿ ಹತ್ತು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಇಂದ್ರನು ದೇವತೆಯು, ತ್ರಿಷ್ಟುಪ್‌ಛಂದಸ್ಸು ಅನುಕ್ರಮಣಿಕೆಯಲ್ಲಿ—**ಅಸಾವಿ** ಎಂದು ಮೊದಲಾಗಿ ಹೇಳಿರುವುದು ಮಾಧ್ಯಂದಿನಸವನ ಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಈ ಸೂಕ್ತವನ್ನು ಉನ್ನೀಯಮಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಸಾವಿ ದೇವಮಿಹೋಪ ಯಾತೇತ್ಯನುಸವನಂ** ಎಂಬ ಸೂತ್ರದಿಂದ (ಆ ೫ ೫) ವಿವೃತವಾಗಿರುವುದು ವೃತ್ರಘ್ನನಾದ ಇಂದ್ರನನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ಈ ಸೂಕ್ತದ **ಅಭಿ ಕ್ರತ್ವಾ** ಎಂಬ (೬ ನೆಯ) ಋಕ್ಕನ್ನು ವಪಾಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಭಿ ಕ್ರತ್ವೇಂದ್ರ ಭೂರಧ ಜ್ಮಂಸ್ತ್ವಂ ಮಹಾ ಇಂದ್ರ ತುಭ್ಯಂ ಹ ಕ್ಷಾಃ** ಎಂಬ ಸೂತ್ರದಿಂದ (ಆ ೩-೮) ವಿವೃತವಾಗಿರುವುದು.

## ಸೂಕ್ತ—೨೧

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೨೧ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ—೩, ೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ಅಸಾವಿ ದೇವಂ ಗೋಋಜೀಕಮಂಧೋ ನ್ಯಸ್ಮಿನ್ನಿಂದ್ರೋ ಜನುಷೇಮುವೋಚ ।**
**ಬೋಧಾಮಸಿ ತ್ವಾ ಹರ್ಯಶ್ವ ಯಜ್ಞೈರ್ಬೋಧಾ ನಃ ಸ್ತೋಮಮಂಧಸೋ ಮದೇಷು ॥ ೧ ॥**

ಪದಪಾಠಃ

ಅಸಾವಿ । ದೇವಂ । ಗೋಽಋಜೀಕಂ । ಅಂಧಃ । ನಿ । ಅಸ್ಮಿನ್ । ಇಂದ್ರಃ । ಜನುಷಾ । ಈಂ ।
ಉವೋಚ ।

ಬೋಧಾಮಸಿ । ತ್ವಾ । ಹರಿಽಅಶ್ವ । ಯಜ್ಞೈಃ । ಬೋಧ । ನಃ । ಸ್ತೋಮಂ । ಅಂಧಸಃ । ಮದೇಷು

ಸಾಯಣಭಾಷ್ಯಂ

ದೇವಂ ದೀಪ್ತಂ ಗೋಋಜೀಕಂ ಗೋಭಿಃ ಸಂಸ್ಕೃತಂ । ಗವ್ಯೇನ ಮಿಶ್ರಿತಮಿತ್ಯರ್ಥಃ । ಅಂ ಸೋಮರೂಪಮನ್ನಮಸಾವಿ । ಅಭಿಷುತಂ । ಈಮುಯುಂದ್ರೋಽಸ್ಮಿನ್ನಭಿಷುತೇ ಸೋಮರೂಪೇ ಧಸಿ ಜನುಷಾ ಸ್ವಭಾವತ ಏವ ನ್ಯುವೋಚ । ನಿತರಾಂ ಸಂಗತೋ ಭವತಿ । ಅಥ ಪ್ರತ್ಯಕ್ಷಸ್ತುತಿಃ । ಹರ್ಯಶ್ವ ತ್ವಾ ತ್ವಾಂ ಯಜ್ಞೈಃ ಸ್ತೋತ್ರೈರ್ಹವಿರ್ಭಿರ್ವಾ ಬೋಧಾಮಸಿ । ಬೋಧಯಾಮಃ । ಅಂಧ ಸೋಮಸ್ಯ ಮದೇಷು ನೋಽಸ್ಮಾಕಂ ಸ್ತೋಮಂ ಸ್ತೋತ್ರಂ ಬೋಧ । ಬುಧ್ಯಸ್ವ ಚ ॥

ಪ್ರತಿಪದಾರ್ಥ

**ದೇವಂ**—ಪ್ರಕಾಶಮಾನವಾದುದೂ । **ಗೋಋಜೀಕಂ**—ಕ್ಷೀರಾದಿಗಳಿಂದ ಮಿಶ್ರಿತವಾದುದೂ ಆ ಅಂಧಃ—ಸೋಮರೂಪವಾದ ಅನ್ನವು । **ಅಸಾವಿ**—ಹಿಂಡಿ ಅರ್ಪಿಸಲು ಸಿದ್ಧವಾಗಿದೆ । **ಈಂ ಇಂದ್ರಃ**—ಇ ಇಂದ್ರನು । **ಅಸ್ಮಿನ್**—ಹಿಂಡಿದ ಈ ಸೋಮರಸದೊಡನೆ । **ಜನುಷಾ**—ಜನ್ಮಾರಭ್ಯ । ನಿ **ಉವೋಚ**—ಪೂ ವಾಗಿ ಸಂಯುಕ್ತನಾಗಿರುತ್ತಾನೆ । **ಹರ್ಯಶ್ವ**—ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ । **ತ್ವಾ**—ನಿನ್ನನ್ನು **ಯಜ್ಞೈಃ**—ಸ್ತೋತ್ರಗಳಿಂದ । **ಬೋಧಾಮಸಿ**—ಎಚ್ಚರಗೊಳಿಸುತ್ತೇವೆ । **ಅಂಧಸಃ**—ಸೋಮರಸದ ಪಾ ಫಲವಾಗಿ । **ಮದೇಷು**—ಹರ್ಷವುಂಟಾದಾಗ । **ನಃ**—ನಮ್ಮ । **ಸ್ತೋಮಂ**—ಸ್ತೋತ್ರದ ಸ್ವರೂಪವನ್ನು **ಬೋಧ**—ತಿಳಿ

ಭಾವಾರ್ಥ

ಪ್ರಕಾಶಮಾನವಾದುದೂ, ಕ್ಷೀರಾದಿಗಳಿಂದ ಮಿಶ್ರಿತವಾದುದೂ ಆದ ಸೋಮರೂಪವಾದ ಅನ್ನವು ಹಿ ಅರ್ಪಿಸಲು ಸಿದ್ಧವಾಗಿದ ಇದೇ ಇಂದ್ರನು ಹಿಂಡಿದ ಈ ಸೋಮರಸದೊಡನೆ ಜನ್ಮಾರಭ್ಯ ಪೂರ್ಣವಾಗಿ ಸಂಯು ನಾಗಿರುತ್ತಾನೆ ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, ನಿನ್ನನ್ನು ಸ್ತೋತ್ರಗಳಿಂದ ಎಚ್ಚರಗೊಳಿಸುತ್ತೇ ಸೋಮರಸದ ಪಾನದ ಫಲವಾಗಿ ಹರ್ಷವುಂಟಾದಾಗ ನಮ್ಮ ಸ್ತೋತ್ರದ ಪ್ರಭಾವವನ್ನು ತಿಳಿ

English Translation

The bright sacrificial food mixed with curds and milk has been poure out . Indra delights in it from his birth lord of bay horses, we wake y up with sacrifices, acknowledge our praises in the exhilaration of the son beverage.

ಸಂಹಿತಾಪಾಠಃ

ಪ್ರ ಯಂತಿ ಯಜ್ಞಂ ವಿಪಯಂತಿ ಬರ್ಹಿಃ ಸೋಮಮಾದೋ ವಿದಥೇ ದುಧ್ರವಾಚಃ ।
ನ್ಯು ಭ್ರಿಯಂತೇ ಯಶಸೋ ಗೃಭಾದಾ ದೂರಉಪಬ್ದೋ ವೃಷಣೋ ನೃಷಾಚಃ

ಪದಪಾಠಃ

ಪ್ರ । ಯಂತಿ । ಯಜ್ಞಂ । ವಿಪಯಂತಿ । ಬರ್ಹಿಃ । ಸೋಮಽಮಾದಃ । ವಿದಥೇ । ದುಧ್ರಽವಾಚಃ ।
ನಿ । ಊಂ ಇತಿ । ಭ್ರಿಯಂತೇ । ಯಶಸಃ । ಗೃಭಾತ್ । ಆ । ದೂರೇಽಉಪಬ್ದಃ । ವೃಷಣಃ । ನೃಽಸಾಚಃ ॥

ಸಾಯಣಭಾಷ್ಯಂ

ಯಜ್ಞಂ ಪ್ರ ಯಂತಿ ಯಷ್ಟಾರೋ ಬರ್ಹಿಶ್ಚ ವಿಪಯಂತಿ । ಸ್ತೃಣಂತಿ । ವಿಪಿಃ ಸ್ತರಣಕರ್ಮಾ । ವಿದಥೇ ಯಜ್ಞೇ ಸೋಮಮಾದೋ ಗ್ರಾವಾಣಶ್ಚ ದುಧ್ರವಾಚೋ ದುರ್ಧರವಾಚೋ ಭವಂತಿ । ಅಪಿ ಚ ಯಶಸೋ ಯಶಸ್ವಿನೋ ದೂರಉಪಬ್ದಃ । ದೂರ ಉಪಬ್ದಿಃ ಶಬ್ದೋ ಯೇಷಾಂ ತೇ ದೂರಉಪಬ್ದಃ । ನೃಷಾಚಃ । ನೄನ್ನೇತೄನೃತ್ವಿಜಃ ಸಚಂತ ಇತಿ ನೃಷಾಚಃ । ವೃಷಣೋ ಗ್ರಾವಾಣೋ ಗೃಭಾದ್ಗೃಹಾತ್ । ಗೃಹಮಧ್ಯಮಗ್ರಾವಾ । ತಸ್ಮಾತ್ । ಆ ಇತಿ ಚಾರ್ಥೇ । ನಿ ಭ್ರಿಯಂತೇ । ಅಭಿಷವವೇಲಾಯಾಂ ನಿಗೃಹ್ಯಂತೇ । ಉ ಇತಿ ಪೂರಣಃ ॥

ಪ್ರತಿಪದಾರ್ಥ

**ಯಜ್ಞಂ**—ಯಜ್ಞಗೃಹವನ್ನು । **ಪ್ರ ಯಂತಿ**—ಯಜ್ಞಕರ್ತರು ಪ್ರವೇಶಿಸುತ್ತಾರೆ । **ಬರ್ಹಿಃ**—ದರ್ಭಾಸನವೂ । **ವಿಪಯಂತಿ**—ವಿಸ್ತೃತವಾಗಿ ಹರಡಲ್ಪಡುತ್ತದೆ । **ವಿದಥೇ**—ಯಜ್ಞದಲ್ಲಿ । **ಸೋಮಮಾದಃ**—ಸೋಮವನ್ನು ಹಿಂಡುವ ಕಲ್ಲುಗಳು । **ದುಧ್ರವಾಚಃ**—ನಿಯಮಿತವಾದ ಶಬ್ದವುಳ್ಳವಾಗಿರುತ್ತವೆ । **ಯಶಸಃ**—ಯಶೋಯುಕ್ತವಾದವೂ । **ದೂರಉಪಬ್ದಃ**—ದೂರದಿಂದಲೇ ಶಬ್ದಮಾಡತಕ್ಕವೂ । **ನೃಷಾಚಃ**—ಋತ್ವಿಕ್ಕುಗಳೊಡನೆ ಸೇರಿಕೊಳ್ಳುವವೂ ಆದ । **ವೃಷಣಃ**—ಆ ಕಲ್ಲುಗಳು । **ಗೃಭಾತ್**—ಅವುಗಳ ಗೃಹದಿಂದ । **ಆ ನಿ ಭ್ರಿಯಂತೇ ಉ**—ಅಭಿಷವಕಾಲಗಳಲ್ಲಿ ಮಾತ್ರ ಹೊರಕ್ಕೆ ತರಲ್ಪಡುತ್ತವೆ

ಭಾವಾರ್ಥ

ಯಜ್ಞಕರ್ತರು ಯಜ್ಞಗೃಹವನ್ನು ಪ್ರವೇಶಿಸುತ್ತಾರೆ. ದರ್ಭಾಸನವೂ ವಿಸ್ತೃತವಾಗಿ ಹರಡಲ್ಪಡುತ್ತದೆ. ಯಜ್ಞದಲ್ಲಿ ಸೋಮವನ್ನು ಹಿಂಡುವ ಕಲ್ಲುಗಳು ನಿಯಮಿತವಾದ ಶಬ್ದವುಳ್ಳವಾಗಿರುತ್ತವೆ. ಯಶೋಯುಕ್ತವಾದವೂ, ದೂರದಿಂದಲೇ ಶಬ್ದಮಾಡತಕ್ಕವೂ, ಋತ್ವಿಕ್ಕುಗಳೊಡನೆ ಸೇರಿಕೊಳ್ಳತಕ್ಕವೂ ಆದ ಕಲ್ಲುಗಳು ಅವುಗಳ ಗೃಹದಿಂದ ಅಭಿಷವಕಾಲಗಳಲ್ಲಿ ಮಾತ್ರ ಹೊರಕ್ಕೆ ತರಲ್ಪಡುತ್ತವೆ.

English Translation

They repair to the sacrifice, they strew the sacred grass the (grinding) stones at the ceremony are of difficulty suppressed noise famous priests, whose voices are heard far off, bring the stones from the interior o the dwelling

ಸಂಹಿತಾಪಾಠಃ

ತ್ವಮಿಂದ್ರ ಸ್ರವಿತವಾ ಅಪಸ್ಕಃ ಪರಿಷ್ಠಿತಾ ಅಹಿನಾ ಶೂರ ಪೂರ್ವೀಃ ।
ತ್ವದ್ವಾವಕ್ರೇ ರಥ್ಯೋ೩ ನ ಧೇನಾ ರೇಜಂತೇ ವಿಶ್ವಾ ಕೃತ್ರಿಮಾಣಿ ಭೀಷಾ ॥

ಪದಪಾಠಃ

ತ್ವಂ । ಇಂದ್ರ । ಸ್ರವಿತವೈ । ಅಪಃ । ಕರಿತಿ ಕಃ । ಪರಿಽಸ್ಥಿತಾಃ । ಅಹಿನಾ । ಶೂರ । ಪೂರ್ವೀಃ ।
ತ್ವತ್ । ವಾವಕ್ರೇ । ರಥ್ಯಃ । ನ । ಧೇನಾಃ । ರೇಜಂತೇ । ವಿಶ್ವಾ । ಕೃತ್ರಿಮಾಣಿ । ಭೀಷಾ ॥ ೩ ॥

ಸಾಯಣಭಾಷ್ಯಂ

**ಹೇ ಶೂರೇಂದ್ರ ತ್ವಮಹಿನಾ ವೃತ್ರೇಣ ಪರಿಷ್ಠಿತಾ ಆಕ್ರಾಂತಾಃ ಪೂರ್ವೀರ್ಬಹ್ವೀರಪ ಉದಕಾಃ ಸ್ರವಿತವೈ ಸ್ರವಿತುಂ ಕಃ । ಅಕಾರ್ಷೀಃ । ಧೇನಾ ನದ್ಯಶ್ಚ ತ್ವತ್ತ್ವತ್ತೋ ಹೇತೋ ರಥ್ಯೋ ನ ರಥಿನ ಇವ ವಾವಕ್ರೇ । ನಿರ್ಗಚ್ಛಂತಿ ॥ ವಕಿ ಕೌಟಿಲ್ಯ ಇತಿ ಧಾತುಃ ॥ ವಿಶ್ವಾ ವಿಶ್ವಾನಿ ಕೃತ್ರಿಮಾಣಿ ಭುವನಾನಿ ಚ ಭೀಷಾ ತ್ವತ್ತೋ ಭೀತ್ಯಾ ರೇಜಂತೇ । ಕಂಪಂತೇ ॥**

ಪ್ರತಿಪದಾರ್ಥ

**ಶೂರ**—ಪರಾಕ್ರಮಿಯಾದ **।** **ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು **ಅಹಿನಾ**—ವೃತ್ರಾಸುರನಿಂದ **ಪರಿಷ್ಠಿತಾಃ**—ಆವರಿಸಲ್ಪಟ್ಟ । **ಪೂರ್ವೀಃ**—ಅನೇಕವಾದ **।** **ಅಪಃ**—ಉದಕಗಳನ್ನು । **ಸ್ರವಿತವೈ**—ಪ್ರವಹಿಸಲು ಶಕ್ತವಾಗುವಂತೆ **।** **ಕಃ**—ಮಾಡಿದ್ದೀಯೆ। **ಧೇನಾಃ**--ನದಿಗಳೂ ಕೂಡ। **ತ್ವತ್**—ನಿನ್ನ ನಿಯಮಾನುಸಾರವಾಗಿಯೇ **ರಥ್ಯೋ ನ**—ರಥವನ್ನು ನಡೆಸುವವರಂತೆ । **ವಾವಕ್ರೇ**—ಹೊರಹೊರಟು ಪ್ರವಹಿಸುತ್ತವೆ । **ವಿಶ್ವಾ**—ಸಮಸ್ತವಾದ **ಕೃತ್ರಿಮಾಣಿ**—ಭುವನಗಳೂ ಕೂಡ **।** **ಭೀಷಾ**—ನಿನ್ನ ಭೀತಿಯಿಂದಲೇ । **ರೇಜಂತೇ**—ಕಂಪಿಸುತ್ತವೆ

ಭಾವಾರ್ಥ

**ಪರಾಕ್ರಮಿಯಾದ ಎಲೈ ಇಂದ್ರನೇ, ವೃತ್ರಾಸುರನಿಂದ ಆವರಿಸಲ್ಪಟ್ಟ ಅನೇಕವಾದ ಉದಕಗಳನ್ನು ನೀನು ಪ್ರವಹಿಸಲು ಶಕ್ತವಾಗುವಂತೆ ಮಾಡಿದ್ದೀಯೆ. ನದಿಗಳೂ ಕೂಡ ನಿನ್ನ ನಿಯಮಾನುಸಾರವಾಗಿಯೇ ಸಾರಥಿಗಳಂತೆ ಹೊರಹೊರಟು ಪ್ರವಹಿಸುತ್ತವೆ. ಸಮಸ್ತವಾದ ಭುವನಗಳೂ ಕೂಡ ನಿನ್ನ ಭೀತಿಯಿಂದಲೇ ಕಂಪಿಸುತ್ತವೆ.**

## English Translation

You, hero, have enabled the many waters arrested by Ahi to flow by you the rivers rushed forth like charioteers all created worlds trembled through fear of you.

ಸಂಹಿತಾಪಾಠಃ

ಭೀಮೋ ವಿವೇಷಾಯುಧೇಭಿರೇಷಾಮಪಾಂಸಿ ವಿಶ್ವಾ ನರ್ಯಾಣಿ ವಿದ್ವಾನ್।
ಇಂದ್ರಃ ಪುರೋ ಜರ್ಹೃಷಾಣೋ ವಿ ದೂಧೋದ್ವಿ ವಜ್ರಹಸ್ತೋ ಮಹಿನಾ ಜಘಾನ ॥ ೪ ॥

ಪದಪಾಠಃ

ಭೀಮಃ । ವಿವೇಷ । ಆಯುಧೇಭಿಃ । ಏಷಾಂ । ಅಪಾಂಸಿ । ವಿಶ್ವಾ । ನರ್ಯಾಣಿ । ವಿದ್ವಾನ್ ।
ಇಂದ್ರಃ । ಪುರಃ । ಜರ್ಹೃಷಾಣಃ । ವಿ । ದೂಧೋತ್ । ವಿ । ವಜ್ರಹಸ್ತಃ । ಮಹಿನಾ । ಜಘಾನ ॥ ೪ ॥

ಸಾಯಣಭಾಷ್ಯಂ

ಇಂದ್ರೋ ನರ್ಯಾಣಿ ನರಹಿತಾನಿ ವಿಶ್ವಾ ವಿಶ್ವಾನ್ಯಪಾಂಸಿ ಕರ್ಮಾಣಿ ವಿದ್ವಾಞ್ಜಾನನ್ ಆಯುಧೇಭಿರಾಯುಧೈರ್ಭೀಮೋ ಭಯಂಕರಃ ಸನ್ ಏಷಾಂ ॥ ಕರ್ಮಾಣಿ ಷಷ್ಠೀ ॥ ಏತಾನಸುರಾನ್ ವಿವೇಷ । ವ್ಯಾಪ್ತವಾನ್ । ಪುರಶ್ಚ ತೇಷಾಂ ವಿ ದೂಧೋತ್ । ಅಕಂಪಯತ್ । ಅಪಿ ಚ ಜರ್ಹೃಷಾಣೋ ಹೃಷ್ಯನ್ ಮಹಿನಾ ಮಹಿಮ್ನಾ ಯುಕ್ತೋ ವಜ್ರಹಸ್ತಃ ಸನ್ ತಾನ್ವಿ ಜಘಾನ ॥

ಪ್ರತಿಪದಾರ್ಥ

**ಇಂದ್ರಃ**—ಇಂದ್ರನು । **ನರ್ಯಾಣಿ**—ಮಾನವರಿಗೆ ಹಿತಕರವಾದ । **ವಿಶ್ವಾ ಅಪಾಂಸಿ**—ಸಮಸ್ತ ಕಾರ್ಯಗಳನ್ನೂ । **ವಿದ್ವಾನ್**—ಅರಿತವನಾಗಿ । **ಆಯುಧೇಭಿಃ**—ತನ್ನ ಆಯುಧಗಳೊಡಗೂಡಿ । **ಭೀಮಃ**—ಭಯಂಕರನಾಗಿ । **ಏಷಾಂ**—ಈ ಅಸುರರನ್ನು ಎದುರಿಸಿ । **ವಿವೇಷ**—ಮುನ್ನುಗ್ಗಿದನು । **ಪುರಃ**—ಅವರ ಪಟ್ಟಣಗಳನ್ನೂ । **ವಿ ದೂಧೋತ್**—ಕಂಪಿಸುವಂತೆ ಮಾಡಿದನು। **ಜರ್ಹೃಷಾಣಃ**—ಸಂತೋಷವನ್ನು ಪ್ರಕಟಿಸುತ್ತಲೂ। **ಮಹಿನಾ**—ಮಹತ್ತ್ವದೊಡಗೂಡಿಯೂ । **ವಜ್ರಹಸ್ತಃ**—ಹಸ್ತದಲ್ಲಿ ವಜ್ರಾಯುಧವನ್ನು ಹಿಡಿದವನಾಗಿಯೂ । **ವಿ ಜಘಾನ**—ಅವರನ್ನೆಲ್ಲಾ ಕೊಂದನು

ಭಾವಾರ್ಥ

ಇಂದ್ರನು ಮಾನವರಿಗೆ ಹಿತಕರವಾದ ಸಮಸ್ತಕಾರ್ಯಗಳನ್ನೂ ಅರಿತವನಾಗಿ ತನ್ನ ಆಯುಧಗಳೊಡಗೂಡಿ ಭಯಂಕರನಾಗಿ ಈ ಅಸುರರನ್ನು ಎದುರಿಸಿ ಮುನ್ನುಗ್ಗಿದನು. ಅವರ ಪಟ್ಟಣಗಳನ್ನೂ ಕಂಪಿಸುವಂತೆ ಮಾಡಿದನು. ಸಂತೋಷವನ್ನು ಪ್ರಕಟಿಸುತ್ತಲೂ, ಮಹತ್ವದೊಡಗೂಡಿಯೂ ಹಸ್ತದಲ್ಲಿ ವಜ್ರಾಯುಧವನ್ನು ಹಿಡಿದವನಾಗಿಯೂ ಅವರನ್ನೆಲ್ಲಾ ಕೊಂದನು.

English Translation

The formidable (Indra), knowing all actions beneficial to man, intimidated those (Asuras) by his weapons Indra, exulting, shook their cities . armed with his thunderbolt he slew them in his might

ಸಂಹಿತಾಪಾಠಃ

ನ ಯಾತವ ಇಂದ್ರ ಜೂಜುವುರ್ನೋ ನ ವಂದನಾ ಶವಿಷ್ಠ ವೇದ್ಯಾಭಿಃ ।
ಸ ಶರ್ಧದರ್ಯೋ ವಿಷುಣಸ್ಯ ಜಂತೋರ್ಮಾ ಶಿಶ್ನದೇವಾ ಅಪಿ ಗುರೃತಂ ನಃ ॥ ೫ ॥

ಪದಪಾಠಃ

ನ । ಯಾತವಃ । ಇಂದ್ರ । ಜೂಜುವುಃ । ನಃ । ನ । ವಂದನಾ । ಶವಿಷ್ಠ । ವೇದ್ಯಾಭಿಃ ।

ಸಃ । ಶರ್ಧತ್ । ಅರ್ಯಃ । ವಿಷುಣಸ್ಯ । ಜಂತೋಃ । ಮಾ । ಶಿಶ್ನಽದೇವಾಃ । ಅಪಿ । ಗುಃ । ಋತಂ । ನಃ ॥

ಸಾಯಣಭಾಷ್ಯಂ

ಹೇ ಇಂದ್ರ ಯಾತವೋ ರಾಕ್ಷಸಾ ನೋಽಸ್ಮಾನ್ನ ಜೂಜುವುಃ । ನ ಹಿಂಸ್ಯುಃ । ಜೂಜುವುರಿತಿ ಹಿಂಸಾಕ್ರಿಯಃ ಪೃಥಕ್ಕರಣಕ್ರಿಯೋ ವಾ । ಅಪಿ ಚ ಹೇ ಶವಿಷ್ಠ ಬಲವತ್ತಮೇಂದ್ರ ವಂದನಾ ವಂದನಾನಿ ರಕ್ಷಾಂಸಿ ವೇದ್ಯಾಭಿರ್ವೇದ್ಯಾಭ್ಯಃ ಪ್ರಜಾಭ್ಯೋ ನೋಽಸ್ಮಾನ್ನ ಜೂಜುವುಃ । ನ ಪೃಥಕ್ಕುರ್ವಂತು । ಕಿಂಚಾರ್ಯಃ ಸ್ವಾಮೀ ಸ ಇಂದ್ರೋ ವಿಷುಣಸ್ಯ ವಿಷಮಸ್ಯ ಜಂತೋಃ ಪ್ರಾಣಿನಃ ಶಾಸನೇ ಶರ್ಧತ್ । ಉತ್ಸಹೇತ । ಅಥ ಚ ಶಿಶ್ನದೇವಾಃ । ಶಿಶ್ನೇನ ದೀವ್ಯಂತಿ ಕ್ರೀಡಂತಿ ಇತಿ ಶಿಶ್ನದೇವಾಃ । ಅಬ್ರಹ್ಮಚರ್ಯಾ ಇತ್ಯರ್ಥಃ । ನೋಽಸ್ಮಾಕಮೃತಂ ಯಜ್ಞಂ ಸತ್ಯಂ ವಾ ಮಾಪಿ ಗುಃ । ಮಾಪಿಗಮನ್ । ತಥಾ ಚ ಯಾಸ್ಕಃ । ಸ ಉತ್ಸಹತಾಂ ಯೋ ವಿಷುಣಸ್ಯ ಜಂತೋರ್ವಿಷಮಸ್ಯ ಮಾ ಶಿಶ್ನದೇವಾ ಅಬ್ರಹ್ಮಚರ್ಯಾಃ । ಶಿಶ್ನಂ ಶ್ನಥತೇಃ । ಅಪಿ ಗುರೃತಂ ನಃ ಸತ್ಯಂ ವಾ ಯಜ್ಞಂ ವಾ । ನಿ. ೪-೧೯ । ಇತಿ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಯಾತವಃ**—ರಾಕ್ಷಸರು । **ನಃ**—ನಮ್ಮನ್ನು । **ನ ಜೂಜುವುಃ**—ಹಿಂಸಿಸದಿರಲಿ । **ಶವಿಷ್ಠ**—ಅತ್ಯಂತ ಶಕ್ತಿಯುತನಾದ ಎಲೈ ಇಂದ್ರನೇ। **ವಂದನಾ**—ಅದೇ ಅಸುರಶಕ್ತಿಯು। **ವೇದ್ಯಾಭಿಃ**—ನಮ್ಮ ಪುತ್ರಾದಿಗಳಿಂದ । **ನ**—ನಮ್ಮನ್ನು ಬೇರೆಮಾಡದಿರಲಿ । **ಅರ್ಯಃ**—ಸ್ವಾಮಿಯಾದ । **ಸಃ**—ಅದೇ ಇಂದ್ರನು । **ವಿಷುಣಸ್ಯ**—ವಿಕಾರರೂಪವುಳ್ಳ । **ಜಂತೋಃ**—ಪ್ರಾಣಿಗಳ ನಿಯಮನದಲ್ಲಿ । **ಶರ್ಧತ್**—ಉತ್ಸಾಹವನ್ನು ತೋರಿಸುತ್ತಾನೆ (ಆದುದರಿಂದಲೇ) । **ಶಿಶ್ನದೇವಾಃ**—ಅನೀತಿಯುತವಾದ ಕ್ರೀಡೆಗಳಲ್ಲಿ ನಿರತರಾದ ಅಸುರರು ।**ನಃ**—ನಮ್ಮ। **ಋತಂ**—ಯಜ್ಞವನ್ನು । **ಮಾ ಅಪಿ ಗುಃ**—ವಿಘ್ನಪಡಿಸಲಾರರು.

ಭಾವಾರ್ಥ

ಎಲೈ ಇಂದ್ರನೇ, ರಾಕ್ಷಸರು ನಮ್ಮನ್ನು ಹಿಂಸಿಸದಿರಲಿ ಅತ್ಯಂತ ಶಕ್ತಿಯುತನಾದ ಎಲೈ ಇಂದ್ರನೇ, ಅದೇ ಅಸುರಶಕ್ತಿಯು ನಮ್ಮ ಪುತ್ರಾದಿಗಳಿಂದ ನಮ್ಮನ್ನು ಬೇರೆ ಮಾಡದಿರಲಿ ಸ್ವಾಮಿಯಾದ ಅದೇ ಇಂದ್ರನು ವಿಕಾರ ರೂಪವುಳ್ಳ ಪ್ರಾಣಿಗಳ ನಿಯಮನದಲ್ಲಿ ಉತ್ಸಾಹವನ್ನು ತೋರಿಸುತ್ತಾನೆ. ಆದುದರಿಂದಲೇ, ಅನೀತಿಯುತವಾದ ಕ್ರೀಡೆಗಳಲ್ಲಿ ನಿರತರಾದ ಅಸುರರು ನಮ್ಮ ಯಜ್ಞವನ್ನು ವಿಘ್ನಪಡಿಸಲಾರರು.

English Translation

Let not the Rakshasas, Indra, do us harm › let not the evil spirits do harm to our progeny, most powerful (Indra) let the sovereign lord, (Indra), exert himself (in the restraint) of disorderly beings, so that the unchaste may not disturb our rite.

ವಿಶೇಷವಿಷಯಗಳು

**ವಿಷುಣಸ್ಯ, ಶಿಶ್ನದೇವಾ :**— ಈ ಶಬ್ದಗಳ ನಿರ್ವಚನವನ್ನು ವಿವರಿಸುತ್ತಾ ಯಾಸ್ಕರು ತಮ್ಮ ನಿರುಕ್ತದಲ್ಲಿ ಈರೀತಿ ಹೇಳಿದಾರೆ—

**ವಿಷುಣಃ । ಸ ಶರ್ಧದರ್ಯೋ ವಿಷುಣಸ್ಯ ಜಂತೋರ್ಮಾ ಶಿಶ್ನದೇವಾ ಅಪಿ ಗುರ್ಋತಂ ನಃ । ಸ ಉತ್ಸಹತಾಂ ಯೋ ವಿಷುಣಸ್ಯ ಜಂತೋರ್ವಿಷಮಸ್ಯ ಮಾ ಶಿಶ್ನದೇವಾ ಅಬ್ರಹ್ಮಚರ್ಯಾಃ । ಶಿಶ್ನಂ ಶ್ನಥತೇಃ । ಅಪಿ ಗುರ್ಋತಂ ನಃ । ಸತ್ಯಂ ವಾ ಯಜ್ಞಂ ವಾ ॥**

ವಿಷುಣಸ್ಯ ಎಂದರೆ ವಿಷಮಸ್ಯ-ವಿಕಾರರೂಪವುಳ್ಳ,ಎಲ್ಲರಿಗೂ ಇರುವಂತೆ ಇರದೆ ವಿಕಾರವಾದ ಅವಯವಗಳುಳ್ಳ, ಅಥವಾ ಬುದ್ಧಿಹೀನವಾದ ಎಂದರ್ಥವು. ಇಂತಹ ಪ್ರಾಣಿಗಳನ್ನು ನಿಯಮನದಲ್ಲಿಡಲು (control) ಇಂದ್ರನು ಉತ್ಸಾಹವನ್ನು ತೋರಿಸುತ್ತಾನೆ. ಮತ್ತು ಶಿಶ್ನದೇವಾಃ—ಎಂದರೆ, ಬ್ರಹ್ಮಚರ್ಯಾದಿ ನಿಯಮವಿಲ್ಲದೆ, ಅಗಮ್ಯಾಗಮನ, ಅಕ್ರಮ ಸ್ತ್ರೀಸಂಗ ಮೊದಲಾದ ದುಷ್ಟಕಾರ್ಯಗಳಲ್ಲಿ ಪ್ರವೃತ್ತರಾಗಿರುವವರು, ನೀತಿಬಾಹಿರರು. ಅಥವಾ ಇಂದ್ರಾದಿದೇವತೆಗಳನ್ನು ಪೂಜಿಸದೆ ಪುರುಷಲಿಂಗವನ್ನೇ ದೇವರೆಂದು ಭಾವಿಸಿ ಅಕ್ರಮವೂ ನೀತಿಬಾಹಿರವೂ ಆದ ಕ್ರೀಡೆಗಳಲ್ಲಿ ಆಸಕ್ತ-ರಾಗಿರುವ ದುಷ್ಟರು ಎಂದೂ ಅರ್ಥವನ್ನು ಹೇಳಬಹುದು ಯಾವ ನೀತಿನಿಯಮವೂ ಇಲ್ಲದೇ ಇರುವ ಇಂತಹ ದುಷ್ಟಸ್ವಭಾವದ ಜನರು ನಾವು ಮಾಡುತ್ತಿರುವ ಯಜ್ಞದಲ್ಲಿ ವಿಘ್ನವನ್ನುಂಟುಮಾಡದಿರಲಿ ಎಂದರೆ ಇಂದ್ರನು ಇಂತಹ ದುಷ್ಟರನ್ನು ನಿಗ್ರಹಿಸಿ ನಮ್ಮ ಯಜ್ಞವು ಸಾಂಗವಾಗಿ ನೆರವೇರುವಂತೆ ಅನುಗ್ರಹಿಸಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು ಋತಶಬ್ದಕ್ಕೆ ಸತ್ಯವೆಂದೂ ಅಥವಾ ಯಜ್ಞವೆಂದೂ ಅರ್ಥವು.

ಸಂಹಿತಾಪಾಠಃ

**ಅಭಿ ಕ್ರತ್ವೇಂದ್ರ ಭೂರಧ ಜ್ಮನ್ನ ತೇ ವಿವ್ಯಙ್ಮಹಿಮಾನಂ ರಜಾಂಸಿ ।**

**ಸ್ವೇನಾ ಹಿ ವೃತ್ರಂ ಶವಸಾ ಜಘಂಥ ನ ಶತ್ರುರಂತಂ ವಿವಿದದ್ಯುಧಾ ತೇ ॥**

ಪದಪಾಠಃ

ಅಭಿ । ಕ್ರತ್ವಾ । ಇಂದ್ರ । ಭೂಃ । ಅಧ । ಜ್ಮನ್ । ನ । ತೇ । ವಿವ್ಯಕ್ । ಮಹಿಮಾನಂ । ರಜಾಂಸಿ ।

ಸ್ವೇನ । ಹಿ । ವೃತ್ರಂ । ಶವಸಾ । ಜಘಂಥ । ನ । ಶತ್ರುಃ । ಅಂತಂ । ವಿವಿದತ್ । ಯುಧಾ । ತೇ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಕ್ರತ್ವಾ ಕರ್ಮಣಾ ಜ್ಮನ್ ಪೃಥಿವ್ಯಾಂ ವರ್ತಮಾನಾನ್ ಜಂತೂನ್ನಾಭಿ ಭೂಃ । ಅಭ್ಯಭೂಃ । ಅಧಾಪಿ ಚ ತೇ ತವ ಮಹಿಮಾನಂ ರಜಾಂಸಿ ಸರ್ವೇ ಲೋಕಾ ನ ವಿವ್ಯಕ್ । ವ್ಯಚಿರ್ವ್ಯಾಪ್ತಿಕರ್ಮಾ । ನ ವ್ಯಾಪ್ನುವನ್ನಿತ್ಯರ್ಥಃ । ಸ್ವೇನ ಹ್ಯಾತ್ಮೀಯೇನ ಚ ಶವಸಾ ಬಲೇನ ವೃತ್ರಂ ಜಘಂಥ । ತ್ವಮವಧೀಃ । ಶತ್ರುಶ್ಚ ಯುಧಾ ಯುದ್ಧೇನ ತೇ ತವಾಂತಂ ಹಿಂಸಾಂ ನ ವಿವಿದತ್ । ನ ಲಬ್ಧವಾನ್ ।

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಕ್ರತ್ವಾ**—ನಿನ್ನ ಅಸಾಧಾರಣವಾದ ಕರ್ಮಗಳಿಂದ । **ಜ್ಮನ್**—ಪೃಥ್ವಿಯಲ್ಲಿರುವ ಸಕಲ ಜಂತುಗಳನ್ನೂ । **ಅಭಿ ಭೂಃ**—ನಿನ್ನ ವಶಪಡಿಸಿಕೊಂಡಿದ್ದೀಯೆ । **ಅಧ**—ಅಲ್ಲದೆ । **ತೇ**—ನಿನ್ನ । **ಮಹಿಮಾನಂ**—ಮಹತ್ತ್ವವನ್ನು । **ರಜಾಂಸಿ**—ಸಕಲ ಲೋಕಗಳೂ ಒಟ್ಟಿಗೆ ಸೇರಿಕೊಂಡು । **ನ ವಿವ್ಯಕ್**—ವ್ಯಾಪಿಸಲಾರವು (ಪಡೆಯಲಾರವು) । **ಸ್ವೇನ**—ನಿನ್ನ ಸಹಜವಾದ । **ಶವಸಾ ಹಿ**—ಶಕ್ತಿಯಿಂದಲೇ । **ವೃತ್ರಂ**—ವೃತ್ರಾಸುರನನ್ನು । **ಜಘಂಥ**—ನಾಶಮಾಡಿದೆ । **ಶತ್ರುಃ**—ಯಾವ ಶತ್ರುವೂ । **ಯುಧಾ**—ಯುದ್ಧದಲ್ಲಿ । **ತೇ**—ನಿನಗೆ । **ಅಂತಂ**—ಹಿಂಸೆಯನ್ನು । **ನ ವಿವಿದತ್**—ಉಂಟುಮಾಡಲಾಗುವುದಿಲ್ಲ.

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಅಸಾಧಾರಣವಾದ ಕರ್ಮಗಳಿಂದ ಪೃಥ್ವಿಯಲ್ಲಿರುವ ಸಕಲ ಜಂತುಗಳನ್ನೂ ನಿನ್ನ ವಶಪಡಿಸಿಕೊಂಡಿದ್ದೀಯೆ. ಅಲ್ಲದೆ, ನಿನ್ನ ಮಹತ್ವವನ್ನು ಸಕಲಲೋಕಗಳೂ ಒಟ್ಟಿಗೆ ಸೇರಿಕೊಂಡರೂ ಮೀರಿಸಲಾರವು ನಿನ್ನದೇ ಆದ ಶಕ್ತಿಯಿಂದ ನೀನು ವೃತ್ರಾಸುರನನ್ನು ನಾಶಮಾಡಿದೆ ಯಾವ ಶತ್ರುವೂ ಸಹ ಯುದ್ಧದಲ್ಲಿ ನಿನಗೆ ಹಿಂಸೆಯನ್ನುಂಟುಮಾಡಲಾಗುವುದಿಲ್ಲ

English Translation

You, Indra, by your function, preside over the beings (of earth) . all the regions (of the world) do not surpass your magnitude by your own strength you have slain Vritra no enemy has effected your destiuction in battle

ಸಂಹಿತಾಪಾಠಃ

ದೇವಾಶ್ಚಿತ್ತೇ ಅಸುರ್ಯಾಯ ಪೂರ್ವೇಽನು ಕ್ಷತ್ರಾಯ ಮಮಿರೇ ಸಹಾಂಸಿ।

ಇಂದ್ರೋ ಮಘಾನಿ ದಯತೇ ವಿಷಹ್ಯೇಂದ್ರಂ ವಾಜಸ್ಯ ಜೋಹುವಂತ
ಸಾತೌ ॥ ೭ ॥

ಪದಪಾಠಃ

ದೇವಾಃ । ಚಿತ್ । ತೇ । ಅಸುರ್ಯಾಯ । ಪೂರ್ವೇ । ಅನು । ಕ್ಷತ್ರಾಯ । ಮಮಿರೇ । ಸಹಾಂಸಿ ।
ಇಂದ್ರಃ । ಮಘಾನಿ । ದಯತೇ । ವಿಽಸಹ್ಯ । ಇಂದ್ರಂ । ವಾಜಸ್ಯ । ಜೋಹುವಂತ । ಸಾತೌ ॥ ೭ ॥

ಸಾಯಣಭಾಷ್ಯಂ

ಪೂರ್ವೇ ದೇವಾಶ್ಚಿದಸುರಾ ಅಪ್ಯಸುರ್ಯಾಯ ಬಲಾಯ ಕ್ಷತ್ರಾಯ । ಕ್ಷದಿರ್ಹಿಂಸಾಕರ್ಮಾ । ಬಲಂ ಹಿಂಸಾಂ ಚೋಭೇ ಕರ್ತುಮಿತ್ಯರ್ಥಃ । ಹೇ ಇಂದ್ರ ತೇ ತವ ಸಹಾಂಸಿ ಬಲಾನ್ಯನು ಮಮಿರೇ ॥ ಹೀನೇ । ಪಾ-ಸೂ ೧-೪-೮೬ । ಇತ್ಯನು ಕರ್ಮಪ್ರವಚನೀಯಃ ॥ ತವ ಬಲೇಭ್ಯೋ ಹೀನಾ ಮಮಿರ ಇತ್ಯರ್ಥಃ । ತಥಾ ಚ ನಿಗಮಾಂತರಂ । ಅನು ತೇ ದ್ಯೌರ್ಬೃಹತೀ ವೀರ್ಯಂ ಮಮೇ । ಋ-೧ ೫೭-೫ । ಇತಿ । ಅಥ ಪರೋಕ್ಷಸ್ತುತಿಃ । ಇಂದ್ರಃ ಶತ್ರೂನ್ವಿಷಹ್ಯ ಮಘಾನಿ ಮಂಹನೀಯಾನಿ ಧನಾನಿ ದಯತೇ । ಭಕ್ತೇಭ್ಯಃ ಪ್ರಯಚ್ಛತಿ । ಅಪಿ ಚೇಂದ್ರಂ ವಾಜಸ್ಯಾನ್ನಸ್ಯ ಸಾತೌ ಲಾಭಾರ್ಥಂ ಜೋಹುವಂತ । ಸ್ತುವಂತಿ ಸ್ತೋತಾರ ಆಹ್ವಯಂತಿ ವಾ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ಪೂರ್ವೇ**—ಪುರಾತನರಾದ । **ದೇವಾಶ್ಚಿತ್**—ಅಸುರರು ಕೂಡ । **ಕ್ಷತ್ರಾಯ**—ಹಿಂಸಕವಾದ । **ಅಸುರ್ಯಾಯ**—ಬಲಕ್ಕಿಂತಲೂ । **ತೇ**—ನಿನ್ನ । **ಸಹಾಂಸಿ**—ಬಲಗಳೇ ಅಧಿಕವಾದವೆಂದು । **ಅನು ಮಮಿರೇ**—ಒಪ್ಪಿಕೊಂಡಿದ್ದಾರೆ । **ಇಂದ್ರಃ**—ಇಂದ್ರನು । **ವಿಸಹ್ಯ**—ಶತ್ರುಗಳನ್ನು ಜಯಿಸಿ । **ಮಘಾನಿ**—ಪೂಜ್ಯವಾದ ಧನಗಳನ್ನು । **ದಯತೇ**—ಭಕ್ತರಿಗೆ ಕೊಡುತ್ತಾನೆ । **ಇಂದ್ರಂ**—ಅದೇ ಇಂದ್ರನನ್ನು । **ವಾಜಸ್ಯ**—ಅನ್ನದ । **ಸಾತೌ**—ಲಾಭಾರ್ಥವಾಗಿ । **ಜೋಹುವಂತ**—ಸ್ತುತಿಕರ್ತರು ಸ್ತುತಿಪೂರ್ವಕವಾಗಿ ಕರೆಯುತ್ತಾರೆ.

ಭಾವಾರ್ಥ

ಎಲೈ ಇಂದ್ರನೇ, ಪುರಾತನರಾದ ಅಸುರರೂ ಕೂಡ ತಮ್ಮ ಹಿಂಸಾಕಾರಕವಾದ ಬಲಕ್ಕಿಂತಲೂ ನಿನ್ನ ಬಲಗಳೇ ಅಧಿಕವೆಂದು ಒಪ್ಪಿಕೊಂಡಿದ್ದಾರೆ. ಇಂದ್ರನು ಶತ್ರುಗಳನ್ನು ಜಯಿಸಿ ಪೂಜ್ಯವಾದ ಧನಗಳನ್ನು ಭಕ್ತರಿಗೆ ಕೊಡುತ್ತಾನೆ. ಅದೇ ಇಂದ್ರನನ್ನು ಅನ್ನದ ಲಾಭಾರ್ಥವಾಗಿ ಸ್ತುತಿಕರ್ತರು ಪ್ರಶಂಸಿಸಿ ಕರೆಯುತ್ತಾರೆ.

## English Translation

The older deities have confessed your vigour superior to their distructive strength. Indra having subdued his foes, gives the rich spoils (to his worshippers) . they invoke Indra to obtain food.

ಸಂಹಿತಾಪಾಠಃ

ಕೀರಿಶ್ಚಿದ್ಧಿ ತ್ವಾಮವಸೇ ಜುಹಾವೇಶಾನಮಿಂದ್ರ ಸೌಭಗಸ್ಯ ಭೂರೇಃ |
ಅವೋ ಬಭೂಥ ಶತಮೂತೇ ಅಸ್ಮೇ ಅಭಿಕ್ಷತ್ತುಸ್ತ್ವಾವತೋ ವರೂತಾ ||೮||

ಪದಪಾಠಃ

ಕೀರಿಃ | ಚಿತ್ | ಹಿ | ತ್ವಾಂ | ಅವಸೇ | ಜುಹಾವ | ಈಶಾನಂ | ಇಂದ್ರ | ಸೌಭಗಸ್ಯ | ಭೂರೇಃ |
ಅವಃ | ಬಭೂಥ | ಶತಂಽಊತೇ | ಅಸ್ಮೇ ಇತಿ | ಅಭಿಽಕ್ಷತ್ತುಃ | ತ್ವಾಽವತಃ | ವರೂತಾ || ೮ ||

ಸಾಯಣಭಾಷ್ಯಂ

ಹೇ ಇಂದ್ರ ಈಶಾನಂ ತ್ವಾಂ ಕೀರಿಃ ಸ್ತೋತಾ | ಕಾರುಃ ಕೀರಿರಿತಿ ಸ್ತೋತೃನಾಮಸು ಪಾಠಾತ್ | ವಸಿಷ್ಠೋಽವಸೇ ರಕ್ಷಣಾಯ ಜುಹಾವ ಹಿ| ಸ್ತೌತಿ ಹಿ ಹ್ವಯತಿ ವಾ | ಚಿದಿತಿ ಪೂರಣಃ | ಅಪಿ ಚ ಹೇ ಶತಮೂತೇ ಬಹುರಕ್ಷೇಂದ್ರ ಅಸ್ಮೇ ಅಸ್ಮಾಕಂ ಭೂರೇಃ ಪ್ರಭೂತಸ್ಯ ಸೌಭಗಸ್ಯ ಧನಸ್ಯಾವೋ ರಕ್ಷಾ ಬಭೂಥ | ಬಭೂವಿಥ | ಅಭಿಕ್ಷತ್ತುರಭಿಹಿಂಸಕಸ್ಯ ತ್ವಾವತಸ್ತ್ವತ್ಸದೃಶಸ್ಯ ವರೂತಾ ವಾರಯಿತಾ ಚ ಭವ ||

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ | **ಈಶಾನಂ**—ಪ್ರಭುವಾದ | **ತ್ವಾಂ**—ನಿನ್ನನ್ನು | **ಕೀರಿಃ**—ಸ್ತುತಿಕರ್ತನು | **ಅವಸೇ**—ರಕ್ಷಣಾರ್ಥವಾಗಿ | **ಜುಹಾವ ಹಿ**—ಕರೆದಿದ್ದಾನೆ | **ಶತಮೂತೇ**—ಅನೇಕ ರಕ್ಷಣೆಗಳಿಂದ ಕೂಡಿದ ಎಲೈ ಇಂದ್ರನೇ | **ಅಸ್ಮೇ**—ನಮ್ಮ | **ಭೂರೇಃ**—ಅತ್ಯಧಿಕವಾದ | **ಸೌಭಗಸ್ಯ**—ಧನಕ್ಕೆ | **ಅವಃ**—ರಕ್ಷಕನಾಗಿ | **ಬಭೂಥ**—ಆಗಿದ್ದೀಯೆ | **ತ್ವಾವತಃ**—ನಿನ್ನಂತೆಯೇ ಶಕ್ತಿಯುಳ್ಳ | **ಅಭಿಕ್ಷತ್ತುಃ**—ಹಿಂಸಕನಾದ ಅಸುರನಿಗೆ | **ವರೂತಾ**—ನಿವಾರಕನಾಗಿರು.

ಭಾವಾರ್ಥ

ಎಲೈ ಇಂದ್ರನೇ, ಪ್ರಭುವಾದ ನಿನ್ನನ್ನು ಸ್ತುತಿಕರ್ತನು ರಕ್ಷಣಾರ್ಥವಾಗಿ ಕರೆದಿದ್ದಾನೆ ಅನೇಕ ರಕ್ಷಣೆಗಳಿಂದ ಕೂಡಿದ ಎಲೈ ಇಂದ್ರನೇ, ನಮ್ಮ ಅತ್ಯಧಿಕವಾದ ಧನಕ್ಕೆ ರಕ್ಷಕನಾಗಿದ್ದೀಯೆ ನಿನ್ನಂತೆಯೇ ಶಕ್ತಿಯುಳ್ಳ ಹಿಂಸಕನಾದ ಅಸುರನಿಗೆ ನಿವಾರಕನಾಗಿರು.

## English Translation

The worshipper has invoked you the sovereign Indra, for protection; protector of many, you have been to us the guardian of great good fortune; be our defender against every overpowering (assailant) like to you

———

ಸಂಹಿತಾಪಾಠಃ

ಸಖಾಯಸ್ತ ಇಂದ್ರ ವಿಶ್ವಹ ಸ್ಯಾಮ ನಮೋವೃಧಾಸೋ ಮಹಿನಾ ತರುತ್ರ ।
ವನ್ವಂತು ಸ್ಮಾ ತೇಽವಸಾ ಸಮೀಕೇಽಭೀತಿಮರ್ಯೋ ವನುಷಾಂ ಶವಾಂಸಿ ॥

ಪದಪಾಠಃ

ಸಖಾಯಃ । ತೇ । ಇಂದ್ರ । ವಿಶ್ವಹ । ಸ್ಯಾಮ । ನಮಃಽವೃಧಾಸಃ । ಮಹಿನಾ । ತರುತ್ರ ।
ವನ್ವಂತು । ಸ್ಮ । ತೇ । ಅವಸಾ । ಸಂಽಈಕೇ । ಅಭಿಽಇತಿಂ । ಅರ್ಯಃ । ವನುಷಾಂ । ಶವಾಂಸಿ ॥ ೯ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತವ ನಮೋವೃಧಾಸೋ ನಮಸಾ ಸ್ತುತ್ಯಾ ಹವಿಷಾ ವಾ ವರ್ಧಯಿತಾರೋ ವಯಂ ವಿಶ್ವಹ ಸರ್ವದಾ ಸಖಾಯಃ ಸ್ಯಾಮ । ಭವೇಮ । ಮಹಿನಾ ಮಹಿಮ್ನಾ ತರುತ್ರಾತ್ಯಂತಂ ತಾರಕೇಂದ್ರ ತೇ ತವಾವಸಾ ರಕ್ಷಣೇನ ಸಮೀಕೇ ಸಂಗ್ರಾಮೇಽರ್ಯೋಽಭೀತಿಮಭಿಗಮನಂ ವನುಷಾಂ ಹಿಂಸಕಾನಾಂ ಶವಾಂಸಿ ಬಲಾನಿ ಚ ವನ್ವಂತು । ಸ್ತೋತಾರೋ ಹಿಂಸಂತು ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ನಮೋವೃಧಾಸಃ—ಸ್ತುತಿಗಳಿಂದಲೇ ವೃದ್ಧಿಯನ್ನು ಹೊಂದತಕ್ಕ ನಾವು । ವಿಶ್ವಹ—ಸಕಲ ದಿನಗಳಲ್ಲಿಯೂ । ಸಖಾಯಃ—ನಿನಗೆ ಮಿತ್ರರಾಗಿ । ಸ್ಯಾಮ—ಇರುವಂತಾಗಲಿ । ಮಹಿನಾ—ನಿನ್ನ ಮಹತ್ವದಿಂದಲೇ । ತರುತ್ರ—ಅತಿಶಯವಾಗಿ ರಕ್ಷಿಸುವ ಎಲೈ ಇಂದ್ರನೇ । ತೇ—ನಿನ್ನ । ಅವಸಾ—ರಕ್ಷಣೆಯಿಂದಲೇ । ಸಮೀಕೇ—ಸಂಗ್ರಾಮದಲ್ಲಿ । ಅರ್ಯಃ—ಶತ್ರುವಿನ । ಅಭೀತಿಂ—ಪ್ರತಿಭಟನೆಯನ್ನೂ । ವನುಷಾಂ—ಹಿಂಸಕರ । ಶವಾಂಸಿ—ಬಲಗಳನ್ನೂ । ವನ್ವಂತು ಸ್ಮ—ನಿನ್ನ ಸ್ತೋತೃಗಳು ಹಿಂಸಿಸಲಿ

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಸ್ತುತಿಗಳಿಂದಲೇ ವೃದ್ಧಿಯನ್ನು ಹೊಂದತಕ್ಕ ನಾವು ಸಕಲ ದಿನಗಳಲ್ಲಿಯೂ ನಿನಗೆ ಮಿತ್ರರಾಗಿ ಇರುವಂತಾಗಲಿ ನಿನ್ನ ಮಹತ್ವದಿಂದಲೇ, ಅತಿಶಯವಾಗಿ ರಕ್ಷಿಸುವ ಎಲೈ ಇಂದ್ರನೇ, ನಿನ್ನಿಂದಲೇ ರಕ್ಷಿತರಾಗಿ, ಯುದ್ಧದಲ್ಲಿ ಶತ್ರುವಿನ ಪ್ರತಿಭಟನೆಯನ್ನೂ ಹಿಂಸಕರ ಬಲಗಳನ್ನೂ ನಿನ್ನ ಸ್ತೋತೃಗಳು ಹಿಂಸಿಸಲಿ

## English Translation

May we, daily increasing in reverence, be (regarded) Indra,(as) your friends : through the protection of you, surpasser in greatness, may (your worshippers) repulse the attack of the foe in battle, the strength of the malevolent.

ಸಂಹಿತಾಪಾಠಃ

ಸ ನ ಇಂದ್ರ ತ್ವಯತಾಯಾ ಇಷೇ ಧಾಸ್ತ್ಮನಾ ಚ ಯೇ ಮಘವಾನೋ ಜುನಂತಿ |
ವಸ್ವೀ ಷು ತೇ ಜರಿತ್ರೇ ಅಸ್ತು ಶಕ್ತಿರ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ॥

ಪದಪಾಠಃ

ಸಃ | ನಃ | ಇಂದ್ರ | ತ್ವಽಯತಾಯೈ | ಇಷೇ | ಧಾಃ | ತ್ಮನಾ | ಚ | ಯೇ | ಮಘಽವಾನಃ | ಜುನಂತಿ |
ವಸ್ವೀ | ಸು | ತೇ | ಜರಿತ್ರೇ | ಅಸ್ತು | ಶಕ್ತಿಃ | ಯೂಯಂ | ಪಾತ | ಸ್ವಸ್ತಿಽಭಿಃ | ಸದಾ | ನಃ ॥ ೧೦ ॥

ಸಾಯಣಭಾಷ್ಯಂ

ಹೇ ಇಂದ್ರ ಸ ತ್ವಂ ತ್ವಯತಾಯಾ ಇಷೇ ತ್ವಯಾ ದತ್ತಮನ್ನಂ ಭೋಕ್ತುಂ ನೋಽಸ್ಮಾನ್ ಧಾಃ | ಧಾರಯ | ಯೇ ಚ ಮಘವಾನೋ ಹವಿಷ್ಮಂತಸ್ತ್ಮನಾ ಸ್ವಯಮೇವ ಜುನಂತಿ ಹವೀಂಷಿ ತ್ವಾಂ ಪ್ರತಿ ಪ್ರೇರಯಂತಿ ತಾನಪಿ ತ್ವಯತಾಯಾ ಇಷೇ ಧಾಃ | ಅಪಿ ಚ ವಸ್ವೀಃಪ್ರಶಸ್ತ್ಯಂತಂ ಪ್ರಶಸ್ತಾಸು ಸ್ತುತಿಷು ತೇ ತವ ಜರಿತ್ರೇ ಸ್ತೋತ್ರೇ ಮಹ್ಯಂ ಶಕ್ತಿಃ ಸಾಮರ್ಥ್ಯಮಸ್ತು | ಯದ್ವಾ | ಜರಿತ್ರೇ ಮಹ್ಯಂ ತೇ ತವ ವಸ್ವೀ ಷು ಪ್ರಶಸ್ತಾ ಶಕ್ತಿರ್ದಾನಮಸ್ತು | ಸ್ಪಷ್ಟಮನ್ಯತ್ ॥

ಪ್ರತಿಪದಾರ್ಥ

**ಇಂದ್ರ** — ಎಲೈ ಇಂದ್ರನೇ | **ತ್ವಾಯತಾಯೈ** — ನಿನ್ನಿಂದಲೇ ದತ್ತವಾದ | **ಇಷೇ** — ಅನ್ನವನ್ನು ಭುಜಿಸಲು | **ನಃ**—ನಮ್ಮನ್ನು | **ಧಾಃ**—ಪಾತ್ರರಾಗುವಂತೆ ಮಾಡು | **ಯೇ**—ಯಾವ ಯಜಮಾನರು | **ಮಘ-ವಾನಃ**—ಹವಿಷ್ಮಂತರಾಗಿದ್ದು | **ತ್ಮನಾ**—ಸ್ವಯಂಪ್ರೇರಿತರಾಗಿ | **ಜುನಂತಿ**—ನಿನಗೆ ಹವಿಸ್ಸನ್ನರ್ಪಿಸುವರೋ ಅವರನ್ನೂ ಆ ಅನ್ನಕ್ಕೆ ಪಾತ್ರರನ್ನಾಗಿ ಮಾಡು | **ತೇ**—ನಿನ್ನ | **ಜರಿತ್ರೇ**—ಸ್ತುತಿಕರ್ತನಾದ ನನಗೆ(ನನ್ನಲ್ಲಿ) | **ಶಕ್ತಿಃ**—ಸಾಮರ್ಥ್ಯವು | **ಅಸ್ತು**—ತುಂಬಿರಲಿ (ಎಲೈ ಇಂದ್ರಾದಿಗಳೇ) | **ಯೂಯಂ**—ನೀವು | **ಸದಾ**—ಯಾವಾಗಲೂ | **ನಃ**—ನಮ್ಮನ್ನು | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ** – ರಕ್ಷಿಸಿರಿ

ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದಲೇ ದತ್ತವಾದ ಅನ್ನವನ್ನು ಭುಜಿಸಲು ನಮ್ಮನ್ನು ಪಾತ್ರರಾಗುವಂತೆ ಮಾಡು. ಯಾವ ಯಜಮಾನರು ಹವಿಷ್ಮಂತರಾಗಿದ್ದು ಸ್ವಯಂಪ್ರೇರಿತರಾಗಿ ನಿನಗೆ ಹವಿಸ್ಸನ್ನರ್ಪಿಸುವರೋ ಅವರನ್ನೂ ಆ ಅನ್ನಕ್ಕೆ ಪಾತ್ರರನ್ನಾಗಿ ಮಾಡು ನಿನ್ನ ಸ್ತುತಿಕರ್ತನಾದ ನನಗೆ ಅದೇ ಸಾಮರ್ಥ್ಯವಿರಲಿ. ಎಲೈ ಇಂದ್ರಾದಿಗಳೇ, ನೀವು ಯಾವಾಗಲೂ ನಮ್ಮನ್ನು ಕಲ್ಯಾಣಗಳಿಂದ ರಕ್ಷಿಸಿರಿ.

English Translation

Enable us, Indra, (to partake of) food granted by you, as well as those who, opulent (in sacrificial presentation), spontaneously offer the

(oblations) : may there be ability in your adorer (to repeat) many laudations : and do you ever cherish us with blesstings.

---

## ಇಪ್ಪತ್ತೆರಡನೆಯ ಸೂಕ್ತವು

### ಸಾಯಣಭಾಷ್ಯಂ

**ಪಿಬಾ ಸೋಮಮಿಂದ್ರ ಮಂದತು ತ್ವೇತಿ ನವರ್ಚಂ ಪಂಚಮಂ ಸೂಕ್ತಂ । ಅನುಕ್ರಮ್ಯತೇ ಚ । ಪಿಬ ನವ ವೈರಾಜಮ್ಯತೇಽನ್ತ್ಯಮಿತಿ । ವಸಿಷ್ಠ ಋಷಿಃ। ಆದಿತೋಽಷ್ಟೌ ವಿರಾಜೋ ನವಮೀ ತ್ರಿಷ್ಟುಪ್ । ಇಂದ್ರೋ ದೇವತಾ ॥ ದಶರಾತ್ರೇ ಚತುರ್ಥೇಽಹನಿ ನಿಷ್ಕೇವಲ್ಯಶಸ್ತ್ರೇ ಪಿಬಾ ಸೋಮಮಿಂದ್ರೇತಿ ಷಟ್ ಸ್ತೋತ್ರಿಯಾನುರೂಪೌ । ಸೂತ್ರಿತಂ ಚ । ವೈರಾಜಂ ಚೇತ್ಪೃಷ್ಠಂ ಪಿಬಾ ಸೋಮಮಿಂದ್ರ ಮಂದತು ತ್ವೇತಿ ಷಟ್ ಸ್ತೋತ್ರಿಯಾನುರೂಪೌ । ಆ ೭ ೧೧ । ಇತಿ । ಮಹಾವ್ರತೇಽಪಿ ನಿಷ್ಕೇವಲ್ಯ ಆದ್ಯಾಃ ಷಡೃಚಃ । ಸೂತ್ರಿತಂ ಚ । ಪಿಬಾ ಸೋಮಮಿಂದ್ರ ಮಂದತು ತ್ವೇತಿ ಷಟ್ । ಐ ಆ. ೫-೩-೧ । ಇತಿ ॥ ಆದ್ಯಾ ನಿಷ್ಕೇವಲ್ಯಶಸ್ತ್ರಯಾಜ್ಯಾ । ಸೂತ್ರಿತಂ ಚ । ಪಿಬಾ ಸೋಮಮಿಂದ್ರ ಮಂದತು ತ್ವೇತಿ ಯಾಜ್ಯಾ । ಆ ೫ ೧೫ । ಇತಿ ॥ ಚತುರ್ಥೇಽಹನಿ ಮಾಧ್ಯಂದಿನಸವನೇ ಹೋತ್ರಕಶಸ್ತ್ರೇಷು ಸಪ್ತ ವಿರಾಜಸ್ತ್ರೀಂಸ್ತ್ರ್ಯಚಾನ್ ಕೃತ್ವೈಕೈಕಸ್ತ್ರ್ಯಚಃ ಶಂಸನೀಯಃ । ತತ್ರ ನ ತೇ ಗಿರ ಇತ್ಯಾದ್ಯಾಶ್ಚತಸ್ರ ಋಚಃ । ಸೂತ್ರಿತಂ ಚ। ನ ತೇ ಗಿರೋ ಅಪಿ ಮೃಷ್ಯೇ ತುರಸ್ಯ ಪ್ರ ವೋ ಮಹೇ ಮಹಿವೃಧೇ ಭರಧ್ವಂ । ಆ ೭-೧೧ । ಇತಿ ॥**

**ಅನುವಾದವು— ಪಿಬಾ ಸೋಮಮಿಂದ್ರ ಮಂದತು ತ್ವಾ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ— **ಪಿಬ ನವ ವೈರಾಜಮ್ಯತೇಽನ್ತ್ಯಂ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಇಂದ್ರನು ದೇವತೆಯು ; ಈ **ಸೂಕ್ತದ** ಮೊದಲಿನ ಎಂಟು ಋಕ್ಕುಗಳು ವಿರಾಟ್‌ಛಂದಸ್ಕವು ; ಒಂಭತ್ತನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು ದಶರಾತ್ರವೆಂಬ ಯಾಗದ ನಾಲ್ಕನೆಯ ದಿವಸ ನಿಷ್ಕೇವಲ್ಯಶಸ್ತ್ರಮಂತ್ರಪಠನಮಾಡುವಾಗ **ಪಿಬಾ ಸೋಮಮಿಂದ್ರ** ಎಂದು ಮೊದಲಾಗುವ ಆರು ಋಕ್ಕುಗಳು ಸ್ತೋತ್ರಿಯ ಮತ್ತು ಅನುರೂಪಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ವೈರಾಜಂ ಚೇತ್ಪೃಷ್ಠಂ ಪಿಬಾ ಸೋಮಮಿಂದ್ರ ಮಂದತು ತ್ವೇತಿ ಷಟ್ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ ೭ ೧೧) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಮೊದಲಿನ ಆರು ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ **ಪಿಬಾ ಸೋಮಮಿಂದ್ರ ಮಂದತು ತ್ವೇತಿ ಷಟ್** ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು. (ಐ ಆ ೫-೩-೧) ಮತ್ತು ಈ ಸೂಕ್ತದ ಮೊದಲನೆಯ ಋಕ್ಕನ್ನು ನಿಷ್ಕೇವಲ್ಯ ಮಂತ್ರಗಳಲ್ಲಿ ಶಸ್ತ್ರಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಪಿಬಾ ಸೋಮಮಿಂದ್ರ ಮಂದತು ತ್ವೇತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೫-೧೫) ವಿವೃತವಾಗಿರುವುದು ಯಜ್ಞದ ನಾಲ್ಕನೆಯ ದಿವಸ ಮಾಧ್ಯಂದಿನಸವನಕಾಲದಲ್ಲಿ ಹೋತೃವರ್ಗದ ಋತ್ವಿಜರು ಪಠಿಸುವ ಶಸ್ತ್ರಮಂತ್ರಗಳಲ್ಲಿ ವಿರಾಟ್‌ಛಂದಸ್ಸಿನ ಏಳು ಋಕ್ಕುಗಳನ್ನು ಮೂರು ತೃಚವನ್ನಾಗಿ ಮಾರ್ಪಡಿಸಿ ಒಬ್ಬೊಬ್ಬರು ಒಂದೊಂದು ತೃಚದಂತೆ (ತೃಚವೆಂದರೆ ಮೂರು ಋಕ್ಕುಗಳು) ಪಠಿಸಬೇಕಾಗಿರುವುದು. ಆಗ ಈ ಸೂಕ್ತದ **ನ ತೇ ಗಿರಃ** ಎಂದು ಮೊದಲಾಗುವ ನಾಲ್ಕು ಋಕ್ಕುಗಳ (೫,೬,೭, ೮) ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ

ಸೂತ್ರದ ನ ತೇ ಗಿರೋ ಅಪಿ ಮೃಷ್ಯೇ ತುರಸ್ಯ ಪ್ರ ವೋ ಮಹೇ ಮಹಿವೃಧೇ ಭರಧ್ವಂ ಎಂಬ ಸೂ (ಅ. ೬-೧೧) ವಿವೃತವಾಗಿರುವುದು.

## ಸೂಕ್ತ—೨೨

ಮಂಡಲ—೭ || ಅನುವಾಕ—೨ || ಸೂಕ್ತ—೨೨ ||
ಅಷ್ಟಕ—೫ || ಅಧ್ಯಾಯ—೩ || ವರ್ಗ—೫, ೬ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೯
ಋಷಿಃ—ವಸಿಷ್ಠಃ ||
ದೇವತಾ—ಇಂದ್ರಃ ||
ಛಂದಃ—೧-೮, ವಿರಾಟ್ | ೯, ತ್ರಿಷ್ಟುಪ್ ||

ಸಂಹಿತಾಪಾಠಃ

ಪಿಬಾ ಸೋಮಮಿಂದ್ರ ಮಂದತು ತ್ವಾ ಯಂ ತೇ ಸುಷಾವ ಹರ್ಯಶ್ವಾ

ಸೋತುರ್ಬಾಹುಭ್ಯಾಂ ಸುಯತೋ ನಾರ್ವಾ || ೧ ||

ಪದಪಾಠಃ

ಪಿಬ | ಸೋಮಂ | ಇಂದ್ರ | ಮಂದತು | ತ್ವಾ | ಯಂ | ತೇ | ಸುಸಾವ | ಹರಿऽಅಶ್ವ | ಅದ್ರಿಃ |

ಸೋತುಃ | ಬಾಹುऽಭ್ಯಾಂ | ಸುऽಯತಃ | ನ | ಅರ್ವಾ || ೧ ||

ಸಾಯಣಭಾಷ್ಯಂ

ಹೇ ಇಂದ್ರ ಸೋಮಂ ಪಿಬ | ಸ ಸೋಮಸ್ತ್ವಾಂ ತ್ವಾಂ ಮಂದತು | ಮಾದಯತು ಹರ್ಯಶ್ವ ತೇ ತ್ವದರ್ಥಂ ಸೋತುರಭಿಷವಕರ್ತುರ್ಬಾಹುಭ್ಯಾಮರ್ವಾ ನ ರಶ್ಮಿಭ್ಯಾಮಶ್ವ ಇವ ಸು. ಸುಷ್ಠು ಪರಿಗೃಹೀತೋऽದ್ರಿರ್ಗ್ರಾವಾ ಯಂ ಸೋಮಂ ಸುಷಾವ ||

ಪ್ರತಿಪದಾರ್ಥ

**ಹರ್ಯಶ್ವ**—ಹರಿಸಂಜ್ಞಕವಾದ ಅಶ್ವವುಳ್ಳ | **ಇಂದ್ರ**—ಎಲೈ ಇಂದ್ರನೇ | **ತೇ**—ನಿನ್ನನ್ನುದ್ದೆ **ಸೋತುಃ**—ಸೋಮವನ್ನು ಹಿಂಡುವ ಯಜಮಾನನ | **ಬಾಹುಭ್ಯಾಂ**—ಬಾಹುಗಳಿಂದ | **ಅರ್ವಾ ನ**— ನಿಂದ ಅಶ್ವವನ್ನು ಹಿಡಿಯುವಂತೆ | **ಸುಯತಃ**—ಅತಿಶಯವಾಗಿ ಹಿಡಿಯಲ್ಪಟ್ಟಿರುವ | **ಅದ್ರಿಃ**—ಗ್ರಾವವು ( **ಯಂ**—ಯಾವ ಸೋಮವನ್ನು | **ಸುಷಾವ**—ಹಿಂಡಿದೆಯೋ | **ಸೋಮಂ**—ಅದೇ ಸೋಮವನ್ನು | **ಪಿಬ** ಮಾಡು | **ತ್ವಾ**—ನಿನ್ನನ್ನು | **ಮಂದತು**—(ಆ ಸೋಮವು) ಹರ್ಷಿತನನ್ನಾಗಿ ಮಾಡಲಿ

ಭಾವಾರ್ಥ

ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಸೋಮವನ್ನು ಹಿಂಡುವ ಯಜ ಬಾಹುಗಳಿಂದ ಲಗಾಮುಗಳಿಂದ ಅಶ್ವವನ್ನು ಹಿಡಿಯುವಂತೆ ಅತಿಶಯವಾಗಿ ಹಿಡಿಯಲ್ಪಟ್ಟಿರುವ ಗ್ರಾವವು ( ಕಲ್ಲು) ಯಾವ ಸೋಮವನ್ನು ಹಿಂಡಿದೆಯೋ ಅದೇ ಸೋಮವನ್ನು ಪಾನಮಾಡು ಆ ಸೋಮವು ನಿನ್ನನ್ನು ನನ್ನಾಗಿ ಮಾಡಲಿ.

## English Translation

Drink, Indra, the Soma . may it exhilarate you, that which the stone tightly held like a horse (by the reins) by the arms of the grinder, has expressed, lord of bay horses, for you,

ಸಂಹಿತಾಪಾಠಃ

ಯಸ್ತೇ ಮದೋ ಯುಜ್ಯಶ್ಚಾರುರಸ್ತಿ ಯೇನ ವೃತ್ರಾಣಿ ಹರ್ಯಶ್ವ ಹಂಸಿ |
ಸ ತ್ವಾಮಿಂದ್ರ ಪ್ರಭೂವಸೋ ಮಮತ್ತು || ೨ ||

ಪದಪಾಠಃ

ಯಃ | ತೇ | ಮದಃ | ಯುಜ್ಯಃ | ಚಾರುಃ | ಅಸ್ತಿ | ಯೇನ | ವೃತ್ರಾಣಿ | ಹರಿಽಅಶ್ವ | ಹಂಸಿ |
ಸಃ | ತ್ವಾಂ | ಇಂದ್ರ | ಪ್ರಭುವಸೋ ಇತಿ ಪ್ರಭುಽವಸೋ | ಮಮತ್ತು || ೨ ||

ಸಾಯಣಭಾಷ್ಯಂ

ಹೇ ಹರ್ಯಶ್ವ ತೇ ತವ ಯೋ ಯುಜ್ಯೋಽನುಗುಣಶ್ಚಾರುಃ ಸಮೀಚೀನೋ ಮದೋ ಮದಕರಃ ಸೋಮೋಽಸ್ತಿ ವಿದ್ಯತೇ ಯೇನ ಚ ಪೀತೇನ ಸೋಮೇನ ವೃತ್ರಾಣಿ ಹಂಸಿ ಹೇ ಪ್ರಭೂವಸೋ ಪ್ರಭೂತಧನೇಂದ್ರ ತ್ವಾಂ ಸ ಸೋಮೋ ಮಮತ್ತು | ಮಾದಯತು ||

ಪ್ರತಿಪದಾರ್ಥ

**ಪ್ರಭೂವಸೋ**—ಪ್ರಭೂತವಾದ ಧನವುಳ್ಳವನೂ | **ಹರ್ಯಶ್ವ**—ಹರಿಸಂಜ್ಞಕವಾದ ಅಶ್ವವುಳ್ಳವನೂ ಆದ | **ಇಂದ್ರ**—ಎಲೈ ಇಂದ್ರನೇ | **ತೇ**—ನಿನಗೆ | **ಯಃ**—ಯಾವ ಸೋಮವು | **ಯುಜ್ಯಃ**—ಅನುರೂಪವಾಗಿರುವುದೋ | **ಚಾರುಃ**—ಮನೋಹರವಾಗಿಯೂ | **ಮದಃ**—ಮದಕರವಾಗಿಯೂ | **ಅಸ್ತಿ**—ಇರುವುದೋ | **ಯೇನ**—ಯಾವ ರಸಪಾನದಿಂದ | **ವೃತ್ರಾಣಿ**—ಶತ್ರುಗಳನ್ನು | **ಹಂಸಿ**—ಕೊಲ್ಲುವೆಯೋ | **ಸಃ**—ಅಂತಹ ಸೋಮವು | **ತ್ವಾಂ**—ನಿನ್ನನ್ನು | **ಮಮತ್ತು**—ಹರ್ಷಗೊಳಿಸಲಿ.

ಭಾವಾರ್ಥ

ಪ್ರಭೂತವಾದ ಧನವುಳ್ಳವನೂ, ಹರಿಸಂಜ್ಞಕವಾದ ಅಶ್ವವುಳ್ಳವನೂ ಆದ ಎಲೈ ಇಂದ್ರನೇ, ನಿನಗೆ ಯಾವ ಸೋಮವು ಅನುರೂಪವಾಗಿರುವುದೋ, ಮತ್ತು ಮನೋಹರವಾಗಿಯೂ, ಮದಕರವಾಗಿಯೂ ಇರುವುದೋ, ಯಾವ ರಸಪಾನದಿಂದ ನೀನು ಶತ್ರುಗಳನ್ನು ಕೊಲ್ಲಲು ಶಕ್ತನಾಗುವೆಯೋ ಆ ಸೋಮವು ನಿನ್ನನ್ನು ಹರ್ಷಗೊಳಿಸಲಿ.

## Engilsh Translatson

May the exhilarating beverage which is fit for and suitable to you, by which, lord of bay horses, you slay Yritras, exhilarate you, Indra, abounding in riches.

ಸಂಹಿತಾಪಾಠಃ

ಬೋಧಾ ಸು ಮೇ ಮಘವನ್ವಾಚಮೇಮಾಂ ಯಾಂ ತೇ ವಸಿಷ್ಠೋ ಅರ್ಚ
ಪ್ರಶಸ್ತಿಂ |
ಇಮಾ ಬ್ರಹ್ಮ ಸಧಮಾದೇ ಜುಷಸ್ವ || ೩ ||

ಪದಪಾಠಃ

ಬೋಧ | ಸು | ಮೇ | ಮಘsವನ್ | ವಾಚಂ | ಆ | ಇಮಾಂ | ಯಾಂ | ತೇ | ವಸಿಷ್ಠಃ | ಅರ್ಚ
ಪ್ರsಶಸ್ತಿಂ |
ಇಮಾ | ಬ್ರಹ್ಮ | ಸಧsಮಾದೇ | ಜುಷಸ್ವ || ೩ ||

ಸಾಯಣಭಾಷ್ಯಂ

ಹೇ ಮಘವನ್ ಧನವನ್ನಿಂದ್ರ ತೇ ತವ ಪ್ರಶಸ್ತಿಂ ಸ್ತುತಿರೂಪಾಂ ಯಾಂ ವಾಚಂ ವಸಿಷ್ಠೋ
ರ್ಚತಿ ವದತಿ ತಾಮಿಮಾಂ ಮೇ ವಸಿಷ್ಠಸ್ಯ ಸಂಬಂಧಿನೀಂ ವಾಚಂ ಸ್ವಾ ಬೋಧ | ಸುಷ್ಠ್ವಭಿಬುಧ್ಯ
ಕಿಂಚೇಮೇಮಾನಿ ಬ್ರಹ್ಮ ಬ್ರಹ್ಮಾಣಿ ಸಧಮಾದೇ ಯಜ್ಞೇ ಜುಷಸ್ವ | ಸೇವಸ್ವ ||

ಪ್ರತಿಪದಾರ್ಥ

**ಮಘವನ್**—ಧನವಂತನಾದ ಎಲೈ ಇಂದ್ರನೇ | **ತೇ**—ನಿನ್ನ | **ಪ್ರಶಸ್ತಿಂ**—ಸ್ತುತಿರೂಪವಾದ | **ವಾಚಂ**—ಯಾವ ಸ್ತುತಿ ವಾಕ್ಯವನ್ನು | **ವಸಿಷ್ಠಃ**—ವಸಿಷ್ಠನು | **ಅರ್ಚತಿ**—ಸಮರ್ಪಿಸುವನೋ | **ಮೇ**—ವ ನಾಮಕನಾದ ನನ್ನ | **ಇಮಾಂ**—ಈ ಸ್ತುತಿವಾಕ್ಯವನ್ನು | **ಸು ಆ ಬೋಧ**—ಅತಿಶಯವಾಗಿ ತಿಳಿ | **ಇಮಾ ಬ್ರ** ಈ ಸ್ತೋತ್ರಗಳನ್ನು | **ಸಧಮಾದೇ**—ಯಜ್ಞದಲ್ಲಿ | **ಜುಷಸ್ವ**--ಸೇವಿಸು

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ನಿನ್ನ ಸ್ತುತಿರೂಪವಾದ ಯಾವ ಸ್ತುತಿವಾಕ್ಯವನ್ನು ವಸಿಷ್ಠನು ಸಮ ವನೋ ಅಂತಹ ವಸಿಷ್ಠಸಂಜ್ಞಕನಾದ ನನ್ನ ಸ್ತುತಿವಾಕ್ಯವನ್ನು ಮಿಮರ್ಶಿಸಿ ತಿಳಿ ಈ ಸ್ತೋತ್ರಗಳನ್ನೆಲ್ಲಾ ದಲ್ಲಿ ಸೇವಿಸು.

## English Translation

Understand thoroughly, Maghavan, this my speech, this praise you, which Vasishta recites; be pleased by these prayers at the sacrifice

———

ಸಂಹಿತಾಪಾಠಃ

ಶ್ರುಧೀ ಹವಂ ವಿಪಿಪಾನಸ್ಯಾದ್ರೇರ್ಬೋಧಾ ವಿಪ್ರಸ್ಯಾರ್ಚತೋ ಮನೀಷಾಂ।
ಕೃಷ್ವಾ ದುವಾಂಸ್ಯಂತಮಾ ಸಚೇಮಾ ॥ ೪ ॥

ಪದಪಾಠಃ

ಶ್ರುಧಿ । ಹವಂ । ವಿऽಪಿಪಾನಸ್ಯ । ಅದ್ರೇಃ । ಬೋಧ । ವಿಪ್ರಸ್ಯ । ಅರ್ಚತಃ । ಮನೀಷಾಂ ।
ಕೃಷ್ವ । ದುವಾಂಸಿ । ಅಂತಮಾ । ಸಚಾ । ಇಮಾ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ವಿಪಿಪಾನಸ್ಯ ವಿಪೀತವತೋ ವಾ ಮಮಾದ್ರೇರ್ಗ್ರಾವ್ಣೋ ಹವಮಾಹ್ವಾನಂ ಶ್ರುಧಿ । ಶೃಣು । ತಥಾ ಚ ನಿಗಮಾಂತರಂ । ಗ್ರಾವಭ್ಯೋ ವಾಚಂ ವದತಾ ವದದ್ಭ್ಯಃ । ಋ ೧೦-೯೪-೧ । ಇತಿ । ವಿಪ್ರಸ್ಯ ಪ್ರಾಜ್ಞಸ್ಯ ವಸಿಷ್ಠಸ್ಯಾರ್ಚತಃ ಸ್ತುವತೋ ಮನೀಷಾಂ ಸ್ತುತಿಂ ಬೋಧ । ಬುಧ್ಯಸ್ವ ಚ । ಇಮೇಮಾನಿ ಕ್ರಿಯಮಾಣಾನಿ ದುವಾಂಸಿ ಪರಿಚರಣಾನ್ಯಂತಮಾಂತಿಕತಮಾನಿ ಬುದ್ಧಿಸ್ಥಾನಿ ಸಚಾ ಸಹ ಸಹಾಯಭೂತಃ ಸನ್ಕೃಷ್ವ । ಕುರು ಚ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ವಿಪಿಪಾನಸ್ಯ**—ಸೋಮಪಾನಮಾಡತಕ್ಕ । **ಅದ್ರೇಃ**—ಈ ಕಲ್ಲಿನ । **ಹವಂ**—ಆಹ್ವಾನವನ್ನು । **ಶ್ರುಧಿ**—ಕೇಳು । **ಅರ್ಚತಃ**—ನಿನ್ನನ್ನು ಪೂಜಿಸುವವನೂ । **ವಿಪ್ರಸ್ಯ**—ಪ್ರಾಜ್ಞನೂ ಆದ ವಸಿಷ್ಠನ । **ಮನೀಷಾಂ**—ಸ್ತುತಿಯನ್ನು । **ಬೋಧ**—ತಿಳಿ (ಪರಿಶೀಲಿಸಿ ಸ್ವೀಕರಿಸು) । **ಇಮಾ ದುವಾಂಸಿ**—ನನ್ನ ಈ ಪೂಜಾಕರ್ಮಗಳನ್ನು । **ಅಂತಮಾ ಸಚಾ**—ನಿನ್ನ ಹೃದಯಾಂತರಾಳದಲ್ಲಿ । **ಕೃಷ್ವ**—ಪ್ರವೇಶಿಸುವಂತೆ ಮಾಡು।

ಭಾವಾರ್ಥ

ಎಲೈ ಇಂದ್ರನೇ, ಸೋಮಪಾನಮಾಡತಕ್ಕ ಎಂದರೆ ಸೋಮಲತೆಗಳನ್ನು ಜಜ್ಜುವ ಕಲ್ಲಿನ ಆಹ್ವಾನವನ್ನು (ಶಬ್ದವನ್ನು) ಕೇಳು ನಿನ್ನನ್ನು ಪೂಜಿಸುವವನೂ ಪ್ರಾಜ್ಞನೂ ಆದ ವಸಿಷ್ಠನ ಸ್ತುತಿಯನ್ನು ಪರಿಶೀಲಿಸಿ ಸ್ವೀಕರಿಸು. ನನ್ನ ಈ ಪೂಜಾಕರ್ಮಗಳು ನಿನ್ನ ಹೃದಯದೊಳಗೆ ಪ್ರವೇಶಿಸುವಂತೆ ಮಾಡು

English Translation

Hear the invocation of the (grinding) stone, (of me) repeatedly drinking (the Soma), comprehend the hymn of the adoring sage, and, friendly (with us), take to your near consideration these adorations.

ಸಂಹಿತಾಪಾಠಃ

ನ ತೇ ಗಿರೋ ಅಪಿ ಮೃಷ್ಯೇ ತುರಸ್ಯ ನ ಸುಷ್ಟುತಿಮಸುರ್ಯಸ್ಯ ವಿದ್ವಾನ್ ।

ಸದಾ ತೇ ನಾಮ ಸ್ವಯಶೋ ವಿವಕ್ಮಿ ॥ ೫ ॥

ಪದಪಾಠಃ

ನ । ತೇ । ಗಿರಃ । ಅಪಿ । ಮೃಷ್ಯೇ । ತುರಸ್ಯ । ನ । ಸುಽಸ್ತುತಿಂ । ಅಸುರ್ಯಸ್ಯ । ವಿದ್ವಾನ್ ।

ಸದಾ । ತೇ । ನಾಮ । ಸ್ವಽಯಶಃ । ವಿವಕ್ಮಿ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರ ತುರಸ್ಯ ಶತ್ರೂಣಾಂ ಹಿಂಸಕಸ್ಯ ತೇ ತವ ಗಿರಃ ಸ್ತುತೀರಸುರ್ಯಸ್ಯ । ದ್ವಿತೀಯಾರ್ಥೇ ಷಷ್ಠೀ । ತ್ವದೀಯಮಸುರ್ಯಂ ಬಲಂ ವಿದ್ವಾಞ್ಜಾನನ್ನಹಂ ನಾಪಿ ಮೃಷ್ಯೇ । ಮೃಷಿರ್ಮಾರ್ಜನಕರ್ಮಾ । ನ ಮಾರ್ಜಯಾಮಿ । ನ ಪರಿತ್ಯಜಾಮೀತ್ಯರ್ಥಃ । ಸುಷ್ಟುತಿಂ ಶೋಭನಾಂ ಸ್ತುತಿಂ ಚ ನಾಪಿ ಮೃಷ್ಯೇ । ಮೃಷೇರ್ಮಾರ್ಜನಕರ್ಮತ್ವಮನ್ಯತ್ರಾಪಿ ದೃಶ್ಯತೇ । ತದ್ಯಥಾ । ಮಾ ನೋ ಅಗ್ನೇ ಸಖ್ಯಾ ಪಿತ್ರ್ಯಾಣಿ ಪ್ರ ಮರ್ಷಿಷ್ಠಾಃ । ಋ ೧-೭೧-೧೦ । ಇತಿ । ಕಿಂತು ಸ್ವಯಶೋಽಸಾಧಾರಣಯಶಸ್ತೇ ತವ ನಾಮ ಸ್ತೋತ್ರಂ ಸದೈವ ವಿವಕ್ಮಿ । ಬ್ರವೀಮಿ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ತುರಸ್ಯ**—ಶತ್ರುಹಿಂಸಕನಾದ । **ತೇ**—ನಿನ್ನ । **ಅಸುರ್ಯಸ್ಯ**- ಪ್ರಬಲವಾದ **ಶಕ್ತಿ**ಯನ್ನು । **ವಿದ್ವಾನ್**—ಅರಿತಿರುವ ನಾನು । **ಗಿರಃ**—ನಿನ್ನ ಸ್ತುತಿಗಳನ್ನು । **ನ ಅಪಿ ಮೃಷ್ಯೇ**— ಬಿಡುವುದೇ ಇಲ್ಲ। **ಸುಷ್ಟುತಿಂ**—ಅತ್ಯುತ್ತಮವಾದ ಸ್ತುತಿಯನ್ನು । **ನ**--ಖಂಡಿತವಾಗಿ ನಿಲ್ಲಿಸುವುದಿಲ್ಲ **ಸದಾ**—ಯಾವಾಗಲೂ । **ತೇ** —ನಿನ್ನ । **ಸ್ವಯಶಃ**—ಅಸಾಧಾರಣವಾದ ಯಶಸ್ಸನ್ನು ಪ್ರಶಂಸಿಸುವ । **ನಾಮ**—ಸ್ತೋತ್ರವನ್ನು । **ವಿವಕ್ಮಿ**—ಪಠಿಸುತ್ತೇನೆ

ಭಾವಾರ್ಥ

ಎಲೈ ಇಂದ್ರನೇ, ಶತ್ರುಹಿಂಸಕನಾದ ನಿನ್ನ ಪ್ರಬಲವಾದ ಶಕ್ತಿಯನ್ನು ಅರಿತಿರುವ ನಾನು ನಿನ್ನ ಸ್ತುತಿಪರನವನ್ನು ನಿಲ್ಲಿಸುವುದೇ ಇಲ್ಲ ಅತ್ಯುತ್ತಮವಾದ ಸ್ತುತಿಯನ್ನು ಖಂಡಿತವಾಗಿ ನಿಲ್ಲಿಸುವುದಿಲ್ಲ ನಿನ್ನ ಅಸಾಧಾರಣವಾದ ಯಶಸ್ಸನ್ನು ಪ್ರಶಂಸಿಸುವ ಸ್ತೋತ್ರವನ್ನೇ ಯಾವಾಗಲೂ ಪಠಿಸುತ್ತೇನೆ.

English Translation

Knowing of your strength, I refrain not from the praise nor from the glorification of you, the destroyer (of foes), but ever proclaim your especial care

ಸಂಹಿತಾಪಾಠಃ

ಭೂರಿ ಹಿ ತೇ ಸವನಾ ಮಾನುಷೇಷು ಭೂರಿ ಮನೀಷೀ ಹವತೇ ತ್ವಾಮಿತ್ ।

ಮಾರೇ ಅಸ್ಮನ್ಮಘವಞ್ಜ್ಯೋಕ್ಕಃ ॥ ೬ ॥

ಪದಪಾಠಃ

ಭೂರಿ । ಹಿ । ತೇ । ಸವನಾ । ಮಾನುಷೇಷು । ಭೂರಿ । ಮನೀಷೀ । ಹವತೇ । ತ್ವಾಂ । ಇತ್ ।

ಮಾ । ಆರೇ । ಅಸ್ಮತ್ । ಮಘ್ವವನ್ । ಜ್ಯೋಕ್ । ಕರಿತಿ ಕಃ ॥ ೬ ॥

ಸಾಯಣಭಾಷ್ಯಂ

ಹೇ ಮಘವನ್ ತೇ ತವ ಸವನಾ ಸವನಾನಿ ಸೋಮಾಭಿಷವಣಾನಿ ಭೂರಿ ಭೂರೀಣಿ ಮಾನುಷೇಷ್ವಸ್ಮಾಸು ವರ್ತಂತ ಇತಿ ಶೇಷಃ । ಮನೀಷೀ ಸ್ತೋತಾ ತ್ವಾಮಿತ್ತ್ವಾಮೇವ ಭೂರಿ ಹವತೇ । ನಿತರಾಂ ಹ್ವಯತಿ । ಸ್ತೌತಿ । ಅತೋಽಸ್ಮದಸ್ಮತ್ತ ಆರೇ ದೂರೇ ಜ್ಯೋಕ್ ಚಿರಕಾಲಂ ಮಾ ಕಃ । ಆತ್ಮಾನಂ ಮಾ ಕಾರ್ಷೀಃ । ಕ್ಷಿಪ್ರಮಾತ್ಮಾನಮಸ್ಮದಾಸನ್ನಂ ಕುರ್ವಿತ್ಯರ್ಥಃ ॥

ಪ್ರತಿಪದಾರ್ಥ

**ಮಘವನ್**—ಧನವಂತನಾದ ಎಲೈ ಇಂದ್ರನೇ । **ಮಾನುಷೇಷು**—ಮಾನವರಲ್ಲಿ । **ತೇ**—ನಿನ್ನನ್ನುದ್ದೇಶಿಸಿ ನೆರವೇರಿಸಲ್ಪಡುವ । **ಸವನಾ**—ಯಜ್ಞಕರ್ಮಗಳು । **ಭೂರಿ**—ಅತ್ಯಧಿಕವಾಗಿವೆ । **ಮನೀಷೀ**—ಸ್ತುತಿಕರ್ತನೂ ಸಹ । **ತ್ವಾಮಿತ್**—ನಿನ್ನನ್ನೇ । **ಭೂರಿ ಹಿ**—ಅಧಿಕವಾಗಿ । **ಹವತೇ**—ಸ್ತುತಿಸುತ್ತಾನೆ (ಆದುದರಿಂದ) । **ಅಸ್ಮಾತ್**—ನಮಗಿಂತಲೂ । **ಆರೇ**—ದೂರದಲ್ಲಿದ್ದು । **ಜ್ಯೋಕ್**—ಬಹುಕಾಲ । **ಮಾ ಕಃ**—ನಮ್ಮನ್ನು ಕಾಯುವಂತೆ ಮಾಡಬೇಡ.

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ನೆರವೇರಿಸಲ್ಪಡುವ ಯಜ್ಞಕರ್ಮಗಳು ಮಾನವರಲ್ಲಿ ಅತ್ಯಧಿಕವಾಗಿವೆ ಸ್ತುತಿಕರ್ತನೂ ಸಹ ನಿನ್ನನ್ನೇ ಅಧಿಕವಾಗಿ ಸ್ತುತಿಸುತ್ತಾನೆ ಆದುದರಿಂದ ನಮಗಿಂತಲೂ ದೂರದಲ್ಲಿದ್ದು ನಮ್ಮನ್ನು ಬಹುಕಾಲ ಕಾಯುವಂತೆ ಮಾಡಬೇಡ

English Translation

Many are the sacrifices offered, Maghavan, to you amongst mankind, constantly does the worshipper indeed invoke you, therefore be not far, nor be a long time from us

ಸಂಹಿತಾಪಾಠಃ

ತುಭ್ಯೇದಿಮಾ ಸವನಾ ಶೂರ ವಿಶ್ವಾ ತುಭ್ಯಂ ಬ್ರಹ್ಮಾಣಿ ವರ್ಧನಾ ಕೃಣೋಮಿ ।

ತ್ವಂ ನೃಭಿರ್ಹವ್ಯೋ ವಿಶ್ವಧಾಸಿ ॥ ೭ ॥

ಪದಪಾಠಃ

ತುಭ್ಯ । ಇತ್ । ಇಮಾ । ಸವನಾ । ಶೂರ । ವಿಶ್ವಾ । ತುಭ್ಯಂ । ಬ್ರಹ್ಮಾಣಿ । ವರ್ಧನಾ । ಕೃಣೋಮಿ ।

ತ್ವಂ । ನೃಽಭಿಃ । ಹವ್ಯಃ । ವಿಶ್ವಧಾ । ಅಸಿ ॥ ೭ ॥

ಸಾಯಣಭಾಷ್ಯಂ

ಹೇ ಶೂರ ತುಭ್ಯೇತ್ತುಭ್ಯಮೇವೇಮೇಮಾನಿ ವಿಶ್ವಾ ವಿಶ್ವಾನಿ ಸವನಾ ಸೋಮಾಭಿಷವಣಾನಿ ಮಯಾ ಕ್ರಿಯಂತ ಇತಿ ಶೇಷಃ । ತುಭ್ಯಂ ತ್ವದರ್ಥಮೇವ ವರ್ಧನಾ ವರ್ಧನಾನಿ ಬ್ರಹ್ಮಾಣಿ ಸ್ತೋತ್ರಾಣಿ ಕೃಣೋಮಿ । ಕರೋಮಿ । ತ್ವಮೇವ ನೃಭಿರ್ಯಜ್ಞಾನಾಂ ನೇತೃಭಿರ್ವಿಶ್ವಧಾ ಸರ್ವಪ್ರಕಾರೈರ್ಹವ್ಯೋ ಹ್ವಾತವ್ಯಃ ಸ್ತುತ್ಯೋ ವಾಸಿ ॥

ಪ್ರತಿಪದಾರ್ಥ

**ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ । **ತುಭ್ಯೇತ್**—ನಿನ್ನನ್ನೇ ಉದ್ದೇಶಿಸಿದ । **ವಿಶ್ವಾ**—ಸಮಸ್ತವಾದ । **ಇಮಾ ಸವನಾ**—ಈ ಯಜ್ಞಕರ್ಮಗಳೆಲ್ಲವೂ (ನೆರವೇರುತ್ತವೆ) । **ತುಭ್ಯಂ**—ನಿನಗಾಗಿಯೇ । **ವರ್ಧನಾ**—ಪ್ರವೃದ್ಧಮಾನವಾದ । **ಬ್ರಹ್ಮಾಣಿ**—ಸ್ತೋತ್ರಗಳನ್ನೂ । **ಕೃಣೋಮಿ**—ನಿರ್ಮಿಸುತ್ತೇನೆ । **ತ್ವಂ**—ನೀನೇ । **ನೃಭಿಃ**—ಯಜ್ಞಕರ್ತರಿಂದ । **ವಿಶ್ವಧಾ**—ಅನೇಕಪ್ರಕಾರಗಳಿಂದಲೂ । **ಹವ್ಯಃ**—ಪೂಜಿಸಲ್ಪಡುವವನಾಗಿ । **ಅಸಿ**—ಆಗಿದ್ದೀಯೆ

ಭಾವಾರ್ಥ

ಪರಾಕ್ರಮಿಯಾದ ಎಲೈ ಇಂದ್ರನೇ, ನಿನ್ನನ್ನೇ ಉದ್ದೇಶಿಸಿದ ಸಮಸ್ತವಾದ ಈ ಯಜ್ಞಕರ್ಮಗಳೆಲ್ಲವೂ ನೆರವೇರುತ್ತವೆ ಪ್ರವೃದ್ಧಮಾನವಾದ ಈ ಸ್ತೋತ್ರಗಳನ್ನೂ ನಿನಗರ್ಪಿಸಲು ನಿರ್ಮಿಸುತ್ತೇನೆ ನೀನೇ ಯಜ್ಞಕರ್ತರಿಂದ ಅನೇಕಪ್ರಕಾರಗಳಿಂದಲೂ ಪೂಜಿಸಲ್ಪಡುವವನಾಗಿ ಆಗಿದ್ದೀಯೆ

English Translation

To you, hero, I indeed offer these sacrifices, to you I address these elevating praises you are to be in all ways invoked by the leaders (of rites).

ಸಂಹಿತಾಪಾಠಃ

ನೂ ಚಿನ್ನು ತೇ ಮನ್ಯಮಾನಸ್ಯ ದಸ್ಮೋದಶ್ನುವಂತಿ ಮಹಿಮಾನಮುಗ್ರ ।

ನ ವೀರ್ಯಮಿಂದ್ರ ತೇ ನ ರಾಧಃ ॥ ೮ ॥

ಪದಪಾಠಃ

ನು । ಚಿತ್ । ನು । ತೇ । ಮನ್ಯಮಾನಸ್ಯ । ದಸ್ಮ । ಉತ್ । ಅಶ್ನುವಂತಿ । ಮಹಿಮಾನಂ । ಉಗ್ರ ।

ನ । ವೀರ್ಯಂ । ಇಂದ್ರ । ತೇ । ನ । ರಾಧಃ ॥ ೮ ॥

ಸಾಯಣಭಾಷ್ಯಂ

**ಹೇ ದಸ್ಮ ದರ್ಶನೀಯ ಮನ್ಯಮಾನಸ್ಯ ಸ್ತೂಯಮಾನಸ್ಯ ತೇ ತವ ಮಹಿಮಾನಂ । ನೂ ಚಿದಿತಿ ಪ್ರತಿಷೇಧಾರ್ಥಃ । ನು ಕ್ಷಿಪ್ರಂ ನೂ ಚಿದುದಶ್ನುವಂತಿ । ಕೇಚನ ನ ಪ್ರಾಪ್ನುವಂತಿ । ಹೇ ಉಗ್ರೋದ್ಗೂರ್ಣ ತೇ ತವ ರಾಧೋ ಧನಂ ನೋದಶ್ನುವಂತಿ ॥**

ಪ್ರತಿಪದಾರ್ಥ

**ದಸ್ಮ**—ಆಕರ್ಷಕವಾದ ರೂಪವುಳ್ಳ ಎಲೈ ಇಂದ್ರನೇ । **ಮನ್ಯಮಾನಸ್ಯ**—ಪ್ರಶಂಸೆಗೆ ಅರ್ಹನಾದ । **ತೇ**—ನಿನ್ನ । **ಮಹಿಮಾನಂ**—ಮಹತ್ವವನ್ನು । **ನೂ ಚಿತ್**—ಖಂಡಿತವಾಗಿಯೂ । **ನು ಉದಶ್ನುವಂತಿ**—ಯಾರೂ ಪಡೆಯಲು ಸಾಧ್ಯವಿಲ್ಲ । **ಉಗ್ರ**—ಅತ್ಯಧಿಕವಾದ ಬಲವುಳ್ಳ । **ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ರಾಧಃ**—ಧನವನ್ನೂ । **ನ**—ಯಾರೂ ಪಡೆಯಲಾರರು । **ವೀರ್ಯಂ**—ನಿನ್ನ ಪರಾಕ್ರಮವನ್ನೂ । **ನ**—ಯಾರೂ ಪಡೆಯಲು ಸಾಧ್ಯವಿಲ್ಲ.

ಭಾವಾರ್ಥ

ಆಕರ್ಷಕವಾದ ರೂಪವುಳ್ಳ ಎಲೈ ಇಂದ್ರನೇ, ಪ್ರಶಂಸೆಗೆ ಅರ್ಹನಾದ ನಿನ್ನ ಮಹತ್ವವನ್ನು ಖಂಡಿತವಾಗಿಯೂ ಯಾರೂ ಪಡೆಯಲು ಸಾಧ್ಯವಿಲ್ಲ. ಅತ್ಯಧಿಕವಾದ ಬಲವುಳ್ಳ ಎಲೈ ಇಂದ್ರನೇ, ನಿನ್ನ ಧನವನ್ನೂ ಸಹ ಯಾರೂ ಪಡೆಯಲಾರರು. ನಿನ್ನ ಪರಾಕ್ರಮವನ್ನು ಹೊಂದಲು ಸಹ ಯಾರಿಗೂ ಸಾಧ್ಯವಿಲ್ಲ

English Translation

Indra, of goodly aspect, none attain the greatness of you who are to be honoured, nor, fierce Indra, your heroism, nor your wealth.

———

ಸಂಹಿತಾಪಾಠಃ

ಯೇ ಚ ಪೂರ್ವ ಋಷಯೋ ಯೇ ಚ ನೂತ್ನಾ ಇಂದ್ರ ಬ್ರಹ್ಮಾಣಿ ಜನಯಂತ ವಿಪ್ರಾಃ ।
ಅಸ್ಮೇ ತೇ ಸಂತು ಸಖ್ಯಾ ಶಿವಾನಿ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

ಪದಪಾಠಃ

**ಯೇ । ಚ । ಪೂರ್ವೇ । ಋಷಯಃ । ಯೇ । ಚ । ನೂತ್ನಾಃ । ಇಂದ್ರ । ಬ್ರಹ್ಮಾಣಿ । ಜನಯಂತ । ವಿಪ್ರಾಃ ।**
**ಅಸ್ಮೇ ಇತಿ । ತೇ । ಸಂತು । ಸಖ್ಯಾ । ಶಿವಾನಿ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೯ ॥**

ಸಾಯಣಭಾಷ್ಯಂ

**ಯೇ ಚ ಪೂರ್ವೇ ಪ್ರಾಕ್ತನಾ ಋಷಯೋ ಯೇ ಚ ನೂತ್ನಾ ನೂತನಾ ವಿಪ್ರಾ ಮೇಧಾವಿನ ಋಷಯೋ ಬ್ರಹ್ಮಾಣಿ ಸ್ತೋತ್ರಾಣಿ ಜನಯಂತ ಅಜನಯಂತ ತೇಷ್ವಿವಾಸ್ಮೇ ಅಸ್ಮಾಸ್ವಪಿ ಹೇ ಇಂದ್ರ ತೇ ತವ ಸಖ್ಯಾ ಸಖ್ಯಾನಿ ಶಿವಾನಿ ಭದ್ರಾಣಿ ಸಂತು । ಸ್ಪಷ್ಟಮನ್ಯತ್ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಯೇ ಚ**—ಯಾವ । **ಪೂರ್ವೇ**—ಪುರಾತನರಾದ । **ಋಷಯಃ**—ಋಷಿಗಳೂ । **ಯೇ ಚ**—ಯಾವ । **ನೂತನಾಃ**—ಈಗಿನ ಕಾಲದವರೂ । **ವಿಪ್ರಾಃ**—ಮೇಧಾವಿಗಳೂ ಆದ ಋಷಿಗಳೂ । **ಬ್ರಹ್ಮಾಣಿ**—ಸ್ತೋತ್ರಗಳನ್ನು । **ಜನಯಂತ**—ನಿರ್ಮಿಸಿ ನಿನ್ನನ್ನು ಸ್ತುತಿಸಿದರೋ (ಅವರ ವಿಷಯದಲ್ಲಿ ಇದ್ದಂತೆಯೇ)। **ಅಸ್ಮೇ**—ನಮ್ಮ ವಿಷಯದಲ್ಲೂ ಸಹ । **ತೇ**—ನಿನ್ನ । **ಸಖ್ಯಾ**—ಮಿತ್ರತ್ವವು । **ಶಿವಾನಿ**—ಮಂಗಳಕಾರಕಗಳಾಗಿ । **ಸಂತು**—ಆಗಿರಲಿ (ಎಲೈ ಇಂದ್ರಾದಿ ದೇವತೆಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

ಭಾವಾರ್ಥ

ಎಲೈ ಇಂದ್ರನೇ, ಪುರಾತನರಾದ ಋಷಿಗಳೂ, ಈಗಿನ ಕಾಲದವರೂ ಮೇಧಾವಿಗಳೂ ಆದ ಋಷಿಗಳೂ ನಿನ್ನನ್ನು ಪ್ರಶಂಸಿಸುವ ಸ್ತುತಿಗಳನ್ನು ನಿರ್ಮಿಸಿ ಪಠಿಸಿದಾಗ ಅವರ ವಿಷಯದಲ್ಲಿ ನಿನ್ನ ಮಿತ್ರತ್ವವು ಪ್ರಕಟಿತವಾದಂತೆಯೇ ನಮ್ಮ ವಿಷಯದಲ್ಲೂ ಸಹ ನಿನ್ನ ಮಿತ್ರತ್ವವು ಮಂಗಳಕಾರಕಗಳಾಗಿ ಆಗಿರಲಿ ಎಲೈ ಇಂದ್ರಾದಿದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

May your auspicious regards Indra, be directed towards us, as they have been to those pious sages, ancient or recent, who have originated (your) praises, and do you ever cherish us with blessings

---

## ಇಪ್ಪತ್ತಮೂರನೆಯ ಸೂಕ್ತ

ಸಾಯಣಭಾಷ್ಯಂ

**ಉದು ಬ್ರಹ್ಮಾಣೀತಿ ಷಡೃಚಂ ಷಷ್ಠಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಅನುಕ್ರಮ್ಯತೇ ಚ । ಉದು ಷಡಿತಿ ॥ ಅಗ್ನಿಷ್ಟೋಮೇ ಮಾಧ್ಯಂದಿನೇ ಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರ ಏತತ್ಸೂಕ್ತಂ । ಸೂತ್ರಿತಂ ಚ । ಉದು ಬ್ರಹ್ಮಾಣ್ಯೈರತ ಶ್ರವಸ್ಯಾ ವಜ್ರೀ ವೃಷಭಸ್ತುರಾಷಾಳಿತಿ ಯಾಜ್ಯಾ । ಆ-೫-೧೬ । ಇತಿ॥ ಚಾತುರ್ವಿಂಶಕೇऽಹನಿ ಮಾಧ್ಯಂದಿನಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರ ಏತದಹರಹಃಶಸ್ಯಸಂಜ್ಞಕಂ ಸೂಕ್ತಂ। ಸೂತ್ರಿತಂ ಚ । ಉದು ಬ್ರಹ್ಮಾಣ್ಯಭಿ ತಷ್ಟೇವೇತೀತರಾವಹರಹಃ ಶಸ್ಯೇ । ಆ-೭-೪ । ಇತಿ ॥ ಅಹರ್ಗಣೇಷು ದ್ವಿತೀಯಾದಿಷ್ವಹಃಸ್ವೇತದೇವ ಸೂಕ್ತಂ ॥ ಮಹಾವ್ರತೇऽಪಿ ನಿಷ್ಕೇವಲ್ಯ ಏತತ್ಸೂಕ್ತಂ । ಸೂತ್ರಿತಂ ಚ । ಉದು ಬ್ರಹ್ಮಾಣ್ಯೈರತ ಶ್ರವಸ್ಯಾ ತೇ ಮಹ ಇಂದ್ರೋತ್ಯುಗ್ರೇತಿ ಪಂಚ ಸೂಕ್ತಾನಿ । ಐ. ಆ. ೫-೨-೨ । ಇತಿ ॥**

**ಅನುವಾದವು— ಉದು ಬ್ರಹ್ಮಾಣಿ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಆರನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಉದು ಷಟ್** ಎಂದು ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ಮಾಧ್ಯಂದಿನಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಉದು ಬ್ರಹ್ಮಾಣ್ಯೈರಜೀಷೀ ವಜ್ರೀ ವೃಷಭಸ್ತುರಾಷಾಳಿತಿ ಯಾಜ್ಯಾ** ಎಂಬ ಸೂತ್ರದಿಂದ (ಆ ೫-೧೬) ವಿವೃತವಾಗಿರುವುದು. ಯಜ್ಞದ ಚಾತುರ್ವಿಂಶಿಕವೆಂಬ ದಿನದಲ್ಲಿ ಮಾಧ್ಯಂದಿನಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಶಸ್ತ್ರಮಂತ್ರಗಳನ್ನು ಪಠಿಸುವಾದ ಈ ಸೂಕ್ತವನ್ನು ಪ್ರತಿದಿವಸವೂ ಪಠಿಸಬೇಕಾದ ಶಸ್ಯಸಂಜ್ಞಕಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಉದು ಬ್ರಹ್ಮಾಣ್ಯಭಿ ತಷ್ಟೇವೇತೀತರಾವಹರಹಃಶಸ್ಯೇ** ಎಂಬ ಸೂತ್ರದಿಂದ (ಆ ೭-೪) ವಿವೃತವಾಗಿರುವುದು ಅಹರ್ಗಣಗಳಲ್ಲಿ ಎರಡನೆಯ ದಿವಸದಿಂದ ಮುಂದಿನ ದಿನಗಳಲ್ಲಿ ಈ ಸೂಕ್ತವನ್ನು ಪಠಿಸಬೇಕು. ಮಹಾವ್ರತೇಷ್ಟಿಯಲ್ಲಿಯೂ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ **ಉದು ಬ್ರಹ್ಮಾಣ್ಯೈರತ ಶ್ರವಸ್ಯಾ ತೇ ಮಹ ಇಂದ್ರೋತ್ಯುಗ್ರೇತಿ ಪಂಚ ಸೂಕ್ತಾನಿ** ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು

## ಸೂಕ್ತ—೨೩

ಮಂಡಲ—೭ ‖ ಅನುವಾಕ—೨ ‖ ಸೂಕ್ತ—೨೩ ‖
ಅಷ್ಟಕ—೫ ‖ ಅಧ್ಯಾಯ—೩ ‖ ವರ್ಗ ೭ ‖
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ‖
ಋಷಿಃ—ವಸಿಷ್ಠಃ ‖
ದೇವತಾ—ಇಂದ್ರಃ ‖
ಛಂದಃ—ತ್ರಿಷ್ಟುಪ್ ‖

ಸಂಹಿತಾಪಾಠಃ

ಉದು ಬ್ರಹ್ಮಾಣ್ಯೈರತ ಶ್ರವಸ್ಯೇಂದ್ರಂ ಸಮರ್ಯೇ ಮಹಯಾ ವಸಿಷ್ಠ ।
ಆ ಯೋ ವಿಶ್ವಾನಿ ಶವಸಾ ತತಾನೋಪಶ್ರೋತಾ ಮ ಈವತೋ ವಚಾಂಸಿ ‖

ಪದಪಾಠಃ

ಉತ್ । ಊಂ ಇತಿ । ಬ್ರಹ್ಮಾಣಿ । ಐರತ । ಶ್ರವಸ್ಯಾ । ಇಂದ್ರಂ । ಸ್ಽಮರ್ಯೇ । ಮಹಯ । ವಸಿಷ್ಠ ।
ಆ । ಯಃ । ವಿಶ್ವಾನಿ । ಶವಸಾ । ತತಾನ । ಉಪ್ಽಶ್ರೋತಾ । ಮೇ । ಈವತಃ । ವಚಾಂಸಿ ‖ ೧ ‖

ಸಾಯಣಭಾಷ್ಯಂ

ಶ್ರವಸ್ಯಾನ್ನೇಚ್ಛಯಾ ಬ್ರಹ್ಮಾಣಿ ಸ್ತೋತ್ರಾಣಿ ಹವೀಂಷಿ ಚೇಂದ್ರಾರ್ಥಮುದೈರತ ಸರ್ವ ಋಷಯ ಇತಿ ಶೇಷಃ । ಉ ಇತಿ ಪೂರಣಃ । ಹೇ ವಸಿಷ್ಠ ತ್ವಮಪಿ ಸಮರ್ಯೇ ಯಜ್ಞ ಇಂದ್ರಂ ಮಹಯ ।

**ಸ್ತೋತ್ರೇಣ ಹವಿಷಾ ಚ ಪೂಜಯ । ಅಪಿ ಚ ಯ ಇಂದ್ರೋ ವಿಶ್ವಾನಿ ಭುವನಾನಿ ಶವಸಾ ಬಲೇನಾ ತತಾನ ಸ ಈವತ ಉಪಗಮನವತೋ ಮೇ ಮಮ ವಚಾಂಸಿ ಸ್ತುತಿರೂಪಾಣಿ ವಾಕ್ಯಾನ್ಯುಪಶ್ರೋತಾ ಭವತು** ॥

ಪ್ರತಿಪದಾರ್ಥ

**ಶ್ರವಸ್ಯಾ**—ಅನ್ನೇಚ್ಛೆಯಿಂದ । **ಬ್ರಹ್ಮಾಣಿ**—ಸ್ತೋತ್ರಗಳನ್ನು । **ಉದೈರತ**—ಋಷಿಗಳು ಇಂದ್ರನನ್ನು ದ್ದೇಶಿಸಿ ಪಠಿಸಿದರು । **ವಸಿಷ್ಠ**—ಎಲೈ ವಸಿಷ್ಠನೇ। **ಸಮರ್ಯೇ**—ಯಜ್ಞದಲ್ಲಿ। **ಇಂದ್ರಂ**—ಇಂದ್ರನನ್ನು । **ಮಹಯ**—ಸ್ತುತ್ಯಾದಿಗಳಿಂದ ನೀನೂ ಪೂಜಿಸು । **ಯಃ**—ಯಾವ ಇಂದ್ರನು । **ವಿಶ್ವಾನಿ**—ಸಕಲಲೋಕಗಳನ್ನೂ । **ಶವಸಾ**—ತನ್ನ ಬಲದಿಂದ । **ಆ ತತಾನ**—ವಿಸ್ತರಿಸುವಂತೆ ಮಾಡಿದನೋ (ಅದೇ ಇಂದ್ರನು) । **ಈವತಃ**—ಅವನನ್ನು ಸಮೀಪಿಸಿ ಪೂಜಿಸುವ । **ಮೇ**—ನನ್ನ । **ವಚಾಂಸಿ**—ಸ್ತುತಿರೂಪವಾದ ವಾಕ್ಯಗಳನ್ನು । **ಉಪಶ್ರೋತಾ**—ಶ್ರವಣಮಾಡುವವನಾಗಲಿ

ಭಾವಾರ್ಥ

ಹಿಂದಿನ ಋಷಿಗಳು ಅನ್ನೇಚ್ಛೆಯಿಂದ ಇಂದ್ರನನ್ನುದ್ದೇಶಿಸಿ ಸ್ತೋತ್ರಗಳನ್ನು ಪಠಿಸಿದರು ಎಲೈ ವಸಿಷ್ಠನೇ, ಈ ಯಜ್ಞದಲ್ಲಿ ನೀನೂ ಸಹ ಸ್ತುತ್ಯಾದಿಗಳಿಂದ ಇಂದ್ರನನ್ನು ಪೂಜಿಸು. ಯಾವ ಇಂದ್ರನು ಸಕಲ ಲೋಕಗಳನ್ನೂ ತನ್ನ ಬಲದಿಂದ ವಿಸ್ತರಿಸುವಂತೆ ಮಾಡಿದನೋ ಅದೇ ಇಂದ್ರನು ಅವನನ್ನು ಸಮೀಪಿಸಿ ಪೂಜಿಸುವ ನನ್ನ ಸ್ತುತಿರೂಪವಾದ ವಾಕ್ಯಗಳನ್ನು ಶ್ರವಣಮಾಡುವವನಾಗಲಿ

English Translation

(The sages) have offered prayers to (Indra) for food, worship Indra; Vasishtha, at the sacrifice may that Iadra who has spread out all (the regions) by his might, be the hearer of my words when approaching him

ಸಂಹಿತಾಪಾಠಃ

ಅಯಾಮಿ ಘೋಷ ಇಂದ್ರ ದೇವಜಾಮಿರಿರಜ್ಯಂತ ಯಚ್ಛುರುಧೋ ವಿವಾಚಿ ।
ನಹಿ ಸ್ವಮಾಯುಶ್ಚಿಕಿತೇ ಜನೇಷು ತಾನೀದಂಹಾಂಸ್ಯತಿ ಪರ್ಷ್ಯಸ್ಮಾನ್ ॥

ಪದಪಾಠಃ

ಅಯಾಮಿ । ಘೋಷಃ । ಇಂದ್ರ । ದೇವಃಜಾಮಿಃ । ಇರಜ್ಯಂತ । ಯತ್ । ಶುರುಧಃ । ವಿಃವಾಚಿ ।
ನಹಿ । ಸ್ವಂ । ಆಯುಃ । ಚಿಕಿತೇ । ಜನೇಷು । ತಾನಿ । ಇತ್ । ಅಂಹಾಂಸಿ । ಅತಿ । ಪರ್ಷಿ । ಅಸ್ಮಾನ್ ॥

ಸಾಯಣಭಾಷ್ಯಂ

**ಯದ್ಯದಾ ಶುರುಧಃ । ಶುಚಂ ಸಂರುಂಧಂತೀತಿ ಶುರುಧ ಓಷಧ್ಯಃ । ಇರಜ್ಯಂತ ವರ್ಧಂತೇ ತದಾ ಹೇ ಇಂದ್ರ ತ್ವದರ್ಥಂ ವಿವಾಚಿ ಸ್ತೋತರಿ ದೇವಜಾಮಿರ್ದೇವಾನಾಂ ಬಂಧುರ್ಘೋಷಃ । ಸ್ತುತಿ-**

ರೂಪಃ ಶಬ್ದೋ ಘೋಷಃ । ಅಯಾಮಿ । ಅಕಾರಿ । ಅಪಿ ಚ ಜನೇಷು ಮಧ್ಯೇ ಕೇನಾಪಿ ಸ್ವಮಾಯುಃ ಸ್ವಜೀವಿತಂ ನಹಿ ಚಿಕಿತೇ । ನ ಜ್ಞಾಯತೇ । ಯೈರಾಯುಃ ಕ್ಷೀಯತೇ ತಾನೀತ್ತಾನಿ ಸರ್ವಾಣ್ಯೇವಾಂಹಾಂಸಿ ಪಾಪಾನ್ಯಸ್ಮಾನತಿ ಪರ್ಷಿ । ಅತಿಪಾರಯ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಯತ್—ಯಾವಾಗ । ಶುರುಧಃ—ಓಷಧಿಗಳು । ಇರಜ್ಯಂತ—ಬೆಳೆಯುತ್ತವೆಯೋ (ಆಗ) । ವಿವಾಚಿ—ಸ್ತುತಿಕರ್ತನಲ್ಲಿ । ದೇವಜಾಮಿಃ—ದೇವತೆಗಳಿಗೆ ಪ್ರಿಯವಾದ । ಘೋಷಃ—ಸ್ತುತಿರೂಪವಾದ ಘೋಷವು । ಅಯಾಮಿ—ಪ್ರಕಟಿತವಾಗುತ್ತದೆ । ಜನೇಷು—ಮಾನವರಲ್ಲಿ ಯಾರಿಂದಲೂ । ಸ್ವಂ (ಆಯುಃ)—ತನ್ನ (ಜೀವಿತದ ಪರಿಮಾಣವು) । ನಹಿ ಚಿಕಿತೇ—ಖಂಡಿತವಾಗಿ ಅರಿಯಲ್ಪಡುವುದಿಲ್ಲ । (ಯೈಃ—ಯಾವ ಪಾಪಗಳಿಂದ) । ಆಯುಃ—ಮಾನವನ ಆಯುಸ್ಸು ಕ್ಷಯಿಸುವುದೋ । ತಾನೀತ್ ಅಂಹಾಂಸಿ—ಅಂತಹ ಎಲ್ಲಾ ಪಾಪಗಳಿಂದಲೂ । ಅಸ್ಮಾನ್—ನಮ್ಮನ್ನು । ಅತಿ ಪರ್ಷಿ—ದಾಟಿಸು

ಭಾವಾರ್ಥ

ಎಲೈ ಇಂದ್ರನೇ, ಯಾವಾಗ ಓಷಧಿಗಳು ಬೆಳೆಯುತ್ತವೆಯೋ ಆಗ ಸ್ತುತಿಕರ್ತನಲ್ಲಿ ದೇವತೆಗಳಿಗೆ ಪ್ರಿಯವಾದ ಸ್ತುತಿರೂಪವಾದ ಘೋಷವು ಪ್ರಕಟಿತವಾಗುತ್ತದೆ ಮಾನವರಲ್ಲಿ ಯಾರಿಂದಲೂ ತನ್ನ ಜೀವಿತದ ಪರಿಮಾಣವು ಖಂಡಿತವಾಗಿ ಅರಿಯಲ್ಪಡುವುದಿಲ್ಲ ಯಾವ ಪಾಪಗಳಿಂದ ಮಾನವನ ಆಯುಸ್ಸು ಕ್ಷಯಿಸುವುದೋ ಅಂತಹ ಎಲ್ಲಾ ಪಾಪಗಳಿಂದಲೂ ನಮ್ಮನ್ನು ದಾಟಿಸು.

## English Translation

When, Indra the plants grow up, the sound (of praise) acceptable to the gods, (uttered) by the worshipper, has been raised by no one among men, is his own life understood ; convey us beyound all those sins (by which life is shortened).

ಸಂಹಿತಾಪಾಠಃ

ಯುಜೇ ರಥಂ ಗವೇಷಣಂ ಹರಿಭ್ಯಾಮುಪ ಬ್ರಹ್ಮಾಣಿ ಜುಜುಷಾಣಮಸ್ಥುಃ ।
ವಿ ಬಾಧಿಷ್ಟ ಸ್ಯ ರೋದಸೀ ಮಹಿತ್ವೇಂದ್ರೋ ವೃತ್ರಾಣ್ಯಪ್ರತೀ ಜಘನ್ವಾನ್ ॥

ಪದಪಾಠಃ

ಯುಜೇ । ರಥಂ । ಗೋಽಏಷಣಂ । ಹರಿಽಭ್ಯಾಂ । ಉಪ । ಬ್ರಹ್ಮಾಣಿ । ಜುಜುಷಾಣಂ । ಅಸ್ಥುಃ ।
ವಿ । ಬಾಧಿಷ್ಟ । ಸ್ಯಃ । ರೋದಸೀ ಇತಿ । ಮಹಿಽತ್ವಾ । ಇಂದ್ರಃ । ವೃತ್ರಾಣಿ । ಅಪ್ರತಿ । ಜಘನ್ವಾನ್ ॥

ಸಾಯಣಭಾಷ್ಯಂ

ಗವೇಷಣಂ ಗವಾಂ ಪ್ರಾಪಕಮಿಂದ್ರಸ್ಯ ರಥಂ ಹರಿಭ್ಯಾಮಿಂದ್ರವಾಹಾಭ್ಯಾಂ ಯುಜೇ । ಸ್ತೋತ್ರೈರಹಂ ಯುನಜ್ಮಿ । ಬ್ರಹ್ಮಾಣಿ ಸ್ತೋತ್ರಾಣಿ ಜುಜುಷಾಣಂ ಪರಿವಾರೈಃ ಸೇವ್ಯಮಾನಮಿಂದ್ರಮುಪಾಸ್ಥುಃ । ಉಪಾತಿಷ್ಠಂತ । ಸ್ಯ ಸೋऽಯಮಿಂದ್ರೋ ಮಹಿತ್ವಾ ಮಹತ್ತ್ವೇನ ರೋದಸೀ ದ್ಯಾವಾಪೃಥಿವ್ಯೌ ವಿ ಬಾಧಿಷ್ಟ । ವ್ಯಬಾಧಿಷ್ಟ ಚ । ಅಪಿ ಚೇಂದ್ರೋ ವೃತ್ರಾಣಿ ಶತ್ರೂನಪ್ರತಿ ದ್ವಂದ್ವಾನಿ ಜಘನ್ವಾನ್ ಹತವಾನ್ ॥

ಪ್ರತಿಪದಾರ್ಥ

**ಗವೇಷಣಂ**—ಗೋವುಗಳನ್ನು ಪಡೆಯುವಂತೆ ಮಾಡುವ ಇಂದ್ರನ । **ರಥಂ**—ರಥವನ್ನು । **ಹರಿಭ್ಯಾಂ**—ಅಶ್ವಗಳೊಡನೆ । **ಯುಜೇ**—(ನನ್ನ ಸ್ತುತಿಗಳಿಂದ) ಸೇರಿಕೊಳ್ಳುವಂತೆ ಮಾಡುತ್ತೇನೆ । **ಬ್ರಹ್ಮಾಣಿ**—ಸ್ತುತಿಗಳು । **ಜುಜುಷಾಣಂ**—ಅವುಗಳಿಂದ ತೃಪ್ತಿಯನ್ನು ಹೊಂದುವ ಇಂದ್ರನನ್ನು । **ಉಪಾಸ್ಥುಃ**—ಸಮೀಪಿಸಿವೆ । **ಸ್ಯಃ**—ಪ್ರಸಿದ್ಧನಾದ ಅದೇ ಇಂದ್ರನು । **ಮಹಿತ್ವಾ**—ತನ್ನ ಮಾಹಾತ್ಮ್ಯದಿಂದ । **ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ । **ವಿ ಬಾಧಿಷ್ಟ**—ಮೀರಿಸಿದ್ದಾನೆ । **ಇಂದ್ರಃ**—ಅದೇ ಇಂದ್ರನು । **ವೃತ್ರಾಣಿ**—ಶತ್ರುಗಳನ್ನು । **ಅಪ್ರತಿ**—ಪ್ರತಿಭಟನೆಯಿಲ್ಲದೆ । **ಜಘನ್ವಾನ್**—ಕೊಂದಿದ್ದಾನೆ.

ಭಾವಾರ್ಥ

ಗೋವುಗಳನ್ನು ಪಡೆಯುವಂತೆ ಮಾಡುವ ಇಂದ್ರನ ರಥವನ್ನು ಅಶ್ವಗಳೊಡನೆ ಸೇರುವಂತೆ ನಾನು ಸ್ತುತಿಸಿ ಅವನ್ನು ಸೇರಿಸುತ್ತೇನೆ ಇಂದ್ರನ ತೃಪ್ತ್ಯರ್ಥವಾಗಿ ಸ್ತುತಿಗಳು ಅವನನ್ನು ಸಮೀಪಿಸುತ್ತವೆ. ಪ್ರಸಿದ್ಧನಾದ ಅದೇ ಇಂದ್ರನು ತನ್ನ ಮಾಹಾತ್ಮ್ಯದಿಂದ ದ್ಯಾವಾಪೃಥಿವಿಗಳೆರಡನ್ನೂ ಮೀರಿಸಿದ್ದಾನೆ ಅದೇ ಇಂದ್ರನು ಶತ್ರುಗಳನ್ನು ಅಪ್ರತಿಹತವಾದ ಶಕ್ತಿಯಿಂದ ನಾಶಮಾಡಿದ್ದಾನೆ.

## English Translation

I harness (by praises) the cows-bestowing chariot (of Indra) with his horses (my) prayers have reached him who is pleased (by devotion) he has surpassed in magnitude heaven and earth, slaying the unresisting enemies.

ಸಂಹಿತಾಪಾಠಃ

ಆಪಶ್ಚಿತ್ಪಿಪ್ಯುಃ ಸ್ತರ್ಯೋ೩ ನ ಗಾವೋ ನಕ್ಷನ್ನೃತಂ ಜರಿತಾರಸ್ತ ಇಂದ್ರ ।
ಯಾಹಿ ವಾಯುರ್ನ ನಿಯುತೋ ನೋ ಅಚ್ಛಾ ತ್ವಂ ಹಿ ಧೀಭಿರ್ದಯಸೇ
ವಿ ವಾಜಾನ್ ॥ ೪ ॥

ಪದಪಾಠಃ

ಅಪಃ । ಚಿತ್ । ಪಿಪ್ಯುಃ । ಸ್ತರ್ಯಃ । ನ । ಗಾವಃ । ನಕ್ಷನ್ । ಋತಂ । ಜರಿತಾರಃ । ತೇ । ಇಂದ್ರ ।

ಯಾಹಿ । ವಾಯುಃ । ನ । ನಿಯುತಃ । ನಃ । ಅಚ್ಛ । ತ್ವಂ । ಹಿ । ಧೀಭಿಃ । ದಯಸೇ । ವಿ । ವಾಜಾನ್॥

ಸಾಯಣಭಾಷ್ಯಂ

ಹೇ ಇಂದ್ರ ತ್ವತ್ಪ್ರಸಾದಾದಾಪಶ್ಚಿದಾಪಃ ಸ್ತರ್ಯೋ ನ ಗಾವಃ ಸ್ತರ್ಯೋ ವಶಾ ಗಾವ ಇವ ಪಿಪ್ಯುಃ । ವರ್ಧಂತಾಂ । ಅಪ್ರಸೂತಾ ಗಾವೋ ಮಾಂಸಲಾ ಭವಂತಿ ಹಿ । ತೇ ತವ ಜರಿತಾರಃ ಸ್ತೋತಾರಶ್ಚರ್ತಮುದಕಂ ನಕ್ಷನ್ । ವ್ಯಾಪ್ನುವನ್ । ಅಪಿ ಚ ತ್ವಂ ನೋಽಸ್ಮಾನ್ನಿಯುತೋ ವಾಯುರ್ನ ವಾಯುರಿವಾಚ್ಛ ಯಾಹಿ । ಅಭಿಯಾಹಿ । ತ್ವಂ ಹಿ ಧೀಭಿಃ ಪ್ರಜ್ಞಾಭಿಃ ಕರ್ಮಭಿರ್ವಾ ವಾಜಾನನ್ನಾನಿ ವಿ ದಯಸೇ । ಸ್ತೋತೃಭ್ಯಃ ಪ್ರಯಚ್ಛಸಿ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಸ್ತರ್ಯಃ**—ಕಡಸಿನ ಸ್ಥಿತಿಯಲ್ಲಿರುವ । **ಗಾವಃ ನ**—ಪಶುಗಳು ಮೈತುಂಬಿಕೊಂಡಿರುವಂತೆ । **ಅಪಶ್ಚಿತ್**—ಉದಕಗಳೂ ಕೂಡ । **ಪಿಪ್ಯುಃ**—ಪೂರ್ಣವಾಗಿ ಹರಿಯಲಿ । **ತೇ**—ನಿನ್ನ । **ಜರಿತಾರಃ**—ಸ್ತುತಿಕರ್ತರು । **ಋತಂ**—ಉದಕವನ್ನು । **ನಕ್ಷನ್**—ಹೊಂದಲಿ । **ನಿಯುತಃ**—ನಿಯುತ್ತುಗಳೊಡಗೂಡಿದ । **ವಾಯುಃ ನ**—ವಾಯುವು ವೇಗವಾಗಿ ಬರುವಂತೆ । (**ತ್ವಂ**—ನೀನು) । **ನಃ ಅಚ್ಛ**—ನಮಗಭಿಮುಖನಾಗಿ । **ಯಾಹಿ**—ದಯಮಾಡು । **ತ್ವಂ ಹಿ**—ನೀನಾದರೋ । **ಧೀಭಿಃ**—ಕರ್ಮಗಳಿಂದ ತೃಪ್ತನಾಗಿ । **ವಾಜಾನ್**—ಅನ್ನಗಳನ್ನು । **ವಿ ದಯಸೇ**—ಸ್ತುತಿಕರ್ತರಿಗೆ ಕೊಡುತ್ತೀಯೆ

ಭಾವಾರ್ಥ

ಎಲೈ ಇಂದ್ರನೇ, ಕಡಸಿನ ಸ್ಥಿತಿಯಲ್ಲಿರುವ (ಇನ್ನೂ ಕರುವನ್ನು ಹಾಕದಿರುವ) ಪಶುಗಳು ಮೈತುಂಬಿಕೊಂಡಿರುವಂತೆ ಉದಕಗಳೂಕೂಡ ಪೂರ್ಣವಾಗಿ ಹರಿಯಲಿ. ನಿನ್ನ ಸ್ತುತಿಕರ್ತರು ಉದಕವನ್ನು ಹೊಂದಲಿ ನಿಯುತ್ಸಂಜ್ಞಕವಾದ ಅಶ್ವಗಳಿಂದೊಡಗೂಡಿದ ವಾಯುವು ವೇಗವಾಗಿ ಬರುವಂತೆ ನೀನು ನಮಗಭಿಮುಖನಾಗಿ ದಯಮಾಡು ನೀನು ನಮ್ಮ ಕರ್ಮಗಳಿಂದ ತೃಪ್ತನಾಗಿ ಸ್ತುತಿಕರ್ತರಿಗೆ ಅನ್ನಗಳನ್ನು ದಯಪಾಲಿಸುವವನಾಗಿದ್ದೀಯೆ

English Translation

May the waters increase like young may your worshippers, Indra, possess water (in abundance), come like the wind with the Niyut steeds, for you, (propitiated) by holy rites, verily bestow upon us food.

ಸಂಹಿತಾಪಾಠಃ

ತೇ ತ್ವಾ ಮದಾ ಇಂದ್ರ ಮಾದಯಂತು ಶುಷ್ಮಿಣಂ ತುವಿರಾಧಸಂ ಜರಿತ್ರೇ ।

ಏಕೋ ದೇವತ್ರಾ ದಯಸೇ ಹಿ ಮರ್ತಾನಸ್ಮಿಞ್ಛೂರ ಸವನೇ ಮಾದಯಸ್ವ ॥

ಪದಪಾಠಃ

ತೇ । ತ್ವಾ । ಮದಾಃ । ಇಂದ್ರ । ಮಾದಯಂತು । ಶುಷ್ಮಿಣಂ । ತುವಿऽರಾಧಸಂ । ಜರಿತ್ರೇ ।

ಏಕಃ । ದೇವऽತ್ರಾ । ದಯಸೇ । ಹಿ । ಮರ್ತಾನ್ । ಅಸ್ಮಿನ್ । ಶೂರ । ಸವನೇ । ಮಾದಯಸ್ವ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಾ ತ್ವಾಂ ತೆ ಏತೇ ಮದಾ ಮದಕರಾಃ ಸೋಮಾಃ ಮಾದಯಂತು । ಅಪಿ ಚ ಜರಿತ್ರೇ ಸ್ತೋತ್ರೇ ಶುಷ್ಮಿಣಂ ಬಲವಂತಂ ತುವಿರಾಧಸಂ ಬಹುಧನಂ ಪುತ್ರಂ ಪ್ರಯಚ್ಛತೀತಿ ಶೇಷಃ । ಹೇ ಶೂರ ತ್ವಂ ದೇವತ್ರಾ ದೇವೇಷ್ವೇಕ ಏವ ಮರ್ತಾನ್ಮನುಷ್ಯಾನ್ ದಯಸೇ ಹಿ । ದಯತಿರನುಕಂಪಾರ್ಥಃ ॥ ಅಸ್ಮಿನ್ಸವನೇ ಯಜ್ಞೇ ಮಾದಯಸ್ವ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಮದಾಃ**—ಮದಕಾರಕಗಳಾದ । **ತೇ**—ಈ ಸೋಮರಸಗಳು । **ತ್ವಾ**—ನಿನ್ನನ್ನು । **ಮಾದಯಂತು**—ತೃಪ್ತಿಗೊಳಿಸಲಿ । **ಜರಿತ್ರೇ**—ಸ್ತುತಿಕರ್ತನಿಗೆ । **ಶುಷ್ಮಿಣಂ**—ಶಕ್ತಿವಂತನೂ । **ತುವಿರಾಧಸಂ**—ಅತ್ಯಧಿಕವಾದ ಧನಯುಕ್ತನೂ ಆದ ಪುತ್ರನನ್ನು ಕೊಡು । **ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ । **ದೇವತ್ರಾ**—ದೇವತೆಗಳಲ್ಲೆಲ್ಲಾ । **ಏಕಃ**—ನೀನೊಬ್ಬನೇ । **ಮರ್ತಾನ್**—ಮಾನವರ ವಿಷಯದಲ್ಲಿ । **ದಯಸೇ ಹಿ**—ದಯೆಯನ್ನು ತೋರಿಸುವವನಾಗಿದ್ದೀಯೆ । **ಅಸ್ಮಿನ್ ಸವನೇ**—ಈ ಯಜ್ಞದಲ್ಲಿ । **ಮಾದಯಸ್ವ**—ತೃಪ್ತಿಯನ್ನು ಹೊಂದು

ಭಾವಾರ್ಥ

ಎಲೈ ಇಂದ್ರನೇ, ಮದಕಾರಕಗಳಾದ ಈ ಸೋಮರಸಗಳು ನಿನ್ನನ್ನು ತೃಪ್ತಿಗೊಳಿಸಲಿ ಸ್ತುತಿಕರ್ತನಿಗೆ ಶಕ್ತಿವಂತನೂ ಅತ್ಯಧಿಕವಾದ ಧನಯುಕ್ತನೂ ಆದ ಪುತ್ರನನ್ನು ಕೊಡು ಪರಾಕ್ರಮಿಯಾದ ಎಲೈ ಇಂದ್ರನೇ, ದೇವತೆಗಳಲ್ಲೆಲ್ಲಾ ನೀನೊಬ್ಬನೇ ಮಾನವರ ವಿಷಯದಲ್ಲಿ ದಯೆಯನ್ನು ತೋರಿಸುವವನಾಗಿದ್ದೀಯೆ ಈ ಯಜ್ಞದಲ್ಲಿ ಸೋಮವನ್ನು ಪಾನಮಾಡಿ ತೃಪ್ತನಾಗು

English Translation

May these inebriating draughts exhilarate you, Indra bestow upon the praiser (a son vigorous and wealthy) for you alone amongst the gods are compassionate to mortals be exhilarated here at this sacrifice

ಸಂಹಿತಾಪಾಠಃ

ಏವೇದಿಂದ್ರಂ ವೃಷಣಂ ವಜ್ರಬಾಹುಂ ವಸಿಷ್ಠಾಸೋ ಅಭ್ಯರ್ಚಂತ್ಯರ್ಕೈಃ ।

ಸ ನಃ ಸ್ತುತೋ ವೀರವದ್ಧಾತು ಗೋಮದ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ॥

ಪದಪಾಠಃ

ಏವ । ಇತ್ । ಇಂದ್ರಂ । ವೃಷಣಂ । ವಜ್ರऽಬಾಹುಂ । ವಸಿಷ್ಠಾಸಃ । ಅಭಿ । ಅರ್ಚಂತಿ । ಅರ್ಕೈಃ ।

ಸಃ । ನಃ । ಸ್ತುತಃ । ವೀರऽವತ್ । ಧಾತು । ಗೋऽಮತ್ । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥

ಸಾಯಣಭಾಷ್ಯಂ

ವಸಿಷ್ಠಾಸೋ ವಸಿಷ್ಠಾ ವಜ್ರಬಾಹುಂ ವಜ್ರಕಲ್ಪಬಾಹುಂ ವೃಷಣಂ ಕಾಮಾನಾಂ ವರ್ಷಿತಾರಮಿಂದ್ರಮೇವೇದುಕ್ತೇನ ಪ್ರಕಾರೇಣೈವಾರ್ಕೈರರ್ಚನೀಯೈಃ ಸ್ತೋತ್ರೈರಭ್ಯರ್ಚಂತಿ । ಅಭಿಪೂಜಯಂತಿ । ಸ್ತುತಃ ಸ ಇಂದ್ರೋ ನೋಽಸ್ಮಭ್ಯಂ ವೀರವತ್ಪುತ್ರಾದಿಯುಕ್ತಂ ಗೋಮದ್ಗೋಯುಕ್ತಂ ಚ ಧನಂ ಧಾತು । ದದಾತು । ಸ್ಪಷ್ಟಮನ್ಯತ್ ॥

ಪ್ರತಿಪದಾರ್ಥ

**ವಸಿಷ್ಠಾಸಃ**—ವಸಿಷ್ಠವಂಶೋತ್ಪನ್ನರಾದ ಋಷಿಗಳು । **ವಜ್ರಬಾಹುಂ**—ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನೂ । **ವೃಷಣಂ**—ಕಾಮವರ್ಷಕನೂ ಆದ । **ಇಂದ್ರಂ**—ಇಂದ್ರನನ್ನು । **ಏವೇತ್**—ಮೇಲೆ ಹೇಳಿದ ರೀತಿಯಲ್ಲಿ । **ಅರ್ಕೈಃ**—ಪೂಜ್ಯವಾದ ಸ್ತುತಿಗಳಿಂದ । **ಅಭ್ಯರ್ಚಂತಿ**—ಪೂಜಿಸುತ್ತಾರೆ । **ಸ್ತುತಃ**—ಪ್ರಶಂಸಿತನಾದ । **ಸಃ**—ಅದೇ ಇಂದ್ರನು । **ನಃ**—ನಮಗೆ । **ವೀರವತ್**—ಶಕ್ತಿಯುತರಾದ ಪುತ್ರರಿಂದ ಕೂಡಿದುದೂ । **ಗೋಮತ್**—ಗೋಯುಕ್ತವಾದುದೂ ಆದ ಧನವನ್ನು । **ಧಾತು**—ಕೊಡಲಿ (ಎಲೈ ಇಂದ್ರಾದಿ ದೇವತೆಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

ಭಾವಾರ್ಥ

ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನೂ ಕಾಮವರ್ಷಕನೂ ಆದ ಇಂದ್ರನನ್ನು ವಸಿಷ್ಠವಂಶೋತ್ಪನ್ನರಾದ ಋಷಿಗಳು ಮೇಲೆ ಹೇಳಿದ ರೀತಿಯಲ್ಲಿ ಪೂಜ್ಯವಾದ ಸ್ತುತಿಗಳಿಂದ ಪೂಜಿಸುತ್ತಾರೆ ಪ್ರಶಂಸಿತನಾದ ಅದೇ ಇಂದ್ರನು ನಮಗೆ ಶಕ್ತಿಯುತರಾದ ಪುತ್ರರಿಂದ ಕೂಡಿದುದೂ ಗೋಯುಕ್ತವಾದುದೂ ಆದ ಧನವನ್ನು ಕೊಡಲಿ ಎಲೈ ಇಂದ್ರಾದಿದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

## English Translation

In this manner the Vasishthas glorify with hymns Indra, the showerer, the bearer of the thunderbolt may he so glorified grant us wealth, comprising male posterity and cattle and do you ever cherish us with blessings.



# ಇಪ್ಪತ್ತನಾಲ್ಕನೆಯ ಸೂಕ್ತವು

ಸಾಯಣಭಾಷ್ಯಂ

ಯೋನಿಷ್ಟ ಇಂದ್ರ ಸದನೇ ಅಕಾರೀತಿ ಷಡೃಚಂ ಸಪ್ತಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಅನುಕ್ರಮ್ಯತೇ ಚ । ಯೋನಿರಿತಿ ॥ ಮಹಾವ್ರತೇ ನಿಷ್ಕೇವಲ್ಯ ಏತತ್ಸೂಕ್ತಂ । ಸೂತ್ರಿತಂ ಚ । ಯೋನಿಷ್ಟ ಇಂದ್ರ ಸದನೇ ಅಕಾರೀತ್ಯೇತಸ್ಯ ಚತಸ್ರಃ ಶಸ್ತ್ವೋತ್ತಮಾಮುಪಸಂತತ್ಯೋಪೋತ್ತಮಯಾ ಪರಿದಧಾತಿ । ಐ. ಆ. ೫-೩-೧ । ಇತಿ ॥

**ಅನುವಾದವು—ಯೋನಿಷ್ಟ ಇಂದ್ರ ಸದನೇ ಅಕಾರಿ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಇಂದ್ರನು ದೇವತೆಯು, ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ **ಯೋನಿಃ** ಎಂದು ಮೊದಲಾಗಿ ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ **ಯೋನಿಷ್ಟ ಇಂದ್ರ ಸದನೇ ಅಕಾರೀತ್ಯೇತಸ್ಯ ಚತಸ್ರಃ ಶಸ್ತ್ವೋತ್ತಮಾಮುಪಸಂತತ್ಯೋಪೋತ್ತಮಯಾ ಪರಿದಧಾತಿ** ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು (ಐ ಆ ೫-೩-೧).

## ಸೂಕ್ತ—೨೪

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೨೪ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ— ೮ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೬

ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ಯೋನಿಷ್ಟ ಇಂದ್ರ ಸದನೇ ಅಕಾರಿ ತಮಾ ನೃಭಿಃ ಪುರುಹೂತ ಪ್ರ ಯಾಹಿ ।**
**ಅಸೋ ಯಥಾ ನೋಽವಿತಾ ವೃಧೇ ಚ ದದೋ ವಸೂನಿ ಮಮದಶ್ಚ ಸೋಮೈಃ ॥**

ಪದಪಾಠಃ

ಯೋನಿಃ । ತೇ । ಇಂದ್ರ । ಸದನೇ । ಅಕಾರಿ । ತಂ । ಆ । ನೃಽಭಿಃ । ಪುರುಽಹೂತ । ಪ್ರ । ಯಾಹಿ ।
ಅಸಃ । ಯಥಾ । ನಃ । ಅವಿತಾ । ವೃಧೇ । ಚ । ದದಃ । ವಸೂನಿ । ಮಮದಃ । ಚ । ಸೋಮೈಃ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತವ ಸದನೇ ಸದನಾರ್ಥಂ ಯೋನಿ ಸ್ಥಾನಮಕಾರಿ । ಹೇ ಪುರುಹೂತ ನೃಭಿರ್ಮರುದ್ಭಿಃ ಸಾರ್ಧಂ ತಂ ಯೋನಿಮಾ ಪ್ರ ಯಾಹಿ । ನೋಽಸ್ಮಾಕಂ ಯಥಾವಿತಾ ರಕ್ಷಿತಾಸಃ ಭವಸಿ ನೋಽ-

ಂ ವೃಧೇ ವರ್ಧನಾಯ ಚಾಸಃ । ತಥಾ ಚ ವಸೂನಿ ದದಃ । ಅಸ್ಮಭ್ಯಂ ದೇಹಿ । ಸೋಮ್ಯೈರ-
ಯ್ಯೈರ್ಮಮದಃ । ಮಾದಯಸ್ವ ಚ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಸದನೇ**—ಆಸನಕ್ಕಾಗಿ । **ಯೋನಿಃ**—ಸರಿಯಾದ ಸ್ಥಾನವು । **ರಿ**—ನಿರ್ಮಿತವಾಗಿದೆ । **ಪುರುಹೂತ**—ಅನೇಕರಿಂದ ಕರೆಯಲ್ಪಡತಕ್ಕ ಎಲೈ ಇಂದ್ರನೇ । **ನೃಭಿಃ**—ಮರುತ್ತುಗ ಗೂಡಿ । **ತಂ**—ಆ ಯಜ್ಞಸ್ಥಾನಕ್ಕೆ । **ಆ ಪ್ರ ಯಾಹಿ**—ದಯಮಾಡು । **ನಃ**—ನಮಗೆ । **ಯಥಾ**—ಯಾವ । **ಅವಿತಾ**—ರಕ್ಷಕನಾಗುವಂತೆಯೋ ಆರೀತಿ । **ಅಸಃ**—ಆಗಿರು । (**ನಃ**—ನಮ್ಮ) । **ವೃಧೇ ಚ**—ಅಭಿವೃದ್ಧಿ ಯೂ ಸಹಾಯಮಾಡು । **ವಸೂನಿ ಚ**—ಧನಗಳನ್ನೂ ಕೂಡ । **ದದಃ**—ನಮಗೆ ಕೊಡು । **ಸೋಮ್ಯೈಃ**— ಂದ ದತ್ತವಾದ ಸೋಮರಸಗಳಿಂದ । **ಮಮದಃ**—ತೃಪ್ತಿಯನ್ನು ಹೊಂದು

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಆಸನಕ್ಕಾಗಿ ಸರಿಯಾದ ಸ್ಥಾನವು ನಿರ್ಮಿತವಾಗಿದೆ. ಅನೇಕರ ಆಹ್ವಾನಕ್ಕೆ ಪಾತ್ರ ಎಲೈ ಇಂದ್ರನೇ, ಮರುತ್ತುಗಳೊಡಗೂಡಿ ಆ ಯಜ್ಞಸ್ಥಾನಕ್ಕೆ ದಯಮಾಡು ನಮಗೆ ರಕ್ಷಕನಾಗುವಂತೆ ನಮ್ಮ ಯಲ್ಲಿರು ನಮ್ಮ ಅಭಿವೃದ್ಧಿಗೂ ಕಾರಣನಾಗಿರು ನಮಗೆ ಧನಗಳನ್ನು ಕೊಡು. ನಮ್ಮಿಂದ ದತ್ತವಾದ ಸಗಳಿಂದ ತೃಪ್ತಿಯನ್ನು ಹೊಂದು.

## English Translation

A place has been prepared for you in the sacrificial chamber pro- d to it, invoked of many, along with the leaders (of rites, the Maruts), smuch as you are our protector, (promote our) prosperity grant us ies : be exhilarated by the Soma

ಸಂಹಿತಾಪಾಠಃ

ಗೃಭೀತಂ ತೇ ಮನ ಇಂದ್ರ ದ್ವಿಬರ್ಹಾಃ ಸುತಃ ಸೋಮಃ ಪರಿಷಿಕ್ತಾ ಮಧೂನಿ
ವಿಸೃಷ್ಟಧೇನಾ ಭರತೇ ಸುವೃಕ್ತಿರಿಯಮಿಂದ್ರಂ ಜೋಹುವತೀ ಮನೀಷಾ ॥

ಪದಪಾಠಃ

ೀತಂ । ತೇ । ಮನಃ । ಇಂದ್ರ । ದ್ವಿಽಬರ್ಹಾಃ । ಸುತಃ । ಸೋಮಃ । ಪರಿಽಸಿಕ್ತಾ । ಮಧೂನಿ ।
ಸೃಷ್ಟಽಧೇನಾ । ಭರತೇ । ಸುಽವೃಕ್ತಿಃ । ಇಯಂ । ಇಂದ್ರಂ । ಜೋಹುವತೀ । ಮನೀಷಾ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರ ದ್ವಿಬರ್ಹಾಃ । ಷಷ್ಠ್ಯರ್ಥೇ ಪ್ರಥಮಾ । ದ್ವಿಬರ್ಹಸೋ ದ್ವಯೋಃ ಸ್ಥಾನಯೋಃ ಪರಿವೃಢಸ್ಯ ತೇ ತವ ಮನೋ ಗೃಭೀತಮಸ್ಮಾಭಿಃ ಪರಿಗೃಹೀತಂ । ಸೋಮಶ್ಚ ಸುತೋಽಭಿಷುತಃ । ಮಧೂನಿ ಚ ಪರಿಷಿಕ್ತಾ ಪಾತ್ರೇಷು ಪರಿಷಿಕ್ತಾನಿ । ವಿಸೃಷ್ಟಧೇನಾ ವಿಸೃಷ್ಟಜಿಹ್ವಾ ಮಧ್ಯಮಸ್ವರೇಣೋಚ್ಚಾರ್ಯಮಾಣಾ ಸುವೃಕ್ತಿಃ ಸುಸಮಾಪ್ತಿರಿಯಂ ಮನೀಷಾ ಸ್ತುತಿರಿಂದ್ರಂ ಜೋಹುವತೀ ಭೃಶಮಾಹ್ವಯಂತೀ ಭರತೇ । ಸಂಭ್ರಿಯತೇ ಚ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । **ದ್ವಿಬರ್ಹಾಃ**—ಎರಡು ಲೋಕಗಳಲ್ಲಿಯೂ ವೃದ್ಧಿಯನ್ನು ಹೊಂದಿದ । **ತೇ**—ನಿನ್ನ । **ಮನಃ**—ಮನಸ್ಸು । **ಗೃಭೀತಂ**—ನಮ್ಮಿಂದ ಅರಿಯಲ್ಪಟ್ಟಿದ । **ಸೋಮಃ**—ಸೋಮರಸವೂ । **ಸುತಃ**—ಹಿಂಡಲ್ಪಟ್ಟಿದೆ । **ಮಧೂನಿ**—ಮಧುಗಳೂ ಕೂಡ । **ಪರಿಷಿಕ್ತಾ**—ಪಾತ್ರೆಗಳಲ್ಲಿ ತುಂಬಿವೆ । **ವಿಸೃಷ್ಟಧೇನಾ**—ತಡೆಯಿಲ್ಲದೇ ಸರಿತವಾಗತಕ್ಕದ್ದೂ । **ಸುವೃಕ್ತಿಃ**—ಉತ್ತಮವಾದ ರಚನೆಯುಳ್ಳದ್ದೂ ಆದ । **ಇಯಂ ಮನೀಷಾ**—ಈ ಸ್ತುತಿಯು । **ಇಂದ್ರಂ**—ಇಂದ್ರನನ್ನು । **ಜೋಹುವತೀ**—ಬಹಳವಾಗಿ ಕರೆಯುತ್ತಾ । **ಭರತೇ**—ಆರಾಧಿಸುತ್ತದೆ

ಭಾವಾರ್ಥ

ಎಲೈ ಇಂದ್ರನೇ, ಎರಡು ಲೋಕಗಳಲ್ಲಿಯೂ ವೃದ್ಧಿಯನ್ನು ಹೊಂದಿರುವ ನಿನ್ನ ಮನಸ್ಸು ನಮ್ಮಿಂದ ಅರಿಯಲ್ಪಟ್ಟಿದೆ ಸೋಮರಸವೂ ಹಿಂಡಲ್ಪಟ್ಟಿದೆ ಮಧುಗಳೂ ಪಾತ್ರೆಗಳಲ್ಲಿ ತುಂಬಿವೆ ತಡೆಯಿಲ್ಲದೇ ಸರಿತವಾಗತಕ್ಕದ್ದೂ, ಉತ್ತಮವಾದ ರಚನೆಯುಳ್ಳದ್ದೂ ಆದ ಈ ಸ್ತುತಿಯು ಇಂದ್ರನನ್ನು ಬಹಳವಾಗಿ ಕರೆಯುತ್ತಾ ಅವನನ್ನು ಆರಾಧಿಸುತ್ತದೆ

English Translation

Your purpose, Indra, is apprehended, you who are mighty in the two (worlds) the Soma is effused the sweet juices are poured (into the vessels) this perfect praise uttered with loosened tongue propitiates Indra with repeated invocations

ಸಂಹಿತಾಪಾಠಃ

ಆ ನೋ ದಿವ ಆ ಪೃಥಿವ್ಯಾ ಋಜೀಷಿನ್ನಿದಂ ಬರ್ಹಿಃ ಸೋಮಪೇಯಾಯ ಯಾಹಿ ।
ವಹಂತು ತ್ವಾ ಹರಯೋ ಮದ್ರ್ಯಂಚಮಾಂಗೂಷಮಚ್ಛಾ ತವಸಂ ಮದಾಯ ॥

ಪದಪಾಠಃ

ಆ । ನಃ । ದಿವಃ । ಆ । ಪೃಥಿವ್ಯಾಃ । ಋಜೀಷಿನ್ । ಇದಂ । ಬರ್ಹಿಃ । ಸೋಮಽಪೇಯಾಯ । ಯಾಹಿ ।
ವಹಂತು । ತ್ವಾ । ಹರಯಃ । ಮದ್ರ್ಯಂಚಂ । ಆಂಗೂಷಂ । ಅಚ್ಛ । ತವಸಂ । ಮದಾಯ ॥ ೩ ॥

### ಸಾಯಣಭಾಷ್ಯಂ

ಹೇ ಋಜೀಷಿನ್ನಿಂದ್ರ ನೋಽಸ್ಮಾಕಮಿದಂ ಬರ್ಹಿರಿಮಂ ಯಜ್ಞಂ ಸೋಮಪೇಯಾಯ ದಿವಃ ಸ್ವರ್ಗಾದಾ ಯಾಹಿ । ಆಗಚ್ಛ ।ಪೃಥಿವ್ಯಾ ಅಂತರಿಕ್ಷಾಚ್ಚ । ಆಪಃ ಪೃಥಿವೀತ್ಯಂತರಿಕ್ಷನಾಮಸು ಪಾಠಾತ್ । ಆ ಯಾಹಿ । ಅಪಿ ಚ ತವಸಂ ಪ್ರವೃದ್ಧಂ ಬಲವಂತಂ ವಾ ಮದ್ರ್ಯಂಚಂ ಮದಭಿಮುಖಂ ತ್ವಾ ತ್ವಾಮಾಂಗೂಷಂ ಸ್ತೋತ್ರಮಚ್ಛಾಭಿ ಮದಾಯ ಮದಾರ್ಥಂ ಹರಯೋಽಶ್ವಾ ವಹಂತು ॥

### ಪ್ರತಿಪದಾರ್ಥ

**ಋಜೀಷಿನ್**—ಎಲೈ ಇಂದ್ರನೇ । **ನಃ**—ನಮ್ಮ । **ಇದಂ ಬರ್ಹಿಃ**—ಈ ಯಜ್ಞಸ್ಥಾನಕ್ಕೆ । **ಸೋಮಪೇಯಾಯ**—ಸೋಮಪಾನಾರ್ಥವಾಗಿ । **ದಿವಃ**—ಸ್ವರ್ಗದಿಂದ । **ಆ ಯಾಹಿ**—ದಯಮಾಡು । **ಪೃಥಿವ್ಯಾಃ**—ಪೃಥ್ವಿಯಿಂದಲೂ । **ಆ (ಯಾಹಿ)**—ದಯಮಾಡು । **ತವಸಂ**—ಅಧಿಕವಾದ ಬಲವುಳ್ಳವನೂ । **ಮದ್ರ್ಯಂಚಂ**—ನನಗಭಿಮುಖನಾಗಿರುವವನೂ ಆದ । **ತ್ವಾ**—ನಿನ್ನನ್ನು । **ಆಂಗೂಷಂ ಅಚ್ಛ**—ನಮ್ಮ ಸ್ತುತಿಗಭಿಮುಖವಾಗಿ । **ಮದಾಯ**—ನಿನ್ನ ಹರ್ಷಕ್ಕೋಸ್ಕರ । **ಹರಯಃ**—ನಿನ್ನ ಅಶ್ವಗಳು । **ವಹಂತು**—ನಿನ್ನನ್ನು ಕರೆತರಲಿ.

### ಭಾವಾರ್ಥ

ಎಲೈ ಇಂದ್ರನೇ, ನಮ್ಮ ಈ ಯಜ್ಞಸ್ಥಾನಕ್ಕೆ ಸೋಮಪಾನಾರ್ಥವಾಗಿ ಸ್ವರ್ಗದಿಂದ ದಯಮಾಡು ಪೃಥ್ವಿಯಿಂದಲೂ ದಯಮಾಡು. ಅಧಿಕವಾದ ಬಲವುಳ್ಳವನೂ, ನನಗಭಿಮುಖನಾಗಿರುವವನೂ ಆದ ನಿನ್ನನ್ನು ನಮ್ಮ ಸ್ತುತಿಗಭಿಮುಖವಾಗಿ ನಿನ್ನ ಹರ್ಷಕ್ಕೋಸ್ಕರ ನಿನ್ನ ಅಶ್ವಗಳು ಕರೆತರಲಿ.

### English Translation

Come, Rijishin, from the sky, or from the firmament, to this sacred grass, to drink the Soma : let your horses bear you who are vigorous to my presence to (receive my) praise and for (your) exhilaration.

### ಸಂಹಿತಾಪಾಠಃ

ಆ ನೋ ವಿಶ್ವಾಭಿರೂತಿಭಿಃ ಸಜೋಷಾ ಬ್ರಹ್ಮ ಜುಷಾಣೋ ಹರ್ಯಶ್ವ ಯಾಹಿ ।
ವರೀವೃಜತ್ಸ್ಥವಿರೇಭಿಃ ಸುಶಿಪ್ರಾಸ್ಮೇ ದಧದ್ವೃಷಣಂ ಶುಷ್ಮಮಿಂದ್ರ ॥ ೪ ॥

### ಪದಪಾಠಃ

ಆ । ನಃ । ವಿಶ್ವಾಭಿಃ । ಊತಿಽಭಿಃ । ಸಽಜೋಷಾಃ । ಬ್ರಹ್ಮ । ಜುಷಾಣಃ । ಹರಿಽಅಶ್ವ । ಯಾಹಿ ।
ವರೀವೃಜತ್ । ಸ್ಥವಿರೇಭಿಃ । ಸುಽಶಿಪ್ರ । ಅಸ್ಮೇ ಇತಿ । ದಧತ್ । ವೃಷಣಂ । ಶುಷ್ಮಂ । ಇಂದ್ರ ॥ ೪ ॥

ಸಾಯಣಭಾಷ್ಯಂ

ಹೇ ಹರ್ಯಶ್ವ ಹರಿನಾಮಕಾಶ್ವ ಸುಶಿಪ್ರ ಶೋಭನಹನವಿಂದ್ರ ವಿಶ್ವಾಭಿಃ ಸರ್ವಾಭಿರೂತಿಭೀ ರಕ್ಷಾಭಿಃ ಸಜೋಷಾಃ ಸಂಗತಃ ಸ್ಥವಿರೇಭಿರ್ವೃದ್ಧೈರ್ಮರುದ್ಭಿಃ ಸಹ ವರೀವೃಜಚ್ಛತ್ರೂನ್ ಭೃಶಂ ಹಿಂಸನ್ ಅಸ್ಮೇ ಅಸ್ಮಭ್ಯಂ ವೃಷಣಂ ಕಾಮಾನಾಂ ವರ್ಷಿತಾರು ಶುಷ್ಮಂ ಬಲವಂತಂ ಪುತ್ರಂ ದಧತ್ ಪ್ರಯಚ್ಛನ್ ಬ್ರಹ್ಮ ಸ್ತೋತ್ರಂ ಜುಷಾಣಃ ಸೇವಮಾನೋ ನೋಽಸ್ಮಾನಾ ಯಾಹಿ ॥

ಪ್ರತಿಪದಾರ್ಥ

**ಹರ್ಯಶ್ವ**—ಹರಿಸಂಜ್ಞಕವಾದ ಅಶ್ವವುಳ್ಳವನೂ | **ಸುಶಿಪ್ರ**—ಉತ್ತಮವಾದ ಕನ್ನೆಯುಳ್ಳವನೂ ಆದ **ಇಂದ್ರ**—ಎಲೈ ಇಂದ್ರನೇ | **ವಿಶ್ವಾಭಿಃ**—ಸಮಸ್ತವಾದ | **ಊತಿಭಿಃ**—ರಕ್ಷಣಗಳೊಡನೆ | **ಸಜೋಷಾಃ**—ಕೂಡಿದವನಾಗಿಯೂ | **ಸ್ಥವಿರೇಭಿಃ**—ಪ್ರವೃದ್ಧರಾದ ಮರುತ್ತುಗಳ ಜೊತೆಯಲ್ಲಿ | **ವರೀವೃಜತ್**—ಶತ್ರುಗಳನ್ನು ಹಿಂಸಿಸುತ್ತಲೂ | **ಅಸ್ಮೇ**—ನಮಗೆ | **ವೃಷಣಂ**—ಕಾಮವರ್ಷಕನೂ | **ಶುಷ್ಮಂ**—ಬಲಶಾಲಿಯೂ ಆದ ಪುತ್ರನನ್ನು | **ದಧತ್**—ಕೊಡುತ್ತಲೂ | **ಬ್ರಹ್ಮ**—ಸ್ತೋತ್ರವನ್ನು | **ಜುಷಾಣಃ**—ಸೇವಿಸುತ್ತಲೂ | **ನಃ**—ನಮ್ಮಲ್ಲಿಗೆ | **ಆ ಯಾಹಿ**—ದಯಮಾಡು

ಭಾವಾರ್ಥ

ಹರಿಸಂಜ್ಞಕವಾದ ಅಶ್ವವುಳ್ಳವನೂ, ಉತ್ತಮವಾದ ಕೆನ್ನೆಯುಳ್ಳವನೂ ಆದ ಎಲೈ ಇಂದ್ರನೇ, ಸಮಸ್ತವಾದ ರಕ್ಷಣಗಳೊಡನೆ ಕೂಡಿದವನಾಗಿಯೂ, ಪ್ರವೃದ್ಧರಾದ ಮರುತ್ತುಗಳ ಜೊತೆಯಲ್ಲಿ ಶತ್ರುಗಳನ್ನು ಹಿಂಸಿಸುತ್ತಲೂ, ನಮಗೆ ಕಾಮವರ್ಷಕನೂ ಬಲಶಾಲಿಯೂ ಆದ ಪುತ್ರನನ್ನು ಕೊಡುತ್ತಲೂ, ನಮ್ಮ ಸ್ತುತಿಯನ್ನು ಸೇವಿಸುತ್ತಲೂ ನಮ್ಮಲ್ಲಿಗೆ ದಯಮಾಡು.

## English Translation

Lord of bay steeds, propitiated by our praise, come to us with all your protections, sharing in satisfaction, handsome-chinned, with the ancient (Maruts), overthrowing repeatedly (your) foes, and granting us a strong and vigorous (son)

ಸಂಹಿತಾಪಾಠಃ

ಏಷ ಸ್ತೋಮೋ ಮಹ ಉಗ್ರಾಯ ವಾಹೇ ಧುರೀಇವಾತ್ಯೋ ನ ವಾಜಯನ್ನಧಾಯಿ ।
ಇಂದ್ರ ತ್ವಾಯಮರ್ಕ ಈಟ್ಟೇ ವಸೂನಾಂ ದಿವೀವ ದ್ಯಾಮಧಿ ನಃ ಶ್ರೋಮತಂ ಧಾಃ ॥ ೫ ॥

**ಪದಪಾಠಃ**

ಏಷಃ । ಸ್ತೋಮಃ । ಮಹೇ । ಉಗ್ರಾಯ । ವಾಹೇ । ಧುರಿಽಇವ । ಅತ್ಯಃ । ನ । ವಾಜಯನ್ । ಅಧಾಯಿ ।
ಇಂದ್ರ । ತ್ವಾ । ಅಯಂ । ಅರ್ಕಃ । ಈಟ್ಟೇ । ವಸೂನಾಂ । ದಿವಿಽಇವ । ದ್ಯಾಂ । ಅಧಿ । ನಃ । ಶ್ರೋಮತಂ । ಧಾಃ ॥ ೫ ॥

**ಸಾಯಣಭಾಷ್ಯಂ**

ಮಹೇ ಮಹತ ಉಗ್ರಾಯೋದ್ಗೂರ್ಣಾಯೌಜಸ್ವಿನೇ ವಾ ವಾಹೇ ವಿಶ್ವಸ್ಯ ವೋಢ್ರ ಇಂದ್ರಾಯ ಧುರೀವ ರಥಸ್ಯಾತ್ಯೋ ನಾಶ್ವ ಇವ ವಾಜಯನ್ ಬಲಂ ಕುರ್ವನ್ನೇಷ ಸ್ತೋಮೋಽಧಾಯಿ । ವ್ಯಧಾಯಿ । ಅಥ ಪ್ರತ್ಯಕ್ಷಸ್ತುತಿಃ । ಹೇ ಇಂದ್ರ ಯಂ ತ್ವಾಮಯಮರ್ಕಃ ಸ್ತೋತಾ ವಸೂನಾಂ ವಸೂನಿ ಧನಾನೀಟ್ಟೇ ಯಾಚತೇ ಸ ತ್ವಂ ನೋಽಸ್ಮಾಸು ದ್ಯಾಂ ದಿವೀವ ಶ್ರೋಮತಂ ಶ್ರವಣೀಯಮನ್ನಂ ಪುತ್ರಂ ವಾಧಿ ಧಾಃ । ಅಧಿಧೇಹಿ ॥

**ಪ್ರತಿಪದಾರ್ಥ**

**ಮಹೇ**—ಮಹತ್ಸ್ವರೂಪವುಳ್ಳವನೂ । **ಉಗ್ರಾಯ**—ಅಧಿಕವಾದ ಬಲವುಳ್ಳವನೂ । **ವಾಹೇ**—ವಿಶ್ವವನ್ನು ಧರಿಸಿರುವವನೂ ಆದ ಇಂದ್ರನನ್ನುದ್ದೇಶಿಸಿ । **ಧುರೀವ**—ರಥದ । **ಅತ್ಯೋ ನ**—ಅಶ್ವದಂತೆ । **ವಾಜಯನ್**—ಶಕ್ತ್ಯುತ್ಪಾದಕವಾದ । **ಏಷಃ ಸ್ತೋಮಃ**—ಈ ಸ್ತೋತ್ರವು । **ಅಧಾಯಿ**—ಅರ್ಪಿತವಾಗಿದೆ । **ಇಂದ್ರ**—ಎಲೈ ಇಂದ್ರನೇ । **ಅಯಂ ಅರ್ಕಃ**—ಈ ಸ್ತುತಿಕರ್ತನು । **ವಸೂನಾಂ**—ಧನಗಳನ್ನು । **ಈಟ್ಟೇ**—ಯಾಚಿಸುತ್ತಾನೆ । **ದಿವಿ**—ಅಂತರಿಕ್ಷದಲ್ಲಿ । **ದ್ಯಾಂ ಇವ**—ಸರ್ವಪ್ರಸಿದ್ಧವಾದ ದ್ಯುಲೋಕದಂತೆ ಪ್ರಕಾಶಮಾನವಾದುದೂ । **ಶ್ರೋಮತಂ**—ಪ್ರಸಿದ್ಧವಾದುದೂ ಆದ ಅನ್ನವನ್ನು । **ನಃ**—ನಮಗೆ । **ಅಧಿ ಧಾಃ**—ಒದಗಿಸಿಕೊಡು.

**ಭಾವಾರ್ಥ**

ಮಹತ್ಸ್ವರೂಪವುಳ್ಳವನೂ, ಅಧಿಕವಾದ ಬಲವುಳ್ಳವನೂ, ವಿಶ್ವವನ್ನೆಲ್ಲಾ ಧರಿಸಿರುವವನೂ ಆದ ಇಂದ್ರನನ್ನುದ್ದೇಶಿಸಿ ರಥದ ಅಶ್ವದಂತೆ ಶಕ್ತ್ಯುತ್ಪಾದಕವಾದ ಈ ಸ್ತೋತ್ರವು ಅರ್ಪಿತವಾಗಿದೆ ಎಲೈ ಇಂದ್ರನೇ, ಈ ಸ್ತುತಿಕರ್ತನು ಧನಗಳನ್ನು ಯಾಚಿಸುತ್ತಾನೆ ಅಂತರಿಕ್ಷದಲ್ಲಿ ಸರ್ವಪ್ರಸಿದ್ಧವಾದ ದ್ಯುಲೋಕದಂತೆ ಪ್ರಕಾಶಮಾನವಾದುದೂ, ಪ್ರಸಿದ್ಧವಾದುದೂ ಆದ ಅನ್ನವನ್ನು ನಮಗೆ ಒದಗಿಸಿಕೊಡು

## English Translation

This invigorating praise, like a horse attached to a car, has been addressed to you who are mighty and fierce, the up-bearer (of the world): this your adorer desires of you, Indra, riches grant us sustenance famous as the sky in heaven.

**ಸಂಹಿತಾಪಾಠಃ**

ಏವಾ ನ ಇಂದ್ರ ವಾರ್ಯಸ್ಯ ಪೂರ್ಧಿ ಪ್ರ ತೇ ಮಹೀಂ ಸುಮತಿಂ ವೇವಿದಾಮ।
ಇಷಂ ಪಿನ್ವ ಮಘವದ್ಭ್ಯಃ ಸುವೀರಾಂ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ॥

ಪದಪಾಠಃ

ಏವ । ನಃ । ಇಂದ್ರ । ವಾರ್ಯಸ್ಯ । ಪೂರ್ಧಿ । ಪ್ರ । ತೇ । ಮಹೀಂ । ಸುಽಮತಿಂ । ವೇವಿದಾಮ ।

ಇಷಂ । ಪಿನ್ವ । ಮಘವತ್ಽಭ್ಯಃ । ಸುಽವೀರಾಂ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥

ಸಾಯಣಭಾಷ್ಯಂ

ಹೇ ಇಂದ್ರ ನೋಽಸ್ಮಾನೇವೈವಂ ವಾರ್ಯಸ್ಯ । ತೃತೀಯಾರ್ಥೇ ಷಷ್ಠೀ । ವಾರ್ಯೇಣ ಧನೇನ ಪೂರ್ಧಿ । ಪೂರಯ । ತೇ ತವ ಮಹೀಂ ಮಹತೀಂ ಸುಮತಿಮನುಗ್ರಹಬುದ್ಧಿಂ ಪ್ರ ವೇವಿದಾಮ । ಭೃಶಂ ಲಭೇಮಹಿ । ಮಘವದ್ಭ್ಯೋ ಹವಿಷ್ಮದ್ಭ್ಯೋಽಸ್ಮಭ್ಯಂ ಸುವೀರಾಂ ಶೋಭನಪುತ್ರಾದಿಯುಕ್ತಾಮಿಷಮನ್ನಂ ಪಿನ್ವ । ಪ್ರಯಚ್ಛೇತ್ಯರ್ಥಃ । ಸ್ಪಷ್ಟಮನ್ಯತ್ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ನಃ—ನಮ್ಮನ್ನು । ಏವ—ಇದೇ ರೀತಿಯಲ್ಲಿ । ವಾರ್ಯಸ್ಯ—ಅಪೇಕ್ಷಿತವಾದ ಧನದಿಂದ । ಪ್ರ ಪೂರ್ಧಿ—ಪೂರ್ಣವಾಗಿ ತುಂಬು । ತೇ—ನಿನ್ನ । ಮಹೀಂ—ಮಹತ್ತಾದ । ಸುಮತಿಂ ಅನುಗ್ರಹಾತ್ಮಕವಾದ ಬುದ್ಧಿಯನ್ನು । ವೇವಿದಾಮ—ನಾವು ಅಧಿಕವಾಗಿ ಹೊಂದುವಂತಾಗಲಿ । ಮಘವದ್ಭ್ಯಃ ಹವಿಸ್ಸಿನ ರೂಪದ ಅನ್ನವನ್ನು ಹೊಂದಿರುವ ನಮಗೆ । ಸುವೀರಾಂ—ವೀರಪುತ್ರಾದಿಗಳಿಂದ ಕೂಡಿದ । ಇಷಂ—ಅನ್ನವನ್ನು । ಪಿನ್ವ—ಒದಗಿಸು (ಎಲೈ ಇಂದ್ರಾದಿ ದೇವತೆಗಳೇ) । ಯೂಯಂ—ನೀವು । ನಃ—ನಮ್ಮನ್ನು । ಸದಾ—ಯಾವಾಗಲೂ । ಸ್ವಸ್ತಿಭಿಃ—ಕಲ್ಯಾಣಗಳಿಂದ । ಪಾತ—ರಕ್ಷಿಸಿರಿ

ಭಾವಾರ್ಥ

ಎಲೈ ಇಂದ್ರನೇ, ನಮ್ಮನ್ನು ಇದೇ ರೀತಿಯಲ್ಲಿ ನಮಗೆ ಅಪೇಕ್ಷಿತವಾದ ಧನಗಳಿಂದ ಪೂರ್ಣವಾಗಿ ತುಂಬು ನಿನ್ನ ಮಹತ್ತಾದ ಅನುಗ್ರಹಬುದ್ಧಿಯನ್ನು ನಾವು ಅಧಿಕವಾಗಿ ಹೊಂದುವಂತಾಗಲಿ. ಹವಿಸ್ಸಿನ ರೂಪದ ಅನ್ನವನ್ನು ಹೊಂದಿರುವ ನಮಗೆ ವೀರಪುತ್ರಾದಿಗಳಿಂದ ಕೂಡಿದ ಅನ್ನವನ್ನು ಒದಗಿಸು. ಎಲೈ ಇಂದ್ರಾದಿದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

## English Translation

In this manner, Indra, satisfy us (with the gift) of desirable (wealth): may we repeatedly experience your great favour bestow upon us who are opulent (in offerings) food with male descendants. ever cherish us with blessings.

———

# ಇಪ್ಪತ್ತೈದನೆಯ ಸೂಕ್ತವು

ಸಾಯಣಭಾಷ್ಯಂ

**ಆ ತೇ ಮಹ ಇಂದ್ರೇತಿ ಷಡೃಚಮಷ್ಟಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ। ಆ ತ ಇತ್ಯನುಕ್ರಾಂತಂ ॥ ಮಹಾವ್ರತೇ ನಿಷ್ಕೇವಲ್ಯ ಇದಮಾದೀನಿ ಪಂಚ ಸೂಕ್ತಾನಿ। ಸೂತ್ರಿತಂ ಚ। ಆ ತೇ ಮಹ ಇಂದ್ರೋತ್ಯುಗ್ರೇತಿ ಪಂಚ ಸೂಕ್ತಾನಿ। ಐ ಆ ೫-೨-೨। ಇತಿ ॥**

**ಅನುವಾದವು**— **ಆ ತೇ ಮಹ ಇಂದ್ರ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಇಂದ್ರನು ದೇವತೆಯು; ತ್ರಿಷ್ಟುಪ್‌ಛಂದಸ್ಸು ಅನುಕ್ರಮಣಿಕೆಯಲ್ಲಿ—**ಆ ತೇ** ಎಂದು ಮೊದಲಾಗಿ ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದಿಂದ ಮುಂದಿನ ಐದು ಸೂಕ್ತಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ **ಆ ತೇ ಮಹ ಇಂದ್ರೋತ್ಯುಗ್ರೇತಿ ಪಂಚ ಸೂಕ್ತಾನಿ** ಎಂಬ ವಾಕ್ಯದಿಂದ (ಐ. ಆ. ೫-೨-೨) ನಿರ್ದಿಷ್ಟವಾಗಿರುವುದು

## ಸೂಕ್ತ—೨೫

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೨೫ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ—೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಆ ತೇ ಮಹ ಇಂದ್ರೋತ್ಯುಗ್ರ ಸಮನ್ಯವೋ ಯತ್ಸಮರಂತ ಸೇನಾಃ ।
ಪತಾತಿ ದಿದ್ಯುನ್ನರ್ಯಸ್ಯ ಬಾಹ್ವೋರ್ಮಾ ತೇ ಮನೋ ವಿಷ್ವದ್ರ್ಯಗ್ವಿ-
ಚಾರೀತ್ ॥ ೧ ॥

ಪದಪಾಠಃ

ಆ । ತೇ । ಮಹಃ । ಇಂದ್ರ । ಊತೀ । ಉಗ್ರ । ಸsಮನ್ಯವಃ । ಯತ್ । ಸಂsಅರಂತ । ಸೇನಾಃ ।
ಪತಾತಿ । ದಿದ್ಯುತ್ । ನರ್ಯಸ್ಯ । ಬಾಹ್ವೋಃ । ಮಾ । ತೇ । ಮನಃ । ವಿಷ್ವದ್ರ್ಯಕ್ । ವಿ । ಚಾರೀತ್ ॥೧॥

ಸಾಯಣಭಾಷ್ಯಂ

**ಹೇ ಉಗ್ರೋದ್ಗೂರ್ಣೌಜಸ್ವಿನ್ನಿಂದ್ರ ಯದ್ಯದಾ ಸಮನ್ಯವಃ । ಸಮೋ ಮನ್ಯುರಭಿಮಾನೋ ಯಾಸಾಂ ತಾಃ ಸಮನ್ಯವಃ । ಸೇನಾಃ ಸಮರಂತ ಯುಧ್ಯಂತೇ ಸಂಗಚ್ಛಂತೇ ವಾ ತದಾ ನರ್ಯಸ್ಯ ನರಹಿತಸ್ಯ ಮಹೋ ಮಹತಸ್ತೇ ತವ ಬಾಹ್ವೋಃ ಸ್ಥಿತಾ ದಿದ್ಯುದಾಯುಧಂ । ದಿದ್ಯುದ್ಧ್ವೇತಿರಿತಿ ವಜ್ರನಾಮಸು ಪಾಠಾತ್ । ಊತ್ಯೈತ್ಯಾಸ್ಮದ್ರಕ್ಷಾಯಾ ಆ ಪತಾತಿ । ಆಪತತು । ತವ ವಿಷ್ವದ್ರ್ಯಗ್ವಿಷ್ವಗ್ಗಂತೃ ಮನಶ್ಚ ಮಾ ವಿ ಚಾರೀತ್ । ಅಸ್ಮಾಸ್ವೇವ ಸ್ಥಿರಂ ಭವತು ॥**

ಪ್ರತಿಪದಾರ್ಥ

**ಉಗ್ರ**—ಅತ್ಯಧಿಕವಾದ ಬಲವುಳ್ಳ । **ಇಂದ್ರ**—ಎಲೈ ಇಂದ್ರನೇ । **ಯತ್**—ಯಾವಾಗ । **ಸಮನ್ಯವಃ**—ನಿನ್ನಂತೆಯೇ ಆತ್ಮಾಭಿಮಾನವುಳ್ಳ । **ಸೇನಾಃ**—ಸೇನೆಗಳು । **ಸಮರಂತ**—ಯುದ್ಧದಲ್ಲಿ ಒಟ್ಟಿಗೆ ಕಲೆಯುವವೋ ಆಗ । **ನರ್ಯಸ್ಯ**—ಮಾನವರಿಗೆ ಹಿತಕಾರಿಯೂ । **ಮಹಃ**—ಮಹತ್ಸ್ವರೂಪವುಳ್ಳವನೂ ಆದ । **ತೇ**—ನಿನ್ನ । **ಬಾಹ್ವೋಃ**—ಬಾಹುಗಳಲ್ಲಿರತಕ್ಕ । **ದಿದ್ಯುತ್**—ಪ್ರಕಾಶಮಾನವಾದ ಆಯುಧವು । **ಊತೀ**—ನಮ್ಮ ರಕ್ಷಣಾರ್ಥವಾಗಿ । **ಆ ಪತತಿ**—ಶತ್ರುಗಳ ಮೇಲೆ ಪ್ರಯೋಗಿಸಲ್ಪಡಲಿ । **ವಿಷ್ವದ್ರ್ಯಕ್**—ಸರ್ವವ್ಯಾಪಕವಾದ । **ತೇ ಮನಃ**—ನಿನ್ನ ಮನಸ್ಸೂ ಕೂಡ । **ಮಾ ವಿ ಚಾರೀತ್**—ನಮ್ಮನ್ನು ಬಿಟ್ಟು ಬೇರೆ ಕಡೆ ಸಂಚರಿಸದಿರಲಿ

ಭಾವಾರ್ಥ

ಅತ್ಯಧಿಕವಾದ ಬಲವುಳ್ಳ ಎಲೈ ಇಂದ್ರನೇ, ಯಾವಾಗ ನಿನ್ನಂತೆಯೇ ಆತ್ಮಾಭಿಮಾನವುಳ್ಳ ಸೇನೆಗಳು ಯುದ್ಧದಲ್ಲಿ ಒಟ್ಟಿಗೆ ಕಲೆಯುವವೋ ಆಗ ಮಾನವರಿಗೆ ಹಿತಕಾರಿಯೂ, ಮಹತ್ಸ್ವರೂಪವುಳ್ಳವನೂ ಆದ ನಿನ್ನ ಬಾಹುಗಳಲ್ಲಿರತಕ್ಕ ಪ್ರಕಾಶಮಾನವಾದ ಆಯುಧವು ನಮ್ಮ ರಕ್ಷಣಾರ್ಥವಾಗಿ ಶತ್ರುಗಳ ಮೇಲೆ ಪ್ರಯೋಗಿಸಲ್ಪಡಲಿ ಸರ್ವವ್ಯಾಪಕವಾದ ನಿನ್ನ ಮನಸ್ಸೂ ಕೂಡ ನಮ್ಮನ್ನು ಬಿಟ್ಟು ಬೇರೆ ಕಡೆ ಸಂಚರಿಸದಿರಲಿ

English Translatson

Fierce Indra, when animated by like fierce armies, encounter them . let the bright (weapon) wielded by the arms of you who are mighty and the friend of man, descend for our protection . let not your all-pervading mind wander (away from us).

ಸಂಹಿತಾಪಾಠಃ

ನಿ ದುರ್ಗ ಇಂದ್ರ ಶ್ನಥಿಹ್ಯಮಿತ್ರಾನಭಿ ಯೇ ನೋ ಮರ್ತಾಸೋ ಅಮಂತಿ ।
ಆರೇ ತಂ ಶಂಸಂ ಕೃಣುಹಿ ನಿನಿತ್ಸೋರಾ ನೋ ಭರ ಸಂಭರಣಂ ವಸೂನಾಂ ॥

ಪದಪಾಠಃ

**ನಿ । ದುಃऽಗೇ । ಇಂದ್ರ । ಶ್ನಥಿಹಿ । ಅಮಿತ್ರಾನ್ । ಅಭಿ । ಯೇ । ನಃ । ಮರ್ತಾಸಃ । ಅಮಂತಿ ।**
**ಆರೇ । ತಂ । ಶಂಸಂ । ಕೃಣುಹಿ । ನಿನಿತ್ಸೋಃ । ಆ । ನಃ । ಭರ । ಸಂऽಭರಣಂ । ವಸೂನಾಂ ॥ ೨ ॥**

ಸಾಯಣಭಾಷ್ಯಂ

ಹೇ ಇಂದ್ರ ದುರ್ಗೇ ಯುದ್ಧೇ ಯೇ ಮರ್ತಾಸೋ ಮರ್ತಾ ಅಭ್ಯಭಿಮುಖಾಃ ಸಂತೋ ನೋ-ಽಸ್ಮಾನಮಂತಿ ಅಭಿಭವಂತಿ ತಾನಮಿತ್ರಾಞ್ಛತ್ರೂನ್ನಿ ಶ್ನಥಿಹಿ। ನಿಜಹಿ । ಅಪಿ ಚ ನಿನಿತ್ಸೋರಸ್ಮಾನ್ನಿಂದಿತು-ಮಿಚ್ಛತೋ ನರಸ್ಯ ತಂ ಶಂಸಮಾಶಂಸನಮಾರೇ ದೂರೇ ಕೃಣುಹಿ । ಕುರು । ಅಪಿ ಚ ನೋಽಸ್ಮಭ್ಯಂ ವಸೂನಾಂ ಧನಾನಾಂ ಸಂಭರಣಂ ಸಮೂಹಮಾ ಭರ । ಆಹರ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ದುರ್ಗೇ**—ಕಠಿನವಾದ ಯುದ್ಧದಲ್ಲಿ । **ಯೇ ಮರ್ತಾಸಃ**—ಯಾವ ಮಾನವರು । **ಅಭಿ**—ನಮಗೆ ಎದುರುಬಿದ್ದು । **ನಃ**—ನಮ್ಮನ್ನು । **ಅಮಂತಿ**—ಸೋಲಿಸಲು ಪ್ರಯತ್ನಿಸುವರೋ । **ಅಮಿ-ತ್ರಾನ್**—ಅಂತಹ ಶತ್ರುಗಳನ್ನು । **ನಿ ಶ್ನಥಿಹಿ**—ಪೂರ್ಣವಾಗಿ ಮರ್ದನಮಾಡು । **ನಿನಿತ್ಸೋಃ**—ನಮ್ಮನ್ನು ನಿಂದಿಸಲಿಚ್ಛಿಸುವ ಶತ್ರುವಿನ । **ತಂ ಶಂಸಂ**—ಆ ಅಭಿಲಾಷೆಯನ್ನು । **ಆರೇ**—ದೂರದಲ್ಲಿರುವಂತೆ । **ಕೃಣುಹಿ**—ಮಾಡು । **ನಃ**—ನಮಗೆ । **ವಸೂನಾಂ**—ಧನಗಳ । **ಸಂಭರಣಂ**—ಸಮೂಹವನ್ನು । **ಆ ಭರ**—ತಂದೊದಗಿಸು.

ಭಾವಾರ್ಥ

ಎಲೈ ಇಂದ್ರನೇ, ಕಠಿನವಾದ ಯುದ್ಧದಲ್ಲಿ ಯಾವ ಮಾನವರು ನಮಗೆ ಎದುರುಬಿದ್ದು ನಮ್ಮನ್ನು ಸೋಲಿಸಲು ಪ್ರಯತ್ನಿಸುವರೋ ಅಂತಹ ಶತ್ರುಗಳನ್ನು ಪೂರ್ಣವಾಗಿ ಮರ್ದನಮಾಡು. ನಮ್ಮನ್ನು ನಿಂದಿಸಲಿಚ್ಛಿಸುವ ಶತ್ರುವಿನ ಆ ಅಭಿಲಾಷೆಯನ್ನು ದೂರದಲ್ಲಿರುವಂತೆ ಮಾಡು. ನಮಗೆ ಧನಗಳ ಸಮೂಹವನ್ನು ತಂದೊದಗಿಸು.

## English Translation

Destroy, Indra, our adversaries in battle, those men who overpower us . remove far from us the calumny of the reviler : bring to us abundance of treasures.

ಸಂಹಿತಾಪಾಠಃ

ಶತಂ ತೇ ಶಿಪ್ರಿನ್ನೂತಯಃ ಸುದಾಸೇ ಸಹಸ್ರಂ ಶಂಸಾ ಉತ ರಾತಿರಸ್ತು ।
ಜಹಿ ವಧರ್ವನುಷೋ ಮರ್ತ್ಯಸ್ಯಾಸ್ಮೇ ದ್ಯುಮ್ನಮಧಿ ರತ್ನಂ ಚ ಧೇಹಿ ॥

ಪದಪಾಠಃ

ಶತಂ । ತೇ । ಶಿಪ್ರಿನ್ । ಊತಯಃ । ಸುಽದಾಸೇ । ಸಹಸ್ರಂ । ಶಂಸಾಃ । ಉತ । ರಾತಿಃ । ಅಸ್ತು ।
ಜಹಿ । ವಧಃ । ವನುಷಃ । ಮರ್ತ್ಯಸ್ಯ । ಅಸ್ಮೇ ಇತಿ । ದ್ಯುಮ್ನಂ । ಅಧಿ । ರತ್ನಂ । ಚ । ಧೇಹಿ ॥ ೩ ॥

ಸಾಯಣಭಾಷ್ಯಂ

ಹೇ ಶಿಪ್ರಿನ್ನುಷ್ಣೀಷಿನ್ನಿಂದ್ರ ತೇ ತ್ವದೀಯಾಃ ಶತಂ ಬಹ್ವ್ಯ ಊತಯೋ ರಕ್ಷಾಃ ಸುದಾಸೇ ಶೋಭನದಾನಾಯ ಮಹ್ಯಂ ಸಂತು | ಸಹಸ್ರಂ ಶಂಸಾಃ ಶಂಸನೀಯಾಃ ಕಾಮಾಶ್ಚ ಸಂತು | ಉತಾಪಿ ಚ ರಾತಿರ್ಧನಮಸ್ತು | ವನುಷೋ ಹಿಂಸಕಸ್ಯ ಮರ್ತ್ಯಸ್ಯ ವಧೋ ಹಿಂಸಾಸಾಧನಮಾಯುಧಂ ಚ ಜಹಿ | ಅಪಿ ಚಾಸ್ಮೇ ಅಧ್ಯಸ್ಮಾಸು ದ್ಯುಮ್ನಂ ದೀಪ್ತಿಮದನ್ನಂ ಯಶೋ ವಾ ರತ್ನಂ ಚ ಧೇಹಿ | ತಥಾ ಚ ಯಾಸ್ಕಃ | ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವಾ | ಅಸ್ಮೇ ದ್ಯುಮ್ನಮಧಿ ರತ್ನಂ ಚ ಧೇಹಿ | ಅಸ್ಮಾಸು ದ್ಯುಮ್ನಂ ಚ ರತ್ನಂ ಚ ಧೇಹಿ | ನಿ. ೫-೫ | ಇತಿ ||

ಪ್ರತಿಪದಾರ್ಥ

**ಶಿಪ್ರಿನ್**—ಉತ್ತಮವಾದ ಕೆನ್ನೆಯುಳ್ಳ ಎಲೈ ಇಂದ್ರನೇ | **ತೇ**—ನಿನ್ನ | **ಶತಂ**—ಶತಸಂಖ್ಯಾಕವಾದ | **ಊತಯಃ**—ರಕ್ಷಣೆಗಳು | **ಸುದಾಸೇ**—ಉತ್ತಮವಾಗಿ ದಾನಮಾಡುವ ನನಗೆ ಮೀಸಲಾಗಿ ಇರಲಿ | **ಶಂಸಾಃ**—ನಿನ್ನ ಆಶೀರ್ವಚನಗಳು | **ಸಹಸ್ರಂ**—ಸಹಸ್ರಸಂಖ್ಯೆಯಲ್ಲಿರಲಿ | **ಉತ**—ಮತ್ತು | **ರಾತಿಃ**—ನಿನ್ನ ಧನದಾನವೂ | **ಅಸ್ತು**—ಇರಲಿ | **ವನುಷಃ**—ನಮಗೆ ಹಿಂಸಕನಾದ | **ಮರ್ತ್ಯಸ್ಯ**—ಮಾನವನ | **ವಧಃ**—ವಧಸಾಧನವಾದ ಆಯುಧವನ್ನು | **ಜಹಿ**—ನಾಶಪಡಿಸು | **ಅಸ್ಮೇ ಅಧಿ**—ನಮಗೆ (ನಮ್ಮಲ್ಲಿ) | **ದ್ಯುಮ್ನಂ**—ಕಾಂತಿಯುತವಾದ | **ರತ್ನಂ ಚ**—ರತ್ನವನ್ನೂ | **ಧೇಹಿ**—ತುಂಬಿಡು

ಭಾವಾರ್ಥ

ಉತ್ತಮವಾದ ಕೆನ್ನೆಯುಳ್ಳ ಎಲೈ ಇಂದ್ರನೇ, ನಿನ್ನ ಶತಸಂಖ್ಯಾಕವಾದ ರಕ್ಷಣೆಗಳು ಉದಾರವಾಗಿ ದಾನ ಮಾಡುವ ನನಗೆ ಮೀಸಲಾಗಿರಲಿ. ನಿನ್ನ ಆಶೀರ್ವಚನಗಳು ನನ್ನ ಮೇಲೆ ಸಹಸ್ರಸಂಖ್ಯೆಯಲ್ಲಿರಲಿ ಮತ್ತು ನಿನ್ನ ಧನವೂ ನನಗಾಗಿಯೇ ಇರಲಿ. ನಮಗೆ ಹಿಂಸಕನಾದ ಮಾನವನ ವಧಸಾಧನವಾದ ಆಯುಧವನ್ನು ನಾಶಪಡಿಸು. ನಮ್ಮಲ್ಲಿ ಕಾಂತಿಯುತವಾದ ರತ್ನವನ್ನೂ ತುಂಬಿಡು

English Translation

May hundreds of your protections, handsome-chinned, be (secured) to the liberal donor (of oblations) may thousands of blessings be bestowed (upon me) as well as wealth, cast the fatal weapon on the mischievous mortal, grant us food and wealth

ಸಂಹಿತಾಪಾಠಃ

ತ್ವಾವತೋ ಹೀಂದ್ರ ಕ್ರತ್ವೇ ಅಸ್ಮಿ ತ್ವಾವತೋಽವಿತುಃ ಶೂರ ರಾತೌ |

ವಿಶ್ವೇದಹಾನಿ ತವಿಷೀವ ಉಗ್ರ ಓಕಃ ಕೃಣುಷ್ವ ಹರಿವೋ ನ ಮರ್ಧೀಃ ||

ಪದಪಾಠಃ

ತ್ವಾಽವತಃ । ಹಿ । ಇಂದ್ರ । ಕ್ರತ್ವೇ । ಅಸ್ಮಿ । ತ್ವಾಽವತಃ । ಅವಿತುಃ । ಶೂರ । ರಾತೌ ।

ವಿಶ್ವಾ । ಇತ್ । ಅಹಾನಿ । ತವಿಷೀಽವಃ । ಉಗ್ರ । ಓಕಃ । ಕೃಣುಷ್ವ । ಹರಿಽವಃ । ನ । ಮರ್ಧಿಃ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಾವತಸ್ತ್ವತ್ಸದೃಶಸ್ಯ ಕ್ರತ್ವೇ ಕರ್ಮಣೇಽಸ್ಮಿ । ಭವಾಮಿ ಹಿ । ಹೇ ಶೂರ ಅವಿತುರ್ರಕ್ಷಿತುಸ್ತ್ವಾವತಸ್ತ್ವತ್ಸದೃಶಸ್ಯ ರಾತೌ ದಾನೇ ಚಾಸ್ಮೀತಿ ಶೇಷಃ । ಹೇ ತವಿಷೀವೋ ಬಲವನ್ನುಗ್ರೌಜಸ್ವಿನ್ನಿಂದ್ರ ವಿಶ್ವೇದ್ವಿಶ್ವಾನ್ಯೇವಾಹಾನ್ಯೋಕೋಽಸ್ಮಾಕಂ ಸ್ಥಾನಂ ಕೃಣುಷ್ವ । ಕುರು । ಹೇ ಹರಿವೋ ಹರಿವನ್ ನ ಮರ್ಧೀಃ । ಅಸ್ಮಾನ್ನ ಹಿಂಸ್ಯಾಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । **ತ್ವಾವತಃ**—ನಿನಗೆ ಸದೃಶವಾದ । **ಕ್ರತ್ವೇ**—ಕರ್ಮದಲ್ಲಿ । **ಅಸ್ಮಿ ಹಿ**—ನಿರತನಾಗಿಯೇ ಇದ್ದೇನೆ । **ಶೂರ**—ಪರಾಕ್ರಮಿಯಾದ ಇಂದ್ರನೇ । **ಅವಿತುಃ**—ರಕ್ಷಕನಾದ । **ತ್ವಾವತಃ**—ನಿನಗೆ ಸದೃಶವಾದ । **ರಾತೌ**—ದಾನಕ್ಕೆ ಪಾತ್ರನಾಗಿಯೇ ಇದ್ದೇನೆ । **ತವಿಷೀವಃ**—ಅತ್ಯಂತ ಬಲಶಾಲಿಯಾದವನೂ । **ಉಗ್ರ**—ಭಯಂಕರವಾದ ಶಕ್ತಿಯುಳ್ಳವನೂ ಆದ ಎಲೈ ಇಂದ್ರನೇ । **ವಿಶ್ವೇತ್**—ಸಮಸ್ತವಾದ । **ಅಹಾನಿ**—ದಿನಗಳಲ್ಲೂ । **ಓಕಃ**—ನಮಗೆ ನಿವಾಸಸ್ಥಾನವನ್ನು । **ಕೃಣುಷ್ವ**—ನಿರ್ಮಿಸಿಕೊಡು । **ಹರಿವಃ**—ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ । **ನ ಮರ್ಧೀಃ**—ನಮ್ಮನ್ನು ಹಿಂಸಿಸಬೇಡ.

ಭಾವಾರ್ಥ

ಎಲೈ ಇಂದ್ರನೇ, ನಿನಗೆ ಸದೃಶವಾದ ಕರ್ಮದಲ್ಲಿ ನಿರತನಾಗಿಯೇ ಇದ್ದೇನೆ. ಪರಾಕ್ರಮಿಯಾದ ಇಂದ್ರನೇ, ರಕ್ಷಕನಾದ ನಿನಗೆ ಸದೃಶವಾದ ದಾನಕ್ಕೆ ಪಾತ್ರನಾಗಿಯೇ ಇದ್ದೇನೆ. ಅತ್ಯಂತ ಬಲಶಾಲಿಯಾದವನೂ ಭಯಂಕರವಾದ ಶಕ್ತಿಯುಳ್ಳವನೂ ಆದ ಎಲೈ ಇಂದ್ರನೇ, ನಮ್ಮ ಆಯುಸ್ಸು ಎಲ್ಲಿಯವರೆಗಿರುವುದೋ ಅಲ್ಲಿಯ ಪರ್ಯಂತ ನಮಗೆ ಶಾಶ್ವತವಾದ ನಿವಾಸಸ್ಥಾನವನ್ನು ನಿರ್ಮಿಸಿಕೊಡು. ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, ನಮ್ಮನ್ನು ಹಿಂಸಿಸಬೇಡ.

English Translation

I am (in dependence), Indra, upon the acts of such as you are, upon the liberality of a protector, here, such as you vigorous and fierce Indra, give us a dwelling for all our days . lord of bay steeds, do us no harm.

ಸಂಹಿತಾಪಾಠಃ

ಕುತ್ಸಾ ಏತೇ ಹರ್ಯಶ್ವಾಯ ಶೂಷಮಿಂದ್ರೇ ಸಹೋ ದೇವಜೂತಮಿಯಾನಾಃ ।

ಸತ್ರಾ ಕೃಧಿ ಸುಹನಾ ಶೂರ ವೃತ್ರಾ ವಯಂ ತರುತ್ರಾಃ ಸನುಯಾಮ ವಾಜಂ॥

ಪದಪಾಠಃ

ಕುತ್ಸಾಃ । ಏತೇ । ಹರಿsಅಶ್ವಾಯ । ಶೂಷಂ । ಇಂದ್ರೇ । ಸಹಃ । ದೇವsಜೂತಂ । ಇಯಾನಾಃ ।

ಸತ್ರಾ । ಕೃಧಿ । ಸುsಹನಾ । ಶೂರ । ವೃತ್ರಾ । ವಯಂ । ತರುತ್ರಾಃ । ಸನುಯಾಮ । ವಾಜಂ ॥ ೫ ॥

ಸಾಯಣಭಾಷ್ಯಂ

ಏತೇ ವಯಂ ವಸಿಷ್ಠಾ ಹರ್ಯಶ್ವಾಯ ಹರಿನಾಮಕಾಶ್ವಾಯೇಂದ್ರಾಯ ಶೂಷಂ ಸುಖಕರಂ ಸ್ತೋತ್ರಂ ಕುತ್ಸಾಃ ಕುರ್ವಾಣಾಃ ॥ ಕರೋತೇಃ ಕುತ್ಸಶಬ್ದನಿಷ್ಪತ್ತಿಃ ॥ ಇಂದ್ರೇ ದೇವಜೂತಂ ದೇವೈಃ ಪ್ರೇರಿತಂ ಸಹೋ ಬಲಮಿಯಾನಾ ಯಾಚಮಾನಾಸ್ತರುತ್ರಾ ದುರ್ಗಾಣಿ ತೀರ್ಣಾಃ ಸಂತೋ ವಾಜಂ ಬಲಂ ಸನುಯಾಮ । ಲಭೇಮಹಿ । ಅಪಿ ಚ ಹೇ ಶೂರ ವೃತ್ರಾ ವೃತ್ರಾಣಿ ಶತ್ರೂನ್ ಸುಹನಾ ಹಂತುಂ ಸುಶಕಾನಿ ಸತ್ರಾ ಸರ್ವದಾ ಕೃಧಿ । ಕುರು ॥

ಪ್ರತಿಪದಾರ್ಥ

ಏತೇ ವಯಂ—ವಸಿಷ್ಠವಂಶೋತ್ಪನ್ನರಾದ ನಾವು । **ಹರ್ಯಶ್ವಾಯ**—ಹರಿಸಂಜ್ಞಕವಾದ ಅಶ್ವವುಳ್ಳ ಇಂದ್ರನನ್ನುದ್ದೇಶಿಸಿ । **ಶೂಷಂ**—ಸುಖಕಾರಕವಾದ ಸ್ತೋತ್ರವನ್ನು । **ಕುತ್ಸಾಃ**—ನಿರ್ಮಿಸುತ್ತಲೂ । **ಇಂದ್ರೇ**—ಇಂದ್ರನಲ್ಲಿ । **ದೇವಜೂತಂ**—ದೇವತೆಗಳಿಂದ ಪ್ರೇರಿತವಾದ । **ಸಹಃ**—ಬಲವನ್ನು । **ಇಯಾನಾಃ**—ಯಾಚಿಸುತ್ತಲೂ । **ತರುತ್ರಾಃ**—ಕಠಿನವಾದ ಸನ್ನಿವೇಶಗಳನ್ನು ದಾಟುತ್ತಲೂ । **ವಾಜಂ**—ಅನ್ನವನ್ನು । **ಸನುಯಾಮ**—ಹೊಂದುವಂತಾಗಲಿ । **ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ । **ವೃತ್ರಾ**—ಶತ್ರುಗಳನ್ನು । **ಸುಹನಾ**—ಸುಲಭವಾಗಿ ಕೊಲ್ಲುವ ಶಕ್ತಿಯನ್ನು । **ಸತ್ರಾ**—ಸರ್ವದಾ । **ಕೃಧಿ**—ಉತ್ಪನ್ನಮಾಡು

ಭಾವಾರ್ಥ

ವಸಿಷ್ಠವಂಶೋತ್ಪನ್ನರಾದ ನಾವು ಹರಿಸಂಜ್ಞಕವಾದ ಅಶ್ವವುಳ್ಳ ಇಂದ್ರನನ್ನುದ್ದೇಶಿಸಿ ಸುಖಕಾರಕವಾದ ಸ್ತೋತ್ರವನ್ನು ನಿರ್ಮಿಸುತ್ತಲೂ ಇಂದ್ರನಲ್ಲಿ ದೇವತೆಗಳಿಂದ ಪ್ರೇರಿತವಾದ ಬಲವನ್ನು ಯಾಚಿಸುತ್ತಲೂ ಕಠಿನವಾದ ಸನ್ನಿವೇಶಗಳನ್ನು ದಾಟುತ್ತಲೂ ಅನ್ನವನ್ನು ಹೊಂದುವಂತಾಗಲಿ ಪರಾಕ್ರಮಿಯಾದ ಎಲೈ ಇಂದ್ರನೇ, ಶತ್ರುಗಳನ್ನು ಸುಲಭವಾಗಿ ಕೊಲ್ಲುವ ಶಕ್ತಿಯನ್ನು ಸರ್ವದಾ ಉತ್ಪನ್ನಮಾಡು.

## English Translation

These (Vasishthas) are offering grateful (adoration) to the lord of bay steeds, soliciting the strength assigned by the gods to Indra . make our enemies, Indra, easy to be overcome, and may we, safe from peril, enjoy abundance.

ಸಂಹಿತಾಪಾಠಃ

ಏವಾ ನ ಇಂದ್ರ ವಾರ್ಯಸ್ಯ ಪೂರ್ಧಿ ಪ್ರ ತೇ ಮಹೀಂ ಸುಮತಿಂ ವೇವಿ-
ದಾಮ ।
ಇಷಂ ಪಿನ್ವ ಮಘವದ್ಭ್ಯಃ ಸುವೀರಾಂ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

ಪದಪಾಠಃ

ಏವ । ನಃ । ಇಂದ್ರ । ವಾರ್ಯಸ್ಯ । ಪೂರ್ಧಿ । ಪ್ರ । ತೇ । ಮಹೀಂ । ಸುಽಮತಿಂ । ವೇವಿದಾಮ ।
ಇಷಂ । ಪಿನ್ವ । ಮಘವತ್ಽಭ್ಯಃ । ಸುಽವೀರಾಂ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥೬॥

ಸಾಯಣಭಾಷ್ಯಂ

ಹೇ ಇಂದ್ರ ನೋಽಸ್ಮಾನೇವ್ವೈವಂ ವಾರ್ಯಸ್ಯ । ತೃತೀಯಾರ್ಥೇ ಷಷ್ಠೀ । ವರಣೀಯೇನ ಧನೇನ ಪೂರ್ಧಿ । ಪೂರಯ । ತೇ ತವ ಮಹೀಂ ಮಹತೀಂ ಸುಮತಿಮನುಗ್ರಹಬುದ್ಧಿಂ ವೇವಿದಾಮ । ಭೃಶಂ ಲಭೇಮಹಿ । ಮಘವದ್ಭ್ಯೋ ಹವಿಷ್ಮದ್ಭ್ಯೋಽಸ್ಮಭ್ಯಂ ಸುವೀರಾಂ ಶೋಭನಪುತ್ರಾದಿಯುತಾ-ಮಿಷಮನ್ನಂ ಪಿನ್ವ । ಪ್ರಯಚ್ಛೇತ್ಯರ್ಥಃ । ಸ್ಪಷ್ಟಮನ್ಯತ್ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮನ್ನು । **ಏವ**—ಇದೇ ರೀತಿಯಲ್ಲಿ । **ವಾರ್ಯಸ್ಯ**—ಅಪೇಕ್ಷಿತವಾದ ಧನಗಳಿಂದ । **ಪ್ರ ಪೂರ್ಧಿ**—ಪೂರ್ಣವಾಗಿ ತುಂಬಿಡು (ನಮಗೆ ತುಂಬಿಕೊಡು) । **ತೇ**—ನಿನ್ನ । **ಮಹೀಂ**—ಮಹತ್ತಾದ । **ಸುಮತಿಂ**—ಅನುಗ್ರಹಬುದ್ಧಿಯನ್ನು । **ವೇವಿದಾಮ**—ಅತಿಶಯವಾಗಿ ಹೊಂದುವಂತಾಗಲಿ । **ಮಘವದ್ಭ್ಯಃ**—ಹವಿಸ್ಸನ್ನು ಹೊಂದಿರುವ ನಮಗೆ । **ಸುವೀರಾಂ**—ವೀರಪುತ್ರರಿಂದ ಕೂಡಿದ । **ಇಷಂ**—ಅನ್ನವನ್ನು । **ಪಿನ್ವ**—ಒದಗಿಸು (ಎಲೈ ಇಂದ್ರಾದಿಗಳೇ) । **ಯೂಯಂ**—ನೀವುಗಳು । **ಸದಾ**—ಯಾವಾಗಲೂ । **ನಃ**—ನಮ್ಮನ್ನು । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

ಭಾವಾರ್ಥ

ಎಲೈ ಇಂದ್ರನೇ, ಇದೇ ರೀತಿಯಲ್ಲಿ ನಮಗೆ ಅಪೇಕ್ಷಿತವಾದ ಧನಗಳನ್ನು ತುಂಬಿಕೊಡು. ನಾವು ನಿನ್ನ ಮಹತ್ತಾದ ಅನುಗ್ರಹಬುದ್ಧಿಯನ್ನು ಅತಿಶಯವಾಗಿ ಹೊಂದುವಂತಾಗಲಿ. ಹವಿಸ್ಸನ್ನು ಹೊಂದಿರುವ ನಮಗೆ ವೀರ ಪುತ್ರರಿಂದ ಕೂಡಿದ ಅನ್ನವನ್ನು ಒದಗಿಸು. ಎಲೈ ಇಂದ್ರಾದಿಗಳೇ, ನೀವುಗಳು ಯಾವಾಗಲೂ ನಮ್ಮನ್ನು ಕಲ್ಯಾಣಗಳಿಂದ ರಕ್ಷಿಸಿರಿ

English Translation

In this manner, Indra, satisfy us with the gift of desirable (wealth): may we repeatedly experience your great favour . bestow upon us who are opulent in offerings food with male discendants: ever cherish us with blessings.

# ಇಪ್ಪತ್ತಾರನೆಯ ಸೂಕ್ತವು

ಸಾಯಣಭಾಷ್ಯಂ

**ನ ಸೋಮ ಇಂದ್ರಮಿತಿ ಪಂಚರ್ಚಂ ನವಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ ತಥಾ ಚಾನುಕ್ರಮ್ಯತೇ । ನ ಸೋಮಃ ಪಂಚೇತಿ । ಮಹಾವ್ರತ ಉಕ್ತೋ ವಿನಿಯೋಗಃ ॥**

**ಅನುವಾದವು**—**ನ ಸೋಮ ಇಂದ್ರಂ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಇಂದ್ರನು ದೇವತೆಯು, ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ **ನ ಸೋಮಃ ಪಂಚ** ಎಂದು ಹೇಳಿರುವುದು ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ

## ಸೂಕ್ತ—೨೬

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೨೬ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ— ೧೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ನ ಸೋಮ ಇಂದ್ರಮಸುತೋ ಮಮಾದ ನಾಬ್ರಹ್ಮಾಣೋ ಮಘವಾನಂ ಸು-
ತಾಸಃ ।
ತಸ್ಮಾ ಉಕ್ಥಂ ಜನಯೇ ಯಜ್ಜುಜೋಷನ್ನೃವನ್ನವೀಯಃ ಶೃಣವದ್ಯಥಾ ನಃ ॥

ಪದಪಾಠಃ

ನ । ಸೋಮಃ । ಇಂದ್ರಂ । ಅಸುತಃ । ಮಮಾದ । ನ । ಅಬ್ರಹ್ಮಾಣಃ । ಮಘಽವಾನಂ । ಸುತಾಸಃ ।
ತಸ್ಮೈ । ಉಕ್ಥಂ । ಜನಯೇ । ಯತ್ । ಜುಜೋಷತ್ । ನೃಽವತ್ । ನವೀಯಃ । ಶೃಣವತ್ । ಯಥಾ । ನಃ

ಸಾಯಣಭಾಷ್ಯಂ

**ಮಘವಾನಂ ಧನವಂತಮಿಂದ್ರಮಸುತೋ ನಾಭಿಷುತಃ ಸೋಮೋ ನ ಮಮಾದ । ನ ತರ್ಪಯತಿ। ಸುತಾಸೋಽಭಿಷುತಾ ಅಪಿ ಸೋಮಾ ಅಬ್ರಹ್ಮಾಣಃ ಸ್ತೋತ್ರಹೀನಾ ನ ಮಮದುಃ । ಮಮಾದೇತ್ಯೇತ-ದಾಖ್ಯಾತಂ ಬಹುವಚನಾಂತತಯಾ ವಿಪರಿಣತಂ ಸದತ್ರ ಸಂಬಧ್ಯತೇ । ಅತ ಏವ ತ್ರಿಷ್ವಪಿ ಸವನೇಷು**

**ಪಾವಮಾನ್ಯೈಃ ಸ್ತೋತ್ರೈಃ ಸ್ತುತಾ ಏವ ಸೋಮಾ ಹೂಯಂತೇ । ಅಪಿ ಚ ನೋಽಸ್ಮದೀಯಂ ಯದುಕ್ಥಮಿಂದ್ರೋ ಜುಜೋಷತ್ ಸೇವೇತ ಯಥಾ ಚ ನೃವದ್ರಾಜೇವಾದರೇಣ ಶೃಣವತ್ ಶೃಣುಯಾತ್ ತಥಾ ನವೀಯೋ ನವತರಮುಕ್ಥಂ ಶಸ್ತ್ರಂ ತಸ್ಮಾ ಇಂದ್ರಾಯ ಜನಯೇ ಪಠಾಮೀತ್ಯರ್ಥಃ ॥**

ಪ್ರತಿಪದಾರ್ಥ

**ಮಘವಾನಂ**—ಧನವಂತನಾದ । **ಇಂದ್ರಂ**—ಇಂದ್ರನನ್ನು । **ಅಸುತಃ**—ಹಿಂಡದೇ ಇರುವ । **ಸೋಮಃ**—ಸೋಮವು । **ನ ಮಮಾದ**—ಹರ್ಷಗೊಳಿಸುವುದಿಲ್ಲ । **ಸುತಾಸಃ**—ಒಂದುವೇಳೆ ಹಿಂಡಲ್ಪಟ್ಟಿದ್ದರೂ ಸಹ । **ಅಬ್ರಹ್ಮಾಣಃ**—ಸ್ತೋತ್ರಪರನವಿಲ್ಲದೇ ಇರುವ ರಸವು । **ನ (ಮಮದುಃ)**—ಹರ್ಷಗೊಳಿಸುವುದಿಲ್ಲ (ಆದುದರಿಂದಲೇ) । **ನಃ**—ನಮ್ಮ । **ಯತ್**—ಯಾವ । **ಉಕ್ಥಂ**—ಉಕ್ಥಮಂತ್ರವನ್ನು । **ಜುಜೋಷತ್**—ಸೇವಿಸುವನೋ । **ಯಥಾ**—ಯಾವ ರೀತಿಯಲ್ಲಿ । **ನೃವತ್**—ರಾಜನಂತೆ ಆದರದಿಂದ । **ಶೃಣವತ್**—ಕೇಳುವನೋ ( ಅದೇ ರೀತಿಯಲ್ಲಿ ) । **ನವೀಯಃ**—ನೂತನವಾಗಿ ನಿರ್ಮಿತವಾದ ಶಸ್ತ್ರಮಂತ್ರವನ್ನು । **ತಸ್ಮೈ**—ಆ ಇಂದ್ರನನ್ನುದ್ದೇಶಿಸಿ । **ಜನಯೇ**—ನಿರ್ಮಿಸಿ ಪಠಿಸುತ್ತೇನೆ.

ಭಾವಾರ್ಥ

ಹಿಂಡದೇ ಅರ್ಪಿತವಾದ ಸೋಮವು ಧನವಂತನಾದ ಇಂದ್ರನನ್ನು ಹರ್ಷಗೊಳಿಸುವುದಿಲ್ಲ ಒಂದು ವೇಳೆ ಹಿಂಡಲ್ಪಟ್ಟಿದ್ದರೂ ಸ್ತುತಿಗಳೊಡನೆ ಸಂಯುಕ್ತವಾಗದೇ ಇರುವ ರಸವು. ಹರ್ಷಗೊಳಿಸುವುದಿಲ್ಲ ಆದುದರಿಂದಲೇ, ಇಂದ್ರನು ನಮ್ಮ ಯಾವ ಉಕ್ಥಮಂತ್ರವನ್ನು ಸೇವಿಸುವನೋ, ಯಾವ ರೀತಿಯಲ್ಲಿ ರಾಜನಂತೆ ಆದರದಿಂದ ಕೇಳುವನೋ ಅಂತಹ ನೂತನವಾದ ಶಸ್ತ್ರಮಂತ್ರವನ್ನು ಅದೇ ರೀತಿಯಲ್ಲಿ ಇಂದ್ರನನ್ನುದ್ದೇಶಿಸಿ ನಿರ್ಮಿಸಿ ಪಠಿಸುತ್ತೇನೆ.

English Translation

The Soma uneffused delights not Indra : the effused juices please not Maghavan, unaccompanied by prayer therefore I offer to him the praise that he may be pleased with · that, like a prince, he may listen to a novel (strain).

ಸಂಹಿತಾಪಾಠಃ

ಉಕ್ಥಉಕ್ಥೇ ಸೋಮ ಇಂದ್ರಂ ಮಮಾದ ನೀಥೇನೀಥೇ ಮಘವಾನಂ ಸುತಾಸಃ ।
ಯದೀಂ ಸಬಾಧಃ ಪಿತರಂ ನ ಪುತ್ರಾಃ ಸಮಾನದಕ್ಷಾ ಅವಸೇ ಹವಂತೇ ॥

ಪದಪಾಠಃ

ಉಕ್ಥೇಽಉಕ್ಥೇ । ಸೋಮಃ । ಇಂದ್ರಂ । ಮಮಾದ । ನೀಥೇಽನೀಥೇ । ಮಘಽವಾನಂ । ಸುತಾಸಃ ।
ಯತ್ । ಈಂ । ಸಽಬಾಧಃ । ಪಿತರಂ । ನ । ಪುತ್ರಾಃ । ಸಮಾನಽದಕ್ಷಾಃ । ಅವಸೇ । ಹವಂತೇ ॥ ೨ ॥

ಸಾಯಣಭಾಷ್ಯಂ

ಯದ್ಯಸ್ಮಾದುಕ್ಥ ಉಕ್ಥೇ ಶಸ್ತ್ರೇ ಶಸ್ತ್ರೇ ಕ್ರಿಯಮಾಣೇ ಸೋಮೋ ಮಘವಾನಮಿಂದ್ರಂ ಮಮಾದ ಮಾದಯತಿ ನೀಥೇ ನೀಥೇ ಸ್ತೋತ್ರೇ ಸ್ತೋತ್ರೇ ಕ್ರಿಯಮಾಣೇ ಸುತಾಸೋಽಭಿಷುತಾಃ ಸೋಮಾ ಮಾದಯಂತಿ ತಸ್ಮಾದೀಮೇನಮಿಂದ್ರಂ ಸಬಾಧಃ ಪರಸ್ಪರಂ ಮಿಲಿತಾಃ ಸಮಾನದಕ್ಷಾಃ ಸಮಾನೋತ್ಸಾಹಾ ಋತ್ವಿಜಃ ಪುತ್ರಾಃ ಪಿತರಂ ನ ಪಿತರಮಿವಾವಸೇ ತರ್ಪಣಾಯ ಸ್ವರಕ್ಷಣಾಯ ವಾ ಹವಂತೇ ಶಸ್ತ್ರೈಃ ಸ್ತೋತ್ರೈಶ್ಚ ಸ್ತುವಂತಿ ||

ಪ್ರತಿಪದಾರ್ಥ

**ಯತ್**—ಯಾವ ನಿಮಿತ್ತವಾಗಿ | **ಉಕ್ಥೇಉಕ್ಥೇ**—ಪ್ರತಿಯೊಂದು ಶಸ್ತ್ರಮಂತ್ರವು ಪಠಿತವಾದಾಗಲೂ | **ಸೋಮಃ**—ಸೋಮವು | **ಮಘವಾನಂ**—ಧನವಂತನಾದ | **ಇಂದ್ರಂ**—ಇಂದ್ರನನ್ನು | **ಮಮಾದ**—ತೃಪ್ತಿಗೊಳಿಸುವುದೋ | **ನೀಥೇನೀಥೇ**—ಪ್ರತಿಯೊಂದು ಸ್ತೋತ್ರವು ಪಠಿತವಾದಾಗಲೂ | **ಸುತಾಸಃ**—ಹಿಂಡಿರುವ ಸೋಮರಸಗಳು ಅವನನ್ನು ತೃಪ್ತಿಗೊಳಿಸುವುವೋ (ಆ ನಿಮಿತ್ತವಾಗಿಯೇ) | **ಈಂ**—ಈ ಇಂದ್ರನನ್ನು | **ಸಬಾಧಃ**—ಒಬ್ಬರಿಗೊಬ್ಬರು ಕಲೆತವರೂ | **ಸಮಾನದಕ್ಷಾಃ**—ಒಂದೇ ಸಮನಾದ ಶಕ್ತಿಯುಳ್ಳವರೂ ಆದ ಋತ್ವಿಕ್ಕುಗಳು | **ಪುತ್ರಾಃ**—ಪುತ್ರರು | **ಪಿತರಂ ನ**—ರಕ್ಷಣೆಗಾಗಿ ತಂದೆಯನ್ನು ಕರೆಯುವಂತೆ | **ಅವಸೇ**—ರಕ್ಷಣಾರ್ಥವಾಗಿ | **ಹವಂತೇ**—ಕರೆಯುತ್ತಾರೆ.

ಭಾವಾರ್ಥ

ಯಾವ ನಿಮಿತ್ತವಾಗಿ ಪ್ರತಿಯೊಂದು ಶಸ್ತ್ರಮಂತ್ರವು ಪಠಿತವಾದಾಗಲೂ ಸೋಮವು ಧನವಂತನಾದ ಇಂದ್ರನನ್ನು ತೃಪ್ತಿಗೊಳಿಸುವುದೋ, ಪ್ರತಿಯೊಂದು ಸ್ತೋತ್ರವು ಪಠಿತವಾದಾಗಲೂ ಹಿಂಡಿರುವ ಸೋಮಗಳು ಅವನನ್ನು ತೃಪ್ತಿಗೊಳಿಸುವುವೋ ಆ ನಿಮಿತ್ತವಾಗಿಯೇ, ಪುತ್ರರು ತಂದೆಯನ್ನು ರಕ್ಷಣೆಗಾಗಿ ಕರೆಯುವಂತೆ, ಒಬ್ಬರಿಗೊಬ್ಬರು ಕಲೆತವರೂ, ಒಂದೇ ಸಮನಾದ ಶಕ್ತಿಯುಳ್ಳವರೂ ಆದ ಋತ್ವಿಕ್ಕುಗಳು ಇಂದ್ರನನ್ನು ರಕ್ಷಣಾರ್ಥವಾಗಿ ಕರೆಯುತ್ತಾರೆ.

## English Translation

The Soma effused with reiterated prayer delights Indra . the effused juices, (offered) with repeated praise, (exhilarate) Maghavan therofore (the priests), combining together and making like exertion, invoke Indra for protection, as sons (apply) to a father.

ಸಂಹಿತಾಪಾಠಃ

ಚಕಾರ ತಾ ಕೃಣವನ್ನೂನಮನ್ಯಾ ಯಾನಿ ಬ್ರುವಂತಿ ವೇಧಸಃ ಸುತೇಷು ।
ಜನೀರಿವ ಪತಿರೇಕಃ ಸಮಾನೋ ನಿ ಮಾಮೃಜೇ ಪುರ ಇಂದ್ರಃ ಸು ಸರ್ವಾಃ ॥

ಪದಪಾಠಃ

**ಚಕಾರ | ತಾ | ಕೃಣವತ್ | ನೂನಂ | ಅನ್ಯಾ | ಯಾನಿ | ಬ್ರುವಂತಿ | ವೇಧಸಃ | ಸುತೇಷು |**

**ಜನೀಃऽಇವ | ಪತಿಃ | ಏಕಃ | ಸಮಾನಃ | ನಿ | ಮಮೃಜೇ | ಪುರಃ | ಇಂದ್ರಃ ಸು | ಸರ್ವಾಃ || ೩ ||**

ಸಾಯಣಭಾಷ್ಯಂ

**ವೇಧಸಃ ಸ್ತೋತ್ರಾಣಾಂ ವಿಧಾತಾರಃ ಸುತೇಷು ಸೋಮೇಷ್ವಭಿಷುತೇಷು ಯಾನಿ ಕರ್ಮಾಣಿ ಬ್ರುವಂತಿ ತಾನಿ ವೃತ್ರವಧಾದೀನಿ ಕರ್ಮಾಣೀಂದ್ರಃ ಪೂರ್ವಸ್ಮಿನ್ಕಾಲೇ ಚಕಾರ | ನೂನಂ ಸಂಪ್ರತ್ಯಪ್ಯನ್ಯಾನ್ಯಾನಿ ಕರ್ಮಾಣಿ ಕೃಣವತ್ | ಕುರ್ಯಾತ್ | ಅಪಿ ಚ ಸ ಇಂದ್ರಃ ಸರ್ವಾಃ ಪುರಃ ಶತ್ರುನಗರೀಃ ಸಮಾನಃ ಸಮವೃತ್ತಿರೇಕೋऽಸಹಾಯಃ ಪತಿರ್ಜನೀರಿವ ಜಾಯಾ ಇವ ಸು ನಿ ಮಾಮೃಜೇ | ಸಮ್ಯಕ್ ಶೋಧಯೇತ್ ||**

ಪ್ರತಿಪದಾರ್ಥ

**ವೇಧಸಃ**—ಸ್ತುತಿಕರ್ತರೂ ಮತ್ತು ಪಾರಕರೂ| **ಸುತೇಷು—**ಸೋಮಾಭಿಷವದ ಕಾಲಗಳಲ್ಲಿ | **ಯಾನಿ**—ಇಂದ್ರನು ಯಾವ ಯಾವ ವೀರ್ಯಕರ್ಮಗಳನ್ನು | **ಚಕಾರ**—ಮಾಡಿದನು ಎಂಬುದಾಗಿ | **ಬ್ರುವಂತಿ—**ಪ್ರಶಂಸಿಸುವರೋ ಅಂತಹ | **ತಾ ಅನ್ಯಾ**—ಅದೇ ರೀತಿಯ ಉಳಿದ ಕರ್ಮಗಳನ್ನೂ | **ನೂನಂ**—ಈಗ (ಅದೇ ಇಂದ್ರನು) | **ಕೃಣವತ್**—ನೆರವೇರಿಸಲಿ | **ಪತಿಃ**—ಗಂಡನು | **ಜನೀಃ ಇವ**—ಪತ್ನಿಯರನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುವಂತೆ| **ಇಂದ್ರಃ**—ಇಂದ್ರನು | **ಸರ್ವಾಃ ಪುರಃ**—ಸಮಸ್ತ ಶತ್ರುಪಟ್ಟಣಗಳನ್ನೂ | **ಸಮಾನಃ**—ಒಂದೇ ರೀತಿಯಲ್ಲಿ | **ಏಕಃ**—ಅದ್ವಿತೀಯನಾಗಿ | **ಸು ನಿ ಮಾಮೃಜೇ**—ಸೋಲಿಸಿ ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಲಿ.

ಭಾವಾರ್ಥ

ಇಂದ್ರನು ಯಾವಯಾವ ವೀರ್ಯಕರ್ಮಗಳನ್ನು ಮಾಡಿದನು ಎಂದು ಸ್ತುತಿಕರ್ತರೂ ಮತ್ತು ಪಾರಕರೂ ಸೋಮಾಭಿಷವಕಾಲದಲ್ಲಿ ಪ್ರಶಂಸಿಸುವರೋ ಅಂತಹ ಅದೇ ರೀತಿಯ ಉಳಿದ ಕರ್ಮಗಳನ್ನೂ ಈಗ ಅದೇ ಇಂದ್ರನು ನೆರವೇರಿಸಲಿ ಗಂಡನು ಪತ್ನಿಯರನ್ನೆಲ್ಲಾ ಒಟ್ಟಿಗೆ ಸ್ವಾಧೀನಪಡಿಸಿಕೊಳ್ಳುವಂತೆ ಇಂದ್ರನು ಸಮಸ್ತ ಶತ್ರುಪಟ್ಟಣಗಳನ್ನೂ ಒಂದೇ ರೀತಿಯಲ್ಲಿ ಅದ್ವಿತೀಯನಾಗಿ ಸೋಲಿಸಿ ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಲಿ

English Translation

Such exploits as his worshippers, when the Soma is effused, proclaim that he has achieved, let him now perform may Indra, equal (to the task) and unaided, possess all the cities (of the Asuras) as a husband his wives

ಸಂಹಿತಾಪಾಠಃ

ಏವಾ ತಮಾಹುರುತ ಶೃಣ್ವ ಇಂದ್ರ ಏಕೋ ವಿಭಕ್ತಾ ತರಣಿರ್ಮಘಾನಾಂ ।

ಮಿಥಸ್ತುರ ಊತಯೋ ಯಸ್ಯ ಪೂರ್ವೀರಸ್ಮೇ ಭದ್ರಾಣಿ ಸಶ್ಚತ ಪ್ರಿಯಾಣಿ॥

ಪದಪಾಠಃ

ಏವ । ತಂ । ಆಹುಃ । ಉತ । ಶೃಣ್ವೇ । ಇಂದ್ರಃ । ಏಕಃ । ವಿऽಭಕ್ತಾ । ತರಣಿಃ । ಮಘಾನಾಂ ।

ಮಿಥಃऽತುರಃ । ಊತಯಃ । ಯಸ್ಯ । ಪೂರ್ವೀಃ । ಅಸ್ಮೇ ಇತಿ । ಭದ್ರಾಣಿ । ಸಶ್ಚತ । ಪ್ರಿಯಾಣಿ ॥

ಸಾಯಣಭಾಷ್ಯಂ

ಯಸ್ಯೇಂದ್ರಸ್ಯ ಮಿಥಃ ಪರಸ್ಪರಂ ತುರೋ ಬಾಧಮಾನಾಃ ಸಂಶ್ಲಿಷ್ಟಾ ವಾ ಪೂರ್ವೀಃ ಪೂರ್ವ್ಯೋ ಬಹ್ವ್ಯ ಊತಯೋ ರಕ್ಷಾಃ ಸಂತಿ ತಮೇವೈವಮುಕ್ತಗುಣಮಾಹುಃ ಪೂರ್ವ ಋಷಯಃ । ಉತಾಪಿ ಚಾದ್ಯಾಪಿ ಸ ಇಂದ್ರೋ ಮಘಾನಾಂ ಮಂಹನೀಯಾನಾಂ ಧನಾನಾಂ ವಿಭಕ್ತಾ ದಾತೇತಿ ತರಣಿರಾಪದಸ್ತಾರಯಿತೇತಿ ಶೃಣ್ವೇ । ಶ್ರೂಯತೇ । ತಸ್ಯ ಚ ಪ್ರಸಾದಾದಸ್ಮೇ ಅಸ್ಮಾನ್ ಪ್ರಿಯಾಣಿ ಭದ್ರಾಣಿ ಕಲ್ಯಾಣಾನಿ ಸಶ್ಚತ । ಸೇವಂತಾಂ ॥

ಪ್ರತಿಪದಾರ್ಥ

**ಯಸ್ಯ**—ಯಾವ ಇಂದ್ರನ । **ಮಿಥಸ್ತುರಃ**—ಒಟ್ಟುಗೂಡಿರುವುವೂ ಮತ್ತು ಹಿಂಸಾಕಾರಕವಾದವೂ । **ಪೂರ್ವೀಃ**—ಬಹುಸಂಖ್ಯಾತವಾದವೂ ಆದ । **ಊತಯಃ**—ರಕ್ಷಣೆಗಳಿರುವುವೋ । **ತಂ ಏವ**—ಅದೇ ಇಂದ್ರನನ್ನೇ **ಆಹುಃ**—ಹಿಂದಿನ ಋಷಿಗಳು ಪ್ರಶಂಸಿಸಿದ್ದಾರೆ । **ಉತ**—ಮತ್ತು । **ಇಂದ್ರಃ**—ಅದೇ ಇಂದ್ರನು । **ಮಘಾನಾಂ**—ಪೂಜ್ಯವಾದ ಧನಗಳಿಗೆ । **ವಿಭಕ್ತಾ**—ದಾತೃವಾಗಿಯೂ । **ತರಣಿಃ**—ಆಪತ್ತುಗಳಿಂದ ರಕ್ಷಿಸುವವನಾಗಿಯೂ । **ಶೃಣ್ವೇ**—ಪ್ರಸಿದ್ಧನಾಗಿ ತಿಳಿಯಲ್ಪಟ್ಟಿದ್ದಾನೆ । **ಅಸ್ಮೇ**—ನಮ್ಮನ್ನು । **ಪ್ರಿಯಾಣಿ**—ಪ್ರಿಯಕಾರಕಗಳಾದ । **ಭದ್ರಾಣಿ**—ಮಂಗಳಗಳು । **ಸಶ್ಚತ**—ಸೇವಿಸಲಿ.

ಭಾವಾರ್ಥ

ಶತ್ರುವಿಗೆ ಹಿಂಸಾಕಾರಕವೂ, ಬಹುಸಂಖ್ಯಾಕವಾದವೂ ಆದ ಯಾವ ಇಂದ್ರನ ರಕ್ಷಣೆಗಳು ಒಟ್ಟುಗೂಡಿರುವುವೋ ಅದೇ ಇಂದ್ರನನ್ನೇ ಹಿಂದಿನ ಋಷಿಗಳು ಪ್ರಶಂಸಿಸಿದ್ದಾರೆ ಮತ್ತು ಅದೇ ಇಂದ್ರನು ಪೂಜ್ಯವಾದ ಧನಗಳಿಗೆ ದಾತೃವಾಗಿಯೂ, ಆಪತ್ತುಗಳಿಂದ ರಕ್ಷಿಸುವವನಾಗಿಯೂ ಪ್ರಸಿದ್ಧನಾಗಿದ್ದಾನೆ ಆವನ ಅನುಗ್ರಹದಿಂದ ನಮಗೆ ಪ್ರಿಯಕಾರಕಗಳಾದ ಮಂಗಳಗಳುಂಟಾಗಲಿ

## English Translation

Such have they proclaimed him Indra is still celebrated as the distributor of riches, the transporter (beyond calamity), of when many and emulous are the protections may acceptable benefits attend us.

ಸಂಹಿತಾಪಾಠಃ

ಏವಾ ವಸಿಷ್ಠ ಇಂದ್ರಮೂತಯೇ ನೄನ್ಕೃಷ್ಟೀನಾಂ ವೃಷಭಂ ಸುತೇ ಗೃಣಾತಿ ।
ಸಹಸ್ರಿಣ ಉಪ ನೋ ಮಾಹಿ ವಾಜಾನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ॥

ಪದಪಾಠಃ

ಏವ । ವಸಿಷ್ಠಃ । ಇಂದ್ರಂ । ಊತಯೇ । ನೄನ್ । ಕೃಷ್ಟೀನಾಂ । ವೃಷಭಂ । ಸುತೇ । ಗೃಣಾತಿ ।
ಸಹಸ್ರಿಣಃ । ಉಪ । ನಃ । ಮಾಹಿ । ವಾಜಾನ್ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥

ಸಾಯಣಭಾಷ್ಯಂ

ವಸಿಷ್ಠೋ ನೄನ್ ನೃಣಾಂ । ಷಷ್ಠ್ಯರ್ಥೇ ದ್ವಿತೀಯಾ । ಊತಯೇ ರಕ್ಷಾಯೈ ಕೃಷ್ಟೀನಾಂ ಪ್ರಜಾನಾಂ ವೃಷಭಂ ಕಾಮಾನಾಂ ವರ್ಷಿತಾರಮಿಂದ್ರಮೇವೈವಂ ಪೂರ್ವೋಕ್ತಪ್ರಕಾರೇಣ ಗೃಣಾತಿ । ಸ್ತೌತಿ । ಅಥ ಪ್ರತ್ಯಕ್ಷಸ್ತುತಿಃ । ಹೇ ಇಂದ್ರ ನೋಽಸ್ಮಭ್ಯಂ ಸಹಸ್ರಿಣಃ ಸಹಸ್ರಸಂಖ್ಯಾಕಾನ್ವಾಜಾನನ್ನಾನ್ಯುಪ ಮಾಹಿ । ಪ್ರಯಚ್ಛೇತ್ಯರ್ಥಃ । ಸ್ಪಷ್ಟಮನ್ಯತ್ ॥

ಪ್ರತಿಪದಾರ್ಥ

**ನೄನ್**—ಮಾನವರ । **ಊತಯೇ**—ರಕ್ಷಣಾರ್ಥವಾಗಿ । **ವಸಿಷ್ಠಃ**—ವಸಿಷ್ಠನು । **ಕೃಷ್ಟೀನಾಂ**—ಪ್ರಜೆಗಳಿಗೆಲ್ಲಾ । **ವೃಷಭಂ**—ಇಷ್ಟಾರ್ಥಪ್ರದನಾದ । **ಇಂದ್ರಂ**—ಇಂದ್ರನನ್ನು । **ಏವ**—ಹಿಂದೆ ಹೇಳಿದ ರೀತಿಯಲ್ಲಿ **ಸುತೇ**—ಸೋಮಾಭಿಷವಕಾಲದಲ್ಲಿ । **ಗೃಣಾತಿ**—ಸ್ತುತಿಸುತ್ತಾನೆ (ಎಲೈ ಇಂದ್ರನೇ) । **ನಃ**—ನಮಗೆ । **ಸಹಸ್ರಿಣಃ**—ಸಹಸ್ರಸಂಖ್ಯಾಕವಾದ । **ವಾಜಾನ್**—ಅನ್ನಗಳನ್ನು । **ಉಪ ಮಾಹಿ**—ಒದಗಿಸಿಕೊಡು (ಎಲೈ ಇಂದ್ರಾದಿಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ

ಭಾವಾರ್ಥ

ಮಾನವರ ರಕ್ಷಣಾರ್ಥವಾಗಿ ವಸಿಷ್ಠನು ಪ್ರಜೆಗಳಿಗೆಲ್ಲಾ ಇಷ್ಟಾರ್ಥಪ್ರದನಾದ ಇಂದ್ರನನ್ನು ಹಿಂದೆ ವರ್ಣಿತವಾದ ಪ್ರಕಾರ ಸೋಮಾಭಿಷವಕಾಲದಲ್ಲಿ ಸ್ತುತಿಸುತ್ತಾನೆ. ಎಲೈ ಇಂದ್ರನೇ, ನಮಗೆ ಸಹಸ್ರಸಂಖ್ಯಾಕವಾದ ಅನ್ನಗಳನ್ನು ಕೊಡು ಎಲೈ ಇಂದ್ರಾದಿಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Thus does Vasishtha glorify Indra, the showerer (of benefits) upon the worshippers for the preservation of mankind bestow upon us, (Indra), thousands of viands: ever cherish us with blessings.

# ಇಪ್ಪತ್ತೇಳನೆಯ ಸೂಕ್ತವು

ಇಂದ್ರಂ ನರ ಇತಿ ಪಂಚರ್ಚಂ ದಶಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಇಂದ್ರಂ ನರ ಇತ್ಯನುಕ್ರಾಂತಂ ॥ ಮಹಾವ್ರತೇ ನಿಷ್ಕೇವಲ್ಯ ಏತತ್ಸೂಕ್ತಮುಕ್ತಂ ತೃತೀಯತ್ವೇನ ॥ ಐಂದ್ರೇ ಪಶೌ ವಪಾಪುರೋಡಾಶಹವಿಷಾಮಾದ್ಯಾಸ್ತಿಸ್ರಃ ಕ್ರಮೇಣಾನುವಾಕ್ಯಾಃ । ಸೂತ್ರಿತಂ ಚ । ಇಂದ್ರಂ ನರೋ ನೇಮಧಿತಾ ಹವಂತ ಇತ್ಯುರುಂ ನೋ ಲೋಕಮನು ನೇಷಿ ವಿದ್ವಾನ್ । ಆ ೩-೭ । ಇತಿ ॥

**ಅನುವಾದವು— ಇಂದ್ರಂ ನರಃ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಇಂದ್ರನು ದೇವತೆಯು, ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ **ಇಂದ್ರಂ ನರಃ** ಎಂದು ಹೇಳಿರುವುದು ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರ ಮಂತ್ರಪಠನಮಾಡುವಾಗ ಈ ಸೂಕ್ತವನ್ನು ಮೂರನೆಯ ಸೂಕ್ತವನ್ನಾಗಿ ಪಠಿಸಬೇಕು ಮತ್ತು ಇಂದ್ರದೇವತಾಕವಾದ ಪಶುಹೋಮದಲ್ಲಿ ವಪಾ, ಪುರೋಡಾಶ, ಹವಿಸ್ಸು ಇವುಗಳನ್ನು ಹೋಮಮಾಡುವಾಗ ಈ ಸೂಕ್ತದ ಮೊದಲಿನ ಮೂರು ಋಕ್ಕುಗಳನ್ನು ಕ್ರಮವಾಗಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಇಂದ್ರಂ ನರೋ ನೇಮಧಿತಾ ಹವಂತ ಇತ್ಯುರುಂ ನೋ ಲೋಕಮನು ನೇಷಿ ವಿದ್ವಾನ್** ಎಂಬ ಸೂತ್ರದಿಂದ (ಆ ೩-೭) ವಿವೃತವಾಗಿರುವುದು

## ಸೂಕ್ತ—೨೭

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೨೭ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ—೧೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಇಂದ್ರಂ ನರೋ ನೇಮಧಿತಾ ಹವಂತೇ ಯತ್ಪಾರ್ಯಾ ಯುನಜತೇ ಧಿಯಸ್ತಾಃ ।
ಶೂರೋ ನೃಷಾತಾ ಶವಸಶ್ಚಕಾನ ಆ ಗೋಮತಿ ವ್ರಜೇ ಭಜಾ ತ್ವಂ ನಃ ॥೧॥

ಪದಪಾಠಃ

ಇಂದ್ರಂ । ನರಃ । ನೇಮಽಧಿತಾ । ಹವಂತೇ । ಯತ್ । ಪಾರ್ಯಾಃ । ಯುನಜತೇ । ಧಿಯಃ । ತಾಃ ।
ಶೂರಃ । ನೃಽಸಾತಾ । ಶವಸಃ । ಚಕಾನಃ । ಆ । ಗೋಽಮತಿ । ವ್ರಜೇ । ಭಜ । ತ್ವಂ । ನಃ ॥ ೧ ॥

ಸಾಯಣಭಾಷ್ಯಂ

**ಯದ್ಯದಾ ಪಾರ್ಯೇ ಯುದ್ಧಭರಣನಿಮಿತ್ತಾಸ್ತಾಃ ಪ್ರಸಿದ್ಧಾ ಧಿಯಃ ಕರ್ಮಾಣಿ ಯುನಜತೇ ಪ್ರಯುಜ್ಯಂತೇ ತದಾ ನರೋ ನೇತಾರೋ ಯಮಿಂದ್ರಂ ನೇಮಧಿತಾ ನೇಮಧಿತೌ ಸಂಗ್ರಾಮೇ ಹವಂತೇ ಹ್ವಯಂತಿ ಸ ತ್ವಂ ಶೂರೋ ನೃಷಾತಾ ನೃಣಾಂ ಸಂಭಕ್ತಾ ಚ ಶವಸೋ ಬಲಸ್ಯ ಬಲಂ ಚಕಾನಃ ಕಾಮಯಮಾನಶ್ಚ ಸನ್ ಗೋಮತಿ ವ್ರಜೇ ಗೋಷ್ಠೇ ಗೋಸಮೂಹೇ ನೋಽಸ್ಮಾನಾ ಭಜ । ಪ್ರಾಪಯ ॥**

ಪ್ರತಿಪದಾರ್ಥ

**ಯತ್**—ಯಾವಾಗ । **ಪಾರ್ಯೇ**—ಯುದ್ಧದಲ್ಲಿ ಜಯಾರ್ಥವಾಗಿ ಆಚರಿಸಲ್ಪಡುವ । **ತಾಃ**—ಪ್ರಸಿದ್ಧವಾದ । **ಧಿಯಃ**—ಕರ್ಮಗಳು । **ಯುನಜತೇ**—ಆಚರಿಸಲ್ಪಡುವವೋ ಆಗ । **ನರಃ**—ಯುದ್ಧಕಾರ್ಯದಲ್ಲಿ ಮುಖಂಡರಾದ ಜನರು । **ಇಂದ್ರಂ**—ಇಂದ್ರನನ್ನು । **ನೇಮಧಿತಾ**—ಯುದ್ಧದಲ್ಲಿ ಜಯಾರ್ಥವಾಗಿ । **ಹವಂತೇ**—ಪ್ರಾರ್ಥಿಸಿ ಕರೆಯುತ್ತಾರೆ (ಎಲೈ ಇಂದ್ರನೇ) । **ಶೂರಃ**—ಪರಾಕ್ರಮಶಾಲಿಯಾದವನೂ । **ನೃಷಾತಾ**—ಜನರಿಗೆ ಉಪಕಾರಮಾಡುವವನೂ । **ಶವಸಃ**—ಬಲವನ್ನು । **ಚಕಾನಃ**—ಅಪೇಕ್ಷಿಸುವವನೂ ಆದ । **ತ್ವಂ**—ನೀನು । **ನಃ**—ನಮ್ಮನ್ನು । **ಗೋಮತಿ**—ಗೋವುಗಳಿಂದ ತುಂಬಿರುವ । **ವ್ರಜೇ**—ಕೊಟ್ಟಿಗೆಯಲ್ಲಿ । **ಆ ಭಜ**—ಇರುವಂತೆ ಮಾಡು.

ಭಾವಾರ್ಥ

ಜನರಲ್ಲಿ ಮುಖಂಡರಾದವರು, ಯುದ್ಧದಲ್ಲಿ ಜಯವಾಗಬೇಕೆಂಬ ಅಪೇಕ್ಷೆಯಿಂದ ಮಾಡುವ ಯಜ್ಞಾದಿ ಕರ್ಮಾಚರಣೆಗಳಲ್ಲಿ ಇಂದ್ರನನ್ನು ಪ್ರಾರ್ಥಿಸಿ ಕರೆಯುತ್ತಾರೆ. ಎಲೈ ಇಂದ್ರನೇ, ಅಂತಹ ಕಾಲದಲ್ಲಿ ಜನರ ಹಿತವನ್ನು ಬಯಸುವವನೂ, ಶೂರನೂ, ಬಲವನ್ನು ಅಪೇಕ್ಷಿಸ.ವವನೂ ಆದ ನೀನು ನಮಗೆ ಗೋವುಗಳಿಂದ ತುಂಬಿರುವ ಕೊಟ್ಟಿಗೆಯನ್ನೂ ನಮ್ಮ ವಶಮಾಡು.

English Translation

Men invoke Indra, in battle when those actions which lead to victory are performed · you are a hero, the benefactor of man, the desirer of prowess; place us in possession of pastures abounding with cattle

ಸಂಹಿತಾಪಾಠಃ

ಯ ಇಂದ್ರ ಶುಷ್ಮೋ ಮಘವನ್ತೇ ಅಸ್ತಿ ಶಿಕ್ಷಾ ಸಖಿಭ್ಯಃ ಪುರುಹೂತ ನೃಭ್ಯಃ ।
ತ್ವಂ ಹಿ ದೃಳ್ಹಾ ಮಘವನ್ವಿಚೇತಾ ಅಪಾ ವೃಧಿ ಪರಿವೃತಂ ನ ರಾಧಃ ॥ ೨ ॥

ಪದಪಾಠಃ

ಯಃ । ಇಂದ್ರ । ಶುಷ್ಮಃ । ಮಘಽವನ್ । ತೇ । ಅಸ್ತಿ । ಶಿಕ್ಷ । ಸಖಿಽಭ್ಯಃ । ಪುರುಽಹೂತ । ನೃಭ್ಯಃ ।
ತ್ವಂ । ಹಿ । ದೃಳ್ಹಾ । ಮಘಽವನ್ । ವಿಽಚೇತಾಃ । ಅಪ । ವೃಧಿ । ಪರಿಽವೃತಂ । ನ । ರಾಧಃ ॥ ೨ ॥

ಸಾಯಣಭಾಷ್ಯಂ

ಹೇ ಪುರುಹೂತ ಬಹುಭಿರಾಹೂತೇಂದ್ರ ತೇ ತವ ಯಃ ಶುಷ್ಮೋ ಬಲಮಸ್ತಿ ತಂ ಶುಷ್ಮಂ ಸಖಿಭ್ಯಃ ಸ್ತೋತೃಭ್ಯೋ ನೃಭ್ಯಃ ಶಿಕ್ಷ । ದೇಹಿ । ಅಪಿ ಚ ಹೇ ಮಘವನ್ ಹಿ ಯಸ್ಮಾದ್ದೃಳ್ಹಾ ದೃಢಾನಿ । ಪುರಾಂ ದ್ವಾರಾಣಿ ಬಿಭೇದಿಥೇತಿ ಶೇಷಃ । ತಸ್ಮಾತ್ಸ ತ್ವಂ ವಿಚೇತಾ ವಿವಿಕ್ತಪ್ರಜ್ಞಃ ಸನ್ ಪರಿವೃತಂ ತಿರೋಹಿತಂ ರಾಧೋ ಧನಮಪ ವೃಧಿ । ಅಸ್ಮಭ್ಯಮಪವೃಣು । ನೇತಿ ಸಂಪ್ರತ್ಯರ್ಥೇ ॥

ಪ್ರತಿಪದಾರ್ಥ

**ಪುರುಹೂತ**—ಅನೇಕರಿಂದ ಪ್ರಾರ್ಥಿಸಿ ಕರೆಯಲ್ಪಡುವ । **ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಯಃ ಶುಷ್ಮ**—ಯಾವ ಬಲವು । **ಅಸ್ತಿ**—ಪ್ರಸಿದ್ಧವಾಗಿದೆಯೋ ಅಂತಹ ಬಲವನ್ನು । **ಸಖಿಭ್ಯಃ**—ನಿನ್ನ ಸ್ನೇಹಿತರಾದ । **ನೃಭ್ಯಃ**—ಸ್ತೋತೃಜನರಿಗೆ । **ಶಿಕ್ಷ**—ಕೊಡು (ಮತ್ತು) । **ಮಘವನ್**—ಧನವಂತನಾದ ಎಲೈ ಇಂದ್ರನೇ । **ಹಿ**—ಯಾವಕಾರಣದಿಂದ । **ದೃಳ್ಹಾ**—ದೃಢವಾದ ಶತ್ರುಪಟ್ಟಣಗಳ ದ್ವಾರಗಳನ್ನು ಭೇದಿಸಿದೆಯೋ ಆ ಕಾರಣದಿಂದ । **ತ್ವಂ**—ನೀನು । **ವಿಚೇತಾಃ**—ಸಮಸ್ತವನ್ನೂ ತಿಳದವನಾಗಿರುವೆ । **ಪರಿವೃತಂ**—ಶತ್ರುಪಟ್ಟಣಗಳಲ್ಲಿ ಗೂಢವಾಗಿ ಬಚ್ಚಿಡಲ್ಪಟ್ಟ । **ರಾಧಃ**—ಧನವನ್ನು । **ನ**—ಈಗ । **ಅಪ ವೃಧಿ**—ನಮಗೆ ತಂದೊದಗಿಸು ।

ಭಾವಾರ್ಥ

ಅನೇಕರಿಂದ ಆಹ್ವಾನಿಸಲ್ಪಡುವ ಎಲೈ ಇಂದ್ರನೇ, ನಿನಗಿರುವ ಅತ್ಯಧಿಕವಾದ ಬಲವನ್ನು ನಿನ್ನ ಸ್ನೇಹಿತರೂ ನಿನ್ನನ್ನು ಸ್ತೋತ್ರಮಾಡುವವರೂ ಆದ ಜನರಿಗೂ ಕೊಡು ಎಲೈ ಧನವಂತನಾದ ಇಂದ್ರನೇ, ನೀನು ಸಮಸ್ತವನ್ನೂ ತಿಳಿದ ವಿವೇಕಿಯು. ಆದುದರಿಂದ ಶತ್ರುಗಳ ಪಟ್ಟಣಗಳ ದೃಢವಾದ ದ್ವಾರಗಳನ್ನು ಭೇದಿಸಿ ಅಲ್ಲಿ ಗೂಢವಾಗಿ ಬಚ್ಚಿಟ್ಟಿರುವ ಧನವನ್ನು ಈಗ ನಮಗೆ ತಂದೊಗಿಸು.

English Translation

Indra, you are the invoked of many, give to those men who are your friends that strength which, Maghvan, is yours › you, Maghavan, (have forced open) the firm (shut, gates of cities) discover, discriminator (of truth), the treasure now concealed,

ಸಂಹಿತಾಪಾಠಃ

ಇಂದ್ರೋ ರಾಜಾ ಜಗತಶ್ಚರ್ಷಣೀನಾಮಧಿ ಕ್ಷಮಿ ವಿಷುರೂಪಂ ಯದಸ್ತಿ ।

ತತೋ ದದಾತಿ ದಾಶುಷೇ ವಸೂನಿ ಚೋದದ್ರಾಧ ಉಪಸ್ತುತಶ್ಚಿದರ್ವಾಕ್ ॥

ಪದಪಾಠಃ

ಇಂದ್ರಃ । ರಾಜಾ । ಜಗತಃ । ಚರ್ಷಣೀನಾಂ । ಅಧಿ । ಕ್ಷಮಿ । ವಿಷುಽರೂಪಂ । ಯತ್ । ಅಸ್ತಿ ।

ತತಃ । ದದಾತಿ । ದಾಶುಷೇ । ವಸೂನಿ । ಚೋದತ್ । ರಾಧಃ । ಉಪಽಸ್ತುತಃ । ಚಿತ್ । ಅರ್ವಾಕ್ ॥

ಸಾಯಣಭಾಷ್ಯಂ

**ಸ ಇಂದ್ರೋ ಜಗತೋ ಜಂಗಮಸ್ಯ ಪಶ್ವಾದೇರ್ಯತೋ ರಾಜೇಶ್ವರೋ ಭವತಿ ಚರ್ಷಣೀನಾಂ ಮನುಷ್ಯಾಣಾಂ ಚ ರಾಜಾ ಭವತಿ ಅಧಿ ಕ್ಷಮಿ ಕ್ಷಮಾಯಾಂ ವಿಷುರೂಪಂ ನಾನಾರೂಪಂ ಯದ್ಧನಮಸ್ತಿ ತಸ್ಯಾಪಿ ರಾಜಾ ಭವತಿ ತತೋ ದಾಶುಷೇ ಯಜಮಾನಾಯ ವಸೂನಿ ಧನಾನಿ ದದಾತಿ । ಸ ಇಂದ್ರೋಽಸ್ಮಾಭಿರುಪಸ್ತುತ ಏವ ಸನ್ರಾಧೋ ಧನಮರ್ವಾಗಸ್ಮದಭಿಮುಖಂ ಚೋದತ್ । ಪ್ರೇರಯತು ॥**

ಪ್ರತಿಪದಾರ್ಥ

**ಇಂದ್ರಃ**—ಇಂದ್ರನು । **ಜಗತಃ**—ಜಗತ್ತಿಗೂ । **ಚರ್ಷಣೀನಾಂ**—ಸಕಲ ಮಾನವರಿಗೂ । **ರಾಜಾ**—ಈಶ್ವರನಾಗಿದ್ದಾನೆ । **ಅಧಿ ಕ್ಷಮಿ**—ಪೃಥ್ವಿಯಲ್ಲಿ । **ವಿಷುರೂಪಂ**—ಅನೇಕ ವಿಧವಾಗಿ । **ಯತ್**—ಯಾವ ಧನವು । **ಅಸ್ತಿ**—ಇರುತ್ತದೆಯೋ (ಅವೆಲ್ಲಕ್ಕೂ ಪ್ರಭುವಾಗಿದ್ದಾನೆ) । **ತತಃ**—ಆದುದರಿಂದಲೇ । **ದಾಶುಷೇ**—ಯಜಮಾನನಿಗೆ । **ವಸೂನಿ**—ಧನಗಳನ್ನು । **ದದಾತಿ ಚಿತ್**—ಕೊಡುತ್ತಾನೆ । **ಉಪಸ್ತುತಃ**—ನಮ್ಮಿಂದ ಪ್ರಶಂಸಿತನಾದ ಅದೇ ಇಂದ್ರನು । **ರಾಧಃ**—ಧನವನ್ನು । **ಅರ್ವಾಕ್**—ನಮಗಭಿಮುಖವಾಗಿ । **ಚೋದತ್**—ಪ್ರೇರಿಸಲಿ

ಭಾವಾರ್ಥ

ಇಂದ್ರನು ಸಕಲ ಜಗತ್ತಿಗೂ ಸಕಲ ಮಾನವರಿಗೂ ಈಶ್ವರನಾಗಿದ್ದಾನೆ ಪೃಥ್ವಿಯಲ್ಲಿ ಯಾವ ನಾನಾವಿಧವಾದ ಧನವಿರುತ್ತದೆಯೋ ಅವೆಲ್ಲಕ್ಕೂ ಪ್ರಭುವಾಗಿದ್ದಾನೆ. ಆದುದರಿಂದಲೇ, ಯಜಮಾನನಿಗೆ ಧನಗಳನ್ನು ಕೊಡುತ್ತಾನೆ. ನಮ್ಮಿಂದ ಪ್ರಶಂಸಿತನಾದ ಅದೇ ಇಂದ್ರನು ನಮಗೆ ಧನವನ್ನು ಒದಗಿಸಿಕೊಡಲಿ.

English Translation

Indra is lord of the earth and of men : (his is) the various wealth that exists upon the earth thence he gives riches to the donor (of oblations). may he, glorified by us, bestow upon us wealth.

ಸಂಹಿತಾಪಾಠಃ

ನೂ ಚಿನ್ನ ಇಂದ್ರೋ ಮಘವಾ ಸಹೂತೀ ದಾನೋ ವಾಜಂ ನಿ ಯಮತೇ ನ ಊತೀ ।

ಅನೂನಾ ಯಸ್ಯ ದಕ್ಷಿಣಾ ಪೀಪಾಯ ವಾಮಂ ನೃಭ್ಯೋ ಅಭಿವೀತಾ ಸಖಿಭ್ಯಃ ॥

ಪದಪಾಠಃ

**ನು । ಚಿತ್ । ನಃ । ಇಂದ್ರಃ । ಮಘಽವಾ । ಸಽಹೂತೀ । ದಾನಃ । ವಾಜಂ । ನಿ । ಯಮತೇ । ನಃ । ಊತೀ ।**

**ಅನೂನಾ । ಯಸ್ಯ । ದಕ್ಷಿಣಾ । ಪೀಪಾಯ । ವಾಮಂ । ನೃಽಭ್ಯಃ । ಅಭಿಽವೀತಾ । ಸಖಿಽಭ್ಯಃ ॥ ೪ ॥**

ಸಾಯಣಭಾಷ್ಯಂ

**ಮಘವಾ ಧನವಾನ್ ದಾನೋ ದದಾನಃ ಸ ಇಂದ್ರೋ ನೋಽಸ್ಮಾಕಂ ಸಹೂತೀ ಸಹೂತ್ಯಾ ಮರುದ್ಭಿಃ ಸಹಾಹ್ವಾನೇನ ವಾಜಮನ್ನಂ ನೋಽಸ್ಮಭ್ಯಮೂತ್ಯೈ ರಕ್ಷಾಯೈ ನೂ ಚಿತ್ ಕ್ಷಿಪ್ರಮೇವ ನಿ ಯಮತೇ । ಪ್ರಯಚ್ಛತು । ಯಸ್ಯೇಂದ್ರಸ್ಯಾನೂನಾ ಸಂಪೂರ್ಣಾಭಿವೀತಾಭಿಪ್ರಾಪ್ತಾ ದಕ್ಷಿಣಾ ದಾನಂ ಸಖಿಭ್ಯಃ ಸ್ತೋತೃಭ್ಯೋ ನೃಭ್ಯೋ ವಾಮಂ ವನನೀಯಂ ಧನಂ ಪೀಪಾಯ ದೋಗ್ಧಿ ॥**

ಪ್ರತಿಪದಾರ್ಥ

**ಯಸ್ಯ**— ಯಾವ ಇಂದ್ರನ । **ಅನೂನಾ**—ಸಂಪೂರ್ಣವಾದುದೂ । **ಅಭಿವೀತಾ**—ನಮ್ಮ ಅನುಭವಕ್ಕೆ ಯೋಗ್ಯವಾದುದೂ ವ । **ದಕ್ಷಿಣಾ**—ದಾನವು । **ಸಖಿಭ್ಯಃ**—ಸ್ತೋತೃಗಳಾದ । **ನೃಭ್ಯಃ**—ಮಾನವರಿಗೆ । **ವಾಮಂ**—ಅಪೇಕ್ಷಿತವಾದ ಧನವನ್ನು । **ಪೀಪಾಯ**—ಕರೆದು ಕೊಡುವುದೋ (ಅಂತಹ) । **ಮಘವಾ**—ಧನವಂತನೂ । **ದಾನಃ**—ಉದಾರವಾದ ದಾನಿಯೂ ಆದ । **ಇಂದ್ರಃ**— ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ನಃ**—ನಮಗೆ । **ವಾಜಂ**—ಅನ್ನವನ್ನು । **ಸಹೂತೀ**—ಮರುತ್ತುಗಳೊಡಗೂಡಿದವನಾಗಿ । **ನೂ ಚಿತ್**—ಕ್ಷಿಪ್ರವಾಗಿಯೇ । **ನಿ ಯಮತೇ**—ಕೊಡಸಿಕೊಡಲಿ

ಭಾವಾರ್ಥ

ಯಾವ ಇಂದ್ರನ ಸಂಪೂರ್ಣವಾದುದೂ, ನಮ್ಮ ಅನುಭವಕ್ಕೆ ಯೋಗ್ಯವಾದುದೂ ಆದ ದಾನವು ಸ್ತೋತೃಗಳಾದ ಮಾನವರಿಗೆ ಅಪೇಕ್ಷಿತವಾದ ಧನವನ್ನು ಕರೆದು ಕೊಡುವುದೋ ಅಂತಹ ಧನವಂತನೂ, ಉದಾರವಾದ ದಾನಿಯೂ ಆದ ಇಂದ್ರನು ನಮ್ಮ ರಕ್ಷಣಾರ್ಥನಾಗಿ, ನಮಗೆ ಅನ್ನವನ್ನು ಮರುತ್ತುಗಳೊಡಗೂಡಿದವನಾಗಿ ಕ್ಷಿಪ್ರವಾಗಿಯೇ ಕೊಡಿಸಿಕೊಡಲಿ

## English Translation

May the affluent and liberal Indra, upon being invoked togefher (with the Maruts), quickly bestow food for our preservation, he whose unlimited, experienced liberality yields desirable (wealth) to those men (who are his) friends.

ಸಂಹಿತಾಪಾಠಃ

ನೂ ಇಂದ್ರ ರಾಯೇ ವರಿವಸ್ಕೃಧೀ ನ ಆ ತೇ ಮನೋ ವವೃತ್ಯಾಮ ಮಘಾಯ
ಗೋಮದಶ್ವಾವದ್ರಥವದ್ವ್ಯಂತೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

ಪದಪಾಠಃ

ನು । ಇಂದ್ರ । ರಾಯೇ । ವರಿವಃ । ಕೃಧಿ । ನಃ । ಆ । ತೇ । ಮನಃ । ವವೃತ್ಯಾಮ । ಮಘಾಯ ।
ಗೋಽಮತ್ । ಅಶ್ವಽವತ್ । ರಥಽವತ್ । ವ್ಯಂತಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥

ಸಾಯಣಭಾಷ್ಯಂ

**ಹೇ ಇಂದ್ರ ನೋಽಸ್ಮಭ್ಯಂ ರಾಯೇ ಧನಪ್ರಾಪ್ತಯೇ ನು ಕ್ಷಿಪ್ರಂ ವರಿವೋ ಧನಂ । ವೇದೋ ವರಿವ ಇತಿ ಧನನಾಮಸು ಪಾಠಾತ್ । ತ್ವಂ ಕೃಧಿ । ಧೇಹಿ । ವಯಂ ತೇ ತವ ಮನೋ ಮಘಾಯ ಮಂಹನೀಯಾಯ್ಯೈ ಸ್ತುತ್ಯಾ ಆ ವವೃತ್ಯಾಮ । ಆವರ್ತಯಾಮ । ಸ್ಪಷ್ಟಮನ್ಯತ್ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ನಃ**—ನಮಗೆ । **ರಾಯೇ**—ಸಂಪತ್ಪುಷ್ಟಿಗಾಗಿ । **ನು**—ಕ್ಷಿಪ್ರವಾಗಿ । **ವರಿವಃ**—ಧನವನ್ನು । **ಕೃಧಿ**—ನಿರ್ಮಿಸಿಕೊಡು । **(ವಯಂ**—ನಾವು) । **ತೇ**—ನಿನ್ನ । **ಮನಃ**—ಮನಸ್ಸನ್ನು । **ಮಘಾಯ**—ಪೂಜ್ಯವಾದ ಸ್ತುತಿಯಿಂದ । **ಆ ವವೃತ್ಯಾಮ**—ನಮ್ಮ ಕಡೆಗೆ ತಿರುಗಿಸಿಕೊಳ್ಳುವೆವು । **ಗೋಮತ್**—ಗೋವುಗಳಿಂದ ಕೂಡಿದುದೂ । **ಅಶ್ವವತ್**—ಅಶ್ವಯುಕ್ತವಾದುದೂ । **ರಥವತ್**—ರಥಯುಕ್ತವಾದುದೂ ಆದ ಸಂಪತ್ತನ್ನು । **ವ್ಯಂತಃ**—ನಮಗೆ ಕೊಡುತ್ತಾ (ಎಲೈ ಇಂದ್ರಾದಿದೇವತೆಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಸದಾ**—ಯಾವಾಗಲೂ । **ಪಾತ**—ರಕ್ಷಿಸಿರಿ

ಭಾವಾರ್ಥ

ಎಲೈ ಇಂದ್ರನೇ, ನಮ್ಮ ಸಂಪತ್ಪುಷ್ಟಿಗಾಗಿ ನಮಗೆ ಕ್ಷಿಪ್ರವಾಗಿ ಧನವನ್ನು ನಿರ್ಮಿಸಿಕೊಡು. ನಿನ್ನ ಮನಸ್ಸನ್ನು ನಾವು ಪೂಜ್ಯವಾದ ಸ್ತುತಿಗಳಿಂದ ನಮ್ಮ ಕಡೆಗೆ ತಿರುಗಿಸಿಕೊಳ್ಳುವೆವು. ಗೋವುಗಳಿಂದ ಕೂಡಿದುದೂ, ಅಶ್ವಯುಕ್ತವಾದುದೂ, ರಥಯುಕ್ತವಾದುದೂ ಆದ ಸಂಪತ್ತನ್ನು ನಮಗೆ ಕೊಡುತ್ತಾ, ಎಲೈ ಇಂದ್ರಾದಿದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Indra, grant quickly wealth for our enrichment . may we attract your favour by our adoration . granting as (riches), comprising cattle, and horses, and chariots . ever cherish us with blessings

———

## ಇಪ್ಪತ್ತೆಂಟನೆಯ ಸೂಕ್ತವು

ಸಾಯಣಭಾಷ್ಯಂ

**ಬ್ರಹ್ಮಾ ಣ ಇಂದ್ರೇತಿ ಪಂಚರ್ಚಮೇಕಾದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಬ್ರಹ್ಮಾ ಣ ಇತ್ಯನುಕ್ರಾಂತಂ ॥ ಮಹಾವ್ರತೇ ನಿಷ್ಕೇವಲ್ಯೇ ಪಂಚಮತ್ವೇನಾಸ್ಯ ಸೂಕ್ತಸ್ಯ ವಿನಿಯೋಗ ಉಕ್ತಃ ॥ಅಷ್ಟಮೇಽಹನಿ ಪ್ರಉಗಶಸ್ತ್ರ ಆದ್ಯಸ್ತೃಚ ಐಂದ್ರಃ । ಆ. ೮-೧೦ । ಇತಿ ॥**

**ಅನುವಾದವು**—ಬ್ರಹ್ಮಾ ಣ ಇಂದ್ರ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಬ್ರಹ್ಮಾ ಣಃ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಪಠನಕಾಲದಲ್ಲಿ ಈ ಸೂಕ್ತವನ್ನು ಐದನೆಯ ಸೂಕ್ತವನ್ನಾಗಿ ಪಠಿಸಬೇಕೆಂದು ಇದರ ವಿನಿಯೋಗವು ಹೇಳಲ್ಪ

ಟ್ಟಿರುವುದು. ಮತ್ತು ಯಾಗದ ಎಂಟನೆಯ ದಿವಸ ಪ್ರಉಗಶಸ್ತ್ರಮಂತ್ರಪಠನದಲ್ಲಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಇಂದ್ರದೇವತಾಕವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಆ. ೮-೧೦ ಸೂತ್ರದಲ್ಲಿ ವಿವೃತವಾಗಿರುವುದು

## ಸೂಕ್ತ—೨೮

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೨೮ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ—೧೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ಬ್ರಹ್ಮಾ ಣ ಇಂದ್ರೋಪ ಯಾಹಿ ವಿದ್ವಾನರ್ವಾಂಚಸ್ತೇ ಹರಯೋ ಸಂತು ಯುಕ್ತಾಃ ।**
**ವಿಶ್ವೇ ಚಿದ್ಧಿ ತ್ವಾ ವಿಹವಂತ ಮರ್ತಾ ಅಸ್ಮಾಕಮಿಚ್ಛೃಣುಹಿ ವಿಶ್ವಮಿನ್ವ ॥**

ಪದಪಾಠಃ

ಬ್ರಹ್ಮ । ನಃ । ಇಂದ್ರ । ಉಪ । ಯಾಹಿ । ವಿದ್ವಾನ್ । ಅರ್ವಾಂಚಃ । ತೇ । ಹರಯಃ । ಸಂತು । ಯುಕ್ತಾಃ ।
ವಿಶ್ವೇ । ಚಿತ್ । ಹಿ । ತ್ವಾ । ವಿಽಹವಂತ । ಮರ್ತಾಃ । ಅಸ್ಮಾಕಂ । ಇತ್ । ಶೃಣುಹಿ । ವಿಶ್ವಂಽಇನ್ವ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ವಿದ್ವಾನ್ಜಾನನ್ನೋಽಸ್ಮಾಕಂ ಬ್ರಹ್ಮ ಸ್ತೋತ್ರಮುಪ ಯಾಹಿ । ತೇ ತವ ಹರಯೋಽಶ್ವಾಶ್ಚಾರ್ವಾಂಚೋಽಸ್ಮದಭಿಮುಖಾ ಯುಕ್ತಾಃ ಸಂತು । ಹೇ ವಿಶ್ವಮಿನ್ವ ವಿಶ್ವಪ್ರೀಣಯಿತರಿಂದ್ರ ತ್ವಾ ತ್ವಾಂ ವಿಶ್ವೇ ಸರ್ವೇ ಮರ್ತಾ ಮನುಷ್ಯಾಶ್ಚಿದ್ಧಿ ಯದ್ಯಪಿ ವಿಹವಂತ ಪೃಥಗ್ಘವಂತೇ ತಥಾಪ್ಯಸ್ಮಾಕಮಿದಮಸ್ಮಾಕಮೇವ ಹವಂ ಶೃಣುಹಿ । ಶೃಣು ।

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ವಿದ್ವಾನ್**—ಸಕಲವನ್ನೂ ತಿಳಿದವನಾಗಿ । **ನಃ**—ನಮ್ಮ । **ಬ್ರಹ್ಮ**—ಸ್ತೋತ್ರವನ್ನು ಲಕ್ಷಿಸಿ । **ಉಪ ಯಾಹಿ**—ದಯಮಾಡು । **ತೇ**—ನಿನ್ನ । **ಹರಯಃ**—ಅಶ್ವಗಳು । **ಅರ್ವಾಂಚಃ**—ನಮಗಭಿಮುಖವಾಗಿ ಬರುವಂತೆ । **ಯುಕ್ತಾಃ**—ರಥಕ್ಕೆ ಯೋಜಿಸಿದವುಗಳಾಗಿ । **ಸಂತು**—ಆಗಿರಲಿ । **ವಿಶ್ವಮಿನ್ವ**—ಸಕಲರಿಗೂ ಪ್ರೀತಿಪಾತ್ರನಾದ ಎಲೈ ಇಂದ್ರನೇ । **ತ್ವಾ ಚಿತ್**—ನಿನ್ನನ್ನೇ । **ವಿಶ್ವೇ**—ಸಮಸ್ತರಾದ । **ಮರ್ತಾಃ**—ಮಾನವರೂ । **ವಿಹವಂತ ಹಿ**—ವೈಯಕ್ತಿಕವಾಗಿ ಕರೆಯುತ್ತಾರಲ್ಲವೇ ? (ಆದರೂ ಸಹ) । **ಅಸ್ಮಾಕಂ ಇತ್**—ನಮ್ಮ ಸ್ತುತಿಯನ್ನೇ । **ಶೃಣುಹಿ**—ಕೇಳು.

### ಭಾವಾರ್ಥ

ಎಲೈ ಇಂದ್ರನೇ, ಸಕಲವನ್ನೂ ತಿಳಿದ ನೀನು ನಮ್ಮ ಸ್ತುತಿಯನ್ನು ಲಕ್ಷಿಸಿ ದಯಮಾಡು. ನಿನ್ನ ಅಶ್ವಗಳೂ ಸಹ ನಮಗಭಿಮುಖವಾಗಿ ಬರುವಂತೆ ರಥಕ್ಕೆ ಯೋಜಿತವಾಗಲಿ. ಸಕಲರಿಗೂ ಪ್ರೀತಿಪಾತ್ರನಾದ ಎಲೈ ಇಂದ್ರನೇ, ನಿನ್ನನ್ನೇ ಸಮಸ್ತ ಮಾನವರೂ ಸಹ ವೈಯಕ್ತಿಕವಾಗಿ ಸಹಾಯಕ್ಕೆ ಕರೆಯುತ್ತಾರಲ್ಲವೇ ? ಆದರೂ ಸಹ ನೀನು ನಮ್ಮ ಸ್ತುತಿಯನ್ನೇ ಕೇಳು

### English Translation

Iadra, who are wise, come to our adoration : let your horses harnessed be before us gratified of all (men) all mortals severally invoke you hear therefore our (invocation),

### ಸಂಹಿತಾಪಾಠಃ

ಹವಂ ತ ಇಂದ್ರ ಮಹಿಮಾ ವ್ಯಾನಡ್ಬ್ರಹ್ಮ ಯತ್ಪಾಸಿ ಶವಸಿನ್ನೃಷೀಣಾಂ ।
ಆ ಯದ್ವಜ್ರಂ ದಧಿಷೇ ಹಸ್ತ ಉಗ್ರ ಘೋರಃ ಸನ್ಕ್ರತ್ವಾ ಜನಿಷ್ಠಾ ಅಷಾಳ್ಹಃ ॥

### ಪದಪಾಠಃ

ಹವಂ । ತೇ । ಇಂದ್ರ । ಮಹಿಮಾ । ವಿ । ಆನಟ್ । ಬ್ರಹ್ಮ । ಯತ್ । ಪಾಸಿ । ಶವಸಿನ್ । ಋಷೀಣಾಂ ।
ಆ । ಯತ್ । ವಜ್ರಂ । ದಧಿಷೇ । ಹಸ್ತೇ । ಉಗ್ರ । ಘೋರಃ । ಸನ್ । ಕ್ರತ್ವಾ । ಜನಿಷ್ಠಾಃ । ಅಷಾಳ್ಹಃ ॥

### ಸಾಯಣಭಾಷ್ಯಂ

**ಹೇ ಶವಸಿನ್ಬಲವನ್ನಿಂದ್ರ ಯದ್ಯದಾ ಋಷೀಣಾಂ ಬ್ರಹ್ಮ ಸ್ತೋತ್ರಂ ಪಾಸಿ ರಕ್ಷಸಿ । ಸ್ತೋತ್ರಸ್ಯ ರಕ್ಷಣಂ ನಾಮ ಫಲಪ್ರದಾನಂ । ತದಾ ತೇ ತವ ಮಹಿಮಾ ಹವಂ । ಹವಃ ಸ್ತೋತಾ । ತಂ ವ್ಯಾನಟ್ । ವ್ಯಾಪ್ನೋತು । ಹೇ ಉಗ್ರೋಜಸ್ವಿನ್ನಿಂದ್ರ ಯದ್ಯದಾ ಹಸ್ತೇ ಪಾಣೌ ವಜ್ರಮಾ ದಧಿಷೇ ಧಾರಯಸಿ ತದಾ ಕ್ರತ್ವಾ ಶತ್ರುವಧಾದಿನಾ ಕರ್ಮಣಾ ಘೋರಃ ಸನ್ನಷಾಳ್ಹಃ ಶತ್ರುಭಿರನಭಿಭೂತೋ ಜನಿಷ್ಠಾಃ । ಅಜನಿಷ್ಠಾಃ। ಅಭವಃ ॥**

### ಪ್ರತಿಪದಾರ್ಥ

**ಶವಸಿನ್**—ಶಕ್ತಿಯುತನಾದ । **ಇಂದ್ರ**—ಎಲೈ ಇಂದ್ರನೇ । **ಯತ್**—ಯಾವಾಗ । **ಋಷೀಣಾಂ**—ಋಷಿಗಳ । **ಬ್ರಹ್ಮ**—ಸ್ತೋತ್ರಗಳನ್ನು । **ಪಾಸಿ**—ಫಲಪ್ರದಾನದಿಂದ ಆದರಿಸುವೆಯೋ (ಆಗ) । **ತೇ**—ನಿನ್ನ । **ಮಹಿಮಾ**—ಮಹಿಮೆಯು । **ಹವಂ**—ಸ್ತುತಿಕರ್ತನನ್ನು । **ವ್ಯಾನಟ್**—ವ್ಯಾಪಿಸುತ್ತದೆ । **ಉಗ್ರ**—ಉಗ್ರವಾದ ಶಕ್ತಿಯುಳ್ಳ ಎಲೈ ಇಂದ್ರನೇ । **ಯತ್**—ಯಾವಾಗ । **ಹಸ್ತೇ**—ಪಾಣಿಯಲ್ಲಿ । **ವಜ್ರಂ**—ವಜ್ರಾಯುಧವನ್ನು । **ಆ ದಧಿಷೇ**—ಧರಿಸುವೆಯೋ (ಆಗ) । **ಕ್ರತ್ವಾ**—ವೃತ್ರವಧಾದಿ ಕರ್ಮಗಳಿಂದ । **ಘೋರಃ ಸನ್**—ಭಯಂಕರನಾಗಿಯೂ । **ಅಷಾಳ್ಹಃ**—ಶತ್ರುಗಳಿಗೆ ಅಪ್ರತಿಹತನಾಗಿಯೂ । **ಜನಿಷ್ಠಾಃ**—ಆಗುವೆ.

ಭಾವಾರ್ಥ

ಶಕ್ತಿಯುತನಾದ ಎಲೈ ಇಂದ್ರನೇ, ಯಾವಾಗ ನೀನು ಋಷಿಗಳ ಸ್ತುತಿಗಳಿಗೆ ಪ್ರತಿಫಲವನ್ನು ಕೊಟ್ಟು ಅವನ್ನು ರಕ್ಷಿಸುವೆಯೋ ಆಗ ನಿನ್ನ ಮಹಿಮೆಯು ಸ್ತುತಿಕರ್ತನನ್ನೂ ವ್ಯಾಪಿಸುತ್ತದೆ. ಉಗ್ರವಾದ ಶಕ್ತಿಯುಳ್ಳ ಎಲೈ ಇಂದ್ರನೇ, ಯಾವಾಗ ನೀನು ಹಸ್ತದಲ್ಲಿ ವಜ್ರಾಯುಧವನ್ನು ಧರಿಸುವೆಯೋ ಆಗ ವೃತ್ರವಧಾದಿಕರ್ಮಗಳಿಂದ ಭಯಂಕರನಾಗಿಯೂ ಶತ್ರುಗಳಿಗೆ ಅಪ್ರತಿಹತನಾಗಿಯೂ ಆಗುವಿ.

English Translation

Endowed with strength, since you grant the prayers of the Rishis, let your greatness, Indra, extend to your invoker : and as, fierce deity, you hold the thunderbolt in your hand, then formidable by your exploits you have become invincible

ಸಂಹಿತಾಪಾಠಃ

ತವ ಪ್ರಣೀತೀಂದ್ರ ಜೋಹುವಾನಾನ್ತ್ಸಂ ಯನ್ನೄನ್ನ ರೋದಸೀ ನಿನೇಥ ।
ಮಹೇ ಕ್ಷತ್ರಾಯ ಶವಸೇ ಹಿ ಜಜ್ಞೇಽತೂತುಜಿಂ ಚಿತ್ತೂತುಜಿರಶಿಶ್ನತ್ ॥

ಪದಪಾಠಃ

ತವ । ಪ್ರಽನೀತೀ । ಇಂದ್ರ । ಜೋಹುವಾನಾನ್ । ಸಂ । ಯತ್ । ನೄನ್ । ನ । ರೋದಸೀ ಇತಿ । ನಿನೇಥ ।
ಮಹೇ । ಕ್ಷತ್ರಾಯ । ಶವಸೇ । ಹಿ । ಜಜ್ಞೇ । ಅತೂತುಜಿಂ । ಚಿತ್ । ತೂತುಜಿಃ । ಅಶಿಶ್ನತ್ ॥ ೩ ॥

ಸಾಯಣಭಾಷ್ಯಂ

**ಹೇ ಇಂದ್ರ ಯದ್ಯಸ್ತ್ವಂ ತವ ಪ್ರಣೀತೀ ಪ್ರಣೀತ್ಯಾ ಪ್ರಣಯನೇನ ಜೋಹುವಾನಾನ್ ಭೃಶಂ ಸ್ತುವತೋ ನೄನ್ನ್ರೋದಸೀ ದ್ಯಾವಾಪೃಥಿವ್ಯೌ ಸಂ ನಿನೇಥ ಸಂಗಮಯಸಿ । ದಿವಿ ಪೃಥಿವ್ಯಾಂ ಚ ಸ್ತೋತೄನ್ ಪ್ರತಿಷ್ಠಾಪಯಸೀತ್ಯರ್ಥಃ । ಸ ತ್ವಂ ಮಹೇ ಮಹತೇ ಕ್ಷತ್ರಾಯ ಧನಾಯ । ರಯಿಃ ಕ್ಷತ್ರಮಿತಿ ಧನನಾಮಸು ಪಾಠಾತ್ । ಶವಸೇ ಬಲಾಯ ಚ । ಯಜಮಾನೇಭ್ಯೋ ಮಹದ್ಧನಂ ಬಲಂ ಚ ದಾತುಮಿತ್ಯರ್ಥಃ । ಜಜ್ಞೇ । ಜಜ್ಞಿಷೇ । ಹೀತಿ ಹೇತ್ವರ್ಥೇ । ಯತ ಏವಮತಃ ಕಾರಣಾದತೂತುಜಿಮದಾತಾರಮಯಜಮಾನಂ ತೂತುಜಿರ್ದಾತಾ ಯಜಮಾನೋಽಶಿಶ್ನತ್ ॥ ಶ್ನಥತಿರ್ಹಿಂಸಾಕರ್ಮಾ । ತಸ್ಮಾಲ್ಲಡರ್ಥೇ ಲುಙ್ ॥ ಹಿನಸ್ತಿ । ಚಿದಿತ್ಯೇವಕಾರಾರ್ಥೇ ॥**

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । **ಯತ್**—ಯಾವ ನೀನು । **ತವ**—ನಿನಗೆ । **ಪ್ರಣೀತೀ**—ಸಮ್ಮತಿಯಿಂದ । **ಜೋಹುವಾನಾನ್**—ಸ್ತುತಿಯನ್ನು ಹಿಡಿಸತಕ್ಕ । **ನೄನ್**—ಮಾನವರನ್ನು । **ರೋದಸೀ**—ದ್ಯಾವಾಪೃಥಿವಿಗಳ ಅಂತರದಲ್ಲೆಲ್ಲಾ । **ಸಂ ನಿನೇಥ**—ಸಂಚರಿಸುವಂತೆ ಮಾಡುವೆಯೋ (ಅಂತಹ ನೀನು) । **ಮಹೇ**—ಮಹತ್ತಾದ ।

**ಕ್ಷತ್ರಾಯ**—ಧನದಾನಕ್ಕೂ । **ಶವಸೇ**—ಬಲಿದಾನಕ್ಕೂ । **ಜಜ್ಞೇ ಹಿ**—ಸಿದ್ಧನಾಗಿರುತ್ತೀಯೆ (ಆ ಪ್ರಭಾವ ದಿಂದಲೇ) । **ತೂತುಜಿಃ**—ಹವಿರಾದಿಗಳ ದಾತೃವು । **ಅತೂತುಜಿಂ**—ಅದಾತೃವನ್ನೂ । **ಅಶಿಶ್ನತ್ ಚಿತ್**—ಹಿಂಸಿಸುತ್ತಾನಲ್ಲವೇ

ಭಾವಾರ್ಥ

ಎಲೈ ಇಂದ್ರನೇ, ಯಾವ ನೀನು, ನಿನಗೆ ನಮ್ರತೆಯಿಂದ ಸ್ತುತಿಯನ್ನರ್ಪಿಸತಕ್ಕ ಮಾನವರನ್ನು ದ್ಯಾವಾಪೃಥಿವಿಗಳ ಅಂತರದಲ್ಲೆಲ್ಲಾ ಸಂಚರಿಸಲು ಸಮರ್ಥರನ್ನಾಗಿ ಮಾಡುವೆಯೋ ಅಂತಹ ನೀನು ಮಹತ್ತಾದ ಧನದಾನಕ್ಕೂ ಶಕ್ತಿಪ್ರದಾನಕ್ಕೂ ಸಿದ್ಧನಾಗಿ ಅವನ್ನು ಕೊಡಲರಿಯುತ್ತೀಯೆ. ಆ ಪ್ರಭಾವದಿಂದಲೇ, ಹವಿರಾದಿಗಳ ದಾತೃವು, ಅದಾತೃವಾದ ಕೃಪಣರನ್ನು ಹಿಂಸಿಸಲು ಸಮರ್ಥನಾಗುತ್ತಾನೆ.

English Translation

Since, Indra, by your guidance, you have conducted men, your zealous worshippers, over heaven and earth, you are born to (bestow) great wealth and sttength, whence the presenter of offerings overcomes him who offers them not.

ಸಂಹಿತಾಪಾಠಃ

ಏಭಿರ್ನ ಇಂದ್ರಾಹಭಿರ್ದಶಸ್ಯ ದುರ್ಮಿತ್ರಾಸೋ ಹಿ ಕ್ಷಿತಯಃ ಪವಂತೇ ।
ಪ್ರತಿ ಯಚ್ಚಷ್ಟೇ ಅನೃತಮನೇನಾ ಅವ ದ್ವಿತಾ ವರುಣೋ ಮಾಯಿ ನಃ ಸಾತ್

ಪದಪಾಠಃ

ಏಭಿಃ । ನಃ । ಇಂದ್ರ । ಅಹಽಭಿಃ । ದಶಸ್ಯ । ದುಃಽಮಿತ್ರಾಸಃ । ಹಿ । ಕ್ಷಿತಯಃ । ಪವಂತೇ ।
ಪ್ರತಿ । ಯತ್ । ಚಷ್ಟೇ । ಅನೃತಂ । ಅನೇನಾಃ । ಅವ । ದ್ವಿತಾ । ವರುಣಃ । ಮಾಯೀ । ನಃ । ಸಾತ್ ॥

ಸಾಯಣಭಾಷ್ಯಂ

ಹೇ ಇಂದ್ರ ದುರ್ಮಿತ್ರಾಸೋ ದುಷ್ಟಮಿತ್ರಭೂತಾ ಬಾಧಕಾಃ ಕ್ಷಿತಯೋ ಜನಾಃ ಪವಂತೇ । ಅಭಿಗಚ್ಛಂತಿ । ಪವತಿರ್ಗತಿಕರ್ಮಾ । ತೇಭ್ಯೋ ಧನಮಾಚ್ಛಿದ್ಯ ನೋಽಸ್ಮಭ್ಯಮೇಭಿಃ ಸಾತ್ತ್ವಿಕೈರಹಭಿರಹೋಭಿರ್ದಶಸ್ಯ । ದೇಹಿ । ಕಿಂಚಾನೇನಾ ಏನಸಾಂ ನಿಹಂತಾ ಮಾಯೀ ಪ್ರಜ್ಞಾವಾನ್ ವರುಣೋ ಯದನೃತಂ ನೋಽಸ್ಮಾಸು ಪ್ರತಿ ಚಷ್ಟೇ ಅಭಿಪಶ್ಯತಿ ತದನೃತಂ ಹೇ ಇಂದ್ರ ತ್ವತ್ಪ್ರಸಾದಾದ್ದ್ವಿತಾ ದ್ವಿಧಾವ ಸಾತ್ । ಅವಸ್ಯತು । ವಿಮೋಚಯತು । ತಥಾ ಚ ಯಾಸ್ಕಃ । ಸ್ಯತಿರುಪಸೃಷ್ಟೋ ವಿಮೋಚನೇ । ನಿ. ೧–೧೭ । ಇತಿ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ | **ಏಭಿಃ ಅಹಭಿಃ**—ಈ ಸುದಿವಸಗಳಲ್ಲಿ | **ದುರ್ಮಿತ್ರಾಸಃ**—ನಮ್ಮ ಹಿಂಸಕರಾದ | **ಕ್ಷಿತಯಃ**—ಜನರು | **ಪವಂತೇ**—ಯಾವ ಧನವನ್ನು ಹೊಂದಿರುವರೋ (ಆ ಧನವನ್ನ ಪಹರಿಸಿ) | **ನಃ**—ನಮಗೆ | **ದಶಸ್ಯ**—ಕೊಡು | **ಅನೇನಾಃ**—ಪಾಪನಾಶಕನೂ | **ಮಾಯೀ**—ಪ್ರಜ್ಞಾವಂತನೂ ಆದ | **ವರುಣಃ**—ವರುಣನು | **ಯತ್**—ಯಾವ | **ಅನೃತಂ**—ಅಸತ್ಯಾದಿಗಳನ್ನು | **ನಃ**—ನಮ್ಮಲ್ಲಿ | **ಪ್ರತಿಚಕ್ಷೇ**—ವೀಕ್ಷಿಸುವನೋ (ಅವೆಲ್ಲವೂ) | **ದ್ವಿತಾ**—ದ್ವಿಗುಣಿತವಾಗಿ | **ಅವ ಸಾತ್**—ನಮ್ಮಿಂದ ನಾಶವಾಗಿ ಹೋಗಲಿ.

ಭಾವಾರ್ಥ

ಎಲೈ ಇಂದ್ರನೇ, ಈ ಸುದಿವಸಗಳಲ್ಲಿ ನಮ್ಮ ಹಿಂಸಕರಾದ ಜನರು ಯಾವ ಧನವನ್ನು ಹೊಂದಿರುವರೋ ಆ ಧನವನ್ನ ಪಹರಿಸಿ ನಮಗೆ ಕೊಡು. ಪಾಪನಾಶಕನೂ, ಪ್ರಜ್ಞಾವಂತನೂ ಆದ ವರುಣನು ಯಾವ ಅಸತ್ಯಾದಿಗಳನ್ನು ನಮ್ಮಲ್ಲಿ ವೀಕ್ಷಿಸುವನೋ ಅವೆಲ್ಲವೂ ದ್ವಿಗುಣಿತವಾಗಿ ನಮ್ಮಿಂದ ನಾಶವಾಗಲಿ.

English Translation

Grant us, Indra, with these days, (wealth) for unfriendly men approach may the untruth which the wise and sinless Varuna observes in us, (through your favour, Indra) doubly disappear

ಸಂಹಿತಾಪಾಠಃ

ಪ್ರೋಚೇಮೇದಿಂದ್ರಂ ಮಘವಾನಮೇನಂ ಮಹೋ ರಾಯೋ ರಾಧಸೋ ಯದ್ದದನ್ನಃ |
ಯೋ ಅರ್ಚತೋ ಬ್ರಹ್ಮಕೃತಿಮವಿಷ್ಠೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ || ೫ ||

ಪದಪಾಠಃ

ಪ್ರೋಚೇಮ | ಇತ್ | ಇಂದ್ರಂ | ಮಘऽವಾನಂ | ಏನಂ | ಮಹಃ | ರಾಯಃ | ರಾಧಸಃ | ಯತ್ | ದದತ್ | ನಃ | ಯಃ | ಅರ್ಚತಃ | ಬ್ರಹ್ಮऽಕೃತಿಂ | ಅವಿಷ್ಠಃ | ಯೂಯಂ | ಪಾತ | ಸ್ವಸ್ತಿऽಭಿಃ | ಸದಾ | ನಃ || ೫ ||

ಸಾಯಣಭಾಷ್ಯಂ

ಯದ್ಯ ಇಂದ್ರೋ ಮಹೋ ಮಹತೋ ರಾಧಸಃ ಸಂರಾಧಕಸ್ಯ ರಾಯೋ ಧನಸ್ಯ | ದ್ವಿತೀಯಾರ್ಥೇ ಷಷ್ಠೀ | ಸಂರಾಧಕಂ ಮಹದ್ಧನಂ ನೋऽಸ್ಮಭ್ಯಂ ದದತ್ ಪ್ರಾಯಚ್ಛತ್ ಯಶ್ಚೇಂದ್ರೋऽರ್ಚತಃ ಸ್ತುವತೋ ಬ್ರಹ್ಮಕೃತಿಂ ಕ್ರಿಯಮಾಣಂ ಬ್ರಹ್ಮ ಸ್ತೋತ್ರಮವಿಷ್ಠೋऽತಿಶಯೇನ ರಕ್ಷಿತಾ ಗಂತಾ ಭವತಿ ತಮೇನಂ ಮಘವಾನಂ ಧನವಂತಮಿಂದ್ರಂ ಪ್ರೋಚೇಮೇತ್ | ಸ್ತುವೇಮೈವ | ಸ್ಪಷ್ಟಮನ್ಯತ್ ||

ಪ್ರತಿಪದಾರ್ಥ

**ಯತ್**—ಯಾವ ಇಂದ್ರನು | **ಮಹಃ**—ಮಹತ್ತಾದುದೂ | **ರಾಧಸಃ**—ಪೂಜ್ಯವಾದುದೂ ಆದ | **ರಾಯಃ**—ಧನವನ್ನು | **ನಃ**—ನಮಗೆ | **ದದತ್**—ಕೊಡುವನೋ | **ಯಃ**—ಯಾವ ಇಂದ್ರನು | **ಅರ್ಚತಃ**—ಸ್ತುತಿಸತಕ್ಕ ಸ್ತೋತೃವಿನ | **ಬ್ರಹ್ಮಕೃತಿಂ**—ಸ್ತುತಿಯನ್ನು | **ಅವಿಷ್ಟಃ**—ಅತಿಶಯವಾಗಿ ರಕ್ಷಿಸುವನೋ | **ಏನಂ**—ಅಂತಹ | **ಮಘವಾನಂ**—ಧನವಂತನಾದ | **ಇಂದ್ರಂ**—ಇಂದ್ರನನ್ನು | **ವೋಚೇಮ ಇತ್**—ಖಂಡಿತವಾಗಿ ಸ್ತುತಿಸುತ್ತೇವೆ (ಎಲೈ ಇಂದ್ರಾದಿಗಳೇ)| **ಯೂಯಂ**—ನೀವು | **ನಃ**—ನಮ್ಮನ್ನು | **ಸದಾ**—ಯಾವಾಗಲೂ | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ.

ಭಾವಾರ್ಥ

ಯಾವ ಇಂದ್ರನು ಮಹತ್ತಾದುದೂ, ಪೂಜ್ಯವಾದುದೂ ಆದ ಧನವನ್ನು ನಮಗೆ ಕೊಡುವನೋ ಯಾವ ಇಂದ್ರನು ಸ್ತುತಿಸತಕ್ಕ ಸ್ತೋತೃವಿನ ಸ್ತುತಿಯನ್ನು ಅತಿಶಯವಾಗಿ ರಕ್ಷಿಸುವನೋ ಅಂತಹ ಧನವಂತನಾದ ಇಂದ್ರನನ್ನು ಖಂಡಿತವಾಗಿ ಸ್ತುತಿಸುತ್ತೇವೆ ಎಲೈ ಇಂದ್ರಾದಿಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

Let us glorify that opulent Indra, that he may give us great and valuable riches, he who is the chief protector of the pious rites of the worshipper . ever cherish us with blessings.

---

## ಇಪ್ಪತ್ತೊಂಭತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಅಯಂ ಸೋಮ ಇಂದ್ರೇತಿ ಪಂಚರ್ಚಂ ದ್ವಾದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ | ಅಯಂ ಸೋಮ ಇತ್ಯನುಕ್ರಾಂತಂ || ವ್ಯೂಳ್ಹೇ ದಶರಾತ್ರೇ ನವಮೇಽಹನ್ಯಯಂ ಸೋಮ ಇಂದ್ರೇತಿ ಪ್ರಉಗಶಸ್ತ್ರ ಇಂದ್ರಸ್ತೃಚಃ | ಸೂತ್ರಿತಂ ಚ | ಅಯಂ ಸೋಮ ಇಂದ್ರ ತುಭ್ಯಂ ಸುನ್ವ ಆ ತು ಪ್ರ ಬ್ರಹ್ಮಾಣಃ | ಆ ೮-೧೧ | ಇತಿ || ಷೋಡಶಿಶಸ್ತ್ರೇ ಬ್ರಹ್ಮನ್ವೀರೇತ್ಯೇಷಾ ತ್ರಿಷ್ಟುಪ್ | ಸೂತ್ರಿತಂ ಚ | ಬ್ರಹ್ಮನ್ವೀರ ಬ್ರಹ್ಮಕೃತಿಂ ಜುಷಾಣ ಇತಿ ತ್ರಿಷ್ಟುಪ್ | ಆ. ೬-೨ | ಇತಿ ||**

**ಅನುವಾದವು**—**ಅಯಂ ಸೋಮ ಇಂದ್ರ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಇಂದ್ರನು ದೇವತೆಯು, ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ **ಅಯಂ ಸೋಮಃ** ಎಂದು ಹೇಳಿರುವುದು. ವ್ಯೂಳ್ಹವೆಂಬ ದಶರಾತ್ರ ಯಾಗದಲ್ಲಿ ಒಂಭತ್ತನೆಯ ದಿವಸ **ಅಯಂ ಸೋಮ ಇಂದ್ರ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪ್ರಉಗ ಶಸ್ತ್ರಮಂತ್ರಗಳಲ್ಲಿ ಇಂದ್ರದೇವತಾಕವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಯಂ ಸೋಮ ಇಂದ್ರ ತುಭ್ಯಂ ಸುನ್ವ ಆ ತು ಪ್ರ ಬ್ರಹ್ಮಾಣಃ** ಎಂಬ ಸೂತ್ರದಿಂದ (ಆ. ೮-೧೧) ವಿವೃತವಾಗಿರುವುದು

ಮತ್ತು ಷೋಡಶಿಶಸ್ತ್ರಮಂತ್ರಗಳಲ್ಲಿಯೂ **ಬ್ರಹ್ಮನ್ವೀರ** ಎಂಬ ಎರಡನೆಯ ಋಕ್ಕನ್ನು ತ್ರಿಷ್ಟುಪ್‌ಛಂದಸ್ಸಿನ ಮಂತ್ರಕ್ಕಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಬ್ರಹ್ಮನ್ವೀರ ಬ್ರಹ್ಮಕೃತಿಂ ಜುಷಾಣ ಇತಿ ತ್ರಿಷ್ಟುಪ್** ಎಂಬ ಸೂತ್ರದಿಂದ (ಆ. ೬-೨) ವಿವೃತವಾಗಿರುವುದು.

## ಸೂಕ್ತ—೨೯

ಮಂಡಲ—೭ || ಅನುವಾಕ—೨ || ಸೂಕ್ತ—೨೯ ||
ಅಷ್ಟಕ—೫ || ಅಧ್ಯಾಯ—೩ || ವರ್ಗ—೧೩ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ||
ಋಷಿಃ—ವಸಿಷ್ಠಃ ||
ದೇವತಾ—ಇಂದ್ರಃ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

ಅಯಂ ಸೋಮ ಇಂದ್ರ ತುಭ್ಯಂ ಸುನ್ವ ಆ ತು ಪ್ರ ಯಾಹಿ ಹರಿವಸ್ತದೋಕಾಃ
ಪಿಬಾ ತ್ವ೧ಸ್ಯ ಸುಷುತಸ್ಯ ಚಾರೋರ್ದದೋ ಮಘಾನಿ ಮಘವನ್ನಿಯಾನಃ ||

ಪದಪಾಠಃ

**ಅಯಂ । ಸೋಮಃ । ಇಂದ್ರ । ತುಭ್ಯಂ । ಸುನ್ವೇ । ಆ । ತು । ಪ್ರ । ಯಾಹಿ । ಹರಿಽವಃ । ತತ್‌ಽಓಕಾಃ ।**
**ಪಿಬ । ತು । ಅಸ್ಯ । ಸುಽಸುತಸ್ಯ । ಚಾರೋಃ । ದದಃ । ಮಘಾನಿ । ಮಘಽವನ್ । ಇಯಾನಃ ॥ ೧ ॥**

ಸಾಯಣಭಾಷ್ಯಂ

**ಹೇ ಇಂದ್ರ ತುಭ್ಯಂ ತ್ವದರ್ಥಮಯಮೇಷ ಸೋಮಃ ಸುನ್ವೇ । ಅಭಿಷುತೋಽಭವತ್ । ಹೇ ಹರಿವೋ ಹರಿವನ್ನಿಂದ್ರ ತದೋಕಾಃ । ಸವನೀಯೋ ಯಸ್ಯಾಸೌ ತದೋಕಾಃ । ತು ಕ್ಷಿಪ್ರಮಾ ಪ್ರ ಯಾಹಿ। ಸುಷುತಸ್ಯ । ಸಮ್ಯಗಭಿಷುತಸ್ಯ ಚಾರೋಃ ಶೋಭನಸ್ಯಾಸ್ಯ ಸೋಮಸ್ಯ । ದ್ವಿತೀಯಾರ್ಥೇ ಷಷ್ಠೀ । ಸಮ್ಯಗಭಿಷುತಂ ಶೋಭನಮಿತ್ಯರ್ಥಃ । ತು ಕ್ಷಿಪ್ರಂ ಪಿಬ ಚ । ಅಪಿ ಚ ಹೇ ಮಘವನ್ ಇಯಾನ ಉಪಗಮ್ಯಮಾನೋ ಯಾಚ್ಯಮಾನೋ ವಾ ತ್ವಂ ಮಘಾನಿ ಧನಾನಿ ದದಃ । ಅಸ್ಮಭ್ಯಂ ದೇಹಿ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತುಭ್ಯಂ**—ನಿನ್ನನ್ನುದ್ದೇಶಿಸಿ । **ಅಯಂ ಸೋಮಃ**—ಈ ಸೋಮವು । **ಸುನ್ವೇ**—ಹಿಂಡಿ ಸಿದ್ಧವಾಗಿದೆ । **ಹರಿವಃ**—ಹರಿನಾಮಕವಾದ ಅಶ್ವವುಳ್ಳ ಎಲೈ ಇಂದ್ರನೇ । **ತದೋಕಾಃ**—ಪೂಜೆಗೆ ಸಿದ್ಧವಾಗಿರುವ ಅದೇ ಗೃಹಕ್ಕೆ । **ತು**—ಕ್ಷಿಪ್ರವಾಗಿ । **ಆ ಪ್ರ ಯಾಹಿ**—ದಯಮಾಡು । **ಸುಷುತಸ್ಯ**—ಉತ್ತಮವಾಗಿ ಹಿಂಡಿರುವುದೂ । **ಚಾರೋಃ**—ಮನೋಹರವಾಗಿರುವುದೂ ಆದ । **ಅಸ್ಯ**—ಈ ಸೋಮವನ್ನು । **ತು**—ಕ್ಷಿಪ್ರವಾಗಿ । **ಪಿಬ**—ಪಾನಮಾಡು । **ಮಘವನ್**—ಧನವಂತನಾದ ಎಲೈ ಇಂದ್ರನೇ । **ಇಯಾನಃ**—ಪ್ರಾರ್ಥಿಸಲ್ಪಟ್ಟಾಗ । **ಮಘಾನಿ**—ನಮಗೆ ಧನಗಳನ್ನು । **ದದಃ**—ಕೊಡು.

ಭಾವಾರ್ಥ

ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಈ ಸೋಮವು ಹಿಂಡಿ ಸಿದ್ಧವಾಗಿದೆ. ಹರಿನಾಮಕವಾದ ಅಶ್ವವುಳ್ಳ ಎಲೈ ಇಂದ್ರನೇ, ಪೂಜೆಗೆ ಸಿದ್ಧವಾಗಿರುವ ಅದೇ ಗೃಹಕ್ಕೆ ಕ್ಷಿಪ್ರವಾಗಿ ದಯಮಾಡು ಉತ್ತಮವಾಗಿ ಹಿಂಡಿರುವುದೂ, ಮನೋಹರವಾಗಿರುವುದೂ ಆದ ಈ ಸೋಮವನ್ನು ಕ್ಷಿಪ್ರವಾಗಿ ಪಾನಮಾಡು ಧನವಂತನಾದ ಎಲೈ ಇಂದ್ರನೇ, ನಮ್ಮಿಂದ ಪ್ರಾರ್ಥಿಸಲ್ಪಟ್ಟಾಗಲೆಲ್ಲಾ ನಮಗೆ ಧನಗಳನ್ನು ಕೊಡು.

English Translation

This Some is poured out, Indra, for you : come, lord of bay steeds, to that dwelling (where it is prepared : drink of the plentifully-effused and grateful libation) give us, Maghavan, when solicited for them, riches,

ಸಂಹಿತಾಪಾಠಃ

ಬ್ರಹ್ಮನ್ವೀರ ಬ್ರಹ್ಮಕೃತಿಂ ಜುಷಾಣೋಽರ್ವಾಚೀನೋ ಹರಿಭಿರ್ಯಾಹಿ ತೂಯಂ ।
ಅಸ್ಮಿನ್ನೂ ಷು ಸವನೇ ಮಾದಯಸ್ವೋಪ ಬ್ರಹ್ಮಾಣಿ ಶೃಣವ ಇಮಾ ನಃ ॥

ಪದಪಾಠಃ

ಬ್ರಹ್ಮನ್ । ವೀರ । ಬ್ರಹ್ಮಽಕೃತಿಂ । ಜುಷಾಣಃ । ಅರ್ವಾಚೀನಃ । ಹರಿಽಭಿಃ । ಯಾಹಿ । ತೂಯಂ ।
ಅಸ್ಮಿನ್ । ಊಂ ಇತಿ । ಸು । ಸವನೇ । ಮಾದಯಸ್ವ । ಉಪ । ಬ್ರಹ್ಮಾಣಿ । ಶೃಣವಃ । ಇಮಾ । ನಃ ॥

ಸಾಯಣಭಾಷ್ಯಂ

ಹೇ ಬ್ರಹ್ಮನ್ ಪರಿವೃಢ ವೀರೇಂದ್ರ ಬ್ರಹ್ಮಕೃತಿಂ ಕ್ರಿಯಮಾಣಂ ಸ್ತೋತ್ರಂ ಜುಷಾಣಃ ಸೇವಮಾನೋಽರ್ವಾಚೀನೋಽಸ್ಮದಭಿಮುಖಃ ಸನ್ ಹರಿಭಿರಶ್ವೈಸ್ತೂಯಂ ಕ್ಷಿಪ್ರಂ ಯಾಹಿ । ಅಸ್ಮಿನ್ನುಸ್ಮಿನ್ನೇವ ಸವನೇ ಯಜ್ಞೇ ಸು ಸುಷ್ಠು ಮಾದಯಸ್ವ ಚ । ನೋಽಸ್ಮದೀಯಾನೀಮಾನಿ ಬ್ರಹ್ಮಾಣಿ ಸ್ತೋತ್ರಾಣಿ ಚೋಪ ಶೃಣವಃ । ಉಪಶೃಣು ॥

ಪ್ರತಿಪದಾರ್ಥ

**ಬ್ರಹ್ಮನ್**—ಪ್ರವೃದ್ಧಮಾನನೂ । **ವೀರ**—ಪರಾಕ್ರಮಿಯೂ ಆದ ಎಲೈ ಇಂದ್ರನೇ । **ಬ್ರಹ್ಮಕೃತಿಂ**—ನಮ್ಮಿಂದ ನಿರ್ಮಿತವಾದ ಸ್ತುತಿಯನ್ನು । **ಜುಷಾಣಃ**—ಸೇವಿಸುತ್ತಾ । **ಅರ್ವಾಚೀನಃ**—ನಮಗಭಿಮುಖವಾಗಿದ್ದು । **ಹರಿಭಿಃ**—ಅಶ್ವಗಳೊಡನೆ । **ತೂಯಂ**—ಕ್ಷಿಪ್ರವಾಗಿ । **ಯಾಹಿ**—ದಯಮಾಡು । **ಅಸ್ಮಿನ್ನು ಸವನೇ**—ಇದೇ ಯಜ್ಞದಲ್ಲಿಯೇ । **ಸು**—ಅತಿಶಯವಾಗಿ । **ಮಾದಯಸ್ವ**—ತೃಪ್ತಿಯನ್ನು ಹೊಂದು । **ನಃ**—ನಮ್ಮಿಂದ ಕೃತವಾದ । **ಇಮಾ ಬ್ರಹ್ಮಾಣಿ**—ಈ ಸ್ತುತಿಗಳನ್ನು । **ಉಪ ಶೃಣವಃ**—ದಯವಿಟ್ಟು ಕೇಳು.

ಭಾವಾರ್ಥ

ಪ್ರವೃದ್ಧಮಾನನೂ, ಪರಾಕ್ರಮಿಯೂ ಆದ ಎಲೈ ಇಂದ್ರನೇ, ನಮ್ಮಿಂದ ನಿರ್ಮಿತವಾದ ಸ್ತುತಿಯನ್ನು ಸೇವಿಸುತ್ತಾ ನಮಗಭಿಮುಖನಾಗಿ ನಿನ್ನ ಅಶ್ವಗಳೊಡನೆ ದಯಮಾಡು ಇದೇ ಯಜ್ಞದಲ್ಲಿಯೇ ಇದ್ದು ಅತಿಶಯವಾದ ತೃಪ್ತಿಯನ್ನು ಹೊಂದು ನಮ್ಮಿಂದ ಕೃತವಾದ ಈ ಸ್ತುತಿಗಳನ್ನು ದಯವಿಟ್ಟು ಕೇಳು

English Translation

Magnified hero, Indra, approving of the sacred rite, come to us speedily with your steeds, be exhilarated at this sacrifice hear these our prayers.

ಸಂಹಿತಾಪಾಠಃ

ಕಾ ತೇ ಅಸ್ತ್ಯರಂಕೃತಿಃ ಸೂಕ್ತೈಃ ಕದಾ ನೂನಂ ತೇ ಮಘವನ್ದಾಶೇಮ ।

ವಿಶ್ವಾ ಮತೀರಾ ತತನೇ ತ್ವಾಯಾಧಾ ಮ ಇಂದ್ರ ಶೃಣವೋ ಹವೇಮಾ ॥ ೩ ॥

ಪದಪಾಠಃ

ಕಾ । ತೇ । ಅಸ್ತಿ । ಅರಂऽಕೃತಿಃ । ಸುऽಉಕ್ತೈಃ । ಕದಾ । ನೂನಂ । ತೇ । ಮಘऽವನ್ । ದಾಶೇಮ ।

ವಿಶ್ವಾಃ । ಮತೀಃ । ಆ । ತತನೇ । ತ್ವಾऽಯಾ । ಅಧ । ಮೇ । ಇಂದ್ರ । ಶೃಣವಃ । ಹವಾ । ಇಮಾ ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತವ ಸೂಕ್ತೈರಸ್ಮಾಭಿಃ ಕ್ರಿಯಮಾಣೈಃ ಸ್ತೋತ್ರೈರರಂಕೃತಿರಲಂಕೃತಿಃ ಕಾಸ್ತಿ । ಕೀದೃಶೀ ಭವತಿ । ಹೇ ಮಘವನ್ ತೇ ತವ ಕದಾ ನೂನಂ ಕದಾ ಖಲು ದಾಶೇಮ । ಪ್ರೀತಿಮುತ್ಪಾದಯೇಮ । ತ್ವಾಯಾ ತ್ವತ್ಕಾಮನಯೈವ ವಿಶ್ವಾ ಮತೀಃ ಸರ್ವಾಃ ಸ್ತುತೀರಾ ತತನೇ । ಕರೋಮಿ ಅಧಾತಃ ಕಾರಣಾತ್ । ಹೇ ಇಂದ್ರ ಮೇ ಮದೀಯಾನೀಮಾನಿ ಹವಾ ಹವಾನಿ ಸ್ತೋತ್ರಾಣಿ ಶೃಣವಃ । ಶೃಣು ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ತೇ**—ನಿನಗೆ । **ಸೂಕ್ತೈಃ**—ನಮ್ಮಿಂದ ನಿರ್ಮಿತವಾದ ಸ್ತುತಿಗಳಿಂದ । **ಅರಂಕೃತಿಃ**—ಅಲಂಕಾರಾತ್ಮಕವಾದ ಅಂಶವು । **ಕಾ ಅಸ್ತಿ**—ಯಾವುದಿರುತ್ತದೆ । **ಮಘವನ್**—ಧನವಂತನಾದ ಎಲೈ ಇಂದ್ರನೇ । **ತೇ**—ನಿನಗೆ । **ಕದಾ**—ಯಾವಾಗ । **ನೂನಂ**—ಅವಶ್ಯವಾಗಿ । **ದಾಶೇಮ**—ಹವಿಸ್ಸನ್ನ ಕೊಡಬಲ್ಲೆವು । **ತ್ವಾಯಾ**—ನಿನ್ನನ್ನೇ ಇಚ್ಛಿಸುವ । **ವಿಶ್ವಾಃ**—ಸಮಸ್ತವಾದ । **ಮತೀಃ**—ಸ್ತುತಿಗಳನ್ನು । **ಆ ತತನೇ**—ನಿರ್ಮಿಸುತ್ತೇನೆ । **ಅಧ**—ಆದುದರಿಂದಲೇ । **ಇಂದ್ರ**—ಎಲೈ ಇಂದ್ರನೇ । **ಮೇ**—ನನ್ನ । **ಇಮಾ ಹವಾ**—ಈ ಸ್ತುತಿಗಳನ್ನು । **ಶೃಣವಃ**—ಕೇಳು ।

ಭಾವಾರ್ಥ

ಎಲೈ ಇಂದ್ರನೇ, ನಮ್ಮಿಂದ ನಿರ್ಮಿತವಾದ ಸ್ತುತಿಗಳಿಂದ ನಿನಗೆ ಅಲಂಕಾರಾತ್ಮಕವಾದ ಅಂಶವು ಯಾವುದಿರುತ್ತದೆ? ಧನವಂತನಾದ ಎಲೈ ಇಂದ್ರನೇ, ನಾವು ನಿನಗೆ ಅವಶ್ಯವಾದ ಹವಿಸ್ಸನ್ನು ಯಾವಾಗ ಅರ್ಪಿಸೋಣ? ನಿನ್ನನ್ನೇ ಇಚ್ಛಿಸುವ ಸಮಸ್ತವಾದ ಸ್ತುತಿಗಳನ್ನು ನಾನು ನಿರ್ಮಿಸುತ್ತೇನೆ. ಆದುದರಿಂದಲೇ, ಎಲೈ ಇಂದ್ರನೇ, ನನ್ನ ಈ ಸ್ತುತಿಗಳನ್ನು ಕೇಳು.

English Translation

What satisfaction is there to you from our hymns? when Maghavan, may we indeed present to you (oblations)? I expatiate in all praises addressed to you: hear, Indra, these my invocations.

ಸಂಹಿತಾಪಾಠಃ

ಉತೋ ಘಾ ತೇ ಪುರುಷ್ಯಾ ಇದಾಸನ್ಯೇಷಾಂ ಪೂರ್ವೇಷಾಮಶೃಣೋಋಷೀಣಾಂ |
ಅಧಾಹಂ ತ್ವಾ ಮಘವಞ್ಜೋಹವೀಮಿ ತ್ವಂ ನ ಇಂದ್ರಾಸಿ ಪ್ರಮತಿಃ ಪಿತೇವ ||

ಪದಪಾಠಃ

ಉತೋ ಇತಿ | ಘ | ತೇ | ಪುರುಷ್ಯಾಃ | ಇತ್ | ಆಸನ್ | ಯೇಷಾಂ | ಪೂರ್ವೇಷಾಂ | ಅಶೃಣೋಃ | ಋಷೀಣಾಂ |
ಅಧ | ಅಹಂ | ತ್ವಾ | ಮಘsವನ್ | ಜೋಹವೀಮಿ | ತ್ವಂ | ನಃ | ಇಂದ್ರ | ಅಸಿ | ಪ್ರsಮತಿಃ | ಪಿತಾsಇವ ||

ಸಾಯಣಭಾಷ್ಯಂ

ಉತಾಪಿ ಚ | ಘೇತಿ ಪೂರಣಃ | ಹೇ ಮಘವನ್ ಯೇಷಾಂ ಪೂರ್ವೇಷಾಮೃಷೀಣಾಂ ಸ್ತುತೀರಶೃಣೋಃ ತೇ ಪೂರ್ವ ಋಷಯಃ ಪುರುಷ್ಯಾ ಇತ್ ಪುರುಷೇಭ್ಯೋ ಹಿತಾ ಏವಾಸನ್ | ಅಧಾತೋಽಹಂ ತ್ವಾ ತ್ವಾಂ ಜೋಹವೀಮಿ | ಭೃಶಂ ಸ್ತೌಮಿ | ಅಪಿ ಚ ಹೇ ಇಂದ್ರ ತ್ವಂ ನೋಽಸ್ಮಾಕಂ ಪಿತೇವ ಜನಕ ಇವ ಪ್ರಮತಿರ್ಬಂಧುರಸಿ ||

ಪ್ರತಿಪದಾರ್ಥ

ಉತ—ಮತ್ತು | ಮಘವನ್—ಎಲೈ ಧನವಂತನಾದ ಇಂದ್ರನೇ | ಯೇಷಾಂ—ಯಾವ | ಪೂರ್ವೇಷಾಂ—ಪ್ರಾಚೀನರಾದ | ಋಷೀಣಾಂ—ಋಷಿಗಳ ಸ್ತುತಿಗಳನ್ನು | ಅಶೃಣೋಃ—ಕೇಳಿ ತೃಪ್ತಿಯನ್ನು ಹೊಂದಿದೆಯೋ | ತೇ—ಅವರೆಲ್ಲರೂ | ಪುರುಷ್ಯಾ ಇತ್—ಮಾನವರಿಗೆ ಹಿತಕಾರಿಗಳೇ | ಆಸನ್—ಆಗಿದ್ದಾರೆ | ಅಧ—ಆದುದರಿಂದಲೇ | ಅಹಂ—ನಾನೂ | ತ್ವಾ—ನಿನ್ನನ್ನು | ಜೋಹವೀಮಿ—ಪ್ರಾರ್ಥಿಸಿ ಕರೆಯುತ್ತೇನೆ | ಇಂದ್ರ—ಎಲೈ ಇಂದ್ರನೇ | ತ್ವಂ—ನೀನು | ನಃ—ನಮಗೆ | ಪಿತೇವ—ತಂದೆಯಂತೆ | ಪ್ರಮತಿಃ—ಪ್ರೀತಿಯುತವಾದ ಬುದ್ಧಿಯುಳ್ಳ ಬಂಧುವಾಗಿ | ಅಸಿ—ಆಗಿದ್ದೀಯೆ |

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ಯಾವ ಪ್ರಾಚೀನರಾದ ಋಷಿಗಳ ಸ್ತುತಿಗಳನ್ನು ಕೇಳಿ ತೃಪ್ತಿಯನ್ನು ಹೊಂದಿದೆಯೋ, ಅವರೆಲ್ಲರೂ ಮಾನವರಿಗೆ ಹಿತಕಾರಿಗಳೇ ಆಗಿದ್ದಾರೆ. ಆದುದರಿಂದಲೇ, ನಾನೂ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇನೆ. ಎಲೈ ಇಂದ್ರನೇ, ನೀನು ನಮಗೆ ತಂದೆಯಂತೆ ಪ್ರೀತಿಯುತವಾದ ಬುದ್ಧಿಯುಳ್ಳ ಬಂಧುವಾಗಿದ್ದೀಯೆ.

Engilsh Translatson

Friendly to man were those of the ancient Rishis whose praises you have listened to ; therefore I repeatedly invoke you Maghavan you, Indra are well affected towards us as a parent

ಸಂಹಿತಾಪಾಠಃ

ವೋಚೇಮೇದಿಂದ್ರಂ ಮಘವಾನಮೇನಂ ಮಹೋ ರಾಯೋ ರಾಧಸೋ ಯದ್ದದನ್ನಃ ।
ಯೋ ಅರ್ಚತೋ ಬ್ರಹ್ಮಕೃತಿಮವಿಷ್ಠೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೫ ॥

ಪದಪಾಠಃ

ವೋಚೇಮ । ಇತ್ । ಇಂದ್ರಂ । ಮಘಽವಾನಂ । ಏನಂ । ಮಹಃ । ರಾಯಃ । ರಾಧಸಃ । ಯತ್ । ದದತ್ । ನಃ ।
ಯಃ । ಅರ್ಚತಃ । ಬ್ರಹ್ಮಽಕೃತಿಂ । ಅವಿಷ್ಠಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೫ ॥

ಸಾಯಣಭಾಷ್ಯಂ

ಯದ್ಯ ಇಂದ್ರೋ ಮಹೋ ಮಹತೋ ರಾಧಸಃ ಸಂರಾಧಕಸ್ಯ ರಾಯೋ ಧನಸ್ಯ । ದ್ವಿತೀಯಾರ್ಥೇ ಷಷ್ಠೀ । ಸಂರಾಧಕಂ ಮಹದ್ಧನಂ ನೋಽಸ್ಮಭ್ಯಂ ದದತ್ ಪ್ರಾಯಚ್ಛತ್ ಯಶ್ಚೇಂದ್ರೋಽರ್ಚತಃ ಸ್ತುವತೋ ಬ್ರಹ್ಮಕೃತಿಂ ಕ್ರಿಯಮಾಣಂ ಬ್ರಹ್ಮ ಸ್ತೋತ್ರಮವಿಷ್ಠೋಽತಿಶಯೇನ ರಕ್ಷಿತಾ ಗಂತಾ ಭವತಿ ತಮೇನಂ ಮಘವಾನಂ ಧನವಂತಮಿಂದ್ರಂ ವೋಚೇಮೇತ್ । ಸ್ತುವೇಮೈವ । ಸ್ಪಷ್ಟಮನ್ಯತ್ ॥

ಪ್ರತಿಪದಾರ್ಥ

**ಯತ್**—ಯಾವ ಇಂದ್ರನು । **ಮಹಃ**—ಮಹತ್ತಾದುದೂ । **ರಾಧಸಃ**—ಪೂಜ್ಯವಾದುದೂ ಆದ । **ರಾಯಃ**—ಧನವನ್ನು । **ನಃ**—ನಮಗೆ । **ದದತ್**—ಕೊಡುವನೋ । **ಯಃ**—ಯಾವ ಇಂದ್ರನು । **ಅರ್ಚತಃ**—ಪೂಜಕನಾದ ಸ್ತೋತೃವಿನ । **ಬ್ರಹ್ಮಕೃತಿಂ**—ಸ್ತುತಿಕರ್ಮವನ್ನು । **ಅವಿಷ್ಟಃ**—ಅತಿಶಯವಾಗಿ ರಕ್ಷಿಸುವನೋ । **ಏನಂ**—ಅಂತಹ । **ಮಘವಾನಂ**—ಧನವಂತನಾದ । **ಇಂದ್ರಂ**—ಇಂದ್ರನನ್ನು । **ವೋಚೇಮ ಇತ್**—ಖಂಡಿತವಾಗಿ ಸ್ತುತಿಸುತ್ತೇವೆ (ಎಲೈ ಇಂದ್ರಾದಿಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

**ಭಾವಾರ್ಥ**

ಯಾವ ಇಂದ್ರನು ಮಹತ್ತಾದುದೂ, ಪೂಜ್ಯವಾದುದೂ ಆದ ಧನವನ್ನು ನಮಗೆ ಕೊಡುವನೋ, ಯಾವ ಇಂದ್ರನು ಪೂಜಕನಾದ ಸ್ತೋತೃವಿನ ಸ್ತುತಿಕರ್ಮವನ್ನು ಅತಿಶಯವಾಗಿ ರಕ್ಷಿಸುವನೋ ಅಂತಹ ಧನವಂತನಾದ ಇಂದ್ರನನ್ನು ಖಂಡಿತ ಸ್ತುತಿಸುತ್ತೇವೆ ಎಲೈ ಇಂದ್ರಾದಿಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಕರ್ಮಗಳಿಂದ ರಕ್ಷಿಸಿರಿ.

English Translation

Let us glorify that opulent Indra, that he may give us vast and valuable riches, he who is the chief protector of the religious rites of the worshipper : ever cherish us with blessings

## ಮೂವತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಆ ನೋ ದೇವೇತಿ ಪಂಚರ್ಚಂ ತ್ರಯೋದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಆ ನೋ ದೇವೇತ್ಯನುಕ್ರಾಂತಂ ॥ ಪ್ರಥಮೇ ಛಂದೋಮೇ ಪ್ರಉಗಶಸ್ತ್ರ ಆ ನ ಇತ್ಯಯಮೈಂದ್ರಸ್ತೃಚಃ । ಸೂತ್ರ್ಯತೇ ಹಿ । ಆ ನೋ ದೇವ ಶವಸಾ ಯಾಹಿ ಶುಷ್ಮಿನ್ ಪ್ರ ವೋ ಯಜ್ಞೇಷು ದೇವಯಂತೋ ಅರ್ಚನ್ । ಆ. ೮-೯ । ಇತಿ ॥**

**ಅನುವಾದವು—ಆ ನೋ ದೇವ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಇಂದ್ರನು ದೇವತೆಯು, ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ **ಆ ನೋ ದೇವ** ಎಂದು ಹೇಳಿರುವುದು. ಪ್ರಥಮಛಂದೋಮಾ ಮಂತ್ರಗಳನ್ನು ಪಠಿಸುವಾಗ ಪ್ರಉಗಶಸ್ತ್ರಮಂತ್ರಗಳಲ್ಲಿ ಆ ನಃ ಎಂದು ಮೊದಲಾಗುವ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಇಂದ್ರದೇವತಾಕವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಆ ನೋ ದೇವ ಶವಸಾ ಯಾಹಿ ಶುಷ್ಮಿನ್ ಪ್ರ ವೋ ಯಜ್ಞೇಷು ದೇವಯಂತೋ ಅರ್ಚನ್** ಎಂಬ ಸೂತ್ರದಿಂದ (ಆ ೮-೯) ವಿವೃತವಾಗಿರುವುದು.

## ಸೂಕ್ತ—೩೦

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೩೦ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ— ೧೪ ॥

**ಸೂಕ್ತದಲ್ಲಿರುವ ಋಕ್ಸಂಖ್ಯೆ—೫**

ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

**ಸಂಹಿತಾಪಾಠಃ**

**ಆ ನೋ ದೇವ ಶವಸಾ ಯಾಹಿ ಶುಷ್ಮಿನ್ಭವಾ ವೃಧ ಇಂದ್ರ ರಾಯೋ ಅಸ್ಯ ।**

ಮಹೇ ನೃಮ್ಣಾಯ ನೃಪತೇ ಸುವಜ್ರ ಮಹಿ ಕ್ಷತ್ರಾಯ ಪೌಂಸ್ಯಾಯ ಶೂರ॥

ಪದಪಾಠಃ

ಆ । ನಃ । ದೇವ । ಶವಸಾ । ಯಾಹಿ । ಶುಷ್ಮಿನ್ । ಭವ । ವೃಧಃ । ಇಂದ್ರ । ರಾಯಃ । ಅಸ್ಯ ।
ಮಹೇ । ನೃಮ್ಣಾಯ । ನೃಽಪತೇ । ಸುಽವಜ್ರ । ಮಹಿ । ಕ್ಷತ್ರಾಯ । ಪೌಂಸ್ಯಾಯ । ಶೂರ ॥ ೧ ॥

ಸಾಯಣಭಾಷ್ಯಂ

ಹೇ ದೇವ ದ್ಯೋತಮಾನ ಶುಷ್ಮಿನ್ಬಲವನ್ನಿಂದ್ರ ನೋಽಸ್ಮಾಞ್ಛವಸಾ ಬಲೇನ ಸಾರ್ಧಮಾಯಾಹಿ । ಅಸ್ಮಾಭ್ಯಂ ದೇಯಸ್ಯ ರಾಯೋ ಧನಸ್ಯ ವೃಧೋ ವರ್ಧಯಿತಾ ಚ ಭವ । ಹೇ ನೃಪತೇ ಸುವಜ್ರ ಮಹೇ ಮಹತೇ ನೃಮ್ಣಾಯ ಬಲಾಯ ಚ ಭವ । ಬಾಧೋ ನೃಮ್ಣಮಿತಿ ಬಲನಾಮಸು ಪಾಠಾತ್ । ಹೇ ಶೂರ ಮಹಿ ಮಹತೇ ಕ್ಷತ್ರಾಯ ಶತ್ರೂಣಾಂ ಹಿಂಸಕಾಯ । ಕ್ಷದಿರ್ಹಿಂಸಾಕರ್ಮಾ । ಪೌಂಸ್ಯಾಯ ವೀರ್ಯಾಯ ಚ ಭವ ॥

ಪ್ರತಿಪದಾರ್ಥ

**ದೇವ**—ಪ್ರಕಾಶಮಾನನೂ । **ಶುಷ್ಮಿನ್**—ಶಕ್ತಿಯುತನೂ ಆದ । **ಇಂದ್ರ**—ಎಲೈ ಇಂದ್ರನೇ । **ಶವಸಾ**—ನಿನ್ನ ಶಕ್ತಿಯೊಡಗೂಡಿ । **ನಃ**—ನಮ್ಮಲ್ಲಿಗೆ । **ಆ ಯಾಹಿ**—ದಯಮಾಡು । **ಅಸ್ಯ**—ನಮಗೆ ಕೊಡಬೇಕಾದ । **ರಾಯಃ**—ಧನಕ್ಕೆ । **ವೃಧಃ**—ವೃದ್ಧಿಕಾರಕನಾಗಿ । **ಭವ**—ಆಗು । **ನೃಪತೇ**—ಮಾನವರಿಗೆಲ್ಲಾ ಪತಿಯಾದವನೂ । **ಸುವಜ್ರ**—ಉತ್ತಮವಾದ ವಜ್ರಾಯುಧವುಳ್ಳವನೂ ಆದ ಎಲೈ ಇಂದ್ರನೇ । **ಮಹೇ**—ಮಹತ್ತಾದ । **ನೃಮ್ಣಾಯ**—ಶಕ್ತಿದಾತನಾಗಿರು । **ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ । **ಮಹಿ**—ಮಹತ್ತಾದುದೂ । **ಕ್ಷತ್ರಾಯ**—ಶತ್ರುಹಿಂಸಕವಾದುದೂ ಆದ । **ಪೌಂಸ್ಯಾಯ**—ವೀರ್ಯದಾತನಾಗಿಯೂ ಇರು

ಭಾವಾರ್ಥ

ಪ್ರಕಾಶಮಾನನೂ, ಶಕ್ತಿಯುತನೂ ಆದ ಎಲೈ ಇಂದ್ರನೇ, ನಿನ್ನ ಶಕ್ತಿಯೊಡಗೂಡಿ ನಮ್ಮಲ್ಲಿಗೆ ದಯಮಾಡು. ನಮಗೆ ಕೊಡಬೇಕಾದ ಧನಕ್ಕೆ ವೃದ್ಧಿಕಾರಕನಾಗಿ ಆಗು. ಮಾನವರಿಗೆಲ್ಲಾ ಪತಿಯಾದವನೂ, ಉತ್ತಮವಾದ ವಜ್ರಾಯುಧವುಳ್ಳವನೂ ಆದ ಎಲೈ ಇಂದ್ರನೇ, ನೀನು ನಮಗೆ ಮಹತ್ತಾದ ಶಕ್ತಿದಾತನಾಗಿರು ಪರಾಕ್ರಮಿಯಾದ ಎಲೈ ಇಂದ್ರನೇ, ಮಹತ್ತಾದುದೂ, ಶತ್ರುಹಿಂಸಕವಾದುದೂ ಆದ ವೀರ್ಯದಾತನಾಗಿಯೂ ಇರು.

English Translation

Divine and powerful (Indra), come to us with your strength · be the augmenter of our riches · be to us, king of men, wielder of the thunderbolt for (a source of) vigour, of great prowess, hero, of manhood

ಸಂಹಿತಾಪಾಠಃ

ಹವಂತ ಉ ತ್ವಾ ಹವ್ಯಂ ವಿವಾಚಿ ತನೂಷು ಶೂರಾಃ ಸೂರ್ಯಸ್ಯ ಸಾತೌ ।
ತ್ವಂ ವಿಶ್ವೇಷು ಸೇನ್ಯೋ ಜನೇಷು ತ್ವಂ ವೃತ್ರಾಣಿ ರಂಧಯಾ ಸುಹಂತು ॥

ಪದಪಾಠಃ

ಹವಂತೇ । ಊಂ ಇತಿ । ತ್ವಾ । ಹವ್ಯಂ । ವಿಽವಾಚಿ । ತನೂಷು । ಶೂರಾಃ । ಸೂರ್ಯಸ್ಯ । ಸಾತೌ ।
ತ್ವಂ । ವಿಶ್ವೇಷು । ಸೇನ್ಯಃ । ಜನೇಷು । ತ್ವಂ । ವೃತ್ರಾಣಿ । ರಂಧಯ । ಸುಽಹಂತು ॥ ೨ ॥

ಸಾಯಣಭಾಷ್ಯಂ

**ಹೇ ಇಂದ್ರ ಹವ್ಯಂ ಹ್ವಾತವ್ಯಂ ತ್ವಾ ತ್ವಾಂ ವಿವಾಚಿ ವಿವಿಧಾ ವಾಚೋ ಯಸ್ಮಿನ್ಪ್ರಾದುರ್ಭವಂತಿ ತಸ್ಮಿನ್ಯುದ್ಧೇ ಶೂರಾಃ ಪುರುಷಾಸ್ತನೂಷ್ವಂಗೇಷು ರಕ್ಷಣೀಯಾಸು ಸೂರ್ಯಸ್ಯ ಸಾತೌ ಸಂಭಜನೇ । ಸ-ರತಿ ಗಚ್ಛತೀತ್ಯಾಯುರತ್ರ ಸೂರ್ಯೋ ವಿವಕ್ಷಿತಃ । ತಸ್ಯ ಚಿರಕಾಲಂ ಪ್ರಾಪ್ತ್ಯರ್ಥಂ ಹವಂತೇ । ಹ್ವಯಂತಿ। ವಿಶ್ವೇಷು ಸರ್ವೇಷು ಜನೇಷು ತ್ವಮೇವ ಸೇನ್ಯಃ ಸೇನಾರ್ಹೋಽಸಿ । ಅಪಿ ಚ ತ್ವಂ ವೃತ್ರಾಣಿ ಶತ್ರೂನ್ ಸುಹಂತು ಸುಹಂತುನಾಮ್ನಾ ವಜ್ರೇಣ ರಂಧಯ । ಅಸ್ಮಭ್ಯಂ ವಶೀಕುರು ॥**

ಪ್ರತಿಪದಾರ್ಥ

(ಎಲೈ ಇಂದ್ರನೇ) **ಹವ್ಯಂ**—ಪ್ರಾರ್ಥನೆಗೆ ಪಾತ್ರನಾದ । **ತ್ವಾ**—ನಿನ್ನನ್ನು । **ವಿವಾಚಿ**—ಅನೇಕವಿಧವಾದ ವಿವಾದಗಳಿಗೆ ಸ್ಥಾನವಾದ ಯುದ್ಧದಲ್ಲಿ । **ಶೂರಾಃ**—ಪರಾಕ್ರಮಿಗಳು । **ತನೂಷು**—ತಮ್ಮ ಅಂಗರಕ್ಷಣೆಗಾಗಿಯೂ । **ಸೂರ್ಯಸ್ಯ**—ಸೂರ್ಯನ ಪ್ರಕಾಶದ । **ಸಾತೌ**—ಲಾಭಕ್ಕಾಗಿಯೂ । **ಹವಂತೇ**—ಪ್ರಾರ್ಥಿಸುತ್ತಾರೆ । **ವಿಶ್ವೇಷು**—ಸಮಸ್ತವಾದ । **ಜನೇಷು**—ದೇವಮಾನರೂಪವಾದ ಜನರಲ್ಲಿಯೂ । **ತ್ವಂ**—ನೀನೊಬ್ಬನೇ । **ಸೇನ್ಯಃ**—ನಿಜವಾದ ಯೋಧನಾಗಿದ್ದೀಯೆ । **ತ್ವಂ**—ನೀನು । **ವೃತ್ರಾಣಿ**—ಶತ್ರುಗಳನ್ನು । **ಸುಹಂತು**—ಸುಲಭವಾಗಿ ಕೊಲ್ಲತಕ್ಕ ವಜ್ರಾಯುಧದಿಂದ । **ರಂಧಯ**—ನೀಳಿಹಾಕು.

ಭಾವಾರ್ಥ

ಎಲೈ ಇಂದ್ರನೇ, ಪ್ರಾರ್ಥನೆಗೆ ಪಾತ್ರನಾದ ನಿನ್ನನ್ನು ಅನೇಕವಿಧವಾದ ವಿವಾದಗಳಿಗೆ ಸ್ಥಾನವಾದ ಯುದ್ಧದಲ್ಲಿ ಪರಾಕ್ರಮಿಗಳು ತಮ್ಮ ಅಂಗರಕ್ಷಣೆಗಾಗಿಯೂ ಸೂರ್ಯನ ಪ್ರಕಾಶದ ಲಾಭಕ್ಕಾಗಿಯೂ ಪ್ರಾರ್ಥಿಸುತ್ತಾರೆ. ಸಮಸ್ತವಾದ ದೇವಮಾನವರೂಪವಾದ ಜನರಲ್ಲಿಯೂ ನೀನೊಬ್ಬನೇ ನಿಜವಾದ ಯೋಧನಾಗಿದ್ದೀಯೆ ಸುಲಭವಾಗಿ ಕೊಲ್ಲಲು ಸಾಧನವಾದ ವಜ್ರಾಯುಧದಿಂದ ನೀನು ಶತ್ರುಗಳನ್ನು ಪೂರ್ಣವಾಗಿ ನಾಶಮಾಡು.

English Translation

Warriers invoke you, worthy to be invoked, in the variously clamorous (strife), for (the safety of their) persons, and for the (long) enjoyment of the sun : you are a fit leader over all men ; humble our enemies by the fatal (bolt).

ಸಂಹಿತಾಪಾಠಃ

ಅಹಾ ಯದಿಂದ್ರ ಸುದಿನಾ ವ್ಯುಚ್ಛಾನ್ದಧೋಯತ್ಕೇತು ಮುಪಮಂ ಸಮತ್ಸು।
ನ್ಯ೧ಗ್ನಿಃ ಸೀದದಸುರೋ ನ ಹೋತಾ ಹುವಾನೋ ಅತ್ರ ಸುಭಗಾಯ ದೇವಾನ್ ॥ ೩ ॥

ಪದಪಾಠಃ

ಅಹಾ । ಯತ್ । ಇಂದ್ರ । ಸುऽದಿನಾ । ವಿऽಉಚ್ಛಾನ್ । ದಧಃ । ಯತ್ । ಕೇತುಂ । ಉಪऽಮಂ । ಸಮತ್ऽಸು ।

ನಿ । ಅಗ್ನಿಃ । ಸೀದತ್ । ಅಸುರಃ । ನ । ಹೋತಾ । ಹುವಾನಃ । ಅತ್ರ । ಸುऽಭಗಾಯ । ದೇವಾನ್ ॥

ಸಾಯಣಭಾಷ್ಯಂ

ಹೇ ಇಂದ್ರ ಯದ್ಯದಾಹಾಹಾನಿ ಸುದಿನಾ ಸುದಿನಾನಿ ವ್ಯುಚ್ಛಾನ್ ವ್ಯುಚ್ಛೇಯುಃ ಯದ್ಯದಾ ಚ ಸಮತ್ಸು ಸಂಗ್ರಾಮೇಷು ಕೇತುಂ ಜ್ಞಾನಮುಪಮಮಂತಿಕಂ ದಧಃ ಧಾರಯೇಃ ತದಾಸುರೋ ಬಲವಾನ್ ಹೋತಾ ದೇವಾನಾಮಾಹ್ವಾತಾಗ್ನಿಃ ಸುಭಗಾಯಾಸ್ಮಾಕಂ ಶೋಭನಧನಪ್ರಾಪ್ತಯೇ ದೇವಾನ್ ಹುವಾನೋ ಹ್ವಯನ್ನತ್ರಾಸ್ಮಿನ್ಯಜ್ಞೇ ನಿ ಷೀದತ್ । ನ್ಯಸೀದತ್ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । **ಯತ್**—ಯಾವಾಗ । **ಅಹಾ**—ದಿವಸಗಳು । **ಸುದಿನಾ**—ಒಳ್ಳೆಯ ದಿನಗಳಾಗಿ । **ವ್ಯುಚ್ಛಾನ್**—ಉದಯಿಸುವವೋ (ಮತ್ತು) । **ಯತ್**—ಯಾವಾಗ ನೀನು । **ಸಮತ್ಸು**—ಯುದ್ಧಗಳಲ್ಲಿ । **ಕೇತುಂ**—ಧ್ವಜವನ್ನು । **ಉಪಮಂ**—ನಮ್ಮ ಸಮೀಪದಲ್ಲಿ । **ದಧಃ**—ಹಿಡಿದು ನಿಂತಿರುವೆಯೋ ಆಗ । [**ಅಥವಾ ಸಮತ್ಸು**—ಯುದ್ಧಗಳಲ್ಲಿ (ನಮಗೆ) । **ಕೇತು**—ಸರಿಯಾದ ತಿಳುವಳಿಕೆಯನ್ನು । **ಉಪಮಂ**—ನಮ್ಮ ಸಮೀಪದಲ್ಲಿದ್ದುಕೊಂಡು । **ದಧಃ**—ನಮಗೆ ನೀಡುವೆಯೋ ಆಗ] । **ಅಸುರಃ**—ಶಕ್ತಿವಂತನೂ । **ಹೋತಾ**—ದೇವತೆಗಳನ್ನು ಆಹ್ವಾನಮಾಡುವವನೂ ಆದ । **ಅಗ್ನಿಃ**—ಅಗ್ನಿಯು । **ಸುಭಗಾಯ**—ನಮಗೆ ಉತ್ತಮವಾದ ಧನಪ್ರಾಪ್ತಿಗಾಗಿ । **ದೇವಾನ್**—ದೇವತೆಗಳನ್ನು । **ಹುವಾನಃ**—ಆಹ್ವಾನಮಾಡುತ್ತಾ । **ಅತ್ರ**—ಈ ಯಜ್ಞಭೂಮಿಯಲ್ಲಿ । **ನಿಷೀದತ್**—ಕುಳಿತುಕೊಂಡಿರುತ್ತಾನೆ.

ಭಾವಾರ್ಥ

ಎಲೈ ಇಂದ್ರನೇ, ಒಳ್ಳೆಯ ದಿನಗಳು ಪ್ರಾಪ್ತವಾದಾಗ ನೀನು ನಮಗೆ ಸಹಾಯಮಾಡುವುದಕ್ಕಾಗಿ ಯುದ್ಧಗಳಲ್ಲಿ ಧ್ವಜವನ್ನು ನಮ್ಮ ಸಮೀಪದಲ್ಲಿ ಹಿಡಿದುನಿಂತು ನಮಗೆ ಸರಿಯಾದ ತಿಳುವಳಿಕೆಯನ್ನು ಕೊಟ್ಟು ಬೆಂಬಲವನ್ನು ನೀಡುವಾಗ ಶಕ್ತಿವಂತನೂ, ದೇವತೆಗಳನ್ನು ಆಹ್ವಾನಮಾಡುವವನೂ ಆದ ಅಗ್ನಿಯು ಈ ನಮ್ಮ ಯಜ್ಞಭೂಮಿಯಲ್ಲಿ ಬಂದು ಕುಳಿತಿರುತ್ತಾನೆ.

English Translation

When, Indra, fortunate days arise, when you advance your emblem in battles, the strong Agni, the invoker of the gods, summoning the gods hither for our benefit, sits down on the sacred grass.

ಸಂಹಿತಾಪಾಠಃ

ವಯಂ ತೇ ತ ಇಂದ್ರ ಯೇ ಚ ದೇವ ಸ್ತವಂತ ಶೂರ ದದತೋ ಮಘಾನಿ ।
ಯಚ್ಛಾ ಸೂರಿಭ್ಯ ಉಪಮಂ ವರೂಥಂ ಸ್ವಾಭುವೋ ಜರಣಾಮಶ್ನವಂತ ॥

ಪದಪಾಠಃ

ವಯಂ । ತೇ । ತೇ । ಇಂದ್ರ । ಯೇ । ಚ । ದೇವ । ಸ್ತವಂತ । ಶೂರ । ದದತಃ । ಮಘಾನಿ ।
ಯಚ್ಛ । ಸೂರಿಽಭ್ಯಃ । ಉಪಽಮಂ । ವರೂಥಂ । ಸುಽಆಭುವಃ । ಜರಣಾಂ । ಅಶ್ನವಂತ ॥ ೪ ॥

ಸಾಯಣಭಾಷ್ಯಂ

ಹೇ ದೇವ ಶೂರೇಂದ್ರ ತೇ ತವ ವಯಂ ವಸಿಷ್ಠಾಃ ಸ್ವಭೂತಾಃ । ಯೇ ಜನಾ ಮದೀಯಪುತ್ರಪೌತ್ರಾದಯೋ ಮಘಾನಿ ಮಂಹನೀಯಾನಿ ಹವೀಂಷಿ ದದತಃ ಪ್ರಯಚ್ಛಂತಃ ಸ್ತವಂತ ಸ್ತುವಂತಿ ತೇಽಪಿ ತವ ಸ್ವಭೂತಾಃ । ತೇಭ್ಯ ಉಭಯೇಭ್ಯಃ ಸೂರಿಭ್ಯಃ ಸ್ತೋತೃಭ್ಯ ಉಪಮಂ ಶ್ರೇಷ್ಠಂ ವರೂಥಂ ಗೃಹಂ ಯಚ್ಛ । ಪ್ರಯಚ್ಛ । ಅಪಿ ಚ ತ ಉಭೇ ಸ್ವಾಭುವಃ ಸುಸಮೃದ್ಧಾಃ ಸಂತೋ ಜರಣಾಂ ಜರಾಮಶ್ನವಂತ । ಪ್ರಾಪ್ನುವಂತು ॥

ಪ್ರತಿಪದಾರ್ಥ

**ದೇವ**—ದೇವತಾತ್ಮನೂ । **ಶೂರ**—ಪರಾಕ್ರಮಿಯೂ ಆದ । **ಇಂದ್ರ**—ಎಲೈ ಇಂದ್ರನೇ । **ವಯಂ**—ನಾವು । **ತೇ**—ನಿನಗೆ ಸೇರಿದವರೇ ಆಗಿದ್ದೇವೆ । **ಯೇ ಚ**—ಯಾವ ನಮ್ಮ ಪುತ್ರಪೌತ್ರಾದಿಗಳು । **ಮಘಾನಿ**—ಪೂಜ್ಯವಾದ ಹವಿರಾದಿಗಳನ್ನು । **ದದತಃ**—ಅರ್ಪಿಸುತ್ತಾ । **ಸ್ತವಂತ**—ನಿನ್ನನ್ನು ಸ್ತುತಿಸುವರೋ । **ತೇ**—ಅವರೂ ನಿನಗೆ ಸೇರಿದವರೇ ಆಗಿದ್ದಾರೆ । **ಸೂರಿಭ್ಯಃ**—ನಿನ್ನ ಸ್ತುತಿಕರ್ತರಾದ ನಮಗೆ । **ಉಪಮಂ**—ಶ್ರೇಷ್ಠವಾದ । **ವರೂಥಂ**—ಗೃಹವನ್ನು । **ಯಚ್ಛ**—ಕೊಡು । **ಸ್ವಾಭುವಃ**—ನಾವೆಲ್ಲರೂ ಸಮೃದ್ಧವಾದ ಸಂಪತ್ತಿನಿಂದ ಕೂಡಿದವರಾಗಿಯೇ । **ಜರಣಾಂ**—ಮುಪ್ಪನ್ನು । **ಅಶ್ನವಂತ**—ಹೊಂದುವಂತಾಗಲಿ.

ಭಾವಾರ್ಥ

ದೇವತಾತ್ಮನೂ, ಪರಾಕ್ರಮಿಯೂ ಆದ ಎಲೈ ಇಂದ್ರನೇ, ನಾವು ನಿನಗೆ ಸೇರಿದವರೇ ಆಗಿದ್ದೇವೆ. ಯಾವ ನಮ್ಮ ಪುತ್ರಪೌತ್ರಾದಿಗಳು ಪೂಜ್ಯವಾದ ಹವಿರಾದಿಗಳನ್ನು ಅರ್ಪಿಸುತ್ತಾ ನಿನ್ನನ್ನು ಸ್ತುತಿಸುವರೋ ಅವರೂ ನಿನಗೆ

ಸೇರಿದವರೇ ಆಗಿದ್ದಾರೆ. ನಿನ್ನ ಸ್ತುತಿಕರ್ತರಾದ ನಮಗೆ ಶ್ರೇಷ್ಠವಾದ ಗೃಹವನ್ನು ಕೊಡು. ನಾವೆಲ್ಲರೂ ನಮ್ಮ ಮುಪ್ಪಿನವರೆಗೂ ಪೂರ್ಣವಾದ ಸಂಪತ್ತಿನಿಂದ ಕೂಡಿದವರಾಗಿರುವಂತೆಯೇ ಅನುಗ್ರಹಿಸು.

### English Translation

We, divine Indra, who are yours, are they, hero, who are praising you and offering rich libations grant to (your) pious (worshippers) an excellent abode and may they, prosperous, attain old age.

#### ಸಂಹಿತಾಪಾಠಃ

ಪ್ರೋಚೇಮೇದಿಂದ್ರಂ ಮಘವಾನಮೇನಂ ಮಹೋ ರಾಯೋ ರಾಧಸೋ ಯದ್ದದನ್ನಃ ।
ಯೋ ಅರ್ಚತೋ ಬ್ರಹ್ಮಕೃತಿಮವಿಷ್ಠೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೫ ॥

#### ಪದಪಾಠಃ

ಪ್ರೋಚೇಮ । ಇತ್ । ಇಂದ್ರಂ । ಮಘಽವಾನಂ । ಏನಂ । ಮಹಃ । ರಾಯಃ । ರಾಧಸಃ । ಯತ್ । ದದತ್ । ನಃ ।
ಯಃ । ಅರ್ಚತಃ । ಬ್ರಹ್ಮಽಕೃತಿಂ । ಅವಿಷ್ಠಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೫ ॥

#### ಸಾಯಣಭಾಷ್ಯಂ

ಯದ್ಯ ಇಂದ್ರೋ ಮಹೋ ಮಹತೋ ರಾಧಸಃ ಸಂರಾಧಕಸ್ಯ ರಾಯೋ ಧನಸ್ಯ । ದ್ವಿತೀಯಾರ್ಥೇ ಷಷ್ಠೀ । ಸಂರಾಧಕಂ ಮಹದ್ಧನಂ ನೋಽಸ್ಮಭ್ಯಂ ದದತ್ ಪ್ರಾಯಚ್ಛತ್ ಯಶ್ಚೇಂದ್ರೋಽರ್ಚತಃ ಸ್ತುವತೋ ಬ್ರಹ್ಮಕೃತಿಂ ಕ್ರಿಯಮಾಣಂ ಬ್ರಹ್ಮ ಸ್ತೋತ್ರಮವಿಷ್ಠೋಽತಿಶಯೇನ ರಕ್ಷಿತಾ ಗಂತಾ ಭವತಿ ತಮೇನಂ ಮಘವಾನಂ ಧನವಂತಮಿಂದ್ರಂ ಪ್ರೋಚೇಮೇತ್ । ಸ್ತುವೇಮೈವ । ಸ್ಪಷ್ಟಮನ್ಯತ್ ॥

#### ಪ್ರತಿಪದಾರ್ಥ

**ಯತ್**—ಯಾವ ಇಂದ್ರನು । **ಮಹಃ**—ಮಹತ್ತಾದುದೂ । **ರಾಧಸಃ**—ಪೂಜ್ಯವಾದುದೂ ಆದ । **ರಾಯಃ**—ಧನವನ್ನು । **ನಃ**—ನಮಗೆ । **ದದತ್**—ಕೊಡುವನೋ । **ಯಃ**—ಯಾವ ಇಂದ್ರನು । **ಅರ್ಚತಃ**—ಪೂಜಕನಾದ ಸ್ತುತಿಕರ್ತನ । **ಬ್ರಹ್ಮಕೃತಿಂ**—ಸ್ತುತಿಕರ್ಮವನ್ನು । **ಅವಿಷ್ಠಃ**—ಅತಿಶಯವಾಗಿ ರಕ್ಷಿಸುವನೋ । **ಏನಂ**—ಅಂತಹ । **ಮಘವಾನಂ**—ಧನವಂತನಾದ । **ಇಂದ್ರಂ**—ಇಂದ್ರನನ್ನು । **ಪ್ರೋಚೇಮ ಇತ್**—ಖಂಡಿತ ಸ್ತುತಿಸುತ್ತೇವೆ (ಎಲೈ ಇಂದ್ರಾದಿಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

**ಭಾವಾರ್ಥ**

ಯಾವ ಇಂದ್ರನು ಮಹತ್ತಾದುದೂ, ಪೂಜ್ಯವಾದುದೂ ಆದ ಧನವನ್ನು ನಮಗೆ ಕೊಡುವನೋ ಯಾವ ಇಂದ್ರನು ಪೂಜಕನಾದ ಸ್ತುತಿಕರ್ತನ ಸ್ತುತಿಕರ್ಮವನ್ನು ಅತಿಶಯವಾಗಿ ರಕ್ಷಿಸುವನೋ ಅಂತಹ ಧನವಂತನಾದ ಇಂದ್ರನನ್ನು ಖಂಡಿತ ಸ್ತುತಿಸುತ್ತೇವೆ. ಎಲೈ ಇಂದ್ರಾದಿಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

Engilsh Translatson

Let us glorify the opulent Indra, that he may give us vast and valuable riches : he who is the chief protector of the religious rites of the worshippers : ever cherish us with blessings.

## ಮೂವತ್ತೊಂದನೆಯ ಸೂಕ್ತವು

ಸಾಯಣಭಾಷ್ಯಂ

**ಪ್ರ ವ ಇಂದ್ರಾಯೇತಿ ದ್ವಾದಶರ್ಚಂ ಚತುರ್ದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ಗಾಯತ್ರಮೈಂದ್ರಂ। ದಶಮ್ಯಾದ್ಯಾಸ್ತಿಸ್ರೋ ವಿರಾಜಃ ಶಿಷ್ಟಾ ಗಾಯತ್ರ್ಯಃ। ತಥಾ ಚಾನುಕ್ರಾಂತಂ। ಪ್ರ ವೋ ದ್ವಾದಶ ಗಾಯತ್ರಂ ತ್ರಿವಿರಾಳಂತಮಿತಿ॥ ಸೂಕ್ತವಿನಿಯೋಗೋ ಲೈಂಗಿಕಃ॥ ಪ್ರಥಮೇ ರಾತ್ರಿಪರ್ಯಾಯೇ ಮೈತ್ರಾವರುಣಶಸ್ತ್ರೇ ಪ್ರ ವ ಇಂದ್ರಾಯೇತ್ಯಾದ್ಯಸ್ತೃಚಃ ಸ್ತೋತ್ರಿಯಃ। ಸೂತ್ರಿತಂ ಚ। ಪ್ರ ವ ಇಂದ್ರಾಯ ಮಾದನಂ ಪ್ರ ಕೃತಾನ್ಯೃಜೀಷಿಣಃ। ಆ ೬-೪। ಇತಿ॥ ಅತಿರಾತ್ರೇ ಪ್ರಥಮೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ವಯಮಿಂದ್ರ ತ್ವಾಯವೋಽಭೀತ್ಯನುರೂಪಸ್ತೃಚಃ। ತಥಾ ಚ ಸೂತ್ರಿತಂ। ವಯಮಿಂದ್ರ ತ್ವಾಯವೋಽಭಿ ವಾರ್ತ್ರಹತ್ಯಾಯೇತ್ಯುತ್ತಮಾಮುದ್ಧರೇತ್। ಆ. ೬ ೪। ಇತಿ॥ ಚತುರ್ಥೇಽಹನಿ ಮಾಧ್ಯಂದಿನಸವನೇ ಹೋತ್ರಕಶಸ್ತ್ರ ಆರಂಭಣೀಯಾಭ್ಯ ಊರ್ಧ್ವಂ ವೈರಾಜ ಏಕಸ್ತೃಚ ಆಹವನೀಯಃ। ತದರ್ಥಾಃ ಪ್ರ ವೋ ಮಹೇ ಮಹಿವೃಧೇ ಭರಧ್ವಮಿತ್ಯಾದ್ಯಾಸ್ತಿಸ್ರಃ। ಸೂತ್ರಿತಂ ಚ। ಪ್ರ ವೋ ಮಹೇ ಮಹಿವೃಧೇ ಭರಧ್ವಮಿತಿ ಚತಸ್ರಸ್ತಿಸ್ರಶ್ಚ ವಿರಾಜಃ। ಆ। ೭-೧೧। ಇತಿ॥**

**ಅನುವಾದವು—ಪ್ರ ವ ಇಂದ್ರಾಯ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಇಂದ್ರನು ದೇವತೆಯು, ಗಾಯತ್ರೀಛಂದಸ್ಸು ಆದರೆ ಹತ್ತನೆಯ ಋಕ್ಕಿನಿಂದ ಕೊನೆಯ ಮೂರು ಋಕ್ಕುಗಳು (೧೦-೧೨ ಋಕ್ಕುಗಳು) ವಿರಾಟ್ಛಂದಸ್ಸು ಉಳಿದ ಋಕ್ಕುಗಳು ಗಾಯತ್ರೀಛಂದಸ್ಸು ಅನುಕ್ರಮಣಿಕೆಯಲ್ಲಿ— **ಪ್ರ ವೋ ದ್ವಾದಶ ಗಾಯತ್ರಂ ತ್ರಿವಿರಾಳಂತಂ** ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು. ಪ್ರಥಮರಾತ್ರಿಪರ್ಯಾಯದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಪ್ರ ವ ಇಂದ್ರಾಯ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪ್ರ ವ ಇಂದ್ರಾಯ ಮಾದನಂ ಪ್ರ ಕೃತಾನ್ಯೃಜೀಷಿಣಃ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು. ಅತಿರಾತ್ರವೆಂಬ ಯಾಗದಲ್ಲಿಯೂ ಪ್ರಥಮಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ವಯಮಿಂದ್ರ ತ್ವಾಯವೋಽಭಿ** ಎಂದು ಮೊದಲಾಗುವ ಈ ಸೂಕ್ತದ ೪-೬ ಋಕ್ಕುಗಳನ್ನು ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ವಯಮಿಂದ್ರ ತ್ವಾಯವೋಽಭಿ ವಾರ್ತ್ರಹತ್ಯಾಯೇತ್ಯುತ್ತಮಾ-**

**ಮುದ್ಧರೇಶ್** ಎಂಬ ಸೂತ್ರದಿಂದ (ಆ ೬-೪) ವಿವೃತವಾಗಿರುವುದು ಯಾಗದ ನಾಲ್ಕನೆಯ ದಿವಸ ಮಾಧ್ಯಂದಿನ ಸವನಕಾಲದಲ್ಲಿ ಹೋತೃವರ್ಗದ ಋತ್ವಿಕ್ಕುಗಳು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಆರಂಭಮಂತ್ರವನ್ನಾಗಿ ಪಠಿಸಿ ಅನಂತರ ಈ ಸೂಕ್ತದ ವಿರಾಟ್‌ಛಂದಸ್ಸಿನ ಕೊನೆಯ ಮೂರು ಋಕ್ಕುಗಳನ್ನು(೧೦-೧೨ ಋಕ್ಕುಗಳನ್ನು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪ್ರ ವೋ ಮಹೇ ಮಹಿವೃದೇ ಭರಧ್ವಮಿತಿ ಚತಸ್ರ-ಸ್ತಿಸ್ರಶ್ಚ ವಿರಾಜಃ** ಎಂಬ ಸೂತ್ರದಿಂದ (ಆ ೭-೧೧) ವಿವೃತವಾಗಿರುವುದು.

## ಸೂಕ್ತ—೩೧

ಮಂಡಲ—೭ ‖ ಅನುವಾಕ—೨ ‖ ಸೂಕ್ತ—೩೧ ‖
ಅಷ್ಟಕ—೫ ‖ ಅಧ್ಯಾಯ—೩ ‖ ವರ್ಗ—೧೫. ೧೬‖
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ‖
ಋಷಿಃ—ವಸಿಷ್ಠಃ ‖
ದೇವತಾ—ಇಂದ್ರಃ ‖
ಛಂದಃ—೧-೯, ಗಾಯತ್ರೀ । ೧೦-೧೨ ವಿರಾಟ್ ‖

ಸಂಹಿತಾಪಾಠಃ

ಪ್ರ ವ ಇಂದ್ರಾಯ ಮಾದನಂ ಹರ್ಯಶ್ವಾಯ ಗಾಯತ ।
ಸಖಾಯಃ ಸೋಮಪಾವ್ನೇ ‖ ೧ ‖

ಪದಪಾಠಃ

ಪ್ರ । ವಃ । ಇಂದ್ರಾಯ । ಮಾದನಂ । ಹರಿಽಅಶ್ವಾಯ । ಗಾಯತ ।
ಸಖಾಯಃ । ಸೋಮಽಪಾವ್ನೇ ‖ ೧ ‖

ಸಾಯಣಭಾಷ್ಯಂ

**ಹೇ ಸಖಾಯಃ ವೋ ಯೂಯಂ ಹರ್ಯಶ್ವಾಯ ಸೋಮಪಾವ್ನೇ ಸೋಮಾನಾಂ ಪಾತ್ರ ಇಂದ್ರಾಯ ಮಾದನಂ ಮದಕರಂ ಸ್ತೋತ್ರಂ ಪ್ರ ಗಾಯತ ‖**

ಪ್ರತಿಪದಾರ್ಥ

**ಸಖಾಯಃ**—ಎಲೈ ಮಿತ್ರರೇ । **ವಃ**—ನೀವು । **ಹರ್ಯಶ್ವಾಯ**—ಹರಿಸಂಜ್ಞಕವಾದ ಅಶ್ವವುಳ್ಳವನೂ । **ಸೋಮಪಾವ್ನೇ**—ಸೋಮವನ್ನು ಪಾನಮಾಡುವವನೂ ಆದ। **ಇಂದ್ರಾಯ**—ಇಂದ್ರನನ್ನುದ್ದೇಶಿಸಿ। **ಮಾದನಂ**—ಮದಕರವಾದ ಸ್ತೋತ್ರವನ್ನು । **ಪ್ರ ಗಾಯತ**—ಪಠಿಸಿರಿ

ಭಾವಾರ್ಥ

ಎಲೈ ಮಿತ್ರರೇ, ನೀವು ಹರಿಸಂಜ್ಞಕವಾದ ಅಶ್ವವುಳ್ಳವನೂ, ಸೋಮವನ್ನು ಪಾನಮಾಡುವವನೂ ಆದ ಇಂದ್ರನನ್ನುದ್ದೇಶಿಸಿ ಹರ್ಷಕಾರಕವಾದ ಸೋತ್ರವನ್ನು ಪಠಿಸಿರಿ

English Translation

Sing, friends, an exhilarating hymn to Indra, the lord of bay steeds, the drinker of the Soma.

ಸಂಹಿತಾಪಾಠಃ

ಶಂಸೇದುಕ್ಥಂ ಸುದಾನವ ಉತ ದ್ಯುಕ್ಷಂ ಯಥಾ ನರಃ ।
ಚಕೃಮಾ ಸತ್ಯರಾಧಸೇ ॥ ೨ ॥

ಪದಪಾಠಃ

ಶಂಸ । ಇತ್ । ಉಕ್ಥಂ । ಸುऽದಾನವೇ । ಉತ । ದ್ಯುಕ್ಷಂ । ಯಥಾ । ನರಃ ।
ಚಕೃಮ । ಸತ್ಯऽರಾಧಸೇ ॥ ೨ ॥

ಸಾಯಣಭಾಷ್ಯಂ

**ಉತಾಪಿ ಚ ಹೇ ಸ್ತೋತಃ ಸುದಾನವೇ ಶೋಭನದಾನಾಯ ಸತ್ಯರಾಧಸೇ ಸತ್ಯಧನಾಯೇಂದ್ರಾಯೋಕ್ಥಂ ಸ್ತೋಮಂ ಯಥಾ ನರೋऽನ್ಯೇ ಸ್ತೋತಾರೋ ದ್ಯುಕ್ಷಂ ದೀಪ್ತೇಃ ಸಾಧನಭೂತಂ ಸ್ತೋತ್ರಂ ಶಂಸಂತಿ ತದ್ವತ್ತ್ವಮಪಿ ಶಂಸ । ಉಚ್ಚಾರಯ । ಇದಿತಿ ಪೂರಣಃ । ವಯಂ ಚ ಚಕೃಮ । ಸ್ತೋತ್ರಂ ಕರವಾಮ ॥**

ಪ್ರತಿಪದಾರ್ಥ

(ಎಲೈ ಸ್ತೋತೃವೇ) **ಉತ**—ಮತ್ತು । **ಯಥಾ**—ಯಾವ ರೀತಿಯಲ್ಲಿ । **ನರಃ**—ಇತರ ಯಜಮಾನರು । **ದ್ಯುಕ್ಷಂ**—ಪ್ರಕಾಶಮಾನವಾದ ಸ್ತುತಿಯನ್ನು ನಿರ್ಮಿಸಿ ಪಠಿಸುವರೋ ಅಂತಹ । **ಉಕ್ಥಂ**—ಸ್ತೋಮರೂಪವಾದ ಸ್ತುತಿಯನ್ನು । **ಸುದಾನವೇ**—ಉತ್ತಮವಾದ ದಾನಿಯೂ । **ಸತ್ಯರಾಧಸೇ**—ಸತ್ಯಾತ್ಮಕವಾದ ಧನವುಳ್ಳವನೂ ಆದ ಇಂದ್ರನನ್ನುದ್ದೇಶಿಸಿ । **ಶಂಸ ಇತ್**—ಪಠಿಸು । **ಚಕೃಮ**—ನಾವೂ ನಿರ್ಮಿಸಿ ಪಠಿಸುತ್ತೇವೆ.

ಭಾವಾರ್ಥ

ಎಲೈ ಸ್ತೋತೃವೇ, ಯಾವ ರೀತಿಯಲ್ಲಿ ಇತರ ಯಜಮಾನರು ಪ್ರಕಾಶಮೂಲವಾದ ಸ್ತುತಿಯನ್ನು ನಿರ್ಮಿಸಿ ಪಠಿಸುವರೋ ಅಂತಹ ಸ್ತೋಮರೂಪವಾದ ಸ್ತುತಿಯನ್ನು ಉತ್ತಮವಾದ ದಾನಿಯೂ, ಸತ್ಯಾತ್ಮಕವಾದ ಧನವುಳ್ಳವನೂ ಆದ ಇಂದ್ರನನ್ನುದ್ದೇಶಿಸಿ ಪಠಿಸು. ನಾವೂ ನಿರ್ಮಿಸಿ ಪಠಿಸುತ್ತೇವೆ

English Translation

Repeat to the liberal Indra such brilliant praise as other (men repeat) . let us offer it to him who is affuent in truth,

ಸಂಹಿತಾಪಾಠಃ

ತ್ವಂ ನ ಇಂದ್ರ ವಾಜಯುಸ್ತ್ವಂ ಗವ್ಯುಃ ಶತಕ್ರತೋ ।
ತ್ವಂ ಹಿರಣ್ಯಯುರ್ವಸೋ ॥ ೩ ॥

ಪದಪಾಠಃ

ತ್ವಂ । ನಃ । ಇಂದ್ರ । ವಾಜಯುಃ । ತ್ವಂ । ಗವ್ಯುಃ । ಶತಕ್ರತೋ ಇತಿ ಶತಕ್ರತೋ ।
ತ್ವಂ । ಹಿರಣ್ಯಯುಃ । ವಸೋ ಇತಿ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ನೋಽಸ್ಮಾಕಂ ವಾಜಯುರನ್ನಕಾಮೋ ಭವ । ಹೇ ಶತಕ್ರತೋ ತ್ವಂ ನೋಽಸ್ಮಾಕಂ ಗವ್ಯುರ್ಗೋಕಾಮೋ ಭವ । ಹೇ ವಸೋ ವಾಸಯಿತರಿಂದ್ರ ತ್ವಂ ಹಿರಣ್ಯಯುರ್ಹಿರಣ್ಯಕಾಮೋಽಪಿ ಭವ ॥ ಛಂದಸಿ ಪರೇಚ್ಛಾಯಾಮಪಿ ದೃಶ್ಯತೇ ಕ್ಯಜಿತಿ ಕ್ಯಚ್ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ನಃ**—ನಮಗೆ । **ವಾಜಯುಃ**—ಅನ್ನದಾನಮಾಡಲಿಚ್ಛೆಯುಳ್ಳವನಾಗಿ ಆಗು । **ಶತಕ್ರತೋ**—ಅನೇಕ ಕರ್ಮಕರ್ತನಾದ ಎಲೈ ಇಂದ್ರನೇ । **ತ್ವಂ**—ನೀನು । **ಗವ್ಯುಃ**—ಗೋವುಗಳನ್ನು ಕೊಡುವ ಇಚ್ಛೆಯುಳ್ಳವನಾಗು । **ವಸೋ**—ವಸತಿದಾಯಕನಾದ ಎಲೈ ಇಂದ್ರನೇ । **ತ್ವಂ**—ನೀನು । **ಹಿರಣ್ಯಯುಃ**—ಸುವರ್ಣದಾನಮಾಡಲಿಚ್ಛೆಯುಳ್ಳವನಾಗಿರು

ಭಾವಾರ್ಥ

ಎಲೈ ಇಂದ್ರನೇ, ನೀನು ನಮಗೆ ಅನ್ನದಾನಮಾಡಲಿಚ್ಛೆಯುಳ್ಳವನಾಗಿರು. ಅನೇಕ ಕರ್ಮಕರ್ತನಾದ ಎಲೈ ಇಂದ್ರನೇ, ನೀನು ನಮಗೆ ಗೋವುಗಳನ್ನು ಕೊಡಲಿಚ್ಛಿಸು ವಸತಿದಾಯಕನಾದ ಎಲೈ ಇಂದ್ರನೇ, ನೀನು ನಮಗೆ ಸುವರ್ಣದಾನವನ್ನು ಮಾಡಲಿಚ್ಛಿಸು

English Translation

Indra, be willing to give us food be willing, Shatakratu, to give us cattle· be willing donor old wellings, to give us gold,

ಸಂಹಿತಾಪಾಠಃ

ವಯಮಿಂದ್ರ ತ್ವಾಯವೋಽಭಿ ಪ್ರ ಣೋನುಮೋ ವೃಷನ್ ।
ವಿದ್ಧೀ ತ್ವ೧ಸ್ಯ ನೋ ವಸೋ ॥ ೪ ॥

ಪದಪಾಠಃ

ವಯಂ । ಇಂದ್ರ । ತ್ವಾಯವಃ । ಅಭಿ । ಪ್ರ । ನೋನುಮಃ । ವೃಷನ್ ।
ವಿದ್ಧಿ । ತು । ಅಸ್ಯ । ನಃ । ವಸೋ । ಇತಿ ॥ ೪ ॥

ಸಾಯಣಭಾಷ್ಯಂ

**ಹೇ ವೃಷನ್ ಕಾಮಾನಾಂ ವರ್ಷಿತರಿಂದ್ರ ತ್ವಾಯವಸ್ತ್ವತ್ಕಾಮಾ ವಯಂ ವಸಿಷ್ಠಾಸ್ತ್ವಾಮಭಿ ಪ್ರ ಣೋನುಮಃ । ಪ್ರಕರ್ಷೇಣ ಸ್ತುಮಃ । ಹೇ ವಸೋ ವಾಸಯಿತರಿಂದ್ರ ಅಸ್ಯೇದಮಸ್ಮದೀಯಂ ಸ್ತೋತ್ರಂ ತು ಕ್ಷಿಪ್ರಂ ವಿದ್ಧಿ । ಅವಧಾರಯ ॥**

ಪ್ರತಿಪದಾರ್ಥ

**ವೃಷನ್**—ಕಾಮವರ್ಷಕನಾದ । **ಇಂದ್ರ**—ಎಲೈ ಇಂದ್ರನೇ । **ತ್ವಾಯವಃ**—ನಿನ್ನ ಸಹಾಯವನ್ನಪೇಕ್ಷಿಸುವ । **ವಯಂ**—ನಾವು । **ಅಭಿ ಪ್ರ ಣೋನುಮಃ**—ನಿನ್ನನ್ನು ಅತಿಶಯವಾಗಿ ಸ್ತುತಿಸುವೆವು । **ವಸೋ**—ವಸತಿದಾಯಕನಾದ ಎಲೈ ಇಂದ್ರನೇ । **ನಃ ಅಸ್ಯ**—ನಮ್ಮ ಈ ಸ್ತುತಿಯನ್ನು । **ತು**—ಕ್ಷಿಪ್ರವಾಗಿ । **ವಿದ್ಧಿ**—ತಿಳಿದುಕೊಂಡು ಅದಕ್ಕೆ ಪ್ರತಿಫಲವನ್ನು ಕೊಡು

ಭಾವಾರ್ಥ

ಕಾಮವರ್ಷಕನಾದ ಎಲೈ ಇಂದ್ರನೇ, ನಿನ್ನ ಸಹಾಯವನ್ನಪೇಕ್ಷಿಸುವ ನಾವು ನಿನ್ನನ್ನು ಅತಿಶಯವಾಗಿ ಸ್ತುತಿಸುತ್ತೇವೆ. ವಸತಿದಾಯಕನಾದ ಎಲೈ ಇಂದ್ರನೇ, ನಮ್ಮ ಈ ಸ್ತುತಿಯನ್ನು ಕ್ಷಿಪ್ರವಾಗಿ ತಿಳಿದುಕೊಂಡು ಅದಕ್ಕೆ ಪ್ರತಿಫಲವನ್ನು ಕೊಡು

English Translation

Devoted to you, showerer (of benefits), we glorify you be cognizant, giver of dwellings, of this our praise

ಸಂಹಿತಾಪಾಠಃ

ಮಾ ನೋ ನಿದೇ ಚ ವಕ್ತವೇಽರ್ಯೋ ರಂಧೀರರಾವ್ಣೇ ।
ತ್ವೇ ಅಪಿ ಕ್ರತುರ್ಮಮ ॥ ೫ ॥

ಪದಪಾಠಃ

**ಮಾ । ನಃ । ನಿದೇ । ಚ । ವಕ್ತವೇ । ಅರ್ಯಃ । ರಂಧೀಃ । ಅರಾವ್ಣೇ ।**
**ತ್ವೇ ಇತಿ । ಅಪಿ । ಕ್ರತುಃ । ಮಮ ॥ ೫ ॥**

ಸಾಯಣಭಾಷ್ಯಂ

**ಹೇ ಇಂದ್ರ ಅರ್ಯಃ ಸ್ವಾಮೀ ತ್ವಂ ವಕ್ತವೇ ಪರುಷವಾಕ್ಯಾನಾಂ ವಕ್ತ್ರೇ ನಿದೇ ನಿಂದಿತ್ರೇಽರಾವ್ಣೇಽದಾತ್ರೇ ನೋಽಸ್ಮಾನ್ ಮಾ ರಂಧೀಃ । ವಶಂ ಮಾ ಕಾರ್ಷೀಃ । ಅಪ್ಯಪಿ ಚ ತ್ವೇ ತ್ವಯಿ ಮಮ ಕ್ರತುರ್ಮದೀಯಂ ಸ್ತೋತ್ರಲಕ್ಷಣಂ ಕರ್ಮ ಗಚ್ಛತ್ವಿತಿ ಶೇಷಃ । ಅಸ್ಮದೀಯಂ ಸ್ತೋತ್ರಂ ಭವಚ್ಚಿತ್ತೇ ಪ್ರವಿಶತ್ವಿತ್ಯರ್ಥಃ ॥**

ಪ್ರತಿಪದಾರ್ಥ

(**ಎಲೈ ಇಂದ್ರನೇ**) **ಅರ್ಯಃ**—ಸ್ವಾಮಿಯಾದ ನೀನು । **ವಕ್ತವೇ**—ನಮ್ಮನ್ನು ನೋಯಿಸುವಂತೆ ಮಾತನಾಡುವವನಿಗಾಗಲಿ । **ನಿದೇ ಚ**—ನಮ್ಮನ್ನು ನಿಂದಿಸುವವನಿಗಾಗಲಿ । **ಅರಾವ್ಣೇ**—ಹವಿರ್ದಾನಮಾಡದ ಕರ್ಮಭ್ರಷ್ಟನಿ

ಗಾಗಲಿ | **ನಃ**—ನಮ್ಮನ್ನು | **ಮಾ ರಂಧೀಃ**—ವಶರಾಗುವಂತೆ ಮಾಡಬೇಡ | **ಉತ**—ಮತ್ತು | **ತ್ವೇ**—ನಿನ್ನ **ಮಮ**—ನನ್ನ | **ಕ್ರತುಃ**—ಸ್ತುತಿರೂಪವಾದ ಕರ್ಮವು ಐಕ್ಯವಾಗಲಿ

ಭಾವಾರ್ಥ

ಎಲೈ ಇಂದ್ರನೇ, ಸ್ವಾಮಿಯಾದ ನೀನು ನಮಗೆಲ್ಲಾ ರಕ್ಷಕನಾಗಿದ್ದು ನಮ್ಮನ್ನು ನೋಯಿಸುವಂತೆ ಮ ನಾಡುವವನಿಗಾಗಲಿ, ಹವಿರ್ದಾನಮಾಡದ ಕರ್ಮಭ್ರಷ್ಟನಿಗಾಗಲಿ, ನಮ್ಮ ನಿಂದಕರಿಗಾಗಲಿ, ನಮ್ಮನ್ನು ವಶರಾಗುವ ಮಾಡಬೇಡ ಮತ್ತು ನಿನ್ನಲ್ಲಿ ನನ್ನ ಸ್ತುತಿರೂಪವಾದ ಕರ್ಮವು ವ್ಯಾಪಿಸಿ ಐಕ್ಯವಾಗಲಿ.

English Translation

Indra, you are lord, subject us not to the reviler, to the abuser, the withholder of offerings may my worship verily (find favour) with yo

ಸಂಹಿತಾಪಾಠಃ

ತ್ವಂ ವರ್ಮಾಸಿ ಸಪ್ರಥಃ ಪುರೋಯೋಧಶ್ಚ ವೃತ್ರಹನ್ ।

ತ್ವಯಾ ಪ್ರತಿ ಬ್ರುವೇ ಯುಜಾ ॥ ೬ ॥

ಪದಪಾಠಃ

ತ್ವಂ | ವರ್ಮ | ಅಸಿ | ಸऽಪ್ರಥಃ | ಪುರಃऽಯೋಧಃ | ಚ | ವೃತ್ರऽಹನ್ |

ತ್ವಯಾ | ಪ್ರತಿ | ಬ್ರುವೇ | ಯುಜಾ ॥ ೬ ॥

ಸಾಯಣಭಾಷ್ಯಂ

**ಹೇ ವೃತ್ರಹಞ್ಛತ್ರೂಣಾಂ | ಹಿಂಸಕೇಂದ್ರ ತ್ವಂ ವರ್ಮಾಸ್ಮಾಕಂ ಕವಚಮಸಿ | ಕವಚವದ್ರ ಕೋऽಸೀತ್ಯರ್ಥಃ | ಸಪ್ರಥಃ ಸರ್ವತಃ ಪೃಥುಃಶ್ಚಾಸಿ | ಪುರೋಯೋಧಶ್ಚ ಪುರೋ ಯೋದ್ಧಾ ಚಾ ತ್ವಯಾ ಯುಜಾ ತ್ವಯಾ ಸಹಾಯೇನ ಪ್ರತಿ ಬ್ರುವೇ | ಶತ್ರೂನ್ ಪ್ರತಿಬ್ರವೀಮಿ | ಪ್ರತಿಹನ್ಮೀತ್ಯರ್ಥ**

ಪ್ರತಿಪದಾರ್ಥ

**ವೃತ್ರಹನ್**—ಶತ್ರುನಾಶಕನಾದ ಎಲೈ ಇಂದ್ರನೇ | **ತ್ವಂ**—ನೀನು | **ವರ್ಮ**—ನಮಗೆ ರಕ್ಷಾಕವಚವಾ **ಅಸಿ**—ಆಗಿದ್ದೀಯೆ | **ಸಪ್ರಥಃ**—ಸರ್ವತ್ರ ಪ್ರಸಿದ್ಧನೂ ಆಗಿದ್ದೀಯೆ | **ಪುರೋಯೋಧಶ್ಚ**—ನಮ್ಮ ಮುಂಭಾಗ ನಿಂತು (ನಮಗಾಗಿ) ಯುದ್ಧಮಾಡುವವನೂ ಆಗಿದ್ದೀಯೆ | **ತ್ವಯಾ ಯುಜಾ**—ನಿನ್ನೊಡನೆ ಸೇರಿಕೊಂ **ಪ್ರತಿ ಬ್ರುವೇ**—ಶತ್ರುಗಳಿಗೆ ಎದುರುಬಿದ್ದು ಹೊಡೆಯಬಲ್ಲೆನು.

ಭಾವಾರ್ಥ

ಶತ್ರುನಾಶಕನಾದ ಎಲೈ ಇಂದ್ರನೇ, ನೀನು ನಮಗೆ ರಕ್ಷಾಕವಚವಾಗಿ ಆಗಿದ್ದೀಯೆ ಸರ್ವತ್ರ ಪ್ರಸಿದ್ಧ ಆಗಿದ್ದೀಯೆ ನಮ್ಮ ಮುಂಭಾಗದಲ್ಲಿ ನಿಂತು ನಮಗಾಗಿ ಯುದ್ಧಮಾಡುವವನೂ ಆಗಿದ್ದೀಯೆ. ನಿನ್ನೊಡನೆ ಕೊಂಡು ನಾನು ಶತ್ರುಗಳಿಗೆ ಎದುರುಬಿದ್ದು ಹೊಡೆಯಬಲ್ಲೆನು.

English Translation

Slayer of enemies, you, Indra, are our armour, vast and our preceder in battle : with you for my ally I defy (the foe).

ಸಂಹಿತಾಪಾಠಃ

ಮಹಾ ಉತಾಸಿ ಯಸ್ಯ ತೇಽನು ಸ್ವಧಾವರೀ ಸಹಃ ।
ಮಮ್ನಾತೇ ಇಂದ್ರ ರೋದಸೀ ॥ ೭ ॥

ಪದಪಾಠಃ

ಮಹಾನ್ । ಉತ । ಅಸಿ । ಯಸ್ಯ । ತೇ । ಅನು । ಸ್ವಧಾವರೀ ಇತಿ ಸ್ವಧಾऽವರೀ ಸಹಃ ।
ಮಮ್ನಾತೇ ಇತಿ । ಇಂದ್ರ । ರೋದಸೀ ಇತಿ ॥ ೭ ॥

ಸಾಯಣಭಾಷ್ಯಂ

ಉತಾಪಿ ಚ ಹೇ ಇಂದ್ರ ತ್ವಂ ಮಹಾನಸಿ । ಸರ್ವಾಧಿಕೋಽಸಿ । ಹೇ ಇಂದ್ರ ಯಸ್ಯ ತೇ ತವ ಸಹೋ ಬಲಂ ಸ್ವಧಾವರೀ ಅನ್ನವತ್ಯೌ ರೋದಸೀ ದ್ಯಾವಾಪೃಥಿವ್ಯಾವನು ಮಮ್ನಾತೇ ಅನುಮನ್ಯೇತೇ । ತ್ವದೀಯಂ ಸಹಃ ಸರ್ವಾಧಿಕಮಿತ್ಯುಭಾವಪಿ ಲೋಕೌ ವಿಸಂವಾದಂ ನ ಕುರುತ ಇತ್ಯರ್ಥಃ ॥

ಪ್ರತಿಪದಾರ್ಥ

**ಉತ**—ಅಲ್ಲದೇ । **ಇಂದ್ರ**—ಎಲೈ ಇಂದ್ರನೇ । **ಮಹಾನ್**—ಅತ್ಯಧಿಕವಾದ ಮಾಹಾತ್ಮ್ಯವುಳ್ಳವನಾಗಿ । **ಅಸಿ**—ಆಗಿದ್ದೀಯೆ । **ಯಸ್ಯ ತೇ**—ಯಾವ ಅದೇ ನಿನ್ನ । **ಸಹಃ**—ಬಲವನ್ನು । **ಸ್ವಧಾವರೀ**—ಅನ್ನವತಿಯರಾದ । **ರೋದಸೀ**—ದ್ಯಾವಾಪೃಥಿವಿಗಳೂ । **ಅನು ಮಮ್ನಾತೇ**—ಗೌರವಿಸುತ್ತವೆ

ಭಾವಾರ್ಥ

ಎಲೈ ಇಂದ್ರನೇ, ನೀನು ಅತ್ಯಧಿಕವಾದ ಮಾಹಾತ್ಮ್ಯವುಳ್ಳವನಾಗಿ ಆಗಿದ್ದೀಯೆ. ಅಂತಹ ಮಾಹಾತ್ಮ್ಯವುಳ್ಳ ನಿನ್ನ ಬಲವನ್ನು ಅನ್ನವತಿಯರಾದ ದ್ಯಾವಾಪೃಥಿವಿಗಳೂ ಗೌರವಿಸುತ್ತವೆ.

English Translation

You verily are great, and heaven and earth abounding with food, respect, Indra, your strength

ಸಂಹಿತಾಪಾಠಃ

ತಂ ತ್ವಾ ಮರುತ್ವತೀ ಪರಿ ಭುವದ್ವಾಣೀ ಸಯಾವರೀ ।
ನಕ್ಷಮಾಣಾ ಸಹ ದ್ಯುಭಿಃ ॥ ೮ ॥

ಪದಪಾಠಃ

**ತಂ । ತ್ವಾ । ಮರುತ್ವತೀ । ಪರಿ । ಭುವತ್ । ವಾಣೀ । ಸಽಯಾವರೀ ।**

**ನಕ್ಷಮಾಣಾ । ಸಹ । ದ್ಯುಭಿಃ ॥ ೮ ॥**

ಸಾಯಣಭಾಷ್ಯಂ

**ಹೇ ಇಂದ್ರ ತಮುಕ್ತಗುಣವಿಶಿಷ್ಟಂ ತ್ವಾ ತ್ವಾಂ ಸಯಾವರೀ ತ್ವಯಾ ಸಹ ಗಂತ್ರೀ । ಯತ್ರ ಯತ್ರ ತ್ವಂ ಯಾಸಿ ತತ್ರ ತತ್ರ ಯಾಂತೀತ್ಯರ್ಥಃ । ದ್ಯುಭಿಸ್ತೇಜೋಭಿರ್ನಕ್ಷಮಾಣಾ ವ್ಯಾಪ್ನುವಂತೀ ಮರುತ್ವತೀ । ಮರುತಃ ಸ್ತೋತಾರಃ । ತದ್ವತೀ ವಾಣೀ ಸ್ತುತಿಃ ಪರಿ ಭುವತ್ । ಪರಿಭವತು । ಪರಿಭವತಿರತ್ರ ಪರಿಗ್ರಹಾರ್ಥೀಯಃ । ಪರಿಗೃಹ್ಣಾತ್ವಿತ್ಯರ್ಥಃ ॥**

ಪ್ರತಿಪದಾರ್ಥ

(ಎಲೈ ಇಂದ್ರನೇ) **ತಂ**—ಹಿಂದೆ ವರ್ಣಿತವಾದ ಗುಣಗಳುಳ್ಳ । **ತ್ವಾ**—ನಿನ್ನನ್ನು । **ಸಯಾವರೀ**—ನಿನ್ನೊಡನೆಯೇ ಸಂಚರಿಸುವುದೂ । **ದ್ಯುಭಿಃ ಸಹ**—ಕಾಂತಿಗಳೊಡನೆ । **ನಕ್ಷಮಾಣಾ**—ವ್ಯಾಪ್ತವಾಗಿರುವುದೂ । **ಮರುತ್ವತೀ**—ಸ್ತುತಿಕರ್ತರೊಂದಿಗೆ ಕೂಡಿದುದೂ ಆದ । **ವಾಣೀ**—ಸ್ತುತಿಯು । **ಪರಿ ಭುವತ್**—ವ್ಯಾಪಿಸಿಕೊಳ್ಳಲಿ

ಭಾವಾರ್ಥ

ಎಲೈ ಇಂದ್ರನೇ ಹಿಂದೆ ವರ್ಣಿತವಾದ ಗುಣಗಳುಳ್ಳ ನಿನ್ನನ್ನು ನಿನ್ನೊಡನೆಯೇ ಸಂಚರಿಸುವುದೂ, ಕಾಂತಿಗಳೊಡನೆ ವ್ಯಾಪ್ತವಾಗಿರುವುದೂ ಮತ್ತು ಸ್ತುತಿಕರ್ತರೊಂದಿಗೆ ಕೂಡಿಕೊಂಡಿರುವುದೂ ಆದ ಸ್ತುತಿಯು ವ್ಯಾಪಿಸಿಕೊಳ್ಳಲಿ ನಿನ್ನನ್ನು ಪೂರ್ಣವಾಗಿ ಸೇವಿಸಲಿ

English Translation

May the praises of your adorers, accompanying you (wherever you go), such as you are, and spreading around with radiance, reach you.

ಸಂಹಿತಾಪಾಠಃ

ಊರ್ಧ್ವಾಸಸ್ತ್ವಾನ್ವಿಂದವೋ ಭುವನ್ದಸ್ಮಮುಪ ದ್ಯವಿ ।

ಸಂ ತೇ ನಮಂತ ಕೃಷ್ಟಯಃ ॥ ೯ ॥

ಪದಪಾಠಃ

**ಊರ್ಧ್ವಾಸಃ । ತ್ವಾ । ಅನು । ಇಂದವಃ । ಭುವನ್ । ದಸ್ಮಂ । ಉಪ । ದ್ಯವಿ ।**

**ಸಂ । ತೇ । ನಮಂತ । ಕೃಷ್ಟಯಃ ॥ ೯ ॥**

ಸಾಯಣಭಾಷ್ಯಂ

**ಹೇ ಇಂದ್ರ ಉಪ ದ್ಯವಿ ದ್ಯುಲೋಕಸಮೀಪೇ ಸ್ಥಿತಂ ದಸ್ಮಂ ದರ್ಶನೀಯಂ ತ್ವಾ ತ್ವಾಮನೂದ್ದಿಶ್ಯೋರ್ಧ್ವಾಸ ಊರ್ಧ್ವಾ ಇಂದವೋsಸ್ಮದೀಯಾಃ ಸೋಮಾ ಭುವನ್ । ಭವಂತಿ । ಕೃಷ್ಟಯಃ ಪ್ರಜಾಶ್ಚ ತೇ ತುಭ್ಯಂ ಸಂ ನಮಂತ । ಭುವಿ ಸೋಮಾಸ್ತ್ವದರ್ಥಮೇವ ಜಾಯಂತೇ ಪ್ರಜಾಶ್ಚ ತ್ವಾಮೇವ ಪ್ರಣಮಂತೀತೀಂದ್ರಸ್ತುತಿಃ ॥**

ಪ್ರತಿಪದಾರ್ಥ

(ಎಲೈ ಇಂದ್ರನೇ) **ಉಪ ದ್ಯವಿ**—ದ್ಯುಲೋಕಸ್ಥಿತನಾದವನೂ । **ದಸ್ಮಂ**—ಆಕರ್ಷಕವಾದ ರೂಪವುಳ್ಳವನೂ ಆದ । **ತ್ವಾ ಅನು**—ನಿನ್ನನ್ನುದ್ದೇಶಿಸಿಯೇ । **ಇಂದವಃ**—ಸೋಮರಸಗಳು । **ಊರ್ಧ್ವಾಸಃ**—ಊರ್ಧ್ವಮುಖಗಳಾದ ಪ್ರವಾಹಗಳುಳ್ಳವಾಗಿ । **ಭುವನ್**—ಆಗುತ್ತವೆ । **ಕೃಷ್ಟಯಃ**—ಸಕಲ ಪ್ರಜೆಗಳೂ ಸಹ । **ತೇ**—ನಿನಗೆ । **ಸಂ ನಮಂತ**—ಭಕ್ತಿಯಿಂದ ನಮಸ್ಕರಿಸುತ್ತಾರೆ.

ಭಾವಾರ್ಥ

ಎಲೈ ಇಂದ್ರನೇ, ದ್ಯುಲೋಕಸ್ಥಿತನಾದವನೂ, ಆಕರ್ಷಕವಾದ ರೂಪವುಳ್ಳವನೂ ಆದ ನಿನ್ನನ್ನುದ್ದೇಶಿಯೇ, ಸೋಮರಸಗಳು ಊರ್ಧ್ವಮುಖಗಳಾದ ಪ್ರವಾಹಗಳುಳ್ಳವಾಗಿ ಆಗುತ್ತವೆ. ಸಕಲಪ್ರಜೆಗಳೂ ನಿನಗೆ ಭಕ್ತಿಯಿಂದ ನಮಸ್ಕರಿಸುತ್ತಾರೆ

English Translation

The ascending libations proceed, Indra, to you, abiding ia heaven of goodly aspect; men how in reverence before you

ಸಂಹಿತಾಪಾಠಃ

ಪ್ರ ವೋ ಮಹೇ ಮಹಿವೃಧೇ ಭರಧ್ವಂ ಪ್ರಚೇತಸೇ ಪ್ರ ಸುಮತಿಂ ಕೃಣುಧ್ವಂ ।
ವಿಶಃ ಪೂರ್ವೀಃ ಪ್ರ ಚರಾ ಚರ್ಷಣಿಪ್ರಾಃ ॥ ೧೦ ॥

ಪದಪಾಠಃ

ಪ್ರ । ವಃ । ಮಹೇ । ಮಹಿsವೃಧೇ । ಭರಧ್ವಂ । ಪ್ರsಚೇತಸೇ । ಪ್ರ । ಸುsಮತಿಂ । ಕೃಣುಧ್ವಂ । ವಿಶಃ । ಪೂರ್ವೀಃ । ಪ್ರ । ಚರ । ಚರ್ಷಣಿsಪ್ರಾಃ ॥ ೧೦ ॥

ಸಾಯಣಭಾಷ್ಯಂ

**ಹೇ ಮದೀಯಾಃ ಪುರುಷಾಃ ವೋ ಯೂಯಂ ಮಹಿವೃಧೇ ಮಹತಾಂ ಧನಾನಾಂ ವರ್ಧಯಿತ್ರೇ ಮಹೇ ಮಹತ ಇಂದ್ರಾಯ ಪ್ರ ಭರಧ್ವಂ । ಸೋಮಾನ್ಪ್ರಣಯತ । ಪ್ರಚೇತಸೇ ಪ್ರಕೃಷ್ಟಮತಯ ಇಂದ್ರಾಯ ಸುಮತಿಂ ಸುಷ್ಟುತಿಂ ಚ ಪ್ರ ಕೃಣುಧ್ವಂ । ಪ್ರಕುರುತ । ಅಥ ಪ್ರತ್ಯಕ್ಷಸ್ತುತಿಃ । ಹೇ ಇಂದ್ರ**

**ಚರ್ಷಣಿಪ್ರಾಃ ಕಾಮ್ಯೈಃ ಪ್ರಜಾನಾಂ ಪೂರಯಿತಾ ತ್ವಂ ಪೂರ್ವೀಃರ್ಹವಿಷಾಂ ಪೂರಯಿತ್ರೀರ್ವಿಶಃ ಪ್ರಜಾಃ ಪ್ರ ಚರ । ಅಭಿಗಚ್ಛ ॥**

ಪ್ರತಿಪದಾರ್ಥ

(ಎಲೈ ಯಜಮಾನರೇ) **ವಃ**—ನೀವು । **ಮಹಿವೃಧೇ**—ಮಹತ್ತಾದ ಸಂಪತ್ತಿಗೆ ವೃದ್ಧಿಕಾರಕನೂ । **ಮಹೇ**—ಮಹಾತ್ಮನೂ ಆದ ಇಂದ್ರನಿಗಾಗಿ । **ಪ್ರ ಭರಧ್ವಂ**—ಸೋಮಗಳನ್ನು ಸಂಪಾದಿಸಿರಿ । **ಪ್ರಚೇತಸೇ**—ಉತ್ತಮವಾದ ಪ್ರಜ್ಞೆಯುಳ್ಳ ಇಂದ್ರನ ಸ್ತುತಿಗಾಗಿ । **ಸುಮತಿಂ**—ಉತ್ತಮವಾದ ಸ್ತುತಿಗಳನ್ನು । **ಪ್ರ ಕೃಣುಧ್ವಂ**—ನಿರ್ಮಿಸಿರಿ (ಎಲೈ ಇಂದ್ರನೇ) । **ಚರ್ಷಣಿಪ್ರಾಃ**—ಪ್ರಜೆಗಳ ಇಷ್ಟಾರ್ಥಗಳನ್ನು ತುಂಬಿಸುವ ನೀನು । **ಪೂರ್ವೀಃ**—ಹವಿಸ್ಸುಗಳನ್ನು ತುಂಬಿಡುವ ।**ವಿಶಃ**—ಪ್ರಜೆಗಳಲ್ಲಿಗೆ । **ಪ್ರ ಚರ**—ಶೀಘ್ರವಾಗಿ ದಯಮಾಡು.

ಭಾವಾರ್ಥ

ಎಲೈ ಯಜಮಾನರೇ, ಮಹತ್ತಾದ ಸಂಪತ್ತಿಗೆ ವೃದ್ಧಿಕಾರಕನೂ ಮಹಾತ್ಮನೂ ಆದ ಇಂದ್ರನಿಗಾಗಿ ಸೋಮರಸಗಳನ್ನು ಸಂಪಾದಿಸಿರಿ. ಉತ್ತಮವಾದ ಪ್ರಜ್ಞೆಯುಳ್ಳ ಇಂದ್ರನ ಸ್ತುತಿಗಾಗಿ ಉತ್ತಮವಾದ ಸ್ತುತಿಗಳನ್ನು ನಿರ್ಮಿಸಿರಿ. ಎಲೈ ಇಂದ್ರನೇ, ಪ್ರಜೆಗಳ ಇಷ್ಟಾರ್ಥಗಳನ್ನು ತುಂಬಿಕೊಡುವ ನೀನು ಹವಿಸ್ಸುಗಳನ್ನು ನಿನಗಾಗಿ ತುಂಬಿ ಸಿದ್ಧಪಡಿಸಿರುವ ಪ್ರಜೆಗಳಲ್ಲಿಗೆ ಶೀಘ್ರವಾಗಿ ದಯಮಾಡು

English Translation

Bring (libations) to the great (Indra), the giver of great (wealth) offer praise to the wise Indra fulfiller (of the desires) of men, come to the people offering many (oblations).

ಸಂಹಿತಾಪಾಠಃ

ಉರುವ್ಯಚಸೇ ಮಹಿನೇ ಸುವೃಕ್ತಿಮಿಂದ್ರಾಯ ಬ್ರಹ್ಮ ಜನಯಂತ ವಿಪ್ರಾಃ ।
ತಸ್ಯ ವ್ರತಾನಿ ನ ಮಿನಂತಿ ಧೀರಾಃ ॥ ೧೧ ॥

ಪದಪಾಠಃ

ಉರುऽವ್ಯಚಸೇ । ಮಹಿನೇ । ಸುऽವೃಕ್ತಿಂ । ಇಂದ್ರಾಯ । ಬ್ರಹ್ಮ । ಜನಯಂತ । ವಿಪ್ರಾಃ ।
ತಸ್ಯ । ವ್ರತಾನಿ । ನ । ಮಿನಂತಿ । ಧೀರಾಃ ॥ ೧೧ ॥

ಸಾಯಣಭಾಷ್ಯಂ

**ಉರುವ್ಯಚಸೇ ಪೃಥುವ್ಯಾಪ್ತಯೇ ಮಹಿನೇ ಮಹತೇ ಯಸ್ಮಾ ಇಂದ್ರಾಯ ಸುವೃಕ್ತಿಂ ಸ್ತುತಿಂ ಬ್ರಹ್ಮಾನ್ನಂ ಹವಿಶ್ಚ ವಿಪ್ರಾಃ ಪ್ರಾಜ್ಞಾ ಜನಯಂತ ಜನಯಂತಿ ತಸ್ಯೇಂದ್ರಸ್ಯ ವ್ರತಾನಿ ರಕ್ಷಣಾದೀನಿ ಕರ್ಮಾಣಿ ಧೀರಾಃ ಪ್ರಾಜ್ಞಾ ದೇವಾ ಅಪಿ ನ ಮಿನಂತಿ । ನ ಹಿಂಸಂತಿ ॥**

ಪ್ರತಿಪದಾರ್ಥ

**ಉರುವ್ಯಚಸೇ**—ಅತ್ಯಂತ ವಿಸ್ತಾರವಾದ ವ್ಯಾಪ್ತಿಯುಳ್ಳವನೂ | **ಮಹಿನೇ**—ಮಹಾತ್ಮನೂ ಆದ | **ಇಂದ್ರಾಯ**—ಇಂದ್ರನಿಗೆ | **ಸುವೃಕ್ತಿಂ**—ಉತ್ತಮವಾಗಿ ನಿರ್ಮಿತವಾದ ಸ್ತುತಿಯನ್ನೂ | **ಬ್ರಹ್ಮ**—ಹವಿಸ್ಸಿನ ರೂಪದ ಅನ್ನವನ್ನೂ | **ವಿಪ್ರಾಃ**—ಪ್ರಾಜ್ಞರು | **ಜನಯಂತ**—ನಿರ್ಮಿಸಿ ಸಿದ್ಧಪಡಿಸುತ್ತಾರೆ | **ತಸ್ಯ**—ಅದೇ ಇಂದ್ರನ | **ವ್ರತಾನಿ**—ರಕ್ಷಣಾತ್ಮಕವಾದ ಕರ್ಮಗಳನ್ನು | **ಧೀರಾಃ**—ಪ್ರಾಜ್ಞರಾದ ದೇವತೆಗಳೂ ಕೂಡ | **ನ ಮಿನಂತಿ**—ಮೀರಿ ನಡೆಯುವುದಿಲ್ಲ (ವಿಘ್ನಪಡಿಸುವುದಿಲ್ಲ)

ಭಾವಾರ್ಥ

ಅತ್ಯಂತ ವಿಸ್ತಾರವಾದ ವ್ಯಾಪ್ತಿಯುಳ್ಳವನೂ, ಮಹಾತ್ಮನೂ ಆದ ಇಂದ್ರನಿಗೆ ಉತ್ತಮವಾಗಿ ನಿರ್ಮಿತವಾದ ಸ್ತುತಿಯನ್ನೂ ಹವಿಸ್ಸಿನ ರೂಪದ ಅನ್ನವನ್ನೂ ಪ್ರಾಜ್ಞರು ನಿರ್ಮಿಸಿ ಸಿದ್ಧಪಡಿಸುತ್ತಾರೆ ಅದೇ ಇಂದ್ರನ ರಕ್ಷಣಾತ್ಮಕವಾದ ಕರ್ಮಗಳನ್ನು ಪ್ರಾಜ್ಞರಾದ ದೇವತೆಗಳೂ ಮೀರಲಾಗುವುದಿಲ್ಲ

English Translation

The sages engender sacred praise and (sacrificial) food for the wide-pervading mighty Indra · the prudent impede not his functions.

ಸಂಹಿತಾಪಾಠಃ

ಇಂದ್ರಂ ವಾಣೀರನುತ್ತಮನ್ಯುಮೇವ ಸತ್ರಾ ರಾಜಾನಂ ದಧಿರೇ ಸಹಧ್ಯೈ |
ಹರ್ಯಶ್ವಾಯ ಬರ್ಹಯಾ ಸಮಾಪೀನ್ || ೧೨ ||

ಪದಪಾಠಃ

ಇಂದ್ರಂ | ವಾಣೀಃ | ಅನುತ್ತಽಮನ್ಯುಂ | ಏವ | ಸತ್ರಾ | ರಾಜಾನಂ | ದಧಿರೇ | ಸಹಧ್ಯೈ |
ಹರಿಽಅಶ್ವಾಯ | ಬರ್ಹಯ | ಸಂ | ಆಪೀನ್ || ೧೨ ||

ಸಾಯಣಭಾಷ್ಯಂ

**ಸತ್ರಾ ರಾಜಾನಂ ಸರ್ವಜಗತ ಈಶ್ವರಮನುತ್ತಮನ್ಯುಂ | ಕೇನಾಪ್ಯನುತ್ತೋಽಬಾಧಿತೋ ಮನ್ಯುಃ ಕ್ರೋಧೋ ಯಸ್ಯ ಸಃ | ತಮೇವೇಂದ್ರಂ ವಾಣೀಃ ಸ್ತುತಯಃ ಸಹಧ್ಯೈ ಸ್ತೋತಾರಃ ಶತ್ರೂಣಾಮಭಿಭವಿತುಂ ದಧಿರೇ | ಅತೋ ಹೇತೋರ್ಹೇ ಸ್ತೋತಃ ತ್ವಮಪಿ ಹರ್ಯಶ್ವಾಯೇಂದ್ರಾಯ | ಹರ್ಯಶ್ವಮಿಂದ್ರಂ ಸ್ತೋತುಮಿತ್ಯರ್ಥಃ | ಆಪೀನ್ ಬಂಧೂನ್ ಸಂ ಬರ್ಹಯ | ಉತ್ಸಾಹಯ ||**

ಪ್ರತಿಪದಾರ್ಥ

**ಸತ್ರಾ**—ಸಕಲ ಜಗತ್ತಿಗೂ | **ರಾಜಾನಂ**—ಈಶ್ವರನೂ | **ಅನುತ್ತಮನ್ಯುಂ**—ಯಾರಿಂದಲೂ ಎದುರಿಸಲಾಗದ ಕ್ರೋಧವುಳ್ಳವನೂ ಆದ | **ಇಂದ್ರಂ ಏವ**—ಇಂದ್ರನನ್ನೇ | **ವಾಣೀಃ**—ಸ್ತುತಿಗಳು | **ಸಹಧ್ಯೈ**—ಶತ್ರು

ಗಳನ್ನು ಸೋಲಿಸಲು | **ದಧಿರೇ**—ಶಕ್ತಿಯುಳ್ಳವನನ್ನಾಗಿ ಮಾಡುತ್ತವೆ | **ಹರ್ಯಶ್ವಾಯ**—(ಎಲೈ ಸ್ತೋತೃವೇ) ಹರಿಸಂಜ್ಞಕವಾದ ಅಶ್ವಗಳುಳ್ಳ ಇಂದ್ರನನ್ನು ಸ್ತುತಿಸಲು | **ಆಪೀನ್**—ಆಪ್ತರನ್ನೆಲ್ಲಾ | **ಸಂ ಬರ್ಹಯ**—ಉತ್ಸಾಹಗೊಳಿಸು.

ಭಾವಾರ್ಥ

ಸಕಲ ಜಗತ್ತಿಗೂ ಈಶ್ವರನೂ, ಯಾರಿಂದಲೂ ಎದುರಿಸಲಾಗದ ಕ್ರೋಧವುಳ್ಳವನೂ ಆದ ಇಂದ್ರನನ್ನು ಸ್ತುತಿಗಳು ಶತ್ರುನಾಶಕವಾದ ಶಕ್ತಿಯುಳ್ಳವನನ್ನಾಗಿ ಮಾಡುತ್ತವೆ ಎಲೈ ಸ್ತೋತೃವೇ, ಹರಿಸಂಜ್ಞಕವಾದ ಅಶ್ವಗಳುಳ್ಳ ಇಂದ್ರನನ್ನು ಸ್ತುತಿಸಲು ಆಪ್ತರನ್ನೆಲ್ಲಾ ಉತ್ಸಾಹಗೊಳಿಸು

English Translation

Praises truly enable the universal monarch, Indra, whose wrath is irresistible, to overcome (his foes) urge your kinsmen (worshipper, to glorify) the lord of bay steeds

## ಮೂವತ್ತೆರಡನೆಯ ಸೂಕ್ತವು

ಸಾಯಣಭಾಷ್ಯಂ

**ಮೋ ಷು ತ್ವೇತಿ ಸಪ್ತವಿಂಶತ್ಯೃಚಂ ಪಂಚದಶಂ ಸೂಕ್ತಂ | ಅತ್ರೇಯಮನುಕ್ರಮಣಿಕಾ | ಮೋ ಷು ಸಪ್ತಾಧಿಕಾ ಪ್ರಾಗಾಥಂ ತೃತೀಯಾ ದ್ವಿಪದಾ ಸೌದಾಸೈರಗ್ನೌ ಪ್ರಕ್ಷಿಪ್ಯಮಾಣಃ ಶಕ್ತಿರಂತ್ಯಂ ಪ್ರಗಾಥಮಾಲೇಭೇ ಸೋಽರ್ಧರ್ಚ ಉಕ್ತೇಽದಹ್ಯತ | ತಂ ಪುತ್ರೋಕ್ತಂ ವಸಿಷ್ಠಃ ಸಮಾಪಯತೇತಿ ಶಾಟ್ಯಾಯನಕಂ ವಸಿಷ್ಠಸ್ಯೈವ ಹತಪುತ್ರಸ್ಯಾರ್ಷಮಿತಿ ತಾಂಡಕಮಿತಿ | ಮಂಡಲದ್ರಷ್ಟಾ ವಸಿಷ್ಠ ಋಷಿಃ | ಇಂದ್ರ ಕ್ರತುಂ ನ ಇತಿ ಪ್ರಗಾಥಸ್ಯಾರ್ಧರ್ಚಸ್ಯ ಚ ವಸಿಷ್ಠಪುತ್ರಃ ಶಕ್ತಿರ್ವಸಿಷ್ಠೋ ವಾ | ಇಂದ್ರೋ ದೇವತಾ | ಅಯುಜೋ ಬೃಹತ್ಯೋ ಯುಜಃ ಸತೋಬೃಹತ್ಯಃ | ತೃತೀಯಾ ತು ದ್ವಿಪದಾ ವಿರಾಟ್ || ಮಹಾವ್ರತೇ ನಿಷ್ಕೇವಲ್ಯೇ ಬಾರ್ಹತತೃಚಾಶೀತಾವೇತತ್ಸೂಕ್ತಂ | ತತ್ರ ದ್ವಿಪದಾಮಭಿ ತ್ವಾ ಶೂರೇತ್ಯೇತಂ ರಾಥಂತರಂ ಪ್ರಗಾಥಂ ನಕಿಃ ಸುದಾಸ ಇತಿ ಪ್ರಗಾಥಂ ಚ ವರ್ಜಯೇತ್ | ತಥೈವ ಪಂಚಮಾರಣ್ಯಕೇ ಸೂತ್ರಿತಂ | ಮೋ ಷು ತ್ವಾ ವಾಘತಶ್ಚನೇತ್ಯೇತಸ್ಯ ದ್ವಿಪದಾಂ ಚೋದ್ಧರತಿ ರಾಥಂತರಂ ಚ ಪ್ರಗಾಥಮಥ ಹಾಸ್ಯ ನಕಿಃ ಸುದಾಸೋ ರಥಮಿತ್ಯೇತಂ ಪ್ರಗಾಥಮುದ್ಧೃತ್ಯ ತ್ವಾಮಿದಾ ಹ್ಯೋ ನರ ಇತ್ಯೇತಂ ಪ್ರಗಾಥಂ ಪ್ರತ್ಯವದಧಾತಿ | ಐ ಆ ೫-೨ ೪ | ಇತಿ || ಚಾತುರ್ವಿಂಶಿಕೇಽಹನಿ ಪಂಚಮೇಽಹನಿ ಚ ನಿಷ್ಕೇವಲ್ಯೇ ಮೋ ಷು ತ್ವಾ ವಾಘತ ಇತಿ ಪ್ರಗಾಥಃ ಸದ್ವಿಪದಃ | ಸೂತ್ರಿತಂ ಚ | ಮೋ ಷು ತ್ವಾ ವಾಘತಶ್ಚನೇತಿ ಸದ್ವಿಪದ ಉಪಸಮಸ್ಯೇದ್ದ್ವಿಪದಾಂ | ಆ ೭-೩ | ಇತಿ || ಚಾತುರ್ವಿಂಶಿಕೇಽಹನಿ ಮರುತ್ವತೀಯೇ ಪ್ರಾಕೃತಾನ್ಮರುತ್ವತೀಯಾತ್ಪ್ರಗಾಥಾದನಂತರಂ ನಕಿಃ ಸುದಾಸ ಇತಿ ಪ್ರಗಾಥಂ ಶಂಸೇತ್ | ಪೃಷ್ಠ್ಯಾಭಿಪ್ಲವಷಡಹಯೋಸ್ತೃತೀಯೇ ಷಷ್ಠೇಽಹನಿ ಚಾಯಂ ಪ್ರಗಾಥಃ | ತಥೈವ ಸೂತ್ರಿತಂ | ನಕಿಃ ಸುದಾಸೋ ರಥಮಿತಿ ಮರುತ್ವತೀಯಾ ಊರ್ಧ್ವಂ ನಿತ್ಯಾದಿತಿ | ಏವಂ ಸ್ಥಿತಾನ್ ಪ್ರಗಾಥಾನ್ಪೃಷ್ಠ್ಯಾಭಿಪ್ಲವಯೋರನ್ವಹಂ ಪುನಃಪುನರಾವರ್ತಯೇಯುಃ | ಆ. ೭-೩ | ಇತಿ || ಅಗ್ನಿಷ್ಟೋಮೇ ಮಾಧ್ಯಂದಿನಸವನೇಽ-**

**ಚ್ಛಾವಾಕಶಸ್ತ್ರ ಉದಿನ್ನ್ವಸ್ಯ ರಿಚ್ಯತ ಇತಿ ಪ್ರಗಾಥಃ । ತಥಾ ಚ ಸೂತ್ರಿತಂ । ಉದಿನ್ನ್ವಸ್ಯ ರಿಚ್ಯತೇ ಭೂಯ ಇತ್ । ಆ ೫ ೧೬ । ಇತಿ ॥ ಅಗ್ನಿಷ್ಟೋಮೇ ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರೇ ಕಸ್ತಮಿಂದ್ರೇತಿ ಪ್ರಗಾಥಃ । ಸೂತ್ರಿತಂ ಚ । ಕಸ್ತಮಿಂದ್ರ ತ್ವಾವಸುಂ ಸದ್ಯೋ ಹ ಜಾತಃ । ಆ. ೫-೧೬ । ಇತಿ॥ ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರಸ್ಯಾಯಂ ಪ್ರಗಾಥಃ । ಅಹರ್ಗಣೇಷ್ವಪಿ ದ್ವಿತೀಯಾದಿಷ್ವಹಃಸು । ಸೂತ್ರಿತಂ ಚ । ಕಸ್ತಮಿಂದ್ರ ತ್ವಾವಸುಂ ಕನ್ನವ್ಯೋ ಅತಸೀನಾಂ । ಆ ೭-೪ । ಇತಿ ॥ ಆರಂಭಣೀಯಾಃ ಪರ್ಯಾಸಾನ್ ಕದ್ವತೋಽಹರಹಃಶಸ್ಯಾನೀತಿ ಹೋತ್ರಕಾಃ । ಆ ೭-೧ । ಇತಿ ॥ ಪೃಷ್ಠ್ಯಷಡಹಸ್ಯ ತೃತೀಯೇಽಹನಿ ನಿಷ್ಕೇವಲ್ಯೇ ವೈರೂಪಸಾಮಪಕ್ಷೇ ಯದಿಂದ್ರ ಯಾವತ ಇತ್ಯನುರೂಪಸ್ತೃಚಃ । ಸೂತ್ರಿತಂ ಚ । ಯದಿಂದ್ರ ಯಾವತಸ್ತ್ವಮಿತಿ ಪ್ರಗಾಥೌ ಸ್ತೋತ್ರಿಯಾನುರೂಪೌ । ಆ. ೭-೧೦ । ಇತಿ ॥ ಅಗ್ನಿಷ್ಟೋಮೇ ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇಽಚ್ಛಾವಾಕಶಸ್ತ್ರೇ ತರಣಿರಿತ್ಸಿಷಾಸತೀತಿ ವೈಕಲ್ಪಿಕಸ್ತೃಚಃ । ಸೂತ್ರಿತಂ ಚ । ತರೋಭಿರ್ವೋ ವಿದದ್ವಸುಂ ತರಣಿರಿತ್ಸಿಷಾಸತಿ । ಆ ೭-೪ । ಇತಿ ॥ ಅಗ್ನಿಷ್ಟೋಮೇ ನಿಷ್ಕೇವಲ್ಯಶಸ್ತ್ರೇ ರಥಂತರಸಾಮಪಕ್ಷೇಽಭಿ ತ್ವಾ ಶೂರೇತಿ ಪ್ರಗಾಥಃ ಸ್ತೋತ್ರಿಯಃ । ಸೂತ್ರಿತಂ ಚ । ಅಭಿ ತ್ವಾ ಶೂರ ನೋನುಮೋಽಭಿ ತ್ವಾ ಪೂರ್ವಪೀತಯ ಇತಿ ಪ್ರಗಾಥೌ ಸ್ತೋತ್ರಿಯಾನುರೂಪೌ । ಆ ೫-೧೫ । ಇತಿ ॥ ಆಶ್ವಿನಶಸ್ತ್ರೇಽಪ್ಯಯಂ ಪ್ರಗಾಥಃ । ತಥೈವ ಸೂತ್ರಿತಂ ಚ । ಅಭಿ ತ್ವಾ ಶೂರ ನೋನುಮೋ ಬಹವಃ ಸೂರಚಕ್ಷಸ ಇತಿ ಪ್ರಗಾಥಾಃ । ಆ. ೬ ೫ ಇತಿ ॥ ಮಹಾವ್ರತೇ ನಿಷ್ಕೇವಲ್ಯೇ ದಕ್ಷಿಣಪಕ್ಷೇಽಯಂ ಪ್ರಗಾಥಃ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಅಭಿ ತ್ವಾ ಶೂರ ನೋನುಮೋಽಭಿ ತ್ವಾ ಪೂರ್ವಪೀತಯ ಇತಿ ರಥಂತರಸ್ಯ ಸ್ತೋತ್ರಿಯಾನುರೂಪೌ ಪ್ರಗಾಥೌ । ಐ. ಆ ೫-೮ । ಇತಿ ॥ ಆಶ್ವಿನಶಸ್ತ್ರ ಇಂದ್ರ ಕ್ರತುಂ ನ ಇತಿ ಪ್ರಗಾಥಃ । ಸೂತ್ರಿತಂ ಚ । ಇಂದ್ರ ಕ್ರತುಂ ನ ಆ ಭರಾಭಿತ್ವಾ ಶೂರ ನೋನುಮಃ । ಆ ೬ ೫ । ಇತಿ ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರೇಽಯಂ ವೈಕಲ್ಪಿಕಃ ಸ್ತೋತ್ರಿಯಃ ಪ್ರಗಾಥಃ । ಸೂತ್ರಿತಂ ಚ । ಇಂದ್ರ ಕ್ರತುಂ ನ ಆ ಭರೇಂದ್ರ ಜ್ಯೇಷ್ಠಂ ನ ಆ ಭರ । ಆ ೭-೪ । ಇತಿ ॥**

**ಅನುವಾದವು—ಮೋ ಷು ತ್ವಾ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು ಇದರಲ್ಲಿ ಇಪ್ಪತ್ತೇಳು ಋಕ್ಕುಗಳಿರುವುವು ಅನುಕ್ರಮಣಿಕೆಯಲ್ಲಿ—**ಮೋ ಷು ಸಪ್ತಾಧಿಕಾ ಪ್ರಾಗಾಥಂ ತೃತೀಯಾ ದ್ವಿಪದಾ ಸೌದಾಸೈರಗ್ನೌ ಪ್ರಕ್ಷಿಪ್ಯಮಾಣಃ ಶಕ್ತಿರಂತ್ಯಂ ಪ್ರಗಾಥಮಾಲೇಭೇ ಸೋಽರ್ಧರ್ಚ ಉಕ್ತೇಽದಹ್ಯತ । ತಂ ಪುತ್ರೋಕ್ತಂ ವಸಿಷ್ಠಃ ಸಮಾಪಯತೇತಿ ಶಾಟ್ಯಾಯನಕಂ ವಸಿಷ್ಠಸ್ಯೈವ ಹತಪುತ್ರಸ್ಯಾರ್ಷಮಿತಿ ತಾಂಡಕಂ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಈ ಮಂಡಲದ್ರಷ್ಟೃವಾದ ವಸಿಷ್ಠನೇ ಋಷಿಯು. **ಇಂದ್ರ ಕ್ರತುಂ ನಃ** ಎಂಬ ೨೬ ನೆಯ ಋಕ್ಕಿನ ಅರ್ಧಪ್ರಗಾಥಕ್ಕೆ ವಸಿಷ್ಠಪುತ್ರನಾದ ಶಕ್ತಿ ಎಂಬುವನು ಋಷಿಯು ಅಥವಾ ವಸಿಷ್ಠನೇ ಋಷಿಯು; ಇಂದ್ರನು ದೇವತೆಯು. ಈ ಸೂಕ್ತದಲ್ಲಿ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು, ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. **ರಾಯಸ್ಕಾಮಃ** ಎಂಬ ಮೂರನೆಯ ಋಕ್ಕು ದ್ವಿಪದಾ ವಿರಾಟ್ ಎಂಬ ಛಂದಸ್ಸಿನದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಬೃಹತೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು. ಆದರೆ, ಅವುಗಳಲ್ಲಿ ದ್ವಿಪದಾವಿರಾಟ್ ಛಂದಸ್ಸಿನ ಋಕ್ಕನ್ನೂ, **ಅಭಿ ತ್ವಾ ಶೂರ** ಎಂಬ ೨೨ ನೇ ಋಕ್ಕು ರಾಥಂತರ ಪ್ರಗಾಥವು ಮತ್ತು **ನಕಿಃ ಸುದಾಸಃ** ಎಂಬ ೧೦ ನೇ ಋಕ್ಕು ಪ್ರಗಾಥವು. ಆದ್ದರಿಂದ ಈ ಋಕ್ಕುಗಳನ್ನು ಬಿಟ್ಟು ಉಳಿದ ಋಕ್ಕುಗಳನ್ನು ಬೃಹತೀಛಂದಸ್ಸಿನ

ಋಕ್ಕುಗಳಿಗಾಗಿ ಪರಿಸಬೇಕೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ವೋ ಷು ತ್ವಾ ವಾಘುತಶ್ಚನೇ-ತ್ಯೇತಸ್ಯ ದ್ವಿಪದಾಂ ಚೋದ್ಧರತಿ ರಾಥಂತರಂ ಚ ಪ್ರಗಾಥಮಥ ಹಾಸ್ಯ ನಕಿಃ ಸುದಾಸೋ ರಥಮಿತ್ಯೇ-ತಂ ಪ್ರಗಾಥಮುದ್ಧೃತ್ಯ ತ್ವಾಮಿದಾ ಹ್ಯೋ ನರ ಇತ್ಯೇತಂ ಪ್ರಗಾಥಂ ಪ್ರತ್ಯವದಧಾತಿ** ಎಂಬ ವಾಕ್ಯದಿಂದ (ಐ ಆ ೫-೨-೪) ನಿರ್ದಿಷ್ಟವಾಗಿರುವುದು ಯಾಗದ ಚಾತುರ್ವಿಂಶಿಕವೆಂಬ ದಿನದಲ್ಲಿಯೂ, ಐದನೆಯ ದಿನದಲ್ಲಿಯೂ, ನಿಷ್ಕೇವಲ್ಯಶಸ್ತ್ರಮಂತ್ರಪಠನಕಾಲದಲ್ಲಿ **ವೋ ಷು ತ್ವಾ ವಾಘುತಃ** ಎಂಬ ಪ್ರಗಾಥವನ್ನೂ (ಈ ಋಕ್ಕನ್ನೂ ಇದರ ಮುಂದಿನ ಋಕ್ಕನ್ನೂ) **ರಾಯಸ್ಕಾಮಃ** ಎಂಬ ದ್ವಿಪದಾವಿರಾಟ್‌ಛಂದಸ್ಸಿನ ಒಂದು ಋಕ್ಕನ್ನೂ ಪರಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ವೋ ಷು ತ್ವಾ ವಾಘುತಶ್ಚನೇತಿ ಸದ್ವಿಪದ ಉಪಸಮಸ್ಯೇದ್ದ್ವಿಪದಾಂ** ಎಂಬ ಸೂತ್ರದಿಂದ (ಆ ೭ ೩) ವಿವೃತವಾಗಿರುವುದು ಯಾಗದ ಚಾತುರ್ವಿಂಶವೆಂಬ ದಿನದಲ್ಲಿ ಮರುತ್ವತೀಯ ಶಸ್ತ್ರಮಂತ್ರಗಳನ್ನು ಪಠಿಸುವಾಗ ಪ್ರಕೃತಸಂದರ್ಭದಲ್ಲಿ ಪಠಿಸಬೇಕಾದ ಮರುತ್ವತೀಪ್ರಗಾಥಮಂತ್ರಗಳ ಪಠನಾನಂತರ **ನಕಿ ಸುದಾಸಃ** ಎಂಬ ಪ್ರಗಾಥಮಂತ್ರವನ್ನು (೧೦, ೧೧ನೇ ಋಕ್ಕುಗಳು) ಪಠಿಸಬೇಕೆ[illegible] ಅಭಿಪ್ಲವ ಷಡಹವೆಂಬ ಯಾಗಗಳ ಮೂರು ಮತ್ತು ಆರನೆಯ ದಿನಗಳಲ್ಲಿ ಮೇಲೆ ಹೇಳಿದ ಪ್ರಗಾಥ[illegible]ವನ್ನೇ [illegible]ಂದು ಆಶ್ವಲಾಯನಶ್ರೌತಸೂತ್ರದ—**ನಕಿಃ ಸುದಾಸೋ ರಥಮಿತಿ ಮರುತ್ವತೀಯಾ ಊರ್ಧ್ವಂ** ನಿತ್ಯಾತ್ ಎಂಬ ಸೂತ್ರದಿಂದಲೂ ಮತ್ತು **ಏವಂ ಸ್ಥಿತಾನ್ ಪ್ರಗಾಥಾನ್ ಪೃಷ್ಠ್ಯಾಭಿಪ್ಲವಯೋರಸ್ಯಹಂ ಪುನಃಪುನರಾವರ್ತ-ಯೇಯುಃ** ಎಂಬ ಸೂತ್ರದಿಂದಲೂ (ಆ ೭ ೩) ವಿವೃತವಾಗಿರುವುದು ಅಗ್ನಿಷ್ಟೋಮಯಾಗದಲ್ಲಿ ಮಾಧ್ಯಂದಿನ ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಉದ್ವಿನ್ನ್ವಸ್ಯ ರಿಚ್ಯತೇ** ಎಂಬ ಪ್ರ-ಗಾಥಮಂತ್ರವನ್ನು (೧೨ ೧೩ ಋಕ್ಕುಗಳು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಉದಿನ್ನ್ವಸ್ಯ ರಿಚ್ಯತೇ ಭೂಯ ಇತ್** ಎಂಬ ಸೂತ್ರದಿಂದ (ಆ ೫ ೧೬) ವಿವೃತವಾಗಿರುವುದು. ಅಗ್ನಿಷ್ಟೋಮಯಾಗದಲ್ಲಿ ಮಾಧ್ಯಂದಿನ ಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಕಸ್ತಮಿಂದ್ರ** ಎಂಬ ಪ್ರಗಾಥಮಂತ್ರವನ್ನು (೧೪, ೧೫ ಋಕ್ಕುಗಳು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಕಸ್ತಮಿಂದ್ರ ತ್ವಾವಸುಂ ಸದ್ಯೋ ಹ ಜಾತಃ** ಎಂಬ ಸೂತ್ರದಿಂದ (ಆ ೫-೧೬) ವಿವೃತವಾಗಿರುವುದು ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿಯೂ, ಅಹರ್ಗಣವೆಂಬ ಯಾಗದ ಎರಡನೆಯ ದಿನದಿಂದ ಮುಂದಿನ ದಿನಗಳಲ್ಲಿಯೂ ಮೇಲೆ ಹೇಳಿದ ಪ್ರಗಾಥವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಕಸ್ತಮಿಂದ್ರ ತ್ವಾವಸುಂ ಕನ್ನವ್ಯೋ ಅತಸೀನಾಂ** ಎಂಬ ಸೂತ್ರದಿಂದಲೂ (ಆ. ೭ ೪) ಮತ್ತು **ಆರಂಭಣೀಯಾಃ ಪರ್ಯಾಸಾನ್ ಕದ್ವತೋಽಹರಹಃಶಸ್ಯಾನೀತಿ ಹೋತ್ರಕಾಃ** ಎಂಬ ಸೂತ್ರದಿಂದಲೂ (ಆ. ೭-೧) ವಿವೃತವಾಗಿರುವುದು ಪೃಷ್ಠ್ಯಷಡಹವೆಂಬ ಯಾಗದ ಮೂರನೆಯ ದಿವಸದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ವೈರೂಪಸಾಮಸಕ್ಷದಲ್ಲಿ **ಯದಿಂದ್ರ ಯಾವತಃ** ಎಂದು ಮೊದಲಾಗುವ ಎರಡು ಪ್ರಗಾಥಗಳನ್ನು (೧೮ ೨೧ ಋಕ್ಕುಗಳು) ಸ್ತೋತ್ರಿಯಾನುರೂಪವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಯದಿಂದ್ರ ಯಾವತಸ್ತ್ವಮಿತಿ ಪ್ರಗಾಥೌ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ ೭-೧೦) ವಿವೃತವಾಗಿರುವುದು. ಅಗ್ನಿಷ್ಟೋಮಯಾಗದಲ್ಲಿ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ತರಣಿರಿತ್ಸಿಷಾಸತಿ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೨೦-೨೨) ವೈಕಲ್ಪಿಕತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ತರೋಭಿರ್ವೋ ವಿದದ್ವಸುಂ ತರಣಿರಿತ್ಸಿಷಾಸತಿ** ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು. ಅಗ್ನಿಷ್ಟೋಮಯಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸು

ವಾಗ ರಥಂತರಸಾಮುಪಕ್ಷದಲ್ಲಿ **ಅಭಿ ತ್ವಾ ಶೂರ** ಎಂಬ ಪ್ರಗಾಥಮಂತ್ರವನ್ನು ಸ್ತೋತ್ರಿಯಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಭಿ ತ್ವಾ ಶೂರ ನೋನುಮೋಽಭಿ ತ್ವಾ ಪೂರ್ವ ಪೀತಯ ಇತಿ ಪ್ರಗಾಥೌ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ ೫ ೧೫) ವಿವೃತವಾಗಿರುವುದು. ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಪ್ರಗಾಥಮಂತ್ರವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಭಿ ತ್ವಾ ಶೂರ ನೋನುಮೋ ಬಹವಃ ಸೂರಚಕ್ಷಸಃ ಇತಿ ಪ್ರಗಾಥಾಃ** ಎಂಬ ಸೂತ್ರದಿಂದ (ಆ ೬-೫) ವಿವೃತವಾಗಿರುವುದು ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ದಕ್ಷಿಣಪಕ್ಷದಲ್ಲಿ ಈ ಪ್ರಗಾಥಮಂತ್ರವನ್ನು ಪಠಿಸಬೇಕೆಂಬು ಐತರೇಯಾರಣ್ಯಕದ ಪಂಚಮಾರಣ್ಯಕದ **ಅಭಿ ತ್ವಾ ಶೂರ ನೋನುಮೋಽಭಿ ತ್ವಾ ಪೂರ್ವಪೀತಯ ಇತಿ ರಥಂತರಸ್ಯ ಸ್ತೋತ್ರಿಯಾನುರೂಪೌ ಪ್ರಗಾಥೌ** ಎಂಬ ವಾಕ್ಯದಿಂದ (ಐ ಆ ೫-೨-೨) ನಿರ್ದಿಷ್ಟವಾಗಿರುವುದು ಆಶ್ವಿನಶಸ್ತ್ರಮಂತ್ರಗಳಲ್ಲಿಯೂ **ಇಂದ್ರ ಕ್ರತುಂ ನಃ** ಎಂಬ ಪ್ರಗಾಥಮಂತ್ರವನ್ನು (೨೬-೨೭ ಋಕ್ಕುಗಳು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಇಂದ್ರ ಕ್ರತುಂ ನ ಆ ಭರಾಭಿ ತ್ವಾ ಶೂರ ನೋನುಮಃ** ಎಂಬ ಸೂತ್ರದಿಂದ (ಆ. ೬-೫) ವಿವೃತವಾಗಿರುವುದು ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಮೇಲೆ ಹೇಳಿದ ಪ್ರಗಾಥಮಂತ್ರವನ್ನು ವೈಕಲ್ಪಿಕಸ್ತೋತ್ರಿಯ ಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಇಂದ್ರ ಕ್ರತುಂ ನ ಆ ಭರೇಂದ್ರ ಜ್ಯೇಷ್ಠಂ ನ ಆ ಭರ** ಎಂಬ ಸೂತ್ರದಿಂದ (ಆ ೭-೪) ವಿವೃತವಾಗಿರುವುದು

## ಸೂಕ್ತ—೩೨

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೩೨ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ—೧೭, ೧೮, ೧೯, ೨೦, ೨೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೨೭ ॥

ಋಷಿಃ—೧-೨೫, ೨೬ ರಲ್ಲಿ ಉತ್ತರಾರ್ಧ, ೨೭, ವಸಿಷ್ಠಃ । ೨೬ ರಲ್ಲಿ ಪೂರ್ವಾರ್ಧ ವಸಿಷ್ಠಃ ಶಕ್ತಿರ್ವಾ ॥

ದೇವತಾ—ಇಂದ್ರಃ ॥

ಛಂದಃ—೧, ೨, ೪-೨೭ ಪ್ರಾಗಾಥಂ (ಅಯುಜೋ ಬೃಹತ್ಯಃ ಯುಜೋ ಸತೋ ಬೃಹತ್ಯಃ ) । ೩ ದ್ವಿಪದಾ ॥

ಸಂಹಿತಾಪಾಠಃ

ಮೋ ಷು ತ್ವಾ ವಾಘತಶ್ಚನಾರೇ ಅಸ್ಮನ್ನಿ ರೀರಮನ್ ।
ಆರಾತ್ತಾಚ್ಚಿತ್ಸಧಮಾದಂ ನ ಆ ಗಹೀಹ ವಾ ಸನ್ನುಪ ಶ್ರುಧಿ ॥ ೧ ॥

ಪದಪಾಠಃ

ಮೋ ಇತಿ । ಸು । ತ್ವಾ । ವಾಘತಃ । ಚನ । ಆರೇ । ಅಸ್ಮತ್ । ನಿ । ರೀರಮನ್ ।
ಆರಾತ್ತಾತ್ । ಚಿತ್ । ಸಧಽಮಾದಂ । ನಃ । ಆ । ಗಹಿ । ಇಹ । ವಾ । ಸನ್ । ಉಪ । ಶ್ರುಧಿ ॥೧॥

ಸಾಯಣಭಾಷ್ಯಂ

ಹೇ ಇಂದ್ರ ತ್ವಾ ತ್ವಯಾ ವಾಘತಶ್ಚನ ಯಜಮಾನಾ ಅಪ್ಯಸ್ಮದಸ್ಮತ್ತ ಆರೇ ದೂರೇ ಮೋ ನಿ ರೀರಮನ್ । ನಿ ನಿತರಾಂ ರಮಯಂತು । ಅತಸ್ತ್ವಮಾರಾತ್ತಾಚ್ಚಿದ್ದೂರೇಽಪಿ ವರ್ತಮಾನೋಽಸ್ಮದೀಯಂ ಸಧಮಾದಂ ಯಜ್ಞಮಾ ಗಹಿ । ಆಗಚ್ಛ । ಇಹ ವಾತ್ರಾಪಿ ವಾ ಸನ್ ವಿದ್ಯಮಾನ ಉಪ ಶ್ರುಧಿ । ಅಸ್ಮದೀಯಂ ಸ್ತೋತ್ರಮುಪಶೃಣು ॥

ಪ್ರತಿಪದಾರ್ಥ

(ಎಲೈ ಇಂದ್ರನೇ,) **ತ್ವಾ**—ನಿನ್ನನ್ನು । **ವಾಘತಶ್ಚನ**—ಇತರ ಯಾವ ಯಜಮಾನರೂ । **ಅಸ್ಮತ್**—ನಮಗಿಂತ । **ಆರೇ**—ದೂರಪ್ರದೇಶದಲ್ಲಿ । **ತ್ವಾ**—ನಿನ್ನನ್ನು । **ಮೋ ನಿ ರೀರಮನ್**—ಸಿಲ್ಲಿಸಿಕೊಳ್ಳದಿರಲಿ । **ಆರಾತ್ತಾಚ್ಚಿತ್**—ಅತ್ಯಂತ ದೂರಪ್ರದೇಶದಿಂದಲೂ ಸಹ । **ನಃ ಸಧಮಾದಂ**—ನಮ್ಮ ಯಜ್ಞಕ್ಕೆ । **ಆ ಗಹಿ**—ದಯಮಾಡು । **ಇಹ ವಾ**—ಈ ಯಜ್ಞಪ್ರದೇಶದಲ್ಲಿಯೇ । **ಸನ್**—ಇದ್ದುಕೊಂಡು । **ಉಪ ಶ್ರುಧಿ**—ನಮ್ಮ ಸ್ತುತಿಗಳನ್ನು ಕೇಳು

ಭಾವಾರ್ಥ

ಎಲೈ ಇಂದ್ರನೇ, ನಿನ್ನನ್ನು ಇತರ ಯಾವ ಯಜಮಾನರೂ ನಮಗಿಂತ ದೂರಪ್ರದೇಶದಲ್ಲಿ ಸಿಲ್ಲಿಸಿಕೊಳ್ಳದಿರಲಿ. ಅತ್ಯಂತ ದೂರಪ್ರದೇಶದಿಂದಲೂ ನಮ್ಮ ಯಜ್ಞಕ್ಕೆ ದಯಮಾಡು ಈ ಯಜ್ಞಪ್ರದೇಶದಲ್ಲಿಯೇ ಇದ್ದುಕೊಂಡು ನಮ್ಮ ಸ್ತುತಿಗಳನ್ನು ಕೇಳು

English Translation

Let not, Indra, (other) worshippers detain you far from us come from whatever distance to our assembly present at this ceremony, hear our (prayers)

ಸಂಹಿತಾಪಾಠಃ

ಇಮೇ ಹಿ ತೇ ಬ್ರಹ್ಮಕೃತಃ ಸುತೇ ಸಚಾ ಮಧೌ ನ ಮಕ್ಷ ಆಸತೇ ।
ಇಂದ್ರೇ ಕಾಮಂ ಜರಿತಾರೋ ವಸೂಯವೋ ರಥೇ ನ ಪಾದಮಾ ದಧುಃ ॥ ೨ ॥

ಪದಪಾಠಃ

ಇಮೇ । ಹಿ । ತೇ । ಬ್ರಹ್ಮಽಕೃತಃ । ಸುತೇ । ಸಚಾ । ಮಧೌ । ನ । ಮಕ್ಷಃ । ಆಸತೇ ।
ಇಂದ್ರೇ । ಕಾಮಂ । ಜರಿತಾರಃ । ವಸುಽಯವಃ । ರಥೇ । ನ । ಪಾದಂ । ಆ । ದಧುಃ ॥ ೨ ॥

ಸಾಯಣಭಾಷ್ಯಂ

**ಹೇ ಇಂದ್ರ ತೇ ತ್ವದರ್ಥಂ ಸುತೇಽಭಿಷುತೇ ಸೋಮೇ ಬ್ರಹ್ಮಕೃತಃ ಸ್ತೋತ್ರಕೃತೋ ಮಧೌ ನ ಮಧುನೀವ ಮಕ್ಷೋ ಮಕ್ಷಿಕಾಃ ಸಚಾ ಸಹಾಸತೇ । ಉಪವಿಶಂತಿ । ಅಥ ಪರೋಕ್ಷಸ್ತುತಿಃ । ವಸೂಯವೋ ಧನಕಾಮಾ ಜರಿತಾರಃ ಸ್ತೋತಾರಃ ಕಾಮಮಿಷ್ಟಮಿಂದ್ರೇ ರಥೇ ನ ಪಾದಂ ರಥೇ ಪಾದಮಿವಾ ದಧುಃ । ಸಮರ್ಪಯಂತಿ ॥**

ಪ್ರತಿಪದಾರ್ಥ

(ಎಲೈ ಇಂದ್ರನೇ,) **ತೇ**—ನಿನ್ನನ್ನುದ್ದೇಶಿಸಿ । **ಸುತೇ**—ಸೋಮರಸವು ಹಿಂಡಲ್ಪಟ್ಟಾಗ । **ಇಮೇ ಬ್ರಹ್ಮಕೃತಃ**—ಈ ಸ್ತುತಿಕರ್ತರು । **ಮಧೌ**—ಮಧುವನ್ನು ಚೆಲ್ಲಿದಾಗ । **ಮಕ್ಷಃ ನ**—ಜೇನುನೊಣಗಳು ಮುತ್ತಿಕೊಳ್ಳುವಂತೆ । **ಸಚಾ**—ಎಲ್ಲರೂ ಒಟ್ಟಿಗೆ ಸೇರಿ । **ಆಸತೇ ಹಿ**—ಕುಳಿತುಕೊಳ್ಳುತ್ತಾರೆ. । **ರಥೇ**—ರಥದಲ್ಲಿ । **ಪಾದಂ ನ**—ಆಶ್ರಯಕ್ಕಾಗಿ ಪಾದವನ್ನಿಡುವಂತೆ । **ವಸೂಯವಃ**—ಧನಾರ್ಥಿಗಳಾದ । **ಜರಿತಾರಃ**—ಸ್ತುತಿಕರ್ತರು । **ಕಾಮಂ**—ತಮ್ಮ ಇಷ್ಟಾರ್ಥವನ್ನು । **ಇಂದ್ರೇ**—ಇಂದ್ರನಲ್ಲಿ । **ಆ ದಧುಃ**—ನೆಲೆಸುವಂತೆ ಮಾಡುತ್ತಾರೆ

ಭಾವಾರ್ಥ

ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಸೋಮರಸವು ಹಿಂಡಲ್ಪಟ್ಟಾಗ ಈ ಸ್ತುತಿಕರ್ತರು ಮಧುವನ್ನು ಚೆಲ್ಲಿದಾಗ ಜೇನುನೊಣಗಳು ಮುತ್ತಿಕೊಳ್ಳುವಂತೆ ಎಲ್ಲರೂ ಒಟ್ಟಿಗೆ ಸೇರಿ ಕುಳಿತುಕೊಳ್ಳುತ್ತಾರೆ. ರಥದಲ್ಲಿ ಆಶ್ರಯಕ್ಕಾಗಿ ಪಾದವನ್ನಿಡುವಂತೆ ಧನಾರ್ಥಿಗಳಾದ ಸ್ತುತಿಕರ್ತರು ತಮ್ಮ ಇಷ್ಟಾರ್ಥವನ್ನು ಇಂದ್ರನಲ್ಲೇ ನೆಲಸಿ ಅವನ ಆಶ್ರಯವನ್ನು ಪಡೆಯುವಂತೆ ಮಾಡುತ್ತಾರೆ.

## English Translation

When the libation is effused for you, these offerers of sacrifice swarm like flies round honey · the pious praisers, desiring riches, fix their hope upon Indra, like a foot upon a chariot.

ಸಂಹಿತಾಪಾಠಃ

ರಾಯಸ್ಕಾಮೋ ವಜ್ರಹಸ್ತಂ ಸುದಕ್ಷಿಣಂ ಪುತ್ರೋ ನ ಪಿತರಂ ಹುವೇ ॥

ಪದಪಾಠಃ

ರಾಯಃಽಕಾಮಃ । ವಜ್ರಽಹಸ್ತಂ । ಸುಽದಕ್ಷಿಣಂ । ಪುತ್ರಃ । ನ । ಪಿತರಂ । ಹುವೇ ॥ ೩ ॥

ಸಾಯಣಭಾಷ್ಯಂ

**ರಾಯಸ್ಕಾಮೋ ಧನಕಾಮೋಽಹಂ ಸುದಕ್ಷಿಣಂ ಶೋಭನದಾನಂ ವಜ್ರಹಸ್ತಮಿಂದ್ರಂ ಪುತ್ರೋ ನ ಪುತ್ರ ಇವ ಪಿತರಂ ಹುವೇ । ಹ್ವಯಾಮಿ ॥**

ಪ್ರತಿಪದಾರ್ಥ

**ಪುತ್ರಃ**—ಸಹಾಯಾರ್ಥಿಯಾದ ಪುತ್ರನು | **ಪಿತರಂ ನ**—ತಂದೆಯನ್ನು ಸಹಾಯಕ್ಕಾಗಿ ಕರೆಯುವಂತೆ | **ರಾಯಸ್ಕಾಮಃ**—ಧನಾರ್ಥಿಯಾದ ನಾನು | **ಸುದಕ್ಷಿಣಂ**—ಉತ್ತಮವಾದ ದಾನಿಯೂ | **ವಜ್ರಹಸ್ತಂ**—ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನೂ ಆದ ಇಂದ್ರನನ್ನು | **ಹುವೇ**—ಸಹಾಯಕ್ಕಾಗಿ ಕರೆಯುತ್ತೇನೆ

ಭಾವಾರ್ಥ

ಸಹಾಯಾರ್ಥಿಯಾದ ಪುತ್ರನು ಪಿತೃವನ್ನು ಸಹಾಯಕ್ಕಾಗಿ ಕರೆಯುವಂತೆ ಧನಾರ್ಥಿಯಾದ ನಾನು ಉತ್ತಮವಾದ ದಾನಿಯೂ, ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನೂ ಆದ ಇಂದ್ರನನ್ನು ಸಹಾಯಕ್ಕಾಗಿ ಕರೆಯುತ್ತೇನೆ

English Translation

Desirous of riches, I call upon the benevolent wielder of the thunderbolt, as a son upon a father

ಸಂಹಿತಾಪಾಠಃ

ಇಮ ಇಂದ್ರಾಯ ಸುನ್ವಿರೇ ಸೋಮಾಸೋ ದಧ್ಯಾಶಿರಃ |
ತಾ ಆ ಮದಾಯ ವಜ್ರಹಸ್ತ ಪೀತಯೇ ಹರಿಭ್ಯಾಂ ಯಾಹ್ಯೋಕ ಆ || ೪ ||

ಪದಪಾಠಃ

ಇಮೇ | ಇಂದ್ರಾಯ | ಸುನ್ವಿರೇ | ಸೋಮಾಸಃ | ದಧಿऽಆಶಿರಃ |
ತಾನ್ | ಆ | ಮದಾಯ | ವಜ್ರऽಹಸ್ತ | ಪೀತಯೇ | ಹರಿऽಭ್ಯಾಂ | ಯಾಹಿ | ಓಕಃ | ಆ || ೪ ||

ಸಾಯಣಭಾಷ್ಯಂ

**ಹೇ ವಜ್ರಹಸ್ತ ದಧ್ಯಾಶಿರೋ ದಧಿಮಿಶ್ರಣಾ ಇಮೇ ಸೋಮಾಸಃ ಸೋಮಾ ಇಂದ್ರಾಯ ತುಭ್ಯಂ ಸುನ್ವಿರೇ | ಸುತಾ ಬಭೂವುಃ | ತಾನ್ ಸೋಮಾನ್ಮದಾಯ ಮದಾರ್ಥಂ ಪೀತಯೇ ಪಾನಾಯೌಕೋ ಯಜ್ಞಸದನಮಾಭಿ ಹರಿಭ್ಯಾಮಶ್ವಾಭ್ಯಾಮಾ ಯಾಹಿ | ಆಗಚ್ಛ ||**

ಪ್ರತಿಪದಾರ್ಥ

**ವಜ್ರಹಸ್ತ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ, | **ದಧ್ಯಾಶಿರಃ**—ದಧಿಮಿಶ್ರಿತವಾದ | **ಇಮೇ ಸೋಮಾಸಃ**—ಈ ಸೋಮರಸಗಳು | **ಇಂದ್ರಾಯ**—ಸರ್ವೇಶ್ವರನಾದ ನಿನಗಾಗಿ | **ಸುನ್ವಿರೇ**—ಹಿಂಡಿ ಸಿದ್ಧವಾಗಿವೆ | **ತಾನ್**—ಆ ಸೋಮರಸಗಳನ್ನು | **ಮದಾಯ**—ನಿನ್ನ ಹರ್ಷಕ್ಕಾಗಿ | **ಪೀತಯೇ**—ಪಾನಮಾಡಲು | **ಓಕಃ ಆ**—ನಮ್ಮ ಯಜ್ಞಸದನಕ್ಕಭಿಮುಖವಾಗಿ | **ಹರಿಭ್ಯಾಂ**—ನಿನ್ನ ಅಶ್ವಗಳೊಡನೆ | **ಆ ಯಾಹಿ**—ದಯಮಾಡು.

ಭಾವಾರ್ಥ

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ದಧಿಮಿಶ್ರಿತವಾದ ಈ ಸೋಮರಸಗಳು ಸರ್ವೇಶ್ವರನಾದ ನಿನಗಾಗಿ ಹಿಂಡಿ ಸಿದ್ಧವಾಗಿದೆ. ಇದೇ ಸೋಮರಸಗಳನ್ನು ನಿನ್ನ ಹರ್ಷಕ್ಕಾಗಿ ಪಾನಮಾಡಲು ನಮ್ಮ ಯಜ್ಞಸದನಕ್ಕಭಿಮುಖವಾಗಿ ನಿನ್ನ ಅಶ್ವಗಳೊಡನೆ ದಯಮಾಡು

English Translation

These Soma juices, mixed with curds, are poured out to Indra come, wielder of the thunderbolt; with your horses to our dwelling, to drink there for (your) exhilaration.

ಸಂಹಿತಾಪಾಠಃ

ಶ್ರವಚ್ಛ್ರುತ್ಕರ್ಣ ಈಯತೇ ವಸೂನಾಂ ನೂ ಚಿನ್ನೋ ಮರ್ಧಿಷದ್ಗಿರಃ ।
ಸದ್ಯಶ್ಚಿದ್ಯಃ ಸಹಸ್ರಾಣಿ ಶತಾ ದದನ್ನಕಿರ್ದಿತ್ಸಂತಮಾ ಮಿನತ್ ॥ ೫ ॥

ಪದಪಾಠಃ

ಶ್ರವತ್ । ಶ್ರುತ್ಽಕರ್ಣಃ । ಈಯತೇ । ವಸೂನಾಂ । ನು । ಚಿತ್ । ನಃ । ಮರ್ಧಿಷತ್ । ಗಿರಃ ।
ಸದ್ಯಃ । ಚಿತ್ । ಯಃ । ಸಹಸ್ರಾಣಿ । ಶತಾ । ದದತ್ । ನಕಿಃ । ದಿತ್ಸಂತಂ । ಆ । ಮಿನತ್ ॥ ೫ ॥

ಸಾಯಣಭಾಷ್ಯಂ

**ಶ್ರುತ್ಕರ್ಣೋ ಯಾಚ್ಞಾಶ್ರವಣರೂಪಕರ್ಣ ಇಂದ್ರೋ ವಸೂನಾಂ ವಸೂನೀಯತೇ । ಯಾಚ್ಯತೇ ಸೋಽಸ್ಮದೀಯಾ ಗಿರೋ ಯಾಚ್ಞಾವಾಕ್ಯಾನಿ ಶ್ರವತ್ । ಶೃಣೋತು । ನೂ ಚಿನ್ನೈವ ಮರ್ಧಿಷತ್ । ಹಿನಸ್ತು । ಅಶ್ರವಣೇನ ಯಾಚ್ಞಾವಾಕ್ಯಾನಿ ನಿಷ್ಫಲಾನಿ ನ ಕರೋತ್ವಿತ್ಯರ್ಥಃ । ಅಪಿ ಚೇಂದ್ರಃ ಸದ್ಯಶ್ಚಿತ್ ಸದ್ಯ ಏವ ಯಾಚ್ಞಾನಂತರಮೇವ ಸಹಸ್ರಾಣಿ ಶತಾನಿ ಚ ದದತ್ । ಪ್ರಯಚ್ಛೇತ್ । ದಿತ್ಸಂತಂ ದಾತುಮಿಚ್ಛಂತಂ ತಮಿಂದ್ರಂ ನಕಿರಾ ಮಿನತ್ । ನ ಹಿಂಸ್ಯಾತ್ । ಕಶ್ಚಿದಪಿ ನ ವಾರಯೇದಿತ್ಯರ್ಥಃ ॥**

ಪ್ರತಿಪದಾರ್ಥ

**ಶ್ರುತ್ಕರ್ಣಃ**—ನಮ್ಮ ಸ್ತುತಿಯನ್ನೂ ಯಾಚನೆಯನ್ನೂ ಕೇಳುವ ಕಿವಿಗಳುಳ್ಳ ಇಂದ್ರನು । **ವಸೂನಾಂ**—ಧನಗಳಿಗಾಗಿ । **ಈಯತೇ**—ಯಾಚಿಸಲ್ಪಡುತ್ತಾನೆ । **ನಃ**—ನಮ್ಮ । **ಗಿರಃ**—ಯಾಚನಾವಾಕ್ಯಗಳನ್ನು । **ಶ್ರವತ್**-ಕೇಳುತ್ತಾನೆ । **ನೂ ಚಿತ್ ಮರ್ಧಿಷತ್**—ಖಂಡಿತ ಯಾವಾಗಲೂ ನಮ್ಮ ಯಜ್ಞಭಂಗವನ್ನುಂಟುಮಾಡುವುದಿಲ್ಲ. । **ಸದ್ಯಶ್ಚಿತ್**—ಪ್ರಾರ್ಥಿತನಾದೊಡನೆಯೇ । **ಸಹಸ್ರಾಣಿ**—ಸಹಸ್ರಸಂಖ್ಯಾಕವಾಗಿಯೂ । **ಶತಾ**—ಶತಸಂಖ್ಯಾಕವಾಗಿಯೂ । **ದದತ್**—ಕೊಡುತ್ತಾನೆ । **ದಿತ್ಸಂತಂ**—ದಾನಮಾಡಲಿಚ್ಛೆಯುಳ್ಳ ಆ ಇಂದ್ರನನ್ನು । **ನ ಕಿಃ**—ಯಾರೂ ಕೂಡ । **ಆ ಮಿನತ್**—ಹಿಂಸಿಸಿ ವಿಘ್ನಪಡಿಸಲಾರರು

ಭಾವಾರ್ಥ

ನಮ್ಮ ಸ್ತುತಿಯನ್ನೂ ಯಾಚನೆಯನ್ನೂ ಕೇಳುವ ಕಿವಿಗಳುಳ್ಳ ಇಂದ್ರನು ಧನಗಳಿಗಾಗಿ ಯಾಚಿಸಲ್ಪಡುತ್ತಾನೆ ಮತ್ತು ನಮ್ಮ ಯಾಚನಾವಾಕ್ಯಗಳನ್ನು ಕೇಳುತ್ತಾನೆ ನಮ್ಮ ಯಜ್ಞಭಂಗವನ್ನು ಯಾವಾಗಲೂ ಖಂಡಿತ ಉಂಟುಮಾಡುವುದಿಲ್ಲ ನಮ್ಮಿಂದ ಪ್ರಾರ್ಥಿತನಾದೊಡನೆಯೇ ನಮಗೆ ಶತಸಂಖ್ಯಾಕವಾಗಿಯೂ ಸಹಸ್ರಸಂಖ್ಯಾಕವಾಗಿಯೂ ದಾನಮಾಡುತ್ತಾನೆ ದಾನಮಾಡಲಿಚ್ಛಿಸಿದ ಆ ಇಂದ್ರನನ್ನು ಯಾರೂ ಹಿಂಸಿಸಲಾರರು ಮತ್ತು ವಿಘ್ನಪಡಿಸಲಾರರು.

English Translation

May Indra, whose ear is ready to hear, listen to the suppliant for riches, and never disappoint our prayers he who is the giver of hundreds and thousands may no one ever hinder him when willing to give

ಸಂಹಿತಾಪಾಠಃ

ಸ ವೀರೋ ಅಪ್ರತಿಷ್ಕುತ ಇಂದ್ರೇಣ ಶೂಶುವೇ ನೃಭಿಃ ।
ಯಸ್ತೇ ಗಭೀರಾ ಸವನಾನಿ ವೃತ್ರಹನ್ತ್ಸುನೋತ್ಯಾ ಚ ಧಾವತಿ ॥ ೬ ॥

ಪದಪಾಠಃ

ಸಃ । ವೀರಃ । ಅಪ್ರತಿಽಸ್ಕುತಃ । ಇಂದ್ರೇಣ । ಶೂಶುವೇ । ನೃಽಭಿಃ ।
ಯಃ । ತೇ । ಗಭೀರಾ । ಸವನಾನಿ । ವೃತ್ರಽಹನ್ । ಸುನೋತಿ । ಆ । ಚ । ಧಾವತಿ ॥ ೬ ॥

ಸಾಯಣಭಾಷ್ಯಂ

ಹೇ ವೃತ್ರಹನ್ ತೇ ತ್ವದರ್ಥಂ ಯಃ ಪುಮಾನ್ ಗಭೀರಾ ಗಭೀರಾಣಿ ಸವನಾನಿ ಸೋಮಾನ್ ಸುನೋತಿ ಆ ಧಾವತಿ ಚ ತ್ವಾಂ ಸ್ತುತಿಭಿರುಪಧಾವತಿ ಚ ಸ ವೀರ ಇಂದ್ರೇಣ ಹೇತುನಾಪ್ರತಿಷ್ಕುತಃ ಕೇನಾಪ್ಯಪ್ರತಿಗತೋಽಪ್ರತಿಶಬ್ದಿತೋ ವಾ ಭವೇತ್ । ನೃಭಿಃ ಪರಿಚಾರಕೈಃ ಶೂಶುವೇ । ಉಪಗಮ್ಯತೇ ಚ । ಶ್ವಯತಿರ್ಗತಿಕರ್ಮಾ ॥

ಪ್ರತಿಪದಾರ್ಥ

**ವೃತ್ರಹನ್**—ವೃತ್ರಹಂತಕನಾದ ಎಲೈ ಇಂದ್ರನೇ । **ತೇ**—ನಿನ್ನನ್ನುದ್ದೇಶಿಸಿ । **ಯಃ**—ಯಾವ ಪುರುಷನು । **ಗಭೀರಾ**—ಪ್ರಭೂತಗಳಾದ । **ಸವನಾನಿ**—ಸೋಮಗಳನ್ನು । **ಸುನೋತಿ**—ಹಿಂಡುವನೋ । **ಆ ಧಾವತಿ ಚ**—ಸ್ತುತಿಗಳೊಡನೆ (ಯಾವನು) ನಿನ್ನನ್ನು ವೇಗವಾಗಿ ಸಮೀಪಿಸುವನೋ । **ಸಃ ವೀರಃ**—ಪರಾಕ್ರಮಿಯಾದ ಆದೇ ಪುರುಷನು । **ಇಂದ್ರೇಣ**—ಪ್ರಭುವಾದ ನಿನ್ನ ಸಹಾಯದಿಂದ । **ಅಪ್ರತಿಷ್ಕುತಃ**—ಯಾರಿಂದಲೂ ಅಪ್ರತಿಹತನಾಗಿ । **ನೃಭಿಃ**—ಸೇವಕಾದಿ ಜನರಿಂದ । **ಶೂಶುವೇ**—ಸೇವಿಸಲ್ಪಡುತ್ತಾನೆ.

ಭಾವಾರ್ಥ

ವೃತ್ರಹಂತಕನಾದ ಎಲೈ ಇಂದ್ರನೇ ನಿನ್ನನ್ನುದ್ದೇಶಿಸಿ ಯಾವ ಪುರುಷನು ಪ್ರಭೂತಗಳಾದ ಸೋಮಗಳನ್ನು ಹಿಂಡುವನೋ ಮತ್ತು ಯಾವನು ಸ್ತುತಿಗಳೊಡನೆ ವೇಗವಾಗಿ ನಿನ್ನನ್ನು ಸಮೀಪಿಸುವನೋ ಪರಾಕ್ರಮಿಯಾದ ಆದೇ ಪುರುಷನು ಪ್ರಭುವಾದ ನಿನ್ನ ಸಹಾಯದಿಂದ ಯಾರ ಹತಿಗೂ ಒಗ್ಗದೆ ಸೇವಕಾದಿ ಜನರಿಂದ ಸೇವಿಸಲ್ಪಡುತ್ತಾನೆ.

English Translation

Slayer of Vritra, the hero who offers sacrifices to you, who eagerly approaches you (with praises), he, (protected) by Indra, is unresisted (by any one), and is honoured by men.

ಸಂಹಿತಾಪಾಠಃ

ಭವಾ ವರೂಥಂ ಮಘವನ್ಮಘೋನಾಂ ಯತ್ಸಮಜಾಸಿ ಶರ್ಧತಃ ।
ವಿ ತ್ವಾಹತಸ್ಯ ವೇದನಂ ಭಜೇಮಹ್ಯಾ ದೂಣಾಶೋ ಭರಾ ಗಯಂ ॥ ೭ ॥

ಪದಪಾಠಃ

ಭವ । ವರೂಥಂ । ಮಘऽವನ್ । ಮಘೋನಾಂ । ಯತ್ । ಸಂऽಅಜಾಸಿ । ಶರ್ಧತಃ ।
ವಿ । ತ್ವಾऽಹತಸ್ಯ । ವೇದನಂ । ಭಜೇಮಹಿ । ಆ । ದುಃऽನಶಃ । ಭರ । ಗಯಂ ॥ ೭ ॥

ಸಾಯಣಭಾಷ್ಯಂ

ಹೇ ಮಘವನ್ ಧನವನ್ನಿಂದ್ರ ಮಘೋನಾಂ ಹವಿಷ್ಮತಾಂ ವರೂಥಮುಪದ್ರವಾಣಾಂ ವಾರಕಂ ವರ್ಮ ಭವ । ಯದ್ಯಸ್ತ್ವಂ ಶರ್ಧತ ಉತ್ಸಹಮಾನಾನ್ ಶತ್ರೂನ್ ಸಮಜಾಸಿ ಸಂಪ್ರೇರಯೇಃ । ಅಪಿ ಚ ತ್ವಾಹತಸ್ಯ ತ್ವಯಾ ಹತಸ್ಯ ಶತ್ರೋರ್ವೇದನಂ ಧನಂ ವಿ ಭಜೇಮಹಿ । ವಿಶೇಷೇಣ ಲಭೇಮಹಿ । ಕಿಂಚ ದುರ್ಣಶೋ ನಾಶಯಿತುಮಶಕ್ಯಸ್ತ್ವಂ ಗಯಂ ಗೃಹಂ ಧನಂ ವಾ ಭರ । ಅಸ್ಮಭ್ಯಮಾಹರ ॥

ಪ್ರತಿಪದಾರ್ಥ

**ಮಘವನ್**—ಧನವಂತನಾದ ಎಲೈ ಇಂದ್ರನೇ । **ಯತ್**—ಯಾವ ಮಾಹಾತ್ಮ್ಯದಿಂದ । **ಶರ್ಧತಃ**—ಹಿಂಸಕರಾದ ನಮ್ಮ ಶತ್ರುಗಳನ್ನು । **ಸಮಜಾಸಿ**—ನೀನು ಹಿಂಸಿಸಿ ಓಡಿಸುವೆಯೋ (ಆ ಪ್ರಭಾವದಿಂದಲೇ) । **ಮಘೋನಾಂ**—ಹವಿಷ್ಮಂತರಾದ ಯಜಮಾನರಿಗೆ । **ವರೂಥಂ**—ರಕ್ಷಕನಾಗಿ । **ಭವ**—ಆಗಿರು । **ತ್ವಾಹತಸ್ಯ**—ನಿನ್ನಿಂದ ಹತರಾದ ಶತ್ರುಗಳ । **ವೇದನಂ**—ಧನವನ್ನು । **ವಿ ಭಜೇಮಹಿ**—ನಾವು ಹಂಚಿಕೊಳ್ಳುವಂತಾಗಲಿ । **ದುರ್ಣಶಃ**—ನಾಶರಹಿತನಾದ ನೀನು । **ಗಯಂ**—ನಮಗೆ ಗೃಹಾದಿಗಳನ್ನು । **ಆ ಭರ**—ಒದಗಿಸಿಕೊಡು.

### ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ಯಾವ ಮಾಹಾತ್ಮ್ಯದಿಂದ ಹಿಂಸಕರಾದ ನಮ್ಮ ಶತ್ರುಗಳನ್ನು ನೀನು ಹಿಂಸಿಸಿ ಓಡಿಸುವೆಯೋ ಆ ಪ್ರಭಾವದಿಂದಲೇ, ಹವಿಷ್ಮಂತರಾದ ಯಜಮಾನರಿಗೆ ರಕ್ಷಕನಾಗಿರು ನಿನ್ನಿಂದ ಹತರಾದ ಶತ್ರುಗಳ ಧನವನ್ನು ನಾವು ಹಂಚಿಕೊಳ್ಳುವಂತಾಗಲಿ ನಾಶರಹಿತನಾದ ನೀನು ನಮಗೆ ಗೃಹಾದಿಗಳನ್ನು ಒದಗಿಸಿ ಕೊಡು

### English Translation

Be a defence, Maghavan, to the wealthy (offerers of oblations), for you are the discomfiter of (our) adversaries may we divide the spoil of the enemy slain by you do you who are indestructible, bring it to our dwelling

### ಸಂಹಿತಾಪಾಠಃ

ಸುನೋತಾ ಸೋಮಪಾವ್ನೇ ಸೋಮಮಿಂದ್ರಾಯ ವಜ್ರಿಣೇ ।
ಪಚತಾ ಪಕ್ತೀರವಸೇ ಕೃಣುಧ್ವಮಿತ್ಪೃಣನ್ನಿತ್ಪೃಣತೇ ಮಯಃ ॥ ೮ ॥

### ಪದಪಾಠಃ

ಸುನೋತ । ಸೋಮಽಪಾವ್ನೇ । ಸೋಮಂ । ಇಂದ್ರಾಯ । ವಜ್ರಿಣೇ ।
ಪಚತ । ಪಕ್ತೀಃ । ಅವಸೇ । ಕೃಣುಧ್ವಂ । ಇತ್ । ಪೃಣನ್ । ಇತ್ । ಪೃಣತೇ । ಮಯಃ ॥

### ಸಾಯಣಭಾಷ್ಯಂ

ಹೇ ಮದೀಯಾಃ ಪುರುಷಾಃ ವಜ್ರಿಣೇ ಸೋಮಪಾವ್ನೇ ಸೋಮಸ್ಯ ಪಾತ್ರ ಇಂದ್ರಾಯ ಸೋಮಂ ಸುನೋತ । ಅಭಿಷುಣುತ । ಅವಸ ಇಂದ್ರಂ ತರ್ಪಯಿತುಂ ಪಕ್ತೀಃ ಪಕ್ತವ್ಯಾನ್ ಪುರೋಡಾಶಾದೀನ್ ಪಚತ ಚ । ಕೃಣುಧ್ವಮಿತ್ । ಇಂದ್ರಪ್ರಿಯಕರಾಣಿ ಕರ್ಮಾಣಿ ಚ ಕುರುತೈವ । ಇಂದ್ರೋ ಹಿ ಮಯಃ ಸುಖಂ ಪೃಣನ್ನಿದ್ಯಜಮಾನಾಯ ಪ್ರಯಚ್ಛನ್ನೇವ ಪೃಣತೇ ಹವೀಂಷೀತಿ ಶೇಷಃ ॥

### ಪ್ರತಿಪದಾರ್ಥ

(ಎಲೈ ಯಜಮಾನಾದಿಗಳೇ) **ವಜ್ರಿಣೇ**—ವಜ್ರಾಯುಧವುಳ್ಳವನೂ । **ಸೋಮಪಾವ್ನೇ**—ಸೋಮಪಾನವನ್ನು ಮಾಡತಕ್ಕವನೂ ಆದ । **ಇಂದ್ರಾಯ**—ಇಂದ್ರನನ್ನುದ್ದೇಶಿಸಿ । **ಸೋಮಂ**—ಸೋಮವನ್ನು । **ಸುನೋತ**—ಹಿಂಡಿರಿ । **ಅವಸೇ**—ಇಂದ್ರನನ್ನು ತೃಪ್ತಿಗೊಳಿಸಲು । **ಪಕ್ತೀಃ**—ಪುರೋಡಾಶಾದಿಗಳನ್ನು । **ಪಚತ**—ಪಕ್ವಮಾಡಿರಿ । **ಕೃಣುಧ್ವಮಿತ್**—ಇಂದ್ರನಿಗೆ ತೃಪ್ತಿಕರವಾದ ಕರ್ಮಗಳನ್ನೇ ಮಾಡಿರಿ । (ಆ ಇಂದ್ರನಾದರೋ) **ಪೃಣತೇ**—ಹವಿಸ್ಸನ್ನರ್ಪಿಸುವವನಿಗೆ । **ಮಯಃ**—ಸುಖವನ್ನು । **ಪೃಣನ್ನಿತ್**—ಖಂಡಿತವಾಗಿ ಒದಗಿಸುತ್ತಾನೆ

ಭಾವಾರ್ಥ

ಎಲೈ ಯಜಮಾನಾದಿಗಳೇ, ವಜ್ರಾಯುಧವುಳ್ಳವನೂ, ಸೋಮಪಾನವನ್ನು ಮಾಡತಕ್ಕವನೂ ಆದ ಇಂದ್ರನನ್ನುದ್ದೇಶಿಸಿ ಸೋಮವನ್ನು ಹಿಂಡಿರಿ ಇಂದ್ರನನ್ನು ತೃಪ್ತಿಗೊಳಿಸಲು ಪುರೋಡಾಶಾದಿಗಳನ್ನು ಪಕ್ವಮಾಡಿರಿ. ಇಂದ್ರನಿಗೆ ತೃಪ್ತಿಕರವಾದ ಕರ್ಮಗಳನ್ನೇ ಮಾಡಿರಿ ಆ ಇಂದ್ರನಾದರೋ, ಹವಿಸ್ಸನ್ನು ಅರ್ಪಿಸುವವನಿಗೆ ಖಂಡಿತವಾಗಿ ಸುಖವನ್ನು ಒದಗಿಸುತ್ತಾನೆ

English Translation

Pour out the libation to Indra, the thunderer, the drinker of the Soma prepare the baked (cakes) to satisfy him . do (what is agreeable to him), for he bestows happiness on (the worshipper) who pleases him

ಸಂಹಿತಾಪಾಠಃ

ಮಾ ಸ್ರೇಧತ ಸೋಮಿನೋ ದಕ್ಷತಾ ಮಹೇ ಕೃಣುಧ್ವಂ ರಾಯ ಆತುಜೇ

ತರಣಿರಿಜ್ಜಯತಿ ಕ್ಷೇತಿ ಪುಷ್ಯತಿ ನ ದೇವಾಸಃ ಕವತ್ನವೇ ॥ ೯ ॥

ಪದಪಾಠಃ

ಮಾ । ಸ್ರೇಧತ । ಸೋಮಿನಃ । ದಕ್ಷತ । ಮಹೇ । ಕೃಣುಧ್ವಂ । ರಾಯೇ । ಆಽತುಜೇ ।

ತರಣಿಃ । ಇತ್ । ಜಯತಿ । ಕ್ಷೇತಿ । ಪುಷ್ಯತಿ । ನ । ದೇವಾಸಃ । ಕವತ್ನವೇ ॥ ೯ ॥

ಸಾಯಣಭಾಷ್ಯಂ

**ಹೇ ಮದೀಯಾ ಜನಾಃ ಸೋಮಿನಃ ಸೋಮವತೋ ಯಾಗಾನ್ಮಾ ಸ್ರೇಧತ । ಮಾ ಹಿಂಸಿಷ್ಟ । ದಕ್ಷತ । ಯಾಗಾದಿಕಂ ಕರ್ತುಮುತ್ಸಹಧ್ವಂ ಚ । ಮಹೇ ಮಹತ ಆತುಜೇ । ತುಜಿರ್ಹಿಂಸಾಕರ್ಮಾ ದಾನಕರ್ಮಾ ವಾ । ಶತ್ರೂಣಾಮಭಿಹಿಂಸಕಾಯ ಧನಾನಾಂ ಪ್ರದಾತ್ರೇ ವೇಂದ್ರಾಯ ರಾಯೇ ಧನಲಾಭಾರ್ಥಂ ಕೃಣುಧ್ವಂ । ಕರ್ಮಾಣಿ ಕುರುತ ಚ । ತರಣಿರಿತ್ ಕರ್ಮಸು ತ್ವರಿತ ಏವ ಜಯತಿ ಶತ್ರೂನ್ । ಕ್ಷೇತಿ । ಗೃಹೇ ನಿವಸತಿ ಚ । ಪುಷ್ಯತಿ । ಪ್ರಜಯಾ ಪಶುಭಿಶ್ಚ ಪುಷ್ಟೋ ಭವತಿ । ಕವತ್ನವೇ ಕುತ್ಸಿತಕ್ರಿಯಾಯೈ ॥ ಕವೋಪಸೃಷ್ಟಸ್ಯಾತೇಃ ಸಾತತ್ಯಗಮನಕರ್ಮಣೋ ರೂಪಂ ಕವತ್ನುರಿತಿ ॥ ದೇವಾಸೋ ದೇವಾ ನ ಭವಂತೀತಿ ಶೇಷಃ । ಸುಖಪ್ರಾಪ್ತಯೇ ಭವಂತೀತ್ಯರ್ಥಃ ॥**

ಪ್ರತಿಪದಾರ್ಥ

(ಎಲೈ ಯಜಮಾನಾದಿಗಳೇ) **ಸೋಮಿನಃ**—ಸೋಮಯುಕ್ತವಾದ ಯಾಗಗಳನ್ನು । **ಮಾ ಸ್ರೇಧತ**—ನಿಲ್ಲಿಸಬೇಡಿರಿ । **ದಕ್ಷತ**—ಯಜ್ಞಕರ್ಮಗಳನ್ನೇ ಉತ್ಸಾಹದಿಂದ ನಿರ್ವಹಿಸಿರಿ । **ಮಹೇ**—ಮಾಹಾತ್ಮ್ಯವುಳ್ಳವನೂ । **ಆತುಜೇ**—ಶತ್ರುಹಿಂಸಕನೂ ಆದ ಇಂದ್ರನನ್ನುದ್ದೇಶಿಸಿ । **ರಾಯೇ**—ಧನಲಾಭಕ್ಕಾಗಿ । **ಕೃಣುಧ್ವಂ**—ಕರ್ಮ

ಗಳನ್ನು ಮಾಡಿರಿ | **ತರಣಿರಿತ್**—ಕುಶಲತೆಯಿಂದ ಕರ್ಮವನ್ನು ನಿರ್ವಹಿಸುವವನು ಮಾತ್ರ | **ಕ್ಷೇತಿ**—ಗೃಹದಲ್ಲಿ ವಾಸಮಾಡುತ್ತಾನೆ | **ಜಯತಿ**—ಅವನೇ ಜಯಿಸುತ್ತಾನೆ | **ಪುಷ್ಯತಿ**—ಪುತ್ರಾದಿಗಳಿಂದ ಪುಷ್ಟನಾಗುತ್ತಾನೆ | **ಕವತ್ನವೇ** - ಕರ್ಮಹೀನನಾದವನಿಗೆ | **ದೇವಾಸಃ**—ದೇವತೆಗಳು | **ನ**—ಸಹಾಯಕರಾಗುವುದಿಲ್ಲ

ಭಾವಾರ್ಥ

ಎಲೈ ಯಜಮಾನಾದಿಗಳೇ, ಸೋಮಯುಕ್ತವಾದ ಯಾಗಗಳನ್ನು ನಿಲ್ಲಿಸಬೇಡಿರಿ ಯಜ್ಞಕರ್ಮಗಳನ್ನೇ ಉತ್ಸಾಹದಿಂದ ನಿರ್ವಹಿಸಿರಿ. ಮಾಹಾತ್ಮ್ಯವುಳ್ಳವನೂ, ಶತ್ರುಹಿಂಸಕನೂ ಆದ ಇಂದ್ರನನ್ನುದ್ದೇಶಿಸಿ ಧನಲಾಭಕ್ಕಾಗಿ ಕರ್ಮಗಳನ್ನು ಮಾಡಿರಿ ಕುಶಲತೆಯಿಂದ ಕರ್ಮವನ್ನು ನಿರ್ವಹಿಸುವವನು ಮಾತ್ರ ಗೃಹದಲ್ಲಿ ವಾಸಮಾಡುತ್ತಾನೆ ಅವನೇ ಜಯಿಸುತ್ತಾನೆ. ಪುತ್ರಾದಿಸಂಪತ್ತುಗಳಿಂದ ಪುಷ್ಟನಾಗುತ್ತಾನೆ ಕರ್ಮಹೀನನಾದವನಿಗೆ ದೇವತೆಗಳು ಸಹಾಯಕರಾಗುವುದಿಲ್ಲ

English Translation

Offerers of the libation, do not hesistate be active sacrifice to the mighty benefactor for the sake of riches the assiduous worshipper conquers (his enemies), dwells in a habitation, and prospers the gods favour not the imperfect rite

ಸಂಹಿತಾಪಾಠಃ

ನಕಿಃ ಸುದಾಸೋ ರಥಂ ಪರ್ಯಾಸ ನ ರೀರಮತ್ ।
ಇಂದ್ರೋ ಯಸ್ಯಾವಿತಾ ಯಸ್ಯ ಮರುತೋ ಗಮತ್ಸ ಗೋಮತಿ ವ್ರಜೇ ॥

ಪದಪಾಠಃ

ನಕಿಃ । ಸುಽದಾಸಃ । ರಥಂ । ಪರಿ । ಆಸ । ನ । ರೀರಮತ್ ।
ಇಂದ್ರಃ । ಯಸ್ಯ । ಅವಿತಾ । ಯಸ್ಯ । ಮರುತಃ । ಗಮತ್ । ಸಃ । ಗೋಽಮತಿ । ವ್ರಜೇ ॥ ೧೦ ॥

ಸಾಯಣಭಾಷ್ಯಂ

ಸುದಾಸಃ ಶೋಭನದಾನಸ್ಯ ಯಜಮಾನಸ್ಯ ರಥಂ ನಕಿಃ ಪರ್ಯಾಸ । ಕಶ್ಚಿನ್ನ ಪರ್ಯಸ್ಯತಿ । ನ ರೀರಮತ್ । ನ ರಮಯತಿ ಚ । ಆತ್ಮಾರ್ಥಂ ನ ಕಶ್ಚಿದೇನಂ ಗೃಹ್ಣಾತೀತ್ಯರ್ಥಃ । ಅಪಿ ಚ ಯಸ್ಯೇಂದ್ರೋಽವಿತಾ ರಕ್ಷಿತಾ ಯಸ್ಯ ಚ ಮರುತೋಽವಿತಾರಃ ಸ ಗೋಮತಿ ಗೋಯುಕ್ತೇ ವ್ರಜೇ ಗೋಷ್ಠೇ ಗಮತ್ । ಗಚ್ಛೇತ್ ।

ಪ್ರತಿಪದಾರ್ಥ

**ಸುದಾಸಃ**—ಉತ್ತಮವಾದ ದಾನಿಯಾದ ಯಜಮಾನನ | **ರಥಂ**—ರಥವನ್ನು | **ನಕಿಃ**—ಯಾರೂ ಕೂಡ| **ಪರ್ಯಾಸ**—ಎದುರಿಸಿ ಹಿಂತಿರುಗಿಸಲಾರರು | **ನ ರೀರಿಮತ್**—ಯಾರೂ ಪ್ರತಿಬಂಧಿಸಲಾರರು | **ಯಸ್ಯ**—ಯಾವ

ಯಜಮಾನನಿಗೆ | **ಇಂದ್ರಃ**—ಇಂದ್ರನು | **ಅವಿತಾ**—ರಕ್ಷಕನಾಗಿಯೂ | **ಯಸ್ಯ**—ಯಾರಿಗೆ | **ಮರುತಃ**—ಮರುತ್ತುಗಳು (ರಕ್ಷಕರಾಗಿರುವರೋ) | **ಸಃ**—ಆ ಯಜಮಾನನು | **ಗೋಮತಿ**—ಗೋಯುಕ್ತವಾದ | **ವ್ರಜೇ**—ಕೊಟ್ಟಿಗೆಯನ್ನು | **ಗಮತ್**—ಹೊಂದುವನು.

ಭಾವಾರ್ಥ

ಉತ್ತಮವಾದ ದಾನಿಯಾದ ಯಜಮಾನನ ರಥವನ್ನು ಯಾರೂ ಕೂಡ ಎದುರಿಸಿ ಹಿಂತಿರುಗಿಸಲಾರರು. ಯಾರೂ ಪ್ರತಿಬಂಧಿಸಲಾರರು. ಯಾವ ಯಜಮಾನನಿಗೆ ಇಂದ್ರನು ರಕ್ಷಕನಾಗಿಯೂ, ಯಾರಿಗೆ ಮರುತ್ತುಗಳು ರಕ್ಷಕರಾಗಿಯೂ ಇರುವರೋ ಆ ಯಜಮಾನನು ಗೋಯುಕ್ತವಾದ ಕೊಟ್ಟಿಗೆಯನ್ನು ಹೊಂದುವನು

English Translation

No one overturns, no one arrests, the chariot of the liberal sacrificer, he, of whom Indra is the protector, of whom the Maruts (are the defenders). will walk in pastures filled with cattle

ಸಂಹಿತಾಪಾಠಃ

ಗಮದ್ವಾಜಂ ವಾಜಯನ್ನಿಂದ್ರ ಮರ್ತ್ಯೋ ಯಸ್ಯ ತ್ವಮವಿತಾ ಭುವಃ |
ಅಸ್ಮಾಕಂ ಬೋಧ್ಯವಿತಾ ರಥಾನಾಮಸ್ಮಾಕಂ ಶೂರ ನೃಣಾಂ || ೧೧ ||

ಪದಪಾಠಃ

**ಗಮತ್ | ವಾಜಂ | ವಾಜಯನ್ | ಇಂದ್ರ | ಮರ್ತ್ಯಃ | ಯಸ್ಯ | ತ್ವಂ | ಅವಿತಾ | ಭುವಃ |**
**ಅಸ್ಮಾಕಂ | ಬೋಧಿ | ಅವಿತಾ | ರಥಾನಾಂ | ಅಸ್ಮಾಕಂ | ಶೂರ | ನೃಣಾಂ || ೧೧ ||**

ಸಾಯಣಭಾಷ್ಯಂ

**ಹೇ ಇಂದ್ರ ತ್ವಂ ಯಸ್ಯ ಮರ್ತ್ಯಸ್ಯಾವಿತಾ ರಕ್ಷಿತಾ ಭುವಃ ಭವೇಃ ಸ ಮರ್ತ್ಯೋ ವಾಜಯನ್ ಸ್ತೋತ್ರೇಣ ತ್ವಾಂ ಬಲಿನಂ ಕುರ್ವನ್ ವಾಜಮನ್ನಂ ಗಮತ್ | ಗಚ್ಛೇತ್ | ಅಪಿ ಚ ಹೇ ಶೂರ ಅಸ್ಮಾಕಂ ವಾಸಿಷ್ಠಾನಾಂ ರಥಾನಾಮವಿತಾ ರಕ್ಷಿತಾ ಬೋಧಿ | ಭವ || ಭವತೇರ್ಲೋಟಿ ರೂಪಂ | ಭಕಾರಸ್ಯ ಬಕಾರಶ್ಛಾಂದಸಃ || ಅಸ್ಮಾಕಂ ನೃಣಾಂ ಪುತ್ರಾದೀನಾಂ ಚಾವಿತಾ ಭವ ||**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ | **ತ್ವಂ**—ನೀನು | **ಯಸ್ಯ**—ಯಾವ ಮಾನವನಿಗೆ | **ಅವಿತಾ**—ರಕ್ಷಕನಾಗಿ | **ಭುವಃ**—ಆಗಿರುವೆಯೋ | **ಮರ್ತ್ಯಃ**—ಅದೇ ಮಾನವನು | **ವಾಜಯನ್**—ಸ್ತುತಿಯಿಂದ ನಿನ್ನನ್ನು ಶಕ್ತಿಯುತನನ್ನಾಗಿ ಮಾಡುತ್ತಾ | **ವಾಜಂ**—ಅನ್ನವನ್ನು | **ಗಮತ್**—ಹೊಂದಲಿ | **ಶೂರ**—ಎಲೈ ಶೂರನಾದ ಇಂದ್ರನೇ | **ಅಸ್ಮಾಕಂ**—ವಸಿಷ್ಠವಂಶೋತ್ಪನ್ನರಾದ ನಮ್ಮ | **ರಥಾನಾಂ**—ರಥಗಳಿಗೆ | **ಅವಿತಾ**—ರಕ್ಷಕನಾಗಿರಬೇಕೆಂದು | **ಬೋಧಿ**—ತಿಳಿ | **ಅಸ್ಮಾಕಂ**—ನಮ್ಮ | **ನೃಣಾಂ**—ಪುತ್ರಾದಿಗಳಿಗೂ ರಕ್ಷಕನಾಗಿರು.

ಭಾವಾರ್ಥ

ಎಲೈ ಇಂದ್ರನೇ, ನೀನು ಯಾವ ಮಾನವನಿಗೆ ರಕ್ಷಕನಾಗಿರುವೆಯೋ, ಅದೇ ಮಾನವನು ಸ್ತುತಿಯಿಂದ ನಿನ್ನನ್ನು ಶಕ್ತಿಯುತನನ್ನಾಗಿ ಮಾಡುತ್ತಾ ಅನ್ನವನ್ನು ಹೊಂದಲಿ. ಎಲೈ ಶೂರನಾದ ಇಂದ್ರನೇ, ಪರಿಸ್ಪಂದೋತ್ಪನ್ನರಾದ ನಮ್ಮ ರಥಗಳಿಗೆ ನೀನು ರಕ್ಷಕನಾಗಿರಬೇಕೆಂದು ತಿಳಿ. ನಮ್ಮ ಪುತ್ರಾದಿಗಳಿಗೂ ರಕ್ಷಕನಾಗಿರು

English Translation

Let the man of whom you, Indra, are the protector, invigorating (you with praise), enjoy (abundant) food be the preserver, hero, of our chariots, (the preserver) of our people

ಸಂಹಿತಾಪಾಠಃ

ಉದಿನ್ನ್ವಸ್ಯ ರಿಚ್ಯತೇಽಂಶೋ ಧನಂ ನ ಜಿಗ್ಯುಷಃ |
ಯ ಇಂದ್ರೋ ಹರಿವಾನ್ನ ದಭಂತಿ ತಂ ರಿಪೋ ದಕ್ಷಂ ದಧಾತಿ ಸೋಮಿನಿ ||

ಪದಪಾಠಃ

ಉತ್ | ಇತ್ | ನು | ಅಸ್ಯ | ರಿಚ್ಯತೇ | ಅಂಶಃ | ಧನಂ | ನ | ಜಿಗ್ಯುಷಃ |
ಯಃ | ಇಂದ್ರಃ | ಹರಿಽವಾನ್ | ನ | ದಭಂತಿ | ತಂ | ರಿಪಃ | ದಕ್ಷಂ | ದಧಾತಿ | ಸೋಮಿನಿ ||

ಸಾಯಣಭಾಷ್ಯಂ

**ಅಸ್ಯೇಂದ್ರಸ್ಯಾಂಶೋ ಯಜ್ಞೇ ಸೋಮಸ್ಯ ಭಾಗೋಽತಿರಿಚ್ಯತೇಽನ್ಯೇಭ್ಯೋಽಪಿ ದೇವೇಭ್ಯಃ| ಇಂದ್ರಸ್ಯ ತ್ರಿಷ್ವಪಿ ಸವನೇಷು ಸೋಮಪಾನಮಸ್ತಿ ಮಾಧ್ಯಂದಿನಂ ಹಿ ಸರ್ವಮೈಂದ್ರಮಿತಿ | ಜಿಗ್ಯುಷೋ ಜಿತವತೋ ಧನಂ ನ ಧನಮಿವ | ಉದಿನ್ನ್ವಿತಿ ತ್ರಯಃ ಪೂರಣಾಃ | ಅಪಿ ಚ ಯೋ ಹರಿವಾನಿಂದ್ರಃ ಸೋಮಿನಿ ಯಜಮಾನೇ ದಕ್ಷಂ ಬಲಂ ದಧಾತಿ ಸಂದಧಾತಿ ತಂ ರಿಪೋ ರಿಪವೋ ನ ದಭಂತಿ | ನ ಹಿಂಸಂತಿ ||**

ಪ್ರತಿಪದಾರ್ಥ

**ಜಿಗ್ಯುಷಃ**—ಜಯಶಾಲಿಯಾದ ಪುರುಷನ | **ಧನಂ ನ**—ಧನದಂತೆ | **ಅಸ್ಯ**—ಈ ಇಂದ್ರನ | **ಅಂಶಃ**—ಯಜ್ಞದಲ್ಲಿನ ಸೋಮದ ಭಾಗವು | **ಉದಿನ್ನು ರಿಚ್ಯತೇ**—ಖಂಡಿತವಾಗಿಯೂ ಇತರ ದೇವತೆಗಳ ಭಾಗಗಳಿಗಿಂತಲೂ ಅಧಿಕವಾಗಿರುತ್ತದೆ | **ಹರಿವಾನ್**—ಹರಿಸಂಜ್ಞಕವಾದ ಅಶ್ವವುಳ್ಳ | **ಯಃ ಇಂದ್ರಃ**—ಯಾವ ಇಂದ್ರನು | **ಸೋಮಿನಿ**—ಯಜಮಾನನಲ್ಲಿ | **ದಕ್ಷಂ**—ಬಲವನ್ನು | **ದಧಾತಿ**—ತುಂಬಿಕೊಡುವನೋ | **ತಂ**—ಅಂತಹ ಇಂದ್ರನನ್ನು | **ರಿಪಃ**—ಶತ್ರುಗಳು | **ನ ದಭಂತಿ**—ಹಿಂಸಿಸುವುದಿಲ್ಲ.

ಭಾವಾರ್ಥ

ಜಯಶಾಲಿಯಾದ ಪುರುಷನ ಧನವು ವೃದ್ಧಿಯನ್ನು ಹೊಂದುವಂತೆ, ಯಜ್ಞದಲ್ಲಿ ಇಂದ್ರನಿಗೆ ಸೇರಬೇಕಾದ ಸೋಮದ ಭಾಗವು ಇತರ ದೇವತೆಗಳ ಭಾಗಗಳಿಗಿಂತಲೂ ಅಧಿಕವಾಗಿರುತ್ತದೆ, ಹರಿಸಂಜ್ಞಕವಾದ ಅಶ್ವವುಳ್ಳ ಯಾನ ಇಂದ್ರನು ಯಜಮಾನನಲ್ಲಿ ಬಲವನ್ನು ತುಂಬಿಕೊಡುವನೋ ಅಂತಹ ಇಂದ್ರನನ್ನು ಶತ್ರುಗಳು ಹಿಂಸಿಸುವುದಿಲ್ಲ

English Translation

Verily (Indra's) share (of the Soma) exceeds (that of other deities) like the wealth of the victorious · enemies overcome not him, who is the lord of bay steeds, who gives strength to the offerer of the libation.

ಸಂಹಿತಾಪಾಠಃ

ಮಂತ್ರಮಖರ್ವಂ ಸುಧಿತಂ ಸುಪೇಶಸಂ ದಧಾತ ಯಜ್ಞಿಯೇಷ್ವಾ ।
ಪೂರ್ವೀಶ್ಚನ ಪ್ರಸಿತಯಸ್ತರಂತಿ ತಂ ಯ ಇಂದ್ರೇ ಕರ್ಮಣಾ ಭುವತ್ ॥

ಪದಪಾಠಃ

ಮಂತ್ರಂ । ಅಖರ್ವಂ । ಸುऽಧಿತಂ । ಸುऽಪೇಶಸಂ । ದಧಾತ । ಯಜ್ಞಿಯೇಷು । ಆ ।
ಪೂರ್ವೀಃ । ಚನ । ಪ್ರऽಸಿತಯಃ । ತರಂತಿ । ತಂ । ಯಃ । ಇಂದ್ರೇ । ಕರ್ಮಣಾ । ಭುವತ್ ॥ ೧೩ ॥

ಸಾಯಣಭಾಷ್ಯಂ

**ಹೇ ಜನಾಃ ಅಖರ್ವಮನಲ್ಪಂ ಸುಧಿತಂ ಸುನಿಹಿತಂ ಸುಪೇಶಸಂ ಶೋಭನರೂಪಂ ಮಂತ್ರಂ ಸ್ತೋತ್ರಂ ಯಜ್ಞಿಯೇಷು ಯಜನೀಯೇಷು ದೇವೇಷು ಮಧ್ಯ ಇಂದ್ರಾಯ ದಧಾತ । ವಿಧತ್ತ । ಯೋ ಜನಃ ಕರ್ಮಣಾ ಸ್ತುತ್ಯಾದಿರೂಪೇಣೇಂದ್ರ ಇಂದ್ರಸ್ಯ ಚಿತ್ತೇ ಭುವತ್ ಭವೇತ್ ತಂ ಜನಂ ಪೂರ್ವೀರ್ಬಹ್ವ್ಯಃ ಪ್ರಸಿತಯಃ ಪಾಶಾದೀನಿ ಬಂಧನಾನಿ । ಚನೇತಿ ಸಮುದಾಯೋ ನೇತ್ಯರ್ಥೇ ವರ್ತತೇ । ನ ತರಂತಿ । ನ ವ್ಯಾಪ್ನುವಂತೀತ್ಯರ್ಥಃ ॥**

ಪ್ರತಿಪದಾರ್ಥ

(ಎಲೈ ಯಜಮಾನಾದಿಗಳೇ), **ಅಖರ್ವಂ**—ಅಧಿಕವಾದ ಮಾಹಾತ್ಮ್ಯವುಳ್ಳದ್ದೂ । **ಸುಧಿತಂ**—ಉತ್ತಮವಾಗಿ ಪಠಿತವಾದುದೂ । **ಸುಪೇಶಸಂ**—ಶ್ರೇಷ್ಠವಾದ ಸ್ವರೂಪವುಳ್ಳದ್ದೂ ಆದ । **ಮಂತ್ರಂ**—ಸ್ತೋತ್ರವನ್ನು । **ಯಜ್ಞಿಯೇಷು**—ಯಜ್ಞಾರ್ಹರಾದ ದೇವತೆಗಳ ನಡುವೆ ಇಂದ್ರನನ್ನು ಉದ್ದೇಶಿಸಿ । **ಆ ದಧಾತ**—ಅರ್ಪಿಸಿರಿ । **ಯಃ**—ಯಾವ ಯಜಮಾನನು । **ಕರ್ಮಣಾ**—ಸ್ತುತ್ಯಾದಿಕರ್ಮಗಳಿಂದ । **ಇಂದ್ರೇ**—ಇಂದ್ರನಲ್ಲರ್ಪಿಸಿದ ಮನಸ್ಸುಳ್ಳವನಾಗಿ । **ಭುವತ್**—ಭಕ್ತಿಯುತನಾಗಿರುವನೋ । **ತಂ**—ಆ ಯಜಮಾನನನ್ನು । **ಪೂರ್ವೀಃ**—ಅನೇಕವಿಧವಾದ । **ಪ್ರಸಿತಯಃ ಚನ**—ಬಂಧನಗಳೂ ಕೂಡ । **ತರಂತಿ**—ಅಂಟದೇ ಕಳಚಿಹೋಗುವುವು

ಭಾವಾರ್ಥ

ಎಲೈ ಯಜಮಾನಾದಿಗಳೇ, ಅಧಿಕವಾದ ಮಾಹಾತ್ಮ್ಯವುಳ್ಳದ್ದೂ ಉತ್ತಮವಾಗಿ ಪಠಿತವಾದುದೂ, ಶ್ರೇಷ್ಠವಾದ ಸ್ವರೂಪವುಳ್ಳದ್ದೂ ಆದ ಸ್ತೋತ್ರವನ್ನು ಯಜ್ಞಾರ್ಹರಾದ ದೇವತೆಗಳ ನಡುವೆ ಇಂದ್ರನನ್ನು ಉದ್ದೇಶಿಸಿ ಅರ್ಪಿಸಿರಿ ಯಾವ ಯಜಮಾನನು ಸ್ತುತ್ಯಾದಿಕರ್ಮಗಳಿಂದ ಇಂದ್ರನಲ್ಲರ್ಪಿಸಿದ ಮನಸ್ಸುಳ್ಳವನಾಗಿ ಭಕ್ತಿಯುತನಾಗಿರುವನೋ ಆ ಯಜಮಾನನನ್ನು ಅನೇಕವಿಧವಾದ ಬಂಧನಗಳೂ ಕೂಡ ಅಂಟದೇ ಕಳಚಿಹೋಗುವುವು

English Translation

Address (to Indra) amongst the gods, the ample, well-uttered, and graceful prayer many bonds entangle not him who, by his devotion, abides in Indra.

ಸಂಹಿತಾಪಾಠಃ

ಕಸ್ತಮಿಂದ್ರ ತ್ವಾವಸುಮಾ ಮರ್ತ್ಯೋ ದಧರ್ಷತಿ ।
ಶ್ರದ್ಧಾ ಇತ್ತೇ ಮಘವನ್ಪಾರ್ಯೇ ದಿವಿ ವಾಜೀ ವಾಜಂ ಸಿಷಾಸತಿ ॥

ಪದಪಾಠಃ

ಕಃ । ತಂ । ಇಂದ್ರ । ತ್ವಾಽವಸುಂ । ಆ । ಮರ್ತ್ಯಃ । ದಧರ್ಷತಿ ।
ಶ್ರದ್ಧಾ । ಇತ್ । ತೇ । ಮಘಽವನ್ । ಪಾರ್ಯೇ । ದಿವಿ । ವಾಜೀ । ವಾಜಂ । ಸಿಷಾಸತಿ ॥ ೧೪ ॥

ಸಾಯಣಭಾಷ್ಯಂ

ಹೇ ಇಂದ್ರ ತವ ಚಿತ್ತೇ ಯೋ ಭವೇತ್ ತ್ವಾವಸುಂ । ತ್ವಂ ವಸುರ್ವ್ಯಾಪಕೋ ಯಸ್ಯೇತಿ ಬಹುವ್ರೀಹಿಃ । ತಂ ಜನಂ ಕೋ ಮರ್ತ್ಯ ಆ ದಧರ್ಷತಿ । ಆಧರ್ಷೇತ್ । ಹೇ ಮಘವನ್ ತೇ ತ್ವದರ್ಥಂ ಯಃ ಶ್ರದ್ಧಾ ಶ್ರದ್ಧಯಾ ಯುಕ್ತಃ ಸನ್ ವಾಜೀ ಹವಿಷ್ಮಾನ್ ಭವೇತ್ ಪಾರ್ಯೇ ದಿವಿ ಸೌತ್ಯೇಽಹನಿ ಸ ವಾಜಮನ್ನಂ ಬಲಂ ವಾ ಸಿಷಾಸತಿ । ಸೇವತೇ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತ್ವಾವಸುಂ**—ನಿನ್ನನ್ನೇ ರಕ್ಷಕನನ್ನಾಗಿ ಹೊಂದಿರುವ । **ತಂ**—ಯಜಮಾನನನ್ನು । **ಕಃ ಮರ್ತ್ಯಃ**—ಯಾವ ಮಾನವನು ತಾನೇ । **ಆ ದಧರ್ಷತಿ**—ಹಿಂಸಿಸಬಲ್ಲನು ? । **ಮಘವನ್**—ಧನವಂತನಾದ ಎಲೈ ಇಂದ್ರನೇ । **ತೇ**—ನಿನ್ನನ್ನುದ್ದೇಶಿಸಿ । (**ಯಃ**—ಯಾರು) **ಶ್ರದ್ಧಾ**—ಶ್ರದ್ಧೆಯಿಂದ ಕೂಡಿದವನಾಗಿ । **ವಾಜೀ**—ಹವಿಷ್ಮಂತನಾಗುವನೋ । (ಅವನು) **ಪಾರ್ಯೇ ಇತ್ ದಿವಿ**—ಸೋಮಾರ್ಪಣದ ದಿನವೇ । **ವಾಜಂ**—ಅನ್ನವನ್ನು । **ಸಿಷಾಸತಿ**—ಸೇವಿಸುತ್ತಾನೆ

ಭಾವಾರ್ಥ

ಎಲೈ ಇಂದ್ರನೇ, ನಿನ್ನನ್ನೇ ರಕ್ಷಕನನ್ನಾಗಿ ಹೊಂದಿರುವ ಯಜಮಾನನನ್ನು ಯಾವ ಮಾನವನು ತಾನೇ ಹಿಂಸಿಸಬಲ್ಲನು ? ಧನವಂತನಾದ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಶ್ರದ್ಧೆಯಿಂದ ಕೂಡಿದವನಾಗಿ ಯಾರು ಹವಿಷ್ಮಂತನಾಗಿ ಹವಿಸ್ಸನ್ನು ನಿನಗರ್ಪಿಸುವನೋ ಅವನು ಸೋಮಾರ್ಪಣದ ದಿನವೇ ಅನ್ನವನ್ನು ಸೇವಿಸುತ್ತಾನೆ (ಪಡೆಯುತ್ತಾನೆ).

English Translation

What mortal, Indra, injures him who has you for his support? He who offers you (sacrificial) food, Maghavan, with faith, he obtains food on the day of the libation.

ಸಂಹಿತಾಪಾಠಃ

ಮಘೋನಃ ಸ್ಮ ವೃತ್ರಹತ್ಯೇಷು ಚೋದಯ ಯೇ ದದತಿ ಪ್ರಿಯಾ ವಸು ।
ತವ ಪ್ರಣೀತೀ ಹರ್ಯಶ್ವ ಸೂರಿಭಿರ್ವಿಶ್ವಾ ತರೇಮ ದುರಿತಾ ॥

ಪದಪಾಠಃ

ಮಘೋನಃ । ಸ್ಮ । ವೃತ್ರಹತ್ಯೇಷು । ಚೋದಯ । ಯೇ । ದದತಿ । ಪ್ರಿಯಾ । ವಸು ।
ತವ । ಪ್ರಽನೀತೀ । ಹರಿಽಅಶ್ವ । ಸೂರಿಽಭಿಃ । ವಿಶ್ವಾ । ತರೇಮ । ದುಃಽಇತಾ ॥ ೧೫ ॥

ಸಾಯಣಭಾಷ್ಯಂ

ಹೇ ಇಂದ್ರ ಮಘೋನೋ ಧನವತಸ್ತೇ । ತ್ವದರ್ಥಮಿತ್ಯರ್ಥಃ । ಪ್ರಿಯಾ ಪ್ರಿಯಾಣಿ ವಸು ವಸೂನಿ ಧನಾನಿ ಯೇ ಜನಾ ದದತಿ ಪ್ರಯಚ್ಛಂತಿ ತಾಞ್ಜನಾನ್ ವೃತ್ರಹತ್ಯೇಷು ಸಂಗ್ರಾಮೇಷು ಚೋದಯ । ಪ್ರೇರಯ । ಹೇ ಹರ್ಯಶ್ವ ತವ ಪ್ರಣೀತೀ ಪ್ರಣೀತ್ಯಾ ಪ್ರಣಯನೇನ ಸೂರಿಭಿಃ ಸ್ತೋತೃಭಿಃ ಪುತ್ರಾದಿಭಿಃ ಸಾರ್ಧಂ ವಿಶ್ವಾ ವಿಶ್ವಾನಿ ದುರಿತಾ ದುರಿತಾನಿ ತರೇಮ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ಯೇ**—ಯಾವ ಯಜಮಾನರು । **ಮಘೋನಃ**—ಧನವಂತನಾದ ನಿನಗೆ । **ಪ್ರಿಯಾ**—ಹಿತಕರಗಳಾದ । **ವಸು**—ಧನಾದಿಗಳನ್ನು । **ದದತಿ ಸ್ಮ**—ಅರ್ಪಿಸುವರೋ । (ಅವರನ್ನು) **ವೃತ್ರಹತ್ಯೇಷು**—ಸಂಗ್ರಾಮಗಳಲ್ಲಿ । **ಚೋದಯ**—ಶಕ್ತಿಯುತರಾಗುವಂತೆ ಪ್ರೇರಿಸು । **ಹರ್ಯಶ್ವ**—ಹರಿಸಂಜ್ಞಕವಾದ ಅಶ್ವಗಳುಳ್ಳ ಎಲೈ ಇಂದ್ರನೇ । **ತವ**—ನಿನ್ನ । **ಪ್ರಣೀತೀ**—ಪ್ರೀತಿಯುತವಾದ ನೇತೃತ್ವದಿಂದ । **ಸೂರಿಭಿಃ**—ಸ್ತೋತೃಗಳಾದ ಪುತ್ರಾದಿಗಳೊಡಗೂಡಿದ ನಾವು । **ವಿಶ್ವಾ**—ಸಮಸ್ತವಾದ । **ದುರಿತಾ**—ದುಃಖಗಳನ್ನು । **ತರೇಮ**—ದಾಟುವಂತಾಗಲಿ.

ಭಾವಾರ್ಥ

ಎಲೈ ಇಂದ್ರನೇ, ಯಾವ ಯಜಮಾನರು ಧನವಂತನಾದ ನಿನಗೆ ಹಿತಕರಗಳಾದ ಧನಾದಿಗಳನ್ನು ಅರ್ಪಿಸುವರೋ ಅವರನ್ನು ಸಂಗ್ರಾಮಗಳಲ್ಲಿ ಶಕ್ತಿಯುತರಾಗುವಂತೆ ಪ್ರೇರಿಸು. ಹರಿಸಂಜ್ಞಕವಾದ ಅಶ್ವಗಳುಳ್ಳ ಎಲೈ ಇಂದ್ರನೇ, ನಿನ್ನ ಪ್ರೀತಿಯುತವಾದ ನೇತೃತ್ವದಿಂದ ಸ್ತೋತೃಗಳಾದ ಪುತ್ರಾದಿಗಳೊಡಗೂಡಿದ ನಾವು ಸಮಸ್ತವಾದ ದುಃಖಗಳನ್ನೂ ದಾಟುವಂತಾಗಲಿ.

English Translation

Animate (those men) for the destruction of their foes, who offer treasures which are dear to you, the abounder in wealth : may we, lord of bay

steeds, along with (your) worshippers, pass over all difficulties by your guidance.

ಸಂಹಿತಾಪಾಠಃ

ತವೇದಿಂದ್ರಾವಮಂ ವಸು ತ್ವಂ ಪುಷ್ಯಸಿ ಮಧ್ಯಮಂ ।
ಸತ್ರಾ ವಿಶ್ವಸ್ಯ ಪರಮಸ್ಯ ರಾಜಸಿ ನಕಿಷ್ಟ್ವಾ ಗೋಷು ವೃಣ್ವತೇ ॥

ಪದಪಾಠಃ

ತವ । ಇತ್ । ಇಂದ್ರ । ಅವಮಂ । ವಸು । ತ್ವಂ । ಪುಷ್ಯಸಿ । ಮಧ್ಯಮಂ ।
ಸತ್ರಾ । ವಿಶ್ವಸ್ಯ । ಪರಮಸ್ಯ । ರಾಜಸಿ । ನಕಿಃ । ತ್ವಾ । ಗೋಷು । ವೃಣ್ವತೇ ॥ ೧೬ ॥

ಸಾಯಣಭಾಷ್ಯಂ

ಹೇ ಇಂದ್ರ ಅವಮಮಧಮಂ ತ್ರಪುಸೀಸಾದಿಕಂ ವಸು ಧನಂ । ಯದ್ವಾ । ಭೌಮಂ ವಸ್ವವಮಂ। ತವೇತ್ತವೈವ । ತ್ವಂ ತ್ವಮೇವ ಮಧ್ಯಮಂ ವಸು ರಜತಹಿರಣ್ಯಾದಿಕಮಾಂತರಿಕ್ಷಂ ವಾ ಪುಷ್ಯಸಿ । ವಿಶ್ವಸ್ಯ ಸರ್ವಸ್ಯ ಪರಮಸ್ಯೋತ್ತಮಸ್ಯಾಪಿ ರತ್ನಾದೇರ್ದಿವ್ಯಸ್ಯ ವಾ ವಸುನೋ ರಾಜಸಿ । ಈಶಿಷೇ । ಸತ್ರಾ ಸತ್ಯಮೇವ । ಅಪಿ ಚ ತ್ವಾ ತ್ವಾಂ ಗೋಷು ನಿಮಿತ್ತೇಷು ನಕಿರ್ವೃಣ್ವತೇ । ಕೇಽಪಿ ನ ವಾರಯಂತಿ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ, । ಅವಮಂ—ಅತ್ಯುತ್ತಮವಲ್ಲದ ಸೀಸಾದಿ ಯಾವ । ವಸು—ಧನಗಳಿವೆಯೋ ಅವೆಲ್ಲವೂ । ತವೇತ್—ನಿನ್ನದೇ ಆಗಿವೆ । ತ್ವಂ—ನೀನೇ । ಮಧ್ಯಮಂ—ಮಧ್ಯಸ್ಥವಾಗಿರುವ ರಜತಾದಿಗಳನ್ನು । ಪುಷ್ಯಸಿ—ವೃದ್ಧಿಗೊಳಿಸುತ್ತೀಯೆ । ವಿಶ್ವಸ್ಯ—ಸಮಸ್ತವಾದ । ಪರಮಸ್ಯ—ಉತ್ಕೃಷ್ಟವಾದ ರತ್ನಾದಿಗಳಿಗೂ । ರಾಜಸಿ—ನೀನೇ ಈಶ್ವರನಾಗಿದ್ದೀಯೆ । ಸತ್ರಾ—ಸತ್ಯವಾಗಿಯೂ । ತ್ವಾ—ನಿನ್ನನ್ನು । ಗೋಷು—ಗೋನಿಮಿತ್ತವಾಗಿ ಪ್ರಯತ್ನಿಸುವಾಗ । ನಕಿಃ ವೃಣ್ವತೇ—ಯಾರೂ ತಡೆಯಲಾರರು.

ಭಾವಾರ್ಥ

ಎಲೈ ಇಂದ್ರನೇ, ಅತ್ಯುತ್ತಮವಲ್ಲದ ಸೀಸಾದಿ ಯಾವ ಧನಗಳಿವೆಯೋ ಅವೆಲ್ಲವೂ ನಿನ್ನದೇ ಆಗಿದೆ. ನೀನೇ ಮಧ್ಯಸ್ಥವಾಗಿರುವ ರಜತಾದಿಗಳನ್ನೂ ವೃದ್ಧಿಗೊಳಿಸುತ್ತೀಯೆ ಉತ್ಕೃಷ್ಟವಾದ ಸಮಸ್ತ ರತ್ನಾದಿಗಳಿಗೂ ನೀನೇ ಈಶ್ವರನಾಗಿದ್ದೀಯೆ. ಗೋನಿಮಿತ್ತವಾಗಿ ಪ್ರಯತ್ನಿಸುವಾಗ ಸತ್ಯವಾಗಿಯೂ ನಿನ್ನನ್ನು ಯಾರೂ ತಡೆಗಟ್ಟಲಾರರು.

## English Translation

Yours Indra, is the vast valuable wealth: you cherish the middling: you rule over all that which is the most precious: no one opposes you in (the recovering of the) cattle.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ, **ಅವಮ; ಮಧ್ಯಮ** ಮತ್ತು **ಪರಮ** ಎಂಬ ಪದಗಳಿಗೆ ಪೃಥ್ವೀ, ಅಂತರಿಕ್ಷ ಮತ್ತು ಉತ್ಕೃಷ್ಟವಾದ ದ್ಯುಲೋಕ ಎಂಬ ಅರ್ಥಗಳೂ ಸಾಧ್ಯ ಇಂದ್ರನು ಪೃಥಿವ್ಯಾದಿ ಸಕಲ ಲೋಕಗಳಿಗೂ ಒಬ್ಬನೇ ಪ್ರಭುವು ಎಂಬ ತಾತ್ಪರ್ಯವನ್ನೂ ಹೇಳಬಹುದು.

ಸಂಹಿತಾಪಾಠಃ

ತ್ವಂ ವಿಶ್ವಸ್ಯ ಧನದಾ ಅಸಿ ಶ್ರುತೋ ಯ ಈಂ ಭವಂತ್ಯಾಜಯಃ ।
ತವಾಯಂ ವಿಶ್ವಃ ಪುರುಹೂತ ಪಾರ್ಥಿವೋಽವಸ್ಯುರ್ನಾಮ ಭಿಕ್ಷತೇ ॥

ಪದಪಾಠಃ

ತ್ವಂ । ವಿಶ್ವಸ್ಯ । ಧನಽದಾಃ । ಅಸಿ । ಶ್ರುತಃ । ಯೇ । ಈಂ । ಭವಂತಿ । ಆಜಯಃ ।
ತವ । ಅಯಂ । ವಿಶ್ವಃ । ಪುರುಽಹೂತ । ಪಾರ್ಥಿವಃ । ಅವಸ್ಯುಃ । ನಾಮ । ಭಿಕ್ಷತೇ ॥ ೧೭ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ವಿಶ್ವಸ್ಯ ಸರ್ವಸ್ಯ ಸ್ತೋತುರ್ಯಜಮಾನಸ್ಯ ವಾ ಧನದಾ ಧನಸ್ಯ **ದಾತಾ ಸನ್ ಶ್ರುತಃ ಪ್ರಸಿದ್ಧೋಽಸಿ । ಯ ಈಂ ಯ ಏತ ಆಜಯೋ ಯುದ್ಧಾನಿ ಭವಂತಿ ತೇಷ್ವಪಿ ಧನದಾಃ ಶ್ರುತೋಽಸಿ । ಹೇ ಪುರುಹೂತ ವಿಶ್ವಃ ಸರ್ವೋಽಪ್ಯಯಂ ಪಾರ್ಥಿವೋ ಜನಸ್ತವ । ತ್ವತ್ತ ಇತ್ಯರ್ಥಃ । ಅವಸ್ಯೂ ರಕ್ಷಾಮಿಚ್ಛನ್ನಾಮಾನ್ನಮುದಕಂ ವಾ । ಬರ್ಹಿರ್ನಾಮೇತ್ಯುದಕನಾಮಸು ಪಾಠಾತ್ । ಭಿಕ್ಷತೇ। ಯಾಚತೇ । ತ್ವಾಮೇವೇತಿ ಶೇಷಃ ॥**

ಪ್ರತಿಪದಾರ್ಥ

(ಎಲೈ ಇಂದ್ರನೇ), **ತ್ವಂ**—ನೀನು । **ವಿಶ್ವಸ್ಯ**—ಸಮಸ್ತವಾದ ಯಜಮಾನರಿಗೂ । **ಧನದಾಃ**—ಧನಪ್ರದನಾಗಿದ್ದೀಯೆಂದು । **ಶ್ರುತಃ**—ಪ್ರಸಿದ್ಧನಾಗಿ । **ಅಸಿ**—ಆಗಿದ್ದೀಯೆ. । **ಯ ಈಂ**—ಯಾವ ಪ್ರಸಿದ್ಧವಾದ । **ಆಜಯಃ**—ಯುದ್ಧಗಳು । **ಭವಂತಿ**—ಸಂಭವಿಸುವುವೋ ಅವುಗಳಲ್ಲೂ ಧನಪ್ರದನಾಗಿದ್ದೀಯೆ । **ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ । **ಪಾರ್ಥಿವಃ**—ಪೃಥ್ವಿಗೆ ಸೇರಿದ । **ವಿಶ್ವಃ ಅಯಂ**—ಸಕಲ ಮಾನವರೂ ಸಹ । **ತವ ಅವಸ್ಯುಃ**—ನಿನ್ನ ರಕ್ಷಣೆಯನ್ನಪೇಕ್ಷಿಸಿ । **ನಾಮ**—ಅನ್ನಾದಿಗಳನ್ನು । **ಭಿಕ್ಷತೇ**—ಯಾಚಿಸುತ್ತಾರೆ.

ಭಾವಾರ್ಥ

ಎಲೈ ಇಂದ್ರನೇ, ನೀನು ಸಕಲ ಯಜಮಾನರಿಗೂ ಧನಪ್ರದನಾಗಿದ್ದೀಯೆಂದು ಪ್ರಸಿದ್ಧನಾಗಿದ್ದೀಯೆ. ಯಾವ ಯುದ್ಧಗಳು ಪ್ರಸಿದ್ಧವಾಗಿ ಸಂಭವಿಸುವುವೋ ಅವುಗಳಲ್ಲೂ ಧನಪ್ರದನಾಗಿದ್ದೀಯೆ. ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ, ಪೃಥ್ವಿಗೆ ಸೇರಿದ ಸಕಲ ಮಾನವರೂ ಸಹ ನಿನ್ನ ರಕ್ಷಣೆಯನ್ನಪೇಕ್ಷಿಸಿ ಅನ್ನಾದಿಗಳನ್ನು ಯಾಚಿಸುತ್ತಾರೆ.

## English Translation

You are celebrated as the giver of wealth to all, even where batt occur all the people of the earth, desirous of protection, solicit you, invoked of many

ಸಂಹಿತಾಪಾಠಃ

ಯದಿಂದ್ರ ಯಾವತಸ್ತ್ವಮೇತಾವದಹಮೀಶೀಯ ।
ಸ್ತೋತಾರಮಿದ್ದಿಧಿಷೇಯ ರದಾವಸೋ ನ ಪಾಪತ್ವಾಯ ರಾಸೀಯ ॥

ಪದಪಾಠಃ

ಯತ್ । ಇಂದ್ರ । ಯಾವತಃ । ತ್ವಂ । ಏತಾವತ್ । ಅಹಂ । ಈಶೀಯ ।
ಸ್ತೋತಾರಂ । ಇತ್ । ದಿಧಿಷೇಯ । ರದವಸೋ ಇತಿ ರದಽವಸೋ । ನ । ಪಾಪಽತ್ವಾಯ । ರಾಸೀಂ

ಸಾಯಣಭಾಷ್ಯಂ

**ಹೇ ಇಂದ್ರ ಯದ್ಯತೋ ಯಾವತೋ ಧನಸ್ಯ ತ್ವಮೀಶಿಷೇ ಏತಾವತ್ ॥ ಷಷ್ಠ್ಯಾ ಲು** ಏತಾವತೋ ಧನಸ್ಯಾಹಮೀಶೀಯ ಈಶ್ವರೋ ಭವೇಯಂ ಹೇ ರದವಸೋ । **ರದತಿ ದದಾತಿ ವಸೂ** ರದವಸುಃ । ತತೋಽಹಮಸ್ಮದೀಯಂ ಸ್ತೋತಾರಮಿದ್ದಿಧಿಷೇಯ । ಧನಪ್ರದಾನೇನ ಧಾರಯೇ ಮೇವ । **ಪಾಪತ್ವಾಯ ನ ರಾಸೀಯ** । ನ ದದ್ಯಾಂ ॥

ಪ್ರತಿಪದಾರ್ಥ

**ರದವಸೋ**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ಯತ್**—ಯಾವ ರೀತಿ । **ಯಾವತ** ಯಾವ ಯಾವ ಧನಕ್ಕೆಲ್ಲಾ । **ತ್ವಂ**—ನೀನು ಒಡೆಯನಾಗಿರುವೆಯೋ । **ಏತಾವತ್**—ಅದೇರೀತಿ ಅದೇ ಧನಕ್ಕೆ **ಅಹಂ**—ನಾನು । **ಈಶೀಯ** –ಒಡೆಯನಾಗಿದ್ದಿದ್ದೇ ಆದರೆ । **ಸ್ತೋತಾರಮಿತ್**—ಸ್ತೋತೃಗಳಿಗೆ ಮಾತ್ರ **ದಿಧಿಷೇಯ**—ಧನಪ್ರದಾನದಿಂದ ಧಾರಕನಾಗಿರುತ್ತಿದ್ದೆನು । **ಪಾಪತ್ವಾಯ**—ಪಾಪಕರ್ಮಗಳಿಗಾಗಿ । **ನ ರಾಸೀ** ಖಂಡಿತ ಕೊಡುತ್ತಿರಲಿಲ್ಲ

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ಯಾವ ರೀತಿ ಯಾವಯಾವ ಧನಕ್ಕೆಲ್ಲಾ ನೀನು ಒಡೆಯನಾಗಿರುವೆ ಅದೇ ರೀತಿ ಅದೇ ಧನಕ್ಕೆಲ್ಲಾ ನಾನೂ ಒಡೆಯನಾಗಿದ್ದಿದ್ದೇ ಆದರೆ ಸ್ತೋತೃಗಳಿಗೆ ಮಾತ್ರವೇ ನಾನು ಧನಪ್ರ ದಿಂದ ಧಾರಕನಾಗಿರುತ್ತಿದ್ದೆನು ಪಾಪಕರ್ಮಗಳಿಗಾಗಿ ಖಂಡಿತ ಕೊಡುತ್ತಿರಲಿಲ್ಲ

## English Translation

**If I were lord of as much (affluence) as you are, Indra, then mi I support (your) worshippers, dispenser of wealth, and not squander it u wickedness.**

ಸಂಹಿತಾಪಾಠಃ

ಶಿಕ್ಷೇಯಮಿನ್ಮಹಯತೇ ದಿವೇದಿವೇ ರಾಯ ಆ ಕುಹಚಿದ್ವಿದೇ ।
ನಹಿ ತ್ವದನ್ಯನ್ಮಘವನ್ನ ಆಪ್ಯಂ ವಸ್ಯೋ ಅಸ್ತಿ ಪಿತಾ ಚನ ॥ ೧೯ ॥

ಪದಪಾಠಃ

ಶಿಕ್ಷೇಯಂ । ಇತ್ । ಮಹ್ऽಯತೇ । ದಿವೇऽದಿವೇ । ರಾಯಃ । ಆ । ಕುಹಚಿತ್ऽವಿದೇ ।
ನಹಿ । ತ್ವತ್ । ಅನ್ಯತ್ । ಮಘ್ऽವನ್ । ನಃ । ಆಪ್ಯಂ । ವಸ್ಯಃ । ಅಸ್ತಿ । ಪಿತಾ । ಚನ ॥ ೧೯ ॥

ಸಾಯಣಭಾಷ್ಯಂ

**ಕುಹಚಿದ್ವಿದೇ । ಕುತ್ರಚಿದ್ವಿದ್ಯಮಾನಃ ಕುಹಚಿದ್ವಿತ್ । ತಸ್ಮೈ । ಯತ್ರ ಕ್ವಾಪಿ ವಿದ್ಯಮಾನಾಯೇತ್ಯರ್ಥಃ । ಮಹಯತೇ ಪೂಜಯತೇ ಜನಾಯ ದಿವೇ ದಿವೇ ಪ್ರತಿದಿನಂ ರಾಯೋ ಧನಾನಿ ಶಿಕ್ಷೇಯಮಿತ್ । ದದ್ಯಾಮೇವ । ಆಕಾರಃ ಪೂರಣಃ । ಏವಮಿಂದ್ರಸ್ಯ ವಾಕ್ಯಂ ಶ್ರುತ್ವಾ ಸಂತುಷ್ಟ ಋಷಿರ್ವದತಿ । ಹೇ ಮಘವನ್ ತ್ವತ್ತ್ವತ್ತೋऽನ್ಯದಸ್ಮಾಕಮಾಪ್ಯಂ ಜ್ಞಾತೇಯಂ ನ ಹ್ಯಸ್ತಿ । ವಸ್ಯಃ ಪ್ರಶಸ್ಯಃ ಪಿತಾ ಚನ ಪಾಲಯಿತಾ ಚ ತ್ವದನ್ಯೋ ನಾಸ್ತೀತ್ಯರ್ಥಃ ॥**

ಪ್ರತಿಪದಾರ್ಥ

**ಕುಹಚಿದ್ವಿದೇ**—ಯಾವ ಯಾವ ಸ್ಥಳದಲ್ಲಿದ್ದರೂ ಸಹ । **ಮಹಯತೇ**—ಪೂಜಕನಾದ ಯಜಮಾನನಿಗೆ । **ದಿವೇ ದಿವೇ**—ಪ್ರತಿದಿನವೂ । **ರಾಯಃ**—ಧನಗಳನ್ನು । **ಆ ಶಿಕ್ಷೇಯಮಿತ್**—ನಾನು ಖಂಡಿತ ಕೊಡುವೆನು (ಎಂದು ಇಂದ್ರನು ಪ್ರಕಟಿಸುವನು) । **ಮಘವನ್**—ಧನವಂತನಾದ ಎಲೈ ಇಂದ್ರನೇ । **ತ್ವತ್**—ನಿನಗಿಂತಲೂ । **ಅನ್ಯತ್**—ಬೇರೆಯವರಾದ । **ಆಪ್ಯಂ**—ಹಿತಕಾರಿಗಳು । **ನಹಿ ಅಸ್ತಿ**—ಯಾರೂ ಇಲ್ಲವು । **ನಃ**—ನಮಗೆ । **ವಸ್ಯಃ**—ಶ್ರೇಷ್ಠನಾದ । **ಪಿತಾ ಚನ**—ಪಾಲಕನೂ ಯಾರೂ ಇಲ್ಲ.

ಭಾವಾರ್ಥ

ಯಾವ ಯಾವ ಪ್ರದೇಶಗಳಲ್ಲಿದ್ದರೂ ಪೂಜಕನಾದ ಯಜಮಾನನಿಗೆ ನಾನು ಪ್ರತಿದಿನವೂ ಧನಗಳನ್ನು ಖಂಡಿತವಾಗಿ ಕೊಡುತ್ತೇನೆ ಎಂಬ ಇಂದ್ರನ ವಾಕ್ಯವನ್ನು ಕೇಳಿದ ಯಜಮಾನನು ಈ ರೀತಿ ತಿಳಿಸುತ್ತಾನೆ —"ಧನವಂತನಾದ ಎಲೈ ಇಂದ್ರನೇ, ನಿನಗಿಂತಲೂ ಬೇರೆ ಹಿತಕಾರಿಗಳು ನಮಗೆ ಯಾರೂ ಇಲ್ಲವು. ನಿನ್ನಂತಹ ಶ್ರೇಷ್ಠನಾದ ಪಾಲಕನೂ ಯಾರೂ ಇಲ್ಲವು."

## English Translation

May I daily distribute wealth to the venerable wherever abiding : no other, Maghavan, than you is to be sought by us . (no other is to us) a most excellent protector.

ಸಂಹಿತಾಪಾಠಃ

ತರಣಿರಿತ್ಸಿಷಾಸತಿ ವಾಜಂ ಪುರಂಧ್ಯಾ ಯುಜಾ ।

ಆ ವ ಇಂದ್ರಂ ಪುರುಹೂತಂ ನಮೇ ಗಿರಾ ನೇಮಿಂ ತಷ್ಟೇವ ಸುದ್ರ್ವಂ ॥

ಪದಪಾಠಃ

ತರಣಿಃ । ಇತ್ । ಸಿಸಾಸತಿ । ವಾಜಂ । ಪುರಂऽಧ್ಯಾ । ಯುಜಾ ।

ಆ । ವಃ । ಇಂದ್ರಂ । ಪುರುऽಹೂತಂ । ನಮೇ । ಗಿರಾ । ನೇಮಿಂ । ತಷ್ಟಾऽಇವ । ಸುऽದ್ರ್ವಂ ॥ ೨೦ ॥

ಸಾಯಣಭಾಷ್ಯಂ

ತರಣಿರಿತ್ ಸ್ತುತ್ಯಾದೌ ಕರ್ಮಣಿ ತ್ವರಿತ ಏವ ಪುಮಾನ್ ಪುರಂಧ್ಯಾ ಮಹತ್ಯಾ ಧಿಯಾ ಯುಜಾ ಸಹಾಯಭೂತಯಾ ವಾಜಮನ್ನಂ ಸಿಷಾಸತಿ । ಸಂಭಜತೇ । ಪುರುಹೂತಂ ಬಹುಭಿರಾಹೂತಮಿಂದ್ರಂ ವಸ್ತ್ವಾಂ ಗಿರಾ ಸ್ತುತ್ಯಾಹಮಾ ನಮೇ ನೇಮಿಂ ಚಕ್ರಸ್ಯ ವಲಯಂ ಸುದ್ರ್ವಂ ಶೋಭನದಾರುಂ ತಷ್ಟೇವ । ಯಥಾ ವರ್ಧಕಿರ್ದಾರುನೇಮಿಮಾನಮಯತೇ ತದ್ವದಿತ್ಯರ್ಥಃ ॥

ಪ್ರತಿಪದಾರ್ಥ

**ತರಣಿರಿತ್**—ಸ್ತುತ್ಯಾದಿಕರ್ಮಗಳಲ್ಲಿ ನಿರತನಾದವನು ಮಾತ್ರ । **ಪುರಂಧ್ಯಾ**—ಮಹತ್ತಾದ ಪ್ರಜ್ಞೆಯೊಡನೆ । **ಯುಜಾ**—ಕೂಡಿದವನಾಗಿ । **ವಾಜಂ**—ಅನ್ನವನ್ನು । **ಸಿಷಾಸತಿ**—ಹೊಂದುತ್ತಾನೆ । **ತಷ್ಟಾಇವ**—ಮರಗೆಲಸದವನು । **ನೇಮಿಂ**—ಚಕ್ರಕ್ಕೆ ವಲಯರೂಪವಾಗಿ । **ಸುದ್ರ್ವಂ** —ಉತ್ತಮವಾದ ಮರವನ್ನು ಬಗ್ಗಿಸುವಂತೆ । **ಪುರುಹೂತಂ**—ಅನೇಕರ ಆಹ್ವಾನಕ್ಕೆ ಪಾತ್ರನೂ । **ಇಂದ್ರಂ**—ಸರ್ವೇಶ್ವರನೂ ಆದ । **ವಃ**—ನಿನ್ನ ಮುಂದೆ । **ಗಿರಾ**—ಸ್ತುತಿಯುಕ್ತನಾಗಿ । **ಆ ನಮೇ**—ಬಗ್ಗಿ ನಮಸ್ಕರಿಸುತ್ತೇನೆ.

ಭಾವಾರ್ಥ

ಸ್ತುತ್ಯಾದಿಕರ್ಮಗಳಲ್ಲಿ ನಿರತನಾದವನು ಮಾತ್ರ ಮಹತ್ತಾದ ಪ್ರಜ್ಞೆಯೊಡನೆ ಕೂಡಿದವನಾಗಿ ಅನ್ನವನ್ನು ಹೊಂದುತ್ತಾನೆ ಮರಗೆಲಸದವನು ಚಕ್ರಕ್ಕೆ ವಲಯರೂಪವಾಗಿ ಉತ್ತಮವಾದ ಮರವನ್ನು ಬಗ್ಗಿಸುವಂತೆ ಅನೇಕರ ಆಹ್ವಾನಕ್ಕೆ ಪಾತ್ರನೂ ಸರ್ವೇಶ್ವರನೂ ಆದ ನಿನ್ನ ಮುಂದೆ ಸ್ತುತಿಯುಕ್ತನಾಗಿ ಬಗ್ಗಿ ನಮಸ್ಕರಿಸುತ್ತೇನೆ.

English Translation

The prompt offerer (of praise), with solemn rites combined, acquires food : I bend down with adoration to you, Indra, the invoked of many, as a carpenter bends the wooden circumference of the wheel.

ಸಂಹಿತಾಪಾಠಃ

ನ ದುಷ್ಟುತೀ ಮರ್ತ್ಯೋ ವಿಂದತೇ ವಸು ನ ಸ್ರೇಧಂತಂ ರಯಿರ್ನಶತ್ ।
ಸುಶಕ್ತಿರಿನ್ಮಘವನ್ತುಭ್ಯಂ ಮಾವತೇ ದೇಷ್ಣಂ ಯತ್ಪಾರ್ಯೇ ದಿವಿ ॥

ಪದಪಾಠಃ

ನ । ದುಃಽಸ್ತುತೀ । ಮರ್ತ್ಯಃ । ವಿಂದತೇ । ವಸು । ನ । ಸ್ರೇಧಂತಂ । ರಯಿಃ । ನಶತ್ ।
ಸುಽಶಕ್ತಿಃ । ಇತ್ । ಮಘಽವನ್ । ತುಭ್ಯಂ । ಮಾಽವತೇ । ದೇಷ್ಣಂ । ಯತ್ । ಪಾರ್ಯೇ । ದಿವಿ ॥

ಸಾಯಣಭಾಷ್ಯಂ

ಮರ್ತ್ಯೋ ಮನುಷ್ಯೋ ದುಷ್ಟುತೀ ದುಷ್ಟುತ್ಯಾ ವಸು ಧನಂ ನ ವಿಂದತೇ । ಇಂದ್ರಂ ಸ್ತುವನ್ನೇವ ವಸು ಲಭತ ಇತ್ಯರ್ಥಃ । ಸ್ರೇಧಂತಂ ಹಿಂಸಂತಂ ಇಂದ್ರವಿಷಯಸ್ತುತ್ಯಾದಿಕರ್ಮಾಣ್ಯಕುರ್ವಂತಮಿತ್ಯರ್ಥಃ । ರಯಿರ್ಧನಂ ನ ನಶತ್ । ನ ವ್ಯಾಪ್ನೋತಿ । ಹೇ ಮಘವನ್ ತ್ವಯಾ ಪಾರ್ಯೇ ದಿವಿ ಸೌತ್ಯೇ ದಿವಸೇ ಮಾವತೇ ಮತ್ಸದೃಶಾಯ ದೇಷ್ಣಂ ದಾತವ್ಯಂ ಯದ್ಧನಮಸ್ತಿ ತತ್ತುಭ್ಯಂ ತ್ವತ್ತಃ ಸುಶಕ್ತಿರಿತ್ ಸುಕರ್ಮೈವ । ವಿಂದತ ಇತಿ ವ್ಯವಹಿತಮಪ್ಯನುಷಜ್ಯತೇಽಧ್ಯಾಹಾರಸ್ಯಾಂತಿಕತ್ವಾತ್ ॥

ಪ್ರತಿಪದಾರ್ಥ

**ಮರ್ತ್ಯಃ**—ಮಾನವನು । **ದುಷ್ಟುತೀ**—ದುರ್ಭಾಷೆಯಿಂದ ಕೂಡಿದ ಸ್ತುತಿಯಿಂದ । **ವಸು**—ಧನವನ್ನು । **ನ ವಿಂದತೇ**—ಹೊಂದುವುದಿಲ್ಲ । **ಸ್ರೇಧಂತಂ**—ಹಿಂಸಾಕಾರಕನಾದ ಪುರುಷನನ್ನು । **ರಯಿಃ**—ಧನವು । **ನ ನಶತ್**—ಹೋಗಿ ಸೇರುವುದಿಲ್ಲ । **ಮಘವನ್**—ಧನವಂತನಾದ ಎಲೈ ಇಂದ್ರನೇ । **ಪಾರ್ಯೇ ದಿವಿ**—ಸೋಮಾರ್ಪಣದ ದಿನವೇ । **ಮಾವತೇ**—ನನ್ನಂತಹ ಯಜಮಾನನಿಗೆ । **ದೇಷ್ಣಂ**—ಕೊಡಲು ಯೋಗ್ಯವಾಗಿ । **ಯತ್**—ಯಾವ ಧನವಿದೆಯೋ ಅದನ್ನು । **ತುಭ್ಯಂ**—ನಿನ್ನಿಂದ । **ಸುಶಕ್ತಿರಿತ್**—ಉತ್ತಮವಾದ ಕರ್ಮವುಳ್ಳವನು ಮಾತ್ರ ಪಡೆಯಬಲ್ಲನು

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ಮಾನವನು ದುರ್ಭಾಷೆಯಿಂದ ಕೂಡಿದ ಸ್ತುತಿಯಿಂದ ಧನವನ್ನು ಹೊಂದುವುದಿಲ್ಲ. ಹಿಂಸಾಕಾರಕನಾದ ಪುರುಷನನ್ನು ಧನವು ಹೋಗಿ ಸೇರುವುದಿಲ್ಲ ಧನವಂತನಾದ ಎಲೈ ಇಂದ್ರನೇ, ಸೋಮಾರ್ಪಣದ ದಿನವೇ, ನನ್ನಂತಹ ಯಜಮಾನನಿಗೆ ಕೊಡಲು ಯೋಗ್ಯವಾಗಿ ಯಾವ ಧನವಿದೆಯೋ ಅದನ್ನು ನಿನ್ನಿಂದ ಉತ್ತಮವಾದ ಕರ್ಮವುಳ್ಳವನು ಮಾತ್ರ ಪಡೆಯಬಲ್ಲನು

English Translation

A man acquires not wealth by unbecoming praise . affluence devolves not upon one obstructing (sacrifice). in you, Maghavan, is the power whereby bounty (may be shown) to such as I am on the day of the libation.

ಸಂಹಿತಾಪಾಠಃ

ಅಭಿ ತ್ವಾ ಶೂರ ನೋನುಮೋಽದುಗ್ಧಾ ಇವ ಧೇನವಃ ।
ಈಶಾನಮಸ್ಯ ಜಗತಃ ಸ್ವರ್ದೃಶಮೀಶಾನಮಿಂದ್ರ ತಸ್ಥುಷಃ ॥ ೨೨ ॥

ಪದಪಾಠಃ

ಅಭಿ । ತ್ವಾ । ಶೂರ । ನೋನುಮಃ । ಅದುಗ್ಧಾಃಽಇವ । ಧೇನವಃ ।
ಈಶಾನಂ । ಅಸ್ಯ । ಜಗತಃ । ಸ್ವಃಽದೃಶಂ । ಈಶಾನಂ । ಇಂದ್ರ । ತಸ್ಥುಷಃ ॥ ೨೨ ॥

ಸಾಯಣಭಾಷ್ಯಂ

**ಹೇ ಶೂರೇಂದ್ರ ಅಸ್ಯ ಜಗತೋ ಜಂಗಮಸ್ಯೇಶಾನಮೀಶ್ವರಂ ತಸ್ಥುಷಃ ಸ್ಥಾವರಸ್ಯ ಚೇಶಾನಂ। ಈಶಾನಮಿತಿ ಪದಸ್ಯಾವೃತ್ತಿರಾದರಾರ್ಥಾ । ಸ್ವರ್ದೃಶಂ ಸರ್ವದೃಶಂ ತ್ವಾ ತ್ವಾಮದುಗ್ಧಾ ಇವ ಧೇನವೋ ಯಥಾದುಗ್ಧಾ ಧೇನವಃ ಕ್ಷೀರಪೂರ್ಣೋಧಸ್ತ್ವೇನ ವರ್ತಂತೇ ತದ್ವತ್ಸೋಮಪೂರ್ಣಚಮಸತ್ವೇನ ವರ್ತಮಾನಾ ವಯಮಭಿ ನೋನುಮಃ । ಭೃಶಮಭಿಷ್ಟುಮಃ ॥**

ಪ್ರತಿಪದಾರ್ಥ

**ಶೂರ**—ಪರಾಕ್ರಮಿಯಾದ । **ಇಂದ್ರ**—ಎಲೈ ಇಂದ್ರನೇ । **ಅಸ್ಯ ಜಗತಃ**—ಜಂಗಮಾತ್ಮಕವಾದ ಈ ಜಗತ್ತಿಗೆ । **ಈಶಾನಂ**—ಒಡೆಯನಾದವನೂ । **ತಸ್ಥುಷಃ**—ಸ್ಥಾವರಾತ್ಮಕವಾದ ವಸ್ತುಗಳಿಗೂ । **ಈಶಾನಂ**—ಒಡೆಯನಾದವನೂ । **ಸ್ವರ್ದೃಶಂ**—ಜಗತ್ತನ್ನೆಲ್ಲಾ ನೋಡಬಲ್ಲವನೂ ಆದ । **ತ್ವಾ**—ನಿನ್ನನ್ನು । **ಅದುಗ್ಧಾ ಇವ**—ಹಾಲನ್ನು ಕರೆಯದಿರುವ । **ಧೇನವಃ**—ಗೋವುಗಳು ಹಾಲಿನಿಂದ ತುಂಬಿದ ಕೆಚ್ಚಲುಗಳನ್ನು ಹೊಂದಿರುವಂತೆ (ನಾವೂ ಸಹ ಸೋಮದಿಂದ ಪೂರ್ಣವಾದ ಚಮಸಪಾತ್ರೆಯನ್ನು ಹಿಡಿದವರಾಗಿ) । **ಅಭಿನೋನುಮಃ**—ಸ್ತುತಿಸುತ್ತೇವೆ

ಭಾವಾರ್ಥ

ಪರಾಕ್ರಮಿಯಾದ ಎಲೈ ಇಂದ್ರನೇ, ಜಂಗಮಾತ್ಮಕವಾದ ಈ ಜಗತ್ತಿಗೆ ಒಡೆಯನಾದವನೂ, ಸ್ಥಾವರಾತ್ಮಕವಾದ ವಸ್ತುಗಳಿಗೂ ಒಡೆಯನಾದವನೂ, ಜಗತ್ತನ್ನೆಲ್ಲಾ ನೋಡಬಲ್ಲವನೂ ಆದ ನಿನ್ನನ್ನು ಹಾಲನ್ನು ಕರೆಯುವುದಕ್ಕೆ ಮುಂಚೆ ಗೋವುಗಳು ಹಾಲಿನಿಂದ ತುಂಬಿದ ಕೆಚ್ಚಲುಗಳನ್ನು ಹೊಂದಿರುವಂತೆ ನಾವೂ ಸಹ ಸೋಮದಿಂದ ಪೂರ್ಣವಾದ ಚಮಸಪಾತ್ರೆಯನ್ನು ಹಿಡಿದವರಾಗಿ ಸ್ತುತಿಸುತ್ತೇವೆ

English Translation

We glorify you, hero, (Indra) the lord of all moveable and stationary things, the beholder of the universe, (with ladles filled with Soma), like (the udders of) unmilked cows.

ಸಂಹಿತಾಪಾಠಃ

ನ ತ್ವಾವಾँ ಅನ್ಯೋ ದಿವ್ಯೋ ನ ಪಾರ್ಥಿವೋ ನ ಜಾತೋ ನ ಜನಿಷ್ಯತೇ ।

ಅಶ್ವಾಯಂತೋ ಮಘವನ್ನಿಂದ್ರ ವಾಜಿನೋ ಗವ್ಯಂತಸ್ತ್ವಾ ಹವಾಮಹೇ ॥

ಪದಪಾಠಃ

ನ । ತ್ವಾऽವಾನ್। ಅನ್ಯಃ। ದಿವ್ಯಃ । ನ । ಪಾರ್ಥಿವಃ । ನ । ಜಾತಃ । ನ । ಜನಿಷ್ಯತೇ ।

ಅಶ್ವऽಯಂತಃ । ಮಘऽವನ್ । ಇಂದ್ರ । ವಾಜಿನಃ । ಗವ್ಯಂತಃ । ತ್ವಾ । ಹವಾಮಹೇ ॥ ೨೩ ॥

ಸಾಯಣಭಾಷ್ಯಂ

ಹೇ ಮಘವನ್ನಿಂದ್ರ ದಿವ್ಯೋ ದಿವಿ ಭವಸ್ತ್ವಾವಾನ್ ತ್ವತ್ಸದೃಶೋऽನ್ಯೋ ನ ಜಾಯತೇ । ಪಾರ್ಥಿವಃ ಪೃಥಿವ್ಯಾಂ ಭವೋऽಪಿ ತ್ವಾವಾನನ್ಯೋ ನ ಜಾಯತೇ । ದಿವ್ಯಃ ಪಾರ್ಥಿವೋ ವಾ ತ್ವಾವಾನನ್ಯೋ ನ ಜಾತಃ । ನ ಚ ಜನಿಷ್ಯತೇ । ಪೃಥಿವ್ಯಾಂ ದಿವಿ ಚ ತ್ರಿಷ್ವಪಿ ಲೋಕೇಷು ತ್ವತ್ಸದೃಶಃ ಕಶ್ಚಿನ್ನಾಸ್ತೀತ್ಯರ್ಥಃ । ಅಶ್ವಾಯಂತೋऽಶ್ವಾನಿಚ್ಛಂತೋ ವಾಜಿನೋ ವಾಜಮಿಚ್ಛಂತಃ ॥ ಇಚ್ಛಾಯಾಮಿತಿಪ್ರತ್ಯಯಃ ॥ ಹವಿಷ್ಮಂತೋ ವಾ ಗವ್ಯಂತೋ ಗಾ ಇಚ್ಛಂತಶ್ಚ ವಯಂ ತ್ವಾ ತ್ವಾಂ ಹವಾಮಹೇ । ಹ್ವಯಾಮಃ ॥

ಪ್ರತಿಪದಾರ್ಥ

**ಮಘವನ್**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ದಿವ್ಯಃ**—ದೇವಲೋಕೋತ್ಪನ್ನನಾದವನು । **ಅನ್ಯಃ**—ಬೇರೊಬ್ಬನೂ । **ತ್ವಾವಾನ್**—ನಿನಗೆ ಸದೃಶನಾಗಿ । **ನ ಜಾತಃ**—ಉತ್ಪನ್ನನಾಗಿಲ್ಲ । **ಪಾರ್ಥಿವಃ**—ಪೃಥ್ವಿಯಲ್ಲಿ ಹುಟ್ಟಿದವನೊಬ್ಬನೂ । **ನ**—ನಿನಗೆ ಸದೃಶನಾಗಿ ಹುಟ್ಟಿಲ್ಲ । **ನ ಜನಿಷ್ಯತೇ**—ಉತ್ಪನ್ನನಾಗುವುದೂ ಇಲ್ಲ । **ಅಶ್ವಾಯಂತಃ**—ಅಶ್ವಗಳನ್ನು ಅಪೇಕ್ಷಿಸುವವರೂ । **ವಾಜಿನಃ**—ಅನ್ನಾಪೇಕ್ಷಿಗಳೂ । **ಗವ್ಯಂತಃ**—ಗೋವುಗಳನ್ನು ಇಚ್ಛಿಸುವವರೂ ಆದ ನಾವು । **ತ್ವಾ**—ನಿನ್ನನ್ನು । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ನಿನಗೆ ಸದೃಶನಾದವನು ದೇವಲೋಕೋತ್ಪನ್ನರಾದ ದೇವತೆಗಳಲ್ಲಿ ಯಾರೂ ಇಲ್ಲ ಮಾನವರಲ್ಲೂ ಯಾರೂ ಹುಟ್ಟಿಲ್ಲ. ಇನ್ನು ಮುಂದೆಯೂ ಯಾರೂ ಹುಟ್ಟಲಾರರು. ಅಶ್ವಗಳನ್ನು ಅಪೇಕ್ಷಿಸುವವರೂ, ಅನ್ನಾಪೇಕ್ಷಿಗಳೂ, ಗೋವುಗಳನ್ನು ಇಚ್ಛಿಸುವವರೂ ಆದ ನಾವು ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ

English Translation

No other such as you are, celestial or terrestrial, has been or will be born, desirous of horses, of food, of cattle, affuent Indra, we invoke you.

ಸಂಹಿತಾಪಾಠಃ

ಅಭೀ ಷತಸ್ತದಾ ಭರೇಂದ್ರ ಜ್ಯಾಯಃ ಕನೀಯಸಃ ।

ಪುರೂವಸುರ್ಹಿ ಮಘವನ್ತ್ಸನಾದಸಿ ಭರೇಭರೇ ಚ ಹವ್ಯಃ ॥ ೨೪ ॥

ಪದಪಾಠಃ

ಅಭಿ । ಸತಃ । ತತ್ । ಆ । ಭರ । ಇಂದ್ರ । ಜ್ಯಾಯಃ । ಕನೀಯಸಃ ।

ಪುರುऽವಸುಃ । ಹಿ । ಮಘऽವನ್ । ಸನಾತ್ । ಅಸಿ । ಭರೇऽಭರೇ । ಚ । ಹವ್ಯಃ ॥ ೨೪ ॥

ಸಾಯಣಭಾಷ್ಯಂ

ಹೇ ಜ್ಯಾಯೋ ಜ್ಯಾಯಸ್ನಿಂದ್ರ ॥ ಆಮಂತ್ರಿತಂ ಪೂರ್ವಮವಿದ್ಯಮಾನವದಿತೀಂದ್ರಪದಸ್ಯಾವಿದ್ಯಮಾನವದ್ಭಾವಾತ್ ಜ್ಯಾಯ ಇತ್ಯಸ್ಯ ಸರ್ವಾನುದಾತ್ತತ್ವಾಭಾವಃ । ನಕಾರಸ್ಯ ರುತ್ವಂ ವ್ಯತ್ಯಯೇನ ನ್ನಮಭಾವೋ ವಾ ॥ ಕನೀಯಸಃ ಸತೋ ಮಮ ತತ್ಪ್ರಸಿದ್ಧಂ ಧನಮಭ್ಯಾ ಭರ । ಹೇ ಮಘವನ್ ತ್ವಂ ಸನಾಚ್ಚಿರಾದೇವಾರಭ್ಯ ಪುರೂವಸುರ್ಹಿ ಬಹುಧನೋ ಹ್ಯಸಿ । ಭರೇಭರೇ ಸಂಗ್ರಾಮೇ ಯಜ್ಞೇ ವಾ ಹವ್ಯೋ ಹವಿಷ್ಯಶ್ಚಾಸಿ ॥

ಪ್ರತಿಪದಾರ್ಥ

ಜ್ಯಾಯಃ—ಎಲ್ಲರಿಗಿಂತಲೂ ದೊಡ್ಡವನಾದ । ಇಂದ್ರ—ಎಲೈ ಇಂದ್ರನೇ । ಕನೀಯಸಃ—ನಿನಗಿಂತಲೂ ಅಲ್ಪತರನಾದ । ಮಮ—ನನಗೆ । ತತ್—ಪ್ರಸಿದ್ಧವಾದ ಧನವನ್ನು । ಅಭ್ಯಾಭರ—ಒದಗಿಸಿಕೊಡು । ಮಘವನ್—ಧನವಂತನಾದ ಎಲೈ ಇಂದ್ರನೇ । ಸನಾತ್—ಅತ್ಯಂತ ಪ್ರಾಚೀನಕಾಲದಿಂದಲೂ । ಪುರೂವಸುರ್ಹಿ—ಅಧಿಕವಾದ ಧನವುಳ್ಳವನೇ । ಅಸಿ—ಆಗಿದ್ದೀಯೆ । ಭರೇಭರೇ—ಪ್ರತಿಯೊಂದು ಸಂಗ್ರಾಮದಲ್ಲಿಯೂ । ಹವ್ಯಃ ಚ—ಪೂಜ್ಯನಾಗಿಯೂ ಆಗಿದ್ದೀಯೆ.

ಭಾವಾರ್ಥ

ಎಲ್ಲರಿಗಿಂತಲೂ ದೊಡ್ಡವನಾದ ಎಲೈ ಇಂದ್ರನೇ, ನಿನಗಿಂತಲೂ ಅಲ್ಪತರನಾದ ನನಗೆ ಪ್ರಸಿದ್ಧವಾದ ಧನವನ್ನು ಒದಗಿಸಿಕೊಡು. ಧನವಂತನಾದ ಎಲೈ ಇಂದ್ರನೇ, ನೀನು ಅತ್ಯಂತ ಪ್ರಾಚೀನಕಾಲದಿಂದಲೂ ಅಧಿಕವಾದ ಧನವುಳ್ಳವನೇ ಆಗಿದ್ದೀಯೆ. ಪ್ರತಿಯೊಂದು ಸಂಗ್ರಾಮದಲ್ಲಿಯೂ ಪೂಜ್ಯನಾಗಿಯೂ ಆಗಿದ್ದೀಯೆ

English Translation

Elder Indra, bring that (wealth to me), being the junior, for, Maghavan, you have from the beginning been possessed of infinate treasure, and are to be adored at repeated sacrifices

ಸಂಹಿತಾಪಾಠಃ

ಪರಾ ಣುದಸ್ವ ಮಘವನ್ನಮಿತ್ರಾನ್ತ್ಸುವೇದಾ ನೋ ವಸೂ ಕೃಧಿ ।

ಅಸ್ಮಾಕಂ ಬೋಧ್ಯವಿತಾ ಮಹಾಧನೇ ಭವಾ ವೃಧಃ ಸಖೀನಾಂ ॥ ೨೫ ॥

ಪದಪಾಠಃ

ಪರಾ । ಸುದಸ್ವ । ಮಘ್ಽವನ್ । ಅಮಿತ್ರಾನ್ । ಸುಽವೇದಾ । ನಃ । ವಸು । ಕೃಧಿ ।
ಅಸ್ಮಾಕಂ । ಬೋಧಿ । ಅವಿತಾ । ಮಹಾಽಧನೇ । ಭವ । ವೃಧಃ । ಸಖೀನಾಂ ॥ ೨೫ ॥

ಸಾಯಣಭಾಷ್ಯಂ

ಹೇ ಮಘವನ್ ಪರಾ ಪರಾಚೀನಾನಮಿತ್ರಾಞ್ಛತ್ರೂನ್ನುದಸ್ವ । ಪ್ರೇರಯ । ನೋಽಸ್ಮಭ್ಯಂ ವಸು ವಸೂನಿ ಸುವೇದಾ ಸುಲಭಾನಿ ಕೃಧಿ । ಕುರು । ಮಹಾಧನೇ ಸಂಗ್ರಾಮೇ । ವಾಜಸಾತೌ ಮಹಾಧನ ಇತಿ ಸಂಗ್ರಾಮನಾಮಸು ಪಾಠಾತ್ । ಸಖೀನಾಂ ಸ್ತೋತೄಣಾಮಸ್ಮಾಕಂ ವಸಿಷ್ಠಾನಾಮವಿತಾ ರಕ್ಷಿತಾ ಬೋಧಿ । ಭವ । ವೃಧೋ ವರ್ಧಯಿತಾ ಚ ಭವ ॥

ಪ್ರತಿಪದಾರ್ಥ

**ಮಘವನ್**—ಧನವಂತನಾದ ಎಲೈ ಇಂದ್ರನೇ। **ಅಮಿತ್ರಾನ್**—ನಮ್ಮ ಶತ್ರುಗಳನ್ನು। **ಪರಾ ಸುದಸ್ವ**—ದೂರಕ್ಕೆ ಓಡಿಸು । **ನಃ**—ನಮಗೆ । **ವಸು**—ಧನಗಳು । **ಸುವೇದಾ**—ಸುಲಭವಾಗಿ ಸಿಕ್ಕುವಂತೆ । **ಕೃಧಿ**—ಮಾಡು । **ಮಹಾಧನೇ**—ಅಧಿಕವಾದ ಧನಾರ್ಥವಾಗಿ ಮಾಡುವ ಸಂಗ್ರಾಮಗಳಲ್ಲಿ । **ಸಖೀನಾಂ**—ಸ್ತೋತೃಗಳಾದ । **ಅಸ್ಮಾಕಂ**—ನಮಗೆ । **ಅವಿತಾ**—ರಕ್ಷಕನಾಗಿರಬೇಕೆಂದು । **ಬೋಧಿ**—ತಿಳಿ । **ವೃಧಃ**—ನಮಗೆ ವೃದ್ಧಿಕಾರಕನಾಗಿಯೂ । **ಭವ**—ಆಗಿರು

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ನಮ್ಮ ಶತ್ರುಗಳನ್ನು ದೂರಕ್ಕೆ ಓಡಿಸು. ನಮಗೆ ಸುಲಭವಾಗಿ ಧನಗಳು ಸಿಕ್ಕುವಂತೆ ಮಾಡು ಅಧಿಕವಾಗಿ ಧನಗಳನ್ನು ಪಡೆಯಬೇಕಾದ ಸಂಗ್ರಾಮಗಳಲ್ಲಿ ಸ್ತೋತೃಗಳಾದ ನಮಗೆ ರಕ್ಷಕನಾಗಿರಬೇಕೆಂದು ತಿಳಿ. ನಮಗೆ ವೃದ್ಧಿಕಾರಕನಾಗಿಯೂ ಆಗಿರು.

English Translation

Drive away, Maghavan, our enemies . render riches easy of acquisition be our preserver in war . be the augmenter of (the prosperity) of (your) friends.

ಸಂಹಿತಾಪಾಠಃ

ಇಂದ್ರ ಕ್ರತುಂ ನ ಆ ಭರ ಪಿತಾ ಪುತ್ರೇಭ್ಯೋ ಯಥಾ ।
ಶಿಕ್ಷಾ ಣೋ ಅಸ್ಮಿನ್ಪುರುಹೂತ ಯಾಮನಿ ಜೀವಾ ಜ್ಯೋತಿರಶೀಮಹಿ ॥೨೬॥

ಪದಪಾಠಃ

ಇಂದ್ರ । ಕ್ರತುಂ । ನಃ । ಆ । ಭರ । ಪಿತಾ । ಪುತ್ರೇಽಭ್ಯಃ । ಯಥಾ ।
ಶಿಕ್ಷ । ನಃ । ಅಸ್ಮಿನ್ । ಪುರುಽಹೂತ । ಯಾಮನಿ । ಜೀವಾಃ । ಜ್ಯೋತಿಃ । ಅಶೀಮಹಿ ॥ ೨೬ ॥

ಸಾಯಣಭಾಷ್ಯಂ

**ಹೇ ಇಂದ್ರ ನೋಽಸ್ಮಭ್ಯಂ ಕ್ರತುಂ ಕರ್ಮ ಪ್ರಜ್ಞಾನಂ ವಾ ಭರ । ಆಹರ । ಅಪಿ ಚ ಯಥಾ ಪಿತಾ ಪುತ್ರೇಭ್ಯೋ ಧನಂ ಪ್ರಯಚ್ಛತಿ ತಥಾ ನೋಽಸ್ಮಭ್ಯಂ ಶಿಕ್ಷ । ಧನಂ ದೇಹಿ । ಹೇ ಪುರುಹೂತ ಬಹುಭಿರಾಹೂತ ಯಾಮನಿ ಯಜ್ಞೇ ಜೀವಾ ವಯಂ ಜ್ಯೋತಿಃ ಸೂರ್ಯಮಶೀಮಹಿ । ಪ್ರತಿದಿನಂ ಪ್ರಾಪ್ನುಯಾಮ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ನಃ**—ನಮಗೆ । **ಕ್ರತುಂ**—ಕರ್ಮವಿಷಯಕವಾದ ಜ್ಞಾನವನ್ನು । **ಆ ಭರ**—ಒದಗಿಸು । **ಯಥಾ**—ಯಾವ ರೀತಿಯಲ್ಲಿ । **ಪಿತಾ**—ತಂದೆಯಾದವನು । **ಪುತ್ರೇಭ್ಯಃ**—ತನ್ನ ಪುತ್ರರಿಗೆ ಧನವನ್ನು ಕೊಡುವನೋ ಹಾಗೆ । **ನಃ**—ನಮಗೆ । **ಶಿಕ್ಷ**—ಧನವನ್ನು ಕೊಡು । **ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ । **ಅಸ್ಮಿನ್ ಯಾಮನಿ**—ಈ ಯಜ್ಞದಲ್ಲಿ । **ಜೀವಾಃ**—ನಿರಂತರರಾದ ನಾವು । **ಜ್ಯೋತಿಃ**—ಸೂರ್ಯನ ಜ್ಯೋತಿಯನ್ನು । **ಅಶೀಮಹಿ**—ಪ್ರತಿದಿನವೂ ಹೊಂದುವಂತಾಗಲಿ

ಭಾವಾರ್ಥ

ಎಲೈ ಇಂದ್ರನೇ, ನಮಗೆ ಕರ್ಮವಿಷಯಕವಾದ ಜ್ಞಾನವನ್ನು ಒದಗಿಸು ತಂದೆಯಾದವನು ತನ್ನ ಪುತ್ರರಿಗೆ ಧನವನ್ನು ಕೊಡುವಂತೆ ನಮಗೆ ಧನವನ್ನು ಕೊಡು ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ, ಈ ಯಜ್ಞದಲ್ಲಿ ನಿರತರಾದ ನಾವು ಪ್ರತಿದಿನವೂ ಸೂರ್ಯನ ಜ್ಯೋತಿಯನ್ನು ಹೊಂದುವಂತಾಗಲಿ.

English Translation

Bring to us, Indra, wisdom, as a father (gives knowledge) to his sons: bestow wealth upon us on this occasion, you the invoked of many, so that we, living at the solemnity, may (long) enjoy the light (of existence)

ಸಂಹಿತಾಪಾಠಃ

**ಮಾ ನೋ ಅಜ್ಞಾತಾ ವೃಜನಾ ದುರಾಧ್ಯೋ೩ ಮಾಶಿವಾಸೋ ಅವ ಕ್ರಮುಃ ।**
**ತ್ವಯಾ ವಯಂ ಪ್ರವತಃ ಶಶ್ವತೀರಪೋಽತಿ ಶೂರ ತರಾಮಸಿ ॥ ೨೭ ॥**

ಪದಪಾಠಃ

**ಮಾ । ನಃ । ಅಜ್ಞಾತಾಃ । ವೃಜನಾಃ । ದುಃಽಆಧ್ಯಃ । ಮಾ । ಅಶಿವಾಸಃ । ಅವ । ಕ್ರಮುಃ ।**
**ತ್ವಯಾ । ವಯಂ । ಪ್ರಽವತಃ । ಶಶ್ವತೀಃ । ಅಪಃ । ಅತಿ । ಶೂರ । ತರಾಮಸಿ ॥ ೨೭ ॥**

ಸಾಯಣಭಾಷ್ಯಂ

**ಹೇ ಇಂದ್ರ ಅಜ್ಞಾತಾ ಅಜ್ಞಾತಗಮನಾ ವೃಜನಾ ಹಿಂಸಕಾ ದುರಾಧ್ಯೋ ನೋಽಸ್ಮಾನ್ಮಾವ ಕ್ರಮುಃ । ಮಾವಚಕ್ರಮುಃ । ಹೇ ಶೂರ ತ್ವಯಾ ವಯಂ ವಸಿಷ್ಠಾಃ ಪ್ರವತಃ ಪ್ರವಣಕಾಃ ಸಂತಃ ಶಶ್ವತೀರ್ಬಹ್ವೀರಪೋಽತಿ ತರಾಮಸಿ । ಅತಿತರಾಮ ॥**

ಪ್ರತಿಪದಾರ್ಥ

(ಎಲೈ ಇಂದ್ರನೇ) **ಅಜ್ಞಾತಾಃ**—ನಮಗೆ ತಿಳಿಯದಂತೆ ಸಂಚರಿಸುವವರೂ, | **ವೃಜನಾಃ**—ನಮ್ಮ ಹಿಂಸಕರೂ | **ದುರಾಧ್ಯಃ**—ಕೇಡನ್ನು ಬಯಸುವವರೂ ಆದ ನಮ್ಮ ಶತ್ರುಗಳು| **ನಃ**—ನಮ್ಮನ್ನು| **ಮಾ ಅವ ಕ್ರಮುಃ**—ಆಕ್ರಮಿಸದಿರಲಿ | **ಅಶಿವಾಸಃ**—ನಮಗೆ ಅಮಂಗಳವನ್ನುಂಟುಮಾಡುವವರೂ | **ಮಾ**—ನಮ್ಮನ್ನು ಆಕ್ರಮಿಸದಿರಲಿ | **ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ | **ತ್ವಯಾ**—ನಿನ್ನಿಂದ ರಕ್ಷಿತವಾದ | **ವಯಂ**—ವಸಿಷ್ಠಗೋತ್ರೋತ್ಪನ್ನರಾದ ನಾವು | **ಪ್ರವತಃ**—ತರಣಸಾಧನವುಳ್ಳವರಾಗಿ | **ಶಶ್ವತೀಃ**—ಪ್ರಭೂತವಾದ | **ಅಪಃ**—ಉದಕಗಳನ್ನು | **ಅತಿ ತರಾಮಸಿ**—ದಾಟುವಂತಾಗಲಿ

ಭಾವಾರ್ಥ

ಎಲೈ ಇಂದ್ರನೇ, ನಮಗೆ ತಿಳಿಯದಂತೆ ರಹಸ್ಯವಾಗಿ ಸಂಚರಿಸುವವರೂ, ನಮ್ಮ ಹಿಂಸಕರೂ, ನಮಗೆ ಕೇಡನ್ನು ಬಯಸುವವರೂ ಆದ ನಮ್ಮ ಶತ್ರುಗಳು ನಮ್ಮನ್ನು ಆಕ್ರಮಿಸದಿರಲಿ ನಮಗೆ ಅಮಂಗಳವನ್ನುಂಟುಮಾಡುವವರೂ ನಮ್ಮನ್ನು ಆಕ್ರಮಿಸದಿರಲಿ ಪರಾಕ್ರಮಿಯಾದ ಎಲೈ ಇಂದ್ರನೇ, ನಿನ್ನಿಂದ ರಕ್ಷಿತರೂ, ವಸಿಷ್ಠಗೋತ್ರೋತ್ಪನ್ನರೂ ಆದ ನಾವು ತರಣಸಾಧನವುಳ್ಳವರಾಗಿ ಪ್ರಭೂತವಾದ ಉದಕಗಳನ್ನು ದಾಟುವಂತಾಗಲಿ

English Translation

Let no unknown, wicked, malevolent, malignant (enemies) overpower us may we, protected by you, cross over many waters.

---

## ಮೂವತ್ತಮೂರನೆಯ ಸೂಕ್ತವು

ಸಾಯಣಭಾಷ್ಯಂ

**ಶ್ವಿತ್ಯಂಚ ಇತಿ ಚತುರ್ದಶರ್ಚಂ ಷೋಡಶಂ ಸೂಕ್ತಂ | ಅತ್ರೇಯಮನುಕ್ರಮಣಿಕಾ | ಶ್ವಿತ್ಯಂಚಃ ಷಳೂನಾ ಸಂಸ್ತವೋ ವಸಿಷ್ಠಸ್ಯ ಸಪುತ್ರಸ್ಯೇಂದ್ರೇಣ ವಾ ಸಂವಾದ ಇತಿ | ಆದಿತೋ ನವಾನಾಂ ವಸಿಷ್ಠ ಋಷಿಃ | ವಸಿಷ್ಠಪುತ್ರಾಣಾಂ ಸ್ತೂಯಮಾನತ್ವಾತ್ತ ಏವ ದೇವತಾ | ವಿದ್ಯುತೋ ಜ್ಯೋತಿರಿತ್ಯಾದಿಭಿರ್ದಶಮ್ಯಾದಿಭಿಃ ಸ್ವಪುತ್ರೈರ್ವಸಿಷ್ಠಃ ಸ್ತೂಯತೇ | ಅತೋ ವಸಿಷ್ಠೋ ದೇವತಾ | ತ ಏವ ಋಷಯಃ | ಯಾ ತೇನೋಚ್ಯತ ಇತಿ ನ್ಯಾಯಾತ್ | ಅನುಕ್ತತ್ವಾತ್ತ್ರಿಷ್ಟುಪ್ ||**

**ಅನುವಾದವು—ಶ್ವಿತ್ಯಂಚ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಹದಿನಾಲ್ಕು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ **ಶ್ವಿತ್ಯಂಚಃ ಷಳೂನಾ ಸಂಸ್ತವೋ ವಸಿಷ್ಠಸ್ಯ ಸಪುತ್ರಸ್ಯೇಂದ್ರೇಣ ವಾ ಸಂವಾದಃ** ಎಂದು ಹೇಳಿರುವುದು ಈ ಸೂಕ್ತದ ಮೊದಲಿನ ಒಂಭತ್ತು ಋಕ್ಕುಗಳಿಗೆ ವಸಿಷ್ಠನು ಋಷಿಯು. ಈ ಒಂಭತ್ತು ಋಕ್ಕುಗಳಲ್ಲಿ ವಸಿಷ್ಠಪುತ್ರರ ವಿಷಯವು ಉಕ್ತವಾಗಿರುವುದರಿಂದ ವಸಿಷ್ಠಪುತ್ರರ ಸ್ತುತಿಯೇ ಈ ಋಕ್ಕುಗಳಿಗೆ ದೇವತೆಯು. **ವಿದ್ಯುತೋ ಜ್ಯೋತಿಃ** ಎಂದು ಮೊದಲಾಗುವ ಈ ಸೂಕ್ತದ ಮುಂದಿನ ಐದು ಋಕ್ಕುಗಳಲ್ಲಿ ವಸಿಷ್ಠಋಷಿಯ ಪ್ರಸ್ತಾಪವಿರುವುದರಿಂದ ಆ ಋಕ್ಕುಗಳಿಗೆ ವಸಿಷ್ಠನ ಸ್ತುತಿಯೇ ದೇವತೆಯು. ವಸಿಷ್ಠಪುತ್ರರೇ ಋಷಿಗಳು. ತ್ರಿಷ್ಟುಪ್ ಛಂದಸ್ಸು.

## ಸೂಕ್ತ—೩೩

ಮಂಡಲ—೭ ॥ ಅನುವಾಕ—೨ ॥ ಸೂಕ್ತ—೩೩ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ—೨೨, ೨೩, ೨೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೪ ॥

ಸಂಸ್ತವೋ ವಸಿಷ್ಠಸ್ಯ ಸಪುತ್ರಸ್ಯೇಂದ್ರೇಣ ವಾ ಸಂವಾದಃ

ಋಷಿಃ—೧-೯ ವಸಿಷ್ಠಃ । ೧೦-೧೪ ವಸಿಷ್ಠಪುತ್ರಾಃ ॥
ದೇವತಾ—೧-೯ ವಸಿಷ್ಠಪುತ್ರಾಃ । ೧೦-೧೪ ವಸಿಷ್ಠಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಶ್ವಿತ್ಯಂಚೋ ಮಾ ದಕ್ಷಿಣತಸ್ಕಪರ್ದಾ ಧಿಯಂಜಿನ್ವಾಸೋ ಅಭಿ ಹಿ ಪ್ರಮಂದುಃ
ಉತ್ತಿಷ್ಠನ್ವೋಚೇ ಪರಿ ಬರ್ಹಿಷೋ ನೄನ್ನ ಮೇ ದೂರಾದವಿತವೇ ವಸಿಷ್ಠಾಃ ॥

ಪದಪಾಠಃ

ಶ್ವಿತ್ಯಂಚಃ । ಮಾ । ದಕ್ಷಿಣತಃऽಕಪರ್ದಾಃ । ಧಿಯಂऽಜಿನ್ವಾಸಃ । ಅಭಿ । ಹಿ । ಪ್ರऽಮಂದುಃ ।
ಉತ್ऽತಿಷ್ಠನ್ । ವೋಚೇ । ಪರಿ । ಬರ್ಹಿಷಃ । ನೄನ್ । ನ । ಮೇ । ದೂರಾತ್ । ಅವಿತವೇ । ವಸಿಷ್ಠಾಃ ॥ ೧ ॥

ಸಾಯಣಭಾಷ್ಯಂ

ಶ್ವಿತ್ಯಂಚಃ । ಶ್ವಿತ್ಯಂ ಶ್ವೇತವರ್ಣಮಂಚಂತೀತಿ ಶ್ವಿತ್ಯಂಚಃ । ಶ್ವೇತವರ್ಣಾ ಇತ್ಯರ್ಥಃ । ಧಿಯಂಜಿನ್ವಾಸಃ ಕರ್ಮಣಾಂ ಪೂರಯಿತಾರೋ ದಕ್ಷಿಣತಸ್ಕಪರ್ದಾಃ । ದಕ್ಷಿಣೇ ಶಿರಸೋ ಭಾಗೇ ಕಪರ್ದಾಶ್ಚೂಡಾ ಯೇಷಾಂ ತೇ ದಕ್ಷಿಣತಸ್ಕಪರ್ದಾಃ । ಚೂಡಾಕರ್ಮಣಿ ದಕ್ಷಿಣತೋ ವಸಿಷ್ಠಾನಾಮಿತಿ ಸ್ಮರ್ಯತೇ । ಮಾ ಮಾಮಭಿ ಪ್ರಮಂದುಃ । ವಿದ್ಯಾಬಲೇನಾಭಿಪ್ರಾಹರ್ಷಯನ್ । ಯತೋ ಮಾಮಭಿ ಪ್ರಮಂದುರತೋ ಬರ್ಹಿಷೋ ಯಜ್ಞಾತ್ । ಪರೀತಿ ಪಂಚಮ್ಯರ್ಥಾನುವಾದಃ । ಉತ್ತಿಷ್ಠನ್ನಹಂ ನೄನ್ಯಜ್ಞಸ್ಯ ನೇತೄನ್ವೋಚೇ । ಬ್ರವೀಮಿ । ಮೇ ಮತ್ತೋ ದೂರಾದ್ವಸಿಷ್ಠಾ ವಸಿಷ್ಠಸ್ಯ ಮಮ ಪುತ್ರಾ ಅವಿತವೇ ಗಂತುಂ ನಾರ್ಹಂತೀತಿ ಶೇಷಃ ॥

ಪ್ರತಿಪದಾರ್ಥ

**ಶ್ವಿತ್ಯಂಚಃ**—ಶ್ವೇತವರ್ಣವುಳ್ಳವರೂ । **ಧಿಯಂಜಿನ್ವಾಸಃ**—ಪೂರ್ಣವಾಗಿ ಕರ್ಮಗಳನ್ನು ನಿರ್ವಹಿಸುವವರೂ । **ದಕ್ಷಿಣತಸ್ಕಪರ್ದಾಃ**—ತಲೆಯ ದಕ್ಷಿಣ (ಬಲ) ಭಾಗದಲ್ಲಿ ಶಿಖೆಯುಳ್ಳವರೂ ಆದ (ನನ್ನ ಪುತ್ರರು)। **ಮಾ**—ನನ್ನನ್ನು । **ಅಭಿಪ್ರಮಂದುಃ**—ತಮ್ಮ ವಿದ್ಯೆಯಿಂದ ಸಂತೋಷಗೊಳಿಸಿದ್ದಾರೆ **ಬರ್ಹಿಷಃ ಪರಿ**—ಯಜ್ಞಸ್ಥಾನದಿಂದ । **ಉತ್ತಿಷ್ಠನ್**—ಏಳುತ್ತಾ । **ನೄನ್**—ಯಜ್ಞನೇತೃಗಳಾದ ಅವರನ್ನು । **ವೋಚೇ**—ಕರೆಯುತ್ತೇನೆ. । **ಮೇ**—ನನಗಿಂತಲೂ । **ದೂರಾತ್**—ದೂರಪ್ರದೇಶದಲ್ಲಿ । **ವಸಿಷ್ಠಾಃ**—ವಸಿಷ್ಠಪುತ್ರರು । **ಅವಿತವೇ**—ಹೊರಟು ಹೋಗಲು । **ನ ಹಿ**—ಬಿಡುವುದಿಲ್ಲ.

### ಭಾವಾರ್ಥ

ಶ್ವೇತವರ್ಣವುಳ್ಳವರೂ, ಪೂರ್ಣವಾಗಿ ಕರ್ಮಗಳನ್ನು ನಿರ್ವಹಿಸುವವರೂ, ತಲೆಯ ಬಲಭಾಗದಲ್ಲಿ ಶಿಖೆಯುಳ್ಳವವರೂ ಆದ ವಾಸಿಷ್ಠರು ತಮ್ಮ ವಿದ್ಯೆಯಿಂದ ನನ್ನನ್ನು ಸಂತೋಷಗೊಳಿಸಿದ್ದಾರೆ ಯಜ್ಞಸ್ಥಾನದಿಂದ ಎದ್ದ ಮೇಲೆ ಯಜ್ಞನೇತೃಗಳಾದ ಅವರನ್ನು ಕರೆಯುತ್ತೇನೆ. ನನಗಿಂತಲೂ ದೂರಪ್ರದೇಶದಲ್ಲಿ ಈ ವಸಿಷ್ಠಪುತ್ರರಿರಲು ಅಥವಾ ಇಲ್ಲಿಂದ ದೂರಕ್ಕೆ ಹೋಗಲು ನಾನು ಬಿಡುವುದಿಲ್ಲ.

### English Translation

The white-complexioned accomplishers of holy ceremonies, wearing the lock of hair on the right side, have afforded me delight, when, rising up, I call the leaders (of rites) to the sacred grass · the Vasishthas, (my sons) should never be far from me.

### ವಿಶೇಷವಿಷಯಗಳು

ಈ ಸೂಕ್ತದಲ್ಲಿ ವಸಿಷ್ಠಋಷಿಗೂ ಅವರ ಪುತ್ರರಿಗೂ ಅಥವಾ ಇಂದ್ರನಿಗೂ ನಡೆದ ಸಂವಾದರೂಪವಾದ ವಿಷಯವು ಉಕ್ತವಾಗಿದ ೧-೯ ಋಕ್ಕುಗಳಲ್ಲಿ ವಸಿಷ್ಠಋಷಿಯು ತನ್ನ ಪುತ್ರರ ವಿಷಯವನ್ನೂ ೧೦-೧೪ ಋಕ್ಕುಗಳಲ್ಲಿ ವಸಿಷ್ಠಪುತ್ರರು ತಮ್ಮ ತಂದೆಯಾದ ವಸಿಷ್ಠಋಷಿಯ ವಿಷಯವನ್ನೂ ಹೇಳಿರುವರು

### ಸಂಹಿತಾಪಾಠಃ

ದೂರಾದಿಂದ್ರಮನಯನ್ನಾ ಸುತೇನ ತಿರೋ ವೈಶಂತಮತಿ ಪಾಂತಮುಗ್ರಂ ।
ಪಾಶದ್ಯುಮ್ನಸ್ಯ ವಾಯತಸ್ಯ ಸೋಮಾತ್ಸುತಾದಿಂದ್ರೋಽವೃಣೀತಾ ವಸಿ-
ಷ್ಠಾನ್ ॥ ೨ ॥

### ಪದಪಾಠಃ

ದೂರಾತ್ । ಇಂದ್ರಂ । ಅನಯನ್ । ಆ । ಸುತೇನ । ತಿರಃ । ವೈಶಂತಂ । ಅತಿ । ಪಾಂತಂ । ಉಗ್ರಂ ।
ಪಾಶಽದ್ಯುಮ್ನಸ್ಯ । ವಾಯತಸ್ಯ । ಸೋಮಾತ್ । ಸುತಾತ್ । ಇಂದ್ರಃ । ಅವೃಣೀತ । ವಸಿಷ್ಠಾನ್ ॥

### ಸಾಯಣಭಾಷ್ಯಂ

ಯದಾ ವಸಿಷ್ಠಸ್ಯ ಪುತ್ರಾಃ ಸುದಾಸಂ ರಾಜಾನಮಯಾಜಯನ್ ತದೈವ ಪಾಶದ್ಯುಮ್ನಾಖ್ಯೋಽಪಿ ರಾಜಾ ಸೋಮಾನ್ಯಷ್ಟುಮುದ್ಯಮಂ ಚಕಾರ । ತದಾ ತೇ ವಸಿಷ್ಠಪುತ್ರಾಃ ಪಾಶದ್ಯುಮ್ನಂ ತಿರಸ್ಕೃತ್ಯ ತದೀಯೇ ಯಾಗೇ ಸೋಮಂ ಪಿಬಂತಮಿಂದ್ರಂ ಮಂತ್ರಬಲೇನ ತಸ್ಮಾದಾಚ್ಛಿದ್ಯ ಸುದಾಸೋ ಯಜ್ಞೇ ಸ್ಥಾಪಯಾಮಾಸುಃ । ತದೇತದ್ವೃತ್ತಾಂತಂ ಕೀರ್ತಯನ್ ವಸಿಷ್ಠಃ ಸ್ವಸುತಾನನೇನ ಮಂತ್ರೇಣ ಸ್ತೌತಿ ॥ ವೈಶಂತಂ । ವೇಶಂತಃ ಪಲ್ವಲಂ । ಅತ್ರ ವೇಶಂತಶಬ್ದೇನ ಸೋಮಾಧಾರಕ್ಷಮಸೋ ಲಕ್ಷ್ಯತೇ । ತತ್ಸ್ಥಂ ಸೋಮಂ ಪಾಂತಂ ಪಿಬಂತಮುಗ್ರಮುದ್ಗೂರ್ಣಮಿಂದ್ರಂ ಸುತೇನ ಸುದಾಸೋ ಯಜ್ಞೇಽಭಿಷುತೇನ ಸೋಮೇನ ಹೇತುನಾ ತಿರಃ ಪಾಶದ್ಯುಮ್ನಂ ತಿರಸ್ಕೃತ್ಯ ದೂರಾದಾನಯನ್ । ವಸಿಷ್ಠಾ ಮಂತ್ರಬಲೇ-

ನಾನೀತವಂತಃ । ಇಂದ್ರೋಽಪಿ ವಾಯತಸ್ಯ ವಯತಃ ಪುತ್ರಸ್ಯ ಪಾಶದ್ಯುಮ್ನಸ್ಯ । ದ್ವಿತೀಯಾರ್ಥೇ ಷಷ್ಠೀ । ವಾಯತಂ ಪಾಶದ್ಯುಮ್ನಮತ್ಯೆತಿಹಾಯ ಸುದಾಸೋ ಯಜ್ಞೇಽಭಿಷುತಾತ್ಸೋಮಾದ್ಧೇತೋ-ರ್ವಸಿಷ್ಠಾನ್ವಸಿಷ್ಠಸ್ಯ ಪುತ್ರಾನವೃಣೀತ । ಪಾಶದ್ಯುಮ್ನಸ್ಯ ಸೋಮಯಾಗೇ ಚಮಸಸ್ಥಂ ಸೋಮಂ ಪಿಬ-ನ್ನಪೀಂದ್ರಸ್ತಂ ಪಾಶದ್ಯುಮ್ನಂ ತಿರಸ್ಕೃತ್ಯ ಮಂತ್ರಸಾಮರ್ಥ್ಯಬಲೇನ ಸುದಾಸೋ ಯಜ್ಞ ಆಹವನ-ಕಾಲೇ ವಸಿಷ್ಠಾನಾಜಗಾಮೇತ್ಯರ್ಥಃ ॥

### ಪ್ರತಿಪದಾರ್ಥ

**ವೈಶಂತಂ**—ಕೊಳದಂತೆ ಆಳವಾದ ಚಮಸಪಾತ್ರೆಯಲ್ಲಿದ್ದ ಸೋಮವನ್ನು । **ಪಾಂತಂ**—ಪಾನಮಾಡುತ್ತಿದ್ದವನೂ । **ಉಗ್ರಂ**—ಭಯಂಕರನೂ ಆದ । **ಇಂದ್ರಂ**—ಇಂದ್ರನನ್ನು । **ಸುತೇನ**—ಸುದಾಸನ ಯಜ್ಞದಲ್ಲಿ ಹಿಂಡಲ್ಪಟ್ಟ ಸೋಮದನಿಮಿತ್ತವಾಗಿ । **ತಿರಃ**—ಪಾಶದ್ಯುಮ್ನನನ್ನು ತಿರಸ್ಕರಿಸಿ । **ದೂರಾತ್**—ಅತಿ ದೂರದಿಂದಲೇ । **ಆ ಅನಯನ್**—ಕರೆತಂದರು. **ಇಂದ್ರಃ**—ಇಂದ್ರನಾದರೋ । **ವಾಯತಃ**—ವಯತಪುತ್ರನಾದ । **ಪಾಶದ್ಯು-ಮ್ನಸ್ಯ**—ಪಾಶದ್ಯುಮ್ನನನ್ನು । **ಅತಿ**—ಪರಿತ್ಯಜಿಸಿ । **ಸೋಮಾತ್**—ಸುದಾಸನ ಸೋಮಕ್ಕಾಗಿ । **ವಸಿಷ್ಠಾನ್**—ಅವನ ಪುರೋಹಿತರಾದ ವಸಿಷ್ಠಪುತ್ರರನ್ನೇ । **ಅವೃಣೀತ**—ಆರಿಸಿ ಹಿಂಬಾಲಿಸಿದನು.

### ಭಾವಾರ್ಥ

ಕೊಳದಂತೆ ಆಳವಾದ ಚಮಸಪಾತ್ರೆಯಲ್ಲಿದ್ದ ಸೋಮವನ್ನು ಪಾನಮಾಡುತ್ತಿದ್ದವನೂ, ಭಯಂಕರನೂ ಆದ ಇಂದ್ರನನ್ನು ಸುದಾಸನ ಯಜ್ಞದಲ್ಲಿ ಹಿಂಡಲ್ಪಟ್ಟ ಸೋಮದ ನಿಮಿತ್ತವಾಗಿ ಪಾಶದ್ಯುಮ್ನನನ್ನು ತಿರಸ್ಕರಿಸಿ ಅತಿ ದೂರದಿಂದಲೇ ಪಾಶದ್ಯುಮ್ನನನ್ನು ಪರಿತ್ಯಜಿಸಿ ಸುದಾಸನ ಸೋಮಕ್ಕಾಗಿ ಅವನ ಪುರೋಹಿತರಾದ ವಸಿಷ್ಠಪುತ್ರರನ್ನೇ ಆರಿಸಿ ಹಿಂಬಾಲಿಸಿದನು.

### English Translation

Disgracing (Pashadyumna), they brought from afar the fierce Indra, when drinking the ladle of Soma at his sacrifice, to (receive) the libation (of Sudas). Indra, hastened from the effused Soma of Pashadyumna, the son of Vayata to the Vashisthas

### ಸಂಹಿತಾಪಾಠಃ

ಏವೇನ್ನು ಕಂ ಸಿಂಧುಮೇಭಿಸ್ತತಾರೇವೇನ್ನು ಕಂ ಭೇದಮೇಭಿರ್ಜಘಾನ ।
ಏವೇನ್ನು ಕಂ ದಾಶರಾಜ್ಞೇ ಸುದಾಸಂ ಪ್ರಾವದಿಂದ್ರೋ ಬ್ರಹ್ಮಣಾ ವೋ ವ-ಸಿಷ್ಠಾಃ ॥ ೩ ॥

ಪದಪಾಠಃ

ಏವ । ಇತ್ । ನು । ಕಂ । ಸಿಂಧುಂ । ಏಭಿಃ । ತತಾರ । ಏವ । ಇತ್ । ನು । ಕಂ । ಭೇದಂ । ಏಭಿಃ । ಜಘಾನ ।

ಏವ । ಇತ್ । ನು । ಕಂ । ದಾಶऽರಾಜ್ಞೇ । ಸುऽದಾಸಂ । ಪ್ರ । ಆವತ್ । ಇಂದ್ರಃ । ಬ್ರಹ್ಮಣಾ । ವಃ । ವಸಿಷ್ಠಾಃ ॥ ೩ ॥

ಸಾಯಣಭಾಷ್ಯಂ

ಏವೇತ್ ಯಥಾ ಪಾಶದ್ಯುಮ್ನಸ್ಯ ಸವಾಖ್ಯೇ ಸೋಮಯಾಗೇ ಚಮಸಸ್ಥಂ ಸೋಮಂ ಪಿಬಂತಮಪೀಂದ್ರಂ ವಸಿಷ್ಠೈಃ ಸುದಾಃ ಪ್ರಾಪ್ತವಾನ್ ಏವಮೇವ ಸಿಂಧುಂ ನದೀಮೇಭಿರ್ವಸಿಷ್ಠೈಃ ಕಂ ಸುಖೇನ ತತಾರ । ತೀರ್ಣ ಆಸೀತ್ । ನ್ವಿತಿ ಪೂರಣಃ । ತಥಾ ಚ ನಿಗಮಾಂತರಂ । ಅರ್ಣಾಂಸಿ ಚಿತ್ಪಪ್ರಥಾನಾ ಸುದಾಸೇ । ಋ. ೭-೧೮-೫ । ಇತಿ । ಏವೇದೇವಮೇವ ಭೇದಂ ಭೇದನಾಮಕಂ ಶತ್ರುಮಪ್ಯೇಭಿರ್ವಸಿಷ್ಠೈರೇವ ಜಘಾನ । ಅಥ ಪ್ರತ್ಯಕ್ಷಸ್ತುತಿಃ । ಏವೇದೇವಮೇವ ಹೇ ವಸಿಷ್ಠಾಃ ವೋ ಯುಷ್ಮದೀಯೇನ ಬ್ರಹ್ಮಣಾ ಸ್ತೋತ್ರೇಣ ದಾಶರಾಜ್ಞೇ ದಶಭೀ ರಾಜಭಿಃ ಸಹ ಯುದ್ಧೇ ಪ್ರವೃತ್ತೇ ಸತಿ ಸುದಾಸಂ ರಾಜಾನಮಿಂದ್ರಃ ಪ್ರಾವತ್ । ಪ್ರಾರಕ್ಷತ್ । ತಥಾ ಚ ನಿಗಮಾಂತರಂ । ದಶ ರಾಜಾನಃ ಸಮಿತಾ ಅಯಜ್ಯವಃ ಸುದಾಸಮಿಂದ್ರಾವರುಣಾ ನ ಯುಯುಧುಃ । ಋ ೭-೮೩-೭ । ಇತಿ । ದಾಶರಾಜ್ಞೇ ಪರಿಯತ್ತಾಯ ವಿಶ್ವತಃ । ಋ ೭-೮೩-೮ । ಇತಿ ಚ ॥

ಪ್ರತಿಪದಾರ್ಥ

**ಏವೇತ್**—ಇದೇಪ್ರಕಾರವಾಗಿ । **ಏಭಿಃ**—ಈವಸಿಷ್ಠರೊಂದಿಗೆ । **ಸಿಂಧುಂ**—ಸಿಂಧೂನದಿಯನ್ನು । **ಕಂ**—ಸುಖವಾಗಿ । **ತತಾರ ನು**—(ಸುದಾಸನು) ದಾಟಿದನು **ಏವೇತ್**—ಇದೇ ರೀತಿಯಲ್ಲಿ । **ಏಭಿಃ**—ಈ ವಸಿಷ್ಠರ ಸಹಾಯದಿಂದಲೇ । **ಭೇದಂ**—ಭೇದನೆಂಬ ಶತ್ರುವನ್ನೂ । **ಜಘಾನ**—ಕೊಂದನು । **ಏವೇತ್**—ಇದರಂತೆಯೇ । **ವಸಿಷ್ಠಾಃ**—ಎಲೈ ವಸಿಷ್ಠಗೋತ್ರೋತ್ಪನ್ನರಾದ ಋಷಿಗಳೇ । **ವಃ**—ನಿಮ್ಮಿಂದ ಪಠಿತವಾದ । **ಬ್ರಹ್ಮಣಾ**—ಸ್ತುತಿಯಿಂದ ತೃಪ್ತನಾಗಿ । **ಇಂದ್ರಃ**—ಇಂದ್ರನು । **ದಾಶರಾಜ್ಞೇ**—ಹತ್ತು ಮಂದಿ ರಾಜರೊಡನೆ ನಡೆದ ಯುದ್ಧದಲ್ಲಿ । **ಸುದಾಸಂ**—ಸುದಾಸನನ್ನು । **ಪ್ರಾವತ್**—ರಕ್ಷಿಸಿದನು

ಭಾವಾರ್ಥ

ಎಲೈ ವಸಿಷ್ಠರೇ, ಯಾವ ರೀತಿ ನಿಮ್ಮ ಪ್ರಭಾವದಿಂದ ಇಂದ್ರನು ಬೇರೆ ಕಡೆಯಲ್ಲಿ ಸೋಮಪಾನ ಮಾಡುತ್ತಿದ್ದರೂ, ಸುದಾಸನಿಗಾಗಿ ಆ ಜಾಗವನ್ನು ಬಿಟ್ಟು ಸುದಾಸನಲ್ಲಿಗೆ ಬಂದನೋ, ಅದೇರೀತಿ, ನಿಮ್ಮೊಂದಿಗೆ ಈ ಸುದಾಸನು ನದಿಯನ್ನೂ ಸುಖವಾಗಿ ದಾಟಿದನು ಈ ನಿಮ್ಮ ಸಹಾಯದಿಂದಲೇ ಭೇದನೆಂಬ ಶತ್ರುವನ್ನು ಕೊಂದನು. ಹಾಗೆಯೇ, ನಿಮ್ಮಿಂದ ಪಠಿತವಾದ ಸ್ತುತಿಯಿಂದ ತೃಪ್ತನಾಗಿ, ಹತ್ತುಮಂದಿ ರಾಜರೊಡನೆ ಒಟ್ಟಿಗೆ ನಡೆಸಿದ ಯುದ್ಧದಲ್ಲೂ ಸಹ ಇಂದ್ರನು ಈ ಸುದಾಸನನ್ನು ರಕ್ಷಿಸಿದನು

## English Translation

In the same manner was he, (Sudas), enabled by them easily to cross the Sindhu river: in the same manner, through them he easily slew his foe:

so in like manner, Vasishthas, through your prayers, did Indra defend Sudas in the war with the ten kings

ಸಂಹಿತಾಪಾಠಃ

ಜುಷ್ಟೀ ನರೋ ಬ್ರಹ್ಮಣಾ ವಃ ಪಿತೄಣಾಮಕ್ಷಮವ್ಯಯಂ ನ ಕಿಲಾ ರಿಷಾಥ ।
ಯಚ್ಛಕ್ವರೀಷು ಬೃಹತಾ ರವೇಣೇಂದ್ರೇ ಶುಷ್ಮಮದಧಾತಾ ವಸಿಷ್ಠಾಃ ॥ ೪ ॥

ಪದಪಾಠಃ

ಜುಷ್ಟೀ । ನರಃ । ಬ್ರಹ್ಮಣಾ । ವಃ । ಪಿತೄಣಾಂ । ಅಕ್ಷಂ । ಅವ್ಯಯಂ । ನ । ಕಿಲ । ರಿಷಾಥ ।
ಯತ್ । ಶಕ್ವರೀಷು । ಬೃಹತಾ । ರವೇಣ । ಇಂದ್ರೇ । ಶುಷ್ಮಂ । ಅದಧಾತ । ವಸಿಷ್ಠಾಃ ॥ ೪ ॥

ಸಾಯಣಭಾಷ್ಯಂ

ಹೇ ನರಃ ವೋ ಯುಷ್ಮದೀಯೇನ ಬ್ರಹ್ಮಣಾ ಸ್ತೋತ್ರೇಣ ಪಿತೄಣಾಂ ಜುಷ್ಟೀ ಪ್ರೀತಿರ್ಭವತಿ । ಪಿತೄಣಾಮಿತ್ಯನೇನ ಪಾರೋಕ್ಷ್ಯೇಣ ವಸಿಷ್ಠಸ್ಯೈವ ಕೀರ್ತನಂ । ಅಹಂ ಪ್ರೀತೋ ಭವಾಮೀತ್ಯರ್ಥಃ । ಅಥೇದಾನೀಂ ಸ್ವಮಾಶ್ರಮಂ ಗಂತುಮುದ್ಯತೋಽಹಮಕ್ಷಂ ರಥಸ್ಯಾಕ್ಷಮವ್ಯಯಂ । ವ್ಯಯಾಮಿ ॥ ಲಡರ್ಥೇ ಲಙ್ ॥ ಚಾಲಯಾಮೀತ್ಯರ್ಥಃ । ಯೂಯಂ ನ ಕಿಲ ರಿಷಾಥ ನ ಚ ಕ್ಷೀಣಾ ಭವಥ ಹೇ ವಸಿಷ್ಠಾಃ ಯದ್ಯಸ್ಮಾಚ್ಛಕ್ವರೀಷ್ವೃಕ್ಷು ಬೃಹತಾ ಶ್ರೇಷ್ಠೇನ ರವೇಣ ಸಾಮ್ನೇಂದ್ರೇ ಶುಷ್ಮಂ ಬಲಮದಧಾತ ಅಧಾರಯತ ॥

ಪ್ರತಿಪದಾರ್ಥ

**ನರಃ**—ನೇತೃಗಳಾದ ಎಲೈ ವಸಿಷ್ಠರೇ । **ವಃ**—ನಿಮ್ಮ । **ಬ್ರಹ್ಮಣಾ**—ಸ್ತುತಿಯಿಂದಲೇ । **ಪಿತೄಣಾಂ**—ಪಿತೃಗಳಿಗೆ । **ಜುಷ್ಟೀ**—ತೃಪ್ತಿಯುಂಟಾಗುತ್ತದೆ । **ಅಕ್ಷಂ**—ರಥದ ಅಚ್ಚನ್ನು । **ಅವ್ಯಯಂ**—ನಾನು ಚಲಿಸುವಂತೆ ಮಾಡಿದ್ದೇನೆ । **ವಸಿಷ್ಠಾಃ**—ಎಲೈ ವಸಿಷ್ಠವಂಶೋತ್ಪನ್ನರಾದ ಋಷಿಗಳೇ । **ಯತ್**—ಯಾವ ನಿಮ್ಮ ಮಹಿಮೆಯಿಂದ **ಶಕ್ವರೀಷು**—ಶಕ್ವರೀ ಎಂಬ ಉತ್ತಮವಾದ ಛಂದಸ್ಸುಗಳಿಂದ ಅರ್ಪಿತವಾದುದೂ । **ಬೃಹತಾ**—ಶ್ರೇಷ್ಠವಾದುದೂ ಆದ । **ರವೇಣ**—ನಿಮ್ಮ ಸಾಮಗಾನದಿಂದ । **ಇಂದ್ರೇ**—ಇಂದ್ರನಲ್ಲಿ । **ಶುಷ್ಮಂ**—ಬಲವನ್ನು । **ಅದಧಾತ**—ತುಂಬಿದಿರೋ (ಅದುದರಿಂದಲೇ) **ನ ಕಿಲ ರಿಷಾಥ**—ನೀವು ಕೊಂಚವೂ ಕಾಲಹರಣಮಾಡಬೇಡಿರಿ.

ಭಾವಾರ್ಥ

ನೇತೃಗಳಾದ ಎಲೈ ವಸಿಷ್ಠರೇ, ನಿಮ್ಮ ಸ್ತುತಿಯಿಂದಲೇ ಪಿತೃಗಳಿಗೆ ತೃಪ್ತಿಯುಂಟಾಗುತ್ತದೆ. ರಥದ ಅಚ್ಚನ್ನು ನಾನು ಚಲಿಸುವಂತೆ ಮಾಡಿದ್ದೇನೆ. ಎಲೈ ವಸಿಷ್ಠವಂಶೋತ್ಪನ್ನರಾದ ಋಷಿಗಳೇ, ಯಾವ ನಿಮ್ಮ ಮಹಿಮೆಯಿಂದ ಶಕ್ವರೀ ಎಂಬ ಉತ್ತಮವಾದ ಛಂದಸ್ಸುಗಳ ಪಠನದಿಂದ ಅರ್ಪಿತವಾದುದೂ, ಶ್ರೇಷ್ಠವಾದುದೂ ಆದ ನಿಮ್ಮ ಸಾಮಗಾನದಿಂದ ಇಂದ್ರನಲ್ಲಿ ಬಲವನ್ನು ತುಂಬಿದಿರೋ ಆದುದರಿಂದಲೇ ನೀವು ಕೊಂಚವೂ ಕಾಲಹರಣವನ್ನು ಮಾಡಬೇಡಿರಿ.

English Translation

By your prayers, leaders (of rites), is effected the gratification of your progenitors I have set in motion the axle (of the chariot) be not you inert, for by your sacred metres, Vasishthas. (chaunted) with a loud voice, you sustain vigour in Indra.

ಸಂಹಿತಾಪಾಠಃ

ಉದ್ದ್ಯಾಮಿವೇತ್ತೃಷ್ಣಜೋ ನಾಥಿತಾಸೋಽದೀಧಯುರ್ದಾಶರಾಜ್ಞೇ ವೃತಾಸಃ।
ವಸಿಷ್ಠಸ್ಯ ಸ್ತುವತ ಇಂದ್ರೋ ಅಶ್ರೋದುರುಂ ತೃತ್ಸುಭ್ಯೋ ಅಕೃಣೋದು ಲೋಕಂ ॥ ೫ ॥

ಪದಪಾಠಃ

ಉತ್ । ದ್ಯಾಂಽಇವ । ಇತ್ । ತೃಷ್ಣಽಜಃ । ನಾಥಿತಾಸಃ । ಅದೀಧಯುಃ । ದಾಶಽರಾಜ್ಞೇ । ವೃತಾಸಃ। ವಸಿಷ್ಠಸ್ಯ । ಸ್ತುವತಃ । ಇಂದ್ರಃ । ಅಶ್ರೋತ್ । ಉರುಂ । ತೃತ್ಸುಽಭ್ಯಃ । ಅಕೃಣೋತ್ । ಊಂ ಇತಿ ಲೋಕಂ ॥ ೫ ॥

ಸಾಯಣಭಾಷ್ಯಂ

ತೃಷ್ಣಜೋ ಜಾತತೃಷ್ಣಾ ವೃತಾಸಸ್ತೃತ್ಸುಭೀ ರಾಜಭಿರ್ವೃತಾ ನಾಥಿತಾಸೋ ವೃಷ್ಟಿಂ ಯಾಚಮಾನಾ ವಸಿಷ್ಠಾ ದ್ಯಾಮಿವಾದಿತ್ಯಮಿವೇಂದ್ರಂ ದಾಶರಾಜ್ಞೇ ದಶಾನಾಂ ರಾಜ್ಞಾಂ ಸಂಗ್ರಾಮ ಉದದೀಧಯುಃ । ಉದದೀಧಯನ್ । ಸ್ತುವತೋ ವಸಿಷ್ಠಸ್ಯ ಸ್ತೋತ್ರಮಿಂದ್ರೋಽಶ್ರೋತ್ । ಅಶೃಣೋಚ್ಚ । ಉರುಂ ವಿಸ್ತೀರ್ಣಂ ಲೋಕಂ ತೃತ್ಸುಭ್ಯೋ ರಾಜಭ್ಯೋಽಕೃಣೋತ್ । ಅಕರೋಚ್ಚ । ಅದದಾಚ್ಚೇತ್ಯರ್ಥಃ ॥

ಪ್ರತಿಪದಾರ್ಥ

ತೃಷ್ಣಜಃ—ಬಾಯಾರಿಕೆಯಿಂದ ಕೂಡಿದವರೂ । ವೃತಾಸಃ—ತೃತ್ಸುಸಂಜ್ಞಕರಾದ ರಾಜರಿಂದ ಪರಿವೃತರಾದವರೂ । ನಾಥಿತಾಸಃ—ವೃಷ್ಟಿಯನ್ನು ಯಾಚಿಸುತ್ತಿದ್ದವರೂ ಆದ ವಸಿಷ್ಠರು । ದಾಶರಾಜ್ಞೆ—ಹತ್ತು ಮಂದಿ ರಾಜರೊಡನೆ ನಡೆದ ಯುದ್ಧದಲ್ಲಿ । (ಇಂದ್ರಂ—ಇಂದ್ರನನ್ನು) ದ್ಯಾಂ ಇವ—ಆದಿತ್ಯನಂತೆ । ಉದದೀಧಯುಃ—ಪ್ರಕಾಶಿಸುವಂತೆ ಮಾಡಿದರು । ಸ್ತುವತಃ—ಸ್ತುತಿಸುತ್ತಿದ್ದ । ವಸಿಷ್ಠಸ್ಯ—ವಸಿಷ್ಠನ ಸ್ತುತಿಯನ್ನು । ಇಂದ್ರಃ—ಇಂದ್ರನು । ಅಶ್ರೋತ್—ಕೇಳಿದನು । ತೃತ್ಸುಭ್ಯಃ—ತೃತ್ಸುಸಂಜ್ಞಕರಾದ ರಾಜರಿಗೆ । ಉರುಂ—ಅತಿವಿಸ್ತೃತವಾದ । ಲೋಕಂ—ರಾಜ್ಯವನ್ನು । ಅಕೃಣೋತ್—ನಿರ್ಮಿಸಿಕೊಟ್ಟನು.

ಭಾವಾರ್ಥ

ಬಾಯಾರಿಕೆಯಿಂದ ಕೂಡಿದವರೂ, ತೃತ್ಸುಸಂಜ್ಞಕರಾದ ರಾಜರಿಂದ ಪರಿವೃತರಾದವರೂ ವೃಷ್ಟಿಯನ್ನು ಯಾಚಿಸುತ್ತಿದ್ದವರೂ ಆದ ವಸಿಷ್ಠರು ಹತ್ತು ಮಂದಿ ರಾಜರೊಡನೆ ನಡೆದ ಯುದ್ಧದಲ್ಲಿ ಇಂದ್ರನನ್ನು ಆದಿತ್ಯನಂತೆ ಪ್ರಕಾಶಿಸುವಂತೆ ಮಾಡಿದರು. ಇಂದ್ರನು ವಸಿಷ್ಠನ ಸ್ತುತಿಯನ್ನು ಕೇಳಿದನು. ತೃತ್ಸುಸಂಜ್ಞಕರಾದ ರಾಜರಿಗೆ ಅತಿವಿಸ್ತೃತವಾದ ರಾಜ್ಯವನ್ನು ನಿರ್ಮಿಸಿಕೊಟ್ಟನು.

English Translation

Suffering from thirst, soliciting (rain), supported (by the Tritsus in the war with the ten Rajas, (the Vasishthas) made Indra radiant as the sun: Indra heard (the praises) of Vasishtha glorifying him, and bestowed a spacious region on the Tritsus.

ಸಂಹಿತಾಪಾಠಃ

ದಂಡಾ ಇವೇದ್ಗೋಅಜನಾಸ ಆಸನ್ಪರಿಚ್ಛಿನ್ನಾ ಭರತಾ ಅರ್ಭಕಾಸಃ ।

ಅಭವಚ್ಚ ಪುರಏತಾ ವಸಿಷ್ಠ ಆದಿತ್ತೃತ್ಸೂನಾಂ ವಿಶೋ ಅಪ್ರಥಂತ ॥ ೬ ॥

ಪದಪಾಠಃ

ದಂಡಾಃऽಇವ । ಇತ್ । ಗೋऽಅಜನಾಸಃ । ಆಸನ್ । ಪರಿऽಛಿನ್ನಾಃ । ಭರತಾಃ । ಅರ್ಭಕಾಸಃ ।

ಅಭವತ್ । ಚ । ಪುರಃऽಏತಾ । ವಸಿಷ್ಠಃ । ಆತ್ । ಇತ್ । ತೃತ್ಸೂನಾಂ । ವಿಶಃ । ಅಪ್ರಥಂತ ॥ ೬ ॥

ಸಾಯಣಭಾಷ್ಯಂ

ಗೋಅಜನಾಸೋ ಗವಾಂ ಪ್ರೇರಕಾ ದಂಡಾ ಇವ ಯಥಾ ದಂಡಾಃ ಪರಿಚ್ಛಿನ್ನಪತ್ರೋಪಶಾಖಾ ಭವಂತಿ ತದ್ವದ್ಭರತಾಃ । ತೃತ್ಸೂನಾಮೇವ ರಾಜ್ಞಾಂ ಭರತಾ ಇತಿ ನಾಮಾಂತರೇಣೋಪಾದಾನಂ । ಶತ್ರುಭಿಃ ಪರಿಚ್ಛಿನ್ನಾ ಏವಾಸನ್ । ಅರ್ಭಕಾಸೋಽರ್ಭಕಾ ಅಲ್ಪಾಶ್ಚಾಸನ್ । ಆದಿತ್ಪರಿಚ್ಛಿನ್ನತ್ವಾದನಂತರಮೇವ ತೇಷಾಂ ತೃತ್ಸೂನಾಂ ವಸಿಷ್ಠಃ ಪುರಏತಾ ಪುರೋಹಿತೋಽಭವಚ್ಚ । ತತ್ಪೌರೋಹಿತ್ಯಸಾಮರ್ಥ್ಯಾತ್ತೃತ್ಸೂನಾಂ ವಿಶಃ ಪ್ರಜಾಃ ಅಪ್ರಥಂತ । ಅವರ್ಧಂತ ॥

ಪ್ರತಿಪದಾರ್ಥ

**ಗೋಅಜನಾಸಃ**—ಗೋವುಗಳನ್ನು ಹೊಡೆಯಲು ಸಿದ್ಧಪಡಿಸುವ । **ದಂಡಾ ಇವ** — ಕೋಲುಗಳಿಗೆ| ಯಾವ ರೀತಿ ಪತ್ರಾದಿಗಳೆಲ್ಲವೂ ಬಿಡಿಸಿ ಅವು ನುಣ್ಣಗಿರುವುವೋ ಹಾಗೆ । **ಭರತಾಃ**—ಈ ಭರತರು (ತೃತ್ಸುಗಳು) । **ಪರಿಚ್ಛಿನ್ನಾ ಇತ್**—ಶತ್ರುಗಳಿಂದ ಪೂರ್ಣವಾಗಿ ಅಪಹರಿಸಲ್ಪಟ್ಟ ಧನವುಳ್ಳವರಾಗಿಯೇ । **ಆಸನ್**—ಆದರು. । **ಅರ್ಭಕಾಸಃ**—ಅತ್ಯಲ್ಪರೂ ಆದರು. । **ಆದಿತ್**—ಆ ಒಡನೆಯೇ । **ತೃತ್ಸೂನಾಂ**—ಈ ತೃತ್ಸುಗಳಿಗೆ । **ವಸಿಷ್ಠಃ**—ವಸಿಷ್ಠನು । **ಪುರಏತಾ**—ಪುರೋಹಿತನಾಗಿ । **ಅಭವಚ್ಚ**—ಆದನು. । **ವಿಶಃ**—(ತತ್ಫಲವಾಗಿ) ಅವರ ಪ್ರಜೆಗಳೆಲ್ಲ **ಅಪ್ರಥಂತ**—ವೃದ್ಧಿಯನ್ನು ಪಡೆದರು.

ಭಾವಾರ್ಥ

ಗೋವುಗಳನ್ನು ಹೊಡೆಯಲು ಸಿದ್ಧಪಡಿಸುವ ಕೋಲುಗಳಿಗೆ ಪರ್ಣಾದಿಗಳೆಲ್ಲವನ್ನೂ ಬಿಡಿಸಿ ಅವನ್ನು ನುಣ್ಣಗೆ ಮಾಡುವಂತೆ ತೃತ್ಸುಗಳು ಶತ್ರುಗಳಿಂದ ಪೂರ್ಣವಾಗಿ ಅಪಹರಿಸಲ್ಪಟ್ಟ ಧನವುಳ್ಳವರಾಗಿ ರಿಕ್ತರಾದರು. ಅತ್ಯಲ್ಪರೂ ಆದರು. ಆ ಒಡನೆಯೇ, ಈ ತೃತ್ಸುಗಳಿಗೆ ವಸಿಷ್ಠನು ಪುರೋಹಿತನಾಗಿ ಆದನು ತತ್ಫಲವಾಗಿ ಅವರ ಪ್ರಜೆಗಳೆಲ್ಲರೂ ವೃದ್ಧಿಯನ್ನು ಪಡೆದರು

English Translation

The Bharatas, inferior (to their foes), were shorn (of their positions), like the staves for driving cattle, (stripped of their leaves and branches) : but Vashistha became their family priest, and the people of the Tritsus prospered,

ಸಂಹಿತಾಪಾಠಃ

ತ್ರಯಃ ಕೃಣ್ವಂತಿ ಭುವನೇಷು ರೇತಸ್ತಿಸ್ರಃ ಪ್ರಜಾ ಆರ್ಯಾ ಜ್ಯೋತಿರಗ್ರಾಃ
ತ್ರಯೋ ಘರ್ಮಾಸ ಉಷಸಂ ಸಚಂತೇ ಸರ್ವಾ ಇತ್ತಾ ಅನು ವಿದುರ್ವಸಿಷ್ಠಾಃ ॥ ೭ ॥

ಪದಪಾಠಃ

ತ್ರಯಃ । ಕೃಣ್ವಂತಿ । ಭುವನೇಷು । ರೇತಃ । ತಿಸ್ರಃ । ಪ್ರಜಾಃ । ಆರ್ಯಾಃ । ಜ್ಯೋತಿಃಽಅಗ್ರಾಃ ।
ತ್ರಯಃ । ಘರ್ಮಾಸಃ । ಉಷಸಂ । ಸಚಂತೇ । ಸರ್ವಾನ್ । ಇತ್ । ತಾನ್ । ಅನು । ವಿದುಃ । ವಸಿಷ್ಠಾಃ ॥

ಸಾಯಣಭಾಷ್ಯಂ

ಭುವನೇಷು ಪೃಥಿವ್ಯಂತರಿಕ್ಷದ್ಯುಷು ತ್ರಯೋಽಗ್ನಿವಾಯುಸೂರ್ಯಾ ಯಥಾಕ್ರಮೇಣ ರೇತೋ ವಿಶ್ವಸ್ಯ ಧಾರಕಮುದಕಂ ಕೃಣ್ವಂತಿ । ಕುರ್ವಂತಿ । ತೇಷಾಂ ತ್ರಯಾಣಾಂ ಜ್ಯೋತಿರಗ್ರಾ ಆದಿತ್ಯಪ್ರಮುಖಾ ಆರ್ಯಾಃ ಶ್ರೇಷ್ಠಾಸ್ತಿಸ್ರಃ ಪ್ರಜಾ ಭವಂತಿ । ತೇ ಚ ತ್ರಯೋಽಗ್ನಿವಾಯುಸೂರ್ಯಾ ಘರ್ಮಾಸೋ ದೀಪ್ಯಮಾನಾ ಉಷಸಂ ಸಚಂತೇ । ಸಮುಪಯಂತಿ । ದುಜ್ಞಾನಾತ್ಸರ್ವಾನಿತ್ಸರ್ವಾನೇವ ತಾನ್ವಸಿಷ್ಠಾ ಅನು ವಿದುಃ । ಅಭಿಜಾನಂತಿ । ತೇಷಾಂ ರಹಸ್ಯವಿಜ್ಞಾನಾದಿಯಮಪಿ ವಸಿಷ್ಠಾನಾಮೇವ ಸ್ತುತಿಃ । ತಥಾ ಚ ಶಾಟ್ಯಾಯನಕಂ । ತ್ರಯಃ ಕೃಣ್ವಂತಿ ಭುವನೇಷು ರೇತ ಇತ್ಯಗ್ನಿಃ ಪೃಥಿವ್ಯಾಂ ರೇತಃ ಕೃಣೋತಿ ವಾಯುರಂತರಿಕ್ಷ ಆದಿತ್ಯೋ ದಿವಿ ತಿಸ್ರಃ ಪ್ರಜಾ ಆರ್ಯಾ ಜ್ಯೋತಿರಗ್ರಾ ಇತಿ ವಸವೋ ರುದ್ರಾ ಆದಿತ್ಯಾಸ್ತಾಸಾಂ ಜ್ಯೋತಿರ್ಯದಸಾವಾದಿತ್ಯಸ್ತ್ರಯೋ ಘರ್ಮಾಸ ಉಷಸಂ ಸಚಂತ ಇತ್ಯಗ್ನಿರುಷಸಂ ಸಚತೇ ವಾಯುರುಷಸಂ ಸಚತ ಆದಿತ್ಯ ಉಷಸಂ ಸಚತ ಇತಿ ॥

ಪ್ರತಿಪದಾರ್ಥ

**ಭುವನೇಷು**—ಪೃಥಿವ್ಯಾದಿ ಮೂರು ಲೋಕಗಳಲ್ಲೂ । **ತ್ರಯಃ**—ಅಗ್ನಿ, ವಾಯು, ಆದಿತ್ಯ ಎಂಬ ಮೂವರೂ । **ರೇತಃ**—ಉದಕವನ್ನು । **ಕೃಣ್ವಂತಿ**—ಉತ್ಪನ್ನಮಾಡುತ್ತಾರೆ. (ಈ ಮೂವರಲ್ಲಿಯೂ) । **ಜ್ಯೋತಿ-**

ರಗ್ರಾಃ—ಆದಿತ್ಯಪ್ರಮುಖರಾದವರೂ | ಆರ್ಯಾಃ—ಶ್ರೇಷ್ಠರೂ ಆದ | ತಿಸ್ರಃ ಪ್ರಜಾಃ—ವಸುರುದ್ರಾದಿತ್ಯರೆಂಬ ಮೂವರೂ ಆವಿರ್ಭೂತರಾಗುತ್ತಾರೆ | ತ್ರಯಃ-ಈ ಮೂವರೂ | ಘರ್ಮಾಸಃ—ಪ್ರಕಾಶಮಾನರಾಗಿ | ಉಷಸಂ—ಉಷೋದೇವಿಯನ್ನು | ಸಚಂತೇ—ಸೇವಿಸುತ್ತಾರೆ. | ತಾನ್ ಸರ್ವಾನ್ ಇತ್—ಆ ಎಲ್ಲರನ್ನೂ | ವಸಿಷ್ಠಾಃ—ವಸಿಷ್ಠವಂಶದವರು | ಅನು ವಿದುಃ—ಯಥಾವತ್ತಾಗಿ ತಿಳಿದಿದ್ದಾರೆ.

ಭಾವಾರ್ಥ

ಪೃಥಿವ್ಯಾದಿ ಮೂರು ಲೋಕಗಳಲ್ಲಿಯೂ ಅಗ್ನಿ, ವಾಯು ಮತ್ತು ಆದಿತ್ಯ ಎಂಬ ಮೂವರೂ ಉದಕವನ್ನು ಉತ್ಪನ್ನಮಾಡುತ್ತಾರೆ ಈ ಮೂವರಲ್ಲಿಯೂ ಆದಿತ್ಯಪ್ರಮುಖರಾದವರೂ, ಶ್ರೇಷ್ಠರೂ ಆದ ವಸುರುದ್ರಾದಿತ್ಯರೆಂಬ ಮೂವರು ಪ್ರಜೆಗಳು ಆವಿರ್ಭೂತರಾಗುತ್ತಾರೆ ಈ ಮೂವರೂ ಪ್ರಕಾಶಮಾನರಾಗಿ ಉಷೋದೇವಿಯನ್ನು ಸೇವಿಸುತ್ತಾರೆ ಆ ಎಲ್ಲರನ್ನೂ ವಸಿಷ್ಠರು ಯಥಾವತ್ತಾಗಿ ತಿಳಿದಿದ್ದಾರೆ

English Translation

Three shed moisture upon the regions, three are their glorious progeny, of which the chief is night three communicators of warmth accompany the dawn verily the Vashisthas understand all these

ಸಂಹಿತಾಪಾಠಃ

ಸೂರ್ಯಸ್ಯೇವ ವಕ್ಷಥೋ ಜ್ಯೋತಿರೇಷಾಂ ಸಮುದ್ರಸ್ಯೇವ ಮಹಿಮಾ ಗಭೀರಃ
ವಾತಸ್ಯೇವ ಪ್ರಜವೋ ನಾನ್ಯೇನ ಸ್ತೋಮೋ ವಸಿಷ್ಠಾ ಅನ್ವೇತವೇ ವಃ ||

ಪದಪಾಠಃ

ಸೂರ್ಯಸ್ಯಽಇವ | ವಕ್ಷಥಃ | ಜ್ಯೋತಿಃ | ಏಷಾಂ | ಸಮುದ್ರಸ್ಯಽಇವ | ಮಹಿಮಾ | ಗಭೀರಃ |
ವಾತಸ್ಯಽಇವ | ಪ್ರಽಜವಃ | ನ | ಅನ್ಯೇನ | ಸ್ತೋಮಃ | ವಸಿಷ್ಠಾಃ | ಅನುಽಏತವೇ | ವಃ || ೮ ||

ಸಾಯಣಭಾಷ್ಯಂ

ಹೇ ವಸಿಷ್ಠಾಃ ಏಷಾಂ ವೋ ಯುಷ್ಮಾಕಂ ಸ್ತೋಮೋ ಮಹಿಮಾಪಿ ವಾ ಸೂರ್ಯಸ್ಯ ಜ್ಯೋತಿರಿವ ವಕ್ಷಥಃ ಪ್ರಕಾಶೋಽಸ್ತಿ | ಹೇ ವಸಿಷ್ಠಾಃ ವೋ ಯುಷ್ಮಾಕಂ ಮಹಿಮಾ ಸ್ತೋಮೋಽಪಿ ವಾ ಸಮುದ್ರಸ್ಯೇವ ಗಭೀರೋ ಗಂಭೀರೋಽಸ್ತಿ | ತಥಾ ಹೇ ವಸಿಷ್ಠಾಃ ಏಷಾಂ ವೋ ಯುಷ್ಮಾಕಂ ಸ್ತೋಮಮುಕ್ಸಮೂಹೋ ಮಹಿಮಾಪಿ ವಾ ವಾತಸ್ಯೇವ ಪ್ರಜವೋ ಯಥಾ ವಾತಸ್ಯ ಪ್ರವೇಗೋಽನ್ಯೇನಾನ್ವೇತುಂ ನ ಶಕ್ಯಸ್ತದ್ವದನ್ಯೇನಾನ್ವೇತವೇಽನ್ವೇತುಂ ನ ಶಕ್ಯಃ ||

ಪ್ರತಿಪದಾರ್ಥ

ವಸಿಷ್ಠಾಃ—ಎಲೈ ವಸಿಷ್ಠರೇ, | ಏಷಾಂ ವಃ—ಪ್ರಸಿದ್ಧರಾದ ಈ ನಿಮ್ಮ | ಮಹಿಮಾ—ಮಾಹಾತ್ಮ್ಯವು ಸೂರ್ಯಸ್ಯ—ಸೂರ್ಯನ | ಜ್ಯೋತಿಃಇವ—ಪ್ರಭೆಯಂತೆ | ವಕ್ಷಥಃ—ಕಂಗೊಳಿಸುತ್ತದೆ. | ಸಮುದ್ರಸ್ಯೇವ-ಸಮುದ್ರದಂತೆ | ಗಭೀರಃ—ಗಂಭೀರಾತ್ಮಕವಾಗಿರುತ್ತದೆ. | ಸ್ತೋಮಃ—ನಿಮ್ಮ ಸ್ತುತಿಯು | ವಾತಸ್ಯೇವ—

ವಾಯುವಿನಂತೆ | **ಪ್ರಜವಃ**—ವೇಗಗಾಮಿಯಾಗಿರುತ್ತದೆ. | **ಅನ್ಯೇನ**—ಇತರರಾರಿಂದಲೂ (ಇತರ ಸ್ತುತಿಗಳಿಂದ) | **ಅನ್ವೇತವೇ**—ಅದನ್ನು ಮೀರಿಸಲು | **ನ**—ಸಾಧ್ಯವಿಲ್ಲ.

ಭಾವಾರ್ಥ

ಎಲೈ ವಸಿಷ್ಠರೇ, ಪ್ರಸಿದ್ಧರಾದ ಈ ನಿಮ್ಮ ಮಾಹಾತ್ಮ್ಯವು ಸೂರ್ಯನ ಪ್ರಭೆಯಂತೆ ಕಂಗೊಳಿಸುತ್ತದೆ. ಸಮುದ್ರದಂತೆ ಗಂಭೀರಾತ್ಮಕವಾಗಿರುತ್ತದೆ ನಿಮ್ಮ ಸ್ತುತಿಯು ವಾಯುವಿನಂತೆ ವೇಗಗಾಮಿಯಾಗಿರುತ್ತದೆ. ಇತರರ ಸ್ತುತಿಗಳಿಂದ ಅದನ್ನು ಮೀರಿಸಲು ಸಾಧ್ಯವಿಲ್ಲ.

English Translation

The glory of these Vashisthas is like the splendour of the sun their greatness as profound as (the depth of) the ocean your praise, Vashisthas has the velocity of the wind . by no other can it be surpassed.

ವಿಶೇಷವಿಷಯಗಳು

ಋಗ್ವೇದಮಂತ್ರಗಳಲ್ಲಿ ದೇವತೆಗಳೇ ಅಲ್ಲದೆ, ಪಿತೃಗಳೂ, ಋಷಿಗಳೂ ಸ್ತುತಿಸಲ್ಪಡುತ್ತಾರೆಂದು ಯಾಸ್ಕರು ಹೇಳಿ ಋಷಿಗಳ ಪ್ರಶಂಸೆಯನ್ನು ವರ್ಣಿಸುವ ಈ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದ್ದಾರೆ (ನಿ ೧೧-೨೦). ಈ ಋಕ್ಕಿನಲ್ಲಿ ವಸಿಷ್ಠಋಷಿಯ ಮತ್ತು ವಸಿಷ್ಠಪುತ್ರರೇ ಮೊದಲಾದ ವಸಿಷ್ಠವಂಶದವರ ಮಾಹಾತ್ಮ್ಯದ ವರ್ಣನೆ ಇದೆ.

ಸಂಹಿತಾಪಾಠಃ

ತ ಇನ್ನಿಣ್ಯಂ ಹೃದಯಸ್ಯ ಪ್ರಕೇತೈಃ ಸಹಸ್ರವಲ್ಶಮಭಿ ಸಂ ಚರಂತಿ ।
ಯಮೇನ ತತಂ ಪರಿಧಿಂ ವಯಂತೋಽಪ್ಸರಸ ಉಪ ಸೇದುರ್ವಸಿಷ್ಠಾಃ ॥

ಪದಪಾಠಃ

ತೇ । ಇತ್ । ನಿಣ್ಯಂ । ಹೃದಯಸ್ಯ । ಪ್ರಕೇತೈಃ । ಸಹಸ್ರಽವಲ್ಶಂ । ಅಭಿ । ಸಂ । ಚರಂತಿ ।
ಯಮೇನ । ತತಂ । ಪರಿಽಧಿಂ । ವಯಂತಃ । ಅಪ್ಸರಸಃ । ಉಪ । ಸೇದುಃ । ವಸಿಷ್ಠಾಃ ॥ ೯ ॥

ಸಾಯಣಭಾಷ್ಯಂ

**ತ ಇತ್ತ ಏವ ವಸಿಷ್ಠಾ ನಿಣ್ಯಂ ತಿರೋಹಿತಂ ದುಜ್ಞಾನಂ । ನಿಣ್ಯಂ ನಿಸ್ಸರಿತ್ಯಂತರ್ಹಿತನಾಮಸು ಪಾಠಾತ್ । ಸಹಸ್ರವಲ್ಶಂ ಸಹಸ್ರಶಾಖಂ ಸಂಸಾರಂ ಹೃದಯಸ್ಯ ಪ್ರಕೇತೈಃ ಪ್ರಜ್ಞಾನೈರಭಿ ಸಂ ಚರಂತಿ । ಏವಂ ಸ್ವಾಚ್ಛಂದ್ಯೇನಾಭಿಸಂಚರಂತಸ್ತೇ ವಸಿಷ್ಠಾ ಯಮೇನ ಕಾರಣಾತ್ಮನಾ ಸರ್ವನಿಯಂತ್ರಾ ತತಂ ವಿಸ್ತೃತಂ ಪರಿಧಿಂ ವಸ್ತ್ರಂ । ಪರಿಧಿರಿತ್ಯನೇನ ಜನ್ಮಾದಿಪ್ರವಾಹೋ ವಿವಕ್ಷಿತಃ । ತಂ ವಯಂತೋಽಪ್ಸರಸೋ ಜನನೀತ್ವೇನೋಪ ಸೇದುಃ । ಅತ್ರ ವಸಿಷ್ಠಾ ಇತಿ ಬಹುವಚನಂ ಪೂಜಾಯಾಂ । ವಸಿಷ್ಠಃ ಪೂರ್ವಂ ಪ್ರಜಾಪತೇರುತ್ಪನ್ನಂ ದೇಹಮುತ್ಸೃಜ್ಯಾಪ್ಸರಃಸು ಜಾಯೇಯೇತಿ ಬುದ್ಧಿಮಕರೋದಿತಿ ಭಾವಃ ॥**

ಪ್ರತಿಪದಾರ್ಥ

**ತೆ ಇತ್ ವಸಿಷ್ಠಾಃ**—ಆದೇ ವಸಿಷ್ಠರು | **ನಿಣ್ಯಂ**—ಇತರರ ಜ್ಞಾನಕ್ಕೆ ಸಿಲುಕದ ರಹಸ್ಯದಿಂದ ಕೂಡಿದುದೂ | **ಸಹಸ್ರವಲ್ಶಂ**—ಸಹಸ್ರಾರು ಶಾಖೆಗಳಿಂದ ಕೂಡಿದುದೂ ಆದ ಸಂಸಾರವನ್ನು | **ಹೃದಯಸ್ಯ**—ತಮ್ಮ ಹೃದಯದ | **ಪ್ರಕೇತೈಃ**—ಪ್ರಜ್ಞಾನಗಳಿಂದ | **ಅಭಿ ಸಂ ಚರಂತಿ**—ಪ್ರವೇಶಿಸಿ ಎಲ್ಲೆಲ್ಲೂ ಸಂಚರಿಸುತ್ತಾರೆ. | **ಯಮೇನ**—ಜಗನ್ನಿಯಾಮಕನಾದ ಯಮನಿಂದ | **ತತಂ**—ವಿಸ್ತೃತವಾಗಿ ಹರಡಿದ | **ಪರಿಧಿಂ**—ವಸ್ತ್ರವನ್ನು (ಜನ್ಮಾದಿ ಪ್ರವಾಹವನ್ನು) | **ವಯಂತಃ**—ಧರಿಸಿಕೊಂಡು | **ಅಪ್ಸರಸಃ**—ಅಪ್ಸರಸ್ಸಿನ ಉದರದಲ್ಲಿ | **ಉಪ-ಸೇದುಃ**—ಜನಿಸಿದ್ದಾರೆ.

ಭಾವಾರ್ಥ

ಮಹಾಮಹಿಮರಾದ ಆದೇ ವಸಿಷ್ಠರು ಇತರರ ಜ್ಞಾನಕ್ಕೆ ಸಿಲುಕದ ರಹಸ್ಯದಿಂದ ಕೂಡಿದುದೂ, ಸಹಸ್ರಾರು ಶಾಖಾತ್ಮಕವಾದುದೂ ಆದ ಸಂಸಾರವನ್ನು ತಮ್ಮ ಹೃದಯದ ಪ್ರಜ್ಞಾನಗಳಿಂದ ಪ್ರವೇಶಿಸಿ ಎಲ್ಲೆಲ್ಲೂ ಸಂಚರಿಸುತ್ತಾರೆ ಜಗನ್ನಿಯಾಮಕನಾದ ಯಮನಿಂದ ವಿಸ್ತೃತವಾಗಿ ಹರಡಿದ ಜನ್ಮಾದಿಪ್ರವಾಹದಲ್ಲಿ ಪ್ರವೇಶಿಸಿ ಅಪ್ಸರಸ್ಸಿನ ಉದರದಲ್ಲಿ ಜನಿಸಿದ್ದಾರೆ

English Translation

By the wisdom seated in the heart the Vashisthas traverse the hidden thonsand-branched world, and the Apsaras sit down, wearing the vesture spread out by Yama

ಸಂಹಿತಾಪಾಠಃ

ವಿದ್ಯುತೋ ಜ್ಯೋತಿಃ ಪರಿ ಸಂಜಿಹಾನಂ ಮಿತ್ರಾವರುಣಾ ಯದಪಶ್ಯತಾಂ ತ್ವಾ

ತತ್ತೇ ಜನ್ಮೋತೈಕಂ ವಸಿಷ್ಠಾಗಸ್ತ್ಯೋ ಯತ್ತ್ವಾ ವಿಶ ಆಜಭಾರ ॥ ೧೦ ॥

ಪದಪಾಠಃ

ವಿಽದ್ಯುತಃ | ಜ್ಯೋತಿಃ | ಪರಿ | ಸಂಽಜಿಹಾನಂ | ಮಿತ್ರಾವರುಣಾ | ಯತ್ | ಅಪಶ್ಯತಾಂ | ತ್ವಾ |

ತತ್ | ತೇ | ಜನ್ಮ | ಉತ | ಏಕಂ | ವಸಿಷ್ಠ | ಅಗಸ್ತ್ಯಃ | ಯತ್ | ತ್ವಾ | ವಿಶಃ | ಆಽಜಭಾರ ॥ ೧೦ ॥

ಸಾಯಣಭಾಷ್ಯಂ

**ಏತಾಸ್ವೃಕ್ಷು ವಸಿಷ್ಠಸ್ಯೈವ ದೇಹಪರಿಗ್ರಹಃ ಪ್ರತಿಪಾದ್ಯತೇ | ಏತಾಶ್ಚೇಂದ್ರಸ್ಯ ವಾಕ್ಯಮಿತ್ಯೇಕೇ ವರ್ಣಯಂತ್ಯಪರೇ ವಸಿಷ್ಠಪುತ್ರಾಣಾಮಿತಿ | ಹೇ ವಸಿಷ್ಠ ಯದ್ಯದಾ ವಿದ್ಯುತೋ ವಿದ್ಯುತ ಇವ ಸ್ವೀಯಂ ಜ್ಯೋತಿರ್ದೇಹಾಂತರಪರಿಗ್ರಹಾರ್ಥಂ ಪರಿ ಸಂಜಿಹಾನಂ ಪರಿತ್ಯಜಂತಂ ತ್ವಾ ತ್ವಾಂ ॥ ಛಾಂದಸಮಾತ್ಮ-ನೇಪದಂ ॥ ಯದ್ವಾ | ಜಿಘೃಕ್ಷಿತದೇಹಾರ್ಥಂ ಸ್ವೀಯಂ ಜ್ಯೋತಿಃ ಪರಿ ಸಂಜಿಹಾನಂ | ಪರಿಜಿಘೃಕ್ಷಂತ-ಮಿತ್ಯರ್ಥಃ ॥ ಅಸ್ಮಿನ್ಪಕ್ಷೇ ಜಹಾತೇರ್ಗತ್ಯರ್ಥತ್ವಾದಾತ್ಮನೇಪದಂ ಛಾಂದಸಂ ನ ಭವತಿ ॥ ಮಿತ್ರಾವರುಣಾ ಮಿತ್ರಾವರುಣಾವಪಶ್ಯತಾಂ | ಅನಾಭ್ಯಾಮಯಂ ಜಾಯೇತೇತಿ ಸಮಕಲ್ಪತಾಮಿತ್ಯರ್ಥಃ | ತತ್ತದಾ ತೇ**

**ತನ್ವೈಕಂ ಜನ್ಮ । ಉತಾಪಿ ಚ ಯದ್ಯದಾಗಸ್ತ್ಯೋ ವಿಶೋ ನಿವೇಶನಾನ್ಮಿತ್ರಾವರುಣಾವಾವಾಂ ಜನಯಿಷ್ಯಾವ ಇತ್ಯೇತಸ್ಮಾತ್ಪೂರ್ವಾವಸ್ಥಾನಾತ್ತ್ವಾಮಾಜಭಾರ ಆಜಹಾರ ॥**

ಪ್ರತಿಪದಾರ್ಥ

**ವಸಿಷ್ಠ**—ಎಲೈ ವಸಿಷ್ಠನೇ । **ಯತ್**—ಯಾವಾಗ । **ವಿದ್ಯುತಃ**—ನಿನ್ನ ಸ್ವಪ್ರಭೆಯ । **ಜ್ಯೋತಿಃ**—ಕಾಂತಿಯನ್ನು । **ಪರಿ ಸಂಜಿಹಾನಂ**—ಪರಿತ್ಯಜಿಸಿದ । **ತ್ವಾ**—ನಿನ್ನನ್ನು । **ಮಿತ್ರಾವರುಣಾ**—ಮಿತ್ರಾವರುಣರು । **ಅಪಶ್ಯತಾಂ**—ನೋಡಿದರೋ । **ಉತ**—ಮತ್ತು । **ಯತ್**—ಯಾವಾಗ । **ಅಗಸ್ತ್ಯಃ**—ಅಗಸ್ತ್ಯನು । **ವಿಶಃ**—ನಿನ್ನ ಹಿಂದಿನ ವಸತಿಯಿಂದ । **ತ್ವಾ**—ನಿನ್ನನ್ನು । **ಆ ಜಭಾರ**—ಕರೆತಂದನೋ । **ತತ್**—ಆಗ । **ತೇ**—ನಿನ್ನ । **ಏಕಂ ಜನ್ಮ**—ಒಂದು ಜನ್ಮವು ಸಂಭವಿಸಿತು.

ಭಾವಾರ್ಥ

ಎಲೈ ವಸಿಷ್ಠನೇ, ಯಾವಾಗ ನೀನು ಜನ್ಮಾಂತರಕ್ಕಾಗಿ ಹಿಂದಿನ ಸ್ವಪ್ರಭೆಯನ್ನು ಪರಿತ್ಯಜಿಸಿದಾಗ ನಿನ್ನನ್ನು ಮಿತ್ರಾವರುಣರು ನೋಡಿದರೋ, ಯಾವಾಗ ಅಗಸ್ತ್ಯನು ನಿನ್ನ ಹಿಂದಿನ ವಾಸಸ್ಥಾನದಿಂದ ತನ್ನೊಡನೆ ಮಿತ್ರಾವರುಣರಿಂದ ಉತ್ಪನ್ನನಾಗಲು ಕರೆತಂದರೋ ಆಗ ನಿನ್ನ ಒಂದು ಜನ್ಮವು ಸಂಭವಿಸಿತು.

English Translation

When Mitra and Varuna beheld you, Vasistha, quitting the lustre of the lightning (for the different form), then one of your births (took place), in as much as Agastya bore you from your (former) abode.

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಮುಂದಿನ ಕೆಲವು ಋಕ್ಕುಗಳಲ್ಲಿಯೂ ವಸಿಷ್ಠಋಷಿಯ ಜನ್ಮವೃತ್ತಾಂತವು ಉಕ್ತವಾಗಿದೆ ಈ ಋಕ್ಕಿನಲ್ಲಿ ವಸಿಷ್ಠ ಮತ್ತು ಅಗಸ್ತ್ಯಋಷಿಗಳ ಜನ್ಮವಿಚಾರದ ಪ್ರಸ್ತಾಪವಿದೆ. ಈ ಋಕ್ಕುಗಳಲ್ಲಿರುವ ವಾಕ್ಯಗಳನ್ನು ಇಂದ್ರನೇ ಹೇಳಿರುವನೆಂದು ಕೆಲವರೂ, ವಸಿಷ್ಠಪುತ್ರರು ಹೇಳಿರುವರೆಂದು ಮತ್ತೆ ಕೆಲವರೂ ಪ್ರತಿಪಾದಿಸುವರು ವಸಿಷ್ಠಋಷಿಯ ಜನನದ ವಿವರಗಳನ್ನು ನಾವು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ

ಸಂಹಿತಾಪಾಠಃ

ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ಮನಸೋಽಧಿ ಜಾತಃ
ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ವಿಶ್ವೇ ದೇವಾಃ ಪುಷ್ಕರೇ ತ್ವಾದದಂತ ॥

ಪದಪಾಠಃ

**ಉತ । ಅಸಿ । ಮೈತ್ರಾವರುಣಃ । ವಸಿಷ್ಠ । ಉರ್ವಶ್ಯಾಃ । ಬ್ರಹ್ಮನ್ । ಮನಸಃ । ಅಧಿ । ಜಾತಃ ।**
**ದ್ರಪ್ಸಂ । ಸ್ಕನ್ನಂ । ಬ್ರಹ್ಮಣಾ । ದೈವ್ಯೇನ । ವಿಶ್ವೇ । ದೇವಾಃ । ಪುಷ್ಕರೇ । ತ್ವಾ । ಆದದಂತ ॥ ೧೧ ॥**

### ಸಾಯಣಭಾಷ್ಯಂ

**ಉತಾಪಿ ಚ ಹೇ ವಸಿಷ್ಠ ಮೈತ್ರಾವರುಣೋ ಮಿತ್ರಾವರುಣಯೋಃ ಪುತ್ರೋಽಸಿ । ಹೇ ಬ್ರಹ್ಮನ್ ವಸಿಷ್ಠ ಉರ್ವಶ್ಯಾ ಅಪ್ಸರಸೋ ಮನಸೋ ಮಮಾಯಂ ಪುತ್ರಃ ಸ್ಯಾದಿತೀದೃಶಾತ್ಸಂಕಲ್ಪಾದ್ದ್ರಪ್ಸಂ ರೇತೋ ಮಿತ್ರಾವರುಣಯೋರುರ್ವಶೀದರ್ಶನಾತ್ಸ್ಕನ್ನಮಾಸೀತ್ । ತಸ್ಮಾದಧಿ ಜಾತೋಽಸಿ । ತಥಾ ಚ ವಕ್ಷ್ಯತೇ ಸತ್ರೇ ಹ ಜಾತಾವಿತ್ಯೃಚಿ । ಏವಂ ಜಾತಂ ತ್ವಾ ತ್ವಾಂ ದೈವ್ಯೇನ ದೇವಸಂಬಂಧಿನಾ ಬ್ರಹ್ಮಣಾ ವೇದರಾಶಿನಾಹಂಭುವಾ ಯುಕ್ತಂ ಪುಷ್ಕರೇ ವಿಶ್ವೇ ದೇವಾ ಅದದಂತ । ಅಧಾರಯಂತ ॥ ತಥಾ ಚಾದಿತೇರ್ಮಿತ್ರಾವರುಣೌ ಜಜ್ಞಾತೇ ಇತಿ ಪ್ರಕೃತ್ಯ ಪಠ್ಯತೇ । ತಯೋರಾದಿತ್ಯಯೋಃ ಸತ್ರೇ ದೃಷ್ಟ್ವಾಪ್ಸರಸಮುರ್ವಶೀಂ । ರೇತಶ್ಚಸ್ಕಂದ ತತ್ಕುಂಭೇ ನ್ಯಪತದ್ವಾಸತೀವರೇ ॥ ತೇನೈವ ತು ಮುಹೂರ್ತೇನ ವೀರ್ಯವಂತೌ ತಪಸ್ವಿನೌ । ಅಗಸ್ತ್ಯಶ್ಚ ವಸಿಷ್ಠಶ್ಚ ತತ್ರರ್ಷೀ ಸಂಬಭೂವತುಃ ॥ ಬಹುಧಾ ಪತಿತಂ ರೇತಃ ಕಲಶೇ ಚ ಜಲೇ ಸ್ಥಲೇ । ಸ್ಥಲೇ ವಸಿಷ್ಠಸ್ತು ಮುನಿಃ ಸಂಭೂತ ಋಷಿಸತ್ತಮಃ । ಕುಂಭೇ ತ್ವಗಸ್ತ್ಯಃ ಸಂಭೂತೋ ಜಲೇ ಮತ್ಸ್ಯೋ ಮಹಾದ್ಯುತಿಃ । ಉದಿಯಾಯ ತತೋಽಗಸ್ತ್ಯಃ ಶಮ್ಯಾಮಾತ್ರೋ ಮಹಾತಪಾಃ ॥ ಮಾನೇನ ಸಂಮಿತೋ ಯಸ್ಮಾತ್ತಸ್ಮಾನ್ಮಾನ್ಯ ಇಹೋಚ್ಯತೇ । ಯದ್ವಾ ಕುಂಭಾದೃಷಿರ್ಜಾತಃ ಕುಂಭೇನಾಪಿ ಹಿ ಮೀಯತೇ । ಕುಂಭ ಇತ್ಯಭಿಧಾನಂ ಚ ಪರಿಮಾಣಸ್ಯ ಲಕ್ಷ್ಯತೇ । ತತೋಽಪ್ಸು ಗೃಹ್ಯಮಾಣಾಸು ವಸಿಷ್ಠಃ ಪುಷ್ಕರೇ ಸ್ಥಿತಃ ॥ ಸರ್ವತಃ ಪುಷ್ಕರೇ ತಂ ಹಿ ವಿಶ್ವೇದೇವಾ ಅಧಾರಯನ್ ॥ ಬೃ ೫-೭೪೩ ರಿಂದ ೭೪೯ ॥ ಇತಿ ॥**

### ಪ್ರತಿಪದಾರ್ಥ

**ಉತ**—ಮತ್ತು । **ವಸಿಷ್ಠ**—ವಸಿಷ್ಠನೇ, । **ಮೈತ್ರಾವರುಣಃ**—ನೀನು ಮಿತ್ರಾವರುಣರಿಗೆ ಪುತ್ರನಾಗಿ । **ಅಸಿ**—ಆಗಿದ್ದೀಯೆ । **ಬ್ರಹ್ಮನ್**—ಬ್ರಹ್ಮಜ್ಞಾನವುಳ್ಳ ಎಲೈ ವಸಿಷ್ಠನೇ, । **ಉರ್ವಶ್ಯಾಃ**—ಅಪ್ಸರಸ್ ಸ್ತ್ರೀಯಾದ ಉರ್ವಶಿಯ । **ಮನಸಃ**—ಮನಸ್ಸಂಕಲ್ಪದಿಂದ । **ದ್ರಪ್ಸಂ**—ಮಿತ್ರಾವರುಣರ ರೇತಸ್ಸು । **ಸ್ಕನ್ನಂ**—ಸ್ಖಲಿತವಾಯಿತು। **ಅಧಿ ಜಾತಃ**—ನೀನು ಅದರಿಂದ ಉತ್ಪನ್ನನಾದೆ. । **ತ್ವಾ**—ಹೀಗೆ ಉತ್ಪನ್ನನಾದ ನಿನ್ನನ್ನು । **ದೈವ್ಯೇನ**—ದೇವ ಸಂಬಂಧಿಯಾದ । **ಬ್ರಹ್ಮಣಾ**—ವೇದರಾಶಿಯಿಂದ ಕೂಡಿರುವುದನ್ನು ಕಂಡು । **ವಿಶ್ವೇ ದೇವಾಃ**—ಸಕಲ ದೇವತೆಗಳೂ । **ಪುಷ್ಕರೇ**—ಪುಷ್ಕರಪರ್ಣದ ಮೇಲೆ । **ಅದದಂತ**—ಸ್ಥಾಪಿಸಿದರು

### ಭಾವಾರ್ಥ

ಎಲೈ ವಸಿಷ್ಠನೇ, ನೀನು ಮಿತ್ರಾವರುಣರ ಪುತ್ರನಾಗಿ ಆಗಿದ್ದೀಯೆ ಬ್ರಹ್ಮಜ್ಞಾನವುಳ್ಳ ಎಲೈ ವಸಿಷ್ಠನೇ, ಅಪ್ಸರಸ್ ಸ್ತ್ರೀಯಾದ ಉರ್ವಶಿಯ ಮನಸ್ಸಂಕಲ್ಪದಿಂದ ಮಿತ್ರಾವರುಣರ ರೇತಸ್ಸು ಸ್ಖಲಿತವಾಯಿತು ನೀನು ಅದರಿಂದ ಉತ್ಪನ್ನನಾದೆ. ಹೀಗೆ ಉತ್ಪನ್ನನಾದ ನಿನ್ನನ್ನು ದೇವಸಂಬಂಧಿಯಾದ ವೇದರಾಶಿಯಿಂದ ಕೂಡಿರುವುದನ್ನು ಕಂಡು ಸಕಲ ದೇವತೆಗಳೂ ಪುಷ್ಕರಪರ್ಣದ ಮೇಲೆ ಸ್ಥಾಪಿಸಿದರು

### English Translation

Verily, Vasishtha, you are the son of Mitra and Varuna, born, Brahman, of the will of Urvashi, after the seminal effusion : all the gods have sustained you, (endowed) with celestial and Vaidic vigour in the lake.

ವಿಶೇಷವಿಷಯಗಳು

ದೇವವಮಾತೆಯಾದ ಅದಿತಿಯಿಂದ ಮಿತ್ರಾವರುಣರು ಉತ್ಪನ್ನರಾದರು ಎಂಬ ವಿಷಯವು ಅನೇಕ ಕಡೆಗಳಲ್ಲಿ ಉಕ್ತವಾಗಿದೆ. ಇದನ್ನು ನಾವು ಋ. ಸಂ. ಭಾಗ ಪುಟಗಳಲ್ಲಿ ವಿವರಿಸಿದ್ದೇವೆ. ಈ ಮಿತ್ರಾವರುಣರಿಂದ ವಸಿಷ್ಠ ಮತ್ತು ಅಗಸ್ತ್ಯಋಷಿಗಳ ಉತ್ಪತ್ತಿಯು ಹೇಗೆ ಆಯಿತು ಎಂಬ ವಿಷಯದಲ್ಲಿ ಯಾಸ್ಕರು ನಿರುಕ್ತದಲ್ಲಿ ಹೇಳಿರುವುದನ್ನು ಬೃಹದ್ದೇವತಾಗ್ರಂಥದಲ್ಲಿ ಶೌನಕರು ಹೇಳಿರುವುದನ್ನೂ ಇಲ್ಲಿ ಕ್ರಮವಾಗಿ ಬರೆದಿದ್ದೇವೆ. ಈ ಋಷಿಗಳ ಜನ್ಮವೃತ್ತಾಂತವು ಉರ್ವಶೀ ಎಂಬ ಅಪ್ಸರಾಂಗನೆಯೊಡನೆ ಸಂಬಂಧಪಟ್ಟಿದ್ದಾಗಿರುವುದರಿಂದಲೂ ಈ ಋಕ್ಕಿನಲ್ಲಿ ಉರ್ವಶೀಶಬ್ದವು ಪಠಿತವಾಗಿರುವುದರಿಂದಲೂ ಮೊದಲು **ಉರ್ವಶೀ** ಶಬ್ದದ ನಿಷ್ಪತ್ತಿವಿಚಾರದಲ್ಲಿ ಯಾಸ್ಕರು ಹೇಳಿರುವ ನಿರ್ವಚನವನ್ನೂ ಉದಾಹರಿಸಲಾಗಿದೆ —

**ಉರ್ವಶೀ । ಉರ್ವಶ್ಯಪ್ಸರಾ ಉರ್ವಭ್ಯಶ್ನುತ ಉರುಭ್ಯಾಮಶ್ನುತ ಉರುರ್ವಾ ವಶೋಽಸ್ಯಾಃ । ಅಪ್ಸರಾ ಅಪ್ಸಾರಿಣ್ಯಪಿ ವಾಪ್ಸ ಇತಿ ರೂಪನಾಮಾಪ್ಸಾತೇರಪ್ಸಾನೀಯಂ ಭವತ್ಯಾದರ್ಶನೀಯಂ ವ್ಯಾಪನೀಯಂ ವಾ ಸ್ಪಷ್ಟಂ ದರ್ಶನಾಯೇತಿ ಶಾಕಪೂಣಿಃ । ಯದಪ್ಸ ಇತ್ಯಭಕ್ಷಸ್ಯ । ಅಪ್ಸೋ ನಾಮೇತಿ ವ್ಯಾಪಿನಃ । ತದ್ರಾ ಭವತಿ ರೂಪವತೀ ತದನಯಾತ್ತಮಿತಿ ವಾ ತದಸ್ಯೈ ದತ್ತಮಿತಿ ವಾ । ತಸ್ಯಾ ದರ್ಶನಾನ್ಮಿತ್ರಾವರುಣಯೋಃ ರೇತಶ್ಚಸ್ಕಂದ ತದಭಿವಾದಿನ್ಯೇಷರ್ಗ್ಭವತಿ ॥**

(ನಿ. ೫-೧೩)

ಉರ್ವಶೀ ಎಂಬುವಳು ಓರ್ವ ಅಪ್ಸರಾಂಗನೆಯು ಉರ್ವಶೀ ಎಂಬ ಹೆಸರು ಈ ಸ್ತ್ರೀಗೆ ಬರಲು ಕಾರಣವೇನೆಂದರೆ—

**(೧) ಉರ್ವಭ್ಯಶ್ನುತೇ । ಉರು ಮಹತ್ ಯಶೋಽಭಿವ್ಯಾಪ್ನೋತೀತಿ ।**

ಉರು ಎಂದರೆ ಬಹಳವಾದ ಯಶಸ್ಸನ್ನು ಅಥವಾ ಕೀರ್ತಿಯನ್ನು (ಪ್ರಸಿದ್ಧಿಯನ್ನು) ಅಭ್ಯಶ್ನುತೇ ಹೊಂದಿರುತ್ತಾಳೆ. ಈ ಸ್ತ್ರೀಯು ತನ್ನ ಮಹತ್ತಾದ ಯಶಸ್ಸಿನಿಂದ (ಯಶಸ್ಸೆಂದರೆ ಇಲ್ಲಿ ರೂಪಲಾವಣ್ಯಾದಿಗಳು) ಬಹಳವಾಗಿ ಪ್ರಸಿದ್ಧಳಾಗಿರುವಳು ಆದ್ದರಿಂದ ಇವಳಿಗೆ **ಉರ್ವಶೀ** ಎಂಬ ಹೆಸರು ಬರಲು ಕಾರಣವು

**(೨) ಊರೂಭ್ಯಾಂ ಮೈಥುನೇ ಧರ್ಮೇ ಪುರುಷಂ ಅಶ್ನುತೇ ವ್ಯಾಪ್ನೋತೀತಿ ಉರ್ವಾಶಿನೀ ಸತೀ ಉರ್ವಶೀತ್ಯುಚ್ಯತೇ ।** ಊರು ಎಂದರೆ ತೊಡೆಗಳು. ಈ ಸ್ತ್ರೀಯು ಆಕರ್ಷಕವಾದ ತನ್ನ ತೊಡೆಗಳಮೂಲಕ ಸಂಭೋಗಕ್ರಿಯೆಯಲ್ಲಿ ಪುರುಷನನ್ನು ಆಲಿಂಗನಾದಿಗಳಿಂದ ವ್ಯಾಪಿಸಿ ಸಂತೋಷಪಡಿಸುವಳು. ಆದ್ದರಿಂದ ಈ ಸ್ತ್ರೀಗೆ **ಉರ್ವಾಶಿನೀ** ಅಥವಾ **ಉರ್ವಶೀ** ಎಂಬ ಹೆಸರು ಬಂದಿದೆ.

**(೩) ಅಥವಾ ಉರುಃ ಮಹಾನ್ ಅಸ್ಯಾಃ ವಶಃ ಕಾಮಃ ಸೇಯಮುರುವಶಿನೀ ಸತೀ ಉರ್ವಶೀತ್ಯುಚ್ಯತೇ ।** ಉರುಃ ಎಂದರೆ ಬಹಳವಾದ, ದೊಡ್ಡದಾದ ಎಂದರ್ಥವು. **ವಶಃ** ಎಂದರೆ ಕಾಮಾಭಿಲಾಷೆಯು. ಈ ಸ್ತ್ರೀಗೆ ಅತಿಹೆಚ್ಚಾದ ಕಾಮಾಭಿಲಾಷೆ ಇರುವುದರಿಂದ ಇವಳಿಗೆ **ಉರುವಶಿನೀ** ಅಥವಾ **ಉರ್ವಶೀ** ಎಂಬ ಹೆಸರು ಬಂದಿದೆ ಎಂದು ಉರ್ವಶೀಶಬ್ದಕ್ಕೆ ಮೂರು ವಿಧವಾದ ನಿರ್ವಚನವನ್ನು ಹೇಳಿದ್ದಾರೆ.

ಈಗ ಅಪ್ಸರಾಃ ಎಂಬ ಶಬ್ದಾರ್ಥವನ್ನು ವಿವರಿಸುವುದಕ್ಕಾಗಿ ಇದರ ನಿರ್ವಚನವನ್ನು ಹೇಳುವರು. ಈ ಶಬ್ದವು ಈ ಋಕ್ಕಿನಲ್ಲಿ ಪಠಿತವಾಗಿಲ್ಲದಿದ್ದರೂ ಉರ್ವಶೀಶಬ್ದಕ್ಕೆ ಅರ್ಥವಿವರಣೆ ಮಾಡುವ ಸಂದರ್ಭದಲ್ಲಿ ಪ್ರಸಂಗವಶದಿಂದ ಹೇಳಬೇಕಾಗಿ ಬಂದಿದೆ. ಆದ್ದರಿಂದ ಈ ಶಬ್ದದ ನಿರ್ವಚವನ್ನು ಇಲ್ಲಿ ಹೇಳಿದಾರೆ.

**(೧) ಅಪ್ಸರಾಃ । ಸಾ ಹಿ ಅಪ್ಸಾರಿಣೀ ಭವತಿ । ಅಪಃ ಪತತಿ ನಿತ್ಯಮೇವ ಸರತಿ । ತತ್ಸ್ರ ಭವ**

**ಶ್ವಾತ್ ತದೇವ ತಸ್ಯಾಃ ಪ್ರಿಯಮುದಕಂ ತಸ್ಮಾದಪ್ಸರಾಃ |** ಅಪ್ಸರಾಃ ಎಂದರೆ ಅಪ್ಸಾರಿಣೀ ಎಂದು ಅರ್ಥವು. ಅಪಃ ಎಂದರೆ ನೀರು. ನೀರಿನಮೇಲೆ ಸಂಚರಿಸುವವಳು. ಆದ್ದರಿಂದ ನೀರು ಈ ಸ್ತ್ರೀಗೆ ಅತ್ಯಂತ ಪ್ರಿಯವಾಗಿರುವುದು ಆದ್ದರಿಂದ ಅಪ್ಸರಾಃ ಎಂಬ ಹೆಸರು ಬಂದಿದೆ

**(೨) ಅಥವಾ ಅದ್ಭ್ಯಃ ಸೃತೇತ್ಯಪ್ಸರಾಃ | ಅಪಿ ಚೈನಮನ್ಯಥಾ ಸ್ಯಾತ್ | ಅಪ್ಸ ಇತಿ ಏತತ್ ರೂಪನಾಮ | ಅಪ್ಸಾತೇಃ ಪ್ರತಿಷೇಧಪೂರ್ವಸ್ಯ ಪ್ಸಾತೇಃ ಭಕ್ಷಣಾರ್ಥಸ್ಯ | ತದ್ಧಿ ಅಪ್ಸಾನೀಯಂ ಅದನೀಯಂ ಭವತಿ | ನ ಹಿ ತದ್ಭಕ್ಷ್ಯತೇ | ಕಿಂ ತರ್ಹಿ | ಆದರ್ಶನೀಯಂ ತದಾಭಿಮುಖ್ಯೇನ ಸ್ಥಿತ್ವಾ ದ್ರಷ್ಟವ್ಯಮೇವ ಭವತಿ ಚಕ್ಷುಷಾ ನ ಪುನರ್ಮುಖೇನ ಭಕ್ಷಯಿತವ್ಯಮಿತ್ಯರ್ಥಃ |** ಅಪ್ಸಃ ಎಂದರೆ ರೂಪಕ್ಕೆ ಹೆಸರು. **ಪ್ಸಾ** ಎಂಬ ಧಾತುವಿಗೆ ಭಕ್ಷಣಮಾಡು ಎಂದರ್ಥವು ಅ + ಪ್ಸಾ ಎಂದರೆ ಭಕ್ಷಣಯೋಗ್ಯವಲ್ಲದ ಎಂದರ್ಥವು ಆದ್ದರಿಂದ ಈ ಸ್ತ್ರೀಯಲ್ಲಿರುವ ರೂಪವು ಭಕ್ಷಣಯೋಗ್ಯವಲ್ಲದ್ದು ಆದರೆ ಕಣ್ಣುಗಳಿಂದ ಚೆನ್ನಾಗಿ ನೋಡುವುದಕ್ಕೆ ಅರ್ಹವಾದುದು ಎಂದರೆ ಈ ಸ್ತ್ರೀಯ ರೂಪು ಬಹಳ ಆಕರ್ಷಕವಾಗಿರುವುದು ಎಂದಭಿಪ್ರಾಯವು

**(೩) ವ್ಯಾಪನೀಯಂ ವಾ | ವ್ಯಾಪನಮರ್ಹತಿ | ಅಪ್ಲೃ ವ್ಯಾಪ್ತೌ ತಸ್ಯ ವಾ ಅಪ್ಸಃ; ತದ್ಧಿ ನಾಯನೇನ ರಶ್ಮಿನಾ ಆತ್ಮನಃ ಪ್ರತ್ಯಯಾಧಾನಾರ್ಥಂ ವ್ಯಾಪಯಿತವ್ಯಂ ಭವತಿ | ಸ್ಪಷ್ಟಂ ದರ್ಶನಾಯೇತಿ ಶಾಕಪೂಣಿಃ ||** ಅಪ್ಲೃ ವ್ಯಾಪ್ತೌ ಎಂಬ ಧಾತುವಿನಿಂದ ಅಪ್ಸಃ ಎಂಬ ಶಬ್ದವು ನಿಷ್ಪನ್ನವಾಗಿ ವ್ಯಾಪಿಸಿರುವುದು ಎಂಬರ್ಥವನ್ನು ಕೊಡುವುದು ಎಂದರೆ ಸ್ಪಷ್ಟವಾಗಿ ಎಲ್ಲರಿಗೂ ಕಾಣಿಸುವಂತೆ ರೂಪವು ವ್ಯಾಪಿಸಿ ಪ್ರತ್ಯಕ್ಷವಾಗಿ ಗೋಚರಿಸುತ್ತಿರುವುದು ಎಂದಭಿಪ್ರಾಯವು.

ಈ ಮೇಲಿನ ಅರ್ಥಭೇದಗಳಲ್ಲವೂ ಶಾಕಪೂಣಿಯೆಂಬ ಆಚಾರ್ಯರಮತಾನುಸಾರವಾಗಿವೆ.

ಇನ್ನು **ಅಪ್ಸರಾ** ಎಂಬ ಶಬ್ದಕ್ಕೆ ಇನ್ನೊಂದು ವಿಧವಾದ ಅರ್ಥವನ್ನು ಹೇಳುವರು **ಅಪ್ಸಃ** ಎಂದರೆ ರೂಪವೆಂದು ಅರ್ಥವನ್ನು ಹಿಂದೆಯೇ ಹೇಳಿರುವುದಷ್ಟೆ. ಈಗ **ರಾ ದಾನೇ** ಎಂಬ ಧಾತುವಿನಂತೆ ರಾಶಬ್ದಕ್ಕೆ ಕೊಡುವುದು, ಕೊಡಲ್ಪಟ್ಟ ಎಂಬರ್ಥವಿರುವುದು ಆದ್ದರಿಂದ ಅಪ್ಸರಾ ಎಂದರೆ ಈ ಸ್ತ್ರೀಗೆ ಇರುವ ರೂಪವು ಇವಳಿಂದ ಸ್ವೀಕೃತವಾಗಿದೆ. ಅಥವಾ ಈ ರೂಪವು (ಸೌಂದರ್ಯವು) ಬ್ರಹ್ಮನಿಂದ ಈಕೆಗೆ ಕೊಡಲ್ಪಟ್ಟಿರುವುದರಿಂದ ಅಪ್ಸರಾ ಎಂಬ ಹೆಸರು ಬಂದಿದೆ ಎಂದೂ ಅರ್ಥವು

**ಉರ್ವಶೀ** ಎಂಬ ಈ ಅಪ್ಸರಸ್ತ್ರೀಯ ದರ್ಶನದಿಂದ ಮಿತ್ರಾವರುಣರಲ್ಲಿ ಕಾಮವಿಕಾರ ಉಂಟಾಗಿ ಅವರ ರೇತಸ್ಸು (ವೀರ್ಯವು) ಸ್ಖಲಿತವಾಯಿತು. ಆ ರೇತಸ್ಸಿನಿಂದ ವಸಿಷ್ಠ, ಮತ್ತು ಅಗಸ್ತ್ಯಋಷಿಗಳ ಜನನವಾಯಿತೆಂದು ಈ ಋಕ್ಕಿನಲ್ಲಿ ಹೇಳಿದೆ

ಇದುವರೆಗೆ ಉರ್ವಶೀ ಮತ್ತು ಅಪ್ಸರಾಃ ಎಂಬ ಶಬ್ದಗಳ ನಿರ್ವಚನವನ್ನು ಹೇಳಿ ಈಗ ಪ್ರಕೃತಋಕ್ಕಿನ ನಿರ್ವಚನವನ್ನು ಹೇಳುತ್ತಾರೆ.—

> **ಅಪ್ಯಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ಮನಸೋಽಧಿಜಾತೋ ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ || ದ್ರಪ್ಸಃ ಸಂಭೃತಃ ಪ್ಸಾನೀಯೋ ಭವತಿ ಸರ್ವೇ ದೇವಾಃ ಪುಷ್ಕರೇ ತ್ವಾಧಾರಯಂತ | ಪುಷ್ಕರಮಂತರಿಕ್ಷಂ ಪೋಷತಿ ಭೂತಾನ್ಯಕಂ | ಪುಷ್ಕರಂ ಪೂಜಾಕರಂ ಪೂಜಯಿತವ್ಯಂ ವಾ | ಇದಮಪೀತರತ್ ಪುಷ್ಕರಮೇತಸ್ಮಾದೇವ ಪುಷ್ಕರಂ ವಪುಷ್ಕರಂ ವಾ | ಪುಷ್ಪಂ ಪುಷ್ಪತೇಃ ||**

(ನಿ. ೫–೧೪)

ಎಲೈ ವಸಿಷ್ಠನೇ, ನೀನು ಖಂಡಿತವಾಗಿಯೂ ಮಿತ್ರಾವರುಣರ ಪುತ್ರನೇ ಹೌದು. ಎಲೈ ಬ್ರಹ್ಮಜ್ಞಾನಿಯೇ, ನೀನು ಉರ್ವಶಿಯ ಮನಸ್ಸಿನಿಂದ ಉತ್ಪನ್ನನಾಗಿದ್ದೀಯೆ ಯಜ್ಞಭೂಮಿಯಲ್ಲಿ ಉರ್ವಶೀದರ್ಶನದಿಂದ ಮಿತ್ರಾವರುಣರಿಗೆ ಕಾಮವಿಕಾರವುಂಟಾಗಿ ವೀರ್ಯಸ್ಖಲನವಾಯಿತು. ಆ ಕಾಲದಲ್ಲಿ ಸಮಸ್ತದೇವತೆಗಳೂ ಮಿತ್ರಾವರುಣರ ಸ್ಖಲಿತ ವೀರ್ಯವು ಭೂಮಿಯಮೇಲೆ ಬೀಳಬಾರದೆಂದು ಋಗ್ಯಜುಸ್ಸಾಮಾತ್ಮಕವಾದ ಮಂತ್ರಗಳಿಂದ ಸ್ತುತಿಸುತ್ತಾ ಒಂದು ಕುಂಭದಲ್ಲಿದ್ದ ನೀರಿನ ಮೇಲೆ ಅಥವಾ ಅಂತರಿಕ್ಷದಲ್ಲಿ ಆ ವೀರ್ಯವು ಬೀಳುವಂತೆ ಮಾಡಿದರು ಆದರಿಂದ ವಸಿಷ್ಠಾಗಸ್ತ್ಯರ ಉತ್ಪತ್ತಿಯಾಯಿತು

**ದ್ರಪ್ಸಃ** ಎಂದರೆ ರೇತಸ್ಸು. ದ್ರ ಎಂದರೆ ದ್ರವಿಸುವುದು, ಪ್ಸಾ ಎಂದರೆ ಭಕ್ಷಣ ಅಥವಾ ಭರಣವು. ಈ ರೇತಸ್ಸು ಅಥವಾ ವೀರ್ಯವು ಪುರುಷನ ಅಂಗದಿಂದ ದ್ರವಿಸಿ ಸ್ತ್ರೀಯ ಯೋನಿಯಿಂದ ಭಕ್ಷಿಸಲ್ಪಡುವುದು ಎಂದರೆ ಹೀರಲ್ಪಡುವುದು ಅಥವಾ ಧರಿಸಲ್ಪಡುವುದು ಆದ್ದರಿಂದ ರೇತಸ್ಸಿಗೆ **ದ್ರಪ್ಸಃ** ಎಂದು ಹೆಸರು ಬಂದಿದೆ

ಪುಷ್ಕರಶಬ್ದಕ್ಕೆ ಅನೇಕಾರ್ಥಗಳಿರುವವು. ಪುಷ್ಕರವೆಂದರೆ ಅಂತರಿಕ್ಷವು. **ತದ್ಧಿ ಪೋಷತಿ ಭೂತಾನಿ ಪುಷ್ಣಾತ್ಯವಕಾಶದಾನೇನೋಪಕುರ್ವನ್** । ತನ್ನಲ್ಲಿರಲು ಅವಕಾಶವನ್ನು ಕೊಟ್ಟು ಪ್ರಾಣಿಗಳನ್ನು ಪೋಷಿಸುವುದರಿಂದ ಅಂತರಿಕ್ಷಕ್ಕೆ ಪುಷ್ಕರನೆಂದು ಹೆಸರು ಪುಷ್ಕರವೆಂದರೆ ಉದಕವೆಂದೂ ಅರ್ಥವಾಗುವುದು ಏಕೆಂದರೆ,— **ತೇನ ಹಿ ಪೂಜಾ ಕ್ರಿಯತೇ ದೇವಾದಿಭ್ಯಃ ತತ್ಪೂಜಾಕಾರಕತ್ವಾತ್ ಪುಷ್ಕರಂ** । ಅಥವಾ **ಪೂಜಯಿತವ್ಯಂ ಪೂಜನಾರ್ಹಮಾತ್ಮನ ಏವೇತಿ ಪುಷ್ಕರಂ** । ಈ ಉದಕದಿಂದ ದೇವತೆಗಳಿಗೆ ಪೂಜಾದಿಗಳನ್ನು ಮಾಡುವರು ಎಂದರೆ ಪೂಜಾಕರ್ಮಕ್ಕಾಗಿ ಉದಕವನ್ನು ಉಪಯೋಗಿಸುವರು ಅಥವಾ ಈ ಉದಕವೇ ಪೂಜಾರ್ಹವಾಗಿರುವುದು. ಎಂದರೆ ಇದನ್ನೇ ಪೂಜಿಸುವರು. ಆದ್ದರಿಂದ ಉದಕಕ್ಕೆ ಪುಷ್ಕರವೆಂದು ಹೆಸರು.

ಇದಲ್ಲದೆ **ಪುಷ್ಕರಂ** ಎಂದರೆ ಪದ್ಮ (ಪುಷ್ಪ) ವೆಂಬ ಮತ್ತೊಂದು ಅರ್ಥವೂ ಇರುವುದು ಈ ಪದ್ಮಪುಷ್ಪವನ್ನೂ ಪೂಜಾದಿಗಳಿಗೆ ಉಪಯೋಗಿಸುವರು. ಮತ್ತು ಪುಷ್ಕರವೆಂದರೆ **ವಪುಷ್ಕರಂ**—ಶರೀರವನ್ನು ಈ ಪುಷ್ಪದಿಂದ ಅಲಂಕರಿಸುವುದಕ್ಕಾಗಿಯೂ ಉಪಯೋಗಿಸುವರು. ಈ ಕಾರಣಗಳಿಂದ ಪದ್ಮಪುಷ್ಪಕ್ಕೆ ಪುಷ್ಕರವೆಂದು ಹೆಸರು

ಪ್ರಸಂಗವಶದಿಂದ ಪುಷ್ಪಶಬ್ದಕ್ಕೂ ವ್ಯುತ್ಪತ್ತಿಯನ್ನು ಹೇಳಿರುವರು. **ಪುಷ್ಪಂ ಪುಷ್ಪತೇಃ** । **ಪುಷ್ಪತಿಃ ವಿಕಸನಾರ್ಥಃ** । ಪುಷ್ಪವೆಂದರೆ ಹೂವು ವಿಕಸಿತವಾಗಿ ಎಂದರೆ ಮೊಗ್ಗಾಗಿರುವುದು ಚೆನ್ನಾಗಿ ಅರಳಿ ಸುವಾಸನೆ ಬೀರುವುದು. ಆದ್ದರಿಂದ ಹೂವಿಗೆ ಪುಷ್ಪವೆಂದು ಹೆಸರು.

ನಿರುಕ್ತದಲ್ಲಿ ಈ ಋಕ್ಕಿನ ವಿಷಯವಾಗಿ ಹೇಳಿರುವುದನ್ನೆಲ್ಲಾ ವಿವರಿಸಿ ಈಗ ಋಗ್ವೇದದ ಪ್ರಕೃತಸೂಕ್ತದಲ್ಲಿ (ಋ ಸಂ. ೭-೩೩-೧೦ ರಿಂದ ೧೪) ಇರುವ ವಸಿಷ್ಠೋತ್ಪತ್ತಿಕ್ರಮವನ್ನೂ ಅನಂತರ ಶೌನಕಮಹರ್ಷಿಪ್ರೋಕ್ತವಾದ ಬೃಹದ್ದೇವತಾ ಎಂಬ ಗ್ರಂಥದಲ್ಲಿ ವಸಿಷ್ಠಋಷಿಯ ಉತ್ಪತ್ತಿಯ ಕ್ರಮವನ್ನೂ ವಿವರಿಸುತ್ತೇವೆ —

## ಋಗ್ವೇದದಲ್ಲಿ ಹೇಳಿರುವ ವಸಿಷ್ಠೋತ್ಪತ್ತಿಯ ಕ್ರಮ

ವಸಿಷ್ಠನು ದಿವ್ಯಾಂಶಸಂಭೂತನೆಂದೂ, ವೈಯಕ್ತಿಕವಾದ ಮಾಹಾತ್ಮ್ಯವನ್ನು ಹೊಂದಿದ್ದವನೆಂದೂ, ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ಪ್ರಶಂಸಿಸಿದೆ. ಅವನ ಉತ್ಪತ್ತಿ ಕ್ರಮವನ್ನು ಈ ರೀತಿ ತಿಳಿಸಿದೆ.

**ವಿದ್ಯುತೋ ಜ್ಯೋತಿಃ ಪರಿ ಸಂಜಿಹಾನಂ ಮಿತ್ರಾವರುಣಾ ಯದಪಶ್ಯತಾಂ ತ್ವಾ ।**
**ತತ್ತೇ ಜನ್ಮೋತೈಕಂ ವಸಿಷ್ಠಾಗಸ್ತ್ಯೋ ಯತ್ತ್ವಾ ವಿಶ ಆಜಭಾರ ॥**

(ಋ. ಸಂ. ೭-೩೩-೧೦)

ಎಲೈ ವಸಿಷ್ಠನೇ, ನೀನು ನಿನ್ನ ಆತ್ಮೀಯವಾದ ಪ್ರಭೆಯನ್ನು ಬೀರಿ ನಿನ್ನ ಪ್ರಭಾವವನ್ನು ಯಾವಾಗ ಪ್ರಕಟಿಸಿದೆಯೋ ಆಗ ನಿನ್ನನ್ನು ಮಿತ್ರಾವರುಣರು ನೋಡಿದರು ಆ ಒಡನೆಯೇ ಪೃಥ್ವಿಯಲ್ಲಿ ನಿನ್ನ ಜನ್ಮವುಂಟಾಯಿತು ಇದು ನಿನ್ನ ಅನೇಕ ವಿಧವಾದ ಆವಿರ್ಭಾವಗಳಲ್ಲಿ ಒಂದು ಮಾತ್ರ

**ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ ಮನಸೋಽಧಿ ಜಾತಃ |**
**ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ವಿಶ್ವೇ ದೇವಾಃ ಪುಷ್ಕರೇ ತ್ವಾದದಂತ ||**
(ಋ ಸಂ. ೭-೩೩-೧೧)

ಎಲೈ ವಸಿಷ್ಠನೇ, ಉರ್ವಶಿಯ ದರ್ಶನವಾದೊಡನೆಯೇ ಸ್ಖಲಿತವಾದ ಮಿತ್ರಾವರುಣರ ರೇತಃಪ್ರಭಾವದಿಂದ ಅವಳ ಸಂಕಲ್ಪಾನುಸಾರವಾಗಿ ನೀನು ಉತ್ಪನ್ನನಾದೆ ಆ ಒಡನೆಯೇ ಸಕಲ ದೇವತೆಗಳೂ ಸಹ ದಿವ್ಯಾಂಶಸಂಭೂತನೂ, ವೇದರಾಶಿಯಿಂದ ಯುಕ್ತನೂ ಆದ ನಿನ್ನನ್ನು ಪುಷ್ಕರದಲ್ಲಿ ಸ್ಥಾಪಿಸಿದರು

**ಸ ಪ್ರಕೇತ ಉಭಯಸ್ಯ ಪ್ರವಿದ್ವಾನ್ತ್ಸಹಸ್ರದಾನ ಉತ ವಾ ಸದಾನಃ |**
**ಯಮೇನ ತತಂ ಪರಿಧಿಂ ವಯಿಷ್ಯನ್ನಪ್ಸರಸಃ ಪರಿ ಜಜ್ಞೇ ವಸಿಷ್ಠಃ ||**
(ಋ ಸಂ ೭-೩೩ ೧೨)

ಈ ವಸಿಷ್ಠನೇ ದ್ಯಾವಾಪೃಥಿವಿಗಳೆರಡರ ತತ್ತ್ವಗಳನ್ನೂ ಪೂರ್ಣವಾಗಿ ಅರಿತವನಾಗಿ ಅನೇಕ ವಿಧವಾದ ದಾನಪ್ರದನಾಗಿದ್ದಾನೆ. ಅಥವಾ ಸ್ವಯಂದಾನರೂಪನಾಗಿಯೇ ಇದ್ದಾನೆ ಸಕಲಜಗತ್ತಿಗೂ ನಿಯಂತೃವಾದ ಯಮನಿಂದ ವಿಸ್ತೃತವಾಗಿ ಹರಡಲ್ಪಟ್ಟ ಸಂಸಾರವೆಂಬ ವಸ್ತ್ರದಿಂದ ಆಚ್ಛಾದಿತನಾಗಿ ಉರ್ವಶಿಯ ಉದರದಲ್ಲಿ ಪೃಥ್ವಿಯ ಮೇಲೆ ಜನಿಸಿದನು

**ಸತ್ರೇ ಹ ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ |**
**ತತೋ ಹ ಮಾನ ಉದಿಯಾಯ ಮಧ್ಯಾತ್ತತೋ ಜಾತಮೃಷಿಮಾಹುರ್ವಸಿಷ್ಠಂ ||**
(ಋ. ಸಂ. ೭-೩೩-೧೩)

ಯಜ್ಞದೀಕ್ಷಿತರಾದ ಮಿತ್ರಾವರುಣರು ಸ್ತುತಿಪೂರ್ವಕವಾಗಿ ಸ್ಥಾಪಿಸಿದ ಸಮಾನವಾದ ಕಲಶಪಾತ್ರೆಯಲ್ಲಿ ತಮ್ಮ ರೇತಸ್ಸನ್ನು ಸೇಚನಮಾಡಿದಾಗ ಆ ವಸತೀವರೀಸಂಜ್ಞಕವಾದ ಪಾತ್ರೆಯಿಂದ ಮಧ್ಯಭಾಗದಲ್ಲಿ ಅಗಸ್ತ್ಯನ ಉತ್ಪತ್ತಿಯೂ ಅನಂತರ ಅದೇ ಪಾತ್ರೆಯಿಂದ ವಸಿಷ್ಠನ ಉತ್ಪತ್ತಿಯೂ ಆಯಿತು

**ಉಕ್ಥಭೃತಂ ಸಾಮಭೃತಂ ಬಿಭರ್ತಿ ಗ್ರಾವಾಣಂ ಬಿಭ್ರತ್ಪ್ರ ವದಾತ್ಯಗ್ರೇ |**
**ಉಪೈನಮಾಧ್ವಂ ಸುಮನಸ್ಯಮಾನಾ ಆ ವೋ ಗಚ್ಛಾತಿ ಪ್ರತೃದೋ ವಸಿಷ್ಠಃ ||**
(ಋ. ಸಂ. ೭-೩೩-೧೪)

ಎಲೈ ಪ್ರತೃತ್ಸಂಜ್ಞಿಕರಾದ ಯಜಮಾನರೇ, ಪೂಜ್ಯನಾದ ವಸಿಷ್ಠನು ನಿಮ್ಮಲ್ಲಿಗೆ ಬರುತ್ತಾನೆ. ಇಂತಹ ವಸಿಷ್ಠನನ್ನು ಗೌರವಿಸಿರಿ ಈತನು ನಿಮ್ಮ ಯಜ್ಞದಲ್ಲಿ ಬ್ರಹ್ಮಸ್ಥಾನವನ್ನಾಕ್ರಮಿಸಿ ಶಸ್ತ್ರಮಂತ್ರಪಾಠಕರಿಗೂ, ಉದ್ಗಾತೃಗಳಿಗೂ, ಅಭಿಷವ ಕರ್ಮನಿರತರಿಗೂ ಮಾರ್ಗದರ್ಶಕನಾಗಿರುತ್ತಾನೆ. ಆದುದರಿಂದ ಅವನನ್ನು ಗೌರವಿಸಿ ಸನ್ಮಾನಿಸಿರಿ ಎಂಬ ಪ್ರಶಂಸಾ ವಾಕ್ಯಗಳಿರುತ್ತವೆ ಇದೇ ವಿಷಯವನ್ನು ಬೃಹದ್ದೇವತಾಕಾರರು ಕೆಳಗೆ ಕಂಡಂತೆ ವಿವರಿಸಿದ್ದಾರೆ.

## ಬೃಹದ್ದೇವತಾಗ್ರಂಥದಲ್ಲಿ ಹೇಳಿರುವ ವಸಿಷ್ಠೋತ್ಪತ್ತಿಕ್ರಮ

**ಪ್ರಾಜಾಪತ್ಯೋ ಮರೀಚಿರ್ಹಿ ಮಾರೀಚಃ ಕಶ್ಯಪೋ ಮುನಿಃ |**
**ತಸ್ಯ ದೇವ್ಯೋಽಭವಜ್ಜಾಯಾ ದಾಕ್ಷಾಯಣ್ಯಸ್ತ್ರಯೋದಶ ||**
**ಅದಿತಿರ್ದಿತಿರ್ದನುಃ ಕಾಲಾ ದನಾಯುಃ ಸಿಂಹಿಕಾ ಮುನಿಃ |**
(ಬೃ. ದೇ. ೫. ೧೪೩,೧೪೪)

ಪ್ರಜಾಪತಿಯು ಮರೀಚಿಯೆಂಬ ಪುತ್ರನನ್ನು ಪಡೆದನು. ಮರೀಚಿಯ ಪುತ್ರನೇ ಮಹರ್ಷಿಯಾದ ಕಶ್ಯಪನು ಈ ಕಶ್ಯಪನು ದಕ್ಷಪುತ್ರಿಯರಾದ ಹದಿಮೂರು ದಿವ್ಯಕನ್ಯೆಯರನ್ನು ವಿವಾಹಮಾಡಿಕೊಂಡನು. ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ ಇತ್ಯಾದಿ ನಾಮಾಂಕಿತರೇ ಆ ಕನ್ಯೆಯರು

ತತ್ರೈಕಾ ತ್ವದಿತಿರ್ದೇವೀ ದ್ವಾದಶಾಜನಯತ್ಸುತಾನ್ ।
ಭಗಶ್ಚೈವಾರ್ಯಮಾಂಶಶ್ಚ ಮಿತ್ರೋ ವರುಣ ಏವ ಚ ।
ಧಾತಾ ಚೈವ ವಿಧಾತಾ ಚ ವಿವಸ್ವಾಂಶ್ಚ ಮಹಾದ್ಯುತಿಃ ॥

(ಬೃ ದೇ. ೫. ೧೪೭,೧೪೮)

ಈ ಪುತ್ರಿಯರಲ್ಲಿ ದೇವತಾತ್ಮಕಳಾದ ಅದಿತಿಯು ಹನ್ನೆರಡುಜನ ಪುತ್ರರನ್ನು ಹಡೆದಳು ಭಗ, ಅರ್ಯಮ, ಅಂಶ, ಮಿತ್ರ, ವರುಣ, ಧಾತೃ, ವಿಧಾತೃ, ಮಹಾದ್ಯುತಿಯುಕ್ತನಾದ ವಿವಸ್ವಾನ್ ಮತ್ತು,

ತ್ವಷ್ಟಾ ಪೂಷಾ ತಥೈವೇಂದ್ರೋ ದ್ವಾದಶೋ ವಿಷ್ಣುರುಚ್ಯತೇ ।
ದ್ವಂದ್ವಂ ತಸ್ಯಾಸ್ತು ತಜ್ಜಜ್ಞೇ ಮಿತ್ರಶ್ಚ ವರುಣಶ್ಚ ಹ ॥

(ಬೃ. ದೇ. ೫-೧೪೮)

ತ್ವಷ್ಟೃ, ಪೂಷ, ಇಂದ್ರ ಮತ್ತು ವಿಷ್ಣು ಇವರೇ ಈ ಹನ್ನೆರಡುಮಂದಿ ಮಕ್ಕಳು. ವಿಷ್ಣುವೇ ಹನ್ನೆರಡನೆಯವನು. ಹೀಗೆ ಈ ಅದಿತಿಯಲ್ಲಿ ಮಿತ್ರಾವರುಣರೆಂಬ ದ್ವಂದ್ವರು (ಅವಳಿಮಕ್ಕಳು) ಉತ್ಪನ್ನರಾದರು.

ತಯೋರಾದಿತ್ಯಯೋಸ್ಸತ್ರೇ ದೃಷ್ಟ್ವಾಪ್ಸರಸಮುರ್ವಶೀಂ ।
ರೇತಶ್ಚಸ್ಕಂದ ತತ್ಕುಂಭೇ ನ್ಯಪತದ್ವಾಸತೀವರೇ ॥

(ಬೃ ದೇ ೫ ೧೪೯)

ಈ ದ್ವಾದಶಾದಿತ್ಯರಲ್ಲಿ ಮಿತ್ರಾವರುಣರಿಬ್ಬರೂ ಸಹ ಸತ್ರಾತ್ಮಕವಾದ ಯಾಗಕಾಲದಲ್ಲಿ ದಿವ್ಯಸ್ತ್ರೀಯಾದ ಉರ್ವಶಿಯನ್ನು ನೋಡಿದರು ಅವಳನ್ನು ನೋಡಿದೊಡನೆಯೇ ಅವರಿಗೆ ರೇತಸ್ಸ್ಖಲನವಾಯಿತು ಆಗ ಅದು ವಸತೀವರೀಸಂಜ್ಞಕವಾದ ಪಾತ್ರೆಯಲ್ಲಿ ಒಟ್ಟಿಗೆ ಬಿದ್ದಿತು.

ತೇನೈವ ತು ಮುಹೂರ್ತೇನ ವೀರ್ಯವಂತೌ ತಪಸ್ವಿನೌ ।
ಅಗಸ್ತ್ಯಶ್ಚ ವಸಿಷ್ಠಶ್ಚ ತತ್ರರ್ಷೀ ಸಂಬಭೂವತುಃ ॥

(ಬೃ ದೇ. ೫ ೧೫೦)

ಆ ವೀರ್ಯವು ಆ ಪಾತ್ರೆಯಲ್ಲಿ ಬಿದ್ದೊಡನೆಯೇ ವೀರ್ಯವಂತರೂ ತಪಸ್ವಿಗಳೂ ಆದ ಅಗಸ್ತ್ಯ ಮತ್ತು ವಸಿಷ್ಠಋಷಿಗಳು ಅದರಿಂದ ಉತ್ಪನ್ನರಾದರು. ಅವರ ಉತ್ಪತ್ತಿಕ್ರಮವೇನೆಂದರೆ,

ಬಹುಧಾ ಪತಿತೇ ಶುಕ್ರೇ ಕಲಶೇಽಥ ಜಲೇ ಸ್ಥಲೇ ।
ಸ್ಥಲೇ ವಸಿಷ್ಠಸ್ತು ಮುನಿಃ ಸಂಭೂತ ಋಷಿಸತ್ತಮಃ ॥

(ಬೃ ದೇ. ೫-೧೫೧)

ಮಿತ್ರಾವರುಣರಿಂದ ಸ್ಖಲಿತವಾದ ಆ ವೀರ್ಯವು ಅನೇಕ ವಿಧವಾಗಿ ವಿಭಕ್ತವಾಯಿತು. ಕುಂಭದಲ್ಲಿಯೂ, ಉದಕದಲ್ಲಿಯೂ ಮತ್ತು ಪೃಥ್ವಿಯ ಮೇಲೂ ಚೆಲ್ಲಿತು. ಪೃಥ್ವಿಯಮೇಲೆ ಚೆಲ್ಲಿದ ಅಂಶದಿಂದ ಋಷಿಗಳೆಲ್ಲೆಲ್ಲಾ ಅತಿ ಶ್ರೇಷ್ಠನಾದ ವಸಿಷ್ಠಮಹರ್ಷಿಯು ಪೃಥ್ವಿಯ ಮೇಲೆ ಉತ್ಪನ್ನನಾದನು. (ಅಗಸ್ತ್ಯನು ಕುಂಭದಲ್ಲಿಯೂ, ಮತ್ಸ್ಯವು ಉದಕದಲ್ಲಿಯೂ ಉತ್ಪನ್ನರಾದರು.)

ಸಂಹಿತಾಪಾಠಃ

ಸ ಪ್ರಕೇತ ಉಭಯಸ್ಯ ಪ್ರವಿದ್ವಾನ್ತ್ಸಹಸ್ರದಾನ ಉತ ವಾ ಸದಾನಃ ।
ಯಮೇನ ತತಂ ಪರಿಧಿಂ ವಯಿಷ್ಯನ್ನಪ್ಸರಸಃ ಪರಿ ಜಜ್ಞೇ ವಸಿಷ್ಠಃ ॥ ೧೨ ॥

ಪದಪಾಠಃ

ಸಃ । ಪ್ರಽಕೇತಃ । ಉಭಯಸ್ಯ । ಪ್ರಽವಿದ್ವಾನ್ । ಸಹಸ್ರಽದಾನಃ । ಉತ । ವಾ । ಸಽದಾನಃ ।
ಯಮೇನ । ತತಂ । ಪರಿಽಧಿಂ । ವಯಿಷ್ಯನ್ । ಅಪ್ಸರಸಃ । ಪರಿ । ಜಜ್ಞೇ । ವಸಿಷ್ಠಃ ॥ ೧೨ ॥

ಸಾಯಣಭಾಷ್ಯಂ

ಸ ವಸಿಷ್ಠಃ ಪ್ರಕೇತಃ ಪ್ರಕೃಷ್ಟಜ್ಞಾನ ಉಭಯಸ್ಯೋಭಯಂ ದಿವಂ ಚ ಪೃಥಿವೀಂ ಚ ಪ್ರವಿದ್ವಾನ್ ಪ್ರಕರ್ಷೇಣ ಜಾನನ್ ಸಹಸ್ರದಾನೋಽಭವತ್ । ಕಿಮನೇನ ಸಹಸ್ರದಾನ ಇತಿ ವಿಶೇಷಣೇನ ಉತ ವಾಪಿ ವಾ ಸದಾನಃ ಸರ್ವದಾನಸಹಿತ ಏವಾಭವತ್ । ಕಿಂಚ ವಸಿಷ್ಠೋ ಯಮೇನ ಕಾರಣಾತ್ಮನಾ ಸರ್ವನಿಯಂತ್ರಾ ತತಂ ವಿಸ್ತೃತಂ ಪರಿಧಿಂ ವಸ್ತ್ರಂ । ಪರಿಧಿರಿತ್ಯನೇನ ಸಂಸಾರಪ್ರವಾಹೋ ವಿವಕ್ಷಿತಃ । ತಂ ವಯಿಷ್ಯನ್ನಪ್ಸರಸ ಉರ್ವಶ್ಯಾಃ । ಪರೀತಿ ಪಂಚಮ್ಯರ್ಥಾನುವಾದಃ । ಜಜ್ಞೇ । ಜಾತಃ ॥

ಪ್ರತಿಪದಾರ್ಥ

**ಸಃ**—ಅದೇ ವಸಿಷ್ಠನು । **ಪ್ರಕೇತಃ**—ಉತ್ತಮವಾದ ಜ್ಞಾನವುಳ್ಳವನಾಗಿಯೂ । **ಉಭಯಸ್ಯ**—ದ್ಯಾವಾಪೃಥಿವಿಗಳೆರಡರ ತತ್ತ್ವವನ್ನೂ । **ಪ್ರವಿದ್ವಾನ್**—ಪೂರ್ಣವಾಗಿ ಅರಿತವನಾಗಿಯೂ । **ಸಹಸ್ರದಾನಃ**—ಸಹಸ್ರಸಂಖ್ಯಾಕವಾದ ವಸ್ತುಗಳನ್ನು ದಾನಮಾಡುವವನಾಗಿಯೂ ಆದನು । **ಉತ ವಾ**—ಅಥವಾ । **ಸದಾನಃ**--ದಾನರೂಪನಾಗಿಯೇ ಆದನು. । **ಯಮೇನ**—ಜಗನ್ನಿಯಾಮಕನಾದ ಯಮನಿಂದ । **ತತಂ**—ವಿಸ್ತೃತವಾಗಿ ಹರಡಿದ । **ಪರಿಧಿಂ**—ಸಂಸಾರಪ್ರವಾಹರೂಪವಾದ ವಸ್ತ್ರವನ್ನು । **ವಯಿಷ್ಯನ್**—ಧರಿಸಿ । **ಅಪ್ಸರಸಃ**—ಅಪ್ಸರಸ್ಸ್ತ್ರೀಯಾದ ಉರ್ವಶಿಯಲ್ಲಿ । **ಪರಿ ಜಜ್ಞೇ**—ಉತ್ಪನ್ನನಾದನು

ಭಾವಾರ್ಥ

ಮಹಾಮಹಿಮನಾದ ಅದೇ ವಸಿಷ್ಠನು ಉತ್ತಮವಾದ ಜ್ಞಾನವುಳ್ಳವನಾಗಿಯೂ, ದ್ಯಾವಾಪೃಥಿವಿಗಳೆರಡರ ತತ್ತ್ವವನ್ನೂ ಪೂರ್ಣವಾಗಿ ಅರಿತವನಾಗಿಯೂ ಆಗಿ ಸಹಸ್ರಸಂಖ್ಯಾಕವಾದ ವಸ್ತುಗಳನ್ನು ದಾನಮಾಡುವವನಾಗಿ ಆದನು. ಅಥವಾ ದಾನರೂಪನಾಗಿಯೇ ಆಗಿದ್ದಾನೆ. ಜಗನ್ನಿಯಾಮಕನಾದ ಯಮನಿಂದ ವಿಸ್ತೃತವಾಗಿ ಹರಡಿದ ಸಂಸಾರಪ್ರವಾಹರೂಪವಾದ ವಸ್ತ್ರವನ್ನು ಧರಿಸಿ ಅಪ್ಸರಃಸ್ತ್ರೀಯಾದ ಉರ್ವಶಿಯಲ್ಲಿ ಉತ್ಪನ್ನನಾದನು.

## English Translation

He, the sage, cognizant of both worlds, was the donor of thousands : he was verily donation : wearing the vesture spread by Yama, Vasishtha was born of the Apsaras.

ಸಂಹಿತಾಪಾಠಃ

ಸತ್ರೇ ಹ ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ ।
ತತೋ ಹ ಮಾನ ಉದಿಯಾಯ ಮಧ್ಯಾತ್ತತೋ ಜಾತಮೃಷಿಮಾಹುರ್ವ-
ಸಿಷ್ಠಂ ॥ ೧೩ ॥

ಪದಪಾಠಃ

ಸತ್ರೇ । ಹ । ಜಾತೌ । ಇಷಿತಾ । ನಮಃಽಭಿಃ । ಕುಂಭೇ । ರೇತಃ । ಸಿಸಿಚತುಃ । ಸಮಾನಂ ।
ತತಃ । ಹ । ಮಾನಃ । ಉತ್ । ಇಯಾಯ । ಮಧ್ಯಾತ್ । ತತಃ । ಜಾತಂ । ಋಷಿಂ । ಆಹುಃ ।
ವಸಿಷ್ಠಂ ॥ ೧೩ ॥

ಸಾಯಣಭಾಷ್ಯಂ

ಸತ್ರೇ ಬಹುಕರ್ತೃಕೇ ಯಾಗೇ । ಹೇತಿ ಪೂರಣಃ । ಜಾತೌ ದೀಕ್ಷಿತೌ ಮಿತ್ರಾವರುಣಾವಿಷಿತಾ-ಧ್ಯೇಷಿತೌ ಸ್ವಯಮನ್ಯೈರ್ಜನೈರ್ನಮೋಭಿಃ ಸ್ತುತಿಭಿಃ ಕುಂಭೇ ವಾಸತೀವರೇ ಕಲಶೇ ಸಮಾನಮೇಕ-ದೈವ ರೇತಃ ಸಿಸಿಚತುಃ । ಅಸಿಂಚತಾಂ । ತತೋ ವಾಸತೀವರಾತ್ಕುಂಭಾನ್ಮಧ್ಯಾದಗಸ್ತ್ಯೋ ಮಾನಃ ಶ-ಮ್ಯಾಪ್ರಮಾಣ ಉದಿಯಾಯ । ಪ್ರಾದುರ್ಬಭೂವ । ತತ ಏವ ಕುಂಭಾದ್ವಸಿಷ್ಠಮಪ್ಯೃಷಿಂ ಜಾತಮಾಹುಃ

ಪ್ರತಿಪದಾರ್ಥ

**ಸತ್ರೇ ಹ**—ಸತ್ರಾತ್ಮಕವಾದ ಯಾಗದಲ್ಲಿ । **ಜಾತೌ**—ದೀಕ್ಷಿತರಾದ ಮಿತ್ರಾವರುಣರು । **ನಮೋಭಿಃ**—ಸ್ತುತಿಗಳಿಂದ । **ಇಷಿತಾ**—ಪೂಜಿತರಾಗಿ । **ಕುಂಭೇ**—ವಸತೀವರೀಸಂಜ್ಞಕವಾದ ಕಲಶದಲ್ಲಿ । **ಸಮಾನಂ**—ಒಟ್ಟಿಗೆ । **ರೇತಃ**—ತಮ್ಮ ರೇತಸ್ಸನ್ನು । **ಸಿಸಿಚತುಃ**—ಸೇಕಿಸಿದರು. । **ತತಃ**—ಆ ಕುಂಭದಿಂದ । **ಮಧ್ಯಾತ್**—ಮಧ್ಯಭಾಗದಿಂದ । **ಮಾನಃ**—ಶಮ್ಯಾಪ್ರಮಾಣವುಳ್ಳ ಅಗಸ್ತ್ಯನು । **ಉದಿಯಾಯ**—ಉತ್ಪನ್ನನಾದನು । **ತತಃ**—ಆದರಿಂದಲೇ । **ಜಾತಂ**—ಉತ್ಪನ್ನನಾದ । **ಋಷಿಂ**—ಋಷಿಯನ್ನು । **ವಸಿಷ್ಠಂ**—ವಸಿಷ್ಠ ಋಷಿಯೆಂದು । **ಆಹುಃ**—ಹೇಳುತ್ತಾರೆ.

ಭಾವಾರ್ಥ

ಸತ್ರಾತ್ಮಕವಾದ ಯಾಗದಲ್ಲಿ ದೀಕ್ಷಿತರಾದ ಮಿತ್ರಾವರುಣರು ಸ್ತುತಿಗಳಿಂದ ಪೂಜಿತರಾಗಿ ವಸತೀವರೀಸಂಜ್ಞಕವಾದ ಕಲಶದಲ್ಲಿ ಒಟ್ಟಿಗೆ ತಮ್ಮ ರೇತಸ್ಸನ್ನು ಸೇರಿಸಿದನು. ಆ ಕುಂಭದ ಮಧ್ಯಭಾಗದಿಂದ ಶಮೀಪ್ರಮಾಣವುಳ್ಳ ಅಗಸ್ತ್ಯನು ಉತ್ಪನ್ನನಾದನು. ಆದರಿಂದಲೇ ಉತ್ಪನ್ನನಾದ ಮತ್ತೊಬ್ಬ ಋಷಿಯನ್ನು ವಸಿಷ್ಠಋಷಿಯೆಂದು ಹೇಳುತ್ತಾರೆ.

## English Translation

Consecrated for the sacrifice, propitiated by praises, they, Mitra and Varuña, poured a common effusion into the water jar. from the midst of which Mana uprose, and from which also, they say, Vasishtha was born.

ಸಂಹಿತಾಪಾಠಃ

ಉಕ್ಥಭೃತಂ ಸಾಮಭೃತಂ ಬಿಭರ್ತಿ ಗ್ರಾವಾಣಂ ಬಿಭ್ರತ್ಪ್ರ ವದಾತ್ಯಗ್ರೇ ।
ಉಪೈನಮಾಧ್ವಂ ಸುಮನಸ್ಯಮಾನಾ ಆ ವೋ ಗಚ್ಛಾತಿ ಪ್ರತೃದೋ ವಸಿಷ್ಠಃ॥

ಪದಪಾಠಃ

ಉಕ್ಥಽಭೃತಂ । ಸಾಮಽಭೃತಂ । ಬಿಭರ್ತಿ । ಗ್ರಾವಾಣಂ । ಬಿಭ್ರತ್ । ಪ್ರ । ವದಾತಿ । ಅಗ್ರೇ ।
ಉಪ । ಏನಂ । ಆಧ್ವಂ । ಸುಽಮನಸ್ಯಮಾನಾಃ । ಆ । ವಃ । ಗಚ್ಛಾತಿ । ಪ್ರಽತೃದಃ । ವಸಿಷ್ಠಃ ॥೧೪॥

ಸಾಯಣಭಾಷ್ಯಂ

ಹೇ ಪ್ರತೃದಃ । ಪ್ರತೃದ ಇತಿ ತೃತ್ಸವ ಏವಾಭಿಧೀಯಂತೇ ನಾಮಾಂತರೇಣ । ವೋ ಯುಷ್ಮಾನ್ವಸಿಷ್ಠ ಆ ಗಚ್ಛಾತಿ । ಆಗಚ್ಛತಿ । ಏನಂ ವಸಿಷ್ಠಂ ಸುಮನಸ್ಯಮಾನಾಃ ಸುಮನಸಃ ಸಂತ ಉಪಾಧ್ವಂ । ಉಪತಿಷ್ಠತ । ಆಗತಶ್ಚಾಸೌ ವಸಿಷ್ಠೋ ಯಜ್ಞೇಽಗ್ರೇ ಪುರೋಹಿತೋ ಬ್ರಹ್ಮಾ ಸನ್ನುಕ್ಥಭೃತಂ ಶಸ್ತ್ರಾಣಾಂ ಸಂಭರ್ತಾರಂ ಬಿಭರ್ತಿ । ಸಾಮಭೃತಮುದ್ಗಾತಾರಂ ಬಿಭರ್ತಿ । ಗ್ರಾವಾಣಮಭಿಷವಣಂ ಬಿಭ್ರದ್ಬಿಭ್ರತಮಧ್ವರ್ಯುಂ ಚ ಬಿಭರ್ತಿ । ಪ್ರ ವದಾತಿ । ಯಜ್ಞೇ ಯತ್ಪ್ರವದಿತವ್ಯಂ ಭ್ರೇಷಾದಿನಿಮಿತ್ತೇ ಕರ್ತವ್ಯಮಸ್ತಿ ತದಪಿ ವದತೀತಿ ಕೃತ್ಸ್ನಾನ್ ಪ್ರತೀಂದ್ರೋ ಬ್ರವೀತಿ ॥

ಪ್ರತಿಪದಾರ್ಥ

**ಪ್ರದೃತಃ**—ಎಲೈ ತೃತ್ಸುಗಳೇ, । **ವಃ**—ನಿಮ್ಮ ಬಳಿಗೆ । **ವಸಿಷ್ಠಃ**—ವಸಿಷ್ಠನು । **ಆ ಗಚ್ಛತಿ**—ಬರುತ್ತಾನೆ। **ಏನಂ**—ಈ ವಸಿಷ್ಠನನ್ನು । **ಸುಮನಸ್ಯಮಾನಾಃ**—ಶ್ರದ್ಧೆಯಿಂದ ಸತ್ಕರಿಸುತ್ತಾ । **ಉಪ ಆಧ್ವಂ**—ಎದುರುಗೊಳ್ಳಿರಿ. । (ಈ ವಸಿಷ್ಠನು) **ಅಗ್ರೇ**—ಯಜ್ಞದಲ್ಲಿ ಪುರೋಹಿತನಾಗಿದ್ದು । **ಉಕ್ಥಭೃತಂ**—ಶಸ್ತ್ರವನ್ನು ಪಠಿಸುವ ಹೋತೃವಿಗೆ ನೇತೃವಾಗಿರುತ್ತಾನೆ. । **ಸಾಮಭೃತಂ**—ಉದ್ಗಾತೃವಿಗೂ ಮಾರ್ಗದರ್ಶಕನಾಗಿ । **ಬಿಭರ್ತಿ**—ಧರಿಸುತ್ತಾನೆ. । **ಗ್ರಾವಾಣಂ**—ಹಿಂಡುವ ಕಲ್ಲನ್ನು । **ಬಿಭ್ರತ್**—ಹಿಡಿದಿರುವ ಅಧ್ವರ್ಯುವನ್ನು ಧರಿಸುತ್ತಾನೆ । **ಪ್ರ ವದಾತಿ**—ಯಜ್ಞದಲ್ಲಿ ನೆರವೇರಬೇಕಾದ ಕರ್ಮಗಳನ್ನು ಹೇಳಿಕೊಡುತ್ತಾನೆ

ಭಾವಾರ್ಥ

ಎಲೈ ತೃತ್ಸುಗಳೇ, ಪೂಜ್ಯನಾದ ವಸಿಷ್ಠನು ನಿಮ್ಮಲ್ಲಿಗೆ ಬರುತ್ತಾನೆ. ಈ ವಸಿಷ್ಠನನ್ನು ಶ್ರದ್ಧೆಯಿಂದ ಸತ್ಕರಿಸುತ್ತಾ ಎದುರುಗೊಳ್ಳಿರಿ. ಈ ವಸಿಷ್ಠನು ಯಜ್ಞದಲ್ಲಿ ಮುಖ್ಯನಾದ ಪುರೋಹಿತನಾಗಿದ್ದು ಶಸ್ತ್ರವನ್ನು ಪಠಿಸುವ ಹೋತೃವಿಗೂ, ಸಾಮವನ್ನು ಪಠಿಸುವ ಉದ್ಗಾತೃವಿಗೂ ಮಾರ್ಗದರ್ಶಕನಾಗಿ ಅವರಿಗೆಲ್ಲಾ ನೇತೃವಾಗಿರುತ್ತಾನೆ. ಹಿಂಡುವ ಕಲ್ಲನ್ನು ಧರಿಸಿರುವ ಅಧ್ವರ್ಯುವಿಗೂ ಸಹಾಯಕನಾಗಿರುತ್ತಾನೆ. ಯಜ್ಞದಲ್ಲಿ ನೆರವೇರಬೇಕಾದ ಕರ್ಮಗಳನ್ನೆಲ್ಲಾ ಹೇಳಿಕೊಡುತ್ತಾನೆ.

## English Translation

Tritsus, Agastya comes to you; welcome him with devoted minds,

and he in the foremost station directs the reciter of the prayer, the chaunter of the hymn, the grinder of the stone, and repeats (what is to be repeated).

## ಮೂವತ್ತನಾಲ್ಕನೆಯ ಸೂಕ್ತವು

ಸಾಯಣಭಾಷ್ಯಂ

**ತೃತೀಯೇಽನುವಾಕೇ ದ್ವಾವಿಂಶತಿ ಸೂಕ್ತಾನಿ । ತತ್ರ ಪ್ರ ಶುಕ್ರೇತಿ ಪಂಚವಿಂಶತ್ಯೃಚಂ ಪ್ರಥಮಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಪ್ರಶುಕ್ರಾ ಪಂಚಾಧಿಕಾ ವೈಶ್ವದೇವಂ ಹಾದ್ಯಾ ಏಕವಿಂಶತಿರ್ದ್ವಿಪದಾ ಅಬ್ಜಾಮಹೇರರ್ಧರ್ಚ ಉತ್ತರೋಽಹಿರ್ಬುಧ್ನ್ಯಾಯೇತಿ । ವಸಿಷ್ಠ ಋಷಿಃ । ಆದ್ಯಾ ಏಕವಿಂಶತಿರ್ದ್ವಿಪದಾ ವಿಂಶತ್ಯಕ್ಷರಾ ವಿರಾಜೋ ದ್ವಾವಿಂಶಾದ್ಯಾಶ್ಚತಸ್ರಸ್ತ್ರಿಷ್ಟುಭಃ । ವಿಶ್ವೇ ದೇವಾ ದೇವತಾ ॥ ವ್ಯೂಳ್ಹೇ ದಶರಾತ್ರೇ ಚತುರ್ಥೇಽಹನಿ ವೈಶ್ವದೇವಶಸ್ತ್ರ ಇದಂ ಸೂಕ್ತಂ ವೈಶ್ವದೇವನಿವಿದ್ಧಾನಂ । ಸೂತ್ರಿತಂ ಚ । ಪ್ರ ಶುಕ್ರೈತ್ವಿತಿ ವೈಶ್ವದೇವಂ । ಆ ೮ ೮ । ಇತಿ ॥ ಷೋಡಶಿನ್ಯಾ ಧೂರ್ಷ್ವಸ್ಮಾ ಇತಿ ದ್ವಿಪದಾ । ಆ. ೬-೨ । ಇತಿ ॥ ಮಹಾವ್ರತೇಽಪ್ಯೇಷಾ ದ್ವಿಪದಾ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಆ ಧೂರ್ಷ್ವಸ್ಮಾ ಇತ್ಯೇಕಾ ಸೂದದೋಹಾಃ । ಐ ಆ. ೫-೮ । ಇತಿ ॥**

**ಅನುವಾದವು**—ಋಗ್ವೇದಸಂಹಿತೆಯ ಸಪ್ತಮಮಂಡಲದ ಮೂರನೆಯ ಅನುವಾಕದಲ್ಲಿ ಇಪ್ಪತ್ತೆರಡು ಸೂಕ್ತಗಳಿರುವುವು ಅವುಗಳಲ್ಲಿ **ಪ್ರ ಶುಕ್ರಾ** ಎಂಬ ಸೂಕ್ತವು ಮೊದಲನೆಯದು. ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವುವು ಅನುಕ್ರಮಣಿಕೆಯಲ್ಲಿ—**ಪ್ರ ಶುಕ್ರಾ ಪಂಚಾಧಿಕಾ ವೈಶ್ವದೇವಂ ಹಾದ್ಯಾ ಏಕವಿಂಶತಿರ್ದ್ವಿಪದಾ ಅಬ್ಜಾಮಹೇರರ್ಧರ್ಚ ಉತ್ತರೋಽಹಿರ್ಬುಧ್ನ್ಯಾಯ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ವಿಶ್ವೇದೇವತೆಗಳು ದೇವತೆಯು, ಈ ಸೂಕ್ತದ ಮೊದಲಿನ ಇಪ್ಪತ್ತೊಂದು ಋಕ್ಕುಗಳು ಇಪ್ಪತ್ತಕ್ಷರಗಳ ದ್ವಿಪದಾ ವಿರಾಟ್ ಎಂಬ ಛಂದಸ್ಸಿನವು. ಇಪ್ಪತ್ತೆರಡರಿಂದ ಮುಂದಿನ ನಾಲ್ಕು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು ವ್ಯೂಳ್ಹವೆಂಬ ದಶರಾತ್ರ ಯಾಗದಲ್ಲಿ ನಾಲ್ಕನೆಯ ದಿವಸ ಪಠಿಸುವ ವೈಶ್ವದೇವಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ವೈಶ್ವದೇವನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಪ್ರ ಶುಕ್ರೈತ್ವಿತಿ ವೈಶ್ವದೇವಂ** ಎಂಬ ಸೂತ್ರದಿಂದ (ಆ. ೮-೮) ವಿವೃತವಾಗಿರುವುದು. ಷೋಡಶೀ ಎಂಬ ಯಾಗದಲ್ಲಿಯೂ ಇದರ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ-**ಆ ಧೂರ್ಷ್ವಸ್ಮಾ ಇತಿ ದ್ವಿಪದಾ** ಎಂಬ ಸೂತ್ರದಿಂದ (ಆ. ೬-೨) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ಈ ಸೂಕ್ತದ ದ್ವಿಪದಾ ಛಂದಸ್ಸಿನ ಋಕ್ಕುಗಳ ವಿನಿಯೋಗವಿರುವುದಂದು **ಐತರೇ**ಯಾರಣ್ಯಕದ ಪಂಚಮಾರಣ್ಯಕದ-**ಆ ಧೂರ್ಷ್ವಸ್ಮಾ ಇತ್ಯೇಕಾ ಸೂದದೋಹಾಃ** ಎಂಬ ವಾಕ್ಯದಿಂದ (ಐ ೫ ೨ ೨) ನಿರ್ದಿಷ್ಟವಾಗಿರುವುದು.

### ಸೂಕ್ತ—೩೪

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೩೪ ॥
ಅಷ್ಟಕ—೫ ॥ ಅಧ್ಯಾಯ—೩ ॥ ವರ್ಗ—೨೫, ೨೬, ೨೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೫ ॥
ಋಷಿಃ—ವಸಿಷ್ಠಃ ॥
ದೇವತಾ—೧-೧೫, ೧೮-೨೫. ವಿಶ್ವೇ ದೇವಾಃ । ೧೬. ಅಹಿಃ । ೧೭. ಅಹಿರ್ಬುರ್ಧ್ನ್ಯಃ ॥
ಛಂದಃ—೧-೨೧. ದ್ವಿಪದಾ । ೨೨-೨೫. ತ್ರಿಷ್ಟುಪ್ ॥

ಸಂಹಿತಾಪಾಠಃ

**ಪ್ರ ಶುಕ್ರೈತು ದೇವೀ ಮನೀಷಾ ಅಸ್ಮತ್ಸುತಷ್ಟೋ ರಥೋ ನ ವಾಜೀ ॥ ೧ ॥**

ಪದಪಾಠಃ

ಪ್ರ । ಶುಕ್ರಾ । ಏತು । ದೇವೀ । ಮನೀಷಾ । ಅಸ್ಮತ್ । ಸುऽತಷ್ಟಃ । ರಥಃ । ನ । ವಾಜೀ ॥ ೧ ॥

ಸಾಯಣಭಾಷ್ಯಂ

ಶುಕ್ರಾ ದೀಪ್ತಾ ದೇವೀ ಸರ್ವೇಷಾಂ ಕಾಮಾನಾಂ ಪ್ರದಾತ್ರೀ ಮನೀಷಾ ಸ್ತುತಿರಸ್ಮದಸ್ಮತ್ತೋऽಸ್ಮಿನ್ ಸೂಕ್ತೇ ಸ್ತೋಷ್ಯಮಾಣಾನ್ದೇವಾನ್ ವಾಜೀ ವೇಗವಾನ್ ಸುತಷ್ಟಃ ಸುಸಂಸ್ಕೃತೋ ರಥೋ ನ ರಥ ಇವ ಪ್ರೈತು । ಪ್ರಗಚ್ಛತು ॥

ಪ್ರತಿಪದಾರ್ಥ

**ಶುಕ್ರಾ**—ಪ್ರಭಾವಯುತವಾದುದೂ । **ದೇವೀ**—ಕಾಮ ವರ್ಷಕವಾದುದೂ ಆದ । **ಮನೀಷಾ** ನಮ್ಮ ಸ್ತುತಿಯು । **ಅಸ್ಮತ್**—ನಮ್ಮಿಂದ ಪರಿತವಾಗಿ । **ವಾಜೀ**—ವೇಗಗಾಮಿಯೂ । **ಸುತಷ್ಟಃ**—ಸುಸಂಸ್ಕೃತವಾದುದೂ ಆದ । **ರಥೋ ನ**—ರಥದಂತೆ । **ಪ್ರ ಏತು**—ವೇಗವಾಗಿ (ದೇವತೆಗಳಲ್ಲಿಗೆ) ಚಲಿಸಲಿ.

ಭಾವಾರ್ಥ

ಪ್ರಭಾಯುತವಾದುದೂ, ಕಾಮವರ್ಷಕವಾದುದೂ ಆದ ನಮ್ಮ ಸ್ತುತಿಯು ನಮ್ಮಿಂದ ಪರಿತವಾಗಿ ವೇಗಗಾಮಿಯೂ ಸುಸಂಸ್ಕೃತವಾದುದೂ ಆದ ರಥದಂತೆ ವೇಗವಾಗಿ ಚಲಿಸಿ ದೇವತೆಗಳನ್ನು ಹೋಗಿ ಸೇರಲಿ.

English Translation

May pure and divine praise proceed from us (to the gods) like a swift, well-constructed chariot

ಸಂಹಿತಾಪಾಠಃ

ವಿದುಃ ಪೃಥಿವ್ಯಾ ದಿವೋ ಜನಿತ್ರಂ ಶೃಣ್ವಂತ್ಯಾಪೋ ಅಧ ಕ್ಷರಂತೀಃ ॥ ೨ ॥

ಪದಪಾಠಃ

ವಿದುಃ । ಪೃಥಿವ್ಯಾಃ । ದಿವಃ । ಜನಿತ್ರಂ । ಶೃಣ್ವಂತಿ । ಆಪಃ । ಅಧ । ಕ್ಷರಂತೀಃ ॥ ೨ ॥

ಸಾಯಣಭಾಷ್ಯಂ

ಅಸ್ಯಾಮೃಚ್ಯಾಪಃ ಸ್ತೂಯಂತೇ । ಕ್ಷರಂತೀಃ ಕ್ಷರಂತ್ಯ ಆಪೋ ದಿವಃ ಪೃಥಿವ್ಯಾಶ್ಚ । ಉಭಯೋರಪಿ ಲೋಕಯೋರಿತ್ಯರ್ಥಃ । ಜನಿತ್ರಮುತ್ಪತ್ತಿಂ ವಿದುಃ । ಜಾನಂತಿ । ಅಧಾಪಿ ಚ ಶೃಣ್ವಂತಿ ಸ್ತೋತ್ರಾಣೀತಿ ಶೇಷಃ ॥

ಪ್ರತಿಪದಾರ್ಥ

**ಕ್ಷರಂತೀಃ**—ಪ್ರವಹಿಸತಕ್ಕ । **ಆಪಃ**—ಉದಕಗಳು । **ದಿವಃ**—ದ್ಯುಲೋಕದ (ಮತ್ತು) । **ಪೃಥಿವ್ಯಾಃ**—ಪೃಥ್ವಿಯ । **ಜನಿತ್ರಂ**—ಉತ್ಪತ್ತಿಕ್ರಮವನ್ನು । **ವಿದುಃ**—ಅರಿತಿವೆ. । **ಅಧ**—ಆದುದರಿಂದ । **ಶೃಣ್ವಂತಿ**—ನಮ್ಮ ಸ್ತುತಿಗಳನ್ನು ಕೇಳುತ್ತವೆ.

ಭಾವಾರ್ಥ

ಪ್ರವಹಿಸತಕ್ಕ ಉದಕಗಳು ದ್ಯುಲೋಕದ ಮತ್ತು ಪೃಥ್ವಿಯ ಉತ್ಪತ್ತಿಕ್ರಮವನ್ನು ಅರಿತಿವೆ. ಆದುದರಿಂದ ನಮ್ಮ ಸ್ತುತಿಗಳನ್ನು ಕೇಳುತ್ತವೆ.

English Translation

The flowing waters have known the origin of earth and heaven . may they now hear (our praises).

ಸಂಹಿತಾಪಾಠಃ

ಆಪಶ್ಚಿದಸ್ಮೈ ಪಿನ್ವಂತ ಪೃಥ್ವೀರ್ವೃತ್ರೇಷು ಶೂರಾ ಮಂಸಂತ ಉಗ್ರಾಃ ॥ ೩ ॥

ಪದಪಾಠಃ

ಆಪಃ । ಚಿತ್ । ಅಸ್ಮೈ । ಪಿನ್ವಂತ । ಪೃಥ್ವೀಃ । ವೃತ್ರೇಷು । ಶೂರಾಃ । ಮಂಸಂತೇ । ಉಗ್ರಾಃ ॥ ೩ ॥

ಸಾಯಣಭಾಷ್ಯಂ

ಇಂದ್ರೋಽಸ್ಮಿದ್ವ್ಯಚೇ ಸ್ತೂಯತೇ । ಪೃಥ್ವೀಃ ಪೃಥ್ವ್ಯಃ ಪ್ರಥಮಾನಾ ಆಪಶ್ಚಿದಾಪೋಽಪ್ಯ-ಸ್ಮಾ ಇಂದ್ರಾಯ ಪಿನ್ವಂತ । ಪ್ಯಾಯಂತೇ । ವೃತ್ರೇಷೂಪದ್ರವೇಷು ಸತ್ಸೂಗ್ರಾ ಉದ್ಗೂರ್ಣಾಸ್ತೇಜ-ಸ್ವಿನೋ ವಾ ಶೂರಾ ಯೋದ್ಧಾರೋಽಪಿ ಮಂಸಂತೇ । ಇಮಮೇವೇಂದ್ರಂ ಸ್ತುವಂತಿ ॥

ಪ್ರತಿಪದಾರ್ಥ

**ಪೃಥ್ವೀಃ**—ವಿಸ್ತೃತವಾಗಿ ಹರಡಿರುವ । **ಆಪಶ್ಚಿತ್**—ಉದಕಗಳೂ ಕೂಡ । **ಅಸ್ಮೈ**—ಈ ಇಂದ್ರನಿಗೆ । **ಪಿನ್ವಂತ**—ಪುಷ್ಟಿಯನ್ನುಂಟುಮಾಡುತ್ತವೆ । **ವೃತ್ರೇಷು**—ಶತ್ರುಹಿಂಸಕವಾದ ಯುದ್ಧಗಳಲ್ಲಿ । **ಉಗ್ರಾಃ**—ಭಯಂಕರವಾದ ಶಕ್ತಿಯನ್ನು ಪ್ರಕಟಿಸುವ । **ಶೂರಾಃ**—ಪರಾಕ್ರಮಿಗಳೂ ಸಹ । **ಮಂಸಂತೇ**—ಈ ಇಂದ್ರನನ್ನು ಸ್ತುತಿಸುತ್ತಾರೆ.

ಭಾವಾರ್ಥ

ವಿಸ್ತೃತವಾಗಿ ಹರಡಿರುವ ಉದಕಗಳೂ ಕೂಡ ಈ ಇಂದ್ರನಿಗೆ ಪುಷ್ಟಿದಾಯಕವಾಗಿರುತ್ತವೆ ಶತ್ರುಹಿಂಸಕವಾದ ಯುದ್ಧಗಳಲ್ಲಿ ಭಯಂಕರವಾದ ಶಕ್ತಿಯನ್ನು ಪ್ರಕಟಿಸುವ ಪರಾಕ್ರಮಿಗಳೂ ಸಹ ಈ ಇಂದ್ರನನ್ನು ಸ್ತುತಿಸುತ್ತಾರೆ.

English Translation

The vast waters offer nurishment to Indra · fierce warriors, (combating) with foes, glorify him.

ಸಂಹಿತಾಪಾಠಃ

ಆ ಧೂರ್ಷ್ವಸ್ಮೈ ದಧಾತಾಶ್ವಾನಿಂದ್ರೋ ನ ವಜ್ರೀ ಹಿರಣ್ಯಬಾಹುಃ ॥ ೪ ॥

ಪದಪಾಠಃ

ಆ । ಧೂಃಽಸು । ಅಸ್ಮೈ । ದಧಾತ । ಅಶ್ವಾನ್ । ಇಂದ್ರಃ । ನ । ವಜ್ರೀ । ಹಿರಣ್ಯಽಬಾಹುಃ ॥ ೪ ॥

ಸಾಯಣಭಾಷ್ಯಂ

ಅಸ್ಮೈ । ಷಷ್ಠ್ಯರ್ಥೇ ಚತುರ್ಥೀ । ಅಸ್ಯೇಂದ್ರಸ್ಯಾಗಮನಾಯಾಶ್ವಾನ್ ಧೂರ್ಷು ರಥಸ್ಯಾ ದಧಾತ । ಇಂದ್ರೋ ನ । ನೇತಿ ಚಾರ್ಥೇ । ಇಂದ್ರೋ ವಜ್ರೀ ವಜ್ರವಾನ್ ಹಿರಣ್ಯಬಾಹುರ್ಹಿರಣ್ಯಹಸ್ತಶ್ಚ ಭವತಿ ॥ ಷೋಡಶಿನಿ ಶಸ್ಯಮಾನತ್ವಾದಸ್ಯಾ ಐಂದ್ರತ್ವಂ ಗಮ್ಯತೇ । ಆ ಧೂರ್ಷ್ವಸ್ಮಾ ಇತ್ಯತ್ರಾಸ್ಮಾ ಇತ್ಯಸ್ಯ ಪದಸ್ಯಾನುದಾತ್ತತ್ವಂ ಪೂರ್ವಸ್ಯಾಮಿಂದ್ರಸ್ಯ ಪ್ರಕೃತತ್ವಾತ್ ಅತ ಏವ ಪೂರ್ವಾಸ್ವೈಂದ್ರೀತಿ ವಿಜ್ಞಾಯತೇ । ಪೂರ್ವಸ್ಯಾಮಸ್ಯೈಚ್ಛಸ್ಮಾ ಇತ್ಯತ್ರಾನುದಾತ್ತತ್ವಮಲ್ಪೀಯೋಽರ್ಥತರಮನುದಾತ್ತಮಿತಿ । ತಥಾ ಚ ಯಾಸ್ಕಃ । ಅಸ್ಯೇತಿ ಚೋದಾತ್ತಂ ಪ್ರಥಮಾದೇಶೇಽನುದಾತ್ತಮನ್ವಾದೇಶೇ ತೀವ್ರಾರ್ಥತರಮುದಾತ್ತಮಲ್ಪೀಯೋಽರ್ಥತರಮನುದಾತ್ತಂ । ನಿ ೪-೨೫ । ಇತಿ । ಅಲ್ಪೀಯಸ್ತ್ವಂ ಚೇದಂಶಬ್ದಪ್ರವೃತ್ತಿನಿಮಿತ್ತಸ್ಯ ಸಂನಿಧಾನಸ್ಯ ದೂರಸ್ಥತ್ವೇನೇತ್ಯವಗಂತವ್ಯಂ ॥

ಪ್ರತಿಪದಾರ್ಥ

ಇಂದ್ರೋ ನ— ಈ ಇಂದ್ರನೂ ಸಹ । ವಜ್ರೀ—ವಜ್ರಾಯುಧಧಾರಿಯಾಗಿಯೂ । ಹಿರಣ್ಯಬಾಹುಃ— ಸುವರ್ಣಮಯವಾದ ಬಾಹುವುಳ್ಳವನಾಗಿಯೂ ಆಗಿದ್ದಾನೆ. । ಅಸ್ಮೈ— ಈ ಇಂದ್ರನ ಆಗಮನಕ್ಕಾಗಿ । ಧೂರ್ಷು— ರಥದ ನೊಗಗಳಲ್ಲಿ । ಅಶ್ವಾನ್—ಕುದುರೆಗಳನ್ನು । ಆ ದಧಾತ—ಸೇರಿಸಿ ಕಟ್ಟಿರಿ

ಭಾವಾರ್ಥ

ಈ ಇಂದ್ರನೂ ಸಹ ವಜ್ರಾಯುಧಧಾರಿಯಾಗಿಯೂ ಸುವರ್ಣಮಯವಾದ ಬಾಹುವುಳ್ಳವನಾಗಿಯೂ ಇದ್ದಾನೆ. ಈ ಇಂದ್ರನ ಆಗಮನಕ್ಕಾಗಿ ರಥದ ನೊಗಗಳಿಗ ಕುದುರೆಗಳನ್ನು ಸೇರಿಸಿ ಕಟ್ಟಿರಿ

English Translation

Yoke for him the horses of his chariot, for Indra is the wielder of the thunderbolt, the golden-armed.

ಸಂಹಿತಾಪಾಠಃ

ಅಭಿ ಪ್ರ ಸ್ಥಾತಾಹೇವ ಯಜ್ಞಂ ಯಾತೇವ ಪತ್ಮನ್ತ್ಮನಾ ಹಿನೋತ ॥ ೫ ॥

ಪದಪಾಠಃ

ಅಭಿ । ಪ್ರ । ಸ್ಥಾತ । ಅಹಃಽಇವ । ಯಜ್ಞಂ । ಯಾತಾಽಇವ । ಪತ್ಮನ್ । ತ್ಮನಾ । ಹಿನೋತ ॥ ೫ ॥

ಸಾಯಣಭಾಷ್ಯಂ

ಯಜ್ಞಸ್ತುತಿರಿಯಂ । ಹೇ ಜನಾಃ ಯಜ್ಞಮಭಿ ಪ್ರ ಸ್ಥಾತ । ಅಭಿಕ್ರಮತ । ಅಹೇವೇತಿ ಪೂರಣೌ । ಅಪಿ ಚ ಪತ್ಮನ್ ಪತ್ಮನಿ ಯಜ್ಞಮಾರ್ಗೇ ತ್ಮನಾ ಸ್ವಯಮೇವ ಯಾತೇವ ಗಂತೇವ ಹಿನೋತ ಗಚ್ಛತ ॥ ಹಿ ಗತಾವಿತಿ ಧಾತುಃ ॥

ಪ್ರತಿಪದಾರ್ಥ

(ಎಲೈ ಯಜಮಾನಾದಿಗಳೇ) ಯಜ್ಞಂ ಅಭಿ—ಯಜ್ಞಕ್ಕಭಿಮುಖವಾಗಿ । ಪ್ರ ಸ್ಥಾತ—ಹೊರಡಿರಿ. । ಪತ್ಮನ್—ಯಜ್ಞಮಾರ್ಗದಲ್ಲಿ । ತ್ಮನಾ—ಸ್ವಯಂಪ್ರೇರಣೆಯಿಂದ । ಯಾತೇವ—ಸಂಚರಿಸುವವನಂತೆ । ಹಿನೋತ —ಹೋಗಿರಿ.

ಭಾವಾರ್ಥ

ಎಲೈ ಯಜಮಾನಾದಿಗಳೇ, ಯಜ್ಞಕ್ಕಭಿಮುಖವಾಗಿ ಹೊರಡಿರಿ. ಮಾರ್ಗಸಂಚಾರಿಯು ಇತರರ ನಿರ್ಬಂಧ ವಿಲ್ಲದೇ ಸ್ವಯಂಪ್ರೇರಿತನಾಗಿ ಹೋಗುವಂತೆ ನೀವು ಯಜ್ಞಮಾರ್ಗವನ್ನನುಸರಿಸಿ ಹೊರಡಿರಿ.

English Translation

Proceed to the sacrifice like one who goes along the road; proceed of your own accord

ಸಂಹಿತಾಪಾಠಃ

ತ್ಮನಾ ಸಮತ್ಸು ಹಿನೋತ ಯಜ್ಞಂ ದಧಾತ ಕೇತುಂ ಜನಾಯ ವೀರಂ ॥ ೬ ॥

ಪದಪಾಠಃ

ತ್ಮನಾ । ಸಮತ್ಽಸು । ಹಿನೋತ । ಯಜ್ಞಂ । ದಧಾತ । ಕೇತುಂ । ಜನಾಯ । ವೀರಂ ॥ ೬ ॥

ಸಾಯಣಭಾಷ್ಯಂ

ಉಕ್ತಸ್ಯೈವ ವಿವರಣಮತ್ರ । ಹೇ ಮದೀಯಾ ಜನಾಃ ಸಮತ್ಸು ಸಂಗ್ರಾಮೇಷು ತ್ಮನಾ ಸ್ವಯಮೇವ ಹಿನೋತ । ಗಚ್ಛತ । ಅಪಿ ಚ ಕೇತುಂ ಪ್ರಜ್ಞಾಪಕಂ ವೀರಂ ಪಾಪಾನಾಂ ವಾರಯಿತಾರಂ । ನಾಶಕಮಿತ್ಯರ್ಥಃ । ಯಜ್ಞಂ ಜನಾಯ ಲೋಕಾಯ । ತದ್ರಕ್ಷಾರ್ಥಮಿತ್ಯರ್ಥಃ । ದಧಾತ । ವಿಧತ್ತ ॥

ಪ್ರತಿಪದಾರ್ಥ

( ಎಲೈ ಯಜಮಾನಾದಿಗಳೇ ) **ಸಮತ್ಸು**—ಸಂಗ್ರಾಮಗಳಿಗೆ । **ತ್ಮನಾ**—ಸ್ವಯಂಪ್ರೇರಿತರಾಗಿಯೇ । **ಹಿನೋತ**—ಹೋಗಿರಿ. । **ಕೇತುಂ**—ಪ್ರಜ್ಞಾಪಕವಾದುದೂ । **ವೀರಂ**—ಪಾಪನಾಶಕವಾದುದೂ ಆದ । **ಯಜ್ಞಂ**—ಯಜ್ಞವನ್ನು । **ಜನಾಯ**—ಲೋಕಹಿತಕ್ಕಾಗಿ । **ದಧಾತ**—ಆಚರಿಸಿರಿ.

ಭಾವಾರ್ಥ

ಎಲೈ ಯಜಮಾನಾದಿಗಳೇ, ನೀವು ಸಂಗ್ರಾಮಗಳಿಗೆ ಸ್ವಯಂಪ್ರೇರಿತರಾಗಿಯೇ ಹೋಗಿರಿ. ಪ್ರಜ್ಞಾಪಕವಾದುದೂ, ಪಾಪನಾಶಕವಾದುದೂ ಆದ ಯಜ್ಞವನ್ನು ಲೋಕಹಿತಕ್ಕಾಗಿ ಆಚರಿಸಿರಿ.

English Translation

Go of your own accord to battle . celebrate the significant and expiatory sacrifice for (the good of) mankind.

ಸಂಹಿತಾಪಾಠಃ

ಉದಸ್ಯ ಶುಷ್ಮಾದ್ಭಾನುರ್ನಾರ್ತ ಬಿಭರ್ತಿ ಭಾರಂ ಪೃಥಿವೀ ನ ಭೂಮ ॥ ೭ ॥

ಪದಪಾಠಃ

ಉತ್ । ಅಸ್ಯ । ಶುಷ್ಮಾತ್ । ಭಾನುಃ । ನ । ಆರ್ತ । ಬಿಭರ್ತಿ । ಭಾರಂ । ಪೃಥಿವೀ । ನ । ಭೂಮ ॥ ೭ ॥

ಸಾಯಣಭಾಷ್ಯಂ

**ಅಸ್ಯ ಯಜ್ಞಸ್ಯ ಶುಷ್ಮಾದ್ಬಲಾದ್ಭಾನುಃ ಸೂರ್ಯ ಉದಾರ್ತ । ಉದ್ಗಚ್ಛತಿ । ಭೂಮ ಭೂತಾನಿ ಪೃಥಿವೀವ ಭಾರಂ ಲೋಕಸ್ಯಾಯಂ ಯಜ್ಞೋ ಬಿಭರ್ತಿ ಚ ॥**

ಪ್ರತಿಪದಾರ್ಥ

**ಅಸ್ಯ**—ಈ ಯಜ್ಞದ । **ಶುಷ್ಮಾತ್**—ಬಲದಿಂದಲೇ । **ಭಾನುಃ**—ಸೂರ್ಯನು । **ಉದಾರ್ತ**—ಉದಯಿಸಿ ಬರುತ್ತಾನೆ । **ಭೂಮ**—ಸಕಲ ಭೂತಗಳನ್ನೂ । **ಪೃಥಿವೀ ನ**— ಪೃಥ್ವಿಯು ವಹಿಸುವಂತೆ । **ಭಾರಂ**—ಈ ಲೋಕದ ಭಾರವನ್ನು । **ಬಿಭರ್ತಿ**—ಈ ಯಜ್ಞವು ಭರಿಸುತ್ತದೆ

ಭಾವಾರ್ಥ

ಈ ಯಜ್ಞದ ಪ್ರಭಾವದಿಂದಲೇ, ಸೂರ್ಯನು ಉದಯಿಸಿ ಬರುತ್ತಾನೆ ಸಕಲ ಭೂತಗಳನ್ನೂ ಪೃಥ್ವಿಯು ವಹಿಸುವಂತೆ ಈ ಲೋಕದ ಭಾರವನ್ನು ಈ ಯಜ್ಞವು ಭರಿಸುತ್ತದೆ

English Translation

From the force of this (sacrifice) the sun rises it sustains the burden (of the world) as (earth) supports many (beings)

ಸಂಹಿತಾಪಾಠಃ

ಹ್ವಯಾಮಿ ದೇವಾ ಅಯಾತುರಗ್ನೇ ಸಾಧನ್ನೃತೇನ ಧಿಯಂ ದಧಾಮಿ ॥ ೮ ॥

ಪದಪಾಠಃ

ಹ್ವಯಾಮಿ । ದೇವಾನ್ । ಅಯಾತುಃ । ಅಗ್ನೇ । ಸಾಧನ್ । ಋತೇನ । ಧಿಯಂ । ದಧಾಮಿ ॥ ೮ ॥

ಸಾಯಣಭಾಷ್ಯಂ

**ಅಸ್ಮಿಂಸ್ತ್ವೃಚೇ ದೇವಾಃ ಸ್ತೂಯಂತೇ । ಹೇ ಅಗ್ನೇ ಅಯಾತುರಹಿಂಸಾದಿನಿಯಮಯುಕ್ತೇನ-ರ್ತೇನ ಯಜ್ಞೇನ ಸಾಧನ್ನಾಮಾನ್ಸಾಧಯನ್ ದೇವಾನ್ ಹ್ವಯಾಮಿ । ಅಪಿ ಚ ಧಿಯಂ ದೇವಾನಾಂ ಪರಿ-ಚರಣಾತ್ಮಕಂ ಕರ್ಮ ದಧಾಮಿ । ಕರೋಮೀತ್ಯರ್ಥಃ ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ಅಯಾತುಃ**—ಅಹಿಂಸಾದಿ ನಿಯಮದಿಂದ ಕೂಡಿದ । **ಋತೇನ**—ಯಜ್ಞದಿಂದ । **ಸಾಧನ್**—ಪೂಜಿಸುತ್ತಾ । **ದೇವಾನ್**—ದೇವತೆಗಳನ್ನು । **ಹ್ವಯಾಮಿ**—ಪ್ರಾರ್ಥಿಸಿ ಕರೆಯುತ್ತೇನೆ. । **ಧಿಯಂ**—ದೇವಪೂಜಾಕರ್ಮವನ್ನು । **ದಧಾಮಿ**—ನೆರವೇರಿಸುತ್ತೇನೆ.

ಭಾವಾರ್ಥ

ಎಲೈ ಅಗ್ನಿಯೇ, ಅಹಿಂಸಾದಿ ನಿಯಮದಿಂದ ಕೂಡಿದ ಯಜ್ಞದಿಂದ ಪೂಜಿಸುತ್ತಾ ದೇವತೆಗಳನ್ನು ಪ್ರಾರ್ಥಿಸಿ ಕರೆಯುತ್ತೇನೆ ದೇವಪೂಜಾಕರ್ಮವನ್ನು ನೆರವೇರಿಸುತ್ತೇನೆ.

English Translation

I invoke the gods, Agni, propitiating them by an inoffensive rite, I celebrate a pious act.

ಸಂಹಿತಾಪಾಠಃ

ಅಭಿ ವೋ ದೇವೀಂ ಧಿಯಂ ದಧಿಧ್ವಂ ಪ್ರ ವೋ ದೇವತ್ರಾ ವಾಚಂ ಕೃಣುಧ್ವಂ

ಪದಪಾಠಃ

ಅಭಿ । ವಃ । ದೇವೀಂ । ಧಿಯಂ । ದಧಿಧ್ವಂ । ಪ್ರ । ವಃ । ದೇವsತ್ರಾ । ವಾಚಂ । ಕೃಣುಧ್ವಂ ॥ ೯ ॥

ಸಾಯಣಭಾಷ್ಯಂ

**ಹೇ ಜನಾಃ ವೋ ಯೂಯಮಭಿ ದೇವಾನುದ್ದಿಶ್ಯ ದೇವೀಂ ದೀಪ್ತಾಂ ಧಿಯಂ ಕರ್ಮ ದಧಿಧ್ವಂ। ವಿಧತ್ತ । ಅಪಿ ಚ ವೋ ಯೂಯಂ ದೇವತ್ರಾ ದೇವೇಷು ವಾಚಂ ಸ್ತುತಿರೂಪಾಂ ಪ್ರ ಕೃಣುಧ್ವಂ। ಪ್ರಕರ್ಷೇಣ ಕುರುಧ್ವಂ ॥**

ಪ್ರತಿಪದಾರ್ಥ

(ಎಲೈ ಯಜಮಾನಾದಿಗಳೇ) **ವಃ**—ನೀವು । **ಅಭಿ**—ದೇವತೆಗಳನ್ನುದ್ದೇಶಿಸಿ । **ದೇವೀಂ**—ಪ್ರಕಾಶಮಾನವಾದ । **ಧಿಯಂ**—ಕರ್ಮವನ್ನು । **ದಧಿಧ್ವಂ**—ನೆರವೇರಿಸಿರಿ । **ವಃ**—ನೀವು । **ದೇವತ್ರಾ**—ದೇವತೆಗಳ ಸನ್ನಿಧಿಯಲ್ಲಿ । **ವಾಚಂ**—ಸ್ತುತಿರೂಪವಾದ ವಾಕ್ಕನ್ನು । **ಪ್ರ ಕೃಣುಧ್ವಂ**—ಅತಿಶಯವಾಗಿ ಪಠಿಸಿರಿ.

ಭಾವಾರ್ಥ

ಎಲೈ ಯಜಮಾನಾದಿಗಳೇ, ನೀವು ದೇವತೆಗಳನ್ನುದ್ದೇಶಿಸಿ ಪ್ರಕಾಶಮಾನವಾದ ಕರ್ಮವನ್ನು ನೆರವೇರಿಸಿರಿ. ದೇವತೆಗಳ ಸನ್ನಿಧಿಯಲ್ಲಿ ಸ್ತುತಿರೂಪವಾದ ವಾಕ್ಕನ್ನು ಉತ್ತಮರೀತಿಯಲ್ಲಿ ಪಠಿಸಿರಿ.

English Translation

Offer, (worshippers), your heavenly worship . earnestly address your praises to the gods.

ಸಂಹಿತಾಪಾಠಃ

ಆ ಚಷ್ಟ ಆಸಾಂ ಪಾಥೋ ನದೀನಾಂ ವರುಣ ಉಗ್ರಃ ಸಹಸ್ರಚಕ್ಷಾಃ ॥೧೦॥

ಪದಪಾಠಃ

ಆ । ಚಷ್ಟೇ । ಆಸಾಂ । ಪಾಥಃ । ನದೀನಾಂ । ವರುಣಃ । ಉಗ್ರಃ । ಸಹಸ್ರsಚಕ್ಷಾಃ ॥ ೧೦ ॥

ಸಾಯಣಭಾಷ್ಯಂ

**ಸಹಸ್ರಚಕ್ಷಾ ಬಹುಚಕ್ಷುರ್ವರುಣ ಆಸಾಂ ನದೀನಾಂ ಪಾಥೋ ಜಲಮಾ ಚಷ್ಟೇ । ಅಭಿಪಶ್ಯತಿ। ಕೀದೃಶೋ ವರುಣಃ। ಉಗ್ರ ಉದ್ಗೂರ್ಣ ಓಜಸ್ವೀ ವಾ ॥**

ಪ್ರತಿಪದಾರ್ಥ

**ಉಗ್ರಃ**—ಅತ್ಯಧಿಕವಾದ ಬಲವುಳ್ಳವನೂ । **ಸಹಸ್ರಚಕ್ಷಾಃ**—ಅನೇಕವಾದ ಚಕ್ಷುಸ್ಸುಳ್ಳವನೂ ಆದ। **ವರುಣಃ**—ವರುಣನು । **ಆಸಾಂ ನದೀನಾಂ**—ಈ ಪ್ರವಹಿಸುವ ನದಿಗಳ । **ಪಾಥಃ**—ಉದಕವನ್ನು । **ಆ ಚಷ್ಟೇ**—ನೋಡುತ್ತಾನೆ.

ಭಾವಾರ್ಥ

ಅತ್ಯಧಿಕವಾದ ಬಲವುಳ್ಳವನೂ, ಅನೇಕವಾದ ಚಕ್ಷುಸ್ಸುಳ್ಳವನೂ ಆದ ವರುಣನು ಪ್ರವಹಿಸುವ ಈ ನದಿಗಳ ಉದಕವನ್ನು ನೋಡುತ್ತಾನೆ

English Translation

The fierce Varuna, the thousand eyed, contemplates the water of these rivers

ಸಂಹಿತಾಪಾಠಃ

ರಾಜಾ ರಾಷ್ಟ್ರಾನಾಂ ಪೇಶೋ ನದೀನಾಮನುತ್ತಮಸ್ಮೈ ಕ್ಷತ್ರಂ ವಿಶ್ವಾಯು ||

ಪದಪಾಠಃ

ರಾಜಾ | ರಾಷ್ಟ್ರಾನಾಂ | ಪೇಶಃ | ನದೀನಾಂ | ಅನುತ್ತಂ | ಅಸ್ಮೈ | ಕ್ಷತ್ರಂ | ವಿಶ್ವಽಆಯು || ೧೧ ||

ಸಾಯಣಭಾಷ್ಯಂ

ರಾಷ್ಟ್ರಾನಾಂ ರಾಷ್ಟ್ರಾಣಾಂ || ಣತ್ವಾಭಾವಶ್ಛಾಂದಸಃ || ಈಶ್ವರಾಣಾಮಪಿ ವರುಣೋ ರಾಜೇಶ್ವರೋ ಭವತಿ | ನದೀನಾಂ ಪೇಶೋ ರೂಪಂ ರೂಪಕೃದಪಿ ಭವತೀತ್ಯರ್ಥಃ | ಅಸ್ಮೈ | ಷಷ್ಠ್ಯರ್ಥೇ ಚತುರ್ಥೀ | ಅಸ್ಯ ವರುಣಸ್ಯ ಕ್ಷತ್ರಂ ಬಲಮನುತ್ತಮನ್ಯೈರಬಾಧಿತಂ ವಿಶ್ವಾಯು ಸರ್ವತೋ ಗಂತೃ ಭವತೀತಿ ||

ಪ್ರತಿಪದಾರ್ಥ

(ವರುಣಃ—ವರುಣದೇವನು) | ರಾಷ್ಟ್ರಾನಾಂ—ಸಕಲ ರಾಷ್ಟ್ರಾಧಿಪತಿಗಳಿಗೂ | ರಾಜಾ—ಈಶ್ವರನಾಗಿದ್ದಾನೆ | ನದೀನಾಂ—ನದಿಗಳಿಗೆ | ಪೇಶಃ—ಆಕರ್ಷಕವಾದ ರೂಪದಾತೃವಾಗಿದ್ದಾನೆ | ಅಸ್ಮೈ—ಈ ವರುಣನ | ಕ್ಷತ್ರಂ—ಬಲವು | ಅನುತ್ತಮಂ—ಅದ್ವಿತೀಯವಾದುದು. | ವಿಶ್ವಾಯು—ಸರ್ವವ್ಯಾಪಕವಾದುದು.

ಭಾವಾರ್ಥ

ಈ ವರುಣದೇವನು ಸಕಲ ರಾಷ್ಟ್ರಾಧಿಪತಿಗಳಿಗೂ ಈಶ್ವರನಾಗಿದ್ದಾನೆ ನದಿಗಳಿಗೆ ಆಕರ್ಷಕವಾದ ರೂಪದಾತೃವಾಗಿದ್ದಾನೆ. ಈ ವರುಣನ ಬಲವು ಅದ್ವಿತೀಯವಾದುದು ಮತ್ತು ಸರ್ವವ್ಯಾಪಕವಾದುದು

English Translation

He is the king of kings . the beauty of the rivers his all-pervading strength is irresistible.

ಸಂಹಿತಾಪಾಠಃ

ಅವಿಷ್ಟೋ ಅಸ್ಮಾನ್ವಿಶ್ವಾಸು ವಿಕ್ಷ್ವದ್ಯುಂ ಕೃಣೋತ ಶಂಸಂ ನಿನಿತ್ಸೋಃ ||

ಪದಪಾಠಃ

ಅವಿಷ್ಟೋ ಇತಿ | ಅಸ್ಮಾನ್ | ವಿಶ್ವಾಸು | ವಿಕ್ಷು | ಅದ್ಯುಂ | ಕೃಣೋತ | ಶಂಸಂ | ನಿನಿತ್ಸೋಃ ||

ಸಾಯಣಭಾಷ್ಯಂ

**ಅಯಂ ದ್ವ್ಯೃಚೋ ದೈವಃ । ಹೇ ದೇವಾಃ ಅಸ್ಮಾನ್ ವಿಶ್ವಾಸು ಸರ್ವಾಸು ವಿಕ್ಷು ಪ್ರಜಾಸು । ಆವಿಷ್ಟ ಉ ಇತಿ ಸಮುದಿತಮವಿಷ್ಟ್ವೋ ಇತಿ । ಅವಿಷ್ಟ । ರಕ್ಷತ । ಶಂಸಂ ನಿನಿತ್ಸೋರ್ನಿಂದಿತುಮಿಚ್ಛತಃ ಶತ್ರೋರದ್ಮ್ಯಮದೀಪ್ತಿಂ ಕೃಣೋತ । ಕುರುತ ಚ ॥**

ಪ್ರತಿಪದಾರ್ಥ

(ಎಲೈ ದೇವತೆಗಳೇ) **ಅಸ್ಮಾನ್**—ನಮ್ಮನ್ನು । **ವಿಶ್ವಾಸು**—ಸಮಸ್ತವಾದ । **ವಿಕ್ಷು**—ಪ್ರಜೆಗಳ ನಡುವೆಯೂ । **ಅವಿಷ್ಟ್ವೋ**--ರಕ್ಷಿಸಿರಿ । **ನಿನಿತ್ಸೋಃ**—ನಿಂದಾಕಾರನಾದ ಶತ್ರುವಿನ । **ಶಂಸಂ**—ದುಷ್ಟಬುದ್ಧಿಯನ್ನು । **ಅದ್ಮ್ಯಂ**—ಶಕ್ತಿಹೀನವಾದುದನ್ನಾಗಿ । **ಕೃಣೋತ** –ಮಾಡಿರಿ

ಭಾವಾರ್ಥ

ಎಲೈ ದೇವತೆಗಳೇ, ನಮ್ಮನ್ನು ಸಮಸ್ತವಾದ ಪ್ರಜೆಗಳ ನಡುವೆಯೂ ರಕ್ಷಿಸಿರಿ. ನಿಂದಾಕಾರಕನಾದ ಶತ್ರುವಿನ ದುಷ್ಟಬುದ್ಧಿಯನ್ನು ಶಕ್ತಿಹೀನವಾದುದನ್ನಾಗಿ ಮಾಡಿರಿ

English Translation

Protect us, gods, among all people . render extinct the calumny of the malevolent.

ಸಂಹಿತಾಪಾಠಃ

ವ್ಯೇತು ದಿದ್ಯುದ್ದ್ವಿಷಾಮಶೇವಾ ಯುಯೋತ ವಿಷ್ವಗ್ರಪಸ್ತನೂನಾಂ ॥ ೧೩ ॥

ಪದಪಾಠಃ

**ವಿ । ಏತು । ದಿದ್ಯುತ್ । ದ್ವಿಷಾಂ । ಅಶೇವಾ । ಯುಯೋತ । ವಿಷ್ವಕ್ । ರಪಃ । ತನೂನಾಂ ॥**

ಸಾಯಣಭಾಷ್ಯಂ

**ದ್ವಿಷಾಂ ಶತ್ರೂಣಾಂ ದಿದ್ಯುದಾಯುಧಮಶೇವಾಸುಖಕರೀ ವಿಷ್ವಕ್ ಸರ್ವತೋ ವ್ಯೇತು । ಅಪಗಚ್ಛತು । ತನೂನಾಮಂಗಾನಾಂ ರಪಃ ಪಾಪಂ ದೇವಾಃ ಯುಯೋತ । ಅಸ್ಮತ್ತಃ ಪೃಥಕ್ಕುರುತ ॥**

ಪ್ರತಿಪದಾರ್ಥ

**ದ್ವಿಷಾಂ**—ನಮ್ಮ ಶತ್ರುಗಳ । **ಅಶೇವಾ**—ಅಮಂಗಳಕರಗಳಾದ । **ದಿದ್ಯುತ್**—ಆಯುಧಗಳು । **ವಿಷ್ವಕ್**—ಸರ್ವತ್ರ । **ವ್ಯೇತು**—ದೂರಸರಿಯಲಿ. (ಎಲೈ ದೇವತೆಗಳೇ) **ತನೂನಾಂ**—ನಮ್ಮ ದೇಹಗಳ । **ರಪಃ**—ಪಾಪವನ್ನು । **ಯುಯೋತ**—ನಮ್ಮಿಂದ ಬೇರೆಮಾಡಿರಿ.

ಭಾವಾರ್ಥ

ಎಲೈ ದೇವತೆಗಳೇ, ನಮ್ಮ ಶತ್ರುಗಳ ಅಮಂಗಳಕರಗಳಾದ ಆಯುಧಗಳು ಸರ್ವದಿಕ್ಕಿನಲ್ಲಿಯೂ ನಮ್ಮಿಂದ ದೂರಸರಿಯಲಿ. ನಮ್ಮ ದೇಹಕೃತವಾದ ಪಾಪವನ್ನು ನಮ್ಮಿಂದ ಬೇರೆಮಾಡಿರಿ.

English Translation

May the blazing (weapons) of foes pass by innocuous : separate, (gods) universally (from us) the sin of our bodies.

ಸಂಹಿತಾಪಾಠಃ

ಅವೀನ್ನೋ ಅಗ್ನಿರ್ಹವ್ಯಾನ್ನಮೋಭಿಃ ಪ್ರೇಷ್ಠೋ ಅಸ್ಮಾ ಅಧಾಯಿ ಸ್ತೋಮಃ

ಪದಪಾಠಃ

ಅವೀತ್ । ನಃ । ಅಗ್ನಿಃ । ಹವ್ಯಽಅತ್ । ನಮಃಽಭಿಃ । ಪ್ರೇಷ್ಠಃ । ಅಸ್ಮೈ । ಅಧಾಯಿ । ಸ್ತೋಮಃ ॥

ಸಾಯಣಭಾಷ್ಯಂ

ಹವ್ಯಾದ್ಧವ್ಯಾನಾಮತ್ತಾಗ್ನಿರ್ನಮೋಭಿರಸ್ಮದೀಯೈರ್ನಮಸ್ಕಾರೈಃ ಪ್ರೇಷ್ಠಃ ಪ್ರಿಯತಮಃ ಸ ನೋಽಸ್ಮಾನವೀತ್ । ರಕ್ಷತು । ಅಸ್ಮಾ ಅಗ್ನಯೇ ಸ್ತೋತ್ರೈ ಸ್ತೋತ್ರೈರಧಾಯಿ । ಅಸ್ಮಾಭಿರ್ವ್ಯಧಾಯಿ ॥

ಪ್ರತಿಪದಾರ್ಥ

ಹವ್ಯಾತ್—ಹವಿಸ್ಸನ್ನು ಭಕ್ಷಿಸತಕ್ಕ । ಅಗ್ನಿಃ—ಅಗ್ನಿಯು । ನಮೋಭಿಃ—ನಮ್ಮ ಸ್ತುತಿಗಳಿಂದ ತೃಪ್ತನಾಗಿ । ಪ್ರೇಷ್ಠಃ—ನಮಗೆ ಅತ್ಯಂತ ಪ್ರಿಯತಮನಾಗಿದ್ದು । ನಃ—ನಮ್ಮನ್ನು । ಅವೀತ್—ರಕ್ಷಿಸಲಿ । ಅಸ್ಮೈ—ಈ ಅಗ್ನಿಯನ್ನುದ್ದೇಶಿಸಿದ । ಸ್ತೋಮಃ—ಸ್ತೋತ್ರವು । ಅಧಾಯಿ—ನಮ್ಮಿಂದ ಸಮರ್ಪಿತವಾಗುತ್ತದೆ

ಭಾವಾರ್ಥ

ಹವಿಸ್ಸನ್ನು ಭಕ್ಷಿಸತಕ್ಕ ಅಗ್ನಿಯು ನಮ್ಮ ಸ್ತುತಿಗಳಿಂದ ತೃಪ್ತನಾಗಿ ನಮಗೆ ಅತ್ಯಂತ ಪ್ರಿಯತಮನಾಗಿದ್ದು ನಮ್ಮನ್ನು ರಕ್ಷಿಸಲಿ ಈ ಅಗ್ನಿಯನ್ನುದ್ದೇಶಿಸಿದ ಸ್ತೋತ್ರವು ನಮ್ಮಿಂದ ಸಮರ್ಪಿತವಾಗುತ್ತದೆ.

English Translation

May Agni, the feeder on oblations, propitiated by our homage, protect us, to him has our praise been addressed

ಸಂಹಿತಾಪಾಠಃ

ಸಜೂರ್ದೇವೇಭಿರಪಾಂ ನಪಾತಂ ಸಖಾಯಂ ಕೃಧ್ವಂ ಶಿವೋ ನೋ ಅಸ್ತು ॥

ಪದಪಾಠಃ

ಸ್ಽಜೂಃ । ದೇವೇಭಿಃ । ಅಪಾಂ । ನಪಾತಂ । ಸಖಾಯಂ । ಕೃಧ್ವಂ । ಶಿವಃ । ನಃ । ಅಸ್ತು ॥

ಸಾಯಣಭಾಷ್ಯಂ

ಹೇ ಸ್ತೋತಃ ಅಪಾಮುದಕಾನಾಂ ನಪಾತಂ ಪುತ್ರಮಗ್ನಿಂ । ಸೂನುರ್ನಪಾದಿತ್ಯಪತ್ಯನಾಮಸು ಪಾಠಾತ್ । ದೇವೇಭಿರ್ದೇವೈಃ ಸಜೂಃ ಸಹ ಸಖಾಯಂ ಮಿತ್ರಂ ಸ್ತುತಿಭಿಃ ಕೃಧ್ವಂ । ಕುರುಧ್ವಂ । ಸ ಚಾಪಾಂ ನಪಾನ್ನೋಽಸ್ಮಭ್ಯಂ ಶಿವಃ ಸುಖಕರೋಽಸ್ತು । ಭವತು ॥

ಪ್ರತಿಪದಾರ್ಥ

(ಎಲೈ ಸ್ತೋತೃಗಳೇ,) ಸಖಾಯಂ—ನಮಗೆ ಮಿತ್ರರೂಪನೂ । ಅಪಾಂ—ಉದಕಗಳಿಗೆ । ನಪಾತಂ—ಪುತ್ರರೂಪನೂ ಆದ ಅಗ್ನಿಯನ್ನು । ದೇವೇಭಿಃ ಸಜೂಃ—ಇತರ ದೇವತೆಗಳೊಡನೆ । ಕೃಧ್ವಂ—ಪೂಜಿಸಿರಿ. । (ಆದೇ ಅಗ್ನಿಯು) ನಃ—ನಮಗೆ । ಶಿವಃ—ಮಂಗಳಕಾರಕನಾಗಿ । ಅಸ್ತು—ಆಗಿರಲಿ.

ಭಾವಾರ್ಥ

ಎಲೈ ಸ್ತೋತೃಗಳೇ, ನಮಗೆ ಮಿತ್ರರೂಪನೂ, ಉದಕಗಳಿಗೆ ಪುತ್ರರೂಪನೂ ಆದ ಅಗ್ನಿಯನ್ನು ಇತರ ದೇವತೆಗಳೊಡನೆ ಸೇರಿಸಿ ಪೂಜಿಸಿರಿ. ಅದೇ ಅಗ್ನಿಯು ನಮಗೆ ಮಂಗಳಕಾರಕನಾಗಿ ಆಗಿರಲಿ.

English Translation

Glorify along with the gods our friend, the grandson of the waters: may he be propitious to us.

ಸಂಹಿತಾಪಾಠಃ

ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಃಸು ಷೀದನ್ ॥೧೬॥

ಪದಪಾಠಃ

ಅಪ್ಽಜಾಂ । ಉಕ್ಥೈಃ । ಅಹಿಂ । ಗೃಣೀಷೇ । ಬುಧ್ನೇ । ನದೀನಾಂ । ರಜಃಽಸು । ಸೀದನ್ ॥

ಸಾಯಣಭಾಷ್ಯಂ

ಅಹಿಂ ಮೇಘಾನಾಮಾಹಂತಾರಂ ನದೀನಾಮುದಕಾನಾಂ ಬುಧ್ನೇ ಸ್ಥಾನೇ । ಬುಧ್ನಮಂತರಿಕ್ಷಂ ಬದ್ಧಾ ಅಸ್ಮಿನ್ ಧೃತಾ ಆಪ ಇತಿ ವ್ಯುತ್ಪತ್ತೇಃ । ತಸ್ಮಿನ್ರಜಃಸೂದಕೇಷು ಸೀದನ್ ಸೀದಂತಮಬ್ಜಾಮಪ್ಸು ಜಾತಮಿಮಮಗ್ನಿಮುಕ್ಥೈಃ ಸ್ತೋತ್ರೈರ್ಗೃಣೀಷೇ । ಬುಧ್ನೇ ನದೀನಾಂ ರಜಃಸೂದಕೇಷು ಸೀದನ್ ಬುಧ್ನಮಂತರಿಕ್ಷಂ ಬದ್ಧಾ ಅಸ್ಮಿನ್ ಧೃತಾ ಆಪ ಇತಿ । ನಿ ೧೦-೪೪ । ಇತಿ ॥

ಪ್ರತಿಪದಾರ್ಥ

ಅಹಿಂ—ಮೇಘಗಳನ್ನು ಸೀಳುವವನೂ । ನದೀನಾಂ—ಉದಕಗಳಿಗೆ । ಬುಧ್ನೇ—ಸ್ಥಾನವಾದ ಅಂತರಿಕ್ಷದಲ್ಲಿರುವ । ರಜಃಸು—ಉದಕಗಳಲ್ಲಿ । ಸೀದನ್—ಸ್ಥಿತನಾಗಿರುವವನೂ । ಅಬ್ಜಾಂ—ಉದಕಗಳಲ್ಲಿ ಉತ್ಪನ್ನನಾದವನೂ ಆದ ಅಗ್ನಿಯನ್ನು । ಉಕ್ಥೈಃ—ಸ್ತೋತ್ರಗಳಿಂದ । ಗೃಣೀಷೇ—ಸ್ತುತಿಸುತ್ತೇನೆ.

ಭಾವಾರ್ಥ

ಮೇಘಗಳನ್ನು ಸೀಳುವವನೂ, ಉದಕಗಳಿಗೆ ಸ್ಥಾನವಾದ ಅಂತರಿಕ್ಷದಲ್ಲಿರುವ ಉದಕಗಳಲ್ಲಿ ಸ್ಥಿತನಾಗಿರುವವನೂ, ಉದಕಗಳಲ್ಲಿ ಉತ್ಪನ್ನನಾದವನೂ ಆದ ಅಗ್ನಿಯನ್ನು ಸ್ತೋತ್ರಗಳಿಂದ ಸ್ತುತಿಸುತ್ತೇನೆ.

English Translation

I glorify with hymns the disperser of the clouds in the firmament: the water-born, sitting amongst the waters of the rivers.

ವಿಶೇಷವಿಷಯಗಳು

ಬುಧ್ನೇ—ಬುಧ್ನಶಬ್ದಕ್ಕೆ ಯಾಸ್ಕರು ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ.—

ಬುಧ್ನಮಂತರಿಕ್ಷಂ ಬದ್ಧಾ ಅಸ್ಮಿನ್ ಧೃತಾ ಆಪ ಇತಿ ವಾ ।
ಇದಮಪೀತರತ್ ಬುಧ್ನಮೇತಸ್ಮಾದೇವ । ಬದ್ಧಾ ಅಸ್ಮಿನ್ ಧೃತಾಃ ಪ್ರಾಣಾ ಇತಿ ॥
(ನಿ. ೧೦-೪೪)

ಬುಧ್ನವೆಂದರೆ ಅಂತರಿಕ್ಷವು  ಏಕೆಂದರೆ ಈ ಅಂತರಿಕ್ಷದಲ್ಲಿ ಮೇಘರೂಪದಿಂದಿರುವ ಉದಕಗಳು ತಡೆದು ನಿಲ್ಲಿಸಲ್ಪಟ್ಟಿರುತ್ತವೆ  ಅಥವಾ ಈ ಅಂತರಿಕ್ಷದಲ್ಲಿ ಉದಕಗಳು (ಆವಿಯ ರೂಪದಿಂದ ಅಥವಾ ಮೇಘರೂಪದಿಂದ) ಧರಿಸಲ್ಪಡುತ್ತವೆ  ಆದ್ದರಿಂದ ಬುಧ್ನವೆಂದರೆ ಅಂತರಿಕ್ಷವು

ಬುಧ್ನವೆಂದರೆ ಶರೀರವೆಂಬ ಇನ್ನೊಂದು ಅರ್ಥವೂ ಇರುವುದು.  ಏಕೆಂದರೆ ಶರೀರದಲ್ಲಿ ಪ್ರಾಣಗಳು ಧರಿಸಲ್ಪಟ್ಟಿರುವುವು  ಎಂದರೆ ಪ್ರಾಣಗಳು ಇರಲು ಅವಕಾಶವನ್ನೀಯುವ ಶರೀರಕ್ಕೆ ಬುಧ್ನವೆಂದು ಹೆಸರು.

ಸಂಹಿತಾಪಾಠಃ

ಮಾ ನೋಽಹಿರ್ಬುಧ್ನ್ಯೋ ರಿಷೇ ಧಾನ್ಮಾ ಯಜ್ಞೋ ಅಸ್ಯ ಸ್ರಿಧದೃತಾಯೋಃ॥

ಪದಪಾಠಃ

ಮಾ । ನಃ । ಅಹಿಃ । ಬುಧ್ನ್ಯಃ । ರಿಷೇ । ಧಾತ್ । ಮಾ । ಯಜ್ಞಃ । ಅಸ್ಯ । ಸ್ರಿಧತ್ । ಋತಽಯೋಃ॥

ಸಾಯಣಭಾಷ್ಯಂ

ಅಹಿರ್ಬುಧ್ನ್ಯಃ । ಬುಧ್ನೇಽಂತರಿಕ್ಷೇ ಭವೋ ಬುಧ್ನ್ಯಃ । ಅಹಿಶ್ಚಾಸೌ ಬುಧ್ನ್ಯಶ್ಚೇತ್ಯಹಿರ್ಬುಧ್ನ್ಯೋಽಗ್ನಿರ್ನೋಽಸ್ಮಾನ್ರಿಷೇ ಹಿಂಸಕಾಯ ಮಾ ಧಾತ್ । ಮಾ ದದಾತು । ಅಸ್ಯರ್ತಾಯೋರ್ಯಜ್ಞಕಾಮಸ್ಯ ಯಜಮಾನಸ್ಯ ಯಜ್ಞೋ ಮಾ ಚ ಸ್ರಿಧತ್ । ನ ಕ್ಷೀಯೇತ । ಯದ್ವಾ । ಅಸ್ಯಾಹಿರ್ಬುಧ್ನ್ಯಸ್ಯೇಮಮಹಿರ್ಬುಧ್ನ್ಯಮುದ್ದಿಶ್ಯ ಋತಾಯೋರ್ಯಜ್ಞಕಾಮಸ್ಯ ಯೋ ಯಜ್ಞಃ ಸ ನ ಕ್ಷೀಯೇತೇತ್ಯರ್ಥಃ ॥

ಪ್ರತಿಪದಾರ್ಥ

**ಅಹಿರ್ಬುಧ್ನ್ಯಃ**—ಅಹಿರ್ಬುಧ್ನ್ಯಸಂಜ್ಞಕನಾದ ಅಗ್ನಿಯು । **ನಃ**—ನಮ್ಮನ್ನು । **ರಿಷೇ**—ಹಿಂಸಿಸಲು । **ಮಾ ಧಾತ್**—ಇಚ್ಛೆಯನ್ನು ಹೊಂದದಿರಲಿ । **ಅಸ್ಯ**—ಈ । **ಋತಾಯೋಃ**—ಯಜಮಾನನ । **ಯಜ್ಞಃ**—ಯಜ್ಞದ ಪ್ರಭಾವವು । **ಮಾ ಸ್ರಿಧತ್**—ಕ್ಷಯಿಸದಿರಲಿ

ಭಾವಾರ್ಥ

ಅಹಿರ್ಬುಧ್ನ್ಯಸಂಜ್ಞಕನಾದ ಅಗ್ನಿಯು ನಮ್ಮನ್ನು ಹಿಂಸಿಸುವ ಇಚ್ಛೆಯನ್ನು ಹೊಂದದಿರಲಿ.  ಈ ಯಜಮಾನನ ಯಜ್ಞದ ಪ್ರಭಾವವು ಕ್ಷಯಿಸದಿರಲಿ

English Translation

Let not Ahirbudhnya be disposed to work us harm . let not the sacrifice of the worshipper be disregarded.

ಸಂಹಿತಾಪಾಠಃ

ಉತ ನ ಏಷು ನೃಷು ಶ್ರವೋ ಧುಃ ಪ್ರ ರಾಯೇ ಯಂತು ಶರ್ಧಂತೋ ಅರ್ಯಃ

ಪದಪಾಠಃ

ಉತ । ನಃ । ಏಷು । ನೃಷು । ಶ್ರವಃ । ಧುಃ । ಪ್ರ । ರಾಯೇ । ಯಂತು । ಶರ್ಧಂತಃ । ಅರ್ಯಃ ॥

ಸಾಯಣಭಾಷ್ಯಂ

**ಅಯಂ ದ್ವ್ಯೃಚೋ ದೈವೋ ಮಾರುತೋ ವಾ। ಉತಾಪಿ ಚ ನೋಽಸ್ಮದೀಯೇಷ್ವೇಷು ನೃಷು ಪುರುಷೇಷು ಶ್ರವೋಽನ್ನಂ ಧುಃ । ದೇವಾ ಮರುತೋ ವಾ ಧಾರಯಂತು । ರಾಯೋ ಧನಾರ್ಥಂ ಶರ್ಧಂತ ಉತ್ಸಹಮಾನಾಃ ಪ್ರಿಯಮಾಣಾ ವಾಯೋರ್ಽರಯಃ ಪ್ರ ಯಂತು। ಪ್ರಗಚ್ಛಂತು । ಮ್ರಿಯಂತಾಮಿತ್ಯರ್ಥಃ॥**

ಪ್ರತಿಪದಾರ್ಥ

**ಉತ**—ಮತ್ತು । (**ದೇವಾಃ**—ದೇವತೆಗಳು) । **ನಃ**—ನಮಗೆ ಸೇರಿದ । **ಏಷು ನೃಷು**— ಈ ಯಜಮಾನರಲ್ಲಿ । **ಶ್ರವಃ**—ಅನ್ನವನ್ನು । **ಧುಃ**—ಸ್ಥಾಪಿಸಲಿ. । **ರಾಯೋ**—ನಮ್ಮ ಧನಕ್ಕೆ । **ಶರ್ಧಂತಃ**—ಅಪಹಾರಪ್ರಯತ್ನವನ್ನು ಮಾಡುವ । **ಅರ್ಯಃ**—ಶತ್ರುಗಳು । **ಪ್ರ ಯಂತು**—ದೂರಕ್ಕೆ ಸರಿಯಲಿ.

ಭಾವಾರ್ಥ

ನಮಗೆ ಸೇರಿದ ಈ ಯಜಮಾನರಲ್ಲಿ ದೇವತೆಗಳು ಅನ್ನವನ್ನು ಸ್ಥಾಪಿಸಲಿ ನಮ್ಮ ಧನವನ್ನು ಅಪಹರಿಸುವ ಪ್ರಯತ್ನವನ್ನು ಮಾಡುವ ಶತ್ರುಗಳು ದೂರಕ್ಕೆ ಸರಿಯಲಿ.

(ಈ ಮಂತ್ರವೂ ಮತ್ತು ಮುಂದಿನ ಮಂತ್ರವೂ ಸಹ ಮರುದ್ದೇವತಾಕವಾದವು ಎಂದೂ ಹೇಳಲು ಅವಕಾಶವಿರುತ್ತದೆಯೆಂದು ಸಾಯಣರು ತಿಳಿಸಿದ್ದಾರೆ).

English Translation

May (the gods) bestow food upon our people : let foes contending for our riches perish.

ಸಂಹಿತಾಪಾಠಃ

**ತಪಂತಿ ಶತ್ರುಂ ಸ್ವ೧ರ್ಣ ಭೂಮಾ ಮಹಾಸೇನಾಸೋ ಅಮೇಭಿರೇಷಾಂ ॥**

ಪದಪಾಠಃ

**ತಪಂತಿ । ಶತ್ರುಂ । ಸ್ವಃ । ನ । ಭೂಮ । ಮಹಾಽಸೇನಾಸಃ । ಅಮೇಭಿಃ । ಏಷಾಂ ॥ ೧೯ ॥**

ಸಾಯಣಭಾಷ್ಯಂ

**ಮಹಾಸೇನಾಸೋ ಮಹಾಸೇನಾ ರಾಜಾನ ಏಷಾಂ ಮರುತಾಂ ದೇವಾನಾಂ ವಾಮೇಭಿರ್ಬಲೈ-ರ್ಭೂಮಾ ಭುವನಾನಿ ಸ್ವರ್ಣಾದಿತ್ಯ ಇವ ಶತ್ರುಂ ಸ್ವಕೀಯಂ ತಪಂತಿ । ಬಾಧಂತೇ । ಮಹಾಂತೋಽಪಿ ರಾಜಾನೋಽಮೈರ್ಬಲೈಃ ಶತ್ರೂನ್ಬಾಧಂತೇ । ತಾನಿ ಬಲಾನಿ ದೇವಾನಾಮೇವೇತ್ಯರ್ಥಃ ॥**

ಪ್ರತಿಪದಾರ್ಥ

**ಮಹಾಸೇನಾಸಃ**—ಅತಿಪ್ರಭೂತವಾದ ಸೇನೆಯುಳ್ಳ ರಾಜರು । **ಏಷಾಂ**— ಈ ದೇವತೆಗಳ । **ಅಮೇಭಿಃ**-ಶಕ್ತಿಸಹಾಯಗಳಿಂದ । **ಭೂಮಾ**—ಲೋಕಗಳನ್ನೆಲ್ಲಾ । **ಸ್ವರ್ಣ**—ಆದಿತ್ಯನು ದಹಿಸುವಂತೆ । **ಶತ್ರುಂ**—ತಮ್ಮ ಶತ್ರುಗಳನ್ನು । **ತಪಂತಿ**—ದಹಿಸುತ್ತಾರೆ (ಹಿಂಸಿಸುತ್ತಾರೆ).

ಭಾವಾರ್ಥ

ಆದಿತ್ಯನು ಲೋಕಗಳನ್ನೆಲ್ಲಾ ಒಟ್ಟಿಗೆ ದಹಿಸುವ ರೀತಿಯಲ್ಲಿ ಅತ್ಯಂತಪ್ರಭೂತವಾದ ಸೇನೆಯುಳ್ಳ ರಾಜರು ಈ ದೇವತೆಗಳ ಶಕ್ತಿಸಹಾಯಗಳಿಂದ ತಮ್ಮ ಶತ್ರುಗಳನ್ನು ದಹಿಸುತ್ತಾರೆ. (ಹಿಂಸಿಸುತ್ತಾರೆ)

English Translation

Leaders of great armies, by the power of these (divinities), consume their foes, as the sun (scorches) the regions

ಸಂಹಿತಾಪಾಠಃ

ಆ ಯನ್ನಃ ಪತ್ನೀರ್ಗಮಂತ್ಯಚ್ಛಾ ತ್ವಷ್ಟಾ ಸುಪಾಣಿರ್ದಧಾತು ವೀರಾನ್ ॥

ಪದಪಾಠಃ

ಆ । ಯತ್ । ನಃ । ಪತ್ನೀಃ । ಗಮಂತಿ । ಅಚ್ಛ । ತ್ವಷ್ಟಾ । ಸುಽಪಾಣಿಃ । ದಧಾತು । ವೀರಾನ್ ॥ ೨೦ ॥

ಸಾಯಣಭಾಷ್ಯಂ

ಅಸ್ಯಾಂ ದೇವಪತ್ನ್ಯಸ್ತ್ವಷ್ಟಾ ಚ ದೇವತಾ । ಯದ್ಯದಾ ಪತ್ನೀರ್ದೇವಾನಾಂ ಪತ್ನ್ಯೋ ನೋಽಸ್ಮಾನಚ್ಛಾಭ್ಯಾ ಗಮಂತಿ ಆಗಚ್ಛಂತಿ ತದಾ ಸುಪಾಣಿಃ ಶೋಭನಹಸ್ತಸ್ತ್ವಷ್ಟಾ ದೇವೋ ವೀರಾನ್ ಪುತ್ರಾನ್ ದಧಾತು । ಅಸ್ಮಭ್ಯಂ ದದಾತು ॥

ಪ್ರತಿಪದಾರ್ಥ

ಯತ್—ಯಾವಾಗ । ಪತ್ನೀಃ—ದೇವಪತ್ನಿಯರು । ನಃ ಅಚ್ಛ—ನಮಗಭಿಮುಖವಾಗಿ । ಆ ಗಮಂತಿ ಬರುವರೋ (ಆಗ) । ಸುಪಾಣಿಃ—ಮಂಗಳಾತ್ಮಕವಾದ ಹಸ್ತವುಳ್ಳ । ತ್ವಷ್ಟಾ—ತ್ವಷ್ಟೃವು । ವೀರಾನ್—ವೀರ ಪುತ್ರರನ್ನು । ದಧಾತು—ನಮಗೆ ಕೊಡಲಿ

ಭಾವಾರ್ಥ

ಯಾವಾಗ ದೇವಪತ್ನಿಯರು ನಮಗಭಿಮುಖವಾಗಿ ನಮ್ಮ ಯಜ್ಞಕ್ಕೆ ಬರುವರೋ, ಆಗ ಮಂಗಳಕರವಾದ ಹಸ್ತವುಳ್ಳ ತ್ವಷ್ಟೃವು ನಮಗೆ ವೀರಪುತ್ರರನ್ನು ಕೊಡಲಿ

English Translation

When the wives (of the gods) come before us, may the dextrous Twashtri grant us male progeny

ಸಂಹಿತಾಪಾಠಃ

ಪ್ರತಿ ನಃ ಸ್ತೋಮಂ ತ್ವಷ್ಟಾ ಜುಷೇತ ಸ್ಯಾದಸ್ಮೇ ಅರಮತಿರ್ವಸೂಯುಃ ॥

ಪದಪಾಠಃ

ಪ್ರತಿ । ನಃ । ಸ್ತೋಮಂ । ತ್ವಷ್ಟಾ । ಜುಷೇತ । ಸ್ಯಾತ್ । ಅಸ್ಮೇ ಇತಿ । ಅರಮತಿಃ । ವಸುಽಯುಃ ॥೨೧॥

ಸಾಯಣಭಾಷ್ಯಂ

ನೋಽಸ್ಮಾಕಂ ಸ್ತೋಮಂ ಸ್ತೋತ್ರಂ ತ್ವಷ್ಟಾ ಪ್ರತಿ ಜುಷೇತ । ಪ್ರತಿಸೇವೇತ । ಅಪಿ ಚಾರಮತಿಃ ಪರ್ಯಾಪ್ತಬುದ್ಧಿಃ ಸರ್ವವಿಷಯವ್ಯಾಪಿಬುದ್ಧಿರ್ವಾ ತ್ವಷ್ಟಾಸ್ಮೇ ಅಸ್ಮದರ್ಥಂ ವಸೂಯುರ್ಧನಕಾಮಃ ಸ್ಯಾತ್ । ಭೂಯಾತ್ ॥

ಪ್ರತಿಪದಾರ್ಥ

ನಃ—ನಮ್ಮ | **ಸ್ತೋಮಂ**—ಸ್ತೋತ್ರವನ್ನು | **ತ್ವಷ್ಟಾ**—ತ್ವಷ್ಟೃವು | **ಪ್ರತಿ ಜುಷೇತ**—ಸೇವಿಸಲಿ. | **ಅರಮತಿಃ** –ಪೂರ್ಣವಾದ ಜ್ಞಾನವುಳ್ಳ ಅದೇ ತ್ವಷ್ಟೃವು | **ಅಸ್ಮೇ**—ನಮ್ಮ ವಿಷಯದಲ್ಲಿ | **ವಸೂಯುಃ**—ಧನ ಕಾಮನಾಗಿ (ನಮಗೆ ದಾನಮಾಡಲು) | **ಸ್ಯಾತ್**—ಆಗಲಿ.

ಭಾವಾರ್ಥ

ತ್ವಷ್ಟೃವು ನಮ್ಮ ಸ್ತೋತ್ರವನ್ನು ಸೇವಿಸಲಿ. ಪೂರ್ಣವಾದ ಜ್ಞಾನವುಳ್ಳ ಅದೇ ತ್ವಷ್ಟೃವು ನಮಗೆ ದಾನ ಮಾಡಲು ಧನಕಾಮನಾಗಿ ಆಗಲಿ.

English Translation

May Twastri be propitiated by this our praise may he who is of comprehensive understanding be inclined to give us wealth.

ಸಂಹಿತಾಪಾಠಃ

ತಾ ನೋ ರಾಸನ್ರಾತಿಷಾಚೋ ವಸೂನ್ಯಾ ರೋದಸೀ ವರುಣಾನೀ ಶೃಣೋತು |
ವರೂತ್ರೀಭಿಃ ಸುಶರಣೋ ನೋ ಅಸ್ತು ತ್ವಷ್ಟಾ ಸುದತ್ರೋ ವಿ ದಧಾತು
ರಾಯಃ ॥ ೨೨ ॥

ಪದಪಾಠಃ

ತಾ | ನಃ | ರಾಸನ್ | ರಾತಿऽಸಾಚಃ | ವಸೂನಿ | ಆ | ರೋದಸೀ ಇತಿ | ವರುಣಾನೀ | ಶೃಣೋತು |
ವರೂತ್ರೀಭಿಃ | ಸುऽಶರಣಃ | ನಃ | ಅಸ್ತು | ತ್ವಷ್ಟಾ | ಸುऽದತ್ರಃ | ವಿ | ದಧಾತು | ರಾಯಃ ॥ ೨೨ ॥

ಸಾಯಣಭಾಷ್ಯಂ

ತಾ ಯಾನ್ಯಸ್ಮಾಕಮಭೀಷ್ಟಾನಿ ತಾನಿ ವಸೂನಿ ಧನಾನಿ ರಾತಿಷಾಚೋ ದಾನಸಮವೇತಾ ದೇವ-ಪತ್ನ್ಯೋ ನೋಽಸ್ಮಭ್ಯಂ ರಾಸನ್ | ಪ್ರಯಚ್ಛಂತು | ಅಪಿ ಚ ವರುಣಾನೀ ವರುಣಸ್ಯ ಪತ್ನ್ಯಾ ಶೃಣೋ-ತು | ಅಸ್ಮದೀಯಂ ಸ್ತೋತ್ರಮಭಿಶೃಣೋತು | ರೋದಸೀ ದ್ಯಾವಾಪೃಥಿವ್ಯೌ ಚಾಭಿಶೃಣುತಾಂ | ಸು-ದತ್ರಃ ಕಲ್ಯಾಣದಾನಸ್ತ್ವಷ್ಟಾ ಚ ವರೂತ್ರೀಭಿರುಪದ್ರವಾಣಾಂ ವಾರಯಿತ್ರೀಭಿರ್ದೇವಪತ್ನೀಭಿಃ ಸಹ ನೋಽಸ್ಮಭ್ಯಂ ಸುಶರಣಃ ಸುಶರಣಪ್ರದೋಽಸ್ತು | ರಾಯೋ ಧನಾನಿ ಚ ವಿದಧಾತು ॥

ಪ್ರತಿಪದಾರ್ಥ

**ರಾತಿಷಾಚಃ**—ದಾನಯುಕ್ತರಾದ ದೇವಪತ್ನಿಯರು | **ತಾ**—ನಮ್ಮಿಂದ ಅಪೇಕ್ಷಿತವಾದ | **ವಸೂನಿ**—ಧನಗಳನ್ನು | **ನಃ**—ನಮಗೆ | **ರಾಸನ್**—ಕೊಡಲಿ. | **ವರುಣಾನೀ**—ವರುಣನ ಪತ್ನಿಯು | **ಆ ಶೃಣೋತು**—ನಮ್ಮ ಸ್ತುತಿಯನ್ನು ಕೇಳಲಿ. | **ರೋದಸೀ**—ದ್ಯಾವಾಪೃಥಿವಿಯೂ ಕೇಳಲಿ. | **ಸುದತ್ರಃ**—ಉತ್ತಮವಾದ ದಾನಿಯಾದ | **ತ್ವಷ್ಟಾ**—ತ್ವಷ್ಟೃವು | **ವರೂತ್ರೀಭಿಃ**—ಉಪದ್ರವಗಳನ್ನು ತಡೆಗಟ್ಟುವ ದೇವಪತ್ನಿಯರೊಡನೆ ಕೂಡಿ | **ನಃ**

ನಮಗೆ | **ಸುಶರಣಃ**—ಆಶ್ರಯದಾತನಾಗಿ | **ಅಸ್ತು**—ಆಗಿರಲಿ. | ರಾಯಃ—ಧನಗಳನ್ನು | **ವಿ ದಧಾತು**—ಒದಗಿಸಿ ಕೊಡಲಿ

ಭಾವಾರ್ಥ

ದಾನಯುಕ್ತರಾದ ದೇವಪತ್ನಿಯರು ನಮ್ಮಿಂದ ಅಪೇಕ್ಷಿತವಾದ ಧನಗಳನ್ನು ನಮಗೆ ಕೊಡಲಿ ವರುಣನ ಪತ್ನಿಯು ನಮ್ಮ ಸ್ತುತಿಯನ್ನು ಕೇಳಲಿ ದ್ಯಾವಾಪೃಥಿವಿಯೂ ನಮ್ಮ ಸ್ತುತಿಯನ್ನು ಕೇಳಲಿ ಉತ್ತಮವಾದ ದಾನಿಯಾದ ತ್ವಷ್ಟೃವು ಉಪದ್ರವಗಳನ್ನು ತಡೆಗಟ್ಟುವ ದೇವಪತ್ನಿಯರೊಡಗೂಡಿ ನಮಗೆ ಆಶ್ರಯದಾತನಾಗಿ ಆಗಿರಲಿ. ಮತ್ತು ನಮಗೆ ಧನಗಳನ್ನೂ ಒದಗಿಸಿಕೊಡಲಿ

English Translation

May they who are the givers of gifts bestow upon us the treasures (we desire) may Rodasi and Varunani hear (our supplications) may the generous Twashtri, together with these (our) protectresses, be our sure refuge: may he give us riches

ವಿಶೇಷವಿಷಯಗಳು

**ಸುದತ್ರಃ**—ಈ ಶಬ್ದಕ್ಕೆ ಯಾಸ್ಕರು-**ಸುದತ್ರಃ ಕಲ್ಯಾಣದಾನಃ | ತ್ವಷ್ಟಾ ಸುದತ್ರೋ ವಿದಧಾತು ರಾಯಃ ಇತ್ಯಪಿ ನಿಗಮೋ ಭವತಿ** (ನಿ ೬ ೧೪) ಎಂದು ನಿರ್ವಚನವನ್ನು ಹೇಳಿದ್ದಾರೆ ಸುದತ್ರ ಎಂದರೆ ಉತ್ತಮವಾದ ದಾನವು ಉತ್ತಮವಸ್ತುಗಳನ್ನು ಕೊಡುವುದು ಎಂದಭಿಪ್ರಾಯವು. ಈ ವಿಷಯದಲ್ಲಿ **ತ್ವಷ್ಟಾ ಸುದತ್ರೋ ವಿದಧಾತು ರಾಯಃ** ಎಂಬ ಪ್ರಕೃತ ಋಕ್ಕಿನ ವಾಕ್ಯವನ್ನೇ ಉದಾಹರಣೆಯಾಗಿ ಕೊಟ್ಟಿರುವರು.

ಸಂಹಿತಾಪಾಠಃ

ತನ್ನೋ ರಾಯಃ ಪರ್ವತಾಸ್ತನ್ನ ಆಪಸ್ತದ್ರಾತಿಷಾಚ ಓಷಧೀರುತ ದ್ಯೌಃ |
ವನಸ್ಪತಿಭಿಃ ಪೃಥಿವೀ ಸಜೋಷಾ ಉಭೇ ರೋದಸೀ ಪರಿ ಪಾಸತೋ ನಃ ||

ಪದಪಾಠಃ

**ತತ್** | ನಃ | ರಾಯಃ | **ಪರ್ವತಾಃ** | **ತತ್** | ನಃ | ಆಪಃ | **ತತ್** | ರಾತಿ೽ಸಾಚಃ | ಓಷಧೀಃ | ಉತ | ದ್ಯೌಃ |
ವನಸ್ಪತಿ೽ಭಿಃ | ಪೃಥಿವೀ | ಸ೽ಜೋಷಾಃ | ಉಭೇ ಇತಿ | ರೋದಸೀ ಇತಿ | ಪರಿ | ಪಾಸತಃ | ನಃ ||೨೩||

ಸಾಯಣಭಾಷ್ಯಂ

**ನೋಽಸ್ಮಾಕಂ | ತದಿತ್ಯವ್ಯಯಃ | ತಾ ರಾಯೋ ಧನಾನಿ ಪರ್ವತಾಃ ಪರಿಪಾಂತು | ನೋಽಸ್ಮಾಕಂ ತತ್ತಾ ರಾಯ ಆಪಶ್ಚ ಪರಿಪಾಂತು | ತದ್ರಾತಿಷಾಚೋ ದಾನಸಹಿತಾ ದೇವಪತ್ನ್ಯಶ್ಚ ಪರಿಪಾಂತು| ಓಷಧೀರೋಷಧಯಶ್ಚ ತತ್ಪರಿಪಾಂತು | ಉತಾಪಿ ಚ ದ್ಯೌಸ್ತತ್ಪರಿಪಾತು | ವನಸ್ಪತಿಭಿಃ ಸಜೋಷಾಃ ಸಹಿತಾ ಪೃಥಿವ್ಯಂತರಿಕ್ಷಂ ಚ ತತ್ಪರಿಪಾತು | ಆಪಃ ಪೃಥಿವೀತ್ಯಂತರಿಕ್ಷನಾಮಸು ಪಾಠಾತ್ ನೋಽಸ್ಮಾಕಂ ತದುಭೇ ರೋದಸೀ ದ್ಯಾವಾಪೃಥಿವ್ಯಾವಪಿ ಪರಿ ಪಾಸತಃ |ಪರಿರಕ್ಷತಾಂ ||**

ಪ್ರತಿಪದಾರ್ಥ

ನಃ—ನಮಗಾಗಿ | **ತತ್ ರಾಯಃ**—ಅಪೇಕ್ಷಿತವಾದ ಅದೇ ಧನವನ್ನು | **ಪರ್ವತಾಃ**—ಪರ್ವತಗಳು | (**ಪರಿಪಾಂತು**—ಪೂರ್ಣವಾಗಿ ರಕ್ಷಿಸಲಿ) | **ನಃ**—ನಮಗಾಗಿ | **ತತ್**—ಅದೇ ಧನವನ್ನು | **ಆಪಃ**—ಉದಕಗಳೂ ರಕ್ಷಿಸಲಿ. | **ರಾತಿಷಾಚಃ**—ದಾನಪರರಾದ ದೇವಪತ್ನಿಯರೂ | **ತತ್**—ಅದನ್ನು ರಕ್ಷಿಸಲಿ. | **ಉತ**—ಮತ್ತು | **ದ್ಯೌಃ**—ದ್ಯುಲೋಕವೂ | **ಓಷಧೀಃ**—ಓಷಧಿಗಳೂ | **ವನಸ್ಪತಿಭಿಃ ಸಜೋಷಾಃ**—ವನಸ್ಪತಿಗಳೊಡಗೂಡಿದ | **ಪೃಥಿವೀ**—ಅಂತರಿಕ್ಷವೂ (ರಕ್ಷಿಸಲಿ) | **ನಃ**—ನಮಗಾಗಿ | **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡೂ | **ಪರಿ ಪಾಸತಃ**—ಆ ಧನಗಳನ್ನು ರಕ್ಷಿಸಲಿ

ಭಾವಾರ್ಥ

ನಮ್ಮ ಅಪೇಕ್ಷಿತವಾದ ಧನಗಳನ್ನು ಪರ್ವತಗಳೂ ಉದಕಗಳೂ ರಕ್ಷಿಸಲಿ. ದಾನಪರರಾದ ದೇವಪತ್ನಿಯರೂ ಅವನ್ನು ರಕ್ಷಿಸಲಿ. ದ್ಯುಲೋಕಾಧಿದೇವಿಯೂ, ಓಷಧಿಗಳೂ, ವನಸ್ಪತಿಗಳೊಡಗೂಡಿದ ಅಂತರಿಕ್ಷವೂ, (ಪೃಥಿವಿಯೂ) ದ್ಯಾವಾಪೃಥಿವಿಗಳೂ ಸಹ ಆ ಧನವನ್ನು ಪೂರ್ಣವಾಗಿ ರಕ್ಷಿಸಲಿ.

English Translation

May the mountains, the waters, the liberal (wives of the gods), the plants, also the heaven and the earth, consentient with the forest lords and both the heaven and earth, preserve for us those (coveted) riches.

ಸಂಹಿತಾಪಾಠಃ

**ಅನು ತದುರ್ವೀ ರೋದಸೀ ಜಿಹಾತಾಮನು ದ್ಯುಕ್ಷೋ ವರುಣ ಇಂದ್ರಸಖಾ**
**ಅನು ವಿಶ್ವೇ ಮರುತೋ ಯೇ ಸಹಾಸೋ ರಾಯಃ ಸ್ಯಾಮ ಧರುಣಂ ಧಿ-**
**ಯಧ್ಯೈ ॥ ೨೪ ॥**

ಪದಪಾಠಃ

**ಅನು | ತತ್ | ಉರ್ವೀ ಇತಿ | ರೋದಸೀ ಇತಿ | ಜಿಹಾತಾಂ | ಅನು | ದ್ಯುಕ್ಷಃ | ವರುಣಃ | ಇಂದ್ರ-ಸಖಾ |**
**ಅನು | ವಿಶ್ವೇ | ಮರುತಃ | ಯೇ | ಸಹಾಸಃ | ರಾಯಃ | ಸ್ಯಾಮ | ಧರುಣಂ | ಧಿಯಧ್ಯೈ ॥ ೨೪ ॥**

ಸಾಯಣಭಾಷ್ಯಂ

**ತದ್ವಕ್ಷ್ಯಮಾಣಮುರ್ವೀ ವಿಸ್ತೀರ್ಣೇ ರೋದಸೀ ದ್ಯಾವಾಪೃಥಿವ್ಯಾವನು ಜಿಹಾತಾಂ | ಅನುಗಚ್ಛತಾಂ | ಅನುಮನ್ಯೇತಾಮಿತ್ಯರ್ಥಃ | ದ್ಯುಕ್ಷೋ ದೀಪ್ತೇರ್ನಿವಾಸಭೂತ ಇಂದ್ರಸಖೇಂದ್ರಸಖಃ ॥ ಇಂದ್ರಃ ಸಖಾ ಯಸ್ಯೇತಿ ಬಹುವ್ರೀಹಿಃ ॥ ವರುಣಶ್ಚ ತದನು ಜಿಹೀತಾಂ | ದ್ವಿವಚನಾಂತಸ್ಯೈಕವಚನಾಂತತಯಾ ವಿಪರಿಣಾಮಃ | ಯೇ ಸಹಾಸಃ ಶತ್ರೂಣಾಮಭಿಭವಿತಾರಸ್ತೇ ಮರುತೋಽಪಿ ತದನು ಜಿಹತಾಂ | ಅತ್ರ ಬಹುವಚನಾಂತತಯಾ ವಿಪರಿಣಾಮಃ | ಯದನುಮಂತವ್ಯಂ ತದಾಹ | ಧಿಯಧ್ಯೈ ಭರಣೀಯಾಯ ಧಾರಯಿತುಂ ರಾಯೋ ಧನಸ್ಯ ಧರುಣಂ ಧಾಮ ಸ್ಥಾನಂ ವಯಂ ಸ್ಯಾಮ | ಭವೇಮೇತಿ ॥**

ಪ್ರತಿಪದಾರ್ಥ

**ತತ್**—ನಮ್ಮ ಇಷ್ಟಾರ್ಥಗಳನ್ನು | **ಉರ್ವೀ**—ವಿಸ್ತೃತವಾದ | **ರೋದಸೀ**—ದ್ಯಾವಾಪೃಥಿವಿಗಳು | **ಅನು ಜಿಹಾತಾಂ** — ಅನುಮೋದಿಸಲಿ | **ದ್ಯುಕ್ಷಃ** — ಪ್ರಕಾಶಕ್ಕೆ ಆಶ್ರಯನೂ | **ಇಂದ್ರಸಖಾ**—ಇಂದ್ರನಿಗೆ ಮಿತ್ರನೂ ಆದ | **ವರುಣಃ**—ವರುಣನೂ | **ಅನು**—ಅನುಮೋದಿಸಲಿ | **ಯೇ**—ಯಾರು | **ಸಹಾಸಃ** - ಶತ್ರುಗಳನ್ನು ಸೋಲಿಸಲು ಶಕ್ತರೋ | **ವಿಶ್ವೇ**—ಅಂತಹ ಸಮಸ್ತರಾದ | **ಮರುತಃ**—ಮರುತ್ತುಗಳೂ | **ಅನು**—ಅನುಮೋದಿಸಲಿ | (**ವಯಂ**—ನಾವು) | **ಧಿಯಧ್ಯೈ**—ನಮ್ಮ ಭರಣಕ್ಕಾಗಿ | **ರಾಯಃ**—ಧನಕ್ಕೆ | **ಧರುಣಂ** —ನಿವಾಸಸ್ಥಾನರಾಗಿ | **ಸ್ಯಾಮ**—ಆಗುವಂತಾಗಲಿ

ಭಾವಾರ್ಥ

ನಮ್ಮ ಇಷ್ಟಾರ್ಥಗಳನ್ನು ದ್ಯಾವಾಪೃಥಿವಿಗಳು ಅನುಮೋದಿಸಲಿ ಪ್ರಕಾಶಕ್ಕೆ ನಿಧಿಯೂ, ಇಂದ್ರನಿಗೆ ಮಿತ್ರನೂ ಆದ ವರುಣನೂ ಮತ್ತು ಶತ್ರುಗಳನ್ನು ಸೋಲಿಸಬಲ್ಲ ಸಮಸ್ತ ಮರುತ್ತುಗಳೂ ಅನುಮೋದಿಸಲಿ. ನಾವು ನಮ್ಮ ಭರಣಕ್ಕಾಗಿ ಧನಕ್ಕೆ ನಿವಾಸಸ್ಥಾನರಾಗುವಂತಾಗಲಿ

English Translation

Let the vast heaven and earth consent let the brilliant Varuna, of whom Indra is the friend, consent let all the victorious Maruts consent that we may be a receptacle for the retention of riches

ಸಂಹಿತಾಪಾಠಃ

ತನ್ನ ಇಂದ್ರೋ ವರುಣೋ ಮಿತ್ರೋ ಅಗ್ನಿರಾಪ ಓಷಧೀರ್ವನಿನೋ ಜುಷಂತ
ಶರ್ಮನ್ತ್ಸ್ಯಾಮ ಮರುತಾಮುಪಸ್ಥೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ॥

ಪದಪಾಠಃ

ತತ್ | ನಃ | ಇಂದ್ರಃ | ವರುಣಃ | ಮಿತ್ರಃ | ಅಗ್ನಿಃ | ಆಪಃ | ಓಷಧೀಃ | ವನಿನಃ | ಜುಷಂತ |
ಶರ್ಮನ್ | ಸ್ಯಾಮ | ಮರುತಾಂ | ಉಪಽಸ್ಥೇ | ಯೂಯಂ | ಪಾತ | ಸ್ವಸ್ತಿಽಭಿಃ | ಸದಾ | ನಃ || ೨೫ ||

ಸಾಯಣಭಾಷ್ಯಂ

ನೋಽಸ್ಮಭ್ಯಂ ತದಿದಂ ಸ್ತೋತ್ರಮಿಂದ್ರೋ ವರುಣಶ್ಚ ಮಿತ್ರಶ್ಚಾಗ್ನಿಶ್ಚಾಪಶ್ಚೌಷಧೀರೋಷಧಯಶ್ಚ ವನಿನೋ ವೃಕ್ಷಾಶ್ಚ ಜುಷಂತ | ಜುಷಂತಾಂ | ಸೇವಂತಾಂ | ವಯಂ ಚ ಮರುತಾಮುಪಸ್ಥ ಉಪಸ್ಥಾನೇ ವರ್ತಮಾನಾಃ ಶರ್ಮಞ್ಛರ್ಮಣಿ ಸುಖೇ ಗೃಹೇ ವಾ ಸ್ಯಾಮ | ಭವೇಮ | ಸಿದ್ಧಮನ್ಯತ್ ||

ಪ್ರತಿಪದಾರ್ಥ

**ನಃ**—ನಮ್ಮಿಂದ ಪಠಿತವಾದ | **ತತ್**—ಈ ಸ್ತೋತ್ರವನ್ನು | **ಇಂದ್ರಃ**—ಇಂದ್ರನೂ, | **ವರುಣಃ**—ವರುಣನೂ, | **ಮಿತ್ರಃ**—ಮಿತ್ರನೂ, | **ಅಗ್ನಿಃ**—ಅಗ್ನಿಯೂ | **ಆಪಃ**—ಉದಕಗಳೂ | **ಓಷಧೀಃ**—ಓಷಧಿಗಳೂ | **ವನಿನಃ**—ವೃಕ್ಷಗಳೂ | **ಜುಷಂತ** -ಸೇವಿಸಲಿ. | (**ವಯಂ**—ನಾವು) | **ಮರುತಾಂ**—ಮರುತ್ತುಗಳ | **ಉಪಸ್ಥೇ**-ಸಾನ್ನಿಧ್ಯದಲ್ಲಿದ್ದುಕೊಂಡು | **ಶರ್ಮನ್**—ಸುಖವಾದ ಗೃಹದಲ್ಲಿ | **ಸ್ಯಾಮ**—ಇರುವಂತಾಗಲಿ. | (ಎಲೈ ದೇವತೆಗಳೇ) **ಯೂಯಂ**—ನೀವು | **ನಃ**—ನಮ್ಮನ್ನು | **ಸದಾ**—ಯಾವಾಗಲೂ | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ.

ಭಾವಾರ್ಥ

ನಮ್ಮಿಂದ ಪಠಿತವಾದ ಈ ಸ್ತೋತ್ರವನ್ನು ಇಂದ್ರನೂ, ವರುಣನೂ, ಮಿತ್ರನೂ, ಅಗ್ನಿಯೂ, ಉದಕಗಳೂ, ಓಷಧಿಗಳೂ, ವೃಕ್ಷಗಳೂ ಸೇವಿಸಲಿ. ನಾವು ಮರುತ್ತುಗಳ ಸಾನ್ನಿಧ್ಯದಲ್ಲಿದ್ದುಕೊಂಡು ಸುಖವಾದ ಗೃಹದಲ್ಲಿ ಇರುವಂತಾಗಲಿ ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

English Translation

May Indra, Varuna, Mitra, Agni, the waters, the herbs, the trees, be pleased by our (praise) : may we, (reclining) on the lap of the Maruts, enjoy felicity : and do you ever cherish us with blessings.

# ಮೂವತ್ತೈದನೆಯ ಸೂಕ್ತವು

ಸಾಯಣಭಾಷ್ಯಂ

**ಶಂನ ಇಂದ್ರಾಗ್ನೀ ಇತಿ ಪಂಚದಶರ್ಚಂ ದ್ವಿತೀಯಂ ಸೂಕ್ತಂ | ಅತ್ರೇಯಮನುಕ್ರಮಣಿಕಾ | ಶಂ ನಃ ಪಂಚೋನಾ ಶಾಂತಿರಿತಿ | ವಸಿಷ್ಠ ಋಷಿಃ | ತ್ರಿಷ್ಟುಪ್ ಛಂದಃ | ವೈಶ್ವದೇವಂ ಹೇತ್ವುಕ್ತತ್ವಾದಿದಮಪಿ ವೈಶ್ವದೇವಂ || ಮಹಾನಾಮ್ನಿವ್ರತ ಏತತ್ಸೂಕ್ತಂ ಜಪ್ಯಂ | ತಥಾ ಚ ಸೂತ್ರಿತಂ | ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ ಶಂ ನ ಇಂದ್ರಾಗ್ನೀ ಭವತಾಮವೋಭಿಃ | ಆ. ೮ ೧೪|| ಇತಿ | ಏವ....ಸು||**

**ಅನುವಾದವು**—**ಶಂ ನ ಇಂದ್ರಾಗ್ನೀ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ— **ಶಂ ನಃ ಪಂಚೋನಾ ಶಾಂತಿಃ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ವಿಶ್ವೇದೇವತೆಗಳು ದೇವತೆಯು, ತ್ರಿಷ್ಟುಪ್‌ಛಂದಸ್ಸು. ಗೃಹಕರ್ಮೋಕ್ತವಾದ ವ್ರತಚತುಷ್ಟಯಗಳಲ್ಲಿ ಒಂದಾದ ಮಹಾನಾಮ್ನಿ ಎಂಬ ವ್ರತದಲ್ಲಿ (ಕರ್ಮದಲ್ಲಿ) ಈ ಸೂಕ್ತವನ್ನು ಜಪಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ ಶಂ ನ ಇಂದ್ರಾಗ್ನೀ ಭವತಾಮವೋಭಿಃ** ಎಂಬ ಸೂತ್ರದಿಂದ (ಆ. ೮-೧೪) ವಿವೃತವಾಗಿರುವುದು.

## ಸೂಕ್ತ—೩೫

ಮಂಡಲ—೭ || ಅನುವಾಕ—೩ || ಸೂಕ್ತ—೩೫ ||
ಅಷ್ಟಕ—೫ || ಅಧ್ಯಾಯ—೩ || ವರ್ಗ—೨೮, ೨೯, ೩೦ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ||
ಋಷಿಃ—ವಸಿಷ್ಠಃ ||
ದೇವತಾ—ವಿಶ್ವೇದೇವಾಃ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

ಶಂ ನ ಇಂದ್ರಾಗ್ನೀ ಭವತಾಮವೋಭಿಃ ಶಂ ನ ಇಂದ್ರಾವರುಣಾ ರಾತಹವ್ಯಾ ।
ಶಮಿಂದ್ರಾಸೋಮಾ ಸುವಿತಾಯ ಶಂ ಯೋಃ ಶಂ ನ ಇಂದ್ರಾಪೂಷಣಾ ವಾಜಸಾತೌ ॥ ೧ ॥

ಪದಪಾಠಃ

ಶಂ । ನಃ । ಇಂದ್ರಾಗ್ನೀ ಇತಿ । ಭವತಾಂ । ಅವಃಽಭಿಃ । ಶಂ । ನಃ । ಇಂದ್ರಾವರುಣಾ । ರಾತಽಹವ್ಯಾ ।
ಶಂ । ಇಂದ್ರಾಸೋಮಾ । ಸುವಿತಾಯ । ಶಂ । ಯೋಃ । ಶಂ । ನಃ । ಇಂದ್ರಾಪೂಷಣಾ । ವಾಜಽಸಾತೌ ॥

ಸಾಯಣಭಾಷ್ಯಂ

ನೋಽಸ್ಮಾಕಮಸ್ಮಭ್ಯಂ ವೇಂದ್ರಾಗ್ನೀ ಅವೋಭೀ ರಕ್ಷಣೈಃ ಶಂ ಶಾಂತ್ಯೈ ಭವತಾಂ । ರಾತಹವ್ಯಾ ರಾತಹವ್ಯೌ ಯಜಮಾನೈರ್ದತ್ತಹವಿಷ್ಕಾವಿಂದ್ರಾವರುಣೇಂದ್ರಾವರುಣಾವಪಿ ನೋಽಸ್ಮಭ್ಯಂ ಶಂ ಶಾಂತ್ಯೈ ಭವತಾಂ । ಇಂದ್ರಾಸೋಮೇಂದ್ರಾಸೋಮಾವಪಿ ನಃ ಶಂ ಶಾಂತ್ಯೈ ಸುವಿತಾಯ ಕಲ್ಯಾಣಾಯ ಚ ಭವತಾಂ । ಶಂ ಶಾಂತ್ಯೈ ಸುಖಾಯ ಚ । ಪುನರುಕ್ತಿರಾದರಾರ್ಥಾ । ಅಥವಾ ಶಂ ಶಮನಹೇತುಕಂ ಸುಖಂ ಯೋರ್ವಿಷಯಯೋಗನಿಮಿತ್ತಂ ಸುಖಮಿತ್ಯಪುನರುಕ್ತಿಃ । ಇಂದ್ರಾಪೂಷಣೇಂದ್ರಾಪೂಷಣಾವಪಿ ವಾಜಸಾತೌ ಯುದ್ಧೇಽನ್ನಲಾಭೇ ನಿಮಿತ್ತೇ ವಾ ನಃ ಶಂ ಶಾಂತ್ಯೈ ಭವತಾಮಿತ್ಯರ್ಥಃ ॥

ಪ್ರತಿಪದಾರ್ಥ

**ಇಂದ್ರಾಗ್ನೀ**—ಇಂದ್ರ ಮತ್ತು ಅಗ್ನಿದೇವತೆಗಳು । **ಅವೋಭಿಃ**—ತಮ್ಮ ರಕ್ಷಣೆಗಳೊಂದಿಗೆ । **ನಃ**—ನಮ್ಮ **ಶಂ**—ಶಾಂತಿಗಾಗಿ । **ಭವತಾಂ**—ಇರಲಿ. । **ರಾತಹವ್ಯಾ**—ಹವಿಸ್ಸನ್ನು ಅರ್ಪಿಸಲ್ಪಟ್ಟ । **ಇಂದ್ರಾವರುಣಾ**—ಇಂದ್ರ ಮತ್ತು ವರುಣದೇವತೆಗಳು । **ನಃ**—ನಮ್ಮ । **ಶಂ**—ಶಾಂತಿಗಾಗಿ ಇರಲಿ । **ಇಂದ್ರಾಸೋಮಾ**—ಇಂದ್ರ ಮತ್ತು ಸೋಮದೇವತೆಗಳು । **ಶಂ**—ನಮ್ಮ ಶಾಂತಿಗಾಗಿಯೂ । **ಸುವಿತಾಯ**—ಕಲ್ಯಾಣಕ್ಕಾಗಿಯೂ ಇರಲಿ. । **ಶಂ ಯೋಃ** ಶಾಂತಿಸ್ಥಾಪನೆಗೂ ದುಃಖನಿವಾರಣೆಗೂ ಅವರು ಪ್ರಯತ್ನಿಸಲಿ । **ಇಂದ್ರಾಪೂಷಣಾ**—ಇಂದ್ರ ಮತ್ತು ಪೂಷದೇವತೆಗಳು । **ವಾಜಸಾತೌ**—ಅನ್ನಾರ್ಥವಾದ ಯುದ್ಧದಲ್ಲಿ । **ನಃ**—ನಮಗೆ । **ಶಂ**—ಸುಖದಾತರಾಗಿರಲಿ.

### ಭಾವಾರ್ಥ

ಇಂದ್ರ ಮತ್ತು ಅಗ್ನಿ ದೇವತೆಗಳು ತಮ್ಮ ರಕ್ಷಣೆಗಳೊಡನೆ ನಮಗೆ ಶಾಂತಿದಾತರಾಗಿರಲಿ ಹವಿಸ್ಸನ್ನು ಅರ್ಪಿಸಲ್ಪಟ್ಟ ಇಂದ್ರಾವರುಣರು ನಮ್ಮ ಶಾಂತಿದಾತರಾಗಿರಲಿ. ಇಂದ್ರಾಸೋಮರು ನಮಗೆ ಶಾಂತಿಯನ್ನೂ, ಕಲ್ಯಾಣವನ್ನೂ ಉಂಟುಮಾಡಲಿ. ನಮ್ಮ ದುಃಖನಿವಾರಣೆಯ ಮೂಲಕ ನಮಗೆ ಕಲ್ಯಾಣವನ್ನುಂಟುಮಾಡಲಿ. ಇಂದ್ರಾಪೂಷರು ಅನ್ನಾರ್ಥವಾದ ಯುದ್ಧದಲ್ಲಿ ನಮಗೆ ಸುಖದಾತರಾಗಿರಲಿ.

### English Translation

May Indra and Agni be (with us) with their protections for our happiness may Indra and Varuna, to whom oblations are offered, (be with us) for our happiness may Indra and Soma be (with us) for our happiness, our prosperity, our good may Indra and Pushan be (with us) in battle for our triumph.

### ಸಂಹಿತಾಪಾಠಃ

ಶಂ ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ ।
ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂ ನೋ ಅರ್ಯಮಾ ಪುರುಜಾತೋ ಅಸ್ತು ॥ ೨ ॥

### ಪದಪಾಠಃ

ಶಂ । ನಃ । ಭಗಃ । ಶಂ । ಊಂ ಇತಿ । ನಃ । ಶಂಸಃ । ಅಸ್ತು । ಶಂ । ನಃ । ಪುರಂಽಧಿಃ । ಶಂ । ಊಂ ಇತಿ । ಸಂತು । ರಾಯಃ ।
ಶಂ । ನಃ । ಸತ್ಯಸ್ಯ । ಸುಽಯಮಸ್ಯ । ಶಂಸಃ । ಶಂ । ನಃ । ಅರ್ಯಮಾ । ಪುರುಽಜಾತಃ । ಅಸ್ತು ॥೨॥

### ಸಾಯಣಭಾಷ್ಯಂ

ನೋಽಸ್ಮಾಕಂ ಶಂ ಶಾಂತ್ಯೈ ಭಗೋ ದೇವೋಽಸ್ತು । ಭವತು । ನೋಽಸ್ಮಾಕಂ ಶಮು ಶಾಂತ್ಯಾ ಏವ ಶಂಸೋ ನರಾಶಂಸೋಽಸ್ತು । ಭವತು । ನೋಽಸ್ಮಾಕಂ ಶಂ ಶಾಂತ್ಯೈ ಪುರಂಧಿರ್ಬಹುಧೀರಪ್ಯಸ್ತು । ರಾಯೋ ಧನಾನ್ಯಪಿ ಶಮು ಶಾಂತ್ಯಾ ಏವ ಸಂತು । ನೋಽಸ್ಮಾಕಂ ಸುಯಮಸ್ಯ ಶೋಭನಯಮಯುಕ್ತಸ್ಯ ಸತ್ಯಸ್ಯ ಶಂಸೋ ವಚನಮಪಿ ಶಮಸ್ತು । ನೋಽಸ್ಮಾಕಂ ಶಂ ಶಾಂತ್ಯೈ ಪುರುಜಾತೋ ಬಹುಪ್ರಾದುರ್ಭಾವೋಽರ್ಯಮಾ ದೇವೋಽಪ್ಯಸ್ತು ॥

### ಪ್ರತಿಪದಾರ್ಥ

**ಭಗಃ**—ಭಗನು । **ನಃ**—ನಮ್ಮ । **ಶಂ**—ಶಾಂತ್ಯರ್ಥವಾಗಿ । **ಅಸ್ತು**—ಇರಲಿ. । **ನಃ**—ನಮ್ಮ । **ಶಮು**—ಶಾಂತಿಗಾಗಿಯೇ ! **ಶಂಸಃ**—ನರಾಶಂಸನು (ಇರಲಿ) । **ನಃ**—ನಮ್ಮ । **ಶಂ**—ಶಾಂತಿಗಾಗಿ । **ಪುರಂಧಿಃ**—ಪುರಂಧಿ

ಸಂಜ್ಞಕವಾದ ದೇವತೆಯು ಅನುಗ್ರಹಿಸಲಿ | **ರಾಯಃ**—ಧನಗಳೂ ಸಹ | **ಶಮು**—ನಮ್ಮ ಶಾಂತಿಗಾಗಿಯೇ ಇರಲಿ | **ನಃ**—ನಮ್ಮ | **ಸುಯಮಸ್ಯ**—ಉತ್ತಮವಾದ ನಿಯಮದಿಂದ ಕೂಡಿದ | **ಸತ್ಯಸ್ಯ**—ಸತ್ಯಾತ್ಮಕವಾದ | **ಶಂಸಃ**—ವಾಕ್ಕೂ ಸಹ | **ಶಂ**—ಸುಖಕ್ಕಾಗಿಯೇ ಇರಲಿ. | **ನಃ**—ನಮ್ಮ | **ಶಂ**—ಶಾಂತಿಗಾಗಿ | **ಪುರುಜಾತಃ**—ಅನೇಕವಿಧವಾದ ಪ್ರಾದುರ್ಭಾವವುಳ್ಳ | **ಅರ್ಯಮಾ**—ಅರ್ಯಮನೂ | **ಅಸ್ತು**—ಅನುಗ್ರಹಿಸಲಿ

ಭಾವಾರ್ಥ

ನಮ್ಮ ಶಾಂತಿಗಾಗಿ ಭಗನು ಕರುಣಿಸಲಿ. ನರಾಶಂಸನೂ ನಮ್ಮ ಶಾಂತಿಯನ್ನೇ ಇಚ್ಛಿಸಲಿ ಪುರಂಧಿಯೂ ನಮ್ಮ ಶಾಂತಿಯನ್ನೇ ಸ್ಥಾಪಿಸಲಿ ಧನಗಳೂ ನಮ್ಮ ಶಾಂತ್ಯರ್ಥವಾಗಿಯೇ ಇರಲಿ ಉತ್ತಮವಾದ ನಿಯಮದಿಂದ ಕೂಡಿರುವುದೂ, ಸತ್ಯಾತ್ಮಕವಾದುದೂ ಆದ ನಮ್ಮ ವಾಕ್ಕು ನಮ್ಮ ಸುಖಕ್ಕಾಗಿಯೇ ಇರಲಿ ಅನೇಕವಿಧವಾದ ಪ್ರಾದುರ್ಭಾವವುಳ್ಳ ಅರ್ಯಮನೂ ನಮ್ಮನ್ನು ಶಾಂತ್ಯರ್ಥವಾಗಿ ಅನುಗ್ರಹಿಸಲಿ

English Translation

May Bhaga (promote) our happiness may Shansa be our happiness, may Purandhi be (with us for) our happiness may riches be (a source of) happiness may the benediction of the true and virtuous yield us happiness may the variously-manifested Aryaman be (with us) for onr felicity.

ಸಂಹಿತಾಪಾಠः

ಶಂ ನೋ ಧಾತಾ ಶಮು ಧರ್ತಾ ನೋ ಅಸ್ತು ಶಂ ನ ಉರೂಚೀ ಭವತು
ಸ್ವಧಾಭಿಃ ।
ಶಂ ರೋದಸೀ ಬೃಹತೀ ಶಂ ನೋ ಅದ್ರಿಃ ಶಂ ನೋ ದೇವಾನಾಂ ಸುಹವಾನಿ
ಸಂತು ॥ ೩ ॥

ಪದಪಾಠಃ

ಶಂ | ನಃ | ಧಾತಾ | ಶಂ | ಊಂ ಇತಿ | ಧರ್ತಾ | ನಃ | ಅಸ್ತು | ಶಂ | ನಃ | ಉರೂಚೀ | ಭವತು |
ಸ್ವಧಾಭಿಃ |
ಶಂ | ರೋದಸೀ | ಇತಿ | ಬೃಹತೀ ಇತಿ | ಶಂ | ನಃ | ಅದ್ರಿಃ | ಶಂ | ನಃ | ದೇವಾನಾಂ | ಸುऽಹವಾನಿ |
ಸಂತು ॥

ಸಾಯಣಭಾಷ್ಯಂ

ನೋಽಸ್ಮಾಕಂ ಶಂ ಶಾಂತ್ಯೈ ಧಾತಾ ದೇವೋಽಸ್ತು | ನೋಽಸ್ಮಾಕಂ ಶಮು ಶಾಂತ್ಯಾ ಏವ ಧರ್ತಾ ಪುಣ್ಯಪಾಪಾನಾಂ ವಿಧಾರಯಿತಾ ವರುಣೋ ದೇವೋಽಪ್ಯಸ್ತು | ನೋಽಸ್ಮಾಕಂ ಶಂ ಶಾಂತ್ಯಾ ಉರೂಚೀ ವಿವರ್ತಗಮನಾ ಪೃಥಿವ್ಯಪಿ ಸ್ವಧಾಭಿರನ್ನೈಃ ಸಹಾಸ್ತು | ಬೃಹತೀ ಮಹತ್ಯೌ ರೋದಸೀ ದ್ಯಾವಾಪೃಥಿವ್ಯಾವಪಿ ಶಂ ಭವತಾಂ | ಅದ್ರಿಃ ಪರ್ವತೋಽಪಿ ನೋಽಸ್ಮಾಕಂ ಶಂ ಶಾಂತ್ಯೈ ಭವತು | ಶಂ ಶಾಂತ್ಯೈ ನೋಽಸ್ಮಾಕಂ ದೇವಾನಾಂ ಸುಹವಾನಿ ಸುಷ್ಟುತಯೋ ಸಂತು | ಭವಂತು ॥

ಪ್ರತಿಪದಾರ್ಥ

**ಧಾತಾ**—ಸೃಷ್ಟಿಕರ್ತನಾದ ದೇವನು | **ನಃ**—ನಮ್ಮ | **ಶಂ**—ಶಾಂತ್ಯರ್ಥವಾಗಿ | **ಅಸ್ತು**—ಇರಲಿ. | **ನಃ**—ನಮ್ಮ | **ಶಮು**—ಶಾಂತ್ಯರ್ಥವಾಗಿಯೇ | **ಧರ್ತಾ**—ಪುಣ್ಯಪಾಪಗಳನ್ನು ವಿಭಾಗಿಸುವ ವರುಣನೂ ಇರಲಿ. | **ನಃ**—ನಮ್ಮ | **ಶಂ**—ಶಾಂತಿಗಾಗಿ | **ಉರೂಚೀ**—ವಿಸ್ತೃತವಾದ ರೂಪವುಳ್ಳ ಪೃಥ್ವಿಯೂ | **ಸ್ವಧಾಭಿಃ**—ತನ್ನ ಅನ್ನಗಳೊಡನೆ ತುಂಬಿರಲಿ | **ಬೃಹತೀ** — ಮಹದ್ರೂಪವುಳ್ಳ | **ರೋದಸೀ** — ದ್ಯಾವಾಪೃಥಿವಿಗಳೂ | **ಶಂ** — ನಮ್ಮ ಸುಖಕ್ಕಾಗಿರಲಿ | **ಅದ್ರಿಃ**—ಪರ್ವತವೂ ಸಹ | **ನಃ**—ನಮ್ಮ | **ಶಂ**—ಶಾಂತಿಗಾಗಿರಲಿ. | **ನಃ**—ನಮ್ಮ | **ದೇವಾನಾಂ**—ದೇವತೆಗಳನ್ನು ನಿರ್ದೇಶಿಸಿದ | **ಸುಹವಾನಿ**—ಉತ್ತಮವಾದ ಸ್ತುತಿಗಳೂ | **ಶಂ**—ಶಾಂತಿಗಾಗಿ | **ಸಂತು**—ಸಾಧಕವಾಗಿರಲಿ

ಭಾವಾರ್ಥ

ಸೃಷ್ಟಿಕರ್ತನಾದ ದೇವನು ನಮ್ಮ ಶಾಂತಿಗಾಗಿರಲಿ. ನಮ್ಮ ಶಾಂತ್ಯರ್ಥವಾಗಿಯೇ, ಪುಣ್ಯಪಾಪಗಳನ್ನು ವಿಭಾಗಿಸುವ ವರುಣನೂ ಇರಲಿ ನಮ್ಮ ಶಾಂತಿಗಾಗಿ ವಿಸ್ತೃತವಾದ ರೂಪವುಳ್ಳ ಪೃಥ್ವಿಯೂ ತನ್ನ ಅನ್ನಗಳೊಡನೆ ತುಂಬಿರಲಿ ಮಹದ್ರೂಪವುಳ್ಳ ದ್ಯಾವಾಪೃಥಿವಿಗಳೂ ನಮ್ಮ ಸುಖಕ್ಕಾಗಿರಲಿ ಪರ್ವತವೂ ನಮ್ಮ ಶಾಂತಿಗಾಗಿರಲಿ. ದೇವತೆಗಳನ್ನು ನಿರ್ದೇಶಿಸಿದ ನಮ್ಮ ಉತ್ತಮವಾದ ಸ್ತುತಿಗಳೂ ಶಾಂತಿಸಾಧಕವಾಗಿರಲಿ.

English Translation

May the creator be to us for happiness: may the discriminator (between virtue and vice Varuna), be (with us) for our happiness . may the wide earth (contribute) with sustenance to our happiness · may the vast heaven and earth be (to us for) happiness . may the mountains (yeild) us happiness : may our pious invocations of the gods secure us happiness

ಸಂಹಿತಾಪಾಠಃ

ಶಂ ನೋ ಅಗ್ನಿರ್ಜ್ಯೋತಿರನೀಕೋ ಅಸ್ತು ಶಂ ನೋ ಮಿತ್ರಾವರುಣಾವಶ್ವಿನಾ ಶಂ ।
ಶಂ ನಃ ಸುಕೃತಾಂ ಸುಕೃತಾನಿ ಸಂತು ಶಂ ನ ಇಷಿರೋ ಅಭಿ ವಾತು ವಾತಃ ॥

ಪದಪಾಠಃ

ಶಂ । ನಃ । ಅಗ್ನಿಃ । ಜ್ಯೋತಿಃऽಅನೀಕಃ । ಅಸ್ತು । ಶಂ । ನಃ । ಮಿತ್ರಾವರುಣಾ । ಅಶ್ವಿನಾ । ಶಂ ।

ಶಂ । ನಃ । ಸುऽಕೃತಾಂ । ಸುऽಕೃತಾನಿ । ಸಂತು । ಶಂ । ನಃ । ಇಷಿರಃ । ಅಭಿ । ವಾತು । ವಾತಃ ॥ ೪ ॥

ಸಾಯಣಭಾಷ್ಯಂ

**ಜ್ಯೋತಿರನೀಕೋ ಜ್ಯೋತಿರ್ಮುಖೋಽಗ್ನಿರ್ನೋಽಸ್ಮಾಕಂ ಶಂ ಶಾಂತ್ಯಾ ಅಸ್ತು । ಭವತು । ಮಿತ್ರಾವರುಣಾ ಮಿತ್ರಾವರುಣಾವಪಿ ನೋಽಸ್ಮಾಕಂ ಶಂ ಶಾಂತ್ಯೈ ಭವತಾಂ । ಅಶ್ವಿನಾವಶ್ವಿನಾವಪಿ ಶಂ**

ಭವತಾಂ | ಸುಕೃತಾಂ ಪುಣ್ಯಕರ್ಮಣಾಂ ಪುರುಷಾಣಾಂ ಸುಕೃತಾನಿ ಪುಣ್ಯಕರ್ಮಾಣ್ಯಪಿ ನೋಽಸ್ಮಾಕಂ ಶಂ ಶಾಂತ್ಯೈ ಸಂತು | ಭವಂತು | ಇಷಿರೋ ಗಮನಶೀಲೋಽಪಿ ವಾತೋ ವಾಯುರಪಿ ನೋಽಸ್ಮಾಕಂ ಶಂ ಶಾಂತ್ಯಾ ಅಭಿ ವಾತು ||

ಪ್ರತಿಪದಾರ್ಥ

ಜ್ಯೋತಿರನೀಕಃ—ಜ್ಯೋತೀರೂಪವಾದ ಮುಖವುಳ್ಳ | ಅಗ್ನಿಃ—ಅಗ್ನಿಯು | ನಃ—ನಮ್ಮ | ಶಂ—ಶಾಂತಿಗಾಗಿ | ಅಸ್ತು—ಇರಲಿ | ಮಿತ್ರಾವರುಣಾ—ಮಿತ್ರಾವರುಣರೂ | ನಃ—ನಮ್ಮ | ಶಂ—ಶಾಂತಿಗಾಗಿರಲಿ | ಅಶ್ವಿನಾ—ಅಶ್ವಿನೀದೇವತೆಗಳೂ | ಶಂ—ನಮ್ಮ ಶಾಂತಿಗಾಗಿರಲಿ | ಸುಕೃತಾಂ—ಪುಣ್ಯಕರ್ಮವುಳ್ಳವರ | ಸುಕೃತಾನಿ—ಉತ್ತಮವಾದ ಕರ್ಮಗಳೂ | ನಃ—ನಮ್ಮ | ಶಂ—ಶಾಂತಿಗಾಗಿ | ಸಂತು—ಇರಲಿ | ಇಷಿರಃ ಗಮನಶೀಲನಾದ | ವಾತಃ—ವಾಯುವೂ ಸಹ | ನಃ—ನಮ್ಮ | ಶಂ—ಶಾಂತಿಗಾಗಿ | ಅಭಿ ವಾತು—ಸುತ್ತಲೂ ಬೀಸಲಿ.

ಭಾವಾರ್ಥ

ಜ್ಯೋತೀರೂಪವಾದ ಮುಖವುಳ್ಳ ಅಗ್ನಿಯು ನಮ್ಮ ಶಾಂತಿಗಾಗಿ ಇರಲಿ. ಮಿತ್ರಾವರುಣರೂ ನಮ್ಮ ಶಾಂತಿಗಾಗಿರಲಿ. ಅಶ್ವಿನೀದೇವತೆಗಳೂ ನಮ್ಮ ಶಾಂತಿದಾತರಾಗಿರಲಿ. ಪುಣ್ಯಕರ್ಮವುಳ್ಳವರ ಉತ್ತಮವಾದ ಕರ್ಮಗಳೂ ನಮ್ಮ ಶಾಂತಿಸಾಧಕವಾಗಲಿ. ಗಮನಶೀಲನಾದ ವಾಯುವೂ ನಮ್ಮ ಶಾಂತಿಗಾಗಿ ಸುತ್ತಲೂ ಬೀಸಲಿ.

English Translation

May Agni, whose countenance is light be (with us) for our happiness may Mitra and Varuna, may the Aswins be (present) for our felicity may the virtuous be (promotive of) our happiness may the restless wind blow for our happiness

ಸಂಹಿತಾಪಾಠಃ

ಶಂ ನೋ ದ್ಯಾವಾಪೃಥಿವೀ ಪೂರ್ವಹೂತೌ ಶಮಂತರಿಕ್ಷಂ ದೃಶಯೇ ನೋ ಅಸ್ತು ।
ಶಂ ನ ಓಷಧೀರ್ವನಿನೋ ಭವಂತು ಶಂ ನೋ ರಜಸಸ್ಪತಿರಸ್ತು ಜಿಷ್ಣುಃ ॥ ೫ ॥

ಪದಪಾಠಃ

ಶಂ | ನಃ | ದ್ಯಾವಾಪೃಥಿವೀ ಇತಿ | ಪೂರ್ವಽಹೂತೌ | ಶಂ | ಅಂತರಿಕ್ಷಂ | ದೃಶಯೇ | ನಃ | ಅಸ್ತು |
ಶಂ | ನಃ | ಓಷಧೀಃ | ವನಿನಃ | ಭವಂತು | ಶಂ | ನಃ | ರಜಸಃ | ಪತಿಃ | ಅಸ್ತು | ಜಿಷ್ಣುಃ ॥ ೫ ॥

ಸಾಯಣಭಾಷ್ಯಂ

ನೋಽಸ್ಮಾಕಂ ಶಂ ಶಾಂತ್ಯೈ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಪೂರ್ವಹೂತೌ ಪ್ರಥಮಾಹ್ವಾನೇ ಭವತಾಂ | ಅಂತರಿಕ್ಷಮಪಿ ನೋಽಸ್ಮಾಕಂ ದೃಶಯೇ ದರ್ಶನಾಯ ಶಮಸ್ತು | ನೋಽಸ್ಮಾಕಂ ಶಂ ಶಾಂತ್ಯಾ

**ಓಷಧೀರೋಷಧಯೋಽಪಿ ಭವಂತು । ವನಿನೋ ವೃಕ್ಷಾಶ್ಚ ಶಂ ಭವಂತು । ಜಿಷ್ಣುರ್ಜಯಶೀಲೋ ರಜಸೋ ಲೋಕಸ್ಯ ಪತಿರಿಂದ್ರೋಽಪಿ ನೋಽಸ್ಮಾಕಂ ಶಂ ಶಾಂತ್ಯೈ ಅಸ್ತು ॥**

ಪ್ರತಿಪದಾರ್ಥ

**ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ನಃ**—ನಮ್ಮ । **ಶಂ**—ಶಾಂತಿಸಾಧಕರಾಗಿ । **ಪೂರ್ವಹೂತೌ**—ಮೊದಲನೇ ಸಲದ ಆಹ್ವಾನದಲ್ಲೇ ಸಿದ್ಧರಾಗಿರಲಿ. । **ಅಂತರಿಕ್ಷಂ**—ಅಂತರಿಕ್ಷವೂ ಸಹ । **ನಃ**—ನಮ್ಮ । **ದೃಶಯೇ**—ಉತ್ತಮವಾದ ದೃಷ್ಟಿಗೆ । **ಶಂ**—ಸುಖಕಾರಕವಾಗಿ । **ಅಸ್ತು**—ಆಗಿರಲಿ । **ನಃ**—ನಮ್ಮ । **ಶಂ**—ಶಾಂತಿಗಾಗಿ । **ಓಷಧೀಃ**—ಓಷಧಿಗಳೂ । **ಭವಂತು**—ಸಾಧಕವಾಗಿರಲಿ । **ವನಿನಃ**—ವೃಕ್ಷಗಳೂ ನಮ್ಮ ಶಾಂತಿಸಾಧಕವಾಗಿರಲಿ । **ಜಿಷ್ಣುಃ**—ಜಯಶೀಲನೂ । **ರಜಸಃ**—ಲೋಕಕ್ಕೆಲ್ಲಾ । **ಪತಿಃ**—ಒಡೆಯನೂ ಆದ ಇಂದ್ರನೂ । **ನಃ**—ನಮ್ಮ । **ಶಂ**—ಶಾಂತಿಗಾಗಿ । **ಅಸ್ತು**—ಆಗಿರಲಿ

ಭಾವಾರ್ಥ

ದ್ಯಾವಾಪೃಥಿವಿಗಳು ನಮ್ಮ ಶಾಂತಿಸಾಧಕರಾಗಿ ಮೊದಲನೆಯ ಆಹ್ವಾನದಲ್ಲೇ ಸಿದ್ಧರಾಗಿರಲಿ. ಅಂತರಿಕ್ಷವೂ ಸಹ ನಮ್ಮ ಉತ್ತಮವಾದ ದೃಷ್ಟಿಗೆ ಸುಖಕಾರಕವಾಗಿರಲಿ. ಓಷಧಿಗಳೂ ವೃಕ್ಷಗಳೂ ನಮ್ಮ ಶಾಂತಿಸಾಧಕವಾಗಲಿ. ಜಯಶೀಲನೂ, ಲೋಕಕ್ಕೆಲ್ಲಾ ಒಡೆಯನೂ ಆದ ಇಂದ್ರನೂ ನಮ್ಮ ಶಾಂತಿಸ್ಥಾಪಕನಾಗಲಿ

English Translation

May heaven and earth, the first invoked, (promote) our happiness: may the firmament be happiness to our view : may the herbs, the trees, (yield) us happiness may the victorious lord of the world, (Indra), be (favourable to) our felicity.

ಸಂಹಿತಾಪಾಠಃ

ಶಂ ನ ಇಂದ್ರೋ ವಸುಭಿರ್ದೇವೋ ಅಸ್ತು ಶಮಾದಿತ್ಯೇಭಿರ್ವರುಣಃ ಸುಶಂಸಃ ।
ಶಂ ನೋ ರುದ್ರೋ ರುದ್ರೇಭಿರ್ಜಲಾಷಃ ಶಂ ನಸ್ತ್ವಷ್ಟಾ ಗ್ನಾಭಿರಿಹ ಶೃಣೋತು

ಪದಪಾಠಃ

ಶಂ । ನಃ । ಇಂದ್ರಃ । ವಸುಽಭಿಃ । ದೇವಃ । ಅಸ್ತು । ಶಂ । ಆದಿತ್ಯೇಭಿಃ । ವರುಣಃ । ಸುಽಶಂಸಃ ।
ಶಂ । ನಃ । ರುದ್ರಃ । ರುದ್ರೇಭಿಃ । ಜಲಾಷಃ । ಶಂ । ನಃ । ತ್ವಷ್ಟಾ । ಗ್ನಾಭಿಃ । ಇಹ । ಶೃಣೋತು ॥ ೬ ॥

ಸಾಯಣಭಾಷ್ಯಂ

**ದೇವೋ ದ್ಯೋತನಾದಿಗುಣಯುಕ್ತ ಇಂದ್ರೋ ವಸುಭಿರ್ದೇವೈಃ ಸಾರ್ಧಂ ನೋಽಸ್ಮಾಕಂ ಶಂ ಶಾಂತ್ಯೈ ಭವತು । ಸುಶಂಸಃ ಶೋಭನಸ್ತುತಿರ್ವರುಣೋ ದೇವ ಆದಿತ್ಯೇಭಿರಾದಿತ್ಯೈರ್ದೇವೈಃ ಸಾರ್ಧಂ**

ಶಂ ಶಾಂತ್ಯಾ ಅಸ್ತು | ಭವತು | ಜಲಾಷೋ ರುದ್ರೋ ದುಃಖದ್ರಾವಕೋ ದೇವೋ ರುದ್ರೇಭೀ ರುದ್ರೈಃ ಸಾರ್ಧಂ ಶಂ ಶಾಂತ್ಯೈ ನೋಽಸ್ಮಾಕಂ ಭವತು | ಇಹ ಯಜ್ಞೇ ತ್ವಷ್ಟಾ ದೇವೋ ಗ್ನಾಭಿರ್ದೇವಪತ್ನೀಭಿಃ ಸಾರ್ಧಂ ನಃ ಶಂ ಶಾಂತ್ಯೈ ಭವತು | ಇಹ ಯಜ್ಞೇ ನಃ ಸ್ತೋತ್ರಂ ಶೃಣೋತು ಚ ||

ಪ್ರತಿಪದಾರ್ಥ

**ದೇವಃ**—ದೇವತಾತ್ಮನಾದ | **ಇಂದ್ರಃ**—ಇಂದ್ರನು | **ವಸುಭಿಃ** —ವಸು ಸಂಜ್ಞಕರಾದ ದೇವತೆಗಳೊಡನೆ | **ನಃ**—ನಮಗೆ | **ಶಂ**—ಶಾಂತಿಕಾರಕನಾಗಲಿ | **ಸುಶಂಸಃ**—ಉತ್ತಮವಾದ ಸ್ತುತಿಗೆ ಪಾತ್ರನಾದ | **ವರುಣಃ**—ವರುಣನು | **ಆದಿತ್ಯೇಭಿಃ**— ಆದಿತ್ಯರೊಡಗೂಡಿ | **ಶಂ**—ನಮ್ಮ ಶಾಂತಿಕಾರಕನಾಗಿ | **ಅಸ್ತು**—ಇರಲಿ | **ಜಲಾಷಃ**—ದುಃಖನಾಶಕನಾದ | **ರುದ್ರಃ**—ರುದ್ರನು | **ರುದ್ರೇಭಿಃ**—ರುದ್ರರೊಡಗೂಡಿ | **ನಃ**—ನಮ್ಮ | **ಶಂ**—ಶಾಂತಿಸಾಧಕನಾಗಿರಲಿ | **ಇಹ**—ಈ ಯಜ್ಞದಲ್ಲಿ | **ತ್ವಷ್ಟಾ**—ತ್ವಷ್ಟೃವು | **ಗ್ನಾಭಿಃ**—ದೇವಪತ್ನಿಯರೊಡಗೂಡಿ | **ನಃ**—ನಮ್ಮ | **ಶಂ**—ಶಾಂತಿಕಾರಕನಾಗಿ | **ಶೃಣೋತು**—ನಮ್ಮ ಸ್ತುತಿಯನ್ನು ಕೇಳಲಿ

ಭಾವಾರ್ಥ

ದೇವತಾತ್ಮಕನಾದ ಇಂದ್ರನು ವಸುಸಂಜ್ಞಕರಾದ ದೇವತೆಗಳೊಡನೆ ನಮಗೆ ಶಾಂತಿಕಾರಕನಾಗಲಿ ಉತ್ತಮವಾದ ಸ್ತುತಿಗೆ ಪಾತ್ರನಾದ ವರುಣನು ಆದಿತ್ಯರೊಡಗೂಡಿ ನಮ್ಮ ಶಾಂತಿಕಾರಕನಾಗಿರಲಿ. ದುಃಖನಾಶಕನಾದ ರುದ್ರನು ರುದ್ರರೊಡಗೂಡಿ ನಮ್ಮ ಶಾಂತಿಸಾಧಕನಾಗಿರಲಿ ಈ ಯಜ್ಞದಲ್ಲಿ ತ್ವಷ್ಟೃವು ದೇವಪತ್ನಿಯರೊಡಗೂಡಿ ನಮ್ಮ ಶಾಂತಿಕಾರಕನಾಗಿರಲಿ. ಮತ್ತು ನಮ್ಮ ಸ್ತುತಿಯನ್ನು ಕೇಳಲಿ

English Translation

May the divine (Indra), with the Vasus, grant us happiness may the justly-praised Varuna with the Adityas, be (friendly to) our happiness . may the grief-assuaging Rudra, with the Rudras be (for) our happiness may Twashtri, with the wives of the gods, be (with us) for our happiness : and hear us at this solemnity

ಸಂಹಿತಾಪಾಠಃ

ಶಂ ನಃ ಸೋಮೋ ಭವತು ಬ್ರಹ್ಮ ಶಂ ನಃ ಶಂ ನೋ ಗ್ರಾವಾಣಃ ಶಮು
ಸಂತು ಯಜ್ಞಾಃ |
ಶಂ ನಃ ಸ್ವರೂಣಾಂ ಮಿತಯೋ ಭವಂತು ಶಂ ನಃ ಪ್ರಸ್ವಃ ಶಮ್ವಸ್ತು ವೇದಿಃ||

ಪದಪಾಠಃ

ಶಂ | ನಃ | ಸೋಮಃ | ಭವತು | ಬ್ರಹ್ಮ | ಶಂ | ನಃ | ಶಂ | ನಃ | ಗ್ರಾವಾಣಃ | ಶಂ | ಊಂ ಇತಿ | ಸಂತು | ಯಜ್ಞಾಃ |

ಶಂ | ನಃ | ಸ್ವರೂಣಾಂ | ಮಿತಯಃ | ಭವಂತು | ಶಂ | ನಃ | ಪ್ರಽಸ್ವಃ | ಶಂ | ಊಂ ಇತಿ | ಅಸ್ತು | ವೇದಿಃ||

ಸಾಯಣಭಾಷ್ಯಂ

ನೋಽಸ್ಮಾಕಂ ಶಂ ಶಾಂತ್ಯೈ ಸೋಮೋ ಭವತು । ಬ್ರಹ್ಮ ಸ್ತೋತ್ರಮಪಿ ನೋಽಸ್ಮಾಕಂ ಶಂ ಶಾಂತ್ಯೈ ಭವತು । ಗ್ರಾವಾಣೋಽಭಿಷವಸಾಧನಭೂತಾಃ ಪಾಷಾಣಾ ಅಪಿ ನೋಽಸ್ಮಾಕಂ ಶಂ ಶಾಂತ್ಯೈ ಭವಂತು । ಯಜ್ಞಾಶ್ಚ ನಃ ಶಮು ಶಾಂತ್ಯಾ ಏವ ಸಂತು । ಸ್ವರೂಣಾಂ ಯೂಪಾನಾಂ ಮಿತಯ ಉನ್ಮಾನಾನ್ಯಪಿ ನೋಽಸ್ಮಾಕಂ ಶಂ ಶಾಂತ್ಯೈ ಭವಂತು । ಪ್ರಸ್ವ ಓಷಧಯೋಽಪಿ ನೋಽಸ್ಮಾಕಂ ಶಂ ಶಾಂತ್ಯೈ ಭವಂತು । ವೇದಿರಪಿ ನಃ ಶಮು ಶಾಂತ್ಯಾ ಏವಾಸ್ತು ॥

ಪ್ರತಿಪದಾರ್ಥ

ನಃ—ನಮ್ಮ । ಶಂ—ಶಾಂತಿಗಾಗಿ । ಸೋಮಃ—ಸೋಮವು । ಭವತು—ಅರ್ಪಿತವಾಗಲಿ । ನಃ—ನಮ್ಮ । ಶಂ—ಶಾಂತಿಗಾಗಿ । ಬ್ರಹ್ಮ—ಸ್ತೋತ್ರವೂ ಪಠಿತವಾಗಲಿ. । ಗ್ರಾವಾಣಃ—ಹಿಂಡುವ ಕಲ್ಲುಗಳೂ । ನಃ—ನಮ್ಮ । ಶಂ—ಶಾಂತಿಗಾಗಿ (ಸೋಮವನ್ನು ಹಿಂಡಲಿ) । ಯಜ್ಞಾಃ—ಯಜ್ಞಗಳೂ । ಶಮು—ನಮ್ಮ ಶಾಂತಿಗಾಗಿಯೇ । ಸಂತು—ನೆರವೇರಲಿ । ಸ್ವರೂಣಾಂ—ಯೂಪಗಳ । ಮಿತಯಃ—ಪ್ರಮಾಣಗಳೂ ಕೂಡ । ನಃ—ನಮ್ಮ । ಶಂ—ಶಾಂತಿಗಾಗಿಯೇ । ಭವಂತು—ಇರಲಿ. । ಪ್ರಸ್ವಃ—ಓಷಧಿಗಳೂ ಸಹ । ನಃ—ನಮ್ಮ । ಶಂ—ಶಾಂತಿಗಾಗಿಯೇ ಇರಲಿ । ವೇದಿಃ—ಯಜ್ಞವೇದಿಯೂ । ನಃ—ನಮ್ಮ । ಶಮು—ಶಾಂತಿಗಾಗಿಯೇ । ಅಸ್ತು—ಇರಲಿ

ಭಾವಾರ್ಥ

ಸೋಮವು ನಮ್ಮ ಶಾಂತಿಗಾಗಿಯೇ ಅರ್ಪಿತವಾಗಲಿ ನಮ್ಮ ಶಾಂತಿಗಾಗಿಯೇ ಸ್ತೋತ್ರವೂ ಪಠಿತವಾಗಲಿ ಹಿಂಡುವ ಕಲ್ಲುಗಳೂ ನಮ್ಮ ಶಾಂತಿಗಾಗಿ ಸೋಮವನ್ನು ಹಿಂಡಲಿ ಯಜ್ಞಗಳೂ ನಮ್ಮ ಶಾಂತಿಗಾಗಿಯೇ ನೆರವೇರಲಿ. ಯೂಪಗಳ ಪ್ರಮಾಣಗಳೂ ಸಹ ನಮ್ಮ ಶಾಂತಿಗಾಗಿಯೇ ಇರಲಿ. ಓಷಧಿಗಳೂ ನಮ್ಮ ಶಾಂತಿಸಾಧಕವಾಗಲಿ ಯಜ್ಞವೇದಿಯೂ ನಮಗೆ ಶಾಂತಿಯನ್ನುಂಟುಮಾಡಲಿ

English Translation

May the Soma be (offered for) our happiness may the prayer be (uttered for) our happiness may the stones (grind the Soma), the sacrifice be (solemnized for) our happiness may the measured lengths of the sacrificial posts be (conducive to) our felicity . may the sacred grass be (strewn)for our happiness may the altar be (raised for) our happiness.

ಸಂಹಿತಾಪಾಠಃ

ಶಂ ನಃ ಸೂರ್ಯ ಉರುಚಕ್ಷಾ ಉದೇತು ಶಂ ನಶ್ಚತಸ್ರಃ ಪ್ರದಿಶೋ ಭವಂತು ।
ಶಂ ನಃ ಪರ್ವತಾ ಧ್ರುವಯೋ ಭವಂತು ಶಂ ನಃ ಸಿಂಧವಃ ಶಮು ಸಂತ್ವಾಪಃ॥

ಪದಪಾಠಃ

ಶಂ । ನಃ । ಸೂರ್ಯಃ । ಉರುಽಚಕ್ಷಾಃ । ಉತ್ । ಏತು । ಶಂ । ನಃ । ಚತಸ್ರಃ । ಪ್ರಽದಿಶಃ। ಭವಂತು ।

ಶಂ । ನಃ । ಪರ್ವತಾಃ । ಧ್ರುವಯಃ । ಭವಂತು । ಶಂ । ನಃ । ಸಿಂಧವಃ । ಶಂ । ಊಂ ಇತಿ । ಸಂತು
ಆಪಃ ॥ ೮ ॥

ಸಾಯಣಭಾಷ್ಯಂ

ನೋಽಸ್ಮಾಕಂ ಶಂ ಶಾಂತ್ಯೈ ಸೂರ್ಯ ಉರುಚಕ್ಷಾ ವಿಸ್ತೀರ್ಣತೇಜಾಃ ಸನ್ನುದೇತು । ಉದಯಂ ಪ್ರಾಪ್ನೋತು । ಚತಸ್ರಃ ಪ್ರದಿಶೋ ಮಹಾದಿಶೋಽಪಿ ನೋಽಸ್ಮಾಕಂ ಶಂ ಶಾಂತ್ಯೈ ಭವಂತು । ನೋಽಸ್ಮಾಕಂ ಶಂ ಶಾಂತ್ಯೈ ಪರ್ವತಾ ಧ್ರುವಯೋ ಧ್ರುವಾ ಭವಂತು । ನೋಽಸ್ಮಾಕಂ ಶಂ ಶಾಂತ್ಯೈ ಸಿಂಧವೋ ನದ್ಯೋಽಪಿ ಭವಂತು । ಆಪಶ್ಚ ನಃ ಶಮು ಶಾಂತ್ಯಾ ಏವ ಸಂತು ॥

ಪ್ರತಿಪದಾರ್ಥ

ನಃ—ನಮ್ಮ । ಶಂ—ಶಾಂತಿಗಾಗಿ । ಸೂರ್ಯಃ—ಸೂರ್ಯನು । ಉರುಚಕ್ಷಾಃ—ವಿಸ್ತೃತವಾಗಿ ಹರಡಿದ ತೇಜಸ್ಸುಳ್ಳವನಾಗಿ । ಉದೇತು—ಉದಯಿಸಲಿ. । ಚತಸ್ರಃ—ನಾಲ್ಕು ಸಂಖ್ಯೆಯುಳ್ಳ । ಪ್ರದಿಶಃ—ಮಹಾದಿಕ್ಕುಗಳೂ । ನಃ—ನಮ್ಮ । ಶಂ—ಶಾಂತಿಸಾಧಕರಾಗಿ । ಭವಂತು—ಇರಲಿ । ನಃ—ನಮ್ಮ । ಶಂ—ಶಾಂತಿಗಾಗಿ । ಪರ್ವತಾಃ—ಪರ್ವತಗಳೂ । ಧ್ರುವಯಃ—ಶಾಶ್ವತಗಳಾಗಿ । ಭವಂತು—ಇರಲಿ । ನಃ—ನಮ್ಮ । ಶಂ—ಶಾಂತಿಕಾರಕವಾಗಿ । ಸಿಂಧವಃ—ನದಿಗಳೂ ಪ್ರವಹಿಸಲಿ । ಆಪಃ—ಉದಕಗಳೂ । ಶಮು—ನಮ್ಮ ಶಾಂತಿಗಾಗಿಯೇ । ಸಂತು—ಪ್ರವಹಿಸಲಿ

ಭಾವಾರ್ಥ

ನಮ್ಮ ಶಾಂತಿಲಾಭಕ್ಕಾಗಿ ಸೂರ್ಯನು ವಿಸ್ತೃತವಾಗಿ ಹರಡಿದ ತೇಜಸ್ಸುಳ್ಳವನಾಗಿ ಉದಯಿಸಲಿ ಮಹಾದಿಕ್ಕುಗಳೆಲ್ಲವೂ ನಮ್ಮ ಶಾಂತಿಸಾಧಕವಾಗಿರಲಿ. ಪರ್ವತಗಳೂ ನಮಗೆ ಶಾಂತಿದಾಯಕವಾದ ಶಾಶ್ವತಸ್ಥಿತಿಯನ್ನು ಹೊಂದಲಿ. ನದಿಗಳೂ ಉದಕಗಳೂ ನಮ್ಮ ಶಾಂತಿದಾಯಕವಾಗುವಂತೆ ಪ್ರವಹಿಸಲಿ.

English Translation

May the wide-seeing sun rise (for) our happiness · may the four quarters of the horizon (exist for) our felicity may the firm-set mountains be (for) our happiness may the rivers, may the waters, be (diffused) for our happiness

ಸಂಹಿತಾಪಾಠಃ

ಶಂ ನೋ ಅದಿತಿರ್ಭವತು ವ್ರತೇಭಿಃ ಶಂ ನೋ ಭವಂತು ಮರುತಃ ಸ್ವರ್ಕಾಃ ।

ಶಂ ನೋ ವಿಷ್ಣುಃ ಶಮು ಪೂಷಾ ನೋ ಅಸ್ತು ಶಂ ನೋ ಭವಿತ್ರಂ ಶಮ್ವ-
ಸ್ತು ವಾಯುಃ ॥ ೯ ॥

ಪದಪಾಠಃ

ಶಂ । ನಃ । ಅದಿತಿಃ । ಭವತು । ವ್ರತೇಭಿಃ । ಶಂ । ನಃ । ಭವಂತು । ಮರುತಃ । ಸುऽಅರ್ಕಾಃ ।

ಶಂ । ನಃ । ವಿಷ್ಣುಃ । ಶಂ । ಊಂ ಇತಿ । ಪೂಷಾ । ನಃ । ಅಸ್ತು । ಶಂ । ನಃ । ಭವಿತ್ರಂ । ಶಂ । ಊಂ ಇತಿ । ಅಸ್ತು । ವಾಯುಃ ॥ ೯ ॥

ಸಾಯಣಭಾಷ್ಯಂ

ಅದಿತಿರ್ದೇವೀ ವ್ರತೇಭಿರ್ವ್ರತೈಃ ಕರ್ಮಭಿಃ ಸಾರ್ಧಂ ನೋऽಸ್ಮಾಕಂ ಶಂ ಶಾಂತ್ಯೈ ಭವತು । ಸ್ವರ್ಕಾಃ ಶೋಭನಸ್ತುತಯೋ ಮರುತೋऽಪಿ ನೋऽಸ್ಮಾಕಂ ಶಂ ಶಾಂತ್ಯೈ ಸಂತು । ವಿಷ್ಣುರ್ವ್ಯಾಪಕೋ ನೋऽಸ್ಮಾಕಂ ಶಂ ಶಾಂತ್ಯಾ ಅಸ್ತು । ಪೂಷಾ ದೇವೋऽಪಿ ನೋऽಸ್ಮಾಕಂ ಶಮು ಶಾಂತ್ಯಾ ಏವಾಸ್ತು । ಭವಿತ್ರಂ ಭುವನಮಂತರಿಕ್ಷಮುದಕಂ ವಾ ನೋऽಸ್ಮಾಕಂ ಶಂ ಶಾಂತ್ಯಾ ಅಸ್ತು । ವಾಯುರಪಿ ನಃ ಶಮು ಶಾಂತ್ಯಾ ಏವಾಸ್ತು ॥

ಪ್ರತಿಪದಾರ್ಥ

**ಅದಿತಿಃ**—ದೇವತಾತ್ಮಳಾದ ಅದಿತಿಯು । **ವ್ರತೇಭಿಃ**—ತನ್ನ ಕರ್ಮಗಳೊಡನೆ । **ನಃ**—ನಮ್ಮ । **ಶಂ**—ಶಾಂತಿಸಾಧಕಳಾಗಿ । **ಭವತು**—ಇರಲಿ । **ಸ್ವರ್ಕಾಃ**—ಉತ್ತಮವಾದ ಸ್ತುತಿಗೆ ಪಾತ್ರರಾದ । **ಮರುತಃ**—ಮರುತ್ತುಗಳೂ । **ನಃ**—ನಮ್ಮ । **ಶಂ**—ಶಾಂತಿಕಾರಕರಾಗಿರಲಿ. । **ವಿಷ್ಣುಃ**—ವಿಷ್ಣುವೂ । **ನಃ**—ನಮಗೆ । **ಶಂ**—ಶಾಂತಿದಾಯಕನಾಗಿರಲಿ. । **ಪೂಷಾ**—ಪೂಷದೇವನೂ । **ನಃ**—ನಮಗೆ । **ಶಮು**—ಶಾಂತಿದಾಯಕನಾಗಿಯೇ । **ಅಸ್ತು**—ಇರಲಿ. । **ಭವಿತ್ರಂ**—ಭೂತಗಳಿಗೆ ಮೂಲತತ್ತ್ವವು । **ನಃ**—ನಮಗೆ । **ಶಂ**—ಶಾಂತಿಕಾರಕವಾಗಿರಲಿ । **ವಾಯುಃ**—ವಾಯುವೂ ಸಹ । **ಶಮು**—ಶಾಂತಿಗಾಗಿಯೇ । **ಅಸ್ತು**—ಇರಲಿ ।

ಭಾವಾರ್ಥ

ದೇವತಾತ್ಮಳಾದ ಅದಿತಿಯು ತನ್ನ ಕರ್ಮಗಳೊಡನೆ ನಮ್ಮ ಶಾಂತಿಸಾಧಕಳಾಗಿರಲಿ ಉತ್ತಮವಾದ ಸ್ತುತಿಗೆ ಪಾತ್ರರಾದ ಮರುತ್ತುಗಳೂ ನಮ್ಮ ಶಾಂತಿಕಾರಕರಾಗಿರಲಿ ವಿಷ್ಣುವೂ ನಮಗೆ ಶಾಂತಿದಾಯಕನಾಗಿರಲಿ ಪೂಷದೇವನೂ ನಮಗೆ ಶಾಂತಿಕಾರಕನಾಗಿಯೇ ಇರಲಿ ಭೂತಗಳಿಗೆ ಮೂಲತತ್ತ್ವವೂ ನಮ್ಮ ಶಾಂತಿಯನ್ನುಂಟುಮಾಡಲಿ. ವಾಯುವೂ ನಮ್ಮ ಶಾಂತಿಗಾಗಿರಲಿ.

## English Translation

May Aditi, with holy observances, be (for) our happiness may the glorified Maruts be (friendly to) our felicity, may Vishnu, may Pushan, be (promoters of) our happiness may the firmament be propitious to us, may Vayu (blow for) our happiness.

ಸಂಹಿತಾಪಾಠಃ

ಶಂ ನೋ ದೇವಃ ಸವಿತಾ ತ್ರಾಯಮಾಣಃ ಶಂ ನೋ ಭವಂತೂಷಸೋ ವಿಭಾತೀಃ ।

ಶಂ ನಃ ಪರ್ಜನ್ಯೋ ಭವತು ಪ್ರಜಾಭ್ಯಃ ಶಂ ನಃ ಕ್ಷೇತ್ರಸ್ಯ ಪತಿರಸ್ತು ಶಂಭುಃ ॥ ೧೦ ॥

ಪದಪಾಠಃ

ಶಂ । ನಃ । ದೇವಃ । ಸವಿತಾ । ತ್ರಾಯಮಾಣಃ । ಶಂ । ನಃ । ಭವಂತು । ಉಷಸಃ । ವಿಽಭಾತೀಃ ।

ಶಂ । ನಃ । ಪರ್ಜನ್ಯಃ । ಭವತು । ಪ್ರಽಜಾಭ್ಯಃ । ಶಂ । ನಃ । ಕ್ಷೇತ್ರಸ್ಯ । ಪತಿಃ । ಅಸ್ತು । ಶಂಽಭುಃ ॥

ಸಾಯಣಭಾಷ್ಯಂ

ದೇವಃ ಕ್ರೀಡನಾದಿಗುಣಯುಕ್ತಃ ಸವಿತಾ ತ್ರಾಯಮಾಣೋ ರಕ್ಷನ್ನೋಽಸ್ಮಾಕಂ ಶಂ ಶಾಂತ್ಯೈ ಭವತು । ವಿಭಾತೀರ್ವ್ಯುಚ್ಛಂತ್ಯ ಉಷಸೋಽಪಿ ನೋಽಸ್ಮಾಕಂ ಶಂ ಶಾಂತ್ಯೈ ಭವಂತು । ನೋಽಸ್ಮಾಕಂ ಪ್ರಜಾಭ್ಯಃ ಪರ್ಜನ್ಯೋಽಪಿ ಶಂ ಭವತು । ಶಂಭುಃ ಸುಖಸ್ಯ ಭಾವಯಿತಾ ಕ್ಷೇತ್ರಸ್ಯ ಪತಿರ್ನೋಽಸ್ಮಾಕಂ ಶಂ ಶಾಂತ್ಯಾ ಅಸ್ತು ॥

ಪ್ರತಿಪದಾರ್ಥ

ದೇವಃ—ದೇವತಾತ್ಮನಾದ । ಸವಿತಾ—ಸವಿತೃವು । ತ್ರಾಯಮಾಣಃ—ಸಂರಕ್ಷಿಸುತ್ತಾ । ನಃ—ನಮ್ಮ । ಶಂ—ಶಾಂತಿಕಾರಕನಾಗಲಿ । ವಿಭಾತೀಃ—ಪ್ರಭಾಯುತರಾದ । ಉಷಸಃ—ಉಷಸ್ಸುಗಳೂ ಕೂಡ । ನಃ—ನಮ್ಮ ಶಂ—ಶಾಂತಿಗಾಗಿ । ಭವಂತು—ಇರಲಿ । ನಃ—ನಮ್ಮ । ಪ್ರಜಾಭ್ಯಃ—ಪ್ರಜೆಗಳಿಗೆ । ಪರ್ಜನ್ಯಃ—ಪರ್ಜನ್ಯನು ಶಂ ಭವತು—ಶಾಂತಿದಾಯಕನಾಗಲಿ. । ಶಂಭುಃ—ಸುಖಕಾರಕನಾದ । ಕ್ಷೇತ್ರಸ್ಯ ಪತಿಃ—ಕ್ಷೇತ್ರಪತಿಯು । ನಃ—ನಮ್ಮ । ಶಂ—ಶಾಂತಿಗಾಗಿ । ಅಸ್ತು—ಇರಲಿ.

ಭಾವಾರ್ಥ

ದೇವತಾತ್ಮನಾದ ಸವಿತೃವು ನಮ್ಮನ್ನು ಸಂರಕ್ಷಿಸುತ್ತಾ ನಮ್ಮ ಶಾಂತಿಕಾರಕನಾಗಲಿ ಪ್ರಭಾಯುತರಾದ ಉಷಸ್ಸುಗಳೂ ಕೂಡ ನಮ್ಮ ಶಾಂತಿಗಾಗಿರಲಿ. ನಮ್ಮ ಪ್ರಜೆಗಳಿಗೆ ಪರ್ಜನ್ಯನು ಶಾಂತಿದಾಯಕನಾಗಲಿ ಸುಖಕಾರಕನಾದ ಕ್ಷೇತ್ರಪತಿಯು ನಮ್ಮ ಶಾಂತಿಗಾಗಿರಲಿ

English Translation

May the divine preserving Savitri be (radiant for) our happiness: may the opening dawns (break for) our happiness may Parjanya be (the granter of happiness) to our posterity. may Shambhu, the lord of strength, be (the conferrer of) happiness upon us

ಸಂಹಿತಾಪಾಠಃ

ಶಂ ನೋ ದೇವಾ ವಿಶ್ವದೇವಾ ಭವಂತು ಶಂ ಸರಸ್ವತೀ ಸಹ ಧೀಭಿರಸ್ತು ।

ಶಮ॒ಭಿ॒ಷಾಚಃ॒ ಶಮು॑ ರಾ॒ತಿಷಾ॑ಚಃ॒ ಶಂ ನೋ॑ ದಿ॒ವ್ಯಾಃ ಪಾರ್ಥಿ॑ವಾಃ॒ ಶಂ ನೋ॒
ಅಪ್ಯಾಃ॑ ॥ ೧೧ ॥

ಪದಪಾಠಃ

ನಃ । ದೇ॒ವಾಃ । ವಿ॒ಶ್ವಽದೇ॑ವಾಃ । ಭ॒ವ॒ನ್ತು॒ । ಶಂ । ಸರ॑ಸ್ವತೀ । ಸ॒ಹ । ಧೀ॒ಭಿಃ । ಅ॒ಸ್ತು॒ ।

ಅ॒ಭಿ॒ಽಸಾಚಃ॑ । ಶಂ । ಊಂ॒ ಇತಿ॑ । ರಾ॒ತಿ॒ಽಸಾ॑ಚಃ । ಶಂ । ನ॒ಃ । ದಿ॒ವ್ಯಾಃ । ಪಾರ್ಥಿ॑ವಾಃ । ಶಂ । ನ॒ಃ
ಅಪ್ಯಾಃ॑ ॥ ೧೧ ॥

ಸಾಯಣಭಾಷ್ಯಂ

ವಿಶ್ವದೇವಾ ಬಹುಸ್ತೋತ್ರಕಾ ದೇವಾ ನೋಽಸ್ಮಾಕಂ ಶಂ ಶಾಂತ್ಯೈ ಭವಂತು । ಸರಸ್ವತೀ ಚ ಧೀಭಿಃ ಸ್ತುತಿಭಿಃ ಕರ್ಮಭಿರ್ವಾ ಸಹ ನೋಽಸ್ಮಾಕಂ ಶಂ ಶಾಂತ್ಯಾ ಅಸ್ತು । ಅಭಿಷಾಚೋ ಯಜ್ಞಮಭಿತಃ ಸಚಮಾನಾಶ್ಚ ನಃ ಶಂ ಶಾಂತ್ಯೈ ಭವಂತು । ರಾತಿಷಾಚೋ ದಾನಂ ಸೇವಮಾನಾ ಅಪಿ ಶಮು ಶಾಂತ್ಯಾ ಭವಂತು । ದಿವ್ಯಾ ದಿವಿ ಭವಾಶ್ಚ ನೋಽಸ್ಮಾಕಂ ಶಂ ಶಾಂತ್ಯೈ ಭವಂತು । ಪಾರ್ಥಿವಾಃ ಪೃಥಿವ್ಯಾಂ ಭವಾಶ್ಚ ನಃ ಶಂ ಭವಂತು । ಅಪ್ಯಾ ಅಪ್ಸ್ವಂತರಿಕ್ಷೇ ಭವಾಶ್ಚ । ಆಕಾಶಮಾಪ ಇತ್ಯಂತರಿಕ್ಷನಾಮಸು ಪಠಿತಂ । ನೋಽಸ್ಮಾಕಂ ಶಂ ಶಾಂತ್ಯೈ ಭವಂತು ॥

ಪ್ರತಿಪದಾರ್ಥ

**ವಿಶ್ವದೇವಾಃ**—ಬಹುವಾದ ಸ್ತುತಿಗಳಿಗೆ ಪಾತ್ರರಾದ । **ದೇವಾಃ**—ದೇವತೆಗಳು । **ನಃ**—ನಮ್ಮ । **ಶಂ**—ಶಾಂತಿಕಾರಕರಾಗಿ । **ಭವಂತು**—ಇರಲಿ । **ಸರಸ್ವತೀ**—ಸರಸ್ವತಿಯು । **ಧೀಭಿಃ ಸಹ**—ತನ್ನ ಕರ್ಮಗಳೊಡನೆ । ನಮ್ಮ ಶಾಂತಿಗಾಗಿ । **ಅಸ್ತು**—ಅನುಗ್ರಹಿಸಲಿ । **ಅಭಿಷಾಚಂ**—ಯಜ್ಞದಲ್ಲಿ ಸಹಾಯಕರೂ । **ಶಂ**—ನಮಗೆ ಸುಖಕರವಾಗಿರಲಿ । **ರಾತಿಷಾಚಃ**—ದಾನಾರ್ಹರೂ । **ಶಮು**—ನಮ್ಮ ಸುಖಕ್ಕಾಗಿರಲಿ । **ದಿವ್ಯಾಃ**—ದ್ಯುಲೋಕೋತ್ಪನ್ನರೂ । **ನಃ**—ನಮಗೆ । **ಶಂ**—ಶಾಂತಿಗಾಗಿರಲಿ । **ಪಾರ್ಥಿವಾಃ**—ಪೃಥಿವ್ಯುತ್ಪನ್ನರೂ ನಮಗೆ ಸುಖಕಾರಕರಾಗಿರಲಿ । **ಅಪ್ಯಾಃ**—ಅಂತರಿಕ್ಷದೇವತೆಗಳೂ । **ನಃ**—ನಮಗೆ । **ಶಂ**—ಸುಖವನ್ನುಂಟುಮಾಡಲಿ.

ಭಾವಾರ್ಥ

ಬಹುವಾದ ಸ್ತುತಿಗಳಿಗೆ ಪಾತ್ರರಾದ ದೇವತೆಗಳು ನಮ್ಮ ಶಾಂತಿಕಾರಕರಾಗಿರಲಿ ಸರಸ್ವತಿಯು ತನ್ನ ಕರ್ಮಗಳೊಡನೆ ನಮ್ಮ ಶಾಂತಿಗಾಗಿ ಅನುಗ್ರಹಿಸಲಿ. ಯಜ್ಞದಲ್ಲಿ ಸಹಾಯಕರೂ ನಮ್ಮ ಶಾಂತಿಗಾಗಿರಲಿ. ದಾನಾರ್ಹರೂ ನಮ್ಮ ಸುಖಕಾರಕರಾಗಿರಲಿ ದ್ಯುಲೋಕೋತ್ಪನ್ನರೂ, ಪೃಥಿವ್ಯುತ್ಪನ್ನರೂ, ಅಂತರಿಕ್ಷೋತ್ಪನ್ನರೂ ಆದ ದೇವತೆಗಳು ನಮಗೆ ಸುಖವನ್ನುಂಟುಮಾಡಲಿ.

## English Translation

May the devine universal gods be (favourable) to our felicity : may Saraswati, with holy rites, be happiness . may those who assist at sacrifices, those who are liberal of gifts, be (conducive to) our happiness : may celestial, terrestrial, and acquatic things be (subservient to) our happiness.

ಸಂಹಿತಾಪಾಠಃ

ಶಂ ನಃ ಸತ್ಯಸ್ಯ ಪತಯೋ ಭವಂತು ಶಂ ನೋ ಅರ್ವಂತಃ ಶಮು ಸಂತು ಗಾವಃ ।
ಶಂ ನ ಋಭವಃ ಸುಕೃತಃ ಸುಹಸ್ತಾಃ ಶಂ ನೋ ಭವಂತು ಪಿತರೋ ಹವೇಷು ॥

ಪದಪಾಠಃ

ಶಂ । ನಃ । ಸತ್ಯಸ್ಯ । ಪತಯಃ । ಭವಂತು । ಶಂ । ನಃ । ಅರ್ವಂತಃ । ಶಂ । ಊಂ ಇತಿ । ಸಂತು । ಗಾವಃ ।
ಶಂ । ನಃ । ಋಭವಃ । ಸುऽಕೃತಃ । ಸುऽಹಸ್ತಾಃ । ಶಂ । ನಃ । ಭವಂತು । ಪಿತರಃ । ಹವೇಷು ॥

ಸಾಯಣಭಾಷ್ಯಂ

ಸತ್ಯಸ್ಯ ಪತಯಃ ಪಾಲಕಾಃ ಸತ್ಯಶೀಲಾ ದೇವಾ ನೋಽಸ್ಮಾಕಂ ಶಂ ಶಾಂತ್ಯೈ ಭವಂತು । ಅರ್ವಂತೋಽಶ್ವಾಶ್ಚ ನೋಽಸ್ಮಾಕಂ ಶಂ ಶಾಂತ್ಯೈ ಭವಂತು । ಗಾವೋಽಪಿ ನಃ ಶಂ ಶಾಂತ್ಯೈ ಭವಂತು। ಸುಕೃತಃ ಸುಕರ್ಮಾಣಃ ಸುಹಸ್ತಾಃ ಶೋಭನಹಸ್ತಾ ಋಭವೋಽಪಿ ನೋಽಸ್ಮಾಕಂ ಶಂ ಶಾಂತ್ಯೈ ಸಂತು। ಹವೇಷು ಸ್ತೋತ್ರೇಷು ಸತ್ಸು ಪಿತರೋಽಪಿ ನೋಽಸ್ಮಾಕಂ ಶಂ ಶಾಂತ್ಯೈ ಭವಂತು ॥

ಪ್ರತಿಪದಾರ್ಥ

**ಸತ್ಯಸ್ಯ ಪತಯಃ**—ಸತ್ಯಪಾಲಕರಾದ ದೇವತೆಗಳು । **ನಃ**—ನಮ್ಮ । **ಶಂ ಭವಂತು**—ಶಾಂತಿಗಾಗಿರಲಿ । **ಅರ್ವಂತಃ**—ಅಶ್ವಗಳು । **ನಃ**—ನಮ್ಮ । **ಶಂ**—ಶಾಂತಿಗಾಗಿರಲಿ । **ಗಾವಃ**—ಗೋವುಗಳೂ । **ಶಂ**—ನಮ್ಮ ಶಾಂತಿಗಾಗಿರಲಿ । **ಸುಕೃತಃ**—ಉತ್ತಮವಾದ ಕರ್ಮವುಳ್ಳವರೂ । **ಸುಹಸ್ತಾಃ**—ಉತ್ತಮವಾದ ಹಸ್ತವುಳ್ಳವರೂ ಆದ । **ಋಭವಃ**— ಋಭುಗಳೂ । **ನಃ**—ನಮ್ಮ । **ಶಂ**—ಶಾಂತಿಗಾಗಿರಲಿ । **ಹವೇಷು**—ನಮ್ಮ ಸ್ತುತಿಕಾಲದಲ್ಲಿ । **ಪಿತರಃ**—ಪಿತೃಗಳೂ । **ನಃ**—ನಮ್ಮ । **ಶಂ**—ಶಾಂತಿಗಾಗಿ । **ಭವಂತು**—ಇರಲಿ

ಭಾವಾರ್ಥ

ಸತ್ಯಪಾಲಕರಾದ ದೇವತೆಗಳು ನಮ್ಮ ಶಾಂತಿಕಾರಕರಾಗಿರಲಿ ಅಶ್ವಗಳೂ, ಗೋವುಗಳೂ ನಮ್ಮ ಶಾಂತಿಗಾಗಿರಲಿ ಉತ್ತಮವಾದ ಕರ್ಮವುಳ್ಳವರೂ ಉತ್ತಮವಾದ ಹಸ್ತವುಳ್ಳವರೂ ಆದ ಋಭುಗಳೂ ನಮ್ಮ ಶಾಂತಿಗಾಗಿರಲಿ. ನಮ್ಮ ಸ್ತುತಿಕಾಲದಲ್ಲಿ ಪಿತೃಗಳೂ ನಮ್ಮ ಶಾಂತಿಗಾಗಿರಲಿ

English Translation

May the lords of truth be (propitious to) our happiness may horses, may cattle, (contribute to) our happiness may the virtuous the dexterous Ribhus, be to us (for) felicity may the Progenitors be (promoters of) our happiness at the seasons of worship.

ಸಂಹಿತಾಪಾಠಃ

ಶಂ ನೋ ಅಜ ಏಕಪಾದ್ದೇವೋ ಅಸ್ತು ಶಂ ನೋಽಹಿರ್ಬುರ್ಧ್ನ್ಯಃ೧ ಶಂ ಸ-
ಮುದ್ರಃ ।
ಶಂ ನೋ ಅಪಾಂ ನಪಾತ್ಪೇರುರಸ್ತು ಶಂ ನಃ ಪೃಶ್ನಿರ್ಭವತು ದೇವಗೋಪಾಃ ॥

ಪದಪಾಠಃ

ಶಂ । ನಃ । ಅಜಃ । ಏಕಽಪಾತ್ । ದೇವಃ । ಅಸ್ತು । ಶಂ । ನಃ । ಅಹಿಃ । ಬುಧ್ನ್ಯಃ । ಶಂ । ಸಮುದ್ರಃ ।
ಶಂ । ನಃ । ಅಪಾಂ । ನಪಾತ್ । ಪೇರುಃ । ಅಸ್ತು । ಶಂ । ನಃ । ಪೃಶ್ನಿಃ । ಭವತು । ದೇವಽಗೋಪಾಃ ॥

ಸಾಯಣಭಾಷ್ಯಂ

ಅಜ ಏಕಪಾದಜ ಏಕಪಾನ್ನಾಮಧೇಯೋ ದೇವೋ ನೋಽಸ್ಮಾಕಂ ಶಂ ಶಾಂತ್ಯಾ ಅಸ್ತು । ಅಹಿರ್ಬುರ್ಧ್ನ್ಯಶ್ಚ ನೋಽಸ್ಮಾಕಂ ಶಂ ಶಾಂತ್ಯಾ ಅಸ್ತು । ಸಮುದ್ರೋಽಪಿ ನಃ ಶಂ ಶಾಂತ್ಯಾ ಅಸ್ತು । ಪೇರುರುಪದ್ರವೇಭ್ಯಃ ಪಾರಯಿತಾಪಾಂ ನಪಾದಪಾಂನಪಾನ್ನಾಮಧೇಯೋಽಪಿ ದೇವೋ ನೋಽಸ್ಮಾಕಂ ಶಂ ಶಾಂತ್ಯಾ ಅಸ್ತು । ದೇವಗೋಪಾ ದೇವಾ ಗೋಪಯಿತಾರೋ ಯಸ್ಯಾಂ ಸಾ ಪೃಶ್ನಿರ್ಮರುತಾಂ ಮಾತಾ ನೋಽಸ್ಮಾಕಂ ಶಂ ಶಾಂತ್ಯೈ ಭವತು ॥

ಪ್ರತಿಪದಾರ್ಥ

**ಅಜ ಏಕಪಾತ್**—ಅಜಏಕಪಾತ್ಸಂಜ್ಞಕನಾದ । **ದೇವಃ**—ದೇವನು । **ನಃ**—ನಮಗೆ । **ಶಂ**—ಶಾಂತಿಕಾರಕನಾಗಿ । **ಅಸ್ತು**—ಇರಲಿ. । **ಅಹಿರ್ಬುರ್ಧ್ನ್ಯಃ**—ಅಹಿರ್ಬುರ್ಧ್ನ್ಯದೇವನು । **ನಃ**—ನಮಗೆ । **ಶಂ**—ಶಾಂತಿಕಾರಕನಾಗಿರಲಿ । **ಸಮುದ್ರಃ**—ಸಮುದ್ರವೂ । **ಶಂ**—ಶಾಂತಿಸಾಧಕವಾಗಿರಲಿ । **ಪೇರುಃ**—ಉಪದ್ರವಗಳಿಂದ ತಪ್ಪಿಸತಕ್ಕ । **ಅಪಾಂ ನಪಾತ್**—ಅಪಾಂನಪಾತ್ಸಂಜ್ಞಕನಾದ ದೇವನು । **ನಃ**—ನಮ್ಮ । **ಶಂ**—ಶಾಂತಿಗಾಗಿ । **ಅಸ್ತು**—ಇರಲಿ. । **ದೇವಗೋಪಾಃ**—ದೇವತೆಗಳನ್ನು ರಕ್ಷಿಸುವ । **ಪೃಶ್ನಿಃ**—ಪೃಶ್ನಿಯು । **ನಃ**—ನಮಗೆ । **ಶಂ**—ಸುಖದಾತಳಾಗಿ । **ಭವತು**—ಇರಲಿ

ಭಾವಾರ್ಥ

ಅಜಏಕಪಾತ್ಸಂಜ್ಞಕನಾದ ದೇವನು ನಮಗೆ ಶಾಂತಿಕಾರಕನಾಗಿರಲಿ. ಅಹಿರ್ಬುರ್ಧ್ನ್ಯದೇವನು ನಮಗೆ ಶಾಂತಿಕಾರಕನಾಗಿರಲಿ ಸಮುದ್ರವೂ ನಮಗೆ ಶಾಂತಿಸಾಧಕವಾಗಿರಲಿ ಉಪದ್ರವಗಳಿಂದ ತಪ್ಪಿಸತಕ್ಕ ಅಪಾಂನಪಾತ್ಸಂಜ್ಞಕನಾದ ದೇವನು ನಮ್ಮ ಶಾಂತಿಗಾಗಿರಲಿ. ದೇವತೆಗಳನ್ನು ರಕ್ಷಿಸುವ ಪೃಶ್ನಿಯು ನಮಗೆ ಸುಖದಾತಳಾಗಿರಲಿ.

## English Translation

May the divine Aja ekapad be (fevourable to) our happiness. May Ahirbudhnya, may the firmament, be (promotive of) our happiness: may the

grandson of the waters, the protector, be (the securer of) our felicity : may Prishni, of whom the gods are the guardians, be to us (granter of) happiness.

ಸಂಹಿತಾಪಾಠಃ

ಆದಿತ್ಯಾ ರುದ್ರಾ ವಸವೋ ಜುಷಂತೇದಂ ಬ್ರಹ್ಮ ಕ್ರಿಯಮಾಣಂ ನವೀಯಃ।
ಶೃಣ್ವಂತು ನೋ ದಿವ್ಯಾಃ ಪಾರ್ಥಿವಾಸೋ ಗೋಜಾತಾ ಉತ ಯೇ ಯಜ್ಞಿಯಾಸಃ ॥ ೧೪ ॥

ಪದಪಾಠಃ

ಆದಿತ್ಯಾಃ । ರುದ್ರಾಃ । ವಸವಃ । ಜುಷಂತ । ಇದಂ । ಬ್ರಹ್ಮ । ಕ್ರಿಯಮಾಣಂ । ನವೀಯಃ ।
ಶೃಣ್ವಂತು । ನಃ । ದಿವ್ಯಾಃ । ಪಾರ್ಥಿವಾಸಃ । ಗೋಽಜಾತಾಃ । ಉತ । ಯೇ । ಯಜ್ಞಿಯಾಸಃ ॥ ೧೪ ॥

ಸಾಯಣಭಾಷ್ಯಂ

ನವೀಯೋ ನವತರಮಸ್ಮಾಭಿಃ ಕ್ರಿಯಮಾಣಮಿದಂ ಬ್ರಹ್ಮ ಸ್ತೋತ್ರಮಾದಿತ್ಯಾ ದಿವ್ಯಾಃ । ಅದಿತಿರ್ದ್ಯೌಃ । ಋ ೧ ೮೯-೧೦ । ಇತಿ ಶ್ರುತೇಃ । ರುದ್ರಾ ಅಂತರಿಕ್ಷಾ ವಸವಃ ಪಾರ್ಥಿವಾಶ್ಚ ಜುಷಂತ । ಜುಷಂತಾಂ । ಸೇವಂತಾಂ । ಅನ್ಯೇ ದಿವ್ಯಾ ದಿವಿ ಭವಾಃ ಪಾರ್ಥಿವಾಸಃ ಪಾರ್ಥಿವಾ ಗೋಜಾತಾ ಗೋಃ ಪೃಶ್ನೇರ್ಜಾತಾಃ । ನಾಕೋ ಗೌರಿತಿ ಸಾಧಾರಣನಾಮಸು ಪಾಠಾತ್ । ಉತಾಪಿ ಚ ಯೇ ಯಜ್ಞಿಯಾಸೋ ಯಜ್ಞಾರ್ಹಾಃ ತೇ ಸರ್ವೇಽಪಿ ನೋಽಸ್ಮಾಕಂ ಹವಂ ಶೃಣ್ವಂತು ॥

ಪ್ರತಿಪದಾರ್ಥ

**ಕ್ರಿಯಮಾಣಂ**—ನಮ್ಮಿಂದ ನಿರ್ಮಿತವಾದುದೂ । **ನವೀಯಃ**—ನೂತನವಾದುದೂ ಆದ । **ಇದಂ ಬ್ರಹ್ಮ** ಈ ಸ್ತೋತ್ರವನ್ನು । **ಆದಿತ್ಯಾಃ**—ದ್ಯುಲೋಕೋತ್ಪನ್ನರಾದ ಆದಿತ್ಯರೂ । **ರುದ್ರಾಃ**—ಅಂತರಿಕ್ಷಸ್ಥರಾದ ರುದ್ರರೂ । **ವಸವಃ**—ಪೃಥಿವೀಸ್ಥರಾದ ವಸುಗಳೂ । **ಜುಷಂತ**—ಸೇವಿಸಲಿ । **ದಿವ್ಯಾಃ**—ದ್ಯುಲೋಕೋತ್ಪನ್ನರೂ । **ಪಾರ್ಥಿವಾಸಃ**—ಪೃಥಿವೀಸ್ಥರೂ । **ಗೋಜಾತಾಃ**—ಪೃಶ್ನಿಪುತ್ರರೂ । **ಉತ**—ಮತ್ತು । **ಯೇ**—ಯಾರು । **ಯಜ್ಞಿಯಾಸಃ**—ಯಜ್ಞಾರ್ಹರೋ ಅವರೆಲ್ಲರೂ । **ನಃ**—ನಮ್ಮ ಸ್ತುತಿಯನ್ನು । **ಶೃಣ್ವಂತು**—ಕೇಳಲಿ.

ಭಾವಾರ್ಥ

ನಮ್ಮಿಂದ ನಿರ್ಮಿತವಾದುದೂ, ನೂತನವಾದುದೂ ಆದ ಈ ಸ್ತೋತ್ರವನ್ನು ದ್ಯುಲೋಕೋತ್ಪನ್ನರಾದ ಆದಿತ್ಯರೂ ಅಂತರಿಕ್ಷಸ್ಥರಾದ ರುದ್ರರೂ ಪೃಥಿವೀಸ್ಥರಾದ ವಸುಗಳೂ ಸೇವಿಸಲಿ. ದ್ಯುಲೋಕೋತ್ಪನ್ನರೂ ಪೃಥಿವೀಸ್ಥರೂ, ಪೃಶ್ನಿಪುತ್ರರೂ ಮತ್ತು ಯಜ್ಞಾರ್ಹರಾದ ಸಕಲರೂ ನಮ್ಮ ಸ್ತುತಿಯನ್ನು ಕೇಳಲಿ.

## English Translation

May the Adityas, the Rudras, the Vasus, be gratified by this new and now repeated praise · may celestial and terrestrial (beings), the progeny of the cow, (Prishni), and those who were entitled to worship, hear our (invocations)

ಸಂಹಿತಾಪಾಠಃ

ಯೇ ದೇವಾನಾಂ ಯಜ್ಞಿಯಾ ಯಜ್ಞಿಯಾನಾಂ ಮನೋರ್ಯಜತ್ರಾ ಅಮೃತಾ ಋತಜ್ಞಾಃ ।
ತೇ ನೋ ರಾಸಂತಾಮುರುಗಾಯಮದ್ಯ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೧೫ ॥

ಪದಪಾಠಃ

ಯೇ । ದೇವಾನಾಂ । ಯಜ್ಞಿಯಾಃ । ಯಜ್ಞಿಯಾನಾಂ । ಮನೋಃ । ಯಜತ್ರಾಃ । ಅಮೃತಾಃ । ಋತಽಜ್ಞಾಃ ।
ತೇ । ನಃ । ರಾಸಂತಾಂ । ಉರುಽಗಾಯಂ । ಅದ್ಯ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥

ಸಾಯಣಭಾಷ್ಯಂ

ಯಜ್ಞಿಯಾನಾಂ ಯಜನೀಯಾನಾಂ ದೇವಾನಾಮಪಿ ಯಜ್ಞಿಯಾ ಯಜನೀಯಾ ಮನೋಃ ಪ್ರಜಾಪತೇಶ್ಚ ಯಜತ್ರಾ ಯಜನೀಯಾ ಅಮೃತಾ ಮರಣರಹಿತಾ ಋತಜ್ಞಾಃ ಸತ್ಯಜ್ಞಾ ಯೇ ದೇವಾಃ ಸಂತಿ ತೇ ಸರ್ವ ಉರುಗಾಯಂ ಬಹುಕೀರ್ತಿಂ ಪುತ್ರಮದ್ಯ ನೋಽಸ್ಮಭ್ಯಂ ರಾಸಂತಾಂ । ಪ್ರಯಚ್ಛಂತು। ಸಿದ್ಧ ಏವೋತ್ತಮಃ ಪಾದಃ ॥

ಪ್ರತಿಪದಾರ್ಥ

**ಯಜ್ಞಿಯಾನಾಂ**—ಯಜ್ಞಾರ್ಹರಾದ | **ದೇವಾನಾಂ**—ದೇವತೆಗಳೂ | **ಯಜ್ಞಿಯಾಃ**—ಪೂಜ್ಯರಾದವರೂ | **ಮನೋಃ**—ಪ್ರಜಾಪತಿಗೂ | **ಯಜತ್ರಾಃ**—ಪೂಜ್ಯರೂ | **ಅಮೃತಾಃ**—ಮರಣಧರ್ಮರಹಿತರೂ | **ಋತಜ್ಞಾಃ**—ಸತ್ಯಜ್ಞರೂ ಆದ | **ಯೇ**—ಯಾವ ಯಾವ ದೇವತೆಗಳಿರುವರೋ | **ತೇ**—ಆ ಎಲ್ಲಾ ದೇವತೆಗಳೂ | **ಉರುಗಾಯಂ**— ಬಹಳ ಕೀರ್ತಿಯುತನಾದ ಪುತ್ರನನ್ನು | **ಅದ್ಯ** — ಈಗ | **ನಃ** — ನಮಗೆ | **ರಾಸಂತಾಂ**—ಕೊಡಲಿ. | (ಎಲೈ ದೇವತೆಗಳೇ) **ಯೂಯಂ**—ನೀವು | **ಸದಾ**—ಯಾವಾಗಲೂ | **ನಃ**—ನಮ್ಮನ್ನು | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ.

ಭಾವಾರ್ಥ

ಯಜ್ಞಾರ್ಹರಾದ ದೇವತೆಗಳಿಗೂ ಪೂಜ್ಯರಾದವರೂ, ಪ್ರಜಾಪತಿಗೂ ಪೂಜ್ಯರೂ, ಮರಣಧರ್ಮರಹಿತರೂ, ಸತ್ಯಜ್ಞರೂ ಆದ ಯಾವ ಯಾವ ದೇವತೆಗಳಿರುವರೋ ಆ ಎಲ್ಲಾ ದೇವತೆಗಳೂ ಬಹಳ ಕೀರ್ತಿಗೆ ಪಾತ್ರನಾದ ಪುತ್ರನನ್ನು ಈಗ ನಮಗೆ ಕೊಡಲಿ ಎಲೈ ದೇವತೆಗಳೇ, ನೀವು ಯಾವಾಗಲೂ ನಮ್ಮನ್ನು ಕಲ್ಯಾಣಗಳಿಂದ ರಕ್ಷಿಸಿರಿ

English Translation

May those who are the most adorable of the adorable divinitievs, those who were the adored of Manu, those who are immortal, the observers of truth, bestow upon us this day (a son) of widely-spread renown . and do you ever cherish us with blessings.

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕ ಭೂಪಾಲ**
**ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ**
**ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪಂಚಮಾಷ್ಟಕೇ**
**ತೃತೀಯೋಽಧ್ಯಾಯಃ ಸಮಾಪ್ತಃ ॥**

॥ ಓಂ ತತ್ಸತ್ ॥

ಇಲ್ಲಿಗೆ ಸಾಯಣಭಾಷ್ಯಸಹಿತವೂ ಕರ್ಣಾಟಕಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯ
ಐದನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ಸಮಾಪ್ತವಾದುದು

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ।

॥ ಮಂಗಳಂ ।





ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥



॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯ ಸಹಿತಾ

# ಋಗ್ವೇದ ಸಂಹಿತಾ

**(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)**

## ॥ ಪಂಚಮಾಷ್ಟಕೇ ಚತುರ್ಥೋಽಧ್ಯಾಯಃ ॥

## ಐದನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು

## ॥ ಸಪ್ತಮ ಮಂಡಲಂ ॥

## ಏಳನೆಯ ಮಂಡಲದ ಸೂಕ್ತಗಳು

### ಮೂವತ್ತಾರನೆಯ ಸೂಕ್ತವು

ಸಾಯಣಭಾಷ್ಯಂ

**ಅಥ ಪಂಚಮಾಷ್ಟಕೇ ಚತುರ್ಥೋಽಧ್ಯಾಯ ಆರಭ್ಯತೇ । ತತ್ರ ಷಡನುವಾಕಾತ್ಮಕಸ್ಯ ವಾಸಿಷ್ಠಸ್ಯ ಸಪ್ತಮಸ್ಯ ಮಂಡಲಸ್ಯ ತೃತೀಯೇಽನುವಾಕೇ ದ್ವಾವಿಂಶತಿ ಸೂಕ್ತಾನಿ । ತತ್ರ ಪ್ರ ಬ್ರಹ್ಮೇತಿ ನವರ್ಚಂ ತೃತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ಪೂರ್ವವದ್ವೈಶ್ವದೇವಂ । ಅನುಕ್ರಾಂತಂ ಚ । ಪ್ರ ಬ್ರಹ್ಮ ನವೇತಿ ॥ ವಿನಿಯೋಗೋ ಲೈಂಗಿಕಃ ॥**

**ಅನುವಾದವು**—ಈಗ ಐದನೆಯ ಅಷ್ಟಕದ ನಾಲ್ಕನೆಯ ಅಧ್ಯಾಯದ ವಿವರಣೆಯನ್ನು ಪ್ರಾರಂಭಿಸಲಾಗುವುದು. ಋಗ್ವೇದಸಂಹಿತೆಯ ಏಳನೆಯ ಮಂಡಲಕ್ಕೆ ವಸಿಷ್ಠನು ಋಷಿಯು. ಈ ಮಂಡಲದಲ್ಲಿ ಆರು ಅನುವಾಕಗಳಿರುವುವು. ಅವುಗಳಲ್ಲಿ ಮೊದಲಿನ ಎರಡು ಅನುವಾಕಗಳನ್ನೂ ಇಪ್ಪತ್ತೆರಡು ಸೂಕ್ತಗಳಿರುವ ಮೂರನೆಯ ಅನುವಾಕದಲ್ಲಿ ಮೊದಲಿನ ಎರಡು ಸೂಕ್ತಗಳನ್ನೂ ಹಿಂದಿನ ಅಧ್ಯಾಯದಲ್ಲಿಯೇ ವಿವರಿಸಿದ್ದಾಗಿದೆ ಈಗ **ಪ್ರ ಬ್ರಹ್ಮ** ಎಂಬ

ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಮಂಡಲದ್ರಷ್ಟೃವಾದ ವಸಿಷ್ಠನೇ ಋಷಿಯು, ವಿಶ್ವೇದೇವತೆಗಳು ದೇವತೆಯು, ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರ ಬ್ರಹ್ಮ ನವ** ಎಂದು ಹೇಳಿರುವುದು ವಿನಿಯೋಗವು ಲೈಂಗಿಕವು

## ಸೂಕ್ತ—೩೬

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೩೬ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧, ೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ— ೯ ॥
ಋಷಿಃ—ವಸಿಷ್ಠಃ ॥
ದೇವತಾ—ವಿಶ್ವೇದೇವಾಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರ ಬ್ರಹ್ಮೈತು ಸದನಾದೃತಸ್ಯ ವಿ ರಶ್ಮಿಭಿಃ ಸಸೃಜೇ ಸೂರ್ಯೋ ಗಾಃ ।
ವಿ ಸಾನುನಾ ಪೃಥಿವೀ ಸಸ್ರ ಉರ್ವೀ ಪೃಥು ಪ್ರತೀಕಮಧ್ಯೇಧೇ ಅಗ್ನಿಃ ॥೧॥

ಪದಪಾಠಃ

ಪ್ರ । ಬ್ರಹ್ಮ । ಏತು । ಸದನಾತ್ । ಋತಸ್ಯ । ವಿ । ರಶ್ಮಿಽಭಿಃ । ಸಸೃಜೇ । ಸೂರ್ಯಃ । ಗಾಃ ।
ವಿ । ಸಾನುನಾ । ಪೃಥಿವೀ । ಸಸ್ರೇ । ಉರ್ವೀ । ಪೃಥು । ಪ್ರತೀಕಂ । ಅಧಿ । ಆ । ಈಧೇ । ಅಗ್ನಿಃ ॥ ೧ ॥

ಸಾಯಣಭಾಷ್ಯಂ

ಋತಸ್ಯ ಯಜ್ಞಸ್ಯ ಸದನಾತ್ ಸ್ಥಾನಾದ್ದೇವಯಜನದೇಶಾದ್ಬ್ರಹ್ಮ ಸ್ತೋತ್ರಂ ಸ್ತುತ್ಯಾನ್ ಸೂರ್ಯಾದೀನ್ಪ್ರೈತು । ಪ್ರಕರ್ಷೇಣ ಗಚ್ಛತು । ಕಿಂ ತದ್ಬ್ರಹ್ಮೇತಿ ತದಾಹ । ಸೂರ್ಯಃ ಸರ್ವಸ್ಯ ಪ್ರೇರಕಃ ಶೋಭನವೀರ್ಯೋ ವಾ ದೇವೋ ರಶ್ಮಿಭಿರಾತ್ಮೀಯೈಃ ಕಿರಣೈರ್ಗಾ ಅಪೋ ವೃಷ್ಟ್ಯುದಕಾನಿ ವಿ ಸಸೃಜೇ । ವಿಸೃಜತಿ । ವಿಮುಂಚತಿ । ಪ್ರವರ್ಷತಿ । ಶ್ರೂಯತೇ ಹಿ । ಯಾಭಿರಾದಿತ್ಯಸ್ತಪತಿ ರಶ್ಮಿಭಿಸ್ತಾಭಿಃ ಪರ್ಜನ್ಯೋ ವರ್ಷತೀತಿ । ಸ್ಮೃತಿಶ್ಚ ಭವತಿ । ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾ ಇತಿ । ಅತ ಈದೃಶಂ ಮಾಹಾತ್ಮ್ಯಂ ಸೂರ್ಯಸ್ಯೈವ ವಿದ್ಯತೇ ನಾನ್ಯಸ್ಯ ಚಿದಿತ್ಯನೇನ ಪಾದೇನ ಸೂರ್ಯಃ ಸ್ತೂಯತೇ । ಅಪಿ ಚ ಪೃಥಿವೀ ಪ್ರಥಿತಾ ಭೂಮಿಃ ಸಾನುನಾ ಸಮುಚ್ಛ್ರಿತೇನ ಪರ್ವತಾದಿನೋರ್ವೀ ವಿಸ್ತೀರ್ಣಾ ಸತೀ ವಿ ಸಸ್ರೇ । ವಿಸರತಿ । ವ್ಯಾಪ್ನೋತಿ । ತಥಾಗ್ನಿಃ ಪೃಥು ವಿಸ್ತೀರ್ಣಂ ಪ್ರತೀಕಂ ಪೃಥಿವ್ಯಾ ಅವಯವಂ ದೇವಯಜನಲಕ್ಷಣಂ ಸ್ಥಾನಮಧಿ ॥ ಅಧಿಪರೀ ಅನರ್ಥಕಾವಿತ್ಯಧೇಃ ಕರ್ಮಪ್ರವಚನೀಯಸಂಜ್ಞಾಯಾಂ ಕರ್ಮಪ್ರವಚನೀಯಯುಕ್ತ ಇತಿ ಸಪ್ತಮ್ಯರ್ಥೇ ದ್ವಿತೀಯಾ ॥ ಈದ್ವಶೇ ಸ್ಥಾನ ಐಧೇ । ಆದೀಪ್ಯತೇ ॥

ಪ್ರತಿಪದಾರ್ಥ

**ಋತಸ್ಯ**—ಯಜ್ಞದ | **ಸದನಾತ್**—ಪ್ರದೇಶದಿಂದ | **ಬ್ರಹ್ಮ**—ಸ್ತೋತ್ರವು | **ಪ್ರ ಏತು**—ದೇವತೆಗಳ ಅಭಿಮುಖವಾಗಿ ಹೋಗಲಿ | **ಸೂರ್ಯಃ**—ಸರ್ವಪ್ರೇರಕನಾದ ಸೂರ್ಯನು | **ರಶ್ಮಿಭಿಃ**—ತನ್ನ ಕಿರಣಗಳಿಂದ | **ಗಾಃ**—ಉದಕಗಳನ್ನು | **ವಿ ಸಸೃಜೇ**—ಸುರಿಯುವಂತೆ ಮಾಡುತ್ತಾನೆ. | **ಪೃಥಿವೀ**—ಪೃಥ್ವಿಯು | **ಸಾನುನಾ**—ತನ್ನ ಎತ್ತರವಾದ ಪರ್ವತಾದಿಗಳಿಂದ | **ಉರ್ವೀ**—ವಿಸ್ತೃತವಾಗಿ ಬೆಳೆದು | **ವಿ ಸಸ್ರೇ**—ವ್ಯಾಪಿಸುತ್ತದೆ | **ಅಗ್ನಿಃ**—ಅಗ್ನಿಯು | **ಪೃಥು**—ವಿಸ್ತೃತನಾಗಿ ಬೆಳೆದು | **ಪ್ರತೀಕಂ ಅಧಿ**—ಪೃಥ್ವಿಯ ಯಜ್ಞಪ್ರದೇಶದಲ್ಲಿ | **ಇಧೇ**—ಪ್ರಕಾಶಿಸುತ್ತಾನೆ

ಭಾವಾರ್ಥ

ಯಜ್ಞಪ್ರದೇಶದಿಂದ ಸ್ತೋತ್ರವು ದೇವತೆಗಳ ಅಭಿಮುಖವಾಗಿ ಹೋಗಲಿ ಸರ್ವಪ್ರೇರಕನಾದ ಸೂರ್ಯನು ತನ್ನ ಕಿರಣಗಳಿಂದ ಉದಕಗಳನ್ನು ಸುರಿಯುವಂತೆ ಮಾಡುತ್ತಾನೆ ಪೃಥ್ವಿಯು ತನ್ನ ಎತ್ತರವಾದ ಪರ್ವತಾದಿಗಳಿಂದ ವಿಸ್ತೃತವಾಗಿ ಬೆಳೆದು ವ್ಯಾಪಿಸುತ್ತದೆ ಅಗ್ನಿಯು ಯಜ್ಞಪ್ರದೇಶದಲ್ಲಿ ಪುಷ್ಟನಾಗಿ ಪ್ರಕಾಶಿಸುತ್ತಾನೆ

English Translation

Let the prayer proceed from the hall of the sacrifice, for Surya with his rays lets loose the waters the spacious earth spreads (studded) with mountains, and Agni blazes on the extensive plains

ವಿಶೇಷವಿಷಯಗಳು

ಈ ಋಕ್ಕಿನ ಪೂರ್ವಾರ್ಧದಲ್ಲಿ ಸೂರ್ಯನನ್ನು ಸ್ತುತಿಸಲಾಗಿದೆ ವಿ ರಶ್ಮಿಭಿಃ **ಸಸೃಜೇ ಸೂರ್ಯೋ ಗಾಃ** | ಸರ್ವವನ್ನೂ ಪ್ರೇರಿಸುವ ಸೂರ್ಯನು ತನ್ನ ರಶ್ಮಿಗಳ ಮೂಲಕ ಭೂಮಿಯಮೇಲೆ ವೃಷ್ಟ್ಯುದಕವನ್ನು ಸುರಿಸುತ್ತಾನೆ ಎಂಬ ವಾಕ್ಯದಲ್ಲಿ ಹೇಳಿರುವಂತೆ ಸೂರ್ಯನಿಗೂ ವೃಷ್ಟಿಗೂ ಏನು ಸಂಬಂಧ ಎಂದರೆ—**ಯಾಭಿರಾದಿತ್ಯಸ್ತಪತಿ ರಶ್ಮಿಭಿಸ್ತಾಭಿಃ ಪರ್ಜನ್ಯೋ ವರ್ಷತಿ** (ತೈ ಆ ೧೦-೬೩) ಎಂಬ ಶ್ರುತಿವಾಕ್ಯದಂತೆ, ಸೂರ್ಯನು ತನ್ನ ಕಿರಣಗಳಿಂದ ಪ್ರಕಾಶಿಸುತ್ತಾ ಸಮುದ್ರಾದಿಜಲಾಶಯಗಳಲ್ಲಿರುವ ಉದಕವನ್ನು ತನ್ನ ರಶ್ಮಿಗಳ ಮೂಲಕ ಹೀರುತ್ತಾನೆ ಆ ಉದಕಗಳು ಆವಿಯ ರೂಪದಲ್ಲಿ ಅಂತರಿಕ್ಷದಲ್ಲಿ ಮೇಘಗಳಾಗಿ ಮಾರ್ಪಡುವುವು ಆ ಮೇಘಗಳಲ್ಲಿರುವ ಉದಕವನ್ನು ಪರ್ಜನ್ಯನು (ವೃಷ್ಟ್ಯಭಿಮಾನಿದೇವತೆಯು) ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಸುರಿಸುವನು. ಸಮುದ್ರದ ಉದಕಗಳು ಆವಿಯ ರೂಪದಲ್ಲಿ ಮೇಘಗಳಾಗುವುದಕ್ಕೆ ಸೂರ್ಯನ ರಶ್ಮಿಗಳೇ ಕಾರಣವಾದ್ದರಿಂದ ಆ ವಿಷಯವನ್ನೇ ಪ್ರಕೃತ ಋಕ್ಕಿನಲ್ಲಿ ವಿವರಿಸಿದೆ ಇದಲ್ಲದೆ **ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ** | ಆದಿತ್ಯನಿಂದ ವೃಷ್ಟಿಯೂ, ವೃಷ್ಟಿಯಿಂದ ಅನ್ನಾದ್ಯಾಹಾರಗಳೂ, ಅವುಗಳಿಂದ ಪ್ರಜೆಗಳೂ ಉತ್ಪನ್ನರಾಗಿರುವರೆಂದು ಸ್ಮೃತಿವಾಕ್ಯವೂ ಹೇಳುವುದು ಭೂಮಿಯಮೇಲೆ ವೃಷ್ಟಿಯು ( ಮಳೆಯು ) ಉಯ್ಯುವುದಕ್ಕೆ ಸೂರ್ಯನ ರಶ್ಮಿಗಳೇ ಕಾರಣವು ಎಂದು ಆಧುನಿಕವಿಜ್ಞಾನವೂ ತಿಳಿಸುವುದು

ಸಂಹಿತಾಪಾಠಃ

ಇಮಾಂ ವಾಂ ಮಿತ್ರಾವರುಣಾ ಸುವೃಕ್ತಿಮಿಷಂ ನ ಕೃಣ್ವೇ ಅಸುರಾ ನವೀಯಃ |

ಇನೋ ವಾಮನ್ಯಃ ಪದವೀರದಬ್ಧೋ ಜನಂ ಚ ಮಿತ್ರೋ ಯತತಿ ಬ್ರು-
ವಾಣಃ ॥ ೨ ॥

ಪದಪಾಠಃ

ಇಮಾಂ । ವಾಂ । ಮಿತ್ರಾವರುಣಾ । ಸುऽವೃಕ್ತಿಂ । ಇಷಂ । ನ । ಕೃಣ್ವೇ । ಅಸುರಾ । ನವೀಯಃ ।

ಇನಃ । ವಾಂ । ಅನ್ಯಃ । ಪದऽವೀಃ । ಅದಬ್ಧಃ । ಜನಂ । ಚ । ಮಿತ್ರಃ । ಯತತಿ । ಬ್ರುವಾಣಃ ॥ ೨ ॥

ಸಾಯಣಭಾಷ್ಯಂ

ಹೇ ಅಸುರಾಸುರೌ ಬಲವಂತೌ ಹೇ ಮಿತ್ರಾವರುಣಾ ಮಿತ್ರಾವರುಣೌ ವಾಂ ಯುವಾಭ್ಯಾಮಿಷಂ ನ ಹವಿರೂಪಮನ್ನಮಿವ ನವೀಯೋ ನವೀಯಸೀಮಿಮಾಮಸ್ಮದೀಯಾಂ ಪುರೋವರ್ತಿನೀಂ ಸುವೃಕ್ತಿಂ ಸ್ತುತಿಂ ಕೃಣ್ವೇ । ಅಹಂ ಸ್ತೋತಾ ಕರೋಮಿ । ವಾಂ ಯುವಯೋರನ್ಯೋऽನ್ಯತರ ಇನಃ ಪ್ರಭುರದಬ್ಧಃ ಶತ್ರುಭಿರಹಿಂಸಿತೋ ವರುಣಃ ಪದವೀಃ ಪದಸ್ಯ ಸ್ಥಾನಸ್ಯ ಪ್ರಜನಯಿತಾ । ವರುಣೋ ಹಿ ಧರ್ಮಾಧರ್ಮಯೋರ್ಧಾರಯಿತೇತಿ ಪದವೀರಿತ್ಯುಚ್ಯತೇ । ಬ್ರುವಾಣೋऽಸ್ಮಾಭಿಃ ಸ್ತೂಯಮಾನೋ ಮಿತ್ರಶ್ಚ ಜನಂ ಸರ್ವಂ ಪ್ರಾಣಿಜಾತಂ ಯತತಿ । ಯಾತಯತಿ । ಪ್ರವರ್ತಯತಿ । ತಥಾ ಚ ಶ್ರೂಯತೇ । ಮಿತ್ರೋ ಜನಾನ್ಯಾತಯತಿ ಬ್ರುವಾಣಃ । ಋ ೩ ೫೯ ೧ । ಇತಿ ॥

ಪ್ರತಿಪದಾರ್ಥ

**ಅಸುರಾ**—ಶಕ್ತಿಯುತರಾದ । **ಮಿತ್ರಾವರುಣಾ**—ಎಲೈ ಮಿತ್ರ ಮತ್ತು ವರುಣದೇವತೆಗಳೇ, । **ವಾಂ**—ನಿಮ್ಮನ್ನುದ್ದೇಶಿಸಿ । **ಇಷಂ ನ**—ಹವಿಸ್ಸನ್ನು ನಿರ್ಮಿಸುವಂತೆ । **ನವೀಯಃ**—ನೂತನವಾದ । **ಇಮಾಂ ಸುವೃಕ್ತಿಂ**—ಈ ಉತ್ತಮಸ್ತುತಿಯನ್ನು । **ಕೃಣ್ವೇ**—ನಿರ್ಮಿಸುತ್ತೇನೆ । **ವಾಂ**—ನಿಮ್ಮಿಬ್ಬರಲ್ಲಿ । **ಅನ್ಯಃ**—ಒಬ್ಬನಾದ ವರುಣನು **ಇನಃ**—ಜಗತ್ಪ್ರಭುವಾಗಿಯೂ । **ಅದಬ್ಧಃ**—ಅಪ್ರತಿಹತನಾಗಿಯೂ । **ಪದವೀಃ**—ಧರ್ಮಾಧರ್ಮಗಳ ಧಾರಕನಾಗಿಯೂ ಇದ್ದಾನೆ । **ಬ್ರುವಾಣಃ**—ನಮ್ಮಿಂದ ಸ್ತುತನಾಗತಕ್ಕ । **ಮಿತ್ರಃ ಚ**—ಮಿತ್ರನೂ ಸಹ । **ಜನಃ**—ಸಕಲ ಪ್ರಾಣಿಜಾತಿಗಳನ್ನೂ । **ಯತತಿ**—ಕ್ರಿಯಾಯುಕ್ತವಾಗುವಂತೆ ಮಾಡುತ್ತಾನೆ.

ಭಾವಾರ್ಥ

ಶಕ್ತಿಯುತರಾದ ಎಲೈ ಮಿತ್ರ ಮತ್ತು ವರುಣದೇವತೆಗಳೇ, ಹವಿಸ್ಸನ್ನು ನಿರ್ಮಿಸುವಂತೆ ನಿಮ್ಮನ್ನುದ್ದೇಶಿಸಿ ಈ ಉತ್ತಮವೂ ನೂತನವೂ ಆದ ಸ್ತುತಿಯನ್ನು ನಿರ್ಮಿಸುತ್ತೇನೆ. ನಿಮ್ಮಿಬ್ಬರಲ್ಲಿ ಒಬ್ಬನಾದ ವರುಣನು ಜಗತ್ಪ್ರಭುವಾಗಿಯೂ, ಅಪ್ರತಿಹತನಾಗಿಯೂ, ಧರ್ಮಾಧರ್ಮಗಳ ಧಾರಕನಾಗಿಯೂ ಇದ್ದಾನೆ. ನಮ್ಮಿಂದ ಸ್ತುತನಾಗತಕ್ಕ ಮಿತ್ರನೂ ಸಹ ಸಕಲ ಪ್ರಾಣಿಜಾತಿಗಳನ್ನೂ ಕಾರ್ಯಾಸಕ್ತವಾಗುವಂತೆ ಮಾಡುತ್ತಾನೆ.

English Translation

Powerful Mitra and Varuna, to you I offer this new praise as if it were (sacrificial) food : one of you, (Varuna), the invincible lord, is the guide to the path (of virtue) : Mitra, when praised, animates men to exertion.

ವಿಶೇಷವಿಷಯಗಳು

**ಪದವೀಃ—ಪದಸ್ಯ ಸ್ಥಾನಸ್ಯ ಪ್ರಜನಯಿತಾ | ವರುಣೋ ಹಿ ಧರ್ಮಾಧರ್ಮಯೋರ್ಧಾರಯಿ-ತೇತಿ ಪದವೀರಿತ್ಯುಚ್ಯತೇ** | ಪದವೀ ಎಂದರೆ ಸ್ಥಾನವು ಪ್ರಾಣಿಗಳು ಅಧರ್ಮವನ್ನು ತ್ಯಜಿಸಿ ಧರ್ಮಮಾರ್ಗದಲ್ಲಿ ನಡೆಯುವಂತೆ ನಿಯಮಿಸುವವನು ವರುಣನು ಇದನ್ನೇ **ವರುಣಸ್ಯ ವ್ರತಾನಿ** ಎಂದು ಅನೇಕಕಡೆ ಹೇಳಿದೆ. ಎಂದರೆ ಆಯಾ ಪ್ರಾಣಿಗಳೂ, ಮನುಷ್ಯರೂ ತಾವು ನೆರವೇರಿಸಬೇಕಾದ ಕರ್ತವ್ಯಕರ್ಮಗಳು ಅನೇಕ ಇರುವುವು. ಅವುಗಳನ್ನು ಸರಿಯಾಗಿ ಮಾಡುತ್ತಾ ಆ ನಿಯಮಗಳನ್ನು ಅವು ಪಾಲಿಸುವಂತೆ ನೋಡಿಕೊಳ್ಳುವುದು ವರುಣನ ಕಾರ್ಯವು. ಈ ಅಧಿಕಾರವು ವರುಣನಿಗೆ ಇರುವುದರಿಂದ ಅದನ್ನು ಇಲ್ಲಿ ಪದವೀ ಎಂಬ ಶಬ್ದದಿಂದ ವಿವರಿಸಿದೆ.

ಸಂಹಿತಾಪಾಠಃ

ಆ ವಾತಸ್ಯ ಧ್ರಜತೋ ರಂತ ಇತ್ಯಾ ಅಪೀಪಯಂತ ಧೇನವೋ ನ ಸೂದಾಃ |
ಮಹೋ ದಿವಃ ಸದನೇ ಜಾಯಮಾನೋಽಚಿಕ್ರದದ್ವೃಷಭಃ ಸಸ್ಮಿನ್ನೂಧನ್ ||

ಪದಪಾಠಃ

ಆ | ವಾತಸ್ಯ | ಧ್ರಜತಃ | ರಂತೇ | ಇತ್ಯಾಃ | ಅಪೀಪಯಂತ | ಧೇನವಃ | ನ | ಸೂದಾಃ |
ಮಹಃ | ದಿವಃ | ಸದನೇ | ಜಾಯಮಾನಃ | ಅಚಿಕ್ರದತ್ | ವೃಷಭಃ | ಸಸ್ಮಿನ್ | ಊಧನ್ || ೩ ||

ಸಾಯಣಭಾಷ್ಯಂ

ಧ್ರಜತೋ ಗಚ್ಛತೋ ವಾತಸ್ಯ ವಾಯೋರಿತ್ಯಾ ಗತಯ ಆ ರಂತೇ | ಅಭಿತೋ ರಮಂತೇ | ತಥಾ ಸೂದಾಃ || ಸೂದ ಪ್ರೇರಣ ಇತಿ ಧಾತುಃ || ಕ್ಷೀರಸ್ಯ ಪ್ರೇರಯಿತ್ರ್ಯೋ ಧೇನವೋ ನ | ನೇತಿ ಚಾರ್ಥೇ | ಗಾವಶ್ಚಾಪೀಪಯಂತ | ಪ್ಯಾಯಂತೇ | ಏಧಂತೇ | ಅಪಿ ಚ ಮಹೋ ಮಹತೋ ದಿವೋ ದ್ಯೋತಮಾನಸ್ಯಾದಿತ್ಯಸ್ಯ ಸದನೇ ಸ್ಥಾನೇಽಂತರಿಕ್ಷೇ ಜಾಯಮಾನ ಉತ್ಪದ್ಯಮಾನೋ ವೃಷಭೋ ವರ್ಷಣಶೀಲಃ ಪರ್ಜನ್ಯಃ ಸಸ್ಮಿನ್ನೂಧನ್ ತಸ್ಮಿನ್ನಂತರಿಕ್ಷೇಽಚಿಕ್ರದನ್ ||

ಪ್ರತಿಪದಾರ್ಥ

**ಧ್ರಜತಃ**—ಸಂಚರಿಸತಕ್ಕ | **ವಾತಸ್ಯ**—ವಾಯುವಿನ | **ಇತ್ಯಾಃ**—ಗಮನವ್ಯಾಪಾರಗಳು | **ಆ ರಂತೇ**—ಕ್ರೀಡಾತ್ಮಕವಾಗಿವೆ | **ಸೂದಾಃ**—ಕ್ಷೀರದಾಯಕಗಳಾದ | **ಧೇನವಃ ನ**—ಧೇನುಗಳೂ ಸಹ | **ಅಪೀಪಯಂತ**—ಪುಷ್ಟವಾಗುತ್ತವೆ | **ಮಹಃ**—ಮಹತ್ತಾದ | **ದಿವಃ**—ಆದಿತ್ಯನ | **ಸದನೇ**—ಸ್ಥಾನವಾದ ಅಂತರಿಕ್ಷದಲ್ಲಿ | **ಜಾಯ-ಮಾನಃ**—ಉತ್ಪನ್ನನಾಗತಕ್ಕವನೂ | **ವೃಷಭಃ**—ವೃಷ್ಟಿಕಾರಕನೂ ಆದ ಪರ್ಜನ್ಯನು | **ಸಸ್ಮಿನ್ ಊಧನ್**—ಅದೇ ಅಂತರಿಕ್ಷದಲ್ಲಿ | **ಅಚಿಕ್ರದತ್**—ಶಬ್ದಮಾಡುತ್ತಾನೆ

ಭಾವಾರ್ಥ

ಸರ್ವದಾ ಸಂಚರಿಸುವ ಶೀಲವುಳ್ಳ ವಾಯುವಿನ ಗಮನವ್ಯಾಪಾರಗಳು ಕ್ರೀಡಾತ್ಮಕವಾಗಿವೆ ಕ್ಷೀರದಾಯಕಗಳಾದ ಧೇನುಗಳೂ ಸಹ ಪುಷ್ಟವಾಗುತ್ತವೆ. ಮಹಾತ್ಮನಾದ ಆದಿತ್ಯನ ಸ್ಥಾನವಾದ ಅಂತರಿಕ್ಷದಲ್ಲಿ ಉತ್ಪನ್ನನಾಗತಕ್ಕವನೂ ವೃಷ್ಟಿಕಾರಕನೂ ಆದ ಪರ್ಜನ್ಯನು ಅದೇ ಅಂತರಿಕ್ಷದಲ್ಲಿ ಶಬ್ದಮಾಡುತ್ತಾನೆ.

## English Translation

The movements of the restless wind sport around · the milk-yielding cows are in good condition the showerer generated in the dwelling of the mighty sun has cried aloud in that his place of abiding, the (firmament).

ಸಂಹಿತಾಪಾಠಃ

ಗಿರಾ ಯ ಏತಾ ಯುನಜದ್ಧರೀ ತ ಇಂದ್ರ ಪ್ರಿಯಾ ಸುರಥಾ ಶೂರ ಧಾಯೂ।
ಪ್ರ ಯೋ ಮನ್ಯುಂ ರಿರಿಕ್ಷತೋ ಮಿನಾತ್ಯಾ ಸುಕ್ರತುಮರ್ಯಮಣಂ ವ-
ವೃತ್ಯಾಂ ॥ ೪ ॥

ಪದಪಾಠಃ

ಗಿರಾ । ಯಃ । ಏತಾ । ಯುನಜತ್ । ಹರೀ ಇತಿ । ತೇ । ಇಂದ್ರ । ಪ್ರಿಯಾ । ಸುऽರಥಾ । ಶೂರ ।
ಧಾಯೂ ಇತಿ ।
ಪ್ರ । ಯಃ । ಮನ್ಯುಂ । ರಿರಿಕ್ಷತಃ । ಮಿನಾತಿ । ಆ । ಸುऽಕ್ರತುಂ । ಅರ್ಯಮಣಂ । ವವೃತ್ಯಾಂ ॥ ೪ ॥

ಸಾಯಣಭಾಷ್ಯಂ

ಅಸ್ಯಾಃ ಪೂರ್ವೋಽರ್ಧರ್ಚ ಇಂದ್ರಸ್ತುತಿರಪರೋಽರ್ಯಮ್ಣಃ ಸ್ತುತಿಃ । ಹೇ ಶೂರ ವಿಕ್ರಾಂತೇಂದ್ರ ತೇ ತವ ಪ್ರಿಯಾ ಪ್ರಿಯೌ ಸುರಥಾ ಸುಷ್ಠುರಂಹಣೌ ಧಾಯೂ ಧಾರಕಾವೇತೈತೌ ಹರೀ ತ್ವದೀಯಾವಶ್ವೌ ಯೋ ಜನೋ ಗಿರಾ ಸ್ತುತಿರೂಪಯಾ ವಾಚಾ ಯುನಜತ್ ರಥೇ ಯುಂಜ್ಯಾತ್ ಹೇ ಇಂದ್ರ ತ್ವಮಸ್ಯ ಯಾಗಮಾಯಾಹೀತಿ ಶೇಷಃ । ಯೋಽರ್ಯಮಾ ರಿರಿಕ್ಷತೋ ಹಿಂಸಿತುಮಿಚ್ಛತಃ ಶತ್ರೋಃ ಸಂಬಂಧಿನಂ ಮನ್ಯುಂ ಕೋಪಂ ಪ್ರ ಮಿನಾತಿ ಪ್ರಕರ್ಷೇಣ ಹಿನಸ್ತಿ ಸುಕ್ರತುಂ ಶೋಭನಕರ್ಮಾಣಮರ್ಯಮಣಮಾ ವವೃತ್ಯಾಂ । ಸ್ತುತ್ಯಾವರ್ತಯಾಮಿ ॥

ಪ್ರತಿಪದಾರ್ಥ

**ಶೂರ**—ಪರಾಕ್ರಮಿಯಾದ । **ಇಂದ್ರ**—ಎಲೈ ಇಂದ್ರನೇ, । **ತೇ**—ನಿನ್ನ । **ಪ್ರಿಯಾ**—ಪ್ರೀತಿಪಾತ್ರವಾದುವೂ । **ಸುರಥಾ**—ಉತ್ತಮವಾಗಿ ಚಲಿಸುವುವೂ । **ಧಾಯೂ**—ಧಾರಕವಾದವೂ ಆದ । **ಏತಾ ಹರೀ**—ಈ ಅಶ್ವಗಳನ್ನು । **ಯಃ**—ಯಾವ ಯಜಮಾನನು । **ಗಿರಾ**—ತನ್ನ ಸ್ತುತಿರೂಪವಾದ ವಾಕ್ಕುಗಳಿಂದ । **ಯುನಜತ್**—ರಥಕ್ಕೆ ಯೋಜಿಸುವನೋ ಅವನ ಯಜ್ಞಕ್ಕೆ ಹೋಗು । **ಯಃ**—ಯಾವ ಅರ್ಯಮದೇವನು । **ರಿರಿಕ್ಷತಃ**—ಹಿಂಸಾಕಾರಕನಾದ ಶತ್ರುವಿನ । **ಮನ್ಯುಂ**—ಕ್ರೋಧವನ್ನು । **ಪ್ರ ಮಿನಾತಿ**—ಪೂರ್ಣವಾಗಿ ನಾಶಮಾಡುವನೋ, ಅಂತಹ **ಸುಕ್ರತುಂ**—ಉತ್ತಮವಾದ ಕರ್ಮವುಳ್ಳ । **ಅರ್ಯಮಣಂ**—ಅರ್ಯಮದೇವನನ್ನು । **ಆ ವವೃತ್ಯಾಂ**—ಸ್ತುತಿಯಿಂದ ಆರಾಧಿಸುತ್ತೇನೆ.

ಭಾವಾರ್ಥ

ಪರಾಕ್ರಮಿಯಾದ ಎಲೈ ಇಂದ್ರನೇ, ನಿನ್ನ ಪ್ರೀತಿಪಾತ್ರವಾದವೂ, ಉತ್ತಮವಾಗಿ ಚಲಿಸುವವೂ, ಧಾರಕವಾದವೂ ಆದ ಈ ಅಶ್ವಗಳನ್ನು ಯಾವ ಯಜಮಾನನು ತನ್ನ ಸ್ತುತಿರೂಪವಾದ ವಾಕ್ಯಗಳಿಂದ ರಥಕ್ಕೆ ಯೋಜಿಸುವನೋ ಅವನ ಯಜ್ಞಕ್ಕೆ ಹೋಗು ಯಾವ ಅರ್ಯಮದೇವನು ಹಿಂಸಾಕಾರಕನಾದ ಶತ್ರುವಿನ ಕ್ರೋಧವನ್ನು ಪೂರ್ಣವಾಗಿ ನಾಶಮಾಡುವನೋ ಅಂತಹ ಉತ್ತಮವಾದ ಕರ್ಮವುಳ್ಳ ಅರ್ಯಮದೇವನನ್ನು ಸ್ತುತಿಯಿಂದ ಆರಾಧಿಸುತ್ತೇನೆ.

English Translation

Hero, Indra, (come to the sacrafice of the man) who, by his adoration has harnessed (to your car) these your favourite, graceful, and vigorous horses may I bring hither Aryaman, the doer of good deeds who baffles the wrath of the malevolent

ಸಂಹಿತಾಪಾಠಃ

ಯಜಂತೇ ಅಸ್ಯ ಸಖ್ಯಂ ವಯಶ್ಚ ನಮಸ್ವಿನಃ ಸ್ವ ಋತಸ್ಯ ಧಾಮನ್ ।
ವಿ ಪೃಕ್ಷೋ ಬಾಬಧೇ ನೃಭಿಃ ಸ್ತವಾನ ಇದಂ ನಮೋ ರುದ್ರಾಯ ಪ್ರೇಷ್ಠಂ ॥

ಪದಪಾಠಃ

ಯಜಂತೇ । ಅಸ್ಯ । ಸಖ್ಯಂ । ವಯಃ । ಚ । ನಮಸ್ವಿನಃ । ಸ್ವೇ । ಋತಸ್ಯ । ಧಾಮನ್ ।
ವಿ । ಪೃಕ್ಷಃ । ಬಾಬಧೇ । ನೃಽಭಿಃ । ಸ್ತವಾನಃ । ಇದಂ । ನಮಃ । ರುದ್ರಾಯ । ಪ್ರೇಷ್ಠಂ ॥ ೫ ॥

ಸಾಯಣಭಾಷ್ಯಂ

ಅನಯಾ ರುದ್ರಃ ಸ್ತೂಯತೇ । ನಮಸ್ವಿನೋ ಹವಿರ್ಲಕ್ಷಣಾನ್ನವಂತಃ ಸ್ವೇ ಸ್ವಕೀಯ ಋತಸ್ಯ ಯಜ್ಞಸ್ಯ ಧಾಮನ್ ಧಾಮನಿ ಸ್ಥಾನೇ । ಸ್ವಕೀಯೇ ಯಜ್ಞಗೃಹೇ ಸ್ಥಿತಾ ಇತ್ಯರ್ಥಃ । ವಯಶ್ಚ ಗಂತಾರಃ ಕರ್ಮಾಣಿ ಕುರ್ವಾಣಾ ಯಜಮಾನಾ ಅಸ್ಯ ರುದ್ರಸ್ಯ ಸಖ್ಯಂ ಸಖಿತ್ವಮುದ್ದಿಶ್ಯ ಯಜಂತೇ । ಪೂಜಯಂತು । ನೃಭಿರ್ನೇತೃಭಿಃ ಸ್ತವಾನಃ ಸ್ತೂಯಮಾನೋ ರುದ್ರಃ ಪೃಕ್ಷೋಽನ್ನಂ ಸ್ತೋತೃಷು ವಿ ಬಾಬಧೇ । ವಿ ಬಧ್ನಾತಿ । ದದಾತೀತ್ಯರ್ಥಃ । ಪ್ರೇಷ್ಠಂ ರುದ್ರಸ್ಯ ಪ್ರಿಯತಮಮಿದಂ ನಮಸ್ತಸ್ಮೈ ರುದ್ರಾಯ ಮಯಾ ಕ್ರಿಯತೇ ॥

ಪ್ರತಿಪದಾರ್ಥ

**ನಮಸ್ವಿನಃ**—ಹವಿಸ್ಸನ್ನು ಹೊಂದಿರುವವರೂ । **ಸ್ವೇ**—ತಮ್ಮ । **ಋತಸ್ಯ**—ಯಜ್ಞದ । **ಧಾಮನ್**—ಸ್ಥಾನದಲ್ಲಿ । **ವಯಶ್ಚ**—ಕರ್ಮನಿರತರೂ ಆದ ಯಜಮಾನರು । **ಅಸ್ಯ**—ರುದ್ರನ । **ಸಖ್ಯಂ**—ಸಖಿತ್ವವನ್ನುದ್ದೇಶಿಸಿ **ಯಜಂತೇ**—ಪೂಜಿಸುತ್ತಾರೆ । **ನೃಭಿಃ**—ಯಜಮಾನರಿಂದ । **ಸ್ತವಾನಃ**—ಸ್ತುತನಾಗುವ ಈ ರುದ್ರನು । **ಪೃಕ್ಷಃ**—ಅನ್ನವನ್ನು । **ವಿ ಬಾಬಧೇ**—ಅವರಲ್ಲಿ ತುಂಬುತ್ತಾನೆ । **ಪ್ರೇಷ್ಠಂ**—ಅತ್ಯುತ್ತಮವಾದ । **ಇದಂ ನಮಃ**—ಈ ಸ್ತುತಿಯು । **ರುದ್ರಾಯ**—ರುದ್ರನಿಗೆ ಅರ್ಪಿತವಾಗುತ್ತದೆ

ಭಾವಾರ್ಥ

ಹವಿಸ್ಸನ್ನು ಹೊಂದಿರುವವರೂ, ತಮ್ಮ ತಮ್ಮ ಯಜ್ಞಸ್ಥಾನದಲ್ಲಿ ಕರ್ಮನಿರತರಾಗಿರುವವರೂ ಆದ ಯಜಮಾನರು ರುದ್ರನ ಸಖಿತ್ವವನ್ನುದ್ದೇಶಿಸಿ ಪೂಜಿಸುತ್ತಾರೆ. ಯಜಮಾನರಿಂದ ಸ್ತುತನಾಗತಕ್ಕ ಈ ರುದ್ರನು ಅವರಲ್ಲಿ ಅನ್ನವನ್ನು ತುಂಬುತ್ತಾನೆ ಅತ್ಯುತ್ತಮವಾದ ಈ ಸ್ತುತಿಯು ರುದ್ರನಿಗೆ ಅರ್ಪಿತವಾಗುತ್ತದೆ.

## English Translation

Let the offers of adoration, engaging (in pious acts), worship (Rudra) in their own hall of sacrifice, (solicitous) of his friendship praised by the leaders (of rites), he lavishes food (upon them) this most acceptable adoration is addressed to Rudra.

ಸಂಹಿತಾಪಾಠಃ

ಆ ಯತ್ಸಾಕಂ ಯಶಸೋ ವಾವಶಾನಾಃ ಸರಸ್ವತೀ ಸಪ್ತಥೀ ಸಿಂಧುಮಾತಾ ।
ಯಾಃ ಸುಷ್ವಯಂತ ಸುದುಘಾಃ ಸುಧಾರಾ ಅಭಿ ಸ್ವೇನ ಪಯಸಾ ಪೀಪ್ಯಾನಾಃ ॥ ೬ ॥

ಪದಪಾಠಃ

ಆ । ಯತ್ । ಸಾಕಂ । ಯಶಸಃ । ವಾವಶಾನಾಃ । ಸರಸ್ವತೀ । ಸಪ್ತಥೀ । ಸಿಂಧುಽಮಾತಾ ।
ಯಾಃ । ಸುಷ್ವಯಂತ । ಸುಽದುಘಾಃ । ಸುಽಧಾರಾಃ । ಅಭಿ । ಸ್ವೇನ । ಪಯಸಾ । ಪೀಪ್ಯಾನಾಃ ॥ ೬ ॥

ಸಾಯಣಭಾಷ್ಯಂ

ಯದ್ಯಾಸಾಂ ಗಂಗಾದೀನಾಂ ನದೀನಾಂ ಮಧ್ಯೇ ಸಿಂಧುಮಾತಾಪಾಂ ಮಾತೃಭೂತಾ ಸರಸ್ವತ್ಯೇತದಾಖ್ಯಾ ನದೀ ಸಪ್ತಥೀ ಸಪ್ತಮೀ ಭವತಿ ಸುದುಘಾಃ ಕಾಮಾನ್ ದೋಗ್ಧ್ರ್ಯಃ ಸುಶಕ್ತಾಃ ಸುಧಾರಾಃ ಶೋಭನಧಾರೋಪೇತಾಶ್ಚ ನದ್ಯಃ ಸುಷ್ವಯಂತ ಸುಷ್ವಯಂತೇ । ಗತಿಕರ್ಮೈತತ್ । ಪ್ರವಹಂತಿ । ಸ್ವೇನ ಸ್ವಕೀಯೇನ ಪಯಸೋದಕೇನಾಭಿ ಪೀಪ್ಯಾನಾ ಯಾಶ್ಚಾಭಿವರ್ಧಯಂತ್ಯೋ ಯಶಸೋಽನ್ನವತ್ಯೋ ವಾವಶಾನಾಃ ಕಾಮಯಮಾನಾ ನದ್ಯಃ ಸಾಕಂ ಯುಗಪದೇವಾ ಗಚ್ಛಂತು ॥ ಆ ಇತ್ಯುಪಸರ್ಗಸ್ಯ ಯೋಗ್ಯಕ್ರಿಯಾಧ್ಯಾಹಾರಃ ॥

ಪ್ರತಿಪದಾರ್ಥ

**ಯತ್**— ಯಾವ ಗಂಗಾದಿ ನದಿಗಳ ನಡುವೆ । **ಸಿಂಧುಮಾತಾ**— ಉದಕಗಳಿಗೆಲ್ಲಾ ಮಾತೃಪ್ರಾಯವಾದ । **ಸರಸ್ವತೀ**—ಸರಸ್ವತೀನದಿಯು । **ಸಪ್ತಥೀ**—ಏಳನೆಯದಾಗಿರುವುದೋ ಅಂತಹ । **ಸುದುಘಾಃ**— ಇಷ್ಟಾರ್ಥಪ್ರದವಾದವೂ । **ಸುಧಾರಾಃ**— ಉತ್ತಮವಾದ ಪ್ರವಾಹಗಳುಳ್ಳವೂ ಆದ ಆ ನದಿಗಳೆಲ್ಲವೂ । **ಸುಷ್ವಯಂತ**— ಪ್ರವಹಿಸುತ್ತವೆ. । **ಸ್ವೇನ**—ತಮ್ಮ । **ಪಯಸಾ**— ಉದಕದಿಂದ । **ಅಭಿ ಪೀಯಮಾನಾಃ**— ಪುಷ್ಟವಾಗತಕ್ಕ । **ಯಾಃ**—

ಯಾವ ನದಿಗಳು | ಯಶಸಃ – ಅನ್ನಯುಕ್ತವಾಗಿಯೂ | ನಾವಶಾನಾಃ— ಜಗತ್ಕಲ್ಯಾಣವನ್ನಪೇಕ್ಷಿಸುವವಾಗಿಯೂ ಇರುವವೋ ಆ ನದಿಗಳು | ಸಾಕಂ— ಒಟ್ಟಿಗೆ | ಆ (ಗಚ್ಛಂತು)— ಪ್ರವಹಿಸಿ ಬರಲಿ

ಭಾವಾರ್ಥ

ಯಾವ ಗಂಗಾನದಿಗಳ ನಡುವೆ ಉದಕಗಳಿಗೆಲ್ಲಾ ಮಾತೃಪ್ರಾಯವಾದ ಸರಸ್ವತೀನದಿಯು ಏಳನೆಯದಾಗಿರುವುದೋ ಅಂತಹ ಇಷ್ಟಾರ್ಥಪ್ರದವಾದವೂ, ಉತ್ತಮವಾದ ಪ್ರವಾಹಗಳುಳ್ಳವೂ ಆದ ನದಿಗಳು ಪ್ರವಹಿಸುತ್ತವೆ. ತಮ್ಮ ಉದಕದಿಂದ ಪುಷ್ಟವಾಗತಕ್ಕ ಯಾವ ನದಿಗಳು ಅನ್ನಯುಕ್ತವಾಗಿಯೂ ಜಗತ್ಕಲ್ಯಾಣವನ್ನಪೇಕ್ಷಿಸುವವಾಗಿಯೂ ಇರುವವೋ, ಆ ನದಿಗಳು ಒಟ್ಟಿಗೆ ಪ್ರವಹಿಸಿ ಬರಲಿ

English Translation

May the seventh (stream), Saraswathi, the mother of the Sindhu and those rivers that flow copious and fertilizing, bestowing abundance of food, and nourishing (the people) by their waters, come at once together

ಸಂಹಿತಾಪಾಠಃ

ಉತ ತ್ಯೇ ನೋ ಮರುತೋ ಮಂದಸಾನಾ ಧಿಯಂ ತೋಕಂ ಚ ವಾಜಿನೋಽವಂತು |
ಮಾ ನಃ ಪರಿ ಖ್ಯದಕ್ಷರಾ ಚರಂತ್ಯವೀವೃಧನ್ಯುಜ್ಯಂ ತೇ ರಯಿಂ ನಃ ॥ ೭ ॥

ಪದಪಾಠಃ

ಉತ | ತ್ಯೇ | ನಃ | ಮರುತಃ | ಮಂದಸಾನಾಃ | ಧಿಯಂ | ತೋಕಂ | ಚ | ವಾಜಿನಃ | ಅವಂತು |
ಮಾ | ನಃ | ಪರಿ | ಖ್ಯತ್ | ಅಕ್ಷರಾ | ಚರಂತೀ | ಅವೀವೃಧನ್ | ಯುಜ್ಯಂ | ತೇ | ರಯಿಂ | ನಃ ||೭||

ಸಾಯಣಭಾಷ್ಯಂ

ಉತಾಪಿ ಚ ಮಂದಸಾನಾ ಮೋದಮಾನಾ ವಾಜಿನೋ ವೇಗವಂತಸ್ತ್ಯೇ ತೇ ಮರುತೋ ನೋಽಸ್ಮದೀಯಂ ಧಿಯಂ ಯಜ್ಞಾಖ್ಯಂ ಕರ್ಮ ತೋಕಂ ಚಾಸ್ಮದೀಯಂ ಪುತ್ರಂ ಚಾವಂತು | ರಕ್ಷಂತು | ಅಕ್ಷರಾ ವ್ಯಾಪ್ತಾ ಚರಂತೀ ವಾಗ್ದೇವತಾ ಚ ನೋಽಸ್ಮಾನ್ ಪರಿ ತ್ಯಕ್ತ್ವಾಸ್ಮದ್ವ್ಯತಿರಿಕ್ತಾನನ್ಯಾನ್ಮಾ ಖ್ಯತ್ | ಮಾ ದ್ರಾಕ್ಷೀತ್ | ತೇ ಪೂರ್ವೋಕ್ತಾ ಮರುತೋ ವಾಕ್ಚ ಯುಜ್ಯಂ ಯುಕ್ತಮಪಿ ನೋಽಸ್ಮದೀಯಂ ರಯಿಂ ಧನಮವೀವೃಧನ್ | ವರ್ಧಯಂತು ||

ಪ್ರತಿಪದಾರ್ಥ

ಉತ— ಮತ್ತು | ಮಂದಸಾನಾಃ— ಹರ್ಷಯುಕ್ತರಾದವರೂ | ವಾಜಿನಃ— ವೇಗಗಾಮಿಗಳೂ | ತ್ಯೇ— ಪ್ರಸಿದ್ಧರೂ ಆದ | ಮರುತಃ— ಮರುದ್ದೇವತೆಗಳು | ನಃ ಧಿಯಂ— ನಮ್ಮ ಯಜ್ಞಕರ್ಮವನ್ನೂ | ತೋಕಂ ಚ— ನಮ್ಮ ಪುತ್ರಾದಿಗಳನ್ನೂ | ಅವಂತು— ರಕ್ಷಿಸಲಿ | ಅಕ್ಷರಾ— ನಾಶರಹಿತಳೂ | ಚರಂತೀ— ಸರ್ವವ್ಯಾಪಕಳೂ ಆದ

ವಾಗ್ದೇವಿಯು | **ನಃ**—ನಮ್ಮನ್ನು | **ಪರಿ—**ತ್ಯಜಿಸಿ | **ಮಾ ಖ್ಯತ್**—ಬೇರೆಯವರನ್ನು ಸೇರದಿರಲಿ | **ತೇ**—ಅದೇ ಮರುತ್ತುಗಳೂ ಮತ್ತು ವಾಗ್ದೇವಿಯೂ ಸಹ | **ಯುಜ್ಯಃ**—ನಮ್ಮೊಡನೆ ಇರಲು ಯೋಗ್ಯವಾದ | **ರಯಿಂ**—ಧನವನ್ನು | **ನಃ**—ನಮಗೋಸ್ಕರ | **ಅವೀವೃಧನ್**—ಬೆಳೆಸಲಿ.

ಭಾವಾರ್ಥ

ಹರ್ಷಯುಕ್ತರಾದವರೂ, ವೇಗಗಾಮಿಗಳೂ, ಪ್ರಸಿದ್ಧರೂ ಆದ ಮರುದ್ದೇವತೆಗಳು ನಮ್ಮ ಯಜ್ಞಕರ್ಮವನ್ನೂ, ನಮ್ಮ ಪುತ್ರಾದಿಗಳನ್ನೂ ರಕ್ಷಿಸಲಿ ನಾಶರಹಿತಳೂ, ಸರ್ವವ್ಯಾಪಕಳೂ ಆದ ವಾಗ್ದೇವಿಯು ನಮ್ಮನ್ನು ತ್ಯಜಿಸಿ ಬೇರೆಯವರನ್ನು ಸೇರದಿರಲಿ. ಅದೇ ಮರುತ್ತುಗಳೂ ಮತ್ತು ವಾಗ್ದೇವಿಯೂ ಸಹ ನಮ್ಮೊಡನೆ ಇರಲು ಯೋಗ್ಯವಾದ ಧನವನ್ನು ನಮಗಾಗಿ ಅಧಿಕಗೊಳಿಸಲಿ

English Translation

May these joyous and swift going Maruts protect our sacrifice and our offspring let not the imperishable goddess of speech, deserting us, speak (kindly) to our (adversaries) · and may both (she and the Maruts) associated augment our riches

ಸಂಹಿತಾಪಾಠಃ

ಪ್ರ ವೋ ಮಹೀಮರಮತಿಂ ಕೃಣುಧ್ವಂ ಪ್ರ ಪೂಷಣಂ ವಿದಥ್ಯಂ೧ ನ ವೀರಂ |
ಭಗಂ ಧಿಯೋಽವಿತಾರಂ ನೋ ಅಸ್ಯಾಃ ಸಾತೌ ವಾಜಂ ರಾತಿಷಾಚಂ ಪುರಂಧಿಂ || ೮ ||

ಪದಪಾಠಃ

ಪ್ರ | ವಃ | ಮಹೀಂ | ಅರಮತಿಂ | ಕೃಣುಧ್ವಂ | ಪ್ರ | ಪೂಷಣಂ | ವಿದಥ್ಯಂ | ನ | ವೀರಂ |
ಭಗಂ | ಧಿಯಃ | ಅವಿತಾರಂ | ನಃ | ಅಸ್ಯಾಃ | ಸಾತೌ | ವಾಜಂ | ರಾತಿऽಸಾಚಂ | ಪುರಂऽಧಿಂ | ೮ ||

ಸಾಯಣಭಾಷ್ಯಂ

ಹೇ ಸ್ತೋತಾರಃ ವೋ ಯೂಯಮರಮತಿಮುಪರತಿರಹಿತಾಂ ಮಹೀಂ ಮಹತೀಂ ಭೂಮಿಂ ಪ್ರ ಕೃಣುಧ್ವಂ | ಆಹ್ವಯತ | ತಥಾ ವಿದಥ್ಯಂ ಯಜ್ಞಾರ್ಹಂ ವೀರಂ ನ ಸರ್ವೇಷಾಂ ಪ್ರೇರಕಂ ಚ ಪೂಷಣಮೇತನ್ನಾಮಕಂ ದೇವಂ ಪ್ರ ಕೃಣುಧ್ವಂ | ತಥಾಸ್ಯಾ ಧಿಯೋ ನೋಽಸ್ಮದೀಯಸ್ಯಾಸ್ಯ ಕರ್ಮಣೋಽವಿತಾರಂ ರಕ್ಷಿತಾರಂ ಭಗಂ ದೇವಂ ಚಾಹ್ವಯತ | ಅಪಿ ಚ ಸಾತಾವಸ್ಮದೀಯೇ ಯಜ್ಞೇ ಯುದ್ಧೇ ವಾ ವಾಜಮೃಭೂಣಾಮನ್ಯತಮಂ ದೇವಮಾಹ್ವಯತ | ಕೀದೃಶಂ ವಾಜಂ | ರಾತಿಷಾಚಂ ದಾನಸೇವಕಂ ಪುರಂಧಿಂ ಪುರಾಣಾಂ ಧಾರಯಿತಾರಂ ||

ಪ್ರತಿಪದಾರ್ಥ

(ಎಲೈ ಸ್ತುತಿಕರ್ತರೇ,) **ವಃ**—ನೀವು | **ಅರಮತಿಂ**—ಹಿಂಸಾವರ್ಜಿತಳೂ | **ಮಹೀಂ**—ಮಹಾತ್ಮಳೂ ಆದ ಭೂದೇವಿಯನ್ನು | **ಪ್ರ ಕೃಣುಧ್ವಂ**—ಪ್ರಾರ್ಥಿಸಿ ಕರೆಯಿರಿ | **ವಿದಥ್ಯಂ**—ಯಜ್ಞಾರ್ಹನೂ | **ನೀರಂ**—ಜಗತ್ಪ್ರೇರಕನೂ ಆದ | **ಪೂಷಣಂ ನ**—ಪೂಷದೇವನನ್ನು ಸಹ | **ಪ್ರ**—ಪ್ರಾರ್ಥಿಸಿ ಕರೆಯಿರಿ | **ನಃ**—ನಮ್ಮ | **ಅಸ್ಯಾಃ ಧಿಯಃ**—ಈ ಕರ್ಮದ | **ಅವಿತಾರಂ**—ರಕ್ಷಕನಾದ | **ಭಗಂ**—ಭಗದೇವನನ್ನು ಕರೆಯಿರಿ | **ಸಾತೌ**—ನಮ್ಮ ಈ ಯಜ್ಞದಲ್ಲಿ | **ರಾತಿಷಾಚಂ**—ದಾನಪ್ರಿಯನೂ | **ಪುರಂಧಿಂ**—ಪುರಧಾರಕನೂ ಆದ | **ವಾಜಂ**—(ಋಭುಗಳಲ್ಲಿ ಒಬ್ಬನಾದ) ವಾಜನನ್ನೂ ಕರೆಯಿರಿ

ಭಾವಾರ್ಥ

ಎಲೈ ಸ್ತುತಿಕರ್ತರೇ, ಹಿಂಸಾವರ್ಜಿತಳೂ, ಮಹಾತ್ಮಳೂ ಆದ ಭೂದೇವಿಯನ್ನು ಪ್ರಾರ್ಥಿಸಿ ಕರೆಯಿರಿ. ಯಜ್ಞಾರ್ಹನೂ, ಜಗತ್ಪ್ರೇರಕನೂ ಆದ ಪೂಷದೇವನನ್ನು ಪ್ರಾರ್ಥಿಸಿ ಕರೆಯಿರಿ ನಮ್ಮ ಈ ಕರ್ಮದ ರಕ್ಷಕನಾದ ಭಗದೇವನನ್ನು ಕರೆಯಿರಿ ನಮ್ಮ ಈ ಯಜ್ಞದಲ್ಲಿ ದಾನಪ್ರಿಯನೂ, ಪುರಧಾರಕನೂ ಆದ ವಾಜನನ್ನು ಕರೆಯಿರಿ.

English Translation

**Invoke**, (worshippers), the nourishing earth, and the adorable hero, **Pushan** (invoke) **Bhaga**, the protector of this our sacrifice and Vaja, the sustainer of old, the liberal of gifts to our solemnity

ಸಂಹಿತಾಪಾಠಃ

ಅಚ್ಛಾಯಂ ವೋ ಮರುತಃ ಶ್ಲೋಕ ಏತ್ವಚ್ಛಾ ವಿಷ್ಣುಂ ನಿಷಿಕ್ತಪಾಮ
ವೋಭಿಃ ।
ಉತ ಪ್ರಜಾಯೈ ಗೃಣತೇ ವಯೋ ಧುರ್ಯೂಯಂ ಪಾತ ಸ್ವಸ್ತಿಭಿಃ ಸದಾ
ನಃ ॥ ೯ ॥

ಪದಪಾಠಃ

**ಅಚ್ಛ । ಅಯಂ । ವಃ । ಮರುತಃ । ಶ್ಲೋಕಃ । ಏತು । ಅಚ್ಛ । ವಿಷ್ಣುಂ । ನಿಸಿಕ್ತಽಪಾಂ । ಅವಃಽಭಿಃ ।**
**ಉತ । ಪ್ರಽಜಾಯೈ । ಗೃಣತೇ । ವಯಃ । ಧುಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥೯॥**

ಸಾಯಣಭಾಷ್ಯಂ

**ಯಜ್ಞಪುಚ್ಛೇಽಚ್ಛಾಯಂ ವ ಇತಿ ಚಮಸಿನಃ ಸ್ವಂ ಸ್ವಂ ಚಮಸಮಭಿಮೃಶೇಯುಃ । ಸೂತ್ರಿತಂ ಚ । ಅಚ್ಛಾಯಂ ವೋ ಮರುತಃ ಶ್ಲೋಕ ಏತ್ವಿತ್ಯೇತಯಾಭಿಮೃಶಂತಿ । ಆ. ೬ ೧೨ । ಇತಿ ॥**

**ಹೇ ಮರುತಃ ವೋ ಯುಷ್ಮಾನಯಂ ಶ್ಲೋಕೋಽಸ್ಮದೀಯಮಿದಂ ಸ್ತೋತ್ರಮಚ್ಛೈತು । ಅಭಿಗಚ್ಛತು । ನಿಷಿಕ್ತಪಾಂ ನಿಷಿಕ್ತಸ್ಯ ಗರ್ಭಸ್ಯ ರಕ್ಷಿತಾರಂ । ಯದ್ವಾ । ಚಮಸೇ ನಿಷಿಕ್ತಾನಾಂ ಸೋಮಾ-**

ನಾಂ ಪಾತಾರಂ ಅವೋಭಿರಸ್ಮದ್ವಿಷಯರಕ್ಷಣೈರ್ಯುಕ್ತಂ ವಿಷ್ಣುಂ ಚಾಸ್ಮದೀಯಂ ಸ್ತೋತ್ರಮಚ್ಛೈತು। ಉತಾಪಿ ಚ ಮರುತೋ ವಿಷ್ಣುಶ್ಚ ಗೃಣತೇ ಸ್ತುವತೇ ಮಹ್ಯಂ ಪ್ರಜಾಯೈ ಪುತ್ರರೂಪಾಂ ಪ್ರಜಾಂ ವಯೋಽನ್ನಂ ಚ ಧುಃ। ಅಧುಃ। ದಧತು। ಹೇ ಮರುತೋ ಹೇ ವಿಷ್ಣೋ ಯೂಯಂ ಸ್ವಸ್ತಿಭಿರವಿನಾಶೈರ್ನೋಽಸ್ಮಾನ್ ಸದಾ ಸರ್ವದಾ ಪಾತ। ರಕ್ಷತ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ವಃ**—ನಿಮ್ಮನ್ನು । **ಅಯಂ ಶ್ಲೋಕಃ**—ನಮ್ಮ ಈ ಸ್ತೋತ್ರವು । **ಅಚ್ಛ ಏತು**—ಸಮೀಪಿಸಲಿ । **ನಿಷಿಕ್ತಪಾಂ**—ಗರ್ಭರಕ್ಷಕನಾದವನೂ । **ಅವೋಭಿಃ**—ರಕ್ಷಣೆಗಳಿಂದ ಕೂಡಿದವನೂ ಆದ । **ವಿಷ್ಣುಂ**—ವಿಷ್ಣುವನ್ನು । **ಅಚ್ಛ**—ಸಮೀಪಿಸಲಿ । **ಉತ**—ಮತ್ತು । **ಗೃಣತೇ**—ಸ್ತುತಿಕರ್ತನಾದ ನನಗೆ **ಪ್ರಜಾಯೈ**—ಪುತ್ರಾದಿಗಳನ್ನೂ । **ವಯಃ**—ಅನ್ನವನ್ನೂ । **ಧುಃ**—ಕೊಡಲಿ । (ಎಲೈ ಮರುತ್ತುಗಳೇ ಮತ್ತು ಎಲೈ ವಿಷ್ಣುವೇ) **ಯೂಯಂ**—ನೀವು । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಪಾತ**—ರಕ್ಷಿಸಿರಿ.

ಭಾವಾರ್ಥ

ಎಲೈ ಮರುತ್ತುಗಳೇ, ನಮ್ಮ ಈ ಸ್ತೋತ್ರವು ನಿಮ್ಮನ್ನು ಸಮೀಪಿಸಲಿ ಗರ್ಭರಕ್ಷಕನಾದವನೂ, ರಕ್ಷಣೆಗಳಿಂದ ಕೂಡಿದವನೂ ಆದ ವಿಷ್ಣುವನ್ನು ಸಮೀಪಿಸಲಿ. ಸ್ತುತಿಕರ್ತನಾದ ನನಗೆ ಪುತ್ರಾದಿಗಳನ್ನೂ ಅನ್ನಗಳನ್ನೂ ಆ ದೇವತೆಗಳು ಕೊಡಲಿ. ಎಲೈ ಮರುತ್ತುಗಳೇ ಮತ್ತು ಎಲೈ ವಿಷ್ಣುವೇ ನೀವು ನಿಮ್ಮ ಕಲ್ಯಾಣಕರ್ಮಗಳಿಂದ ನಮ್ಮನ್ನು ಯಾವಾಗಲೂ ರಕ್ಷಿಸಿರಿ

English Translation

May this praise come Maruts, before you (may it come) before Vishnu, the guardian of the embryo, with his protecting faculties may they both bestow upon (me), their adorer, progeny and food, and ever cherish us with blessings

ವಿಶೇಷವಿಷಯಗಳು

ಯಜ್ಞಾಂತ್ಯದಲ್ಲಿ ಋತ್ವಿಜರು **ಅಚ್ಛಾಯಂ ವಃ** ಎಂಬ ಋಕ್ಕನ್ನು ಪಠಿಸುತ್ತಾ ತಮ್ಮ ತಮ್ಮ ಚಮಸಪಾತ್ರೆಗಳನ್ನು ಅಭಿಮರ್ಶನ ಮಾಡಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಚ್ಛಾಯಂ ವೋ ಮರುತಃ ಶ್ಲೋಕ ಏತ್ವಿತ್ಯೇತಯಾಭಿಮೃಶಂತಿ** ಎಂಬ ಸೂತ್ರದಿಂದ (ಆ. ೬-೧೨) ವಿವೃತವಾಗಿರುವುದು.

---

## ಮೂವತ್ತೇಳನೆಯ ಸೂಕ್ತವು

**ಆ ವೋ ವಾಹಿಷ್ಠ ಇತ್ಯಷ್ಟರ್ಚಂ ಚತುರ್ಥಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವೈಶ್ವದೇವಂ। ಅನುಕ್ರಮ್ಯತೇ ಚ। ಆ ವೋಽಷ್ಟಾವಿತಿ ॥ ವಿನಿಯೋಗೋ ಲೈಂಗಿಕಃ ॥**

**ಅನುವಾದವು— ಆ ವೋ ವಾಹಿಷ್ಠಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ವಿಶ್ವೇದೇವತೆಗಳು ದೇವ

ತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ **ಆ ವೋಽಷ್ಟೌ** ಎಂದು ಹೇಳಿರುವುದು ವಿನಿಯೋಗವು ಲೈಂಗಿಕವು

## ಸೂಕ್ತ—೩೭

ಮಂಡಲ—೭ || ಅನುವಾಕ—೩ || ಸೂಕ್ತ —೩೭ ||
ಅಷ್ಟಕ—೫ || ಅಧ್ಯಾಯ—೪ || ವರ್ಗ—೩, ೪ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ||
ಋಷಿಃ—ವಸಿಷ್ಠಃ ||
ದೇವತಾ—ವಿಶ್ವೇದೇವಾಃ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

ಆ ವೋ॑ ವಾಹಿ॑ಷ್ಠೋ ವಹತು ಸ್ತ॒ವಧ್ಯೈ॒ ರಥೋ॑ ವಾಜಾ ಋಭುಕ್ಷಣೋ॒ ಅಮೃ॑ಕ್ತಃ ।
ಅ॒ಭಿ ತ್ರಿ॒ಪೃ॒ಷ್ಠೈಃ ಸವ॑ನೇಷು॒ ಸೋಮೈ॒ರ್ಮದೇ॑ ಸುಶಿಪ್ರಾ ಮ॒ಹಭಿಃ॑ ಪೃಣಧ್ವಂ ||

ಪದಪಾಠಃ

ಆ । ವಃ॒ । ವಾಹಿ॑ಷ್ಠಃ । ವ॒ಹ॒ತು । ಸ್ತ॒ವಧ್ಯೈ॑ । ರಥಃ॑ । ವಾ॒ಜಾಃ॒ । ಋ॒ಭು॒ಕ್ಷ॒ಣಃ॒ । ಅಮೃ॑ಕ್ತಃ ।
ಅ॒ಭಿ । ತ್ರಿ॒ಽಪೃ॒ಷ್ಠೈಃ । ಸವ॑ನೇಷು । ಸೋಮೈಃ॑ । ಮದೇ॑ । ಸು॒ಽಶಿ॒ಪ್ರಾಃ॒ । ಮ॒ಹಃಽಭಿಃ । ಪೃ॒ಣ॒ಧ್ವಂ॒ || ೧ ||

ಸಾಯಣಭಾಷ್ಯಂ

ಅನೇನ ದ್ವ್ಯೃಚೇನರ್ಭವಃ ಸ್ತೂಯಂತೇ । ಋಭುಕ್ಷಣೋ ಮಹತಸ್ತೇಜಸೋ ನಿವಾಸಭೂತಾ ಹೇ ವಾಜಾ ಋಭವಃ ವಾಹಿಷ್ಠೋ ವೋಢೃತಮಃ ಸ್ತವಧ್ಯೈ ಸ್ತೋತುಮರ್ಹೋಽಮೃಕ್ತಃ ಕೇನಾಪ್ಯಹಿಂಸಿತೋ ಯುಷ್ಮದೀಯೋ ರಥೋ ವೋ ಯುಷ್ಮಾನಾ ವಹತು । ಆ ಸಮಂತಾದಸ್ಮದೀಯಂ ಯಜ್ಞಂ ಪ್ರಾಪಯತು । ಹೇ ಸುಶಿಪ್ರಾಃ ಶೋಭನಹನವಃ ಯೂಯಂ ತೇನ ರಥೇನಾಗತ್ಯ ಸವನೇಷ್ವಸ್ಮದೀಯಯಜ್ಞೇಷು ಮದೇ ಮದನಿಮಿತ್ತೇ ತ್ರಿಪೃಷ್ಠೈಃ ಕ್ಷೀರದಧಿಸಕ್ತುಮಿಶ್ರೈರ್ಮಹಭಿರ್ಮಹದ್ಭಿಃ ಸೋಮೈರಭಿ ಪೃಣಧ್ವಂ । ಯುಷ್ಮದೀಯಂ ಜಠರಮಭಿಪೂರಯತ । ಸ ರಥೋ ಯುಷ್ಮಾನಾವಹತ್ವಿತಿ ಪೂರ್ವೇಣಾನ್ವಯಃ ||

ಪ್ರತಿಪದಾರ್ಥ

**ಋಭುಕ್ಷಣಃ**—ತೇಜಸ್ಸಿಗೆ ನಿವಾಸಭೂತರಾದ । **ವಾಜಾಃ**—ಎಲೈ ಋಭುಗಳೇ, । **ವಾಹಿಷ್ಠಃ—ಉತ್ತಮ**ವಾಗಿ ವಹಿಸಬಲ್ಲದೂ, । **ಸ್ತವಧ್ಯೈ**—ಸ್ತುತಿಗೆ ಯೋಗ್ಯವಾದುದೂ । **ಅಮೃಕ್ತಃ**—ಅಹಿಂಸಿತವಾದುದೂ **ಆದ** । **ರಥಃ**—ನಿಮ್ಮ ರಥವು । **ವಃ**—ನಿಮ್ಮನ್ನು । **ಆ ವಹತು**—ಕರೆತರಲಿ । **ಸುಶಿಪ್ರಾಃ**—ಉತ್ತಮವಾದ ಕೆನ್ನೆಯುಳ್ಳ ಎಲೈ ಋಭುಗಳೇ, । **ಸವನೇಷು**—ನಮ್ಮ ಯಜ್ಞಗಳಲ್ಲಿ । **ಮದೇ**—ನಿಮ್ಮ ಹರ್ಷನಿಮಿತ್ತವಾಗಿ । **ತ್ರಿಪೃಷ್ಠೈಃ**—ಕ್ಷೀರಾದ್ಯಾಶ್ರಯಣದ್ರವ್ಯಗಳಿಂದ ಕೂಡಿದುದೂ। **ಮಹಭಿಃ**—ಮಹತ್ಸ್ವರೂಪವುಳ್ಳವೂ ಆದ । **ಸೋಮೈಃ**—ಸೋಮರಸಗಳಿಂದ । **ಅಭಿ ಪೃಣಧ್ವಂ**—ನಿಮ್ಮ ಉದರಗಳನ್ನು ತುಂಬಿಸಿಕೊಳ್ಳಿರಿ.

ಭಾವಾರ್ಥ

ತೇಜಸ್ಸಿಗೆ ನಿವಾಸಭೂತರಾದ ಎಲೈ ಋಭುಗಳೇ, ನಿಮ್ಮನ್ನು ಉತ್ತಮವಾಗಿ ವಹಿಸಬಲ್ಲದೂ, ಸ್ತುತಿಗೆ ಯೋಗ್ಯವಾದುದೂ, ಅಹಿಂಸಕವಾದುದೂ ಆದ ನಿಮ್ಮ ರಥವು ನಿಮ್ಮನ್ನು ಕರೆತರಲಿ ಉತ್ತಮವಾದ ಕೆನ್ನೆಯುಳ್ಳ ಎಲೈ ಋಭುಗಳೇ, ನಮ್ಮ ಯಜ್ಞದಲ್ಲಿ ನಿಮ್ಮ ಹರ್ಷನಿಮಿತ್ತವಾಗಿ ಕ್ಷೀರಾದ್ಯಾಶ್ರಯಣದ್ರವ್ಯಗಳಿಂದ ಕೂಡಿದವೂ, ಮಹತ್ಸ್ವರೂಪವುಳ್ಳವೂ ಆದ ಸೋಮರಸಗಳಿಂದ ನಿಮ್ಮ ಉದರಗಳನ್ನು ತುಂಬಿಸಿಕೊಳ್ಳಿರಿ

English Translation

Vajas, possessors of energy, let your capacious, commendable, and unobstructed chariot bring you (hither)· be satiated, handsome chinned, with the copious triply-combined libations (poured out) for your exhilaration at our sacrifices.

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಋಭುಗಳನ್ನು ಸ್ತುತಿಸಲಾಗಿದೆ ಋಭುಗಳ ವಿಷಯವನ್ನು ನಾವು ಹಿಂದೆಯೇ ವಿಸ್ತಾರವಾಗಿ ತಿಳಿಸಿದೇವೆ

ಸಂಹಿತಾಪಾಠಃ

ಯೂಯಂ ಹ ರತ್ನಂ ಮಘವತ್ಸು ಧತ್ಥ ಸ್ವರ್ದೃಶ ಋಭುಕ್ಷಣೋ ಅಮೃಕ್ತಂ।
ಸಂ ಯಜ್ಞೇಷು ಸ್ವಧಾವಂತಃ ಪಿಬಧ್ವಂ ವಿ ನೋ ರಾಧಾಂಸಿ ಮತಿಭಿರ್ದ-
ಯಧ್ವಂ ॥ ೨ ॥

ಪದಪಾಠಃ

ಯೂಯಂ । ಹ । ರತ್ನಂ । ಮಘವತ್ಽಸು । ಧತ್ಥ । ಸ್ವಃಽದೃಶಃ । ಋಭುಕ್ಷಣಃ । ಅಮೃಕ್ತಂ ।
ಸಂ । ಯಜ್ಞೇಷು । ಸ್ವಧಾಽವಂತಃ । ಪಿಬಧ್ವಂ । ವಿ । ನಃ । ರಾಧಾಂಸಿ । ಮತಿಽಭಿಃ । ದಯಧ್ವಂ ॥ ೨ ॥

ಸಾಯಣಭಾಷ್ಯಂ

ಹೇ ಋಭುಕ್ಷಣೋ ಹೇ ಋಭವಃ ಸ್ವರ್ದೃಶಃ ಸ್ವರ್ಗಂ ಪಶ್ಯಂತೋ ಯೂಯಂ ಹ ಯೂಯಮೇವ ಮಘವತ್ಸು ಹವಿರ್ಲಕ್ಷಣಾನ್ನವತ್ಸ್ವಸ್ಮಾಸು ನಿಮಿತ್ತೇಷ್ವಮೃಕ್ತಮಹಿಂಸಿತಂ । ಚೋರಾದಿಭಿರನಾಹೃತಮಿತ್ಯರ್ಥಃ ॥ ರತ್ನಂ ರಮಣೀಯಂ ಧತ್ಥ । ಧಾರಯಥ । ತದನಂತರಂ ಸ್ವಧಾವಂತೋ ಬಲವಂತಸ್ತೇ ಯೂಯಂ ಯಜ್ಞೇಷ್ವಸ್ಮದೀಯಯಜ್ಞೇಷು ಸಂ ಪಿಬಧ್ವಂ । ಸಮ್ಯಕ್ ಸೋಮಂ ಪಿಬತ । ಅಪಿ ಚ ಯೂಯಂ ಮತಿಭಿರ್ಧನಹೇತುಭಿರ್ನೋಽಸ್ಮಭ್ಯಂ ರಾಧಾಂಸಿ ಧನಾನಿ ವಿ ದಯಧ್ವಂ । ವಿಶೇಷೇಣ ದತ್ತ ॥

ಪ್ರತಿಪದಾರ್ಥ

ಋಭುಕ್ಷಣಃ—ಎಲೈ ಋಭುಗಳೇ, । ಸ್ವರ್ದೃಶಃ—ಸ್ವರ್ಗವನ್ನು ನೋಡತಕ್ಕ । ಯೂಯಂ ಹ—ನೀವು । ಮಘವತ್ಸು—ಹವಿಸ್ಸುಳ್ಳ ನಮಗಾಗಿ । ಅಮೃಕ್ತಂ—ಅಹಿಂಸಿತವಾದ । ರತ್ನಂ—ಧನವನ್ನು । ಧತ್ಥ—

ಕೊಡಿರಿ | **ಸ್ವಧಾವಂತಃ**—ಶಕ್ತಿಯುತರಾದ ನೀವು | **ಯಜ್ಞೇಷು**—ನಮ್ಮ ಯಜ್ಞಗಳಲ್ಲಿ | **ಸಂ ಪಿಬಧ್ವಂ**—ಪೂರ್ಣವಾಗಿ ಸೋಮಪಾನಮಾಡಿರಿ | **ಮತಿಭಿಃ**—ನಿಮ್ಮ ಪ್ರಜ್ಞೆಗಳಿಂದ | **ನಃ**—ನಮಗೆ | **ರಾಧಾಂಸಿ**—ಉತ್ತಮವಾದ ಧನಗಳನ್ನು | **ವಿ ದಯಧ್ವಂ**—ಅಧಿಕವಾಗಿ ಕೊಡಿರಿ

ಭಾವಾರ್ಥ

ಎಲೈ ಋಭುಗಳೇ, ಸ್ವರ್ಗವನ್ನು ನೋಡತಕ್ಕ ನೀವು ಹವಿಸ್ಸನ್ನು ಹೊಂದಿರುವ ನಮಗಾಗಿ ಅಹಿಂಸಿತವಾದ ಧನವನ್ನು ಕೊಡಿರಿ ಶಕ್ತಿಯುತರಾದ ನೀವು ನಮ್ಮ ಯಜ್ಞಗಳಲ್ಲಿ ಪೂರ್ಣವಾಗಿ ಸೋಮಪಾನಮಾಡಿರಿ ನಿಮ್ಮ ಪ್ರಜ್ಞೆಗಳಿಂದ ನಮಗೆ ಉತ್ತಮವಾದ ಧನವನ್ನು ಅಧಿಕವಾಗಿ ಕೊಡಿರಿ

English Translation

For you, Ribhukshins, beholders of heaven, preserve unmolested the precious (treasure) for us who are affluent (in sacrificial offerings) . do you, who are possessed of strength, drink fully at (our) solemnities, and with (favourable) minds bestow upon us riches

ಸಂಹಿತಾಪಾಠಃ

ಉಪೋಚಿಥ ಹಿ ಮಘವನ್ದೇಷ್ಣಂ ಮಹೋ ಅರ್ಭಸ್ಯ ವಸುನೋ ವಿಭಾಗೇ |
ಉಭಾ ತೇ ಪೂರ್ಣಾ ವಸುನಾ ಗಭಸ್ತೀ ನ ಸೂನೃತಾ ನಿ ಯಮತೇ ವಸವ್ಯಾ

ಪದಪಾಠಃ

ಉಪೋಚಿಥ | ಹಿ | ಮಘsವನ್ | ದೇಷ್ಣಂ | ಮಹಃ | ಅರ್ಭಸ್ಯ | ವಸುನಃ | ವಿsಭಾಗೇ |
ಉಭಾ | ತೇ | ಪೂರ್ಣಾ | ವಸುನಾ | ಗಭಸ್ತೀ ಇತಿ | ನ | ಸೂನೃತಾ | ನಿ | ಯಮತೇ | ವಸವ್ಯಾ ॥ ೩ ॥

ಸಾಯಣಭಾಷ್ಯಂ

ಉಪೋಚಿಥೇತ್ಯಾದ್ಯಾಃ ಪಂಚರ್ಚ ಇಂದ್ರದೇವತಾಕಾಃ | ಹೇ ಮಘವನ್ ಧನವನ್ನಿಂದ್ರ ತ್ವಂ ಮಹೋ ಮಹತೋಽರ್ಭಸ್ಯಾಲ್ಪಸ್ಯ ಚ ವಸುನೋ ಧನಸ್ಯ ವಿಭಾಗೇ ಪರಿಚರಣಾನುಕೂಲೇ ದಾನನಿಮಿತ್ತೇ ದೇಷ್ಣಂ ಧನಮುಪೋಚಿಥ ಹಿ | ಸೇವಸೇ ಖಲು ॥ ಉಚತಿಃ ಸೇವಾಕರ್ಮಾ ॥ ತಥಾ ತೇ ತ್ವದೀಯೌ ಉಭೌ ಗಭಸ್ತೀ ಬಾಹೂ ವಸುನಾ ಧನೇನ ಪೂರ್ಣಾ | ಸಂಪೂರ್ಣೌ ಭವತಃ | ತೇ ತ್ವದೀಯಾ ಸೂನೃತಾ ವಾಗ್ವಸವ್ಯಾ ವಸೂನಿ ಧನಾನಿ ನ ನಿ ಯಮತೇ | ನ ನಿಯಚ್ಛತಿ | ಯದ್ವಾ | ವಸವ್ಯಾ ವಸುಷು ಧನೇಷು ಸಾಧುಃ ಸೂನೃತಾ ವಾಗ್ಧನೇನ ಸಂಪೂರ್ಣೌ ತ್ವದೀಯೌ ಬಾಹೂ ನ ನಿಯಚ್ಛತಿ | ನಾಲ್ಪಂ ಪ್ರದಾಪಯತೀತ್ಯರ್ಥಃ ॥

ಪ್ರತಿಪದಾರ್ಥ

**ಮಘವನ್**—ಸಂಪದ್ಯುಕ್ತನಾದ ಎಲೈ ಇಂದ್ರನೇ, | (**ತ್ವಂ**—ನೀನು) | **ಮಹಃ**—ಮಹತ್ತಾದುದೂ | **ಅರ್ಭಸ್ಯ**—ಅಲ್ಪವಾದುದೂ ಆದ | **ವಸುನಃ**—ಧನದ | **ವಿಭಾಗೇ**—ಹಂಚಿಕೆಗಾಗಿ | **ದೇಷ್ಣಂ**—ದಾನಾರ್ಹವಾದ

ಧನವನ್ನು ! **ಉವೋಚಿಥ ಹಿ**—ಹೊಂದಿದ್ದೀಯೆ. | **ತೇ**—ನಿನ್ನ | **ಉಭಾ ಗಭಸ್ತೀ**—ಎರಡು ಬಾಹುಗಳೂ **ವಸುನಾ**—ಧನದಿಂದ | **ಪೂರ್ಣಾ**—ತುಂಬಿವೆ | **ಸೂನೃತಾ**—ಉತ್ತಮವಾದ ನಿನ್ನ ವಾಕ್ಕು | **ವಸವ್ಯಾ**—ಧನಗಳನ್ನು | **ನ ನಿಯಮತೇ**—ತಡೆಯುವುದಿಲ್ಲ.

ಭಾವಾರ್ಥ

ಸಂಪದ್ಯುಕ್ತನಾದ ಎಲೈ ಇಂದ್ರನೇ, ನೀನು ಮಹತ್ತಾದುದೂ, ಅಲ್ಪವಾದುದೂ ಆದ ಧನದ ಹಂಚಿಕೆಗಾಗಿ ದಾನಾರ್ಹವಾದ ಧನವನ್ನು ಹೊಂದಿದ್ದೀಯೆ ನಿನ್ನ ಎರಡು ಬಾಹುಗಳೂ ಧನದಿಂದ ತುಂಬಿವೆ ಉತ್ತಮವಾದ ನಿನ್ನ ವಾಕ್ಕು ಧನಗಳನ್ನು ತಡೆಯುವುದಿಲ್ಲ

English Translation

You Maghavan, have determined what is to be given in the apportionment of much or of little wealth, for both your hands are full of treasures and your sincere (promises) of riches do not restrain them.

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಮುಂದಿನ ನಾಲ್ಕು ಋಕ್ಕುಗಳಲ್ಲಿಯೂ ಇಂದ್ರನನ್ನು ಸ್ತುತಿಸಲಾಗಿದೆ

ಸಂಹಿತಾಪಾಠಃ

ತ್ವಮಿಂದ್ರ ಸ್ವಯಶಾ ಋಭುಕ್ಷಾ ವಾಜೋ ನ ಸಾಧುರಸ್ತಮೇಷ್ಯೃಕ್ವಾ ।
ವಯಂ ನು ತೇ ದಾಶ್ವಾಂಸಃ ಸ್ಯಾಮ ಬ್ರಹ್ಮ ಕೃಣ್ವಂತೋ ಹರಿವೋ ವಸಿಷ್ಠಾಃ ॥ ೪ ॥

ಪದಪಾಠಃ

ತ್ವಂ । ಇಂದ್ರ । ಸ್ವಯಶಾಃ । ಋಭುಕ್ಷಾಃ । ವಾಜಃ । ನ । ಸಾಧುಃ । ಅಸ್ತಂ । ಏಷಿ । ಋಕ್ವಾ ।
ವಯಂ । ನು । ತೇ । ದಾಶ್ವಾಂಸಃ । ಸ್ಯಾಮ । ಬ್ರಹ್ಮ । ಕೃಣ್ವಂತಃ । ಹರಿಽವಃ । ವಸಿಷ್ಠಾಃ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ಸ್ವಯಶಾ ಅಸಾಧಾರಣಕೀರ್ತಿರ್ಋಭುಕ್ಷಾ ಋಭುನಿವಾಸಕ ಋಭೂಣಾಮಿಶ್ವರೋ ವಾ ತ್ವಂ ಸಾಧುಃ ಸಾಧಕೋ ವಾಜೋ ನಾನ್ನಮಿವ ಋಕ್ವಾ ಋಕ್ವಣಃ ಸ್ತೋತುರ್ಮಮಾಸ್ತಂ ಗೃಹಮೇಷಿ । ಪ್ರಾಪ್ನುಹಿ । ನ್ವದ್ಯ ವಸಿಷ್ಠಾ ಏತತ್ಸಂಜ್ಞಕಾ ಋಷಯೋ ವಯಂ ಹೇ ಹರಿವಃ ಸ್ವಕೀಯಾಶ್ವೋಪೇತೇಂದ್ರ ತೇ ತ್ವದರ್ಥಂ ದಾಶ್ವಾಂಸೋ ಹವಿರ್ಲಕ್ಷಣಾನ್ನಂ ದತ್ತವಂತೋ ಬ್ರಹ್ಮ ಸ್ತೋತ್ರಂ ಕೃಣ್ವಂತಃ ಕುರ್ವಂತಃ ಸಂತಃ ಸ್ಯಾಮ । ಭವೇಮ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ, | **ಸ್ವಯಶಾಃ**—ಅಸಾಧಾರಣವಾದ ಕೀರ್ತಿಯುಳ್ಳವನೂ | **ಋಭುಕ್ಷಾಃ**—ತೇಜಸ್ಸಿಗೆ ನಿವಾಸಕನೂ ಆದ | **ತ್ವಂ**—ನೀನು | **ಸಾಧುಃ**—ಸರ್ವಕಾರ್ಯಸಾಧಕನಾಗಿ | **ವಾಜಃ ನ**—ತೃಪ್ತಿದಾಯಕವಾದ ಅನ್ನದಂತೆ | **ಋಕ್ವಾಃ**—ಸ್ತುತಿಕರ್ತನಾದ ನನ್ನ | **ಅಸ್ತಂ**—ಗೃಹಕ್ಕೆ | **ಏಹಿ**—ದಯಮಾಡು | **ಹರಿವಃ**—ಅಶ್ವಯುಕ್ತನಾದ ಎಲೈ ಇಂದ್ರನೇ | **ನು**—ಈಗ | **ವಸಿಷ್ಠಾಃ**—ವಸಿಷ್ಠಸಂಜ್ಞಕರಾದ | **ವಯಂ**—ನಾವು | **ತೇ**—ನಿನ್ನನ್ನುದ್ದೇಶಿಸಿ | **ದಾಶ್ವಾಂಸಃ**—ಹವಿಸ್ಸನ್ನರ್ಪಿಸುವವರಾಗಿ | **ಬ್ರಹ್ಮ**—ಸ್ತೋತ್ರವನ್ನು | **ಕೃಣ್ವಂತಃ**—ನಿರ್ಮಿಸುತ್ತಾ | **ಸ್ಯಾಮ**—ಇರುವಂತಾಗಲಿ

ಭಾವಾರ್ಥ

ಎಲೈ ಇಂದ್ರನೇ, ಅಸಾಧಾರಣವಾದ ಕೀರ್ತಿಯುಳ್ಳವನೂ ತೇಜಸ್ಸಿಗೆ ನಿವಾಸಕನೂ ಆದ ನೀನು ಸರ್ವಕಾರ್ಯಸಾಧಕನಾಗಿ ತೃಪ್ತಿದಾಯಕವಾದ ಅನ್ನದಂತೆ ಸ್ತುತಿಕರ್ತನಾದ ನನ್ನ ಗೃಹಕ್ಕೆ ದಯಮಾಡು. ಅಶ್ವಯುಕ್ತನಾದ ಎಲೈ ಇಂದ್ರನೇ, ವಸಿಷ್ಠಸಂಜ್ಞಕರಾದ ನಾವು ಈಗ ನಿನ್ನನ್ನುದ್ದೇಶಿಸಿ ಹವಿಸ್ಸನ್ನರ್ಪಿಸುವವರಾಗಿ ಸ್ತುತಿಯನ್ನು ನಿರ್ಮಿಸುತ್ತಾ ಇರುವಂತಾಗಲಿ

English Translation

Do you, Indra, who are Ribhukshin, and of especial renown, who, like food, are the fulfiller (of wants), come to the dwelling of the worshipper; lord of bay horses, may we, Vashisthas, be today the donors (of the offerings) to you, the celebrators of your praise

ಸಂಹಿತಾಪಾಠ

ಸನಿತಾಸಿ ಪ್ರವತೋ ದಾಶುಷೇ ಚಿದ್ಯಾಭಿರ್ವಿವೇಷೋ ಹರ್ಯಶ್ವ ಧೀಭಿಃ ।
ವವನ್ಮಾ ನು ತೇ ಯುಜ್ಯಾಭಿರೂತೀ ಕದಾ ನ ಇಂದ್ರ ರಾಯ ಆ ದಶಸ್ಯೇಃ ॥

ಪದಪಾಠಃ

ಸನಿತಾ । ಅಸಿ । ಪ್ರಽವತಃ । ದಾಶುಷೇ । ಚಿತ್ । ಯಾಭಿಃ । ವಿವೇಷಃ । ಹರಿಽಅಶ್ವ । ಧೀಭಿಃ ।
ವವನ್ಮ । ನು । ತೇ । ಯುಜ್ಯಾಭಿಃ । ಊತೀ । ಕದಾ । ನಃ । ಇಂದ್ರ । ರಾಯಃ । ಆ । ದಶಸ್ಯೇಃ ॥ ೫ ॥

ಸಾಯಣಭಾಷ್ಯಂ

ಹೇ ಹರ್ಯಶ್ವ ಹರಿನಾಮಕಾಶ್ವೇಂದ್ರ ತ್ವಂ ಯಾಭಿರ್ಧೀಭಿರಸ್ಮದೀಯಾಭಿಃ ಸ್ತುತಿಭಿರ್ವಿವೇಷಃ ವ್ಯಾಪ್ನೋಷಿ ಸ ತ್ವಂ ದಾಶುಷೇ ಚಿದ್ಧವಿರ್ದತ್ತವತೇ ಯಜಮಾನಾಯಾಪಿ ಪ್ರವತಃ ಪ್ರವಣಸ್ಯ ಧನಸ್ಯ ಸನಿತಾಸಿ । ದಾತಾ ಭವಸಿ । ಅಪಿ ಚ ಹೇ ಇಂದ್ರ ತ್ವಂ ನೋಽಸ್ಮಭ್ಯಂ ಕದಾ ಕಸ್ಮಿನ್ಕಾಲೇ ರಾಯೋ ಧನಾನ್ಯಾ ದಶಸ್ಯೇಃ । ಪ್ರಯಚ್ಛೇಃ । ಸ್ವದ್ಯ ತೇ ತವ ಯುಜ್ಯಾಭಿರ್ಯೋಗ್ಯಾಭಿರೂತ್ಯೋತಿಭೀ ರಕ್ಷಾಭಿರ್ವವನ್ಮ । ತ್ವಾಂ ಸಂಭಜೇಮ ॥

ಪ್ರತಿಪದಾರ್ಥ

**ಹರ್ಯಶ್ವ**—ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, | **ಯಾಭಿಃ**—ಯಾವ | **ಧೀಭಿಃ**—ನಮ್ಮ ಸ್ತುತಿಗಳಿಂದ | **ವಿವೇಷಃ**—ವ್ಯಾಪೃತನಾಗುವೆಯೋ ಅಂತಹ ನೀನು | **ದಾಶುಷೇ ಚಿತ್**—ಹವಿರ್ದಾತನಾದ ಯಜಮಾನನಿಗೆ | **ಪ್ರವತಃ**—ಪ್ರಭೂತವಾದ ಧನದ | **ಸನಿತಾ ಅಸಿ**—ದಾತನಾಗಿದ್ದೀಯೆ. | **ಇಂದ್ರ**—ಎಲೈ ಇಂದ್ರನೇ, | **ನಃ**—ನಮಗೆ | **ಕದಾ**—ಯಾವ ಕಾಲದಲ್ಲಿ | **ರಾಯಃ**—ಧನಗಳನ್ನು | **ಆ ದಶಸ್ಯೇಃ**—ಕೊಡುವೆ | **ನು**—ಈಗ | **ತೇ**—ನಿನ್ನ | **ಯುಜ್ಯಾಭಿಃ**—ಉಚಿತವಾದ | **ಊತೀ**—ರಕ್ಷಣೆಗಳೊಡನೆ ಕೂಡಿ | **ವವನ್ಮ**—ನಿನ್ನನ್ನು ಪೂಜಿಸುತ್ತೇವೆ.

ಭಾವಾರ್ಥ

ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, ಯಾವ ನಮ್ಮ ಸ್ತುತಿಗಳಿಂದ ನೀನು ಹವಿರ್ದಾತನಾದ ಯಜಮಾನನಿಗೆ ಪ್ರಭೂತವಾದ ಧನಪ್ರದನಾಗಿದ್ದೀಯೆ ಎಲೈ ಇಂದ್ರನೇ, ನಮಗೆ ನೀನು ಯಾವ ಕಾಲದಲ್ಲಿ ಧನವನ್ನು ಕೊಡುವೆ ಈಗ ನಿನ್ನ ಉಚಿತವಾದ ರಕ್ಷಣೆಗಳೊಡನೆ ಕೂಡಿ ನಿನ್ನನ್ನು ಪೂಜಿಸುತ್ತೇವೆ.

English Translation

Lord of bay horses, you are the giver of the descending (wealth) to the donor (of the oblation), by whose sacred rites you are magnified when do you bestow upon us riches when may we be secure by your appropriate protections

ಸಂಹಿತಾಪಾಠಃ

ವಾಸಯಸೀವ ವೇಧಸಸ್ತ್ವಂ ನಃ ಕದಾ ನ ಇಂದ್ರ ವಚಸೋ ಬುಬೋಧಃ ।
ಅಸ್ತಂ ತಾತ್ಯಾ ಧಿಯಾ ರಯಿಂ ಸುವೀರಂ ಪೃಕ್ಷೋ ನೋ ಅರ್ವಾ ನ್ಯುಹೀತ ವಾಜೀ ॥ ೬ ॥

ಪದಪಾಠಃ

ವಾಸಯಸಿऽಇವ । ವೇಧಸಃ । ತ್ವಂ । ನಃ । ಕದಾ । ನಃ । ಇಂದ್ರ । ವಚಸಃ । ಬುಬೋಧಃ ।
ಅಸ್ತಂ । ತಾತ್ಯಾ । ಧಿಯಾ । ರಯಿಂ । ಸುಽವೀರಂ । ಪೃಕ್ಷಃ । ನಃ । ಅರ್ವಾ । ನಿ । ಉಹೀತ । ವಾಜೀ ॥

ಸಾಯಣಭಾಷ್ಯಂ

ಹೇ ಇಂದ್ರ ಕದಾ ಕಸ್ಮಿನ್ಕಾಲೇ ನೋऽಸ್ಮದೀಯಂ ವಚಸೋ ವಚೋರೂಪಂ ಸ್ತೋತ್ರಂ ಬುಬೋಧಃ । ಅವಗಚ್ಛೇಃ । ತಥಾ ಸ ತ್ವಂ ವೇಧಸಃ ಸ್ತೋತ್ೄನಸ್ಮಾನ್ವಾಸಯಸೀವ । ಇವೇದಾನೀಮರ್ಥೇ । ಇದಾನೀಂ ಸ್ವಕೀಯೇ ಸ್ಥಾನೇऽವಸ್ಥಾಪಯಸಿ । ಕಿಂಚ ವಾಜೀ ಬಲವಾನರ್ವಾ ವೇಗವಾಂಸ್ತ್ವದೀಯೋऽಶ್ವಸ್ತಾತ್ಯಾ ॥ ತನೋತೇರಿದಂ ರೂಪಂ ॥ ಸಂತತಯಾ ಧಿಯಾಸ್ಮತ್ಪ್ರೇರಿತಯಾ ಸ್ತುತ್ಯಾ ಹೇತುಭೂತ

ಯಾ ಸುವೀರಂ ಶೋಭನಪುತ್ರೋಪೇತಂ ರಯಿಂ ತ್ವದೀಯಂ ಧನಂ ಪೃಕ್ಷೋಽನ್ನಂ ಚ ನೋಽಸ್ಮದೀಯಮಸ್ತಂ ಗೃಹಂ ನ್ಯುಹೀತ । ನಿವಹೇತ್ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ, । **ತ್ವಂ**—ನೀನು । **ಕದಾ**—ಯಾವಾಗ । **ನಃ**—ನಮ್ಮ । **ವಚಸಃ**—ಸ್ತೋತ್ರವನ್ನು । **ಬುಬೋಧಃ**—ತಿಳಿಯುವೆ । **ವೇಧಸಃ**—ಸ್ತುತಿಕರ್ತರಾದ ನಮ್ಮನ್ನು । **ವಾಸಯೆಸೀವ**—ನಮ್ಮ ಸ್ಥಾನದಲ್ಲಿ ಸ್ಥಿರವಾಗಿ ವಾಸಿಸುವಂತೆ ಯಾವಾಗ ಮಾಡುವೆ । **ವಾಜೀ**—ಶಕ್ತಿಯುತವಾದ । **ಅರ್ವಾ**—ನಿನ್ನ ಅಶ್ವವು । **ತಾತ್ಯಾ**—ಸರ್ವದಾ । **ಧಿಯಾ**—ನಮ್ಮ ಸ್ತುತಿಗೆ ಪ್ರತಿಫಲವಾಗಿ । **ಸುವೀರಂ**—ಉತ್ತಮವಾದ ಪುತ್ರಾದಿಗಳಿಂದ ಕೂಡಿದ । **ರಯಿಂ**—ನಿನ್ನ ಧನವನ್ನೂ । **ಪೃಕ್ಷಃ**—ಅನ್ನವನ್ನೂ । **ನಃ**—ನಮ್ಮ । **ಅಸ್ತಂ**—ಗೃಹಕ್ಕೆ । **ನಿ ಉಹೀತ**—ತೆಗೆದುಕೊಂಡು ಬರಲಿ

ಭಾವಾರ್ಥ

ಎಲೈ ಇಂದ್ರನೇ, ನೀನು ಯಾವಾಗ ನಮ್ಮ ಸ್ತೋತ್ರವನ್ನು ತಿಳಿಯುವೆ ? ಸ್ತುತಿಕರ್ತರಾದ ನಮ್ಮನ್ನು ನಮ್ಮ ಸ್ಥಾನದಲ್ಲಿ ಸ್ಥಿರವಾಗಿ ವಾಸಿಸುವಂತೆ ಯಾವಾಗ ಮಾಡುವೆ? ಶಕ್ತಿಯುತವಾದ ನಿನ್ನ ಅಶ್ವವು ನಮ್ಮ ಸ್ತುತಿಗೆ ಪ್ರತಿಫಲವಾಗಿ ಯಾವಾಗಲೂ ಉತ್ತಮವಾದ ಪುತ್ರಾದಿಗಳಿಂದ ಕೂಡಿದ ನಿನ್ನ ಧನವನ್ನೂ ಅನ್ನವನ್ನೂ ನಮ್ಮ ಗೃಹಕ್ಕೆ ವಹಿಸಿಕೊಂಡು ಬರಲಿ

English Translation

When, Indra, will you appropriate our praise at present you establish us (your) adorers in our dwelling let your swift horse, (influenced) by our protracted solemnity, convey to our abode riches, male offspring, and food

ಸಂಹಿತಾಪಾಠಃ

ಅಭಿ ಯಂ ದೇವೀ ನಿರ್ಋತಿಶ್ಚಿದೀಶೇ ನಕ್ಷಂತ ಇಂದ್ರಂ ಶರದಃ ಸುಪೃಕ್ಷಃ ।
ಉಪ ತ್ರಿಬಂಧುರ್ಜರದಷ್ಟಿಮೇತ್ಯಸ್ವವೇಶಂ ಯಂ ಕೃಣವಂತ ಮರ್ತಾಃ ॥೭॥

ಪದಪಾಠಃ

ಅಭಿ । ಯಂ । ದೇವೀ । ನಿಃಽಋತಿಃ । ಚಿತ್ । ಈಶೇ । ನಕ್ಷಂತೇ । ಇಂದ್ರಂ । ಶರದಃ । ಸುಽಪೃಕ್ಷಃ ।
ಉಪ । ತ್ರಿಽಬಂಧುಃ । ಜರತ್ಽಅಷ್ಟಿಂ । ಏತಿ । ಅಸ್ವಽವೇಶಂ । ಯಂ । ಕೃಣವಂತ । ಮರ್ತಾಃ ॥ ೭ ॥

ಸಾಯಣಭಾಷ್ಯಂ

ದೇವೀ ದ್ಯೋತಮಾನಾ ನಿರ್ಋತಿಶ್ಚಿದ್ಭೂಮಿರಪೀಶೇ ॥ ಕೃತ್ಯಾರ್ಥೇ ಕೇನ್ಪ್ರತ್ಯಯಃ ॥ ಈಶಿತವ್ಯಾಸ್ವಭೂತಾ ಸತೀ ಯಮಿಂದ್ರಮಭಿ ನಕ್ಷತೇ ವ್ಯಾಪ್ನೋತಿ । ಸುಪೃಕ್ಷಃ ಶೋಭನಾನ್ನೈರುಪೇತಾಃ ಶರದಃ ಸಂವತ್ಸರಾಶ್ಚ ಯಮಿಂದ್ರಂ ನಕ್ಷಂತೇ ವ್ಯಾಪ್ನುವಂತಿ । ಮರ್ತಾ ಮರಣಧರ್ಮಾಣಃ ಸ್ತೋತಾರೋ

ವಯಂ ಯಮಿಂದ್ರಮಸ್ವವೇಶಂ ಸ್ವಕೀಯೋ ಸ್ಥಾನೇऽನುಪವಿಶಂತಂ ಕೃಣವಂತ ಕುರ್ವಂತಿ । ತ್ರಿಬಂಧುಸ್ತ್ರಯಾಣಾಂ ಲೋಕಾನಾಂ ಬಂಧಕೋ ವಿಧಾರಕಃ ಸ ಇಂದ್ರೋ ಜರದಷ್ಟಿಂ ಜರಜ್ಜೀರ್ಣಮಷ್ಟಿರಶನಂ ಯಸ್ಯ ಬಲಸ್ಯ ಹೇತುಭೂತಂ ತದ್ಬಲಮುಪೈತಿ । ಉಪಗಚ್ಛತಿ ॥

ಪ್ರತಿಪದಾರ್ಥ

**ದೇವೀ**— ದೇವತಾತ್ಮಳಾದ । **ನಿರ್ಋತಿಶ್ಚಿತ್**—ಭೂದೇವಿಯೂ ಸಹ । **ಈಶೇ**—ಸ್ವತಂತ್ರಳಾಗಿದ್ದರೂ । **ಯಂ ಇಂದ್ರಂ**—ಯಾವ ಇಂದ್ರನನ್ನು । **ಅಭಿ (ನಕ್ಷತೇ)**—ಆಶ್ರಯಿಸುವಳೋ । **ಸುಪೃಕ್ಷಃ**—ಉತ್ತಮವಾದ ಅನ್ನಾಪೇಕ್ಷಗಳಾದ । **ಶರದಃ** — ಸಂವತ್ಸರಗಳೂ । **ನಕ್ಷಂತೇ** — ಯಾವ ಇಂದ್ರನನ್ನು ಆಶ್ರಯಿಸುವವೋ । **ಮರ್ತಾಃ**—ಮಾನವರೂ ಸಹ । **ಯಂ**—ಯಾವ ಇಂದ್ರನನ್ನು । **ಅಸ್ವವೇಶಂ**—ತನ್ನ ದ್ಯುಲೋಕದಲ್ಲಿ ಸಿಲ್ಲದೇ ತನ್ನ ಯಜ್ಞಕ್ಕೆ ಬರುವಂತೆ । **ಕೃಣವಂತ**—ಮಾಡುವರೋ ಅಂತಹ । **ತ್ರಿಬಂಧುಃ**—ಮೂರು ಲೋಕಕ್ಕೂ ಆಪ್ತನಾದ ಇಂದ್ರನು । **ಜರದಷ್ಟಿಂ**—ಅತಿಪ್ರಭೂತವಾದ ಬಲವನ್ನು । **ಉಪೇತಿ**—ಹೊಂದುತ್ತಾನೆ.

ಭಾವಾರ್ಥ

ದೇವತಾತ್ಮಳಾದ ಭೂದೇವಿಯೂ ಸಹ ಸ್ವತಂತ್ರಳಾಗಿದ್ದರೂ ಯಾವ ಇಂದ್ರನನ್ನು ಆಶ್ರಯಿಸುವಳೋ, ಉತ್ತಮವಾದ ಅನ್ನಯುಕ್ತಗಳಾದ ಸಂವತ್ಸರಗಳೂ ಯಾವ ಇಂದ್ರನನ್ನು ಆಶ್ರಯಿಸುವವೋ, ಮಾನವರೂ ಸಹ ಯಾವ ಇಂದ್ರನನ್ನು ತನ್ನ ದ್ಯುಲೋಕದಲ್ಲಿ ಸಿಲ್ಲದೇ ಯಜ್ಞಕ್ಕೆ ಬರುವಂತೆ ಮಾಡುವರೋ ಅಂತಹ ಮೂರು ಲೋಕಕ್ಕೂ ಆಪ್ತನಾದ ಇಂದ್ರನು ಅತಿಪ್ರಭೂತವಾದ ಬಲವನ್ನು ಹೊಂದುತ್ತಾನೆ (ಬಲಯುತನಾಗಿರುತ್ತಾನೆ )

English Translation

Indra, the upholder of the three regions, whom the divine Nirriti acknowledges as ruler, whom abundant years pass over, whom mortals detain from his own abode, approaches to (recruit) his decaying strength.

ಸಂಹಿತಾಪಾಠಃ

ಆ ನೋ ರಾಧಾಂಸಿ ಸವಿತಃ ಸ್ತವಧ್ಯಾ ಆ ರಾಯೋ ಯಂತು ಪರ್ವತಸ್ಯ ರಾತೌ ।
ಸದಾ ನೋ ದಿವ್ಯಃ ಪಾಯುಃ ಸಿಷಕ್ತು ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೮ ॥

ಪದಪಾಠಃ

ಆ । ನಃ । ರಾಧಾಂಸಿ । ಸವಿತರಿತಿ । ಸ್ತವಧ್ಯೈ । ಆ । ರಾಯಃ । ಯಂತು । ಪರ್ವತಸ್ಯ । ರಾತೌ ।
ಸದಾ । ನಃ । ದಿವ್ಯಃ । ಪಾಯುಃ । ಸಿಸಕ್ತು । ಯೂಯಂ । ಪಾತ । ಸ್ವಸ್ತಿಭಿಃ । ಸದಾ । ನಃ ॥ ೮ ॥

ಸಾಯಣಭಾಷ್ಯಂ

ಹೇ ಸವಿತಃ ಸರ್ವಸ್ಯ ಪ್ರೇರಕ ದೇವ ತ್ವತ್ಸಕಾಶಾತ್ತ್ಸವಧ್ಯ್ವೈ ಸ್ತೋತುಂ ಯೋಗ್ಯಾನಿ ರಾಧಾಂಸಿ ಧನಾನಿ ನೋಽಸ್ಮಾನಾ ಯಂತು । ಆಗಚ್ಛಂತು । ಪರ್ವತಸ್ಯ । ಪರ್ವತ ಇತಿ ಕಶ್ಚಿದಿಂದ್ರಸ್ಯ ಸಖಾ । ಏತತ್ಸಂಜ್ಞಕಸ್ಯ ದೇವಸ್ಯ ರಾತೌ ದಾನೇ ಸತಿ ರಾಯೋ ಧನಾನ್ಯಸ್ಮಾನಾ ಯಂತು । ಪಾಯುಃ ಸರ್ವಸ್ಯ ಪಾಲಕೋ ದಿವ್ಯೋ ದಿವಿ ಭವಃ ಸ ಇಂದ್ರಃ ಸದಾ ಸರ್ವದಾ ನೋಽಸ್ಮಾನ್ ಸಿಷಕ್ತು । ರಕ್ಷಕತ್ವೇನ ಸೇವತಾಂ। ಅಸ್ಮಿನ್ಸೂಕ್ತೇ ಯೇ ಪ್ರತಿಪಾದಿತಾ ದೇವಾಸ್ತೇ ಸರ್ವೇ ಯೂಯಂ ನೋಽಸ್ಮಾನ್ ಸ್ವಸ್ತಿಭಿಃ ಕಲ್ಯಾಣೈಃ ಸದಾ ಪಾತ । ಪಾಲಯತ ॥

ಪ್ರತಿಪದಾರ್ಥ

ಸವಿತಃ—ಎಲೈ ಸವಿತೃವೇ, । ಸ್ತವಧ್ಯೈ—ಸ್ತುತಿಗೆ ಯೋಗ್ಯವಾದ । ರಾಧಾಂಸಿ—ನಿನ್ನ ಸಂಪತ್ತುಗಳು । ನಃ—ನಮ್ಮಲ್ಲಿಗೆ । ಆ ಯಂತು—ಬರಲಿ । ಪರ್ವತಸ್ಯ—ಪರ್ವತದೇವನ । ರಾತೌ—ಉದಾರವಿತ್ತವಾಗಿ । ರಾಯಃ—ಅವನ ಧನಗಳು । ಆ—ನಮ್ಮಲ್ಲಿಗೆ ಬಂದು ಸೇರಲಿ । ಪಾಯುಃ—ಜಗತ್ಪಾಲಕನೂ । ದಿವ್ಯಃ—ದ್ಯುಲೋಕಸ್ಥನೂ ಆದ ಇಂದ್ರನು । ಸದಾ—ಯಾವಾಗಲೂ । ನಃ—ನಮ್ಮನ್ನು । ಸಿಷಕ್ತು—ರಕ್ಷಣೆಗಳೊಡನೆ ಸೇವಿಸಲಿ (ಎಲೈ ದೇವತೆಗಳೇ) । ಯೂಯಂ—ನೀವು । ನಃ—ನಮ್ಮನ್ನು । ಸ್ವಸ್ತಿಭಿಃ—ಕಲ್ಯಾಣಗಳಿಂದ । ಸದಾ—ಯಾವಾಗಲೂ । ಪಾತ—ರಕ್ಷಿಸಿರಿ

ಭಾವಾರ್ಥ

ಎಲೈ ಸವಿತೃವೇ, ಸ್ತುತಿಗೆ ಯೋಗ್ಯವಾದ ನಿನ್ನ ಸಂಪತ್ತುಗಳು ನಮ್ಮಲ್ಲಿಗೆ ಬರಲಿ ಉದಾರಿಯಾದ ಪರ್ವತದೇವನ ಸಂಪತ್ತುಗಳೂ ನಮ್ಮನ್ನು ಬಂದು ಸೇರಲಿ ಜಗತ್ಪಾಲಕನೂ, ದ್ಯುಲೋಕಸ್ಥನೂ ಆದ ಇಂದ್ರನು ಯಾವಾಗಲೂ ನಮ್ಮನ್ನು ರಕ್ಷಣೆಗಳೊಡನೆ ಬಂದು ಸೇವಿಸಲಿ ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣದಾನಗಳಿಂದ ರಕ್ಷಿಸಿರಿ

English Translation

May riches worthy of laudation come, Savitri to us riches that are in the bestowal of Parvata may the heavenly protector (of all) ever preserve us and do you, (universal gods), ever cherish us with blessings.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಸವಿತೃ, ಇಂದ್ರ ಮತ್ತು ಇಂದ್ರನ ಸ್ನೇಹಿತನೆಂದು ಹೇಳಲ್ಪಡುವ ಪರ್ವತ ಎಂಬ ದೇವತೆಯ ಸ್ತುತಿಗಳಿವೆ

## ಮೂವತ್ತೆಂಟನೆಯ ಸೂಕ್ತವು

ಉದು ಷ್ಯ ದೇವ ಇತ್ಯಷ್ಟರ್ಚಂ ಪಂಚಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ಸವಿತೃದೇವತಾಕಂ । ಸಪ್ತಮ್ಯಷ್ಟಮ್ಯೌ ವಾಜಿದೇವತಾಕೇ । ಭಗಮುಗ್ರೋಽವಸ ಇತ್ಯರ್ಧರ್ಚೋ ಭಗದೇವತ್ಯಃ ಸಾವಿತ್ರೋ ವಾ । ತಥಾ ಚಾನುಕ್ರಮಣಿಕಾ । ಉದು ಷ್ಯ ಸಾವಿತ್ರಮಂತ್ಯೇ ವಾಜಿನೌ ಭಗಮಿತಿ ಭಾಗೋ ವಾರ್ಧರ್ಚ ಇತಿ ॥ ಗತಃ ಸೂಕ್ತವಿನಿಯೋಗಃ ॥

ಅನುವಾದವು—ಉದು ಷ್ಯ ದೇವಃ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಸವಿತೃವು ದೇವತೆಯು,

ತ್ರಿಷ್ಟುಪ್ಛಂದಸ್ಸು. ಆದರೆ ಈ ಸೂಕ್ತದ ಏಳು ಮತ್ತು ಎಂಟನೆಯ ಋಕ್ಕುಗಳು ವಾಜಿದೇವತಾಕವು. **ಭಗವಮು-ಗ್ರೋಽವಸೇ** ಎಂಬ ಆರನೆಯ ಋಕ್ಕಿನ ಉತ್ತರಾರ್ಧಕ್ಕೆ ಭಗ ಅಥವಾ ಸವಿತೃವು ದೇವತೆಯು ಅನುಕ್ರಮಣಿಕೆಯಲ್ಲಿ **ಉದು ಷ್ಯ ಸಾವಿತ್ರಮಂತ್ಯೇ ವಾಜಿನ್ಯೌ ಭಗಮಿತಿ ಭಾಗೋಽರ್ಧರ್ಚಃ** ಎಂದು ಹೇಳಿರುವುದು ವಿನಿ**ಯೋಗವನ್ನು** ಹಿಂದೆಯೇ ಹೇಳಲಾಗಿದೆ

## ಸೂಕ್ತ—೩೮

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೩೮ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿಃ—ವಸಿಷ್ಠಃ ॥
ದೇವತಾ—೧-೫, ೬ ರಲ್ಲಿ ಪೂರ್ವಾರ್ಧ ಸವಿತಾ । ೬ ರಲ್ಲಿ ಉತ್ತರಾರ್ಧ ಸವಿತಾ ಭಗೋ ವಾ । ೭, ೮ ವಾಜಿನಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಉದು ಷ್ಯ ದೇವಃ ಸವಿತಾ ಯಯಾಮ ಹಿರಣ್ಯಯೀಮಮತಿಂ ಯಾಮಶಿ-
ಶ್ರೇತ್ ।
ನೂನಂ ಭಗೋ ಹವ್ಯೋ ಮಾನುಷೇಭಿರ್ವಿ ಯೋ ರತ್ನಾ ಪುರೂವಸುರ್ದ-
ಧಾತಿ ॥ ೧ ॥

ಪದಪಾಠಃ

**ಉತ್** । ಊಂ ಇತಿ । ಸ್ಯಃ । ದೇವಃ । ಸವಿತಾ । ಯಯಾಮ । ಹಿರಣ್ಯಯೀಂ । ಅಮತಿಂ । ಯಾಂ ।
ಅಶಿಶ್ರೇತ್ ।
ನೂನಂ । ಭಗಃ । ಹವ್ಯಃ । ಮಾನುಷೇಭಿಃ । ವಿ । ಯಃ । ರತ್ನಾ । ಪುರುಽವಸುಃ । ದಧಾತಿ ॥ ೧ ॥

ಸಾಯಣಭಾಷ್ಯಂ

ಸವಿತಾ ಸರ್ವಸ್ಯ ಪ್ರೇರಕಃ ಸ್ಯ ಸ ದೇವೋ ಹಿರಣ್ಮಯೀಂ ಸುವರ್ಣಮಯೀಂ ಯಾಮಮತಿಂ । ರೂಪೇಣಾಪ್ಯೈತೇತ್ । ರೂಪಂ । ಪ್ರಭಾಮಿತ್ಯರ್ಥಃ । ಅಶಿಶ್ರೇತ್ ಆಶ್ರಯತಿ ತಾಮಮತಿಮುದ್ಯಯಾಮ । ಉದ್ಯಚ್ಛತಿ । ಉದ್ಗಮಯತಿ । ಉ ಇತಿ ಪಾದಪೂರಣಃ । ನೂನಮದ್ಯ ಭಗೋ ಭಜನೀಯೋ ಯಃ ಸ-ವಿತಾ ಮಾನುಷೇಭಿರ್ಮನುಷ್ಯೈಃ ಸ್ತೋತೃಭಿರ್ಹವ್ಯೋ ಹವನೀಯಃ ಸ್ತೋತವ್ಯೋ ಭವತಿ । ಪುರೂವಸು-ರ್ಬಹುಧನೋ ಯೋ ದೇವಃ ಸ್ತೋತೃಭ್ಯೋ ರತ್ನಾ ರತ್ನಾನಿ ರಮಣೀಯಾನಿ ಧನಾನಿ ವಿ ದಧಾತಿ ಕ-ರೋತಿ । ಸ ಸವಿತಾ ದೇವಸ್ತಾಮಮತಿಮುದ್ಯಯಾಮೇತಿ ಪೂರ್ವೇಣ ಸಂಬಂಧಃ ॥

ಪ್ರತಿಪದಾರ್ಥ

**ನೂನಂ**—ಈಗ । **ಭಗಃ**—ಪೂಜ್ಯನಾದವನೂ । **ಮಾನುಷೇಭಿಃ**—ಮಾನವರಿಂದ । **ಹವ್ಯಃ**—ಸ್ತುತಿಸಲ್ಪಡುವವನೂ । **ಪುರೂವಸುಃ**—ಅತ್ಯಧಿಕವಾದ ಧನವುಳ್ಳವನೂ ಆದ । **ಯಃ**—ಯಾವ ಸವಿತೃದೇವನು । **ರತ್ನಾ**—

ರಮಣೀಯಗಳಾದ ಧನಗಳನ್ನು । **ವಿ ದಧಾತಿ**—ಸ್ತೋತೃಗಳಿಗೆ ಕೊಡುವನೋ । **ಸ್ಯಃ**—ಅಂತಹ ಪ್ರಸಿದ್ಧನೂ । **ದೇವಃ**—ದೇವತಾತ್ಮನೂ ಆದ । **ಸವಿತಾ**—ಸವಿತೃದೇವನು । **ಹಿರಣ್ಮಯೀಂ**—ಸುವರ್ಣಮಯವಾದ । **ಯಾಂ ಅಮತಿಂ**—ಯಾವ ಪ್ರಭಾಯುತವಾದ ರೂಪವನ್ನು । **ಅಶ್ರೇತ್**—ಹೊಂದಿರುವನೋ ಅದನ್ನು । **ಉಧ್ಯಯಾವು**—ಪ್ರಕಾಶಪಡಿಸುತ್ತಾ ಹರಡುತ್ತಾನೆ

ಭಾವಾರ್ಥ

ಪೂಜ್ಯನೂ, ಮಾನವರಿಂದ ಸ್ತುತಿಸಲ್ಪಡುವವನೂ, ಅತ್ಯಧಿಕವಾದ ಧನವುಳ್ಳವನೂ ಆದ ಯಾವ ಸವಿತೃದೇವನು ರಮಣೀಯಗಳಾದ ಧನಗಳನ್ನು ಸ್ತೋತ್ರಗಳಿಗೆ ಕೊಡುವನೋ ಅಂತಹ ಪ್ರಸಿದ್ಧನೂ ದೇವತಾತ್ಮನೂ ಆದ ಸವಿತೃವು ಸುವರ್ಣಮಯವೂ, ಪ್ರಭಾಯುತವೂ ತನ್ನ ತನ್ನ ರೂಪವನ್ನು ಪ್ರಕಾಶಪಡಿಸುತ್ತಾನೆ

English Translation

The divine Savitri has diffused the golden radiance on high, of which he is the asylum verily Bhaga is to be adored by men who, abounding in wealth, distributes treasures (amoungst them)

ಸಂಹಿತಾಪಾಠಃ

ಉದು ತಿಷ್ಠ ಸವಿತಃ ಶ್ರುಧ್ಯ೧ಸ್ಯ ಹಿರಣ್ಯಪಾಣೇ ಪ್ರಭೃತಾವೃತಸ್ಯ ।
ವ್ಯು೧ರ್ವೀಂ ಪೃಥ್ವೀಮಮತಿಂ ಸೃಜಾನ ಆ ನೃಭ್ಯೋ ಮರ್ತಭೋಜನಂ ಸುವಾನಃ ॥ ೨ ॥

ಪದಪಾಠಃ

ಉತ್ । ಊಂ ಇತಿ । ತಿಷ್ಠ । ಸವಿತರಿತಿ । ಶ್ರುಧಿ । ಅಸ್ಯ । ಹಿರಣ್ಯಽಪಾಣೇ । ಪ್ರಽಭೃತೌ । ಋತಸ್ಯ ।
ವಿ । ಉರ್ವೀಂ । ಪೃಥ್ವೀಂ । ಅಮತಿಂ । ಸೃಜಾನಃ । ಆ । ನೃಽಭ್ಯಃ । ಮರ್ತಽಭೋಜನಂ । ಸುವಾನಃ ॥

ಸಾಯಣಭಾಷ್ಯಂ

ಹೇ ಸವಿತಃ ಸರ್ವಸ್ಯ ಪ್ರೇರಯಿತರ್ದೇವ ತ್ವಮುತ್ತಿಷ್ಠ । ಊರ್ಧ್ವಂ ಗಚ್ಛ । ತತೋ ಹೇ ಹಿರಣ್ಯಪಾಣೇ ಹೇ ಸುವರ್ಣಹಸ್ತ ತ್ವಮಸ್ಮದಭೀಪ್ಸಿತಪ್ರದಾನಾಯರ್ತಸ್ಯ ಯಜ್ಞಸ್ಯ ಪ್ರಭೃತೌ ಪ್ರಣಯನೇಽಸ್ಯಾಸ್ಮದೀಯಮಿದಂ ಸ್ತೋತ್ರಂ ಶ್ರುಧಿ । ಶೃಣು । ಉ ಇತಿ ಪೂರಣಃ । ಕೀದೃಶಸ್ತ್ವಂ । ಉರ್ವೀಂ ವಿಸ್ತೀರ್ಣಾಂ ಪೃಥ್ವೀಂ ಪ್ರಥಿತಾಮಮತಿಂ ರೂಪಂ ಪ್ರಭಾಂ ವಿ ಸೃಜಾನೋ ವಿಸೃಜನ್ನೃಭ್ಯೋ ನೇತೃಭ್ಯಃ ಸ್ತೋತೃಭ್ಯೋ ಮರ್ತಭೋಜನಂ ಮನುಷ್ಯಾಣಾಂ ಭೋಗಯೋಗ್ಯಂ ಧನಮಾ ಸುವಾನಃ ಪ್ರೇರಯನ್ । ಏವಂಭೂತಸ್ತ್ವಮಿದಂ ಸ್ತೋತ್ರಂ ಶೃಣ್ವಿತಿ ಸಂಬಂಧಃ ॥

ಪ್ರತಿಪದಾರ್ಥ

**ಸವಿತಃ**—ಸರ್ವಪ್ರೇರಕನಾದ ಎಲೈ ಸವಿತೃವೇ, । **ಉತ್ತಿಷ್ಠ**—ಉದಯಿಸು । **ಹಿರಣ್ಯಪಾಣೇ**—ಸುವರ್ಣರೂಪದ ಹಸ್ತಗಳುಳ್ಳ ಎಲೈ ಸವಿತೃವೇ, । **ಉರ್ವೀಂ**—ವಿಸ್ತೃತವಾದುದೂ । **ಪೃಥ್ವೀಂ**—ಪ್ರಭೂತವಾಗಿ ವ್ಯಾಪಿಸು

ವುದೂ ಆದ | **ಅಮತಿಂ**—ಪ್ರಭಾರೂಪವನ್ನು | **ವಿ ಸೃಜಾನಃ**—ಹರಡುತ್ತಲೂ | **ನೃಭ್ಯಃ**—ನೇತೃಗಳಾದ ಸ್ತುತಿಕರ್ತರಿಗೆ | **ಮರ್ತಭೋಜನಂ**—ಮಾನವರ ಭೋಗಕ್ಕೆ ಯೋಗ್ಯವಾದ ಧನವನ್ನು | **ಆ ಸುವಾನಃ**—ಒದಗಿಸಿ ಕೊಡುತ್ತಲೂ | **ಋತಸ್ಯ**—ಯಜ್ಞದ | **ಪ್ರಭೃತೌ**—ಆರಂಭಕಾಲದಲ್ಲಿ | **ಅಸ್ಯ**—ನಮ್ಮ ಈ ಸ್ತೋತ್ರವನ್ನು | **ಶ್ರುಧಿ**—ಕೇಳು.

ಭಾವಾರ್ಥ

ಸರ್ವಪ್ರೇರಕನಾದ ಎಲೈ ಸವಿತೃವೇ, ಉದಯಿಸು ಸುವರ್ಣರೂಪದ ಹಸ್ತಗಳುಳ್ಳ ಎಲೈ ಸವಿತೃವೇ, ವಿಸ್ತೃತವಾದುದೂ, ಪ್ರಭೂತವಾಗಿ ವ್ಯಾಪಿಸುವುದೂ ಆದ ಪ್ರಭಾರೂಪವನ್ನು ಹರಡುತ್ತಲೂ, ನೇತೃಗಳಾದ ಸ್ತುತಿಕರ್ತರಿಗೆ ಮಾನವರ ಭೋಗಕ್ಕೆ ಯೋಗ್ಯವಾದ ಧನವನ್ನು ಒದಗಿಸಿ ಕೊಡುತ್ತಲೂ, ಯಜ್ಞದ ಆರಂಭಕಾಲದಲ್ಲಿ ನಮ್ಮ ಈ ಸ್ತೋತ್ರವನ್ನು ಕೇಳು.

English Translation

Rise up, Savitri hear (our solicitations) upon the celebration of this ceremony, (you who are) diffusing light over the spacious earth, and bestowing human enjoyments upon men.

ಸಂಹಿತಾಪಾಠಃ

ಅಪಿ ಷ್ಟುತಃ ಸವಿತಾ ದೇವೋ ಅಸ್ತು ಯಮಾ ಚಿದ್ವಿಶ್ವೇ ವಸವೋ ಗೃಣಂತಿ|
ಸ ನಃ ಸ್ತೋಮಾನ್ನಮಸ್ಯ೧ ಶ್ಚನೋ ಧಾದ್ವಿಶ್ವೇಭಿಃ ಪಾತು ಪಾಯುಭಿರ್ನಿ ಸೂರೀನ್ ॥ ೩ ॥

ಪದಪಾಠಃ

ಅಪಿ | ಸ್ತುತಃ | ಸವಿತಾ | ದೇವಃ | ಅಸ್ತು | ಯಂ | ಆ | ಚಿತ್ | ವಿಶ್ವೇ | ವಸವಃ | ಗೃಣಂತಿ |
ಸಃ | ನಃ | ಸ್ತೋಮಾನ್ | ನಮಸ್ಯಃ | ಚನಃ | ಧಾತ್ | ವಿಶ್ವೇಭಿಃ | ಪಾತು | ಪಾಯುಽಭಿಃ | ನಿ | ಸೂರೀನ್ ॥ ೩ ॥

ಸಾಯಣಭಾಷ್ಯಂ

ಅಪಿ ಚ ಸವಿತಾ ದೇವೋಽಸ್ಮಾಭಿಃ ಸ್ತುತೋಽಸ್ತು | ಅಸ್ಮದೀಯಾಃ ಸ್ತುತೀಃ ಶೃಣೋತ್ವಿತ್ಯರ್ಥಃ | ವಿಶ್ವೇ ವಸವಶ್ಚಿತ್ ಸರ್ವೇ ದೇವಾ ಅಪಿ ಯಂ ಸವಿತಾರಮಾ ಗೃಣಂತಿ ಅಭಿಷ್ಟುವಂತಿ ನಮಸ್ಯಃ ಸರ್ವೈರ್ನಮಸ್ಕರಣೀಯಃ ಸ ದೇವಃ ಸ್ತೋಮಾನ್ನೋಽಸ್ಮದೀಯಾನಿ ಸ್ತೋತ್ರಾಣಿ ಚನೋಽನ್ನಂ ಧಾತ್ | ದಧಾತು | ಅನ್ನಫಲಾನಿ ಕರೋತು | ವಿಶ್ವೇಭಿರ್ವಿಶ್ವೈಃ ಸರ್ವೈಃ ಪಾಯುಭಿಃ ಪಾಲನೈಃ ಸೂರೀನ್ ಸ್ತೋತೄನಸ್ಮಾನ್ನಿ ಪಾತು | ನಿತರಾಂ ಪಾಲಯತು ||

ಪ್ರತಿಪದಾರ್ಥ

**ಅಪಿ**—ಮತ್ತು | **ದೇವಃ**—ದೇವತಾತ್ಮನಾದ | **ಸವಿತಾ**—ಸವಿತೃವು | **ಸ್ತುತಃ**—ನಮ್ಮಿಂದ ಪ್ರಶಂಸಿಸಲ್ಪಡುವವನಾಗಿ | **ಅಸ್ತು**—ಆಗಲಿ | **ವಿಶ್ವೇ**—ಸಮಸ್ತರಾದ | **ವಸವಃ ಚಿತ್**—ವಸುಸಂಜ್ಞಕರಾದ ದೇವತೆಗಳೂ | **ಯಂ**—ಯಾವ ಸವಿತೃವನ್ನು | **ಆ ಗೃಣಂತಿ**—ಸ್ತುತಿಸುವರೋ | **ನಮಸ್ಯಃ**—ಪೂಜ್ಯನಾದ | **ಸಃ**—ಅದೇ ಸವಿತೃವು **ನಃ**—ನಮ್ಮ | **ಸ್ತೋಮಾನ್**—ಸ್ತೋತ್ರಗಳನ್ನೂ | **ಚನಃ**—ಅನ್ನವನ್ನೂ | **ಧಾತ್**—ಧರಿಸಲಿ | **ವಿಶ್ವೇಭಿಃ**—ಸಮಸ್ತವಾದ | **ಪಾಯುಭಿಃ**—ರಕ್ಷಣೆಗಳಿಂದಲೂ ಕೂಡಿ | **ಸೂರೀನ್**—ಸ್ತುತಿಕರ್ತರಾದ ನಮ್ಮನ್ನು | **ನಿ ಪಾತು**—ರಕ್ಷಿಸಲಿ.

ಭಾವಾರ್ಥ

ದೇವತಾತ್ಮನಾದ ಸವಿತೃವು ನಮ್ಮಿಂದ ಪ್ರಶಂಸಿಸಲ್ಪಡಲಿ ವಸುಸಂಜ್ಞಕರಾದ ಸಮಸ್ತ ದೇವತೆಗಳೂ, ಯಾವ ಸವಿತೃವನ್ನು ಸ್ತುತಿಸುವರೋ ಪೂಜ್ಯನಾದ ಅದೇ ಸವಿತೃವು ನಮ್ಮ ಸ್ತೋತ್ರಗಳನ್ನೂ ಅನ್ನಗಳನ್ನೂ ಧರಿಸಲಿ. ಸಕಲ ರಕ್ಷಣೆಗಳಿಂದಲೂ ಕೂಡಿ ಸ್ತುತಿಕರ್ತರಾದ ನಮ್ಮನ್ನು ರಕ್ಷಿಸಲಿ

English Translation

Glorified be the divine Savitri, whom all the gods praise may that adorable (divinity) requite our praises (with) food may he always protect the devout with all his protections

ಸಂಹಿತಾಪಾಠಃ

ಅಭಿ ಯಂ ದೇವ್ಯದಿತಿರ್ಗೃಣಾತಿ ಸವಂ ದೇವಸ್ಯ ಸವಿತುರ್ಜುಷಾಣಾ |
ಅಭಿ ಸಮ್ರಾಜೋ ವರುಣೋ ಗೃಣಂತ್ಯಭಿ ಮಿತ್ರಾಸೋ ಅರ್ಯಮಾ ಸಜೋಷಾಃ || ೪ ||

ಪದಪಾಠಃ

ಅಭಿ | ಯಂ | ದೇವೀ | ಅದಿತಿಃ | ಗೃಣಾತಿ | ಸವಂ | ದೇವಸ್ಯ | ಸವಿತುಃ | ಜುಷಾಣಾ |
ಅಭಿ | ಸಂऽರಾಜಃ | ವರುಣಃ | ಗೃಣಂತಿ | ಅಭಿ | ಮಿತ್ರಾಸಃ | ಅರ್ಯಮಾ | ಸऽಜೋಷಾಃ || ೪ ||

ಸಾಯಣಭಾಷ್ಯಂ

ದೇವೀ ದ್ಯೋತಮಾನಾದಿತಿರದೀನಾ ದೇವಮಾತಾ ಯಂ ಸವಿತಾರಮಭಿ ಗೃಣಾತಿ ಅಭಿಷ್ಟೌತಿ ಕೀದೃಶೀ | ಸವಿತುರ್ದೇವಸ್ಯೈವ ಸವಂ ಪ್ರಸವಮನುಜ್ಞಾಂ ಜುಷಾಣಾ ಸೇವಮಾನಾ | ಸಮ್ರಾಜಃ ಸಮ್ಯಗ್ರಾಜಮಾನಾ ವರುಣಃ | ಉಪಲಕ್ಷಣಮೇತತ್ | ವರುಣಾದಯೋ ದೇವಾ ಯಂ ಸವಿತಾರಮಭಿ ಗೃಣಂತಿ ಅಭಿಷ್ಟುವಂತಿ | ಮಿತ್ರಾಸೋ ಮಿತ್ರಾದಯಶ್ಚ ಸಜೋಷಾಃ ಸಮಾನಪ್ರೀತಿರರ್ಯಮೈತತ್ಸಂಜ್ಞಕೋ ದೇವಶ್ಚ ಯಮಭಿ ಗೃಣಂತಿ | ಸ ನಃ ಸ್ತೋಮಾಂಶ್ಚನೋ ಧಾದಿತಿ ಪೂರ್ವಯರ್ಚಾ ಸಂಬಂಧಃ ||

ಪ್ರತಿಪದಾರ್ಥ

**ದೇವಸ್ಯ**—ಪ್ರಭಾಯುತನಾದವನೂ | **ಸವಿತುಃ**—ಪ್ರೇರಕನಾದವನೂ ಆದ ಸವಿತೃವಿನ | **ಸವಂ**—ಅನುಜ್ಞೆಯನ್ನು | **ಜುಷಾಣಾ**—ಸೇವಿಸುವವಳೂ | **ದೇವೀ**—ದೇವತಾತ್ಮಳೂ ಆದ | **ಅದಿತಿಃ**—ಅದಿತಿದೇವಿಯು | **ಯಂ**—ಯಾವ ಸವಿತೃವನ್ನು | **ಅಭಿ ಗೃಣಾತಿ**—ಸ್ತುತಿಸುವಳೋ | **ಸಮ್ರಾಜಃ**—ಪೂರ್ಣವಾಗಿ ಪ್ರಭುತ್ವವುಳ್ಳ | **ವರುಣಃ**—ವರುಣಾದಿದೇವತೆಗಳೂ | **ಅಭಿ (ಗೃಣಂತಿ)**—ಯಾವ ಸವಿತೃವನ್ನು ಸ್ತುತಿಸುವರೋ | **ಸಜೋಷಾಃ**—ಸಮಾನವಾದ ಪ್ರೀತಿಯುಳ್ಳ | **ಮಿತ್ರಾಸಃ**—ಮಿತ್ರಾದಿಗಳೂ | **ಅರ್ಯಮಾ**—ಅರ್ಯಮಸಂಜ್ಞಕನಾದ ದೇವನೂ | **ಅಭಿ ಗೃಣಂತಿ**—ಯಾರನ್ನು ಪ್ರಶಂಸಿಸುವರೋ ಆ ಸವಿತೃವು ನಮ್ಮ ಅನ್ನಾದಿಗಳನ್ನು ಧರಿಸಲಿ.

ಭಾವಾರ್ಥ

ಪ್ರಭಾಯುತನೂ ಪ್ರೇರಕನೂ ಆದ ಯಾವ ಸವಿತೃವಿನ ಅನುಜ್ಞೆಯನ್ನೇ ಸೇವಿಸುವವಳೂ, ದೇವತಾತ್ಮಳೂ ಆದ ಅದಿತಿದೇವಿಯು ಯಾವ ಸವಿತೃವನ್ನು ಸ್ತುತಿಸುವಳೋ ಪೂರ್ಣವಾಗಿ ಪ್ರಭುತ್ವವುಳ್ಳ ವರುಣಾದಿದೇವತೆಗಳೂ ಯಾವ ಸವಿತೃವನ್ನು ಸ್ತುತಿಸುವರೋ ಸಮಾನವಾದ ಪ್ರೀತಿಯುಳ್ಳ ಮಿತ್ರಾದಿಗಳೂ ಅರ್ಯಮದೇವನೂ ಯಾರನ್ನು ಪ್ರಶಂಸಿಸುವರೋ ಆ ಸವಿತೃವು ನಮ್ಮ ಅನ್ನಾದಿಗಳನ್ನು ಧರಿಸಲಿ.

English Translation

Whom the divine Aditi, delighting at the birth of the divine Savitri, glorifies, whom the supreme sovereigns, Varuna, Mitra, Aryaman, (and other gods), consentaneously adore

ಸಂಹಿತಾಪಾಠಃ

ಅಭಿ ಯೇ ಮಿಥೋ ವನುಷಃ ಸಪಂತೇ ರಾತಿಂ ದಿವೋ ರಾತಿಷಾಚಃ ಪೃಥಿವ್ಯಾಃ |
ಅಹಿರ್ಬುಧ್ನ್ಯ ಉತ ನಃ ಶೃಣೋತು ವರೂತ್ರ್ಯೇಕಧೇನುಭಿರ್ನಿ ಪಾತು ||೫||

ಪದಪಾಠಃ

ಅಭಿ | ಯೇ | ಮಿಥಃ | ವನುಷಃ | ಸಪಂತೇ | ರಾತಿಂ | ದಿವಃ | ರಾತಿऽಸಾಚಃ | ಪೃಥಿವ್ಯಾಃ |
ಅಹಿಃ | ಬುಧ್ನ್ಯಃ | ಉತ | ನಃ | ಶೃಣೋತು | ವರೂತ್ರೀ | ಏಕಧೇನುऽಭಿಃ | ನಿ | ಪಾತು || ೫ ||

ಸಾಯಣಭಾಷ್ಯಂ

ರಾತಿಷಾಚೋ ದಾನಸೇವಿನೋ ವನುಷಃ ಸಂಭಕ್ತಾರೋ ಯೇ ಯಜಮಾನಾ ಮಿಥಃ ಪರಸ್ಪರಂ ಸಂಹತಾ ಭೂತ್ವಾ ಸವಿತಾರಮಭಿಲಕ್ಷ್ಯ ಸಪಂತೇ ಪರಿಚರಂತಿ | ಕೀದೃಶಂ | ದಿವೋ ದ್ಯುಲೋಕಸ್ಯ ಪೃಥಿವ್ಯಾ ಭೂಮೇಶ್ಚ ರಾತಿಂ ಮಿತ್ರಭೂತಂ | ಉತಾಪಿ ಚಾಹಿರ್ಬುಧ್ನ್ಯಃ | ಬುಧ್ನೇಽಂತರಿಕ್ಷೇ ಭವೋ ಬುಧ್ನ್ಯಃ | ಏತೀತ್ಯಹಿಃ | ಏತತ್ಪದದ್ವಯಾಭಿಧೋ ಮಧ್ಯಮಸ್ಥಾನೋಽಗ್ನಿರಹಿರ್ಬುಧ್ನ್ಯ ಇತ್ಯುಚ್ಯತೇ |

ಸವಿತುರ್ಮಿತ್ರಭೂತಃ ಸೋಽಪಿ ತೇಷಾಂ ನೋಽಸ್ಮಾಕಂ ಸವಿತೃವಿಷಯಂ ಸ್ತೋತ್ರಂ ಶೃಣೋತು | ತಥಾ ವರೂತ್ರೀ ವಾಗ್ದೇವೀ ಚ ಸವಿತೃಸಹಿತಾ ಸತ್ಯೈಕಧೇನುಭಿರ್ಮುಖ್ಯಾಭಿರ್ಗೋಭಿರ್ನಿ ಪಾತು | ನಿತರಾಮಸ್ಮಾನ್ಪಾಲಯತು ||

ಪ್ರತಿಪದಾರ್ಥ

**ದಿವಃ**—ದ್ಯುಲೋಕಕ್ಕೂ | **ಪೃಥಿವ್ಯಾಃ**—ಪೃಥ್ವಿಗೂ | **ರಾತಿಂ**—ಮಿತ್ರಭೂತನಾದ ಸವಿತೃವನ್ನು | **ರಾತಿಷಾಚಃ**—ದಾನವನ್ನು ಸೇವಿಸುವವರೂ | **ವಸೂಯವಃ**—ಅವನಿಂದ ದತ್ತವಾದ ಧನವನ್ನು ಅನುಭವಿಸುವವರೂ ಆದ | **ಯೇ**—ಯಾವ ಯಜಮಾನರು | **ಮಿಥಃ**—ಒಟ್ಟಿಗೆ ಕೂಡಿಕೊಂಡು | **ಅಭಿ ಸಪಂತೇ**—ಸೇವಿಸುವರೋ | **ನಃ**—ಅಂತಹ ನಮ್ಮ ಸ್ತೋತ್ರವನ್ನು | **ಶೃಣೋತು**—ಸವಿತೃವು ಕೇಳಲಿ | **ಉತ**—ಮತ್ತು | **ಅಹಿರ್ಬುಧ್ನ್ಯಃ**—ಅಹಿರ್ಬುಧ್ನ್ಯ ದೇವನೂ ಕೇಳಲಿ | **ವರೂತ್ರೀ**—ರಕ್ಷಕಳಾದ ವಾಗ್ದೇವಿಯೂ | **ಏಕಧೇನುಭಿಃ**—ಮುಖ್ಯವಾದ ಧೇನುಗಳೊಡಗೂಡಿ | **ನಿ ಪಾತು**—ನಮ್ಮನ್ನು ರಕ್ಷಿಸಲಿ

ಭಾವಾರ್ಥ

ಸವಿತೃವಿನಿಂದ ದತ್ತವಾದ ಸಂಪತ್ತನ್ನು ಅನುಭವಿಸುವ ಯಾವ ಯಜಮಾನರೂಪರಾದ ನಾವು ದ್ಯುಲೋಕಕ್ಕೂ, ಪೃಥ್ವಿಗೂ ಮಿತ್ರಭೂತನಾದ ಸವಿತೃವನ್ನು ಒಟ್ಟಿಗೆ ಕೂಡಿಕೊಂಡು ಸೇವಿಸುವವೋ ಅಂತಹ ನಮ್ಮ ಸ್ತೋತ್ರವನ್ನು ಸವಿತೃವು ಕೇಳಲಿ. ಮತ್ತು ಅಹಿರ್ಬುಧ್ನ್ಯದೇವನೂ ಕೇಳಲಿ ಮತ್ತು ರಕ್ಷಕಳಾದ ವಾಗ್ದೇವಿಯು ಮುಖ್ಯವಾದ ಧೇನುಗಳೊಡಗೂಡಿ ನಮ್ಮನ್ನು ರಕ್ಷಿಸಲಿ

English Translation

Whom those solicitous for wealth, those enjoying (it), mutually worship, the benefactor of heaven and earth may Ahirbhudhnya hear us may the protectress, (the goddess of speech), cherish us with excellent cattle.

ಸಂಹಿತಾಪಾಠಃ

ಅನು ತನ್ನೋ ಜಾಸ್ಪತಿರ್ಮಂಸೀಷ್ಟ ರತ್ನಂ ದೇವಸ್ಯ ಸವಿತುರಿಯಾನಃ |
ಭಗಮುಗ್ರೋಽವಸೇ ಜೋಹವೀತಿ ಭಗಮನುಗ್ರೋ ಅಧ ಯಾತಿ ರತ್ನಂ ||

ಪದಪಾಠಃ

ಅನು | ತತ್ | ನಃ | ಜಾಃಪತಿಃ | ಮಂಸೀಷ್ಟ | ರತ್ನಂ | ದೇವಸ್ಯ | ಸವಿತುಃ | ಇಯಾನಃ |
ಭಗಂ | ಉಗ್ರಃ | ಅವಸೇ | ಜೋಹವೀತಿ | ಭಗಂ | ಅನುಗ್ರಃ | ಅಧ | ಯಾತಿ | ರತ್ನಂ || ೬ ||

ಸಾಯಣಭಾಷ್ಯಂ

ಇಯಾನೋಽಸ್ಮಾಭಿರ್ಯಾಚ್ಯಮಾನೋ ಜಾಸ್ಪತಿಃ ಪ್ರಜಾನಾಂ ಪಾಲಕಃ ಸವಿತಾ ದೇವಃ ಸವಿತುರ್ದೇವಸ್ಯ ಸ್ವಸ್ಯ ಸಂಬಂಧಿ ರತ್ನಂ ರಮಣೀಯಂ ತತ್ಪ್ರಸಿದ್ಧಂ ಧನಂ ನೋಽಸ್ಮಾಕಮನು ಮಂಸೀಷ್ಟ| ಅನುಮನ್ಯತಾಂ | ಉಗ್ರ ಓಜಸ್ವೀ ಸ್ತೋತಾ ಭಗಂ ಭಜನೀಯಂ ಸವಿತಾರಂ ಭಗಸಂಜ್ಞಕಂ ದೇವಂ ವಾ-

ವಸೇ ನೋಽಸ್ಮಾಕಂ ರಕ್ಷಣಾಯ ಜೋಹವೀತಿ । ಭೃಶಂ ಹ್ವಯತಿ । ಅಧಾಪಿ ಚಾನುಗ್ರೋಽಸಮರ್ಥಃ ಸ್ತೋತಾ ಭಗಮೇತತ್ಸಂಜ್ಞಕಂ ಸವಿತಾರಂ ವಾ ರತ್ನಂ ರಮಣೀಯಂ ತತ್ಪ್ರಸಿದ್ಧಂ ಧನಂ ಯಾತಿ । ಯಾಚತೇ ॥

ಪ್ರತಿಪದಾರ್ಥ

**ಇಯಾನಃ**—ನಮ್ಮಿಂದ ಯಾಚಿಸಲ್ಪಡುವವನೂ । **ಜಾಸ್ಪತಿಃ**—ಪ್ರಜಾಪಾಲಕನೂ ಆದ ಸವಿತೃವು । **ದೇವಸ್ಯ ಸವಿತುಃ**—ದೇವತಾತ್ಮನಾದ ತನ್ನ । **ರತ್ನಂ**—ಆಕರ್ಷಕವೂ । **ತತ್**—ಪ್ರಸಿದ್ಧವೂ ಆದ ಧನವನ್ನು । **ನಃ**—ನಮಗೆ । **ಅನು ಮಂಸೀಷ್ಟ**—ಒದಗಿಸಿಕೊಡಲಿ. । **ಉಗ್ರಃ**—ತೇಜಸ್ವಿಯಾದ ಸ್ತೋತೃವು । **ಭಗಂ**—ಪೂಜ್ಯನಾದ ಭಗದೇವನನ್ನು । **ಅವಸೇ**—ನಮ್ಮ ರಕ್ಷಣಾರ್ಥವಾಗಿ । **ಜೋಹವೀತಿ**—ಅನೇಕ ಬಾರಿ ಕರೆಯುತ್ತಾನೆ. । **ಅಧ**—ಮತ್ತು । **ಅನುಗ್ರಃ**—ಅಸಮರ್ಥನಾದ ಸ್ತೋತೃವು । **ಭಗಂ**—ಭಗದೇವನನ್ನು । **ರತ್ನಂ**—ಧನವನ್ನು । **ಯಾತಿ**—ಬೇಡುತ್ತಾನೆ.

ಭಾವಾರ್ಥ

ನಮ್ಮಿಂದ ಯಾಚಿಸಲ್ಪಡುವವನೂ, ಪ್ರಜಾಪಾಲಕನೂ ಆದ ಸವಿತೃವು ದೇವತಾತ್ಮನಾದ ತನ್ನದೇ ಆದ ಆಕರ್ಷಕವಾದ ಧನವನ್ನು ನಮಗೆ ಒದಗಿಸಿಕೊಡಲಿ. ತೇಜಸ್ವಿಯಾದ ಸ್ತೋತೃವು ಪೂಜ್ಯನಾದ ಭಗದೇವನನ್ನು ನಮ್ಮ ರಕ್ಷಣಾರ್ಥವಾಗಿ ಅನೇಕಬಾರಿ ಕರೆಯುತ್ತಾನೆ ಅಸಮರ್ಥನಾದ ಸ್ತೋತೃವು ಭಗದೇವನಿಂದ ಧನವನ್ನು ಬೇಡುತ್ತಾನೆ

English Translation

May the protector of progeny, when solicited, consent to bestow upon us the precious (wealth) of the divine Savitri · the ardent (adorer) invokes repeatedly Bhaga for protection , the less ardent solicits Bhaga for wealth.

ಸಂಹಿತಾಪಾಠಃ

ಶಂ ನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ ಸ್ವರ್ಕಾಃ ।
ಜಂಭಯಂತೋಽಹಿಂ ವೃಕಂ ರಕ್ಷಾಂಸಿ ಸನೇಮ್ಯಸ್ಮದ್ಯುಯವನ್ನಮೀವಾಃ ॥೭॥

ಪದಪಾಠಃ

ಶಂ । ನಃ । ಭವಂತು । ವಾಜಿನಃ । ಹವೇಷು । ದೇವಽತಾತಾ । ಮಿತಽದ್ರವಃ । ಸುಽಅರ್ಕಾಃ ।
ಜಂಭಯಂತಃ । ಅಹಿಂ । ವೃಕಂ । ರಕ್ಷಾಂಸಿ । ಸನೇಮಿ । ಅಸ್ಮತ್ । ಯುಯವನ್ । ಅಮೀವಾಃ ॥ ೭ ॥

ಸಾಯಣಭಾಷ್ಯಂ

ವೈಶ್ವದೇವೇ ಪರ್ವಣಿ ವಾಜಿನಸ್ಯ ಹವಿಷಃ ಶಂ ನೋ ಭವಂತ್ವಿತ್ಯಾದಿಕೇ ದ್ವೇ ಯಾಜ್ಯಾನುವಾಕ್ಯೇ । ಸೂತ್ರಿತಂ ಚ । ಶಂ ನೋ ಭವಂತು ವಾಜಿನೋ ಹವೇಷು ವಾಜೇವಾಜೇಽವತ ವಾಜಿನೋ ನ ಇತ್ಯೂರ್ಧ್ವಂ ಜ್ಞುರವನಾನಂ ಯಾಜ್ಯಾಂ । ಆ. ೩.೧೩ । ಇತಿ ॥

ದೇವತಾತಾ ದೇವತಾತೌ ಯಜ್ಞೇ ಹವೇಷ್ವಸ್ಮದೀಯೇಷು ಸ್ತೋತ್ರೇಷು ಮಿತದ್ರವೋ ಮಿತದ್ರವಣಾ ಮಿತಮಾರ್ಗಾಃ ಸ್ವರ್ಕಾಃ ಶೋಭನಾನ್ನಾ ವಾಜಿನ ಏತದಭಿಧಾಯಕಾ ದೇವಾ ನೋಽಸ್ಮಾಕಂ ಶಂ ಸುಖಾಯ ಭವಂತು । ಅಪಿ ಚಾಹಿಮಾಗತ್ಯ ಹಂತಾರಂ ವೃಕಂ ವಸೂನಾಮಾದಾತಾರಂ । ಚೋರಮಿತಿ ಶೇಷಃ । ರಕ್ಷಾಂಸಿ ಚ ಜಂಭಯಂತೋ ಹಿಂಸಂತೋ ವಾಜಿನೋ ದೇವಾಃ ಸನೇಮಿ । ಪುರಾಣನಾಮೈತತ್ । ಪುರಾತನಾ ಅಮೀವಾ ರೋಗಾನಸ್ಮದಸ್ಮತ್ತೋ ಯುಯವನ್ । ಪೃಥಕ್ಕುರ್ವಂತು ॥

ಪ್ರತಿಪದಾರ್ಥ

**ದೇವತಾತಾ**—ಯಜ್ಞದಲ್ಲಿ । **ಹವೇಷು**—ನಮ್ಮ ಸ್ತುತಿಪಾಠವಾಗುತ್ತಿರುವಾಗ । **ಮಿತದ್ರವಃ**—ನಿಯಮಿತವಾದ ಮಾರ್ಗಗಳುಳ್ಳವರೂ । **ಸ್ವರ್ಕಾಃ**—ಉತ್ತಮವಾದ ಅನ್ನವುಳ್ಳವರೂ । **ವಾಜಿನಃ**—ಶಕ್ತಿಯುತರೂ ಆದ ದೇವತೆಗಳು । **ನಃ**—ನಮ್ಮ । **ಶಂ**—ಸುಖಾರ್ಥವಾಗಿ । **ಭವಂತು**—ಇರಲಿ । **ಅಹಿಂ**—ಮಾರ್ಗನಿರೋಧಕನೂ **ವೃಕಂ**—ಲೋಭಿಯೂ ಆದ ಚೋರನನ್ನೂ । **ರಕ್ಷಾಂಸಿ**—ರಾಕ್ಷಸರನ್ನೂ । **ಜಂಭಯಂತಃ**—ಹಿಂಸಿಸುವ ದೇವತೆಗಳು । **ಸನೇಮಿ**—ಪುರಾತನಗಳಾದ । **ಅಮೀವಾಃ**—ರೋಗಗಳನ್ನು । **ಅಸ್ಮತ್**—ನಮ್ಮಿಂದ । **ಯುಯವನ್**—ಬೇರೆಮಾಡಲಿ

ಭಾವಾರ್ಥ

ನಿಯಮಿತವಾದ ಮಾರ್ಗಗಳುಳ್ಳವರೂ, ಉತ್ತಮವಾದ ಅನ್ನವಂತರೂ ಶಕ್ತಿಯುತರೂ ಆದ ದೇವತೆಗಳು ಯಜ್ಞದಲ್ಲಿ ಸ್ತುತಿಪಾಠವಾಗುತ್ತಿರುವಾಗ ನಮ್ಮ ಸುಖಾರ್ಥವಾಗಿರಲಿ. ಮಾರ್ಗನಿರೋಧಕನೂ, ಲೋಭಿಯೂ ಆದ ಚೋರನನ್ನೂ ರಾಕ್ಷಸರನ್ನೂ ಹಿಂಸಿಸುವ ದೇವತೆಗಳು ಪುರಾತನಗಳಾದ ರೋಗಗಳನ್ನು ನಮ್ಮಿಂದ ಬೇರೆಮಾಡಲಿ

English Translation

May the Vajins, with slackened speed, bringing excellent food, be (disposed) for our happiness, upon our invocations at the worship of the gods destroying the murderer, the robber, the Rakshas and keeping from us ancient maladies

ವಿಶೇಷವಿಷಯಗಳು

ವೈಶ್ವದೇವಪರ್ವದಲ್ಲಿ ವಾಜಿ ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ **ಶಂ ನೋ ಭವಂತು** ಎಂಬ ಈ ಋಕ್ಕನ್ನೂ ಇದರ ಮುಂದಿನ ಋಕ್ಕನ್ನೂ ಕ್ರಮವಾಗಿ ಯಾಜ್ಯಾ ಮತ್ತು ಅನುವಾಕ್ಯಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಶಂ ನೋ ಭವಂತು ವಾಜಿನೋ ಹವೇಷು ವಾಜೇವಾಜೇಽವತ ವಾಜಿನೋ ನ ಇತ್ಯೂರ್ಧ್ವಜ್ಞುರನವಾನಂ ಯಾಜ್ಯಾಂ** ಎಂಬ ಸೂತ್ರದಿಂದ (ಆ ೨-೧೬) ವಿಸ್ತೃತವಾಗಿರುವುದು

**ವಾಜಿನಃ**—ವಾಜಿನ್ ಶಬ್ದಕ್ಕೆ ಯಾಸ್ಕರು ವಾಜೀ ವೇಜನವಾನ್ (ನಿ ೨-೨೮) ವೇಗಗಮನವುಳ್ಳ ಅಶ್ವವು ಎಂದು ಅರ್ಥವಿವರಣೆಮಾಡಿದಾರೆ. ಪ್ರಕೃತ ಋಕ್ಕಿನಲ್ಲಿ ವಾಜಿನಃ ಎಂಬ ಶಬ್ದವು ಪ್ರಥಮಾಬಹುವಚನಾಂತವಾಗಿದ್ದು ವಾಜಿಗಳೆಂಬ ಹೆಸರಿನ ದೇವತೆಗಳನ್ನು ಸೂಚಿಸುವುದು. ಈ ಶಬ್ದಕ್ಕೆ ರಶ್ಮಿಗಳು ಎಂಬ ಇನ್ನೊಂದು ಅರ್ಥವೂ ಇರುವುದು. ವಾಜಿನಃ ಎಂಬ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರುಕ್ತವನ್ನು ಹೇಳಿದಾರೆ.—

**ಸುಖಾ ನೋ ಭವಂತು ವಾಜಿನೋ ಹ್ವಾನೇಷು ದೇವತಾತಾ ಯಜ್ಞೇ ಮಿತದ್ರವಃ ಸುಮಿತದ್ರವಃ । ಸ್ವರ್ಕಾಃ ಸ್ವಂಚನಾ ಇತಿ ವಾ ಸ್ವರ್ಚನಾ ಇತಿ ವಾ ಸ್ವರ್ಚಿಷ ಇತಿ ವಾ । ಜಂಭಯಂತೋಽಹಿಂ ಚ ವೃಕಂ ಚ ರಕ್ಷಾಂಸಿ ಚ ಕ್ಷಿಪ್ರಮಸ್ಮದ್ಯಾವಯಂತ್ವಮೀವಾ ದೇವಾಶ್ವಾ ಇತಿ ವಾ ॥** (ನಿ. ೧೨-೪೪)

**ವಾಜಿನ್** ಶಬ್ದಕ್ಕೆ ವೇಗಗಮನವುಳ್ಳ ಅಶ್ವವು ಅಥವಾ ದೇವಾಶ್ವವು ಎಂದರ್ಥವು ಇಲ್ಲಿ **ವಾಜಿನಃ** ಎಂಬ ಶಬ್ದವು ಬಹುವಚನದಲ್ಲಿರುವುದರಿಂದ ಅತ್ಯಂತ ವೇಗಗಮನವುಳ್ಳ ದೇವಾಶ್ವಗಳು ಅಥವಾ ದೇವತೆಗಳು ಎಂದರ್ಥವು **ದೇವತಾತಾ** ಎಂದರೆ ಯಜ್ಞದಲ್ಲಿ,

**ಮಿತದ್ರವಃ ಸುಮಿತದ್ರವಃ ಮಿತದ್ರವಣಾ ಮಿತಮಾರ್ಗಾಃ ।** ಸಾಧಾರಣವಾಗಿ ಅಶ್ವವು ಸಾರಥಿಯ ಅಧೀನಕ್ಕೊಳಪಟ್ಟಿರುವುದರಿಂದ ಅದು ಹೋಗುವ ವೇಗಕ್ಕೆ ಸಾರಥಿಯ ಇಷ್ಟದಂತೆ ಒಂದು ಮಿತಿಯುಂಟು. ಸಾರಥಿಯ ಇಷ್ಟಾನುಸಾರವಾಗಿ ಅದು ನಿಧಾನವಾಗಿ ಅಥವಾ ಬೇಗಬೇಗನೆ ಹೋಗಬೇಕಾಗಿರುವುದು ಆದ್ದರಿಂದ ಅದರ ವೇಗವು ಮಿತವಾಗಿರುವುದು ಎಂದರೆ ನಿಯಮನಕ್ಕೆ ಒಳಪಟ್ಟಿರುವುದು ಎಂದರ್ಥವು. ಅಥವಾ ಭಾಷ್ಯಕಾರರು ಹೇಳಿರುವಂತೆ **ಮಿತಮಾರ್ಗಾಃ** ಒಂದು ಗೊತ್ತಾದ ಎಂದರೆ ಸಾರಥಿಗೆ ಇಷ್ಟವಾದ ಮಾರ್ಗದಲ್ಲಿಯೇ ಹೋಗಬೇಕಾಗಿರುವುದು ಆದ್ದರಿಂದ ಮಿತಮಾರ್ಗ ಅಥವಾ ಮಿತದ್ರವಃ ಎಂಬ ಶಬ್ದವು ಈ ಅರ್ಥವನ್ನೂ ಸೂಚಿಸುವುದು

**ಸ್ವರ್ಕಾಃ**— ಸ್ವರ್ಕಶಬ್ದಕ್ಕೆ ಯಾಸ್ಕರು— **ಸ್ವಂಚನಾ ಇತಿ ವಾ । ಶೋಭನಂ ಅಂಚಂತಿ ಗಚ್ಛಂತಿ ।** ಚೆನ್ನಾದ ಅಥವಾ ಉತ್ತಮವಾದ ಪದವಿಕ್ಷೇಪದಿಂದ ಹೋಗುವುದಾದ್ದರಿಂದ ಸ್ವರ್ಕಾಃ ಎಂದು ಹೆಸರು, ಅಥವಾ **ಸ್ವರ್ಚನಾಃ ಶೋಭನಂ ವಾ ಅರ್ಚನಂ ಯೇಷಾಂ ಸ್ತುತಿಃ** ಚೆನ್ನಾಗಿ ಪ್ರಶಂಸಿಸಲ್ಪಡುವುದು ಎಂದರೆ ಇದರ ಗುಣಗಳನ್ನು ಶ್ಲಾಘಿಸುವರು ಆದ್ದರಿಂದ **ಸ್ವರ್ಚನಾಃ** ಅಥವಾ **ಸ್ವರ್ಕಾಃ** ಎಂದು ಹೆಸರು; ಅಥವಾ **ಸ್ವರ್ಚಿಷಃ ವಾ ಯೇಷಾಂ ಶೋಭನಾ ಅರ್ಚಿಷೋ ದೀಪ್ತಯಃ ತ ಆಗಚ್ಛಂತು ।** ಇವರ ಶರೀರಕಾಂತಿಯು ಬಹಳ ಪ್ರಕಾಶಮಾನವಾಗಿರುವುದು. ಧೃಷ್ಟಪುಷ್ಟವಾದ ಶರೀರದಿಂದಲೂ ಚೆನ್ನಾಗಿ ಬೆಳೆದು ಕೊಬ್ಬಿ ಅತ್ಯುತ್ಸಾಹದಿಂದ ಇರುವುದೂ ಮಿಂಚುತ್ತಿರುವ ಶರೀರಕಾಂತಿಯಿಂದ ಕೂಡಿರುವುದೂ ಆದ್ದರಿಂದ ಇವಕ್ಕೆ **ಸ್ವರ್ಚಿಷಃ ಅಥವಾ ಸ್ವರ್ಕಾಃ** ಎಂದು ಹೆಸರು. ಎಂದ **ಸ್ವರ್ಕಾಃ** ಎಂಬ ಶಬ್ದಕ್ಕೆ ನಾನಾ ವಿಧವಾದ ಅರ್ಥವನ್ನು ವಿವರಿಸಿದಾರೆ. **ಮಿತದ್ರವಃ ಸ್ವರ್ಕಾಃ** ಎಂಬ ಎರಡು ಶಬ್ದಗಳೂ ವಾಜಿನಃ ಎಂಬ ಶಬ್ದಕ್ಕೆ ವಿಶೇಷಣಗಳು.

**ಅಹಿಂ ಚ ವೃಕಂ ಚ ರಕ್ಷಾಂಸಿ—ಅಹಿಂ ಆಗತ್ಯ ಹಂತಾರಂ ।** ಅಟ್ಟಿಸಿಕೊಂಡುಬಂದು ಕೊಲ್ಲುವ ಶತ್ರುವಿಗೆ **ಅಹಿಂ** ಎಂದು ಹೆಸರು, **ವೃಕಂ ವಸೂನಾಮಾದಾತಾರಂ ಅಥವಾ ಯಶ್ಚ ವೃಕಸ್ತಸ್ಕರೋ ಮುಷ್ಣಾತಿ ।** ಧನಗಳನ್ನು ಅಪಹರಿಸುವ ಕಳ್ಳನಿಗೆ **ವೃಕ** ಎಂದು ಹೆಸರು **ರಕ್ಷಾಂಸಿ ಯೇಽಸ್ಮಾನ್ ರಹಸಿ ಕ್ಷಿಣ್ವಂತಿ ।** ನಮಗೆ ತಿಳಿಯದಂತ ಗೂಢನಾಗಿದ್ದುಕೊಂಡು ಅಥವಾ ರಹಸ್ಯಸ್ಥಳದಲ್ಲಿದ್ದುಕೊಂಡು ನಮ್ಮನ್ನು ಹಿಂಸಿಸುವ ರಾಕ್ಷಸಗಣಕ್ಕೆ ರಕ್ಷಾಂಸಿ ಎಂದು ಹೆಸರು ಈ ಮೂರುವಿಧವಾದ ಶತ್ರುಗಳನ್ನೂ ಈ ದೇವತೆಗಳು ಹಿಂಸಿಸಲಿ ಮತ್ತು ನಮ್ಮನ್ನು ರಕ್ಷಿಸಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

**ಸಂಹಿತಾಪಾಠಃ**

ವಾಜೇವಾಜೇಽವತ ವಾಜಿನೋ ನೋ ಧನೇಷು ವಿಪ್ರಾ ಅಮೃತಾ ಋತಜ್ಞಾಃ।
ಅಸ್ಯ ಮಧ್ವಃ ಪಿಬತ ಮಾದಯಧ್ವಂ ತೃಪ್ತಾ ಯಾತ ಪಥಿಭಿರ್ದೇವಯಾನೈಃ॥

ಪದಪಾಠಃ

ವಾಜೇऽವಾಜೇ । ಅವತ । ವಾಜಿನಃ । ನಃ । ಧನೇಷು । ವಿಪ್ರಾಃ । ಅಮೃತಾಃ । ಋತಽಜ್ಞಾಃ ।

ಅಸ್ಯ । ಮಧ್ವಃ । ಪಿಬತ । ಮಾದಯಧ್ವಂ । ತೃಪ್ತಾಃ । ಯಾತ । ಪಥಿಽಭಿಃ । ದೇವಽಯಾನೈಃ ॥ ೮ ॥

ಸಾಯಣಭಾಷ್ಯಂ

ಹೇ ವಾಜಿನ ಏತನ್ನಾಮಕಾ ದೇವಾ ವಿಪ್ರಾ ಮೇಧಾವಿನೋऽಮೃತಾ ಅಮರಣಧರ್ಮಾಣ ಋತಜ್ಞಾಃ ಸತ್ಯಂ ಜಾನಂತಃ ಏವಂಭೂತಾಃ ಸಂತೋ ಯೂಯಂ ವಾಜೇ ವಾಜೇ ಸರ್ವೇಷು ಯುದ್ಧೇಷು ನೋऽಸ್ಮಾನ್ಧನೇಷು ಧನನಿಮಿತ್ತೇಷ್ವವತ । ಪಾಲಯತ । ತತೋ ಯೂಯಮಸ್ಯ ಮಧ್ವೋ ಮಧುರೋಪೇತಮಿಮಂ ಸೋಮಂ ಪಿಬತ । ಸೋಮಪಾನಾನಂತರಂ ಮಾದಯಧ್ವಂ । ಯೂಯಂ ತೃಪ್ತಾ ಭವತ । ತತಸ್ತೃಪ್ತಾ ಯೂಯಂ ದೇವಯಾನೈರ್ದೇವಗಮನಸಾಧನೈಃ ಪಥಿಭಿರ್ಮಾರ್ಗೈರ್ಯಾತ । ಗಚ್ಛತ॥

ಪ್ರತಿಪದಾರ್ಥ

**ವಾಜಿನಃ**— ವಾಜಿಸಂಜ್ಞಕರಾದ ಎಲೈ ದೇವತೆಗಳೇ । **ವಿಪ್ರಾಃ**— ಮೇಧಾವಿಗಳೂ । **ಅಮೃತಾಃ**— ಮರಣ ಧರ್ಮರಹಿತರೂ । **ಋತಜ್ಞಾಃ**— ಸತ್ಯವನ್ನರಿತವರೂ ಆದ ನೀವು । **ವಾಜೇವಾಜೇ**— ಪ್ರತಿಯೊಂದು ಯುದ್ಧದಲ್ಲೂ । **ನಃ**— ನಮ್ಮನ್ನು । **ಧನೇಷು**— ಧನನಿಮಿತ್ತವಾಗಿ । **ಅವತ**— ರಕ್ಷಿಸಿರಿ. । **ಮಧ್ವಃ**— ಮಧುರವಾದ । **ಅಸ್ಯ**— ಈ ಸೋಮವನ್ನು । **ಪಿಬತ**— ಪಾನಮಾಡಿರಿ । **ಮಾದಯಧ್ವಂ**— ತೃಪ್ತಿಯನ್ನು ಹೊಂದಿರಿ **ತೃಪ್ತಾಃ**— ತೃಪ್ತರಾದ ನೀವು । **ದೇವಯಾನೈಃ**— ದೇವತೆಗಳು ಸಂಚರಿಸುವ । **ಪಥಿಭಿಃ**— ಮಾರ್ಗಗಳಿಂದ । **ಯಾತ**— ಹೊರಟುಹೋಗಿರಿ.।

ಭಾವಾರ್ಥ

ವಾಜಿಸಂಜ್ಞಕರಾದ ಎಲೈ ದೇವತೆಗಳೇ, ಮೇಧಾವಿಗಳೂ, ಮರಣಧರ್ಮರಹಿತರೂ, ಸತ್ಯವನ್ನರಿತವರೂ **ಆದ** ನೀವು ಪ್ರತಿಯೊಂದು ಯುದ್ಧದಲ್ಲೂ ನಮ್ಮನ್ನು ಧನನಿಮಿತ್ತವಾಗಿ ರಕ್ಷಿಸಿರಿ ಮಧುರವಾದ ಈ ಸೋಮವನ್ನು ಪಾನ ಮಾಡಿರಿ. ತೃಪ್ತಿಯನ್ನು ಹೊಂದಿರಿ ತೃಪ್ತರಾದ ನೀವು ದೇವಯಾನಮಾರ್ಗಗಳಿಂದ ಸಂಚರಿಸಿರಿ

English Translation

Wise, immortal Vajins, observers of truth defend us in every conflict, and for the sake of wealth . drink of this sweet (Soma beverage), be exhilarated (thereby) and satisfied , proceed by the paths traversed by the gods.

---

## ಮೂವತ್ತೊಂಭತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಊರ್ಧ್ವೋ ಅಗ್ನಿರಿತಿ ಸಪ್ತರ್ಚಂ ಷಷ್ಠಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವೈಶ್ವದೇವಂ । ಊರ್ಧ್ವಃ ಸಪ್ತ ವೈಶ್ವದೇವಂ ತ್ವಿತ್ಯನುಕ್ರಮಣಿಕಾ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ದ್ವಿತೀಯೇ ಛಂದೋಮೇ ಪ್ರಉಗಶಸ್ತ್ರ ಊರ್ಧ್ವೋ ಅಗ್ನಿರಿತಿ ವೈಶ್ವದೇವಸ್ತೃಚಃ । ಸೂತ್ರಿತಂ ಚ । ಊರ್ಧ್ವೋ ಅಗ್ನಿಃ ಸುಮತಿಂ ವಸ್ವೋ ಅಶ್ರೇದುತ ಸ್ಯಾ ನಃ ಸರಸ್ವತೀ ಜುಷಾಣೇತಿ ಪ್ರಉಗಂ । ಆ. ೮-೧೦ । ಇತಿ ॥**

**ಅನುವಾದವು**— **ಊರ್ಧ್ವೋ ಅಗ್ನಿಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ವಿಶ್ವೇದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ— **ಊರ್ಧ್ವಃ ಸಪ್ತ ವೈಶ್ವದೇವಂ ತು** ಎಂದು ಹೇಳಿರುವುದು. ಸೂಕ್ತ ವಿನಿಯೋಗವು ಲೈಂಗಿಕವು. ಎರಡನೆಯ ಛಂದೋಮದಲ್ಲಿ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವಾಗ **ಊರ್ಧ್ವೋ ಅಗ್ನಿಃ** ಎಂಬ ಮೊದಲಾಗುವ ಮೂರು ಋಕ್ಕುಗಳನ್ನು ವೈಶ್ವದೇವತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಊರ್ಧ್ವೋ ಅಗ್ನಿಃ ಸುಮತಿಂ ವಸ್ವೋ ಅಶ್ರೇದುತ ಸ್ಯಾ ನಃ ಸರಸ್ವತೀ ಜುಷಾಣೇತಿ ಪ್ರಉಗಂ** ಎಂಬ **ಸೂತ್ರದಿಂದ** (ಆ ೮-೧೦) ವಿವೃತವಾಗಿರುವುದು.

## ಸೂಕ್ತ—೩೯

ಮಂಡಲ—೭ || ಅನುವಾಕ—೩ || ಸೂಕ್ತ —೩೯ ||
ಅಷ್ಟಕ—೫ || ಅಧ್ಯಾಯ—೪ || ವರ್ಗ—೬ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ||
ಋಷಿಃ—ವಸಿಷ್ಠಃ ||
ದೇವತಾ—ವಿಶ್ವೇದೇವಾಃ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

ಊರ್ಧ್ವೋ ಅಗ್ನಿಃ ಸುಮತಿಂ ವಸ್ವೋ ಅಶ್ರೇತ್ಪ್ರತೀಚೀ ಜೂರ್ಣಿರ್ದೇವ-
ತಾತಿಮೇತಿ ।
ಭೇಜಾತೇ ಅದ್ರೀ ರಥ್ಯೇವ ಪಂಥಾಮೃತಂ ಹೋತಾ ನ ಇಷಿತೋ ಯಜಾತಿ ||

ಪದಪಾಠಃ

ಊರ್ಧ್ವಃ । ಅಗ್ನಿಃ । ಸುऽಮತಿಂ । ವಸ್ವಃ । ಅಶ್ರೇತ್ । ಪ್ರತೀಚೀ । ಜೂರ್ಣಿಃ । ದೇವಽತಾತಿಂ । ಏತಿ ।
ಭೇಜಾತೇ ಇತಿ । ಅದ್ರೀ ಇತಿ । ರಥ್ಯಾऽಇವ । ಪಂಥಾಂ । ಋತಂ । ಹೋತಾ । ನಃ । ಇಷಿತಃ । ಯಜಾತಿ ||

ಸಾಯಣಭಾಷ್ಯಂ

ಅಗ್ನಿರಂಗನಾದಿಗುಣವಿಶಿಷ್ಟ ಊರ್ಧ್ವ ಉದ್ಗಮನಃ ಸನ್ ವಸ್ವೋ ವಾಸಕಸ್ಯ ಸ್ತೋತುಃ ಸುಮತಿಮಸ್ಮದೀಯಾಂ ಶೋಭನಾಂ ಸ್ತುತಿಮಶ್ರೇತ್ । ಶ್ರಯತು । ಸೇವತಾಂ । ಪ್ರತೀಚ್ಯಭಿಮುಖೀ ಜೂರ್ಣಿಃ ಸರ್ವಾಸಾಂ ಪ್ರಜಾನಾಂ ಜರಯಿತ್ರ್ಯುಷೋದೇವತಾ ದೇವತಾತಿಂ ಯಜ್ಞಮೇತಿ । ಗಚ್ಛತಿ । ಅದ್ರೀ ಆದ್ರಿಯಂತೌ ಶ್ರದ್ಧಾವಂತೌ ಪತ್ನೀಯಜಮಾನೌ ಪಂಥಾಂ ಪಂಥಾನಂ ಯಜ್ಞಮಾರ್ಗಂ ರಥ್ಯೇವ ರಥಿನಾವಿವ ಭೇಜಾತೇ । ಸೇವೇತೇ । ತಥೇಷಿತಃ ಸಂಪ್ರೇಷಿತೋ ನೋऽಸ್ಮದೀಯೋ ಹೋತಾ ಋತಂ ಯಜ್ಞಂ ಯಜಾತಿ । ಯಜತು । ಕರೋತ್ವಿತ್ಯರ್ಥಃ ||

ಪ್ರತಿಪದಾರ್ಥ

**ಅಗ್ನಿಃ**—ಅಗ್ನಿದೇವನು | **ಊರ್ಧ್ವಃ**—ಊರ್ಧ್ವಮುಖನಾಗಿ ಆವಿರ್ಭವಿಸಿ | **ವಸ್ವಃ**—ಸ್ತುತಿಕರ್ತನ | **ಸುಮತಿಂ** -ಉತ್ತಮವಾದ ಸ್ತುತಿಯನ್ನು | **ಅಶ್ರೇತ್**—ಸೇವಿಸಲಿ | **ಪ್ರತೀಚೀ**—ಪಶ್ಚಿಮಾಭಿಮುಖಳಾಗಿರುವಳೂ **ಜೂರ್ಣಿಃ**—ಪ್ರಜೆಗಳ ಕ್ಷಯಕಾರಕಳೂ ಆದ ಉಷೋದೇವಿಯು | **ದೇವತಾತಿಂ**—ಯಜ್ಞಕ್ಕೆ | **ಏತಿ**—ಬರುತ್ತಾಳೆ| **ಅದ್ರೀ**—ಭಕ್ತಿಯುತರಾದ ಯಜಮಾನ ದಂಪತಿಗಳು | **ಪಂಥಾಂ**—ಯಜ್ಞಮಾರ್ಗವನ್ನು | **ರಥ್ಯೇವ**—ರಥಿಕರಂತೆ| **ಭೇಜಾತೇ**—ಸೇವಿಸುತ್ತಾರೆ | **ಇಷಿತಃ**—ನಿಯಮಿಸಲ್ಪಟ್ಟ | **ನಃ**—ನಮ್ಮ | **ಹೋತಾ**—ಹೋತೃವು | **ಶಮತಂ**—ಯಜ್ಞವನ್ನು | **ಯಜಾತಿ**—ನಿರ್ವಹಿಸಲಿ

ಭಾವಾರ್ಥ

ಅಗ್ನಿದೇವನು ಊರ್ಧ್ವಮುಖನಾಗಿ ಆವಿರ್ಭವಿಸಿ ಸ್ತುತಿಕರ್ತನ ಉತ್ತಮವಾದ ಸ್ತುತಿಯನ್ನು ಸೇವಿಸಲಿ ಪಶ್ಚಿಮಾಭಿಮುಖಳಾಗಿರುವವಳೂ ಪ್ರಜೆಗಳ ಕ್ಷಯ ಕಾರಕಳೂ ಆದ ಉಷೋದೇವಿಯು ಯಜ್ಞಕ್ಕೆ ಬರುತ್ತಾಳೆ ಭಕ್ತಿಯುತರಾದ ಯಜಮಾನದಂಪತಿಗಳು ಯಜ್ಞಮಾರ್ಗವನ್ನು ರಥಿಕರಂತೆ ಸೇವಿಸುತ್ತಾರೆ ನಿಯಮಿಸಲ್ಪಟ್ಟ ನಮ್ಮ ಹೋತೃವು ಯಜ್ಞವನ್ನು ನಿರ್ವಹಿಸಲಿ.

English Translation

Let Agni, risen on high, accept the praise of the worshipper she who makes (all creatures) old, looking to the west, goes to the sacrifice the pious pair, like two raiders in a chariot, follow the path (of the ceremony) let the Hotri, as enjoined, celebrate the rite

ಸಂಹಿತಾಪಾಠಃ

ಪ್ರ ವಾವೃಜೇ ಸುಪ್ರಯಾ ಬರ್ಹಿರೇಷಾಮಾ ವಿಶ್ಪತೀವ ಬೀರಿಟ ಇಯಾತೇ ।
ವಿಶಾಮಕ್ತೋರುಷಸಃ ಪೂರ್ವಹೂತೌ ವಾಯುಃ ಪೂಷಾ ಸ್ವಸ್ತಯೇ ನಿ-
ಯುತ್ವಾನ್ ॥ ೨ ॥

ಪದಪಾಠಃ

ಪ್ರ । ವವೃಜೇ । ಸುಽಪ್ರಯಾಃ । ಬರ್ಹಿಃ । ಏಷಾಂ । ಆ । ವಿಶ್ಪತೀ ಇವೇತಿ ವಿಶ್ಪತೀ ಇವ । ಬೀರಿಟೇ । ಇಯಾತೇ ಇತಿ ।
ವಿಶಾಂ । ಅಕ್ತೋಃ । ಉಷಸಃ । ಪೂರ್ವಽಹೂತೌ । ವಾಯುಃ । ಪೂಷಾ । ಸ್ವಸ್ತಯೇ । ನಿಯುತ್ವಾನ್ ।

ಸಾಯಣಭಾಷ್ಯಂ

ಏಷಾಂ ಯಜಮಾನಾನಾಂ ಸಂಬಂಧಿ ಸುಪ್ರಯಾಃ ಶೋಭನಾನ್ನೇನ ಯುಕ್ತಂ ಬರ್ಹಿಃ ಕುಶಮಯಂ ಪ್ರ ವವೃಜೇ । ಪ್ರವೃಜ್ಯತೇ । ಆಸಾದ್ಯತ ಇತ್ಯರ್ಥಃ । ವಿಶ್ಪತೀವ । ಇವೇತೀದಾನೀಮರ್ಥೇ । ಇದಾನೀಮಸ್ಮದೀಯಾನಾಂ ಪ್ರಜಾನಾಂ ಪಾಲಕೌ ನಿಯುತ್ವಾನ್ । ನಿಯುಚ್ಛಬ್ದೇನ ಬಡವಾ ಉಚ್ಯಂತೇ।

**ತೆದ್ವಾನ್ವಾಯುಃ ಪೂಷಾ ಚ ವಿಶಾಂ ಪ್ರಜಾನಾಂ ಸ್ವಸ್ತಯೇ ಕ್ಷೇಮಾಯಾಕ್ತೋಃ ರಾತ್ರೇಃ ಸಂಬಂಧಿನ್ಯಾ ಉಷಸಃ ಸಕಾಶಾತ್ಪೂರ್ವಹೂತೌ ಪೂರ್ವಸ್ಮಿನ್ನಾಹ್ವಾನೇ ಸತಿ ಬೀರಿಟೇಽನ್ತರಿಕ್ಷ ಐಯಾತೇ। ಆಗಚ್ಛತಾಂ। ಯದ್ವಾ । ವಿಶ್ಪತೀವೇತ್ಯುಪಮಾ। ವಿಶಾಂ ಮನುಷ್ಯಾಣಾಂ ಬೀರಿಟೇ ಗಣೇ ವಿಶ್ಪತೀವ ರಾಜಾನೌ ಯಥಾ ಗಚ್ಛತಾಂ ತದ್ವತ್ । ಅಸ್ಮಿನ್ಪಕ್ಷೇ ವಿಶಾಮಿತ್ಯುಭಯತ್ರ ಸಂಬಧ್ಯತೇ ॥**

ಪ್ರತಿಪದಾರ್ಥ

**ವಿಷಾಂ**—ಯಜಮಾನರ । **ಸುಪ್ರಯೋಃ**—ಉತ್ತಮವಾದ ಅನ್ನದಿಂದ ಕೂಡಿದ । **ಬರ್ಹಿಃ**—ದರ್ಭಾಸನವು **ಪ್ರ ವವೃಜೇ**—ಹರಡಲ್ಪಟ್ಟಿದೆ । **ವಿಶ್ಪತೀವ**—ಪ್ರಜಾಪಾಲಕರಾದ ರಾಜರಂತೆ । **ನಿಯುತ್ವಾನ್ ವಾಯುಃ**—ನಿಯುತ್ಸಂಜ್ಞಕವಾದ ಅಶ್ವವುಳ್ಳ ವಾಯುವೂ । **ಪೂಷಾ**—ಪೂಷದೇವನೂ । **ವಿಶಾಂ**—ಪ್ರಜೆಗಳ । **ಸ್ವಸ್ತಯೇ**—ಕ್ಷೇಮಕ್ಕಾಗಿ । **ಅಕ್ತೋಃ**—ರಾತ್ರಿಸಂಬಂಧಿಯಾದ । **ಉಷಸಃ**—ಉಷಸ್ಸಿಗಿಂತಲೂ । **ಪೂರ್ವಹೂತಾ**—ಪೂರ್ವಭಾವಿಯಾದ ಆಹ್ವಾನನಿಮಿತ್ತವಾಗಿ । **ಬೀರಿಟೇ**—ಅಂತರಿಕ್ಷದಲ್ಲಿ । **ಆ ಇಯಾತೇ**—ದಯಮಾಡಲಿ. ।

ಭಾವಾರ್ಥ

ಯಜಮಾನರ ಉತ್ತಮವಾದ ಅನ್ನಯುಕ್ತವಾದ ಧರ್ಭಾಸನವು ಹರಡಲ್ಪಟ್ಟಿದೆ. ಪ್ರಜಾಪಾಲಕರಾದ ರಾಜರಂತೆ ನಿಯುತ್ಸಂಜ್ಞಕವಾದ ಅಶ್ವವುಳ್ಳ ವಾಯುವೂ ಪೂಷದೇವನೂ ಪ್ರಜೆಗಳ ಕ್ಷೇಮಕ್ಕಾಗಿ ರಾತ್ರಿಸಂಬಂಧಿಯಾದ ಉಷಸ್ಸಿಗಿಂತಲೂ ಪೂರ್ವಭಾವಿಯಾದ (ಪ್ರಾತಃಕಾಲದ) ಆಹ್ವಾನನಿಮಿತ್ತವಾಗಿ ಅಂತರಿಕ್ಷದಲ್ಲಿ ದಯಮಾಡಲಿ

English Translation

The food-bestowing sacred grass of these (the worshippers) is strewn: may the two lords of people, Vayu, with the Niyut steeds, and Pushan, invoked before the dawn upon the close of the night, appear now in the firmament for the welfare of mankind.

ವಿಶೇಷವಿಷಯಗಳು

**ಬೀರಿಟೇ**—ಈ ಶಬ್ದಕ್ಕೆ ಭಾಷ್ಯಕಾರರು ಎರಡು ವಿಧವಾದ ಅರ್ಥವಿವರಣೆ ಮಾಡಿದಾರೆ. ಬೀರಿಟೇ ಎಂದರೆ ಅಂತರಿಕ್ಷದಲ್ಲಿ ಎಂದು ಒಂದು ಅರ್ಥವನ್ನೂ **ವಿಶಾಂ ಮನುಷ್ಯಾಣಾಂ ಬೀರಿಟೇ ಗಣೇ ವಿಶ್ಪತೀವ ರಾಜಾನೌ** ಮನುಷ್ಯರ ಅಥವಾ ಪ್ರಜೆಗಳ ಸಮೂಹದಲ್ಲಿ ಪ್ರಜಾಪಾಲಕರಾದ ರಾಜರಂತೆ ಎಂದು ಹೇಳಿ **ಬೀರಿಟೇ** ಎಂದರೆ ಸಮೂಹದಲ್ಲಿ ಎಂಬ ಇನ್ನೊಂದು ಅರ್ಥವನ್ನೂ ಹೇಳಿದಾರೆ

ಯಾಸ್ಕರು ಈ ಶಬ್ದಕ್ಕೆ ನಿರ್ವಚನವನ್ನು ಹೇಳಿ ಅರ್ಥವಿವರಣೆ ಮಾಡಿದಾರೆ—

> **ಬೀರಿಟೇ । ಬೀರಿಟಂ ತೈಟೀಕಿರಂತರಿಕ್ಷಮೇವಮಾಹ ಪೂರ್ವಂ ವಯತೇರುತ್ತರಮಿರತೇರ್ವಯಾಂಸೀರಂತ್ಯಸ್ಮಿನ್ ಭಾಂಸಿ ವಾ । ತದೇತದಸ್ಯಾಮೃಚ್ಯುದಾಹರಂತ್ಯಪಿ ನಿಗಮೋ ಭವತಿ ॥**
>
> (ನಿ. ೫-೨೭)

ಬೀರಿಟಶಬ್ದಕ್ಕೆ ಅಂತರಿಕ್ಷವೆಂದರ್ಥವು ಎಂದು ತೈಟೀಕಿ ಎಂಬ ಆಚಾರ್ಯರ ಮತವು. ಹೇಗೆಂದರೆ—ಈಶಬ್ದದ ಪೂರ್ವಾರ್ಧವಾದ **ಬೀ** ಅಥವಾ **ವೀ** ಎಂಬ ಎಂಬ ಅಕ್ಷರವು **ವೇ** ಧಾತುವಿನಿಂದಲೂ ಉತ್ತರಾರ್ಧವಾದ **ಈರಿಟ್** ಎಂಬ ಭಾಗವು **ಈರ್** ಎಂಬ ಧಾತುವಿನಿಂದಲೂ ನಿಷ್ಪನ್ನವಾಗಿ **ವೇರಿಟಂ** ಅಥವಾ **ಬೀರಿಟಂ** ಎಂದಾಗಿದೆ. **ವಿ** ಎಂದರೆ

ಪಕ್ಷಿಗಳು **ಈರ್** ಎಂದರೆ ಸಂಚರಿಸು ಎಂದರ್ಥವು. **ಇರತೇರ್ವಯೋಂಸೀರಂತ್ಯಸ್ಮಿನ್** | ಪಕ್ಷಿಗಳು ಇದರಲ್ಲಿ (ಅಂತರಿಕ್ಷದಲ್ಲಿ) ಸಂಚರಿಸುವುದರಿಂದ ವೀರಿಟ ಅಥವಾ ಬೀರಿಟಶಬ್ದಕ್ಕೆ ಅಂತರಿಕ್ಷವೆಂಬ ಅರ್ಥವು ಉಚಿತವಾಗಿದೆ. ಅಥವಾ **ಭಾಂಸಿ ವಾ** ಎಂದರೆ **ಭಾಸೋಽತ್ರ ನಕ್ಷತ್ರಾದೀನಾಂ ತನ್ವಂತೇ** ಈ ಅಂತರಿಕ್ಷದಲ್ಲಿ ಪ್ರಕಾಶಮಾನವಾದ ನಕ್ಷತ್ರಾದಿ ಜ್ಯೋತಿರ್ಮಂಡಲಗಳ ಚಲನವಲನಗಳಿರುವುದರಿಂದ **ಬೀರಿಟಂ** ಎಂದರೆ ಅಂತರಿಕ್ಷವು ಎಂದೂ ಹೇಳಬಹುದು ಈ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ ಯಾಸ್ಕರು ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರ್ವಚನವನ್ನು ಹೇಳಿದಾರೆ —

> **ಪ್ರವೃಜ್ಯತೇ ಸುಪ್ರಾಯಣಂ ಬರ್ಹಿರೇಷಾಮೇಯಾತೇ ಸರ್ವಸ್ಯ ಪಾತಾರೌ ವಾ ಪಾಲಯಿತಾರೌ ವಾ | ಬೀರಿಟಮಂತರಿಕ್ಷಂ ಭಿಯೋ ವಾ ಭಾಸೋ ವಾ ತತಿಃ | ಅಪಿ ವೋಪಮಾರ್ಥೇ ಸ್ಯಾತ್ ಸರ್ವಪತೀ ಇವ ರಾಜಾನೌ ಬೀರಿಟೇ ಗಣೇ ಮನುಷ್ಯಾಣಾಂ ರಾತ್ರ್ಯಾ ವಿವಾಸೇ ಪೂರ್ವಸ್ಯಾಮಭಿಹೂತೌ ವಾಯುಶ್ಚ ನಿಯುತ್ವಾನ್ ಪೂಷಾ ಚ ಸ್ವಸ್ತ್ಯಯನಾಯ || ನಿಯುತ್ವಾನ್ ನಿಯುತೋಽಸ್ಯಾಶ್ವಾಃ ನಿಯುತೋ ನಿಯಮನಾದ್ವಾ ನಿಯೋಜನಾದ್ವಾ ||**
>
> (ನಿ ೫ ೨೮)

ಪ್ರಕೃತ ಋಕ್ಕಿನಲ್ಲಿ ವಾಯು ಮತ್ತು ಪೂಷನ್ ಎಂಬ ದೇವತೆಗಳನ್ನು ಸ್ತುತಿಸಲಾಗಿದೆ ಈ ದೇವತೆಗಳು ಸಮಸ್ತಕ್ಕೂ ಎಂದರೆ ಸಮಸ್ತರಿಗೂ ಪಾಲಕರಾದವರು ಎಂದರೆ ಎಲ್ಲರನ್ನೂ ಕಾಪಾಡತಕ್ಕವರು ಇಂತಹ ಈ ದೇವತೆಗಳ ಆಗಮನಕ್ಕಾಗಿ ಯಜ್ಞವೇದಿಯಲ್ಲಿ ಮೆತ್ತಗಿರುವ ಬರ್ಹಿಃ ಎಂಬ ದರ್ಭೆಗಳು ಆಸನಾರ್ಥವಾಗಿ ಹರಡಲ್ಪಡುತ್ತದೆ **ಬೀರಿಟಂ** ಎಂದರೆ ಅಂತರಿಕ್ಷವು ಇದರಲ್ಲಿ ಭಯವು ಅಥವಾ ಬೆಳಕು ತುಂಬಿರುವುದರಿಂದ ಬೀರಿಟಂ ಎಂದರೆ ಅಂತರಿಕ್ಷವು ಎಂದರ್ಥವು. ಅಥವಾ ಈ ಶಬ್ದವನ್ನು ಉಪಮಾನ (ಹೋಲಿಕೆ)ವನ್ನು ಸೂಚಿಸುವುದಕ್ಕಾಗಿಯೂ ಉಪಯೋಗಿಸಬಹುದು ಈ ಉಪಮಾರ್ಥದಲ್ಲಿ ಬೀರಿಟೆ ಎಂದರೆ ಗಣೇ (ಸಮೂಹದಲ್ಲಿ) ಎಂದು ಅರ್ಥವನ್ನು ಹೇಳಬೇಕು ಸರ್ವರಿಗೂ ಪಾಲಕರಾದ ರಾಜರು ಮನುಷ್ಯರ ಗುಂಪಿನಲ್ಲಿ ಬಂದಾಗ ಹೇಗೆ ಗೌರವಾನ್ವಿತರಾಗಿ ಪ್ರಕಾಶಿಸುವರೋ ಅದರಂತೆ ಎಂದು ಬೀರಿಟಶಬ್ದಕ್ಕೆ ಗಣ ಅಥವಾ ಗುಂಪು ಎಂಬರ್ಥವನ್ನು ಹೇಳಬಹುದು. **ಉಷಸಃ ಪೂರ್ವಹೂತೌ** ಎಂದರೆ **ರಾತ್ರ್ಯಾ ವಿವಾಸೇ ಪೂರ್ವಸ್ಯಾಮಭಿಹೂತೌ** ರಾತ್ರಿಯ ಕೊನೆಯ ಭಾಗದಲ್ಲಿ ಎಂದರೆ ಉಷಸ್ಸಿನ ಆವಿರ್ಭಾವಕಾಲದಲ್ಲಿ ಈ ವಾಯುದೇವನೂ ಪೂಷನೂ ಜಗತ್ತಿಗೆ ಮಂಗಳವನ್ನುಂಟುಮಾಡುವುದಕ್ಕಾಗಿ ಅಂತರಿಕ್ಷದಲ್ಲಿ ದಯಮಾಡಲಿ ಇಲ್ಲಿ **ನಿಯುತ್ವಾನ್** ಎಂಬ ಶಬ್ದಕ್ಕೆ **ನಿಯುತ್** ಎಂಬ ಅಶ್ವಗಳುಳ್ಳ ವಾಯುದೇವನು ಎಂದರ್ಥವು ವಾಯುದೇವನ ಅಶ್ವಗಳಿಗೆ **ನಿಯುತಃ** ಎಂದು ಹೆಸರು (ನಿ ೨ ೨೮) ಈ ವಿಶೇಷಣವು ವಾಯುವಿಗೆ ಮಾತ್ರ ಸಂಬಂಧಪಟ್ಟಿರುವುದು. ಪೂಷನಿಗೆ ಅಲ್ಲ ನಿಯುತಶಬ್ದಕ್ಕೆ-ಈ ಅಶ್ವದ ಗಮನವು **ನಿಯಮನಾದ್ವಾ** ನಿಯಮನಕ್ಕೆ (ಸಾರಥಿಯ ಹತೋಟಿಗೆ) ಒಳಪಟ್ಟಿರುವುದು ಅಥವಾ **ನಿಯೋಜನಾದ್ವಾ**— ಈ ಅಶ್ವವನ್ನು ರಥಕ್ಕೆ ಹೂಡುವರು ಆದ್ದರಿಂದ ವಾಯುವಿನ ಅಶ್ವಕ್ಕೆ **ನಿಯುತ್** ಎಂಬ ಹೆಸರು ಬಂದಿರುವುದು ಎಂದು ನಿರ್ವಚನಾಭಿಪ್ರಾಯವು

**ಸಂಹಿತಾಪಾಠಃ**

## ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ |

ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ
ನೋ ಅಸ್ಯ ೩ ||

ಪದಪಾಠಃ

ಜ್ಮಯಾಃ । ಅತ್ರ । ವಸವಃ । ರಂತ । ದೇವಾಃ । ಉರೌ । ಅಂತರಿಕ್ಷೇ । ಮರ್ಜಯಂತ । ಶುಭ್ರಾಃ ।

ಅರ್ವಾಕ್ । ಪಥಃ । ಉರುऽಜ್ರಯಃ । ಕೃಣುಧ್ವಂ । ಶ್ರೋತ । ದೂತಸ್ಯ । ಜಗ್ಮುಷಃ । ನಃ । ಅಸ್ಯ ।

ಸಾಯಣಭಾಷ್ಯಂ

ವಸವೋ ವಸುಸಂಜ್ಞಕಾ ದೇವಾ ಅತ್ರಾಸ್ಮಿನ್ಯಜ್ಞೇ ಜ್ಮಯಾಃ ಪೃಥಿವ್ಯಾಂ ಭವಾ ರಂತ । ರಮಯಂತಾಂ । ಉರೌ ವಿಸ್ತೀರ್ಣೇऽಂತರಿಕ್ಷೇ ಸ್ಥಿತಾಃ ಶುಭ್ರಾ ದೀಪ್ಯಮಾನಾ ಮರುತಶ್ಚ ಮರ್ಜಯಂತ । ಪರಿಚರ್ಯಂತೇ । ಹೇ ಉರುಜ್ರಯಃ ಪ್ರಭೂತಗಮನಾ ವಸವೋ ಮರುತಶ್ಚ ಯೂಯಂ ಪಥೋ ಯುಷ್ಮದೀಯಾನ್ಮಾರ್ಗಾನರ್ವಾಗಸ್ಮದಭಿಮುಖಂ ಯಥಾ ಭವತಿ ತಥಾ ಕೃಣುಧ್ವಂ । ಕುರುತ । ಅಪಿ ಚ ಯೂಯಂ ಜಗ್ಮುಷೋ ಯುಷ್ಮಾನ್ಪ್ರತಿ ಗತವತೋ ನೋऽಸ್ಮದೀಯಸ್ಯಾಸ್ಯ ದೂತಸ್ಯಾಗ್ನೇರಾಹ್ವಾನಂ ಶ್ರೋತ । ಶೃಣುತ । ಅಗ್ನಿರ್ಹಿ ಯಜಮಾನಾನಾಂ ದೂತಃ ಸನ್ದೇವಾನಾಹ್ವಯತೀತ್ಯರ್ಥಃ ||

ಪ್ರತಿಪದಾರ್ಥ

**ವಸವಃ**—ವಸುಸಂಜ್ಞಕರಾದ । **ದೇವಾಃ**—ದೇವತೆಗಳು । **ಅತ್ರ**—ಈ ಯಜ್ಞದಲ್ಲಿ । **ಜ್ಮಯಾಃ**—ಪೃಥ್ವಿಯಿಂದ ಉತ್ಪನ್ನರಾದವರಾಗಿ । **ರಂತ**—ಕ್ರೀಡಿಸಲಿ । **ಉರೌ**—ವಿಸ್ತೃತವಾದ । **ಅಂತರಿಕ್ಷೇ**—ಅಂತರಿಕ್ಷಸ್ಥರೂ । **ಶುಭ್ರಾಃ**—ಪ್ರಕಾಶಮಾನರೂ ಆದ ಮರುತ್ತುಗಳು । **ಮರ್ಜಯಂತ**—ಸೇವಿಸಲ್ಪಡುತ್ತಾರೆ. । **ಉರುಜ್ರಯಃ**—ವೇಗಗಾಮಿಗಳಾದ ಎಲೈ ಮರುತ್ತುಗಳೇ, ಮತ್ತು ವಸುಗಳೇ । **ಪಥಃ**—ನಮ್ಮ ಯಜ್ಞಮಾರ್ಗಕ್ಕೆ । **ಅರ್ವಾಕ್**—ಅಭಿಮುಖವಾಗಿರುವಂತೆ । **ಕೃಣುಧ್ವಂ**—ನಿಮ್ಮ ಸಂಚಾರವನ್ನು ಕಲ್ಪಿಸಿರಿ । **ಜಗ್ಮುಷಃ**—ನಿಮ್ಮ ಕಡೆಗೆ ಬರುತ್ತಿರುವವನೂ । **ನಃ**—ನಮ್ಮ ಪರವಾದ । **ಅಸ್ಯ ದೂತಸ್ಯ**—ದೇವದೂತನೂ ಆದ ಈ ಅಗ್ನಿಯ ಆಹ್ವಾನವನ್ನು । **ಶ್ರೋತ**—ಕೇಳಿರಿ.

ಭಾವಾರ್ಥ

ವಸುಸಂಜ್ಞಕರಾದ ದೇವತೆಗಳು ಈ ಯಜ್ಞದಲ್ಲಿ ಪೃಥ್ವಿಯಲ್ಲಿ ಇದ್ದುಕೊಂಡು ಕ್ರೀಡಿಸಲಿ. ವಿಸ್ತೃತವಾದ ಅಂತರಿಕ್ಷಸ್ಥರೂ ಪ್ರಕಾಶಮಾನರೂ ಆದ ಮರುತ್ತುಗಳು ಸೇವಿಸಲ್ಪಡುತ್ತಾರೆ. ವೇಗಗಾಮಿಗಳಾದ ಎಲೈ ಮರುತ್ತುಗಳೇ, ಮತ್ತು ಎಲೈ ವಸುಗಳೇ, ನಿಮ್ಮ ಸಂಚಾರವು ನಮ್ಮ ಯಜ್ಞಕ್ಕೆ ಅಭಿಮುಖವಾಗಿರುವಂತಿರಲಿ. ನಿಮ್ಮ ಕಡೆಗೆ ಬರುತ್ತಿರುವವನೂ, ನಮ್ಮ ಪರವಾದ ದೇವದೂತನೂ ಆದ ಈ ಅಗ್ನಿಯ ಆಹ್ವಾನವನ್ನು ಕೇಳಿರಿ.

English Translation

May the divine Vasus sport in this occasion upon the earth : the brilliant (Maruts) in the expansive firmament are being worshipped : swift-moving deities, direct your paths towards us · hear (the words) of this our messenger, (Agni), approaching to you.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ವಸುಗಳನ್ನೂ, ಮರುದ್ದೇವತೆಗಳನ್ನೂ ಸ್ತುತಿಸಲಾಗಿದೆ ವಸುಗಳು ಯಾರು ಎಂಬ ವಿಷಯದಲ್ಲಿ ಯಾಸ್ಕರು ಈರೀತಿ ನಿರ್ವಚನವನ್ನು ಹೇಳಿದಾರೆ —

**ವಸವೋ ಯದ್ವಿವಸತೇ ಸರ್ವಮಗ್ನಿರ್ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾತ್ ಪೃಥಿವೀ-ಸ್ಥಾನಾಃ । ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾನ್ಮಧ್ಯಸ್ಥಾನಾಃ । ವಸವ ಆ-ದಿತ್ಯ ರಶ್ಮಯೋ ವಿವಾಸನಾತ್ತಸ್ಮಾದ್ದ್ಯುಸ್ಥಾನಾಃ ॥**

(ನಿ ೧೨-೪೧)

ವಸವಃ ಎಂಬ ಶಬ್ದಕ್ಕೆ ಸರ್ವವನ್ನೂ ಆಚ್ಛಾದಿಸಿ ವ್ಯಾಪಿಸಿರುವವರು ಎಂದರ್ಥವು ಹೇಗೆಂದರೆ ವಸವಃ ಎಂಬ **(ಅಷ್ಟೌ ವಸವಃ)** ದೇವತೆಗಳ ಗುಂಪಿನಲ್ಲಿ ಅಗ್ನಿಯೂ ಸೇರಿರುವುದರಿಂದಲೂ ಅಗ್ನಿಯು ಪೃಥಿವೀಸ್ಥಾನದೇವತೆಯಾದ್ದರಿಂದಲೂ ವಸುಗಳು ಪೃಥಿವಿಯನ್ನು ವ್ಯಾಪಿಸಿದಂತಾಯಿತು ಮತ್ತೂ ಇವರ ಗುಂಪಿನಲ್ಲಿ ಇಂದ್ರನೂ ಸೇರಿರುವುದರಿಂದಲೂ ಇಂದ್ರನು ಮಧ್ಯಸ್ಥಾನದೇವತೆಯಾದ್ದರಿಂದಲೂ ವಸುಗಳು ಮಧ್ಯಸ್ಥಾನವನ್ನು (ಅಂತರಿಕ್ಷವನ್ನು) ವ್ಯಾಪಿಸಿದಂತಾಯಿತು ಇನ್ನು ವಸವಃ ಎಂಬ ಶಬ್ದಕ್ಕೆ ಆದಿತ್ಯನ ರಶ್ಮಿಗಳು ಎಂದರ್ಥವಾದ್ದರಿಂದಲೂ ಆದಿತ್ಯನ ರಶ್ಮಿಗಳು ಸ್ವರ್ಗವನ್ನೆಲ್ಲಾ ವ್ಯಾಪಿಸಿ ಪ್ರಕಾಶಪಡಿಸುವುದರಿಂದಲೂ ವಸುಗಳು ಸ್ವರ್ಗ ಅಥವಾ ದ್ಯುಸ್ಥಾನವನ್ನು ವ್ಯಾಪಿಸಿದಂತಾಯಿತು ಆದ್ದರಿಂದ ಈ ವಸುಗಳು ತ್ರಿಸ್ಥಾನ ಎಂದರೆ ಪೃಥಿವೀ, ಅಂತರಿಕ್ಷ, ದ್ಯೌ ಎಂಬ ಲೋಕಗಳನ್ನೆಲ್ಲಾ ವ್ಯಾಪಿಸಿರುವುದರಿಂದ ಇವರಿಗೆ ವಸವಃ ಎಂಬ ಹೆಸರು ಬಂದಿದೆ ಈ ವಸವಃ ಎಂಬ ಶಬ್ದಪ್ರಯೋಗವಿರುವ ಎರಡು ಮಂತ್ರಗಳನ್ನು ಯಾಸ್ಕರು ಇಲ್ಲಿ ಉದಾಹರಣೆಗಾಗಿ ಕೊಟ್ಟಿದಾರೆ ಒಂದು ವಾಜಸನೇಯಸಂಹಿತೆಯ (ಶುಕ್ಲಯಜುರ್ವೇದ) ಮಂತ್ರವು, ಮತ್ತೊಂದು ಪ್ರಕೃತ ಋಕ್ಕು ಈ ಋಕ್ಕಿಗೂ ನಿರ್ವಚನವನ್ನು ಹೇಳಿದಾರೆ —

**ಜ್ಮಯಾ ಅತ್ರ ವಸವೋಽರಮಂತ ದೇವಾ ಜ್ಮಾ ಪೃಥಿವೀ ತಸ್ಯಾಂ ಭವಾ ಉರೌ ಚಾಂತರಿಕ್ಷೇ ಮಾರ್ಜಯಂತ ಗಮಯಂತ ಶುಭ್ರಾಃ ಶೋಭಮಾನಾ ಅರ್ವಾಚ ಏನಾನ್ ಪಥೋ ಬಹು ಜನಾಃ ಕುರುಧ್ವಂ ಶೃಣುತ ದೂತಸ್ಯ ಜಗ್ಮುಷೋ ನೋ ಅಸ್ಯಾಗ್ನೇಃ ॥**

(ನಿ ೧೨ ೪೩)

ಭೂಮಿಯಲ್ಲಿರುವ ವಸುಗಳು ಭೂಮಿಯಿಂದ ಸಹಿತರಾಗಿ ಸಂತೋಷಚಿತ್ತರಾಗಿ ಕ್ರೀಡಿಸಲಿ ಇಲ್ಲಿ **ಜ್ಮಾ** ಎಂದರೆ ಪೃಥಿವಿಯು (ನಿ ೨-೫) ಆ ಪೃಥಿವಿಯಲ್ಲಿ ಇರುವವರು ವಸುಗಳು ಮತ್ತು ಈ ವಸುಗಳು ವಿಸ್ತಾರವಾದ ಅಂತರಿಕ್ಷದಲ್ಲಿಯೂ ವಾಸಿಸುವರು. ಇವರು ಬಹಳ ಪ್ರಕಾಶಮಾನರಾಗಿಯೂ ಇರುವರು ಎಲೈ ಶೀಘ್ರಗಾಮಿಗಳಾದ ಮರುತ್ತುಗಳೇ ಮತ್ತು ವಸುಗಳೇ ನಮ್ಮ ಅಭಿಮುಖವಾಗಿರುವ ಈ ಮಾರ್ಗದಲ್ಲಿ ಬನ್ನಿರಿ ಮತ್ತೂ ದೂತಭಾವವನ್ನು ವಹಿಸಿ ನಿಮ್ಮ ಬಳಿಗೆ ಬರುತ್ತಿರುವ ಈ ಅಗ್ನಿಯ ಆಹ್ವಾನರೂಪವಾದ ವಚನಗಳನ್ನು ಕೇಳಿರಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು

ಸಂಹಿತಾಪಾಠಃ

ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।

ತಾ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ॥೪॥

ಪದಪಾಠಃ

ತೇ । ಹಿ । ಯಜ್ಞೇಷು । ಯಜ್ಞಿಯಾಸಃ । ಊಮಾಃ । ಸಧಽಸ್ಥಂ । ವಿಶ್ವೇ । ಅಭಿ । ಸಂತಿ । ದೇವಾಃ ।

ತಾನ್ । ಅಧ್ವರೇ । ಉಶತಃ । ಯಕ್ಷಿ । ಅಗ್ನೇ । ಶ್ರುಷ್ಟೀ । ಭಗಂ । ನಾಸತ್ಯಾ । ಪುರಂಽಧಿಂ ॥ ೪ ॥

ಸಾಯಣಭಾಷ್ಯಂ

ಯಜ್ಞೇಷು ಯಾಗೇಷು ತೇ ಹಿ ತೇ ಖಲು ಪ್ರಸಿದ್ಧಾ ಯಜ್ಞಿಯಾಸೋ ಯಜ್ಞಾರ್ಹಾ ಊಮಾ ರಕ್ಷಕಾ ವಿಶ್ವೇ ಸರ್ವೇ ದೇವಾಃ ಸಧಸ್ಥಂ ಸಹಸ್ಥಾನಮಭಿ ಸಂತಿ । ಅಭಿಭವಂತಿ । ಆಕ್ರಾಮಂತಿ । ಹೇ ಅಗ್ನೇ ಅಧ್ವರೇಽಸ್ಮದೀಯೇ ಯಜ್ಞ ಉಶತಃ ಕಾಮಯಮಾನಾಂಸ್ತಾನ್ದೇವಾನ್ಯಕ್ಷಿ । ಯಜ । ತಥಾ ಶ್ರುಷ್ಟೀ । ಕ್ಷಿಪ್ರನಾಮ್ಯೇತತ್ । ಕ್ಷಿಪ್ರಂ ಭಗಮೇತತ್ಸಂಜ್ಞಕಂ ದೇವಂ ನಾಸತ್ಯಾ ನಾಸತ್ಯಾವಶ್ವಿನೌ ಚ ಪುರಂಧಿಂ ಪುರೂಣಾಂ ಧ್ಯಾತಾರಮಿಂದ್ರಂ ಚ ಯಜ ॥

ಪ್ರತಿಪದಾರ್ಥ

**ಯಜ್ಞೇಷು**—ನಮ್ಮ ಯಾಗಸಮಯಗಳಲ್ಲಿ । **ತೇ ಹಿ**—ಪ್ರಸಿದ್ಧರೂ । **ಯಜ್ಞಿಯಾಸಃ**—ಪೂಜಾರ್ಹರೂ **ಊಮಾಃ**—ರಕ್ಷಕರೂ ಆದ । **ವಿಶ್ವೇ ದೇವಾಃ**—ಸಕಲದೇವತೆಗಳೂ । **ಸಧಸ್ಥಂ**—ಯಜ್ಞಸ್ಥಾನವನ್ನು । **ಅಭಿಸಂತಿ**—ಸುತ್ತಲೂ ಆಕ್ರಮಿಸುತ್ತಾರೆ । **ಅಗ್ನೇ**—ಎಲೈ ಅಗ್ನಿಯೇ, । **ಅಧ್ವರೇ**—ನಮ್ಮ ಯಜ್ಞದಲ್ಲಿ । **ಉಶತಃ**—ಯಜ್ಞಾಪೇಕ್ಷಿಗಳಾದ । **ತಾನ್**—ಆ ದೇವತೆಗಳನ್ನು । **ಯಕ್ಷಿ**—ಪೂಜಿಸು. । **ಶ್ರುಷ್ಟೀ**—ಕ್ಷಿಪ್ರವಾಗಿ । **ಭಗಂ**—ಭಗದೇವನನ್ನೂ । **ನಾಸತ್ಯಾ**—ಅಶ್ವಿನೀದೇವತೆಗಳನ್ನೂ । **ಪುರಂಧಿಂ**—ಇಂದ್ರನನ್ನೂ ಆರಾಧಿಸು

ಭಾವಾರ್ಥ

ನಮ್ಮ ಯಾಗಸಮಯಗಳಲ್ಲಿ ಪ್ರಸಿದ್ಧರೂ, ಪೂಜಾರ್ಹರೂ ರಕ್ಷಕರೂ ಆದ ಸಕಲ ದೇವತೆಗಳೂ ಯಜ್ಞಸ್ಥಾನವನ್ನು ಆಕ್ರಮಿಸುತ್ತಾರೆ ಎಲೈ ಅಗ್ನಿಯೇ. ನಮ್ಮ ಯಜ್ಞದಲ್ಲಿ ಯಜ್ಞಾಪೇಕ್ಷಿಗಳಾದ ಆ ದೇವತೆಗಳನ್ನು ಪೂಜಿಸು. ಭಗನನ್ನೂ, ಅಶ್ವಿನೀದೇವತೆಗಳನ್ನೂ ಇಂದ್ರನನ್ನೂ ಕ್ಷಿಪ್ರವಾಗಿ ಆರಾಧಿಸು

English Translation

These universal adorable guardian deities occupy a common station at sacrifices . worship, Agni, those divinities, deservers (of oblations) at the ceremony, the swift Bhaga, the Nasatyas and Purandhi.

ಸಂಹಿತಾಪಾಠಃ

ಆಗ್ನೇ ಗಿರೋ ದಿವ ಆ ಪೃಥಿವ್ಯಾ ಮಿತ್ರಂ ವಹ ವರುಣಮಿಂದ್ರಮಗ್ನಿಂ ।

ಆರ್ಯಮಣಮದಿತಿಂ ವಿಷ್ಣುಮೇಷಾಂ ಸರಸ್ವತೀ ಮರುತೋ ಮಾದ-

ಯಂತಾಂ ॥ ೫ ॥

ಪದಪಾಠಃ

ಆ । ಅಗ್ನೇ । ಗಿರಃ । ದಿವಃ । ಆ । ಪೃಥಿವ್ಯಾಃ । ಮಿತ್ರಂ । ವಹ । ವರುಣಂ । ಇಂದ್ರಂ । ಅಗ್ನಿಂ ।

ಆ । ಅರ್ಯಮಣಂ । ಅದಿತಿಂ । ವಿಷ್ಣುಂ । ಏಷಾಂ । ಸರಸ್ವತೀ । ಮರುತಃ । ಮಾದಯಂತಾಂ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ದಿವೋ ದ್ಯುಲೋಕಾತ್ಸಕಾಶಾದ್ಗಿರೋ ಗರಣೀಯಾನ್ ಸ್ತುತ್ಯಾನ್ದೇವಾನಸ್ಮದೀಯಂ ಯಜ್ಞಂ ಪ್ರತ್ಯಾ ವಹ । ಆಹ್ವಾನಂ ಕುರು । ಪೃಥಿವ್ಯಾ ಅಂತರಿಕ್ಷಾಚ್ಚಾ ವಹ । ಕಾನ್ದೇವಾನಿತಿ ತದುಚ್ಯತೇ । ಮಿತ್ರಮೇತತ್ಸಂಜ್ಞಕಂ ವರುಣಂ ಚೇಂದ್ರಂ ಚ ದೇವೇಷು ದೇವತಾಸ್ವರೂಪೇಣಾವಸ್ಥಿತಂ ಚಾಗ್ನಿಮರ್ಯಮಣಮೇತತ್ಸಂಜ್ಞಕಮದಿತಿಮದೀನಾಂ ಪೃಥಿವೀಂ ಚ ವಿಷ್ಣುಂ ಚ । ಏವಂಭೂತಾನ್ದೇವಾನೇಷಾಮಸ್ಮಾಕಂ ಯಜಮಾನಾನಾಮರ್ಥಾಯಾ ವಹ । ಸರಸ್ವತೀ ವಾಗ್ದೇವತಾ ಚ ಮರುತಶ್ಚ ಮಾದಯಂತಾಂ । ಅಸ್ಮದೀಯೈಃ ಸ್ತೋತ್ರೈರ್ಹವಿರ್ಭಿಶ್ಚ ಮಾದ್ಯಂತು ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ದಿವಃ**—ದ್ಯುಲೋಕದಿಂದ । **ಗಿರಃ**—ಸ್ತುತ್ಯರ್ಹರಾದ ದೇವತೆಗಳನ್ನು । **ಆ ವಹ**—ನಮ್ಮ ಯಜ್ಞಕ್ಕೆ ಕರೆದುಕೊಂಡು ಬಾ । **ಪೃಥಿವ್ಯಾಃ**—ಪೃಥ್ವಿಯಿಂದಲೂ । **ಆ**—ಕರೆದುಕೊಂಡು ಬಾ । **ಮಿತ್ರಂ**—ಮಿತ್ರನನ್ನೂ । **ವರುಣಂ**—ವರುಣನನ್ನೂ । **ಇಂದ್ರಂ**—ಇಂದ್ರನನ್ನೂ । **ಅಗ್ನಿಂ**—ಅಗ್ನಿದೇವನನ್ನೂ । **ಅರ್ಯಮಣಂ**—ಅರ್ಯಮನನನ್ನೂ । **ಅದಿತಿಂ**—ಪೃಥ್ವಿಯನ್ನೂ । **ವಿಷ್ಣುಂ**—ವಿಷ್ಣುವನ್ನೂ । **ಏಷಾಂ**—ಯಜಮಾನರಾದ ನಮಗಾಗಿ । **ಆ**—ಕರೆದುಕೊಂಡು ಬಾ । **ಸರಸ್ವತೀ**—ಸರಸ್ವತೀದೇವಿಯೂ । **ಮರುತಃ**—ಮರುದ್ದೇವತೆಗಳೂ **ಮಾದಯಂತಾಂ**—ನಮ್ಮ ಯಜ್ಞಹವಿಸ್ಸುಗಳಿಂದ ತೃಪ್ತರಾಗಲಿ.

ಭಾವಾರ್ಥ

ಎಲೈ ಅಗ್ನಿಯೇ, ದ್ಯುಲೋಕದಿಂದ ಸ್ತುತ್ಯರ್ಹರಾದ ದೇವತೆಗಳನ್ನು ನಮ್ಮ ಯಜ್ಞಕ್ಕೆ ಕರೆದುಕೊಂಡು ಬಾ. ಪೃಥ್ವಿಯಿಂದಲೂ ಕರೆದುಕೊಂಡು ಬಾ. ಮಿತ್ರನನ್ನೂ, ವರುಣನನ್ನೂ, ಇಂದ್ರನನ್ನೂ, ಅಗ್ನಿದೇವನನ್ನೂ, ಅರ್ಯಮನನ್ನೂ, ಪೃಥ್ವಿಯನ್ನೂ, ವಿಷ್ಣುವನ್ನೂ, ಯಜಮಾನರಾದ ನಮಗಾಗಿ ಕರೆದುಕೊಂಡು ಬಾ. ಸರಸ್ವತೀದೇವಿಯೂ, ಮರುದ್ದೇವತೆಗಳೂ ನಮ್ಮ ಹವಿಸ್ಸುಗಳಿಂದ ತೃಪ್ತರಾಗಲಿ.

English Translation

Bring, Agni, whether from heaven or earth, the adorable deities, Mitra, Varuna, Indra and Agni, Aryaman, Aditi and Vishnu, (for the good) of these (worshippers) and may Saraswati and Maruts be delighted (by our offerings)

ಸಂಹಿತಾಪಾಠಃ

ರರೇ ಹವ್ಯಂ ಮತಿಭಿರ್ಯಜ್ಞಿಯಾನಾಂ ನಕ್ಷತ್ಕಾಮಂ ಮರ್ತ್ಯಾನಾಮಸಿನ್ವನ್।

ಧಾತಾ ರಯಿಮವಿದಸ್ಯಂ ಸದಾಸಾಂ ಸಕ್ಷೀಮಹಿ ಯುಜ್ಯೇಭಿರ್ನು ದೇವೈಃ ॥

ಪದಪಾಠಃ

ಠರೇ | ಹವ್ಯಂ | ಮತಿಽಭಿಃ | ಯಜ್ಞಿಯಾನಾಂ | ನಕ್ಷತ್ | ಕಾಮಂ | ಮರ್ತ್ಯಾನಾಂ | ಅಸಿನ್ವನ್ |

ಧಾತ | ರಯಿಂ | ಅವಿಽದಸ್ಯಂ | ಸದಾಽಸಾಂ | ಸಕ್ಷೀಮಹಿ | ಯುಜ್ಯೇಭಿಃ | ನು | ದೇವೈಃ || ೬ ||

ಸಾಯಣಭಾಷ್ಯಂ

ಯಜ್ಞಿಯಾನಾಂ | ಚತುರ್ಥ್ಯರ್ಥೇ ಷಷ್ಠೀ | ಯಜ್ಞಾರ್ಹೇಭ್ಯೋ ದೇವೇಭ್ಯೋ ಮತಿಭಿರಸ್ಮದೀಯಾಭಿಃ ಸ್ತುತಿಭಿಃ ಸಹ ಹವ್ಯಂ ಹವಿಃ ಠರೇ | ಅಸ್ಮಾಭಿರ್ದೀಯತೇ | ಮರ್ತ್ಯಾನಾಂ ಮನುಷ್ಯಾಣಾಮಸ್ಮಾಕಂ ಕಾಮಮಭಿಲಾಷಮಸಿನ್ವನ್ನಪ್ರತಿಬಧ್ನನ್ನಗ್ನಿರ್ನಕ್ಷತ್ | ಅಸ್ಮದೀಯಂ ಯಜ್ಞಂ ವ್ಯಾಪ್ನೋತು | ಹೇ ದೇವಾಃ ಯೂಯಮವಿದಸ್ಯಮನುಪಕ್ಷಪಣೀಯಂ ಸದಾಸಾಂ ಸರ್ವದಾ ಸಂಭಜನೀಯಂ ರಯಿಂ ಧನಂ ಧಾತ | ಅಸ್ಮಭ್ಯಂ ದತ್ತ | ನ್ವದ್ಯ ವಯಂ ಯುಜ್ಯೇಭಿಃ ಸಹಾಯಭೂತೈರಿಹ ಯಜ್ಞೇ ಸಮಾಗತೈರ್ದೇವೈಃ ಸಕ್ಷೀಮಹಿ | ಯದ್ವಾ | ಸ್ವಿತ್ಯುಪಮಾರ್ಥೇ | ಯುಜ್ಯೇಭಿರ್ಬಂಧುಭಿರಿವ ದೇವೈಃ ಸಕ್ಷೀಮಹಿ ||

ಪ್ರತಿಪದಾರ್ಥ

**ಯಜ್ಞಿಯಾನಾಂ**—ಪೂಜಾರ್ಹರಾದ ದೇವತೆಗಳಿಗೆ | **ಮತಿಭಿಃ**—ನಮ್ಮ ಸ್ತುತಿಗಳೊಡಗೂಡಿದ | **ಹವ್ಯಂ**—ಹವಿಸ್ಸು | ಠರೇ—ಅರ್ಪಿತವಾಗುತ್ತದೆ | **ಮರ್ತ್ಯಾನಾಂ**—ಯಜಮಾನರಾದ ನಮ್ಮ | **ಕಾಮಂ**—ಇಷ್ಟಾರ್ಥವನ್ನು | **ಅಸಿನ್ವನ್**—ತಡೆಯದಿರುವ ಅಗ್ನಿಯು | **ನಕ್ಷತ್**—ನಮ್ಮ ಯಜ್ಞದೊಂದಿಗೆ ಐಕ್ಯವಾಗಲಿ | (ಎಲೈ ದೇವತೆಗಳೇ,) **ಅವಿದಸ್ಯಂ**—ನಾಶವಾಗದಿರುವುದೂ | **ಸದಾಸಾಂ**—ಸರ್ವದಾ ಪೂಜ್ಯವಾದುದೂ ಆದ | **ರಯಿಂ**—ಧನವನ್ನು | **ಧಾತ**—ನಮಗೆ ಕೊಡಿರಿ | **ನು**—ಈಗ | **ಯುಜ್ಯೇಭಿಃ**—ಯಜ್ಞದಲ್ಲಿ ಒಟ್ಟುಗೂಡಿರುವ | **ದೇವೈಃ**—ದೇವತೆಗಳೊಡನೆ | **ಸಕ್ಷೀಮಹಿ**—ಸೇರಿಕೊಳ್ಳುವೆವು

ಭಾವಾರ್ಥ

ಪೂಜಾರ್ಹರಾದ ದೇವತೆಗಳಿಗೆ ನಮ್ಮ ಸ್ತುತಿಗಳಿಂದ ಕೂಡಿದ ಹವಿಸ್ಸು ಅರ್ಪಿತವಾಗುತ್ತದೆ ಯಜಮಾನರಾದ ನಮ್ಮ ಇಷ್ಟಾರ್ಥವನ್ನು ತಡೆಯದ ಅಗ್ನಿಯು ಯಜ್ಞದೊಂದಿಗೆ ಐಕ್ಯವಾಗಲಿ ಎಲೈ ದೇವತೆಗಳೇ, ನಾಶವಾಗದಿರುವುದೂ, ಸರ್ವದಾ ಪೂಜ್ಯವಾದುದೂ ಆದ ಧನವನ್ನು ನಮಗೆ ಕೊಡಿರಿ ನಾವು ಈಗ ಯಜ್ಞದಲ್ಲಿ ಒಟ್ಟುಗೂಡಿರುವ ದೇವತೆಗಳೊಡನೆ ಸೇರಿಕೊಳ್ಳುವೆವು

English Translation

The oblation is offered together with praises to the adorable deities may (Agni), unaverse to the desire of mortals, be present bestow (upon us, gods), unwasting, all-benefiting riches, and may we to day be associated with the assembled deities

ಸಂಹಿತಾಪಾಠಃ

ನೂ ರೋದಸೀ ಅಭಿಷ್ಟುತೇ ವಸಿಷ್ಠೈರೃತಾವಾನೋ ವರುಣೋ ಮಿತ್ರೋ ಅಗ್ನಿಃ |

ಯಚ್ಛಂತು ಚಂದ್ರಾ ಉಪಮಂ ನೋ ಅರ್ಕಂ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೩ ॥

ಪದಪಾಠಃ

ನು । ರೋದಸೀ ಇತಿ । ಅಭಿಷ್ಟುತೇ ಇತ್ಯಭಿಽಸ್ತುತೇ । ವಸಿಷ್ಠೈಃ । ಋತಽವಾನಃ । ವರುಣಃ । ಮಿತ್ರಃ । ಅಗ್ನಿಃ ।
ಯಚ್ಛಂತು । ಚಂದ್ರಾಃ । ಉಪಽಮಂ । ನಃ । ಅರ್ಕಂ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ॥

ಸಾಯಣಭಾಷ್ಯಂ

ನ್ವದ್ಯ ರೋದಸೀ ದ್ಯಾವಾಪೃಥಿವ್ಯೌ ವಸಿಷ್ಠೈರಸ್ಮಾಭಿಃ । ಪೂಜಾರ್ಥಂ ಬಹುವಚನಂ । ಅಭಿಷ್ಟುತೇ ಅಭಿತಃ ಸರ್ವತಃ ಸ್ತುತೇ ಅಭೂತಾಂ । ತಥಾ ಋತಾವಾನೋಽಸ್ಮಾಭಿಃ ಕ್ರಿಯಮಾಣೈರ್ಯಜ್ಞೈರುಪೇತಾ ವರುಣೋ ಮಿತ್ರೋಽಗ್ನಿಶ್ಚೈವಂಭೂತಾ ದೇವಾ ಅಸ್ಮಾಭಿರಭಿಷ್ಟುತಾ ಆಸನ್ । ಚಂದ್ರಾ ಆಹ್ಲಾದಕಾ ದೇವಾ ನೋಽಸ್ಮಭ್ಯಮರ್ಕಮರ್ಚನೀಯಮನ್ನಮುಪಮಂ ಸರ್ವೋತ್ಕೃಷ್ಟಂ ಯಚ್ಛಂತು । ದದತು । ಸೂಕ್ತೇ ಪ್ರತಿಪಾದಿತಾ ಯೇ ದೇವಾಸ್ತೇ ಸರ್ವೇ ಯೂಯಂ ನೋಽಸ್ಮಾನ್ ಸ್ವಸ್ತಿಭಿರವಿನಾಶೈಃ ಸದಾ ಸರ್ವದಾ ಪಾತ । ಪಾಲಯತ ॥

ಪ್ರತಿಪದಾರ್ಥ

ನು—ಈಗ । ರೋದಸೀ—ದ್ಯಾವಾಪೃಥಿವಿಗಳು । ವಸಿಷ್ಠೈಃ—ವಸಿಷ್ಠಸಂಜ್ಞಕರಾದ ನಮ್ಮಿಂದ । ಅಭಿಷ್ಟುತೇ—ಸ್ತುತರಾಗುತ್ತಾರೆ । ಋತಾವಾನಃ—ಯಜ್ಞಯುಕ್ತರಾದ । ವರುಣಃ—ವರುಣನೂ । ಮಿತ್ರಃ—ಮಿತ್ರನೂ । ಅಗ್ನಿಃ—ಅಗ್ನಿಯೂ ನಮ್ಮಿಂದ ಸ್ತುತರಾಗುತ್ತಾರೆ । ಚಂದ್ರಾಃ—ಆಹ್ಲಾದಕಾರಕರಾದ ಸಕಲ ದೇವತೆಗಳೂ । ನಃ—ನಮಗೆ । ಉಪಮಂ—ಅತ್ಯುತ್ಕೃಷ್ಟವಾದ । ಅರ್ಕಂ—ಅನ್ನವನ್ನು । ಯಚ್ಛಂತು—ಕೊಡಲಿ (ಎಲೈ ದೇವತೆಗಳೇ) ಯೂಯಂ—ನೀವು । ನಃ—ನಮ್ಮನ್ನು । ಸದಾ—ಯಾವಾಗಲೂ । ಸ್ವಸ್ತಿಭಿಃ—ಕಲ್ಯಾಣಗಳಿಂದ । ಪಾತ—ರಕ್ಷಿಸಿರಿ

ಭಾವಾರ್ಥ

ದ್ಯಾವಾಪೃಥಿವಿಗಳು ವಸಿಷ್ಠಸಂಜ್ಞಕರಾದ ನಮ್ಮಿಂದ ಸ್ತುತರಾಗುತ್ತಾರೆ. ಯಜ್ಞಯುಕ್ತರಾದ ವರುಣ, ಮಿತ್ರ ಮತ್ತು ಅಗ್ನಿದೇವತೆಗಳು ನಮ್ಮಿಂದ ಸ್ತುತರಾಗುತ್ತಾರೆ ಆಹ್ಲಾದಕಾರಕರಾದ ಸಕಲದೇವತೆಗಳೂ ನಮಗೆ ಅತ್ಯುತ್ಕೃಷ್ಟವಾದ ಅನ್ನವನ್ನು ಕೊಡಲಿ ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Heaven and earth are now glorified by the Vashithas, as are Varuna, the object of worship, and Mitra and Agni may they, the conferrers of joy, bestow upon us excellent food and do you (all) ever cherish us with blessings.

———

# ನಲವತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಓ ಶ್ರುಷ್ಟಿರಿತಿ ಸಪ್ತರ್ಚಂ ಸಪ್ತಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವೈಶ್ವದೇವಂ । ಓ ಶ್ರುಷ್ಟಿರಿತ್ಯನುಕ್ರಾಂತಂ ॥ ವಿನಿಯೋಗೋ ಲೈಂಗಿಕಃ ॥**

**ಅನುವಾದವು**—**ಓ ಶ್ರುಷ್ಟಿಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಏಳನೆಯ **ಸೂಕ್ತವು.** ಇದರಲ್ಲಿ ಏಳು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ವಿಶ್ವೇದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಓ ಶ್ರುಷ್ಟಿಃ** ಎಂದು ಹೇಳಿರುವುದು ವಿನಿಯೋಗವು ಲೈಂಗಿಕವು.

## ಸೂಕ್ತ—೪೦

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೪೦ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ವಸಿಷ್ಠಃ ॥
ದೇವತಾ—ವಿಶ್ವೇದೇವಾಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಓ ಶ್ರುಷ್ಟಿರ್ವಿದಥ್ಯಾ೩ ಸಮೇತು ಪ್ರತಿಸ್ತೋಮಂ ದಧೀಮಹಿ ತುರಾಣಾಂ ।
ಯದದ್ಯ ದೇವಃ ಸವಿತಾ ಸುವಾತಿ ಸ್ಯಾಮಾಸ್ಯ ರತ್ನಿನೋ ವಿಭಾಗೇ ॥ ೧ ॥

ಪದಪಾಠಃ

**ಓ ಇತಿ । ಶ್ರುಷ್ಟಿಃ । ವಿದಥ್ಯಾ । ಸಂ । ಏತು । ಪ್ರತಿ । ಸ್ತೋಮಂ । ದಧೀಮಹಿ । ತುರಾಣಾಂ ।**

**ಯತ್ । ಅದ್ಯ । ದೇವಃ । ಸವಿತಾ । ಸುವಾತಿ । ಸ್ಯಾಮ । ಅಸ್ಯ । ರತ್ನಿನಃ । ವಿಽಭಾಗೇ ॥ ೧ ॥**

ಸಾಯಣಭಾಷ್ಯಂ

**ಹೇ ದೇವಾಃ ವಿದಥ್ಯಾ ವಿದಥೇನ ತ್ವದೀಯೇನ ಚಿತ್ತೇನ ಸಂಪಾದ್ಯಾ ಶ್ರುಷ್ಟಿಃ ಸುಖಮಸ್ಮಾನೋ ಆ ಸಮೇತು । ಆಗಚ್ಛತು । ಅಥವಾ ಶ್ರುಷ್ಟಿರ್ವೇಗವತೀ ವಿದಥ್ಯಾ ವಿದಥೇ ಯಜ್ಞೇ ಕ್ರಿಯಮಾಣಾಸ್ಮದೀಯಾ ಸ್ತುತಿರ್ಯುಷ್ಮಾನಾಗಚ್ಛತು। ವಯಂ ತುರಾಣಾಂ ವೇಗವತಾಂ ದೇವಾನಾಂ ಸ್ತೋಮಂ ಸ್ತೋತ್ರಂ ಪ್ರತಿ ದಧೀಮಹಿ । ಕುರ್ವೀಮಹಿ । ಅದ್ಯೇದಾನೀಂ ಸವಿತಾ ದೇವೋ ಯದ್ಧನಂ ಸುವಾತಿ ಅಸ್ಮಭ್ಯಂ ಪ್ರೇರಯೇತ್ ರತ್ನಿನೋ ರಮಣೀಯಧನವತೋಽಸ್ಯ ಸವಿತುಸ್ತಸ್ಯ ಧನಸ್ಯ ವಿಭಾಗೇ ದಾನೇ ಸ್ಯಾಮ । ವಯಂ ಭವೇಮ ॥**

ಪ್ರತಿಪದಾರ್ಥ

(ಎಲೈ ದೇವತೆಗಳೇ) **ವಿದಥ್ಯಾ**—ಯಜ್ಞಕಾಲದಲ್ಲಿ ನಿರ್ಮಿತವಾದ ನಮ್ಮ ಸ್ತುತಿಯು । **ಶ್ರುಷ್ಟಿಃ**—ವೇಗವಾಗಿ । **ಓ ಸಮೇತು**—ನಿಮ್ಮನ್ನು ಸೇರಿಕೊಳ್ಳಲಿ. । (ಅಥವಾ ನಿಮ್ಮಿಂದ ದತ್ತವಾದ ಸುಖಗಳು ನಮ್ಮನ್ನು **ಸೇರಿ**

**ಕೊಳ್ಳಲಿ)** **ತುರಾಣಾಂ**—ಶಕ್ತಿಯುತರಾದ ದೇವತೆಗಳನ್ನು ಪ್ರಶಂಸಿಸುವ | **ಸ್ತೋಮಂ**—ಸ್ತೋತ್ರವನ್ನು | **ಪ್ರತಿ ಪಧೀಮಹಿ**—ನಾವು ನಿರ್ವಹಿಸುತ್ತೇವೆ. | **ಅದ್ಯ**—ಈಗ | **ದೇವಃ**—ದೇವತಾತ್ಮನಾದ | **ಸವಿತಾ**—ಸವಿತೃವು | **ಯತ್**—ಯಾವ ಧನವನ್ನು | **ಸುವತಿ**—ನಮಗೆ ಒದಗಿಸುವನೋ | **ರತ್ನಿನಃ**—ಚಿತ್ತಾಕರ್ಷಕವಾದ | **ಅಸ್ಯ**—ಆದೇ ಧನದ | **ವಿಭಾಗೇ**—ದಾನಕ್ಕೆ | **ಸ್ಯಾಮ**—ನಾವು ಅರ್ಹರಾಗುವಂತಾಗಲಿ.

ಭಾವಾರ್ಥ

ಎಲ್ಲಾ ದೇವತೆಗಳೇ, ಯಜ್ಞಕಾಲದಲ್ಲಿ ನಿರ್ಮಿತವಾದ ನಮ್ಮ ಸ್ತುತಿಯು ವೇಗವಾಗಿ ನಿಮ್ಮನ್ನು ಸೇರಿಕೊಳ್ಳಲಿ. ಶಕ್ತಿಯುತರಾದ ದೇವತೆಗಳನ್ನು ಪ್ರಶಂಸಿಸುವ ಸ್ತೋತ್ರವನ್ನು ನಾವು ನಿರ್ಮಿಸುತ್ತೇವೆ ದೇವತಾತ್ಮನಾದ ಸವಿತೃವು ನಮಗೆ ಯಾವ ಧನವನ್ನು ಒದಗಿಸುವನೋ, ಚಿತ್ತಾಕರ್ಷಕವಾದ ಆದೇ ಧನದ ದಾನಕ್ಕೆ ನಾವು ಅರ್ಹರಾಗುವಂತಾಗಲಿ

English Translation

May the satisfaction derived from pious rites come to us as we contemplate the glorification of the swift moving (divinities) may we be included in the apportionment by that wealth-bestowing deity (of the riches) which the divine Savitri to day distributes

ಸಂಹಿತಾಪಾಠಃ

ಮಿತ್ರಸ್ತನ್ನೋ ವರುಣೋ ರೋದಸೀ ಚ ದ್ಯುಭಕ್ತಮಿಂದ್ರೋ ಅರ್ಯಮಾ ದದಾತು |
ದಿದೇಷ್ಟು ದೇವ್ಯದಿತೀ ರೇಕ್ಣೋ ವಾಯುಶ್ಚ ಯನ್ನಿಯುವೈತೇ ಭಗಶ್ಚ ||೨||

ಪದಪಾಠಃ

ಮಿತ್ರಃ | ತತ್ | ನಃ | ವರುಣಃ | ರೋದಸೀ ಇತಿ | ಚ | ದ್ಯುಽಭಕ್ತಂ | ಇಂದ್ರಃ | ಅರ್ಯಮಾ | ದದಾತು |
ದಿದೇಷ್ಟು | ದೇವೀ | ಅದಿತಿಃ | ರೇಕ್ಣಃ | ವಾಯುಃ | ಚ | ಯತ್ | ನಿಯುವೈತೇ ಇತಿ ನಿಽಯುವೈತೇ | ಭಗಃ | ಚ ||೨||

ಸಾಯಣಭಾಷ್ಯಂ

ಮಿತ್ರೋ ದೇವೋ ನೋಽಸ್ಮಭ್ಯಂ ತತ್ಪ್ರಸಿದ್ಧಂ ಧನಂ ದದಾತು | ಪ್ರಯಚ್ಛತು | ತಥಾ ವರುಣೋ ದದಾತು | ರೋದಸೀ ಚ ದ್ಯಾವಾಪೃಥಿವ್ಯೌ ಚ ದತ್ತಾಂ | ತಥೇಂದ್ರೋ ದ್ಯುಭಕ್ತಂ ದ್ಯುಭಿರ್ದೀಪ್ಯಮಾನೈಃ ಸ್ತೋತೃಭಿಃ ಸೇವಿತಂ ತದ್ಧನಂ ದದಾತು | ಅರ್ಯಮಾ ಚ ದದಾತು | ತಥಾದಿತಿರ್ದೇವೀ ರೇಕ್ಣೋ ಧನಂ ದಿದೇಷ್ಟು | ತದ್ಧನಮಸ್ಮಭ್ಯಂ ದಿಶತು | ವಾಯುಶ್ಚ ಭಗಶ್ಚೋಭೌ ದೇವೌ ಯದ್ಧನಂ ನಿಯುವೈತೇ ಅಸ್ಮಾಸ್ವಿತರಾಂ ಯೋಜಯೇತಾಂ ತದ್ಧನಮಿತಿ ಪೂರ್ವೇಣ ಸಂಬಂಧಃ ||

ಪ್ರತಿಪದಾರ್ಥ

**ಮಿತ್ರಃ**—ಮಿತ್ರದೇವನು | **ನಃ**—ನಮಗೆ | **ತತ್**—ಪ್ರಸಿದ್ಧವಾದ ಧನವನ್ನು | **ದದಾತು**—ಕೊಡಲಿ. | **ವರುಣಃ**—ವರುಣನೂ ಕೊಡಲಿ | **ರೋದಸೀ ಚ**—ದ್ಯಾವಾಪೃಥಿವಿಗಳೂ ಕೊಡಲಿ. | **ಇಂದ್ರಃ**—ಇಂದ್ರನು | **ದ್ಯುಭಕ್ತಂ**—ಪ್ರಕಾಶಮಾನರಾದ ಸ್ತೋತೃಗಳಿಂದ ಸೇವಿಸಲ್ಪಡುವ ಧನಗಳನ್ನು ಕೊಡಲಿ. | **ಅರ್ಯಮಾ**—ಅರ್ಯಮನೂ ಒದಗಿಸಲಿ | **ವಾಯುಶ್ಚ**—ವಾಯುವೂ | **ಭಗಶ್ಚ**—ಭಗದೇವನೂ | **ಯತ್**—ಯಾವ ಧನವನ್ನು | **ನಿಯುವೈತೇ**—ನಮಗೆ ಒದಗಿಸುವರೋ | **ರೇಕ್ಣಃ**—ಅದೇ ಧನವನ್ನು | **ದೇವೀ**—ದೇವತಾತ್ಮಳಾದ | **ಅದಿತಿಃ**—ಅದಿತಿಯೂ | **ದಿದೇಷ್ಟು**—ಒದಗಿಸಲಿ

ಭಾವಾರ್ಥ

ಮಿತ್ರದೇವನು ನಮಗೆ ಪ್ರಸಿದ್ಧವಾದ ಧನವನ್ನು ಕೊಡಲಿ ವರುಣನೂ, ದ್ಯಾವಾಪೃಥಿವಿಗಳೂ, ಇಂದ್ರನೂ ಮತ್ತು ಅರ್ಯಮನೂ ಸಹ ಸ್ತೋತೃಗಳಿಂದ ಅನುಭವಿಸಲು ಯೋಗ್ಯವಾದ ಧನವನ್ನು ನಮಗೆ ಕೊಡಲಿ ವಾಯುವೂ ಮತ್ತು ಭಗದೇವನೂ ಯಾವ ಧನವನ್ನು ನಮಗೆ ಒದಗಿಸುವರೋ, ಅದೇ ಧನವನ್ನು ದೇವತಾತ್ಮಳಾದ ಅದಿತಿಯೂ ಒದಗಿಸಲಿ

English Translation

May Mitra and Varuna, heaven and earth, Indra and Aryaman, give us that (wealth) which is merited by brilliant (laudations) may the divine Aditi be disposed to give us riches, which Vayu and Bhaga may preserve ever in our keeping

ಸಂಹಿತಾಪಾಠಃ

ಸೇದುಗ್ರೋ ಅಸ್ತು ಮರುತಃ ಸ ಶುಷ್ಮೀ ಯಂ ಮರ್ತ್ಯಂ ಪೃಷದಶ್ವಾ ಅವಾಥ |
ಉತೇಮಗ್ನಿಃ ಸರಸ್ವತೀ ಜುನಂತಿ ನ ತಸ್ಯ ರಾಯಃ ಪರ್ಯೇತಾಸ್ತಿ ‖ ೩ ‖

ಪದಪಾಠಃ

ಸಃ | ಇತ್ | ಉಗ್ರಃ | ಅಸ್ತು | ಮರುತಃ | ಸಃ | ಶುಷ್ಮೀ | ಯಂ | ಮರ್ತ್ಯಂ | ಪೃಷತ್ಽಅಶ್ವಾಃ | ಅವಾಥ |
ಉತ್ | ಈಂ | ಅಗ್ನಿಃ | ಸರಸ್ವತೀ | ಜುನಂತಿ | ನ | ತಸ್ಯ | ರಾಯಃ | ಪರಿಽಏತಾ | ಅಸ್ತಿ ‖ ೩ ‖

ಸಾಯಣಭಾಷ್ಯಂ

ಹೇ ಪೃಷದಶ್ವಾಃ | ಪೃಷಚ್ಛಬ್ದೇನ ಕೇಚಿನ್ಮೃಗವಿಶೇಷಾ ಉಚ್ಯಂತೇ | ತ ಏವಾಶ್ವಾ ವಾಹಾ ಯೇಷಾಂ ತೇ | ಏವಂಭೂತಾ ಹೇ ಮರುತೋ ರುದ್ರಪುತ್ರಾ ದೇವಾಃ ಯೂಯಂ ಮರ್ತ್ಯಂ ಮರಣಧರ್ಮಾಣಂ ಯಂ ಯಜಮಾನಮವಾಥ ಪಾಲಯೇತ ಸೇತ್ಸ ಏವ ಯಜಮಾನ ಉಗ್ರೋಽಸ್ತು | ಓಜಸ್ವೀ ಭವತು | ತಥಾ ಸ ಶುಷ್ಮೀ ಬಲವಾನ್ ಭವತು | ತಥೋತಾಪಿ ಚಾಗ್ನಿರಂಗನಾದಿಗುಣಯುಕ್ತೋ ದೇವಃ

ಸರಸ್ವತೀ ವಾಗ್ದೇವತಾ ಚೇತ್ಯಾದ್ಯಾಃ ಸರ್ವೇ ದೇವಾ ಈಮೇನಂ ಯಜಮಾನಂ ಜುನಂತಿ । ಪ್ರವರ್ತ-
ಯಂತಿ । ತಸ್ಯ ಯಜಮಾನಸ್ಯ ಸಂಬಂಧಿನೋ ರಾಯೋ ಧನಸ್ಯ ಕಶ್ಚಿದಪಿ ಪರ್ಯೇತಾ ಪರಿಗಂತಾ ನಾಸ್ತಿ
ನಾಶಕೋ ನ ಭವತೀತ್ಯರ್ಥಃ ॥

ಪ್ರತಿಪದಾರ್ಥ

**ಪೃಷದಶ್ವಾಃ**—ಮೃಗರೂಪವಾದ ಅಶ್ವಗಳುಳ್ಳ | **ಮರುತಃ**—ಎಲೈ ಮರುತ್ತುಗಳೇ, | **ಮರ್ತ್ಯಂ**—ಮಾನವರಾದ | **ಯಂ**—ಯಾವ ಯಜಮಾನನನ್ನು | **ಅವಾಥ**—ರಕ್ಷಿಸುವಿರೋ | **ಸೇತ್**—ಅವನೇ | **ಉಗ್ರಃ**—ಅತ್ಯಂತ ವೀರ್ಯವುಳ್ಳವನಾಗಿ | **ಅಸ್ತು**—ಆಗಲಿ | **ಸಃ**—ಅವನೇ | **ಶುಷ್ಮೀ**—ಶಕ್ತಿಯುತನಾಗಲಿ. | **ಉತ**—ಮತ್ತು | **ಅಗ್ನಿಃ**—ಅಗ್ನಿದೇವನೂ | **ಸರಸ್ವತೀ**—ಸರಸ್ವತೀದೇವಿಯೂ | **ಈಂ**—ಈ ಯಜಮಾನನನ್ನು | **ಜುನಂತಿ**—ಉತ್ತೇಜನಗೊಳಿಸುತ್ತಾರೆ | **ತಸ್ಯ**—ಈ ಯಜಮಾನನ | **ರಾಯಃ**—ಧನಕ್ಕೆ | **ಪರ್ಯೇತಾ**—[illegible] | **ನ ಅಸ್ತಿ**—ಯಾರೂ ಇರುವುದಿಲ್ಲ

ಭಾವಾರ್ಥ

ಮೃಗರೂಪವ ಅಶ್ವಗಳುಳ್ಳ ಎಲೈ ಮರುತ್ತುಗಳೇ, ಮಾನವನಾದ ಯಾವ ಯಜಮಾನನನ್ನು ನೀವು ರಕ್ಷಿಸುವಿರೋ, ಅವನೇ ಅತ್ಯಂತ ವೀರ್ಯವುಳ್ಳವನಾಗಿ ಆಗಲಿ. ಅವನೇ ಶಕ್ತಿಯುತನಾಗಲಿ ಅಗ್ನಿಯೂ, ಸರಸ್ವತಿಯೂ ಅವನನ್ನೇ ಉತ್ತೇಜನಗೊಳಿಸುತ್ತಾರೆ ಈ ಯಜಮಾನನ ಧನಕ್ಕೆ ಅಪಹಾರಕರು ಯಾರೂ ಇರುವುದಿಲ್ಲ

English Translation

**M**aruts, whose steeds are the spotted deer, may the mortal whom you protect be resolute, be strong, for him Agni and Saraswati also defend, and there be no despoiler of his riches

ಸಂಹಿತಾಪಾಠಃ

ಅಯಂ ಹಿ ನೇತಾ ವರುಣ ಋತಸ್ಯ ಮಿತ್ರೋ ರಾಜಾನೋ ಅರ್ಯಮಾ-
ಪೋ ಧುಃ ।
ಸುಹವಾ ದೇವ್ಯದಿತಿರನರ್ವಾ ತೇ ನೋ ಅಂಹೋ ಅತಿ ಪರ್ಷನ್ನರಿಷ್ಟಾನ್ ॥

ಪದಪಾಠಃ

ಅಯಂ । ಹಿ । ನೇತಾ । ವರುಣಃ । ಋತಸ್ಯ । ಮಿತ್ರಃ । ರಾಜಾನಃ । ಅರ್ಯಮಾ । ಅಪಃ । ಧುರಿತಿ ಧುಃ ।
ಸುऽಹವಾ । ದೇವೀ । ಅದಿತಿಃ । ಅನರ್ವಾ । ತೇ । ನಃ । ಅಂಹಃ । ಅತಿ । ಪರ್ಷನ್ । ಅರಿಷ್ಟಾನ್ ॥ ೪ ॥

ಸಾಯಣಭಾಷ್ಯಂ

ಋತಸ್ಯ ಯಜ್ಞಸ್ಯ ಸತ್ಯಸ್ಯ ವಾ ನೇತಾ ಪ್ರಾಪಯಿತಾಯಂ ಹ್ಯಯಂ ಖಲು ವರುಣಶ್ಚ ಮಿತ್ರ-
ಶ್ಚಾರ್ಯಮಾ ಚೈತೇ ರಾಜಾನಃ ಸಮರ್ಥಾ ದೇವಾ ಅಪೋऽಸ್ಮದೀಯಂ ಯಜ್ಞಾದಿಲಕ್ಷಣಂ ಕರ್ಮ ಧುಃ ।
ಅಧುಃ । ದಧತಿ । ಅನರ್ವಾ ಕೇನಾಪ್ಯಪ್ರತಿಗತಾ ದೇವೀ ದ್ಯೋತಮಾನಾದಿತಿರದೀನಾ ದೇವಮಾತಾ ಸು-

ಹವಾ ಶೋಭನಾಹ್ವಾನಾ ಭವತಿ । ತೇ ವರುಣಾದಯೋ ದೇವಾ ಅರಿಷ್ಟಾನಬಾಧಿತಾನ್ ಸತೋ ನೋऽಸ್ಮಾನಂಹೋ ದುರಿತಮತಿ ಪರ್ಷನ್ । ಅತಿಪಾರಯಂತು ॥

ಪ್ರತಿಪದಾರ್ಥ

**ಋತಸ್ಯ**—ಯಜ್ಞದ । **ನೇತಾ**—ನಿರ್ವಾಹಕನಾದ । **ಅಯಂ ಹಿ ವರುಣಃ**—ಈ ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ರಾಜಾನಃ**—ಪ್ರಭುಗಳಾದ ಈ ದೇವತೆಗಳೆಲ್ಲರೂ । **ಅಪಃ**—ನಮ್ಮ ಈ ಕರ್ಮವನ್ನು । **ಧುಃ**—ನೆರವೇರಿಸುತ್ತಾರೆ । **ಅನರ್ವಾ**—ಅಹಿಂಸಿತಳಾದವಳೂ । **ದೇವೀ**—ದೇವತಾತ್ಮಳೂ ಆದ । **ಅದಿತಿಃ**—ಅದಿತಿಯು । **ಸುಹವಾ**—ಉತ್ತಮವಾದ ಆಹ್ವಾನಕ್ಕೆ ಪಾತ್ರಳಾಗಿದ್ದಾಳೆ । **ತೇ**—ಈ ವರುಣಾದಿ ದೇವತೆಗಳೆಲ್ಲರೂ । **ಅರಿಷ್ಟಾನ್**—ಅಬಾಧಿತರಾದ । **ನಃ**—ನಮ್ಮನ್ನು । **ಅಂಹಃ**—ಪಾಪದಿಂದ । **ಅತಿ ಪರ್ಷನ್**—ರಕ್ಷಿಸಲಿ.

ಭಾವಾರ್ಥ

ಯಜ್ಞನಿರ್ವಾಹಕನಾದ ವರುಣನೂ, ಮಿತ್ರನೂ, ಅರ್ಯಮನೂ, ಪ್ರಭುಗಳಾದ ಈ ದೇವತೆಗಳೆಲ್ಲರೂ, ನಮ್ಮ ಈ ಯಜ್ಞಕರ್ಮವನ್ನು ನಿರ್ವಹಿಸುತ್ತಾರೆ. ಅಹಿಂಸಿತಳೂ, ದೇವತಾತ್ಮಳೂ ಆದ ಅದಿತಿಯು ಉತ್ತಮವಾದ ಆಹ್ವಾನಕ್ಕೆ ಪಾತ್ರಳಾಗಿದ್ದಾಳೆ ಈ ವರುಣಾದಿ ದೇವತೆಗಳೆಲ್ಲರೂ ಅಬಾಧಿತರಾದ ನಮ್ಮನ್ನು ಪಾಪದಿಂದ ರಕ್ಷಿಸಲಿ.

English Translation

This Varuna, the leader of the rite, and the royal Mitra and Aryaman, uphold my acts, and the divine unopposed Aditi, earnestly invoked may they convey us safe beyond evil

ಸಂಹಿತಾಪಾಠಃ

ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ।
ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾ ವಿರಾವತ್ ॥ ೫ ॥

ಪದಪಾಠಃ

ಅಸ್ಯ । ದೇವಸ್ಯ । ಮೀಳ್ಹುಷಃ । ವಯಾಃ । ವಿಷ್ಣೋಃ । ಏಷಸ್ಯ । ಪ್ರऽಭೃಥೇ । ಹವಿಃऽಭಿಃ ।
ವಿದೇ । ಹಿ । ರುದ್ರಃ । ರುದ್ರಿಯಂ । ಮಹಿऽತ್ವಂ । ಯಾಸಿಷ್ಟಂ । ವರ್ತಿಃ । ಅಶ್ವಿನಾ । ಇರಾऽವತ್ ॥ ೫ ॥

ಸಾಯಣಭಾಷ್ಯಂ

ಪ್ರಭೃಥೇ ಹವಿರ್ಭಿರ್ಹವೀರೂಪೈರನ್ನೈರೇಷಸ್ಯ ಪ್ರಾಪಣೀಯಸ್ಯ ಮೀಳ್ಹುಷಃ ಕಾಮಾನಾಂ ಸೇಕ್ತುರ್ವಿಷ್ಣೋಃ ಸರ್ವದೇವಾತ್ಮಕಸ್ಯಾಸ್ಯ ದೇವಸ್ಯ । ವಿಷ್ಣುಃ ಸರ್ವಾ ದೇವತಾಃ । ಐ ಬ್ರಾ. ೧-೧ । ಇತಿ ಶ್ರುತೇಃ । ಅನ್ಯೇ ದೇವಾ ವಯಾಃ ಶಾಖಾ ಇವ ಭವಂತಿ । ರುದ್ರೋ ದೇವೋ ರುದ್ರಿಯಂ ರುದ್ರಸಂಬಂಧಿ ಸುಖಂ ಮಹಿತ್ವಂ ಮಹತ್ತ್ವಂ ಚ ವಿದೇ ಹಿ । ಅಸ್ಮಾನ್ಪ್ರಾಪಯತಿ ಖಲು । ಅಪಿ ಚ ಹೇ ಅಶ್ವಿನಾ

ದೇವೌ ಯುವಾಮಿರಾವದ್ಧವಿರ್ಲಕ್ಷಣಾನ್ನಯುಕ್ತಂ ವರ್ತಿರಸ್ಮದೀಯಂ ಗೃಹಂ ಯಾಸಿಷ್ಟಂ । ಅಯಾಸಿಷ್ಟಂ ಆಗಚ್ಛತಂ ॥

ಪ್ರತಿಪದಾರ್ಥ

ಪ್ರಭೃಥೇ—ಅರ್ಪಿತವಾದ । ಹವಿರ್ಭಿಃ—ಹವಿಸ್ಸುಗಳ ಮೂಲಕ । ಏಷಸ್ಯ—ಸಮೀಪಿಸಲ್ಪಡುವವನೂ । ಮೀಳ್ಹುಷಃ—ಕಾಮವರ್ಷಕನೂ । ದೇವಸ್ಯ—ದೇವತಾತ್ಮನೂ ಆದ । ಅಸ್ಯ ವಿಷ್ಣೋಃ—ಈ ವಿಷ್ಣುವಿಗೆ । ವಯಾಃ—ಇತರ ದೇವತೆಗಳೆಲ್ಲರೂ ಶಾಖಾರೂಪರಾಗಿಯೇ ಇದ್ದಾರೆ । ರುದ್ರಃ—ರುದ್ರದೇವನು । ರುದ್ರಿಯಂ—ರುದ್ರಸಂಬಂಧವಾದ ಸುಖವನ್ನೂ । ಮಹಿತ್ವಂ—ಮಾಹಾತ್ಮ್ಯವನ್ನೂ । ವಿದೇ ಹಿ—ನಮಗೆ ಒದಗಿಸಲಿ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ, । ಇರಾವತ್—ಹವಿಸ್ಸಿನಿಂದ ಕೂಡಿದ । ವರ್ತಿಃ—ನಮ್ಮ ಗೃಹಕ್ಕೆ । ಯಾಸಿಷ್ಟಂ—ದಯಮಾಡಿರಿ

ಭಾವಾರ್ಥ

ಹವಿಸ್ಸನ್ನು ಅರ್ಪಿಸುವುದರ ಮೂಲಕ ಸೇವಿಸಲ್ಪಡುವವನೂ, ಕಾಮವರ್ಷಕನೂ, ದೇವತಾತ್ಮನೂ ಆದ ಈ ವಿಷ್ಣುವಿಗೆ ಇತರ ದೇವತೆಗಳೆಲ್ಲರೂ ಶಾಖಾರೂಪರಾಗಿಯೇ ಇದ್ದಾರೆ. ರುದ್ರದೇವನು ರುದ್ರಸಂಬಂಧವಾದ ಸುಖವನ್ನೂ ಮಾಹಾತ್ಮ್ಯವನ್ನೂ ನಮಗೆ ಒದಗಿಸಲಿ ಎಲೈ ಅಶ್ವಿನೀದೇವತೆಗಳೇ, ಹವಿಸ್ಸಿನಿಂದ ಕೂಡಿದ ನಮ್ಮ ಗೃಹಕ್ಕೆ ದಯಮಾಡಿರಿ

English Translation

I propitiate with oblations the ramifications of that divine attainable Vishnu, the showerer of benefits Rudra bestow upon us the magnificence of his nature the Aswins have come to our dwelling abounding with (sacrificial) food

ಸಂಹಿತಾಪಾಠಃ

ಮಾತ್ರ ಪೂಷನ್ನಾಘೃಣ ಇರಸ್ಯೋ ವರೂತ್ರೀ ಯದ್ರಾತಿಷಾಚಶ್ಚ ರಾಸನ್ ।
ಮಯೋಭುವೋ ನೋ ಅರ್ವಂತೋ ನಿ ಪಾಂತು ವೃಷ್ಟಿಂ ಪರಿಜ್ಮಾ ವಾತೋ ದದಾತು ॥ ೬ ॥

ಪದಪಾಠಃ

ಮಾ । ಅತ್ರ । ಪೂಷನ್ । ಆಘೃಣೇ । ಇರಸ್ಯಃ । ವರೂತ್ರೀ । ಯತ್ । ರಾತಿಽಸಾಚಃ । ಚ । ರಾಸನ್ ।
ಮಯಃಽಭುವಃ । ನಃ । ಅರ್ವಂತಃ । ನಿ । ಪಾಂತು । ವೃಷ್ಟಿಂ । ಪರಿಽಜ್ಮಾ । ವಾತಃ । ದದಾತು ॥ ೬ ॥

ಸಾಯಣಭಾಷ್ಯಂ

ಹೇ ಆಘೃಣೇ ಪ್ರಾಪ್ತದೀಪ್ತೇ ಏವಂಭೂತ ಹೇ ಪೂಷನ್ ದೇವ ಅತ್ರಾಸ್ಮಿನ್ಕಾನೇ ಮೇರಸ್ಯಃ । ವಿಘಾತಂ ಮಾ ಕೃಥಾಃ । ವರೂತ್ರೀ ಸರ್ವೈರ್ವರಣೀಯಾ ಸರಸ್ವತೀ ರಾತಿಷಾಚಶ್ಚ । ರಾತಿರ್ದಾನಂ । ತಸ್ಯ

ಸಂಭಕ್ತ್ರ್ಯೋ ದೇವಪತ್ನ್ಯಶ್ಚ ಯದ್ಧನಂ ರಾಸನ್ ಅಸ್ಮಭ್ಯಂ ಪ್ರಯಚ್ಛೇಯುಃ । ಅತ್ರ ಮಾ ಕೃಥಾ ಇತಿ ಪೂರ್ವೇಣ ಸಂಬಂಧಃ । ಕಿಂಚ ಮಯೋಭುವಃ ಸುಖಸ್ಯ ಭಾವಕಾ ಅರ್ವಂತೋ ಗಚ್ಛಂತೋ ದೇವಾ ನೋಽಸ್ಮಾನ್ನಿ ಪಾಂತು । ನಿತರಾಂ ಪಾಲಯಂತು । ಪರಿಜ್ಮಾ ಪರಿತೋ ಗಂತಾ ವಾತೋ ವಾಯುರ್ವೃಷ್ಟಿಂ ವೃಷ್ಟಿಲಕ್ಷಣಮುದಕಂ ದದಾತು । ಪ್ರಯಚ್ಛತ್ವಸ್ಮಭ್ಯಂ ॥

ಪ್ರತಿಪದಾರ್ಥ

**ಆಘೃಣೇ**—ಪ್ರಭಾಯುತನಾದ । **ಪೂಷನ್**—ಎಲೈ ಪೂಷದೇವನೇ, । **ವರೂತ್ರೀ**—ಸಕಲರ ಆದರಣೆಗೆ ಪಾತ್ರಳಾದ ಸರಸ್ವತಿಯೂ । **ರಾತಿಷಾಚಶ್ಚ**—ಉದಾರದಾನಿಗಳಾದ ದೇವಪತ್ನಿಯರೂ । **ಯತ್**—ಯಾವ ಧನವನ್ನು **ರಾಸನ್**—ನಮಗೆ ಕೊಡುವರೋ । **ಅತ್ರ**—ಈ ದಾನಕಾರ್ಯಕ್ಕೆ । **ಮಾ ಇರಸ್ಯಃ**—ವಿಘ್ನವನ್ನುಂಟುಮಾಡಬೇಡ । **ಮಯೋಭುವಃ**—ಸುಖಕಾರಕರೂ । **ಅರ್ವಂತಃ**—ನಮ್ಮಲ್ಲಿಗೆ ಬರತಕ್ಕವರೂ ಆದ ದೇವತೆಗಳು । **ನಃ**—ನಮ್ಮನ್ನು **ನಿ ಪಾಂತು**—ಪೂರ್ಣವಾಗಿ ರಕ್ಷಿಸಲಿ । **ಪರಿಜ್ಮಾ**—ಸರ್ವತ್ರ ಸಂಚರಿಸುವ । **ವಾತಃ**—ವಾಯುವು । **ವೃಷ್ಟಿಂ**—ವೃಷ್ಟಿರೂಪವಾದ ಉದಕವನ್ನು । **ದದಾತು**—ಒದಗಿಸಲಿ

ಭಾವಾರ್ಥ

ಪ್ರಭಾಯುತನಾದ ಎಲೈ ಪೂಷದೇವನೇ, ಸಕಲರ ಆದರಣೆಗೆ ಪಾತ್ರಳಾದ ಸರಸ್ವತಿಯೂ, ಉದಾರದಾನಿಗಳಾದ ದೇವಪತ್ನಿಯರೂ, ಯಾವ ಧನವನ್ನು ನಮಗೆ ಕೊಡುವರೋ ಆ ದಾನಕಾರ್ಯಕ್ಕೆ ವಿಘ್ನವನ್ನುಂಟುಮಾಡಬೇಡ. ಸುಖಕಾರಕರೂ ನಮ್ಮಲ್ಲಿಗೆ ಬರತಕ್ಕವರೂ ಆದ ದೇವತೆಗಳು ನಮ್ಮನ್ನು ಪೂರ್ಣವಾಗಿ ರಕ್ಷಿಸಲಿ. ಸರ್ವತ್ರ ಸಂಚರಿಸುವ ವಾಯುವು ವೃಷ್ಟಿರೂಪವಾದ ಉದಕವನ್ನು ಒದಗಿಸಲಿ

English Translation

Resplendent Pushan, oppose not (hindrance)on this occasion may the protectress, (Saraswati), and the liberal (wives of the gods), grant us wealth. may the over-moving deities, the sources of happiness, protect us may the circumambient Vata send us rain

ಸಂಹಿತಾಪಾಠಃ

ನೂ ರೋದಸೀ ಅಭಿಷ್ಟುತೇ ವಸಿಷ್ಠೈರೃತಾವಾನೋ ವರುಣೋ ಮಿತ್ರೋ ಅಗ್ನಿಃ ।
ಯಚ್ಛಂತು ಚಂದ್ರಾ ಉಪಮಂ ನೋ ಅರ್ಕಂ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೭ ॥

ಪದಪಾಠಃ

ನು । ರೋದಸೀ ಇತಿ । ಅಭಿಸ್ತುತೇ ಇತ್ಯಭಿಽಸ್ತುತೇ । ವಸಿಷ್ಠೈಃ । ಋತಽವಾನಃ । ವರುಣಃ । ಮಿತ್ರಃ। ಅಗ್ನಿಃ ।
ಯಚ್ಛಂತು । ಚಂದ್ರಾಃ । ಉಪಽಮಂ । ನಃ । ಅರ್ಕಂ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ॥

ಸಾಯಣಭಾಷ್ಯಂ

**ಪೂರ್ವಂ ವ್ಯಾಖ್ಯಾತೇಯಂ । ಅಕ್ಷರಾರ್ಥಸ್ತು । ದ್ಯಾವಾಪೃಥಿವ್ಯೌ ವರುಣಾದಯೋ ದೇವಾಶ್ಚ ವಸಿಷ್ಠೈರಸ್ಮಾಭಿರಭಿಷ್ಟುತಾ ಭವಂತಿ । ಏವಂಭೂತಾ ಆಹ್ಲಾದಕಾ ದೇವಾಃ ಸರ್ವೋತ್ಕೃಷ್ಟಮನ್ನಮಸ್ಮಭ್ಯಂ ದದತು । ಅಸ್ಮಿನ್ ಸೂಕ್ತೇ ಪ್ರತಿಪಾದಿತಾಃ ಸರ್ವೇ ದೇವಾ ಯೂಯಂ ಕಲ್ಯಾಣೈರಸ್ಮಾನ್ಸರ್ವದಾ ಪಾಲಯತ ॥**

ಪ್ರತಿಪದಾರ್ಥ

**ನು**—ಈಗ | **ರೋದಸೀ**—ದ್ಯಾವಾಪೃಥಿವಿಗಳು | **ವಸಿಷ್ಠೈಃ**—ವಸಿಷ್ಠಸಂಜ್ಞಕರಾದ ನಮ್ಮಿಂದ | **ಅಭಿಷ್ಟುತೇ**—ಸ್ತುತರಾಗುತ್ತಾರೆ | **ಋತಾವಾನಃ**—ಯಜ್ಞಯುಕ್ತರಾದ | **ವರುಣಃ**—ವರುಣನೂ | **ಮಿತ್ರಃ**—ಮಿತ್ರನೂ | **ಅಗ್ನಿಃ**—ಅಗ್ನಿಯೂ ನಮ್ಮಿಂದ ಸ್ತುತರಾಗುತ್ತಾರೆ | **ಚಂದ್ರಾಃ**—ಆಹ್ಲಾದಕಾರಕರಾದ ಸಕಲ ದೇವತೆಗಳೂ | **ನಃ**—ನಮಗೆ | **ಉಪಮಂ**—ಅತ್ಯುತ್ಕೃಷ್ಟವಾದ | **ಅರ್ಕಂ**—ಅನ್ನವನ್ನು | **ಯಚ್ಛಂತು**—ಕೊಡಲಿ | (ಎಲೈ ದೇವತೆಗಳೇ,) **ಯೂಯಂ**—ನೀವು | **ನಃ**—ನಮ್ಮನ್ನು | **ಸದಾ**—ಯಾವಾಗಲೂ | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ.

ಭಾವಾರ್ಥ

ದ್ಯಾವಾಪೃಥಿವಿಗಳು ಈಗ ವಸಿಷ್ಠಸಂಜ್ಞಕರಾದ ನಮ್ಮಿಂದ ಸ್ತುತರಾಗುತ್ತಾರೆ. ಯಜ್ಞಯುಕ್ತರಾದ ವರುಣನೂ, ಮಿತ್ರನೂ, ಅಗ್ನಿಯೂ ನಮ್ಮಿಂದ ಸ್ತುತರಾಗುತ್ತಾರೆ ಆಹ್ಲಾದಕಾರಕರಾದ ಸಕಲ ದೇವತೆಗಳೂ ನಮಗೆ ಅತ್ಯುತ್ಕೃಷ್ಟವಾದ ಅನ್ನವನ್ನು ಕೊಡಲಿ. ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

Heaven and earth are now glorified by the Vasishthas, as are Varuna the object of worship, and Mitra and Agni may they, the conferrers of joy, bestow upon us excellent food an o you (all) ever cherish us with blessings.

---

## ನಲವತ್ತೊಂದನೆಯ ಸೂಕ್ತವು

ಸಾಯಣಭಾಷ್ಯಂ

**ಪ್ರಾತರಗ್ನಿಮಿತಿ ಸಪ್ತರ್ಚಮಷ್ಟಮಂ ಸೂಕ್ತಂ । ಅತ್ರಾನುಕ್ರಮಣಿಕಾ । ಪ್ರಾತರ್ಭಗಂ ಜಗತ್ಯಾದ್ಯಾ ಲಿಂಗೋಕ್ತದೇವತಾಂತ್ಯೋಷಸ್ಯೇತಿ । ವಸಿಷ್ಠ ಋಷಿಃ । ಆದ್ಯಾ ಜಗತೀ ಶಿಷ್ಟಾಸ್ತ್ರಿಷ್ಟುಭಃ । ಆದ್ಯಾಗ್ನೀಂದ್ರಾದಿದೇವತ್ಯಾ ದ್ವಿತೀಯಾದ್ಯಾಃ ಪಂಚ ಭಗದೇವತ್ಯಾಃ ಸಪ್ತಮ್ಯುಷೋದೇವತ್ಯಾ । ಅತ್ರ ಶೌನಕಃ । ನಿರ್ದೇಷ್ಟುಕಾಮೋ ರೋಗಾರ್ತೋ ಭಗಸೂಕ್ತಂ ಜಪೇತ್ಸದಾ । ನಿವೇಶಂ ವಿಶತಿ ಕ್ಷಿಪ್ರಂ ರೋಗೈಶ್ಚ ಪರಿಮುಚ್ಯತೇ । ಋಗ್ವಿ. ೨ ೨೫ । ಇತಿ ॥**

**ಅನುವಾದವು—ಪ್ರಾತರಗ್ನಿಂ** ಎಂಬ **ಈ** ಸೂಕ್ತವು ಮೂರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವುವು ಅನುಕ್ರಮಣಿಕೆಯಲ್ಲಿ **ಪ್ರಾತರ್ಭಗಂ ಜಗತ್ಯಾದ್ಯಾ ಲಿಂಗೋಕ್ತದೇವತಾನ್ತ್ಯೋಷಸ್ಯಾ** ಎಂದು ಹೇಳಿರುವುದು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಈ ಸೂಕ್ತದ ಮೊದಲನೆಯ ಋಕ್ಕು ಜಗತೀಛಂದಸ್ಕವು, ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು ಮೊದಲನೆಯ ಋಕ್ಕಿಗೆ ಅಗ್ನೀಂದ್ರಾದಿಗಳು ದೇವತೆಯು; ಎರಡರಿಂದ ಮುಂದಿನ ಐದು ಋಕ್ಕುಗಳಿಗೆ ಭಗನು ದೇವತೆಯು; ಏಳನೆಯ ಋಕ್ಕು ಉಷೋದೇವತಾಕವು. ಈ ಸೂಕ್ತದ ವಿನಿಯೋಗವಿಷಯದಲ್ಲಿ ಕೆಲವರು ಈರೀತಿ ಹೇಳುವರು—

**ನಿವೇಷ್ಟುಕಾಮೋ ರೋಗಾರ್ತೋ ಭಗಸೂಕ್ತಂ ಜಪೇತ್ಸದಾ ।**
**ನಿವೇಶಂ ವಿಶತಿ ಕ್ಷಿಪ್ರಂ ರೋಗೈಶ್ಚ ಪರಿಮುಚ್ಯತೇ ॥**

(ಋಗ್ವಿಧಾನ ೨-೨೫)

ಹೊಸಪ್ರದೇಶವನ್ನು ಪ್ರವೇಶಿಸಲಿಚ್ಛಿಸುವವನೂ, ರೋಗದಿಂದ ಪೀಡಿತನಾದವನೂ ಈ ಭಗಸೂಕ್ತವನ್ನು ಯಾವಾಗಲೂ ಜಪಿಸುತ್ತಿದ್ದರೆ ಅವನ ಇಷ್ಟದಂತೆ ರೋಗವಿಮುಕ್ತನಾಗಿ ಹೊಸಪ್ರದೇಶವನ್ನು ಬೇಗನೆ ಪ್ರವೇಶಿಸುವನು ಎಂದು **ಈ** ಸೂಕ್ತದ ಫಲಶ್ರುತಿಯಿರುವುದಾಗಿ ಹೇಳಿದೆ

## ಸೂಕ್ತ—೪೧

ಮಂಡಲ—೭ ॥ ಅನುವಾಕ—೩ ॥ ಸೂಕ್ತ —೪೧ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ವಸಿಷ್ಠಃ ॥
ದೇವತಾ—೧ ಲಿಂಗೋಕ್ತದೇವತಾಃ । ೨–೬. ಭಗಃ । ೭, ಉಷಾಃ ॥
ಛಂದಃ—೧ ಜಗತೀ । ೨–೭ ತ್ರಿಷ್ಟುಪ್ ॥

ಸಂಹಿತಾಪಾಠಃ

**ಪ್ರಾತರಗ್ನಿಂ ಪ್ರಾತರಿಂದ್ರಂ ಹವಾಮಹೇ ಪ್ರಾತರ್ಮಿತ್ರಾವರುಣಾ ಪ್ರಾತರಶ್ವಿನಾ ।**
**ಪ್ರಾತರ್ಭಗಂ ಪೂಷಣಂ ಬ್ರಹ್ಮಣಸ್ಪತಿಂ ಪ್ರಾತಃ ಸೋಮಮುತ ರುದ್ರಂ ಹುವೇಮ ॥ ೧ ॥**

ಪದಪಾಠಃ

**ಪ್ರಾತಃ । ಅಗ್ನಿಂ । ಪ್ರಾತಃ । ಇಂದ್ರಂ । ಹವಾಮಹೇ । ಪ್ರಾತಃ । ಮಿತ್ರಾವರುಣಾ । ಪ್ರಾತಃ । ಅಶ್ವಿನಾ । ಪ್ರಾತಃ । ಭಗಂ । ಪೂಷಣಂ । ಬ್ರಹ್ಮಣಃ । ಪತಿಂ । ಪ್ರಾತರಿತಿ । ಸೋಮಂ । ಉತ । ರುದ್ರಂ । ಹುವೇಮ ॥**

ಸಾಯಣಭಾಷ್ಯಂ

**ಪ್ರಾತರುಷಃಕಾಲೇಽಗ್ನಿಂ ದೇವಂ ಹವಾಮಹೇ । ವಯಂ ಸ್ತೋತಾರ ಆಹ್ವಯಾಮಃ । ತಥಾ ಪ್ರಾತಃಕಾಲ ಇಂದ್ರಂ ಹವಾಮಹೇ । ತಥಾ ಮಿತ್ರಾವರುಣಾ ಮಿತ್ರಾವರುಣಾವಹೋರಾತ್ರಾಭಿಮಾನಿನೌ**

ದೇವೌ ಪ್ರಾತರ್ವಯಂ ಹವಾಮಹೇ | ತಥಾಶ್ವಿನೌ ದೇವಾನಾಂ ಭಿಷಜೌ ಪ್ರಾತರ್ವಯಂ ಹವಾಮಹೇ | ತಥಾ ಪ್ರಾತರ್ಭಗಂ ದೇವಂ ಪೂಷಣಂ ದೇವಂ ಬ್ರಹ್ಮಣಸ್ಪತಿಂ ಮಂತ್ರಾಭಿಮಾನಿನಮೇತತ್ಸಂಜ್ಞಕಂ ಚಾಹ್ವಯಾಮಃ | ತಥಾ ಪ್ರಾತಃ ಸೋಮಮೇತತ್ಸಂಜ್ಞಕಂ ದೇವಮುತಾಪಿ ಚ ರುದ್ರಂ ದೇವಂ ಚ ಹುವೇಮ ಆಹ್ವಯಾಮಃ ||

ಪ್ರತಿಪದಾರ್ಥ

**ಪ್ರಾತಃ**— ಈ ಉಷಃಕಾಲದಲ್ಲಿ | **ಅಗ್ನಿಂ**—ಅಗ್ನಿಯನ್ನು | **ಹವಾಮಹೇ**—ನಾವು ಕರೆಯುತ್ತೇವೆ | **ಇಂದ್ರಂ**— ಇಂದ್ರನನ್ನೂ ಕರೆಯುತ್ತೇವೆ | **ಪ್ರಾತಃ**— ಉಷಃಕಾಲದಲ್ಲಿ | **ಮಿತ್ರಾವರುಣಾ**—ಮಿತ್ರಾವರುಣರನ್ನು ಕರೆಯುತ್ತೇವೆ | **ಅಶ್ವಿನಾ**—ಅಶ್ವಿನೀದೇವತೆಗಳನ್ನು | **ಪ್ರಾತಃ**— ಪ್ರಾತಃಕಾಲದಲ್ಲಿ ಕರೆಯುತ್ತೇವೆ | **ಭಗಂ**— ಭಗನನ್ನೂ | **ಪೂಷ್ಣಂ**— ಪೂಷದೇವನನ್ನೂ | **ಬ್ರಹ್ಮಣಸ್ಪತಿಂ**— ಬ್ರಹ್ಮಣಸ್ಪತಿಯನ್ನೂ ಕರೆಯುತ್ತೇವೆ | **ಪ್ರಾತಃ**— ಪ್ರಾತಃಕಾಲದಲ್ಲಿ | **ಸೋಮಂ**— ಸೋಮದೇವನನ್ನೂ | **ಉತ**— ಮತ್ತು | **ರುದ್ರಂ**— ರುದ್ರನನ್ನೂ | **ಹುವೇಮ**— ಕರೆಯುತ್ತೇವೆ

ಭಾವಾರ್ಥ

ಈ ಉಷಃಕಾಲದಲ್ಲಿ ನಾವು ಅಗ್ನಿಯನ್ನೂ, ಇಂದ್ರನನ್ನೂ, ಮಿತ್ರಾವರುಣರನ್ನೂ, ಅಶ್ವಿನೀದೇವತೆಗಳನ್ನೂ ಕರೆಯುತ್ತೇವೆ ಈ ಪ್ರಾತಃಕಾಲದಲ್ಲಿಯೇ ಭಗನನ್ನೂ, ಪೂಷದೇವನನ್ನೂ, ಬ್ರಹ್ಮಣಸ್ಪತಿಯನ್ನೂ, ಸೋಮದೇವನನ್ನೂ ರುದ್ರನನ್ನೂ ಸಹ ಪ್ರಾರ್ಥಿಸಿ ಕರೆಯುತ್ತೇವೆ.

English Translation

We invoke at dawn Agni at dawn Indra at dawn Mitra and Varuna at dawn the Ashwins at dawn Bhaga, Pushan, Brahmanaspathi: at dawn Soma and Rudra

ವಿಶೇಷವಿಷಯಗಳು

ಭಗಶಬ್ದಪ್ರಯೋಗವೂ, ಭಗದೇವತೆಯ ಸ್ತುತಿಯಿರುವ ಋಕ್ಕುಗಳೂ ಅಲ್ಲಲ್ಲಿ ಬಂದಿದ್ದರೂ ಭಗದೇವತಾಪರವಾಗಿರುವ ಒಟ್ಟು ಸೂಕ್ತವು ಇದೊಂದೇ ಎಂದರೆ ಪ್ರಕೃತಸೂಕ್ತವು (ಋ ಸಂ ೭ ೪೧) ಮಾತ್ರ ಆದರೂ ಇತರ ದೇವತೆಗಳೂ ಈ ಸೂಕ್ತದಲ್ಲಿ ಸ್ತುತರಾಗಿದ್ದಾರೆ. ಈ ಭಗನ ಹೆಸರು ಸುಮಾರು ೬೦ ಸಲ ಪಠಿತವಾಗಿದೆ ಈ ಭಗಶಬ್ದಕ್ಕೆ "ದಾತೃವು, ಹಂಚಿಕೊಡುವವನು" ಎಂದರ್ಥವಾಗುತ್ತದೆ ಈ ಅರ್ಥದಲ್ಲಿ ಭಗಶಬ್ದವು ಇಪ್ಪತ್ತುಸಲ ಸಾಧಾರಣವಾಗಿ ಸವಿತೃದೇವತೆಗೆ ವಿಶೇಷಣವಾಗಿ ಉಪಯೋಗಿಸಿದೆ ಈ ಸೂಕ್ತಗಳಲ್ಲೆಲ್ಲಾ ಈ ಶಬ್ದಕ್ಕೆ ಸಂಪತ್ತನ್ನು ಹಂಚುವವನು ಎಂದೇ ಕಲ್ಪನೆ ಇಂದ್ರ, ಅಗ್ನಿ ಮೊದಲಾದ ದೇವತೆಗಳ ಔದಾರ್ಯವನ್ನು ಶ್ಲಾಘಿಸುವಾಗ ಭಗನಿಗೆ ಹೋಲಿಸುವುದೇ ರೂಢಿಯು. ಭಗಶಬ್ದಕ್ಕೆ ಭಾಗ್ಯ, ಐಶ್ವರ್ಯ, ಸಂಪತ್ತು ಎಂದೂ ಅರ್ಥವು ಈ ಅರ್ಥದಲ್ಲಿಯೂ ಸುಮಾರು ೨೦ಕಡೆ ಈ ಶಬ್ದದ ಪ್ರಯೋಗವಿದೆ. ಈ ಸೂಕ್ತದ ಎರಡನೆಯ ಋಕ್ಕಿನಲ್ಲಿ ಭಗದೇವತೆಯನ್ನು ಹಂಚುವವನು ಎಂದು ಕರೆದಿರುವುದಲ್ಲದೆ, ಮನುಷ್ಯರು ತಾವೂ ಇದರಲ್ಲಿ ಭಾಗವಹಿಸುವಂತಾಗಲೆಂದು ಅಪೇಕ್ಷಿಸುತ್ತಾರೆ ಎಂದಿದೆ. ಇನ್ನೊಂದುಕಡೆ (ಋ. ಸಂ ೫ ೪೬-೬) ಅವನು ಭಕ್ತರಿಗೆ ಅಪಾರವಾದ ಸಂಪತ್ತನ್ನು ಹಂಚಿಕೊಡಲೆಂಬ ಪ್ರಾರ್ಥನೆ ಇದೆ.

ಉಷೋದೇವತೆಯು ಭಗನ ಸಹೋದರಿಯೆಂದೂ (ಋ. ಸಂ. ೧-೧೨೩-೫) ಭಗನ ಕಣ್ಣು ರಶ್ಮಿಗಳಿಂದ ಅಲಂಕೃತವಾಗಿದೆಯೆಂದೂ (ಋ. ಸಂ. ೩-೫೪-೧೪) ಹೇಳಿದೆ. ಯಾಸ್ಕರು (ನಿ. ೧೨-೧೩) ಭಗನು ಪ್ರಾತಃಕಾಲಕ್ಕೆ ಒಡೆಯನೆಂದು ಹೇಳಿದಾರೆ.

ಸಂಹಿತಾಪಾಠಃ

ಪ್ರಾತರ್ಜಿತಂ ಭಗಮುಗ್ರಂ ಹುವೇಮ ವಯಂ ಪುತ್ರಮದಿತೇರ್ಯೋ ವಿ-
ಧರ್ತಾ |
ಆಧ್ರಶ್ಚಿದ್ಯಂ ಮನ್ಯಮಾನಸ್ತುರಶ್ಚಿದ್ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ || ೨ ||

ಪದಪಾಠಃ

ಪ್ರಾತಃऽಜಿತಂ | ಭಗಂ | ಉಗ್ರಂ | ಹುವೇಮ | ವಯಂ | ಪುತ್ರಂ | ಅದಿತೇಃ | ಯಃ | ವಿऽಧರ್ತಾ |
ಆಧ್ರಃ | ಚಿತ್ | ಯಂ | ಮನ್ಯಮಾನಃ | ತುರಃ | ಚಿತ್ | ರಾಜಾ | ಚಿತ್ | ಯಂ | ಭಗಂ | ಭಕ್ಷಿ | ಇತಿ |
ಆಹ || ೨ ||

ಸಾಯಣಭಾಷ್ಯಂ

ಯೋ ಭಗೋ ದೇವೋ ವಿಧರ್ತಾ ವಿಶ್ವಸ್ಯ ಜಗತೋ ಧಾರಕೋ ಜಿತಂ ಜಯಶೀಲಮುಗ್ರಮುದ್ಗೂರ್ಣಮದಿತೇಃ ಪುತ್ರಂ ಭಗಂ ದೇವಂ ಪ್ರಾತಃಕಾಲ ಏವ ವಯಂ ಹುವೇಮ | ಆಹ್ವಯಾಮಃ | ಆಧ್ರಶ್ಚಿದ್ದರಿದ್ರೋऽಪಿ ಸ್ತೋತಾ ಯಂ ಭಗಂ ದೇವಂ ಮನ್ಯಮಾನಃ ಸ್ತುವನ್ ಭಗಂ ಭಜನೀಯಂ ಧನಂ ಭಕ್ಷಿ ಭಜ ವಿಭಜ ಮಹ್ಯಂ ದೇಹೀತ್ಯಾಹ ಬ್ರವೀತಿ | ತುರಶ್ಚಿತ್ | ತುರತಿರ್ಗತಿಕರ್ಮಾ | ಪ್ರಾಪ್ತಧನೋऽಪಿ ರಾಜಾ ಚಿತ್ ಸಮರ್ಥೋऽಪಿ ಜನೋ ಯಂ ಭಗಂ ದೇವಂ ಭಜನೀಯಂ ಧನಂ ಮಹ್ಯಂ ಭಕ್ಷಿ ದೇಹೀತ್ಯಾಹ | ತಂ ಭಗಂ ಪ್ರಾತರೇವ ವಯಂ ಹುವೇಮೇತಿ ಸಂಬಂಧಃ ||

ಪ್ರತಿಪದಾರ್ಥ

**ಆಧ್ರಶ್ಚಿತ್**—ದರಿದ್ರನಾದ ಸ್ತೋತೃವು | **ಯಂ**—ಯಾವ ಭಗನನ್ನು | **ಮನ್ಯಮಾನಃ**—ಸ್ತುತಿಸುತ್ತಾ | **ಭಗಂ**—ಪೂಜ್ಯವಾದ ಧನವನ್ನು | **ಭಕ್ಷಿ**—ನನಗೆ ಕೊಡು | **ಇತಿ**—ಎಂಬುದಾಗಿ | **ಆಹ**—ಕೇಳಿಕೊಳ್ಳುವನೋ | **ತುರಶ್ಚಿತ್**—ಧನವಂತನೂ | **ರಾಜಾ ಚಿತ್**—ಪ್ರಭುವಾದರೂ | **ಯಂ**—ಯಾವ ಭಗನನ್ನೇ ಕೇಳಿಕೊಳ್ಳುವರೋ ಅಂತಹವನೂ | **ಯಃ**—ಯಾರು | **ವಿಧರ್ತಾ**—ಸಕಲ ಜಗತ್ತಿಗೂ ಧಾರಕನಾಗಿರುವನೋ ಅಂತಹವನೂ | **ಪ್ರಾತರ್ಜಿತಂ**—ಪ್ರಾತಃಕಾಲದಲ್ಲಿ ಜಯಶೀಲನೂ | **ಉಗ್ರಂ**—ಅಧಿಕವಾದ ಬಲವುಳ್ಳವನೂ | **ಅದಿತೇಃ**—ಅದಿತಿಯ | **ಪುತ್ರಂ**—ಪುತ್ರನೂ ಆದ | **ಭಗಂ**—ಭಗದೇವನನ್ನು | **ವಯಂ**—ನಾವು | **ಪ್ರಾತಃ**—ಈ ಪ್ರಾತಃಕಾಲದಲ್ಲಿ | **ಹುವೇಮ**—ಕರೆಯುತ್ತೇವೆ.

ಭಾವಾರ್ಥ

ಸ್ತೋತೃವು ದರಿದ್ರನಾಗಲಿ ಅಥವಾ ಪ್ರಭುವಾಗಲಿ, ಯಾವ ಸ್ಥಿತಿಯಲ್ಲಿದ್ದರೂ ಸಹ ಪೂಜ್ಯನಾದ ಭಗನನ್ನೇ ಪ್ರಾರ್ಥಿಸುತ್ತ "ನನಗೆ ಪೂಜ್ಯವಾದ ಧನವನ್ನು ಕೊಡು" ಎಂಬುದಾಗಿ ಯಾವ ಭಗನನ್ನು ಪ್ರಾರ್ಥಿಸುವರೋ, ಯಾರು ಸಕಲ ಜಗತ್ತಿಗೂ ಧಾರಕನೊ, ಅಂತಹ ಜಯಶೀಲನೂ, ಅಧಿಕವಾದ ಬಲವುಳ್ಳವನೂ, ಅದಿತಿಪುತ್ರನೂ ಆದ ಭಗದೇವನನ್ನು ನಾವು ಈ ಪ್ರಾತಃಕಾಲದಲ್ಲಿ ಪ್ರಾರ್ಥಿಸಿ ಕರೆಯುತ್ತೇವೆ

English Translation

We invoke at dawn the victorious fierce Bhaga, the son of Aditi, who is the sustainer (of the world), to whom the poor man praising him applies,

saying, give (me wealth), to whom the opulent prince (addresses the same prayer).

ವಿಶೇಷವಿಷಯಗಳು

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದ್ದಾರೆ—

**ಪ್ರಾತರ್ಜಿತಂ ಧನಮುಗ್ರಂ ಹುವೇಮ ವಯಂ ಪುತ್ರಮದಿತೇರ್ಯೋ ವಿಧಾರಯಿತಾ ಸರ್ವಸ್ಯಾಧ್ರಶ್ಚಿದ್ಯಂ ಮನ್ಯಮಾನ ಆಢ್ಯಾಲುರ್ದರಿದ್ರಸ್ತುರಶ್ಚಿತ್ | ತುರ ಇತಿ ಯಮನಾಮ ತರತೇರ್ವಾ ತ್ವರತೇರ್ವಾ ತ್ವರಯಾ ತೂರ್ಣಗತಿರ್ಯಮೋ ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ॥ ಅಂಧೋ ಭಗ ಇತ್ಯಾಹುರನುತ್ಸೃಪ್ತೋ ನ ದೃಶ್ಯತೇ | ಪ್ರಾಶಿತ್ರಮಸ್ಯಾಕ್ಷಿಣೀ ನಿರ್ಜಘಾನೇತಿ ಚ ಬ್ರಾಹ್ಮಣಂ | ಜನಂ ಭಗೋ ಗಚ್ಛತೀತಿ ವಾ ವಿಜ್ಞಾಯತೇ ಜನಂ ಗಚ್ಛತ್ಯಾದಿತ್ಯ ಉದಯೇನ ॥** (ನಿ ೧೨-೧೪)

ಪ್ರಾತಃಕಾಲದಲ್ಲಿ ಜಯಶೀಲನಾದವನೂ, ಬಲಶಾಲಿಯೂ, ಅದಿತಿಯ ಪುತ್ರನೂ, ಸಮಸ್ತವನ್ನೂ ಧರಿಸಿ ಕಾಪಾಡುವವನೂ ಆದ ಭಗನೆಂಬ ದೇವತೆಯನ್ನು ನಾವು ಈ ಪ್ರಾತಃಕಾಲದಲ್ಲಿ ಪ್ರಾರ್ಥಿಸಿ ಕರೆಯುತ್ತೇವೆ ದರಿದ್ರನಾಗಲಿ, ಧನಿಕನಾಗಲಿ ಧನಪ್ರಾಪ್ತಿಗಾಗಿ ಈ ಭಗನನ್ನು ಧನವನ್ನು ಕೊಡೆಂದು ಧ್ಯಾನಿಸುತ್ತಾ ಪ್ರಾರ್ಥಿಸಬೇಕು ತುರಃ ಎಂಬ ಶಬ್ದವೂ ಯಮ ಎಂಬ ಶಬ್ದವೂ ಸಮಾನಾರ್ಥಸೂಚಕಪದಗಳು ಈ ತುರಃ ಎಂಬ ಶಬ್ದವು ದಾಟು ಎಂಬರ್ಥವುಳ್ಳ ತರತಿ ಧಾತುವಿನಿಂದಾಗಲಿ, ಜಾಗ್ರತೆಮಾಡು ಎಂಬರ್ಥವುಳ್ಳ ತ್ವರತಿಧಾತುವಿನಿಂದಾಗಲಿ, ನಿಷ್ಪನ್ನವಾಗಬಹುದು. ಯಮನು ವೇಗಗಮನವುಳ್ಳವನು ರಾಜನೂ ಸಹ ಈ ಭಗದೇವನನ್ನು ನನಗೆ ಪೂಜ್ಯವಾದ ಧನವನ್ನು ಕೊಡು ಎಂದು ಕೇಳಿಕೊಳ್ಳುವನು.

ಈ ಭಗನು ಅಂಧನೆಂದು (ಕುರುಡನೆಂದು) ಕೆಲವರು ಹೇಳುವರು ಎಂದರೆ ಈ ದೇವನು ಯಾರ ದೃಷ್ಟಿಗೂ ಬೀಳುವುದಿಲ್ಲ (ಭಗನು ಸೂರ್ಯನು ಎಂಬರ್ಥದಲ್ಲಿ) ಇನ್ನೂ ಉದಯವಾಗದಿರುವಾಗ ಈ ದೇವನು ಯಾರಿಗೂ ಗೋಚರಿಸುವುದಿಲ್ಲ ಈ ವಿಷಯದಲ್ಲಿ **ಪ್ರಾಶಿತ್ರಮಸ್ಯಾಕ್ಷಿಣೀ ನಿರ್ಜಘಾನ** | ಪ್ರಾಶಿತ್ರನೆಂಬುವನು ಈ ದೇವನ ಎರಡು ಕಣ್ಣುಗಳನ್ನು ನಾಶಮಾಡಿದನು ಎಂದು ಹೇಳುವ ಬ್ರಾಹ್ಮಣವಾಕ್ಯವೂ ಉದಾಹರಣೆಯಾಗಿದೆ. ಈ ಭಗವು (ಅದೃಷ್ಟ, ಐಶ್ವರ್ಯ) ಮನುಷ್ಯರ ಒಳಗೆ ಹೋಗುವುದೆಂದು ತಿಳಿಯಬೇಕು ಎಂದರೆ, ಭಗವು ಅಥವಾ ಆದಿತ್ಯನು ಉದಯಾನಂತರ ರಶ್ಮಿಗಳ ಮೂಲಕ ಜನರ ಒಳಗೆ ಹೋಗುವನು ಎಂದು ನಿರ್ವಚನಾಭಿಪ್ರಾಯವು

ಸಂಹಿತಾಪಾಠಃ

ಭಗ ಪ್ರಣೇತರ್ಭಗ ಸತ್ಯರಾಧೋ ಭಗೇಮಾಂ ಧಿಯಮುದವಾ ದದನ್ನಃ ।
ಭಗ ಪ್ರಣೋ ಜನಯ ಗೋಭಿರಶ್ವೈರ್ಭಗ ಪ್ರ ನೃಭಿರ್ನೃವಂತಃ ಸ್ಯಾಮ ॥೩॥

ಪದಪಾಠಃ

**ಭಗ । ಪ್ರನೇತರಿತಿ ಪ್ರऽನೇತಃ । ಭಗ । ಸತ್ಯऽರಾಧಃ । ಭಗ । ಇಮಾಂ । ಧಿಯಂ । ಉತ್ । ಅವ । ದದತ್ । ನಃ ।**

**ಭಗ । ಪ್ರ । ನಃ । ಜನಯ । ಗೋಭಿಃ । ಅಶ್ವೈಃ । ಭಗ । ಪ್ರ । ನೃಽಭಿಃ । ನೃಽವಂತಃ । ಸ್ಯಾಮ ॥ ೩ ॥**

ಸಾಯಣಭಾಷ್ಯಂ

**ಹೇ ಭಗ ದೇವ ತ್ವಂ ಪ್ರಣೇತಾ ಪ್ರಕರ್ಷೇಣ ನೇತಾಸಿ । ತಾದೃಶ ಪ್ರಣೇತರ್ಹೇ ಭಗ ತ್ವಂ ಸತ್ಯರಾಧಃ ಸತ್ಯಧನೋಽಸಿ । ತಾದೃಶ ಸತ್ಯರಾಧೋ ಹೇ ಭಗ ತ್ವಂ ನೋಽಸ್ಮಭ್ಯಂ ದದತ್ ಕಾಮಾನ್ಪ್ರಯಚ್ಛನ್ನಿಮಾಮಸ್ಮದೀಯಾಂ ಧಿಯಂ ಸ್ತುತಿಮುದವ । ಉದ್ರಕ್ಷ । ಸಫಲಯುಕ್ತಾಂ ಕುರು । ಹೇ ಭಗ ತ್ವಂ ಗೋಭಿರಶ್ವೈಶ್ಚ ನೋಽಸ್ಮಾನ್ ಪ್ರ ಜನಯ । ಪ್ರೋದ್ಭೂತಾನ್ ಕುರು । ಹೇ ಭಗ ತ್ವತ್ಪ್ರಸಾದಾದ್ವಯಂ ನೃಭಿರ್ನೇತೃಭಿಃ ಪುತ್ರಾದಿಭಿರ್ನೃವಂತೋ ಮನುಷ್ಯವಂತಃ ಪ್ರ ಸ್ಯಾಮ । ಪ್ರಭವೇಮ ॥**

ಪ್ರತಿಪದಾರ್ಥ

**ಪ್ರಣೇತಃ**— ಉತ್ತಮವಾದ ಮಾರ್ಗದರ್ಶಕನಾದ । **ಭಗ**— ಎಲೈ ಭಗದೇವನೇ । (**ತ್ವಂ**— ನೀನು) । **ಸತ್ಯರಾಧಃ** –ಸತ್ಯಾತ್ಮಕವಾದ ಧನವುಳ್ಳವನಾಗಿದ್ದೀಯೆ. । **ಭಗ**—ಎಲೈ ಭಗದೇವನೇ, । **ನಃ**—ನಮಗೆ । **ದದತ್**—ನಮ್ಮ ಇಷ್ಟಾರ್ಥಗಳನ್ನು ಕೊಡುತ್ತ । **ಇಮಾಂ ಧಿಯಂ**— ನಮ್ಮ ಈ ಸ್ತುತಿಯನ್ನು । **ಉದವ**—ಫಲಯುಕ್ತವಾಗುವಂತೆ ಮಾಡು. । **ಭಗ**— ಎಲೈ ಭಗದೇವನೇ, । **ಗೋಭಿಃ**—ಗೋವುಗಳಿಂದಲೂ । **ಅಶ್ವೈಃ**—ಅಶ್ವಗಳಿಂದಲೂ ಕೂಡಿ । **ನಃ**—ನಮ್ಮನ್ನು । **ಪ್ರ ಜನಯ**—ಉತ್ಪನ್ನರಾಗುವಂತೆ ಮಾಡು. । **ಭಗ**—ಎಲೈ ಭಗನೇ, । **ನೃಭಿಃ**—ಪುತ್ರಾದಿಗಳಿಂದ ಕೂಡಿ । **ನೃವಂತಃ**— ಪರಿವಾರವುಳ್ಳವರಾಗಿ । **ಪ್ರ ಸ್ಯಾಮ**— ನಾವು ಉತ್ತಮಸ್ಥಿತಿಯುಳ್ಳವರಾಗುವಂತೆ ಆಗಲಿ.

ಭಾವಾರ್ಥ

ಉತ್ತಮವಾದ ಮಾರ್ಗದರ್ಶಕನಾದ ಎಲೈ ಭಗದೇವನೇ, ನೀನು ಸತ್ಯಾತ್ಮಕವಾದ ಧನವುಳ್ಳವನಾಗಿ ಆಗಿದ್ದೀಯೆ ಎಲೈ ಭಗನೇ, ನಮಗೆ ಇಷ್ಟಾರ್ಥಗಳನ್ನೊದಗಿಸುತ್ತ ನಮ್ಮ ಈ ಸ್ತುತಿಯನ್ನು ಫಲಯುಕ್ತವಾಗುವಂತೆ ಮಾಡು. ಗೋವುಗಳಿಂದಲೂ, ಅಶ್ವಗಳಿಂದಲೂ ನಾವು ಕೂಡಿರುವಂತೆ ಮಾಡು. ನಾವು ಪುತ್ರಾದಿಪರಿವಾರಗಳಿಂದ ತುಂಬಿರುವಂತೆ ಆಗುವಂತೆ ಅನುಗ್ರಹಿಸು.

English Translation

Bhaga chief leader of rites, Bhaga faithful promiser of wealth, Bhaga granting (our wishes), fructify this ceremony, enrich us with cattle and horses . may we, Bhaga, be eminent with male decendants and followers

ಸಂಹಿತಾಪಾಠಃ

ಉತೇದಾನೀಂ ಭಗವಂತಃ ಸ್ಯಾಮೋತ ಪ್ರಪಿತ್ವ ಉತ ಮಧ್ಯೇ ಅಹ್ನಾಂ ।
ಉತೋದಿತಾ ಮಘವನ್ತ್ಸೂರ್ಯಸ್ಯ ವಯಂ ದೇವಾನಾಂ ಸುಮತೌ ಸ್ಯಾಮ॥

ಪದಪಾಠಃ

ಉತ । ಇದಾನೀಂ । ಭಗಽವಂತಃ । ಸ್ಯಾಮ । ಉತ । ಪ್ರಽಪಿತ್ವೇ । ಉತ । ಮಧ್ಯೇ । ಅಹ್ನಾಂ ।
ಉತ । ಉತ್ಽಇತಾ । ಮಘಽವನ್ । ಸೂರ್ಯಸ್ಯ । ವಯಂ । ದೇವಾನಾಂ । ಸುಽಮತೌ । ಸ್ಯಾಮ ॥೪॥

ಸಾಯಣಭಾಷ್ಯಂ

**ಉತಾಪಿ ಚೇದಾನೀಂ ವಯಂ ಭಗವಂತಃ ಸ್ಯಾಮ । ಹೇ ಭಗ ಭಗೇನ ತ್ವಯಾ ಸ್ವಾಮಿನಾ ಯುಕ್ತಾ ಭವೇಮ । ಯದ್ವಾ । ಭಗವಂತೋ ಧನವಂತಃ ಸ್ಯಾಮ । ಉತಾಪಿ ಚ ಪ್ರಪಿತ್ವೇಽಹ್ನಾಂ ಪ್ರಾಪ್ತೇ ಪೂರ್ವಾಹ್ಣೇ ಭಗವಂತಃ ಸ್ಯಾಮ । ಉತಾಪಿ ಚಾಹ್ನಾಂ ದಿವಸಾನಾಂ ಮಧ್ಯೇ ಮಧ್ಯಾಹ್ನೇ ಭಗವಂತಃ ಸ್ಯಾಮ । ಉತಾಪಿ ಚ ಹೇ ಮಘವನ್ಧನವನ್ಭಗ ದೇವ ಸೂರ್ಯಸ್ಯ ಸರ್ವಸ್ಯ ಪ್ರೇರಕಸ್ಯ ದೇವಸ್ಯೋದಿತೋದಿತಾವುದಯೇ ಸತಿ ವಯಂ ತ್ವದನುಗ್ರಹಾದ್ದೇವಾನಾಮಿಂದ್ರಾದೀನಾಂ ಸುಮತಾವನುಗ್ರಹಬುದ್ಧೌ ಸ್ಯಾಮ । ಭವೇಮ ॥**

ಪ್ರತಿಪದಾರ್ಥ

**ಉತ**—ಮತ್ತು । **ಇದಾನೀಂ**—ಈಗ । (**ವಯಂ**—ನಾವು । **ಭಗವಂತಃ**—ಪೂಜ್ಯನಾದ ಭಗದೇವನ ಅನುಗ್ರಹಕ್ಕೆ ಪಾತ್ರರಾಗುವಂತಾಗಲಿ ) ಧನವುಳ್ಳವರಾಗಿ ಆಗೋಣ । **ಉತ**—ಮತ್ತು । **ಪ್ರಪಿತ್ವೇ**—ಪೂರ್ವಾಹ್ಣದಲ್ಲಿ ಭಗವಂತರಾಗಿರೋಣ । **ಉತ**--ಮತ್ತು । **ಅಹ್ನಾಂ**—ಅಹಸ್ಸಿನ । **ಮಧ್ಯೇ**—ಮಧ್ಯಕಾಲದಲ್ಲಿ ಧನವಂತರಾಗಿರುವಂತಾಗಲಿ । **ಮಘವನ್**—ಧನವಂತನಾದ ಎಲೈ ಭಗನೇ. । **ಸೂರ್ಯಸ್ಯ**—ಸೂರ್ಯನ । **ಉದಿತಾ**—ಉದಯಕಾಲದಲ್ಲಿ । **ವಯಂ**—ನಾವು । **ದೇವಾನಾಂ**—ಇಂದ್ರಾದಿದೇವತೆಗಳ । **ಸುಮತೌ**—ಅನುಗ್ರಹಬುದ್ಧಿಯಲ್ಲಿ **ಸ್ಯಾಮ**—ಇರುವಂತಾಗಲಿ

ಭಾವಾರ್ಥ

ದಿನವೆಲ್ಲಾ ನಾವು ಭಗದೇವನ ಅನುಗ್ರಹವನ್ನು ಸಂಪಾದಿಸೋಣ ಎಲೈ ಭಗದೇವನೆ, ದಿನದ ಪೂರ್ವಾಹ್ಣದಲ್ಲೂ ಮಧ್ಯಾಹ್ನ ಕಾಲದಲ್ಲೂ ನಾವು ಧನವಂತರಾಗುವಂತೆ ಅನುಗ್ರಹಿಸು ಸೂರ್ಯೋದಯಕಾಲದಲ್ಲಿ ನಾವು ಇಂದ್ರಾದಿದೇವತೆಗಳ ಅನುಗ್ರಹವನ್ನು ಸಂಪಾದಿಸುವಂತೆ ಮಾಡು

English Translation

May we now have Bhaga (for our lord), whether in the forenoon or at mid day, or at sun rise may we, Maghavan, enjoy the favour of the gods.

ಸಂಹಿತಾಪಾಠಃ

ಭಗ ಏವ ಭಗವಾँ ಅಸ್ತು ದೇವಾಸ್ತೇನ ವಯಂ ಭಗವಂತಃ ಸ್ಯಾಮ ।
ತಂ ತ್ವಾ ಭಗ ಸರ್ವ ಇಜ್ಜೋಹವೀತಿ ಸ ನೋ ಭಗ ಪುರಏತಾ ಭವೇಹ ॥೫॥

ಪದಪಾಠಃ

ಭಗಃ । ಏವ । ಭಗऽವಾನ್ । ಅಸ್ತು । ದೇವಾಃ । ತೇನ । ವಯಂ । ಭಗऽವಂತಃ । ಸ್ಯಾಮ ।
ತಂ । ತ್ವಾ । ಭಗ । ಸರ್ವಃ । ಇತ್ । ಜೋಹವೀತಿ । ಸಃ । ನಃ । ಭಗ । ಪುರಃऽಏತಾ । ಭವ । ಇಹ ॥

ಸಾಯಣಭಾಷ್ಯಂ

**ಹೇ ದೇವಾಃ ಭಗೋ ದೇವ ಏವ ಭಗವಾನ್ ಧನವಾನಸ್ತು । ತೇನ ಭಗೇನ ದೇವೇನ ಧನೇನ ವಾ ವಯಂ ಭಗವಂತಃ ಸ್ಯಾಮ । ಧನವಂತೋ ಭವೇಮ । ಹೇ ಭಗ ತಂ ಪ್ರಸಿದ್ಧಂ ತ್ವಾ ತ್ವಾಂ ಸರ್ವ ಇತ್ಸರ್ವ ಏವ ಜನೋ ಜೋಹವೀತಿ । ಭೃಶಂ ಪುನಃಪುನರ್ವಾಹ್ವಯತಿ । ಹೇ ಭಗ ದೇವ ಸ ತ್ವಮಿಹಾಸ್ಮಿನ್ಯಜ್ಞೇ ನೋಽಸ್ಮಾಕಂ ಪುರಏತಾ ಪುರೋಗಂತಾ ಭವ ॥**

ಪ್ರತಿಪದಾರ್ಥ

**ದೇವಾಃ**—ಎಲೈ ದೇವತೆಗಳೇ, । **ಭಗ ಏವ**—ಭಗದೇವನು ಮಾತ್ರ । **ಭಗವಾನ್**—ಧನವಂತನಾಗಿ । **ಅಸ್ತು**—ಆಗಿರಲಿ. । **ತೇನ**—ಆ ಭಗನ ಅನುಗ್ರಹದಿಂದ । **ವಯಂ**—ನಾವು । **ಭಗವಂತಃ**—ಧನವಂತರಾಗಿ । **ಸ್ಯಾಮ**—ಆಗಿರುವಂತಾಗಲಿ । **ಭಗ**—ಎಲೈ ಭಗದೇವನೇ. । **ತಂ**—ಪ್ರಸಿದ್ಧನಾದ । **ತ್ವಾ**—ನಿನ್ನನ್ನು । **ಸರ್ವ ಇತ್**—ಸಕಲ ಜನರೂ । **ಜೋಹವೀತಿ**—ಪದೇಪದೇ ಕರೆಯುತ್ತಾರೆ. । **ಭಗ**—ಎಲೈ ಭಗದೇವನೇ, । **ಸಃ**—ಅಂತಹ ನೀನು । **ಇಹ**—ನಮ್ಮ ಈ ಯಜ್ಞದಲ್ಲಿ । **ನಃ**—ನಮ್ಮ । **ಪುರಏತಾ**—ಮಾರ್ಗದರ್ಶಕನಾಗಿ । **ಭವ**—ಆಗಿರು.

ಭಾವಾರ್ಥ

ಎಲೈ ದೇವತೆಗಳೇ, ಭಗದೇವನು ಮಾತ್ರ ಧನವಂತನಾಗಿರಲಿ ಭಗನ ಅನುಗ್ರಹದಿಂದ ನಾವೂ ಧನವಂತರಾಗುವಂತಾಗಲಿ. ಎಲೈ ಭಗದೇವನೇ, ಪ್ರಸಿದ್ಧನಾದ ನಿನ್ನನ್ನು ಸಕಲ ಜನರೂ ಪದೇಪದೇ ಕರೆಯುತ್ತಾರೆ ಎಲೈ ಭಗದೇವನೇ, ನೀನು ನಮ್ಮ ಈ ಯಜ್ಞದಲ್ಲಿ ನಮ್ಮ ಮಾರ್ಗದರ್ಶಕನಾಗಿರು

English Translation

May Bhaga, gods, be the possessor of opulence, and through him, may we be possessed of wealth, every one verily repeatedly invokes you, Bhaga Bhaga, be our proceder at this solemnity.

ಸಂಹಿತಾಪಾಠಃ

ಸಮಧ್ವರಾಯೋಷಸೋ ನಮಂತ ದಧಿಕ್ರಾವೇವ ಶುಚಯೇ ಪದಾಯ ।
ಅರ್ವಾಚೀನಂ ವಸುವಿದಂ ಭಗಂ ನೋ ರಥಮಿವಾಶ್ವಾ ವಾಜಿನ ಆ ವಹಂತು ॥

ಪದಪಾಠಃ

**ಸಂ । ಅಧ್ವರಾಯ । ಉಷಸಃ । ನಮಂತ । ದಧಿಕ್ರಾವಾಽಇವ । ಶುಚಯೇ । ಪದಾಯ ।**

**ಅರ್ವಾಚೀನಂ । ವಸುಽವಿದಂ । ಭಗಂ । ನಃ । ರಥಂಽಇವ । ಅಶ್ವಾಃ । ವಾಜಿನಃ । ಆ । ವಹಂತು ॥ ೬ ॥**

ಸಾಯಣಭಾಷ್ಯಂ

**ಶುಚಯೇ ಶುದ್ಧಾಯ ಗಮನಯೋಗ್ಯಾಯ ಪದಾಯ ಸ್ಥಾನಾಯ. ದಧಿಕ್ರಾವೇವಾಶ್ವೋ ಯಥಾ ತದ್ವೋಷಸ ಉಷೋದೇವತಾ ಅಧ್ವರಾಯಾಸ್ಮದೀಯಾಯ ಯಾಗಾಯ ಸಂ ನಮಂತ । ಸಂಗಚ್ಛಂತು ।**

ವಾಜಿನೋ ವೇಗವಂತೋಽಶ್ವಾ ರಥಮಿವ ರಥಂ ಯಥಾ ತಥೋಷಸೋಽರ್ವಾಚೀನಮಸ್ಮದಭಿಮುಖಂ ವಸುವಿದಂ ಧನಸ್ಯ ಪ್ರಾಪಕಂ ಭಗಂ ದೇವಂ ನೋಽಸ್ಮಾನ್ಪ್ರತ್ಯಾ ವಹಂತು । ಆನಯಂತು ॥

ಪ್ರತಿಪದಾರ್ಥ

ಶುಚಯೇ— ಪರಿಶುದ್ಧವಾದ । ಪದಾಯ— ಸ್ಥಾನಲಾಭಕ್ಕಾಗಿ । ದಧಿಕ್ರಾವೇವ— ಅಶ್ವದಂತೆ । ಉಷಸಃ—ಉಷೋದೇವತೆಗಳು । ಅಧ್ವರಾಯ— ನಮ್ಮ ಯಾಗಕ್ಕೆ । ಸಂ ನಮಂತ— ಬಂದು ಸೇರಿಕೊಳ್ಳಲಿ । ವಾಜಿನಃ— ವೇಗಗಾಮಿಗಳಾದ । ಅಶ್ವಾಃ— ಅಶ್ವಗಳು । ರಥಮಿವ— ರಥವನ್ನು ವಹಿಸುವಂತೆ । (ಉಷಸಃ— ಉಷಸ್ಸುಗಳು) ಅರ್ವಾಚೀನಂ— ನಮಗಭಿಮುಖನಾದವನೂ । ವಸುವಿದಂ— ಧನಪ್ರಾಪಕನೂ ಆದ । ಭಗಂ— ಭಗದೇವನನ್ನು । ನಃ— ನಮ್ಮಲ್ಲಿಗೆ । ಆ ವಹಂತು— ಕರೆತರಲಿ ।

ಭಾವಾರ್ಥ

ಪರಿಶುದ್ಧವಾದ ಸ್ಥಾನಲಾಭಕ್ಕಾಗಿ, ಅಶ್ವದಂತೆ ಇರುವ ಉಷೋದೇವತೆಗಳು ನಮ್ಮ ಯಾಗಕ್ಕೆ ಬಂದು ಸೇರಿಕೊಳ್ಳಲಿ ವೇಗಗಾಮಿಗಳಾದ ಅಶ್ವಗಳು ರಥವನ್ನು ವಹಿಸುವಂತೆ ಉಷಸ್ಸುಗಳು ನಮಗಭಿಮುಖನಾದವನೂ, ಧನಪ್ರಾಪಕನೂ ಆದ ಭಗದೇವನನ್ನು ನಮ್ಮಲ್ಲಿಗೆ ಕರೆತರಲಿ

English Translation

May the Dawns come to our sacrifice as a horse to a suitable station · as rapid steeds convey a chariot, so may the Dawns bring to us Bhaga, down-descending, charged with riches.

ಸಂಹಿತಾಪಾಠಃ

ಅಶ್ವಾವತೀರ್ಗೋಮತೀರ್ನ ಉಷಾಸೋ ವೀರವತೀಃ ಸದಮುಚ್ಛಂತು ಭದ್ರಾಃ

ಘೃತಂ ದುಹಾನಾ ವಿಶ್ವತಃ ಪ್ರಪೀತಾ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ॥

ಪದಪಾಠಃ

ಅಶ್ವಽವತೀಃ । ಗೋಽಮತೀಃ । ನಃ । ಉಷಸಃ । ವೀರಽವತೀಃ । ಸದಂ । ಉಚ್ಛಂತು । ಭದ್ರಾಃ ।

ಘೃತಂ । ದುಹಾನಾಃ । ವಿಶ್ವತಃ । ಪ್ರಽಪೀತಾಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೭ ॥

ಸಾಯಣಭಾಷ್ಯಂ

ಭದ್ರಾ ಭಜನೀಯಾ ಉಷಸ ಉಷೋದೇವತಾ ಅಶ್ವಾವತೀರಶ್ವವತ್ಯೋಽಶ್ವಸಹಿತಾಃ ಸತ್ಯೋ ಗೋಮತೀರ್ಗೋಮತ್ಯಶ್ಚ ವೀರವತೀರ್ವೀರವತ್ಯಃ ಪುತ್ರಾದಿಜನೋಪೇತಾಶ್ಚ ಭವಂತ್ಯೋ ನೋಽಸ್ಮಭ್ಯಂ ಸದಂ ಸರ್ವದೋಚ್ಛಂತು । ವ್ಯುಚ್ಛಂತು । ನೈಶಂ ತಮೋ ವಿನಾಶಯಂತು । ಕೀದೃಶ್ಯಃ । ಘೃತಮುದಕಂ ದುಹಾನಾಃ ಸಿಂಚಂತ್ಯೋ ವಿಶ್ವತಃ ಸರ್ವೈರ್ಗುಣೈಃ ಪ್ರಪೀತಾಃ ಪ್ರವೃದ್ಧಾಃ । ಏವಂಭೂತಾ ಉಷಸಸ್ತಮುಚ್ಛಂತು । ಅಸ್ಮಿನ್ ಸೂಕ್ತೇ ಪ್ರತಿಪಾದಿತಾ ಹೇ ಸರ್ವೇ ದೇವಾಃ ಯೂಯಂ ನೋಽಸ್ಮಾನ್ ಸದಾ ಸರ್ವದಾ ಸ್ವಸ್ತಿಭಿಃ ಕಲ್ಯಾಣೈಃ ಪಾತ । ಪಾಲಯತ ॥

ಪ್ರತಿಪದಾರ್ಥ

**ಘೃತಂ**—ವೃಷ್ಟಿರೂಪವಾದ ಉದಕವನ್ನು | **ದುಹಾನಾಃ**—ಕರೆಯುವವರೂ | **ವಿಶ್ವತಃ**—ಸರ್ವ ಗುಣ ಗಳಿಂದಲೂ | **ಪ್ರಪೀತಾಃ**—ಪುಷ್ಟರಾದವರೂ | **ಭದ್ರಾಃ**—ಮಂಗಳಕಾರಕಿಯರೂ ಆದ | **ಉಷಸಃ**—ಉಷೋ ದೇವತೆಗಳು | **ನಃ**—ನಮಗೆ | **ಅಶ್ವಾವತೀಃ**—ಅಶ್ವಗಳನ್ನು ಕೊಡುವವರಾಗಿಯೂ | **ಗೋಮತೀಃ**—ಗೋವುಗ ಳನ್ನು ಕೊಡುವವರಾಗಿಯೂ | **ವೀರವತೀಃ**—ವೀರವಂತರಾದ ಪುತ್ರಾದಿಗಳನ್ನು ಕೊಡುವವರಾಗಿಯೂ ಇದ್ದು | **ನಃ**—ನಮಗೋಸ್ಕರ | **ಸದಂ**—ಯಾವಾಗಲೂ | **ಉಚ್ಛಂತು**—ಕತ್ತಲನ್ನು ನಾಶಮಾಡಲಿ | (ಎಲೈ ದೇವತೆಗಳೇ) **ಯೂಯಂ**—ನೀವು | **ನಃ**—ನಮ್ಮನ್ನು | **ಸದಾ**—ಯಾವಾಗಲೂ | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**— ರಕ್ಷಿಸಿರಿ

ಭಾವಾರ್ಥ

ವೃಷ್ಟಿರೂಪವಾದ ಉದಕವನ್ನು ಕರೆಯುವವರೂ, ಸರ್ವ ಗುಣಗಳಿಂದಲೂ ಪುಷ್ಟರಾದವರೂ, ಮಂಗಳಕಾರಕಿ ಯರೂ ಆದ ಉಷೋದೇವತೆಗಳು ನಮಗೆ ಅಶ್ವಗಳನ್ನೂ ಗೋವುಗಳನ್ನೂ, ವೀರವಂತರಾದ ಪುತ್ರಾದಿಗಳನ್ನೂ ಕೊಟ್ಟು ನಮಗೋಸ್ಕರ ಯಾವಾಗಲೂ ಕತ್ತಲನ್ನು ನಾಶಮಾಡಲಿ. ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾ ಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

May the auspicious Dawn ever break, bestowing horses and cattle and male descendants, shedding water, and endowed with all good things . and do you ever cherish us with blessings.

---

## ನಲವತ್ತೆರಡನೆಯ ಸೂಕ್ತವು

ಸಾಯಣಭಾಷ್ಯಂ

**ಪ್ರ ಬ್ರಹ್ಮಾಣ ಇತಿ ಷಡೃಚಂ ನವಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವೈಶ್ವದೇವಂ | ಅತ್ರಾನುಕ್ರಾಂತಂ | ಪ್ರ ಬ್ರಹ್ಮಾಣಃ ಷಡ್ವೈಶ್ವದೇವಂ ತ್ವಿತಿ || ಸೂಕ್ತವಿನಿಯೋಗೋ ಲೈಂಗಿಕಃ || ತೃತೀಯೇ ಛಂದೋಮೇ ಪ್ರಉಗಶಸ್ತ್ರೇ ಪ್ರ ಬ್ರಹ್ಮಾಣ ಇತಿ ವೈಶ್ವದೇವಸ್ತೃಚಃ | ಸೂತ್ರಿತಂ ಚ | ಪ್ರ ಬ್ರಹ್ಮಾಣೋ ಅಂಗಿರಸೋ ನಕ್ಷಂತ ಸರಸ್ವತೀಂ ದೇವಯಂತೋ ಹವಂತೇ | ಆ. ೮-೧೧ | ಇತಿ ||**

**ಅನುವಾದವು—ಪ್ರ ಬ್ರಹ್ಮಾಣಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ವಿಶ್ವೇದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರ ಬ್ರಹ್ಮಾಣಃ ಷಡ್ವೈಶ್ವದೇವಂ ತು** ಎಂದು ಹೇಳಿರುವುದು. ಸೂಕ್ತ ವಿನಿಯೋಗವು ಲೈಂಗಿಕವು. ತೃತೀಯ ಛಂದೋಮದಲ್ಲಿ ಪ್ರಉಗಶಸ್ತ್ರಮಂತ್ರಪಠನಮಾಡುವಾಗ ಪ್ರ ಬ್ರಹ್ಮಾಣಃ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವೈಶ್ವದೇವತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪ್ರ ಬ್ರಹ್ಮಾಣೋ ಅಂಗಿರಸೋ ನಕ್ಷಂತ ಸರಸ್ವತೀಂ ದೇವಯಂತೋ ಹವಂತೇ** ಎಂಬ ಸೂತ್ರದಿಂದ (ಆ. ೮-೧೧) ವಿವೃತವಾಗಿರುವುದು.

## ಸೂಕ್ತ—೪೨

ಮಂಡಲ—೭ || ಅನುವಾಕ—೩ || ಸೂಕ್ತ—೪೨ ||
ಅಷ್ಟಕ—೫ || ಅಧ್ಯಾಯ—೪ || ವರ್ಗ—೯ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ||
ಋಷಿಃ—ವಸಿಷ್ಠಃ ||
ದೇವತಾ—ವಿಶ್ವೇದೇವಾಃ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

ಪ್ರ ಬ್ರಹ್ಮಾಣೋ ಅಂಗಿರಸೋ ನಕ್ಷಂತ ಪ್ರ ಕ್ರಂದನುರ್ನಭನ್ಯಸ್ಯ ವೇತು |
ಪ್ರ ಧೇನವ ಉದಪ್ರುತೋ ನವಂತ ಯುಜ್ಯಾತಾಮದ್ರೀ ಅಧ್ವರಸ್ಯ ಪೇಶಃ ||

ಪದಪಾಠಃ

ಪ್ರ | ಬ್ರಹ್ಮಾಣಃ | ಅಂಗಿರಸಃ | ನಕ್ಷಂತ | ಪ್ರ | ಕ್ರಂದನುಃ | ನಭನ್ಯಸ್ಯ | ವೇತು |
ಪ್ರ | ಧೇನವಃ | ಉದಽಪ್ರುತಃ | ನವಂತ | ಯುಜ್ಯಾತಾಂ | ಅದ್ರೀ ಇತಿ | ಅಧ್ವರಸ್ಯ | ಪೇಶಃ || ೧

ಸಾಯಣಭಾಷ್ಯಂ

ಬ್ರಹ್ಮಾಣೋಽಂಗಿರಸ ಏತನ್ನಾಮಕಾ ಋಷಯಃ ಪ್ರ ನಕ್ಷಂತೇ | ಸರ್ವತ್ರ ವ್ಯಾಪ್ನುವಂತು ಕ್ರಂದನುಃ ಪರ್ಜನ್ಯೋ ನಭನ್ಯಸ್ಯ ಸ್ತೋತ್ರಸ್ಯಾಸ್ಮದೀಯಂ ಸ್ತೋತ್ರಂ ಪ್ರ ವೇತು | ಪ್ರಕರ್ಷೇಣೇಚ್ಛತು| ಧೇನವಃ ಪ್ರೀಣಯಿತ್ರ್ಯೋ ನದ್ಯ ಉದಪ್ರುತ ಉದಕಾನಿ ಸಿಂಚಂತ್ಯಃ ಪ್ರ ನವಂತ | ಸರ್ಪಂತು | ಅದ್ರೀ ಅದ್ರಿಯಂತೌ ಪತ್ನೀಯಜಮಾನಾವಧ್ವರಸ್ಯ ಯಜ್ಞಸ್ಯ ಪೇಶೋ ರೂಪಂ ಯುಜ್ಯಾತಾಂ| ಯೋಜಯೇತಾಂ ||

ಪ್ರತಿಪದಾರ್ಥ

**ಬ್ರಹ್ಮಾಣಃ**—ಬ್ರಹ್ಮವಾದಿಗಳಾದ | **ಅಂಗಿರಸಃ**—ಅಂಗಿರಸ್ಸುಗಳು | **ಪ್ರ ನಕ್ಷಂತ**—ಸರ್ವತ್ರ ವ್ಯಾಪಿಸಿರಲಿ. | **ಕ್ರಂದನುಃ**—ಪರ್ಜನ್ಯನು | **ನಭನ್ಯಸ್ಯ**—ನಮ್ಮ ಸ್ತೋತ್ರವನ್ನು | **ಪ್ರ ವೇತು**—ಪೂರ್ಣವಾಗಿ ಇಚ್ಛಿಸಲಿ | **ಧೇನವಃ**—ತೃಪ್ತಿಕಾರಕಗಳಾದ ನದಿಗಳು | **ಉದಪ್ರುತಃ**—ಪೂರ್ಣಪ್ರವಾಹಗಳನ್ನು ಹರಿಸುತ್ತ | **ಪ್ರ ನವಂತ**—ಪ್ರವಹಿಸಲಿ. | **ಅದ್ರೀ**—ಯಜ್ಞವನ್ನು ಆದರಿಸುವ ಪತ್ನೀಯಜಮಾನರು | **ಅಧ್ವರಸ್ಯ**—ಯಜ್ಞದ | **ಪೇಶಃ**—ರೂಪವನ್ನು | **ಯುಜ್ಯಾತಾಂ**—(ಹೊಂದಿ) ಸೇವಿಸಲಿ.

ಭಾವಾರ್ಥ

ಬ್ರಹ್ಮವಾದಿಗಳಾದ ಅಂಗಿರಸ್ಸುಗಳು ಸರ್ವತ್ರ ವ್ಯಾಪಿಸಿರಲಿ ಪರ್ಜನ್ಯನು ನಮ್ಮ ಸ್ತೋತ್ರವನ್ನು ಪೂರ್ಣವಾಗಿ ಇಚ್ಛಿಸಲಿ. ತೃಪ್ತಿಕಾರಕಗಳಾದ ನದಿಗಳು ಪೂರ್ಣಪ್ರವಾಹಗಳನ್ನು ಹರಿಸುತ್ತ ಪ್ರವಹಿಸಲಿ. ಯಜ್ಞವನ್ನು ಆದರಿಸುವ ಪತ್ನೀಯಜಮಾನರು ಯಜ್ಞಸ್ವರೂಪದಲ್ಲಿ ಐಕ್ಯರಾಗಿ ಅದನ್ನು ಸೇವಿಸಲಿ

## English Translation

May the Brahmanas, the Angirasas, be every-where present: may Krandanu be conscious of (our) adoration · may the rivers glide along, distributing water may the pious couple, (the Yajamana and his wife), conjointly appreciate the beauty of the sacrifice.

ಸಂಹಿತಾಪಾಠಃ

ಸುಗಸ್ತೇ ಅಗ್ನೇ ಸನವಿತ್ತೋ ಅಧ್ವಾ ಯುಕ್ಷ್ವಾ ಸುತೇ ಹರಿತೋ ರೋಹಿತಶ್ಚ

ಯೇ ವಾ ಸದ್ಮನ್ನರುಷಾ ವೀರವಾಹೋ ಹುವೇ ದೇವಾನಾಂ ಜನಿಮಾನಿ ಸತ್ತಃ॥

ಪದಪಾಠಃ

ಸುಽಗಃ । ತೇ । ಅಗ್ನೇ । ಸನಽವಿತ್ತಃ । ಅಧ್ವಾ । ಯುಕ್ಷ್ವ । ಸುತೇ । ಹರಿತಃ । ರೋಹಿತಃ । ಚ ।

ಯೇ । ವಾ । ಸದ್ಮನ್ । ಅರುಷಾಃ । ವೀರಽವಾಹಃ । ಹುವೇ । ದೇವಾನಾಂ । ಜನಿಮಾನಿ । ಸತ್ತಃ ॥೨॥

ಸಾಯಣಭಾಷ್ಯಂ

ಹೇ ಅಗ್ನೇ ಸನವಿತ್ತಃ ಸನಾಚ್ಚಿರಕಾಲಾದಾರಭ್ಯ ಲಬ್ಧಸ್ತೇ ತ್ವದೀಯೋಽಧ್ವಾ ಮಾರ್ಗಃ ಸುಗಃ ಸುಷ್ಠು ಗಂತವ್ಯೋ ಭವತು । ಕಿಂಚ ಹರಿತಃ ಶ್ಯಾಮವರ್ಣಾ ರೋಹಿತಶ್ಚ ಲೋಹಿತವರ್ಣಾಶ್ಚೇತ್ಯುಭಯವಿಧಾ ಯೇ ವಾ ಯೇ ಚ ತೇ ತ್ವದೀಯಾ ಅಶ್ವಾಃ ಸದ್ಮನ್ ಸದ್ಮನಿ ಯಜ್ಞಗೃಹೇ ವೀರವಾಹೋ ವೀರಂ ಶೂರಂ ತ್ವಾಂ ವಹಂತೋಽರುಷಾ ಆರೋಚಮಾನಾ ಭವಂತಿ ತಾಂಶ್ಚ ತ್ವಂ ಸು ಯುಕ್ಷ್ವ । ತ್ವದೀಯೇ ರಥೇ ಸುಷ್ಠು ಸಂಯೋಜಯ । ನಿಷತ್ತೋ ಯಜ್ಞಗೃಹೇ ನಿಷಣ್ಣೋಽಹಂ ಹೋತಾ ಸನ್ ದೇವಾನಾಮಿಂದ್ರಾದೀನಾಂ ಜನಿಮಾ ಜನಾನ್ ಸಂಘಾನ್ಹುವೇ । ಆಹ್ವಯಾಮಿ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ಸನವಿತ್ತಃ**—ಚಿರಕಾಲದಿಂದ ಲಬ್ಧವಾದ । **ತೇ**—ನಿನ್ನ । **ಅಧ್ವಾ**—ಮಾರ್ಗವು । **ಸುಗಃ**—ಉತ್ತಮವಾದ ಸಂಚಾರಕ್ಕೆ ಅರ್ಹವಾಗಿವೆ । **ಸುತೇ**—ಸೋಮಾಭಿಷವಕಾಲದಲ್ಲಿ । **ಹರಿತಃ**—ಶ್ಯಾಮವರ್ಣವುಳ್ಳವೂ । **ರೋಹಿತಶ್ಚ**—ಹೊಂಬಣ್ಣವುಳ್ಳವೂ ಆದ । **ಯೇ ವಾ**—ಯಾವ ಅಶ್ವಗಳು । **ಸದ್ಮನ್**—ಯಜ್ಞಗೃಹದಲ್ಲಿ । **ವೀರವಾಹಃ**—ವೀರರ ವಾಹಕಗಳಾಗಿಯೂ । **ಅರುಷಾಃ**—ಆಕರ್ಷಕವಾಗಿಯೂ ಇರುವವೋ ಅವುಗಳನ್ನು । **ಯುಕ್ಷ್ವ**—ರಥಕ್ಕೆ ಯೋಜಿಸು. । **ಸತ್ತಃ**—ಯಜ್ಞಗೃಹದಲ್ಲಿ ಕುಳಿತಿರುವ ನಾನು । **ದೇವಾನಾಂ**—ಇಂದ್ರಾದಿದೇವತೆಗಳ । **ಜನಿಮಾನಿ**—ಗುಂಪನ್ನು । **ಹುವೇ**—ಯಜ್ಞಕ್ಕೆ ಕರೆಯುತ್ತೇನೆ.

ಭಾವಾರ್ಥ

ಎಲೈ ಅಗ್ನಿಯೇ, ಚಿರಕಾಲದಿಂದ ಲಬ್ಧವಾದ ನಿನ್ನ ಮಾರ್ಗವು ಉತ್ತಮವಾದ ಸಂಚಾರಕ್ಕೆ ಅರ್ಹವಾಗಿವೆ। ಸೋಮಾಭಿಷವಕಾಲದಲ್ಲಿ ಶ್ಯಾಮವರ್ಣವುಳ್ಳವೂ, ಹೊಂಬಣ್ಣವುಳ್ಳವೂ, ಆದ ಯಾವ ಅಶ್ವಗಳು ಯಜ್ಞಗೃಹದಲ್ಲಿ

ವೀರರ ವಾಹಕಗಳಾಗಿಯೂ, ಆಕರ್ಷಕವಾಗಿಯೂ ಇರುವುವೋ ಅವುಗಳನ್ನು ರಥಕ್ಕೆ ಯೋಜಿಸು ಯಜ್ಞಗೃಹದಲ್ಲಿ ಕುಳಿತಿರುವ ನಾನು ಇಂದ್ರಾದಿದೇವತೆಗಳ ಗುಂಪನ್ನು ಯಜ್ಞಕ್ಕೆ ಕರೆಯುತ್ತೇನೆ.

English Translation

Pleasant, Agni, be your long-familiar path yoke for the libation the day, the ruddy horses, who brilliant-shining, are the conveyers of (you), the hero, to the hall of sacrifice, where seated, I invoke the companion of the gods

ಸಂಹಿತಾಪಾಠಃ

ಸಮು ವೋ ಯಜ್ಞಂ ಮಹಯನ್ನಮೋಭಿಃ ಪ್ರ ಹೋತಾ ಮಂದ್ರೋ ರಿರಿಚ
ಉಪಾಕೇ ।
ಯಜಸ್ವ ಸು ಪುರ್ವಣೀಕ ದೇವಾನಾ ಯಜ್ಞಿಯಾಮರಮತಿಂ ವವೃತ್ಯಾಃ ॥

ಪದಪಾಠಃ

ಸಂ । ಊಂ ಇತಿ । ವಃ । ಯಜ್ಞಂ । ಮಹಯನ್ । ನಮಃऽಭಿಃ । ಪ್ರ । ಹೋತಾ । ಮಂದ್ರಃ । ರಿರಿಚೇ
ಉಪಾಕೇ ।
ಯಜಸ್ವ । ಸು । ಪುರುऽಅನೀಕ । ದೇವಾನ್ । ಆ । ಯಜ್ಞಿಯಾಂ । ಅರಮತಿಂ । ವವೃತ್ಯಾಃ ॥ ೩ ॥

ಸಾಯಣಭಾಷ್ಯಂ

ಹೇ ದೇವಾಃ ವೋ ಯುಷ್ಮಾಕಂ ಯಜ್ಞಂ ನಮೋಭಿರ್ನಮಸ್ಕಾರೈರ್ಯುಕ್ತಾ ಇಮೇ ಸ್ತೋತಾರೋ ವಾ ಯಜಮಾನಾ ವಾ ಸಂ ಮಹಯನ್ । ಸಮ್ಯಕ್ ಪೂಜಯಂತಿ । ಉ ಇತಿ ಪೂರಕಃ । ಮಂದ್ರಃ ಸ್ತುತಿಶೀಲ ಉಪಾಕೇऽಸ್ಮಾಕಂ ಸಮೀಪೇ ಸ್ಥಿತೋऽಸ್ಮದೀಯೋ ಹೋತಾ ಪ್ರ ರಿರಿಚೇ । ಅನ್ಯೇಭ್ಯೋ ಹೋತೃಭ್ಯೋऽತಿರಿಚ್ಯತೇ । ಹೇ ಯಜಮಾನ ತ್ವಂ ದೇವಾನ್ ಸು ಸುಷ್ಠು ಯಜಸ್ವ । ಹೇ ಪುರ್ವಣೀಕ ಬಹುತೇಜಸ್ಕಿನ್ನಗ್ನೇ ತ್ವಂ ಯಜ್ಞಿಯಾಂ ಯಜ್ಞಾರ್ಹಾಮರಮತಿಂ ಭೂಮಿಮಾ ವವೃತ್ಯಾಃ । ಆವರ್ತಯ । ತಥಾ ಚ ನಿಗಮಾಂತರೇ । ಆ ನೋ ಮಹೀಮರಮತಿಂ ಸಜೋಷಾಃ । ಋ. ೫-೪೩-೬ । ಇತಿ ॥

ಪ್ರತಿಪದಾರ್ಥ

(ಎಲೈ ದೇವತೆಗಳೇ,) **ವಃ**—ನಿಮ್ಮ । **ಯಜ್ಞಂ**—ಯಜ್ಞವನ್ನು । **ನಮೋಭಿಃ**—ನಮಸ್ಕಾರಗಳಿಂದ **ಕೂ**ಡಿದ ಸ್ತೋತೃಗಳು । **ಸಂ ಮಹಯನ್**—ಆರಾಧಿಸುತ್ತಾರೆ । **ಉಪಾಕೇ**—ನಮ್ಮ ಸಮೀಪದಲ್ಲಿರುವವನೂ । **ಮಂದಃ**—ಸ್ತುತಿಶೀಲನೂ ಆದ । **ಹೋತಾ**—ಹೋತೃವು । **ಪ್ರ ರಿರಿಚೇ**—ಇತರರಿಗಿಂತಲೂ ಮೀರಿದ **ಅತಿಶಯ**ವುಳ್ಳವನಾಗಿದ್ದಾನೆ. (ಎಲೈ ಯಜಮಾನನೇ,) । **ದೇವಾನ್**—ದೇವತೆಗಳನ್ನು । **ಸು**—ಅತಿಶಯವಾಗಿ । **ಯಜಸ್ವ**

—ಪೂಜಿಸು । **ಪುರ್ವಣೀಕ**—ಅತ್ಯಧಿಕವಾದ ತೇಜಸ್ಸುಳ್ಳ ಎಲೈ ಅಗ್ನಿಯೇ, । **ಯಜ್ಞಿಯಾಂ**—ಯಜ್ಞಾರ್ಹವಾದ **ಅರಮತಿಂ**—ಭೂಮಿಯನ್ನು । **ಆ ವವೃತ್ಸ್ವಃ**—ಆವರಿಸು.

ಭಾವಾರ್ಥ

ಎಲೈ ದೇವತೆಗಳೇ, ನಿಮ್ಮ ಯಜ್ಞವನ್ನು ನಮಸ್ಕಾರಪೂರ್ವಕರಾದ ಸ್ತೋತೃಗಳು ಆರಾಧಿಸುತ್ತಾರೆ ನಮ್ಮ ಸಮೀಪದಲ್ಲಿರುವವನೂ, ಸ್ತುತಿಶೀಲನೂ ಆದ ಹೋತೃವು ಇತರರಿಗಿಂತಲೂ ಮೀರಿದ ಸಾಮರ್ಥ್ಯವುಳ್ಳವನಾಗಿದ್ದಾನೆ. ಎಲೈ ಯಜಮಾನರೇ, ದೇವತೆಗಳನ್ನು ಅತಿಶಯವಾಗಿ ಪೂಜಿಸು. ಅತ್ಯಧಿಕವಾದ ತೇಜಸ್ಸುಳ್ಳ ಎಲೈ ಅಗ್ನಿಯೇ, ಯಜ್ಞಾರ್ಹವಾದ ಭೂಮಿಯನ್ನು ಆವರಿಸು

English Translation

The (worshippers) offer you, (gods), this sacrifice, with prostrations : the ministrant priest, who is near us repeating pious praise, excels (all others) worship well the gods resplendent (Agni), make the venerable earth revolve

ಸಂಹಿತಾಪಾಠಃ

ಯದಾ ವೀರಸ್ಯ ರೇವತೋ ದುರೋಣೇ ಸ್ಯೋನಶೀರತಿಥಿರಾಚಿಕೇತತ್ ।
ಸುಪ್ರೀತೋ ಅಗ್ನಿಃ ಸುಧಿತೋ ದಮ ಆ ಸ ವಿಶೇ ದಾತಿ ವಾರ್ಯಮಿಯತ್ಯೈ ॥

ಪದಪಾಠಃ

ಯದಾ । ವೀರಸ್ಯ । ರೇವತಃ । ದುರೋಣೇ । ಸ್ಯೋನऽಶೀಃ । ಅತಿಥಿಃ । ಆऽಚಿಕೇತತ್ ।
ಸುऽಪ್ರೀತಃ । ಅಗ್ನಿಃ । ಸುऽಧಿತಃ । ದಮೇ । ಆ । ಸಃ । ವಿಶೇ । ದಾತಿ । ವಾರ್ಯಂ । ಇಯತ್ಯೈ ॥ ೪ ॥

ಸಾಯಣಭಾಷ್ಯಂ

**ಅತಿಥಿಃ ಸರ್ವೇಷಾಮತಿಥಿಭೂತೋಽಗ್ನಿರ್ಯದಾ ವೀರಸ್ಯ ವೀರಕಸ್ಯ ಸ್ತೋತ್ರಾಣಾಂ ಪ್ರೇರಯಿತೃ ರೇವತೋ ಹವಿಷ್ಮತೋ ಯಜಮಾನಸ್ಯ ದುರೋಣೇ ಗೃಹೇ ಸ್ಯೋನಶೀಃ ಸುಖೇನ ಶಯನೀಯ ಆಚಿಕೇತತ್ ಪ್ರಜ್ಞಾಯತೇ ಅಗ್ನಿರ್ದಮೇ ಯಜ್ಞಗೃಹೇ ಸುಧಿತಃ । ಆಕಾರಶ್ಚಾರ್ಥೇ । ಸುನಿಹಿತಶ್ಚ ಸುಷ್ಠು ನಿಹಿತಃ ಸನ್ ಯದಾ ಸುಪ್ರೀತೋ ಭವತಿ ತದಾ ಸೋಽಗ್ನಿರಿಯತ್ಯಾ ಉಪಗಚ್ಛಂತ್ಯೈ ವಿಶೇ ಪ್ರಜಾಯೈ ವಾರ್ಯಂ ವರಣೀಯಂ ಧನಂ ದಾತಿ । ದದಾತಿ । ಪ್ರಯಚ್ಛತಿ ॥**

ಪ್ರತಿಪದಾರ್ಥ

**ಅಥಿತಿಃ**—ಪೂಜ್ಯನಾದ । **ಅಗ್ನಿಃ**—ಅಗ್ನಿಯು । **ಯದಾ**—ಯಾವಾಗ । **ವೀರಸ್ಯ**—ಸ್ತುತಿಪ್ರೇರಕನಾದವನೂ । **ರೇವತಃ**—ಹವಿಸ್ಸುಳ್ಳವನೂ ಆದ ಯಜಮಾನನ । **ದುರೋಣೇ**—ಗೃಹದಲ್ಲಿ । **ಸ್ಯೋನಶೀಃ**—ಸುಖವಾಗಿ ಮಲಗಿರುವವನಾಗಿ । **ಆಚಿಕೇತತ್**—ತಿಳಿಯಲ್ಪಡುವನೋ ಆಗ । **ಸುಧಿತಃ**—ಉತ್ತಮವಾಗಿ ಸ್ಥಾಪಿತನಾದವನೂ । **ಸುಪ್ರೀತಃ**—ತೃಪ್ತನೂ ಆದ । **ಸಃ**—ಅಗ್ನಿಯು । **ಇಯತ್ಯೈ**—ತನ್ನನ್ನು ಸಮೀಪಿಸುವ । **ವಿಶೇ**—ಯಜಮಾನರಿಗೆ । **ದಮೇ**—ಯಜ್ಞಗೃಹದಲ್ಲಿ । **ವಾರ್ಯಂ**—ಅಪೇಕ್ಷಿತವಾದ ಧನವನ್ನು । **ದಾತಿ**—ಕೊಡುತ್ತಾನೆ

ಭಾವಾರ್ಥ

ಪೂಜ್ಯನಾದ ಅಗ್ನಿಯು ಸ್ತುತಿಪ್ರೇರಕನೂ, ಹವಿಸ್ಸುಳ್ಳವನೂ ಆದ ಯಜಮಾನನ ಗೃಹದಲ್ಲಿ ಸುಖಶಾಯಿಯಾಗಿರುವನೆಂದು ಯಾವಾಗ ತಿಳಿಯಲ್ಪಡುವನೋ, ಆಗ ಉತ್ತಮವಾಗಿ ಸ್ಥಾಪಿತನೂ ತೃಪ್ತನೂ ಆದ ಅಗ್ನಿಯು ತನ್ನನ್ನು ಸಮೀಪಿಸುವ ಯಜಮಾನರಿಗೆ ಯಜ್ಞಗೃಹದಲ್ಲಿ ಅಪೇಕ್ಷಿತವಾದ ಧನವನ್ನು ಕೊಡುತ್ತಾನೆ

English Translation

When Agni, reposing at his ease in the dwelling of the liberal worshipper, is welcomed as a guest, thus suitably placed in the hall of sacrifice, he gives well-pleased, desirable (wealth) to the people who approach him

ಸಂಹಿತಾಪಾಠಃ

ಇಮಂ ನೋ ಅಗ್ನೇ ಅಧ್ವರಂ ಜುಷಸ್ವ ಮರುತ್ಸ್ವಿಂದ್ರೇ ಯಶಸಂ ಕೃಧೀ ನಃ ।
ಆ ನಕ್ತಾ ಬರ್ಹಿಃ ಸದತಾಮುಷಾಸೋಶಂತಾ ಮಿತ್ರಾವರುಣಾ ಯಜೇಹ ॥

ಪದಪಾಠಃ

ಇಮಂ । ನಃ । ಅಗ್ನೇ । ಅಧ್ವರಂ । ಜುಷಸ್ವ । ಮರುತ್ಽಸು । ಇಂದ್ರೇ । ಯಶಸಂ । ಕೃಧಿ । ನಃ ।
ಆ । ನಕ್ತಾ । ಬರ್ಹಿಃ । ಸದತಾಂ । ಉಷಸಾ । ಉಶಂತಾ । ಮಿತ್ರಾವರುಣಾ । ಯಜ । ಇಹ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ನೋಽಸ್ಮದೀಯಮಿಮಮಧ್ವರಂ ಯಜ್ಞಂ ಜುಷಸ್ವ । ಸೇವಸ್ವ । ಕಿಂಚ ಮರುತ್ಸ್ವಿಂದ್ರಸ್ಯ ಸಖಿಭೂತೇಷು ದೇವೇಷ್ವಿಂದ್ರೇ ಚ ಯಶಸಂ ಯಶೋಯುಕ್ತಂ ಹವಿರ್ಲಕ್ಷಣಾನ್ನವಂತಂ ನೋಽಸ್ಮದೀಯಂ ಯಜ್ಞಂ ಹೇ ಅಗ್ನೇ ತ್ವಂ ಕೃಧಿ । ಕುರು । ಸ್ಥಾಪಯೇತ್ಯರ್ಥಃ । ತಥಾ ನಕ್ತಾ ರಾತ್ರಿಶ್ಚೋಷಸಾ ದಿವಸಶ್ಚ । ಅಹರ್ನಿಶೇ ಇತ್ಯರ್ಥಃ । ಬರ್ಹಿರ್ಬರ್ಹಿಷಿ ಕುಶಮಯ ಆ ಸದತಾಂ । ಉಪವಿಶತಾಂ । ಅಪಿ ಚ ಹೇ ಅಗ್ನೇ ಉಶಂತೋಶಂತೌ ಯಜ್ಞಮಿಚ್ಛಂತೌ ಮಿತ್ರಾವರುಣಾ ಮಿತ್ರಾವರುಣೌ ದೇವಾವಿಹಾಸ್ಮಿನ್ಯಜ್ಞೇ ಯಜ ಪೂಜಯ ॥

ಪ್ರತಿಪದಾರ್ಥ

**ಅಗ್ನೇ**— ಎಲೈ ಅಗ್ನಿಯೇ, । **ನಃ**— ನಮ್ಮ । **ಇಮಂ ಅಧ್ವರಂ**— ಈ ಯಾಗವನ್ನು । **ಜುಷಸ್ವ**— ಸೇವಿಸು । **ಮರುತ್ಸು**— ಮರುತ್ತುಗಳಲ್ಲಿಯೂ । **ಇಂದ್ರೇ**— ಇಂದ್ರನಲ್ಲಿಯೂ । **ಯಶಸಂ**— ಹವಿರ್ಯುಕ್ತವಾದ । **ನಃ**— ನಮ್ಮ ಯಜ್ಞವನ್ನು । **ಕೃಧಿ**— ಸ್ಥಾಪಿಸು । **ನಕ್ತಾ**— ರಾತ್ರಿದೇವತೆಯೂ । **ಉಷಸಾ**— ಅಹಸ್ಸಿನ ದೇವತೆಯೂ । **ಬರ್ಹಿಃ**— ನಮ್ಮ ದರ್ಭಾಸನದ ಮೇಲೆ । **ಆ ಸದತಾಂ**— ಕುಳಿತುಕೊಳ್ಳಲಿ । ( ಎಲೈ ಅಗ್ನಿಯೇ, ) **ಉಶಂತಾ**— ಯಜ್ಞಭಾಗವನ್ನು ಇಚ್ಛಿಸುವ । **ಮಿತ್ರಾವರುಣಾ**— ಮಿತ್ರಾವರುಣರನ್ನು । **ಇಹ**— ಈ ಯಜ್ಞದಲ್ಲಿ । **ಯಜ**— ಪೂಜಿಸು.

### ಭಾವಾರ್ಥ

ಎಲೈ ಅಗ್ನಿಯೇ, ನಮ್ಮ ಈ ಯಾಗವನ್ನು ಸೇವಿಸು. ಮರುತ್ತುಗಳಲ್ಲಿಯೂ ಇಂದ್ರನಲ್ಲಿಯೂ ಹವಿರ್ಯುಕ್ತವಾದ ನಮ್ಮ ಯಜ್ಞವನ್ನು ಸ್ಥಾಪಿಸು. ರಾತ್ರಿದೇವತೆಯೂ ಅಹಸ್ಸಿನ ದೇವತೆಯೂ ನಮ್ಮ ದರ್ಭಾಸನದ ಮೇಲೆ ಕುಳಿತುಕೊಳ್ಳಲಿ ಎಲೈ ಅಗ್ನಿಯೇ, ಯಜ್ಞಭಾಗವನ್ನು ಇಚ್ಛಿಸುವ ಮಿತ್ರಾವರುಣರನ್ನು ಈ ಯಜ್ಞದಲ್ಲಿ ಪೂಜಿಸು.

### English Translation

Be gratified, Agni, by this our sacrifice . render our (worship) renowned among Indra and the Maruts let the days and nights sit down on the sacred grass : worship (Agni), at this rite, Mitra and Varuna, desiring (the oblation).

### ಸಂಹಿತಾಪಾಠಃ

ಏವಾಗ್ನಿಂ ಸಹಸ್ಯಂ೧ ವಸಿಷ್ಠೋ ರಾಯಸ್ಕಾಮೋ ವಿಶ್ವಪ್ಸ್ನ್ಯಸ್ಯ ಸ್ತೌತ್ ।
ಇಷಂ ರಯಿಂ ಪಪ್ರಥದ್ವಾಜಮಸ್ಮೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

### ಪದಪಾಠಃ

ಏವ । ಅಗ್ನಿಂ । ಸಹಸ್ಯಂ । ವಸಿಷ್ಠಃ । ರಾಯಃऽಕಾಮಃ । ವಿಶ್ವऽಪ್ಸ್ನ್ಯಸ್ಯ । ಸ್ತೌತ್ ।
ಇಷಂ । ರಯಿಂ । ಪಪ್ರಥತ್ । ವಾಜಂ । ಅಸ್ಮೇ ಇತಿ । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥

### ಸಾಯಣಭಾಷ್ಯಂ

ವಸಿಷ್ಠ ಏತದಾಖ್ಯ ಋಷೀ ರಾಯಸ್ಕಾಮಃ ಪಶ್ವಾದಿಧನಾನೀಚ್ಛನ್ನೇವ್ಯವಮುಕ್ತಪ್ರಕಾರೇಣ ಸಹಸ್ಯಂ । ಸಹೋ ಬಲಂ । ತಸ್ಯ ಪುತ್ರಂ । ತದ್ವಂತಮಿತಿ ವಾ । ಅಗ್ನಿಂ ದೇವಂ ವಿಶ್ವಪ್ಸ್ನ್ಯಸ್ಯ ಪುರುರೂಪಸ್ಯ ಧನಸ್ಯ ಲಾಭಾಯ ಸ್ತೌತ್ । ಏವಂಭೂತೋಽಗ್ನಿರಸ್ಮೇ ಅಸ್ಮಭ್ಯಮಿಷಮನ್ನಂ ರಯಿಂ ಧನಂ ವಾಜಂ ಬಲಂ ಚ ಪಪ್ರಥತ್ । ಪ್ರಥಯತು । ವಿಸ್ತಾರಯತು । ದದಾತ್ವಿತ್ಯರ್ಥಃ । ಅಸ್ಮಿನ್ಸೂಕ್ತೇ ಪ್ರತಿಪಾದಿತಾಃ ಸರ್ವೇ ದೇವಾಃ ಯೂಯಮಸ್ಮಾನ್ಕಲ್ಯಾಣೈಃ ಸರ್ವದಾ ಪಾಲಯತ ॥

### ಪ್ರತಿಪದಾರ್ಥ

**ವಸಿಷ್ಠಃ**—ವಸಿಷ್ಠಋಷಿಯು । **ರಾಯಸ್ಕಾಮಃ**—ಧನವನ್ನು ಅಪೇಕ್ಷಿಸಿ । **ಏವ**—ಈ ರೀತಿಯಲ್ಲಿ । **ಸಹಸ್ಯಂ**—ಶಕ್ತಿಪುತ್ರನಾದ । **ಅಗ್ನಿಂ**—ಅಗ್ನಿಯನ್ನು । **ವಿಶ್ವಪ್ಸ್ನ್ಯಸ್ಯ**—ಅನೇಕವಿಧವಾದ ಧನಲಾಭಕ್ಕಾಗಿ । **ಸ್ತೌತ್**—ಪ್ರಶಂಸಿಸಿದನು । (ಇಂತಹ ಅಗ್ನಿಯು) **ಅಸ್ಮೇ**—ನಮಗೆ । **ಇಷಂ**—ಅನ್ನವನ್ನೂ । **ರಯಿಂ**—ಧನವನ್ನೂ । **ವಾಜಂ**—ಬಲವನ್ನೂ । **ಪಪ್ರಥತ್**—ಪ್ರಭೂತವಾಗಿ ಕೊಡಲಿ । (ಎಲೈ ದೇವತೆಗಳೇ) **ಯೂಯಂ**—ನೀವು । **ಸದಾ**—ಯಾವಾಗಲೂ । **ನಃ**—ನಮ್ಮನ್ನು । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ

ಭಾವಾರ್ಥ

ಧನಾಪೇಕ್ಷಿಯಾದ ವಸಿಷ್ಠಋಷಿಯು ಶಕ್ತಿಪುತ್ರನಾದ ಅಗ್ನಿಯನ್ನು ಅನೇಕ ರೂಪವಾದ ಧನಲಾಭಕ್ಕಾಗಿ ಮೇಲೆ ವರ್ಣಿತವಾದಂತೆ ಪ್ರಶಂಸಿಸಿದನು ಹೀಗೆ ಸ್ತುತನಾದ ಅಗ್ನಿಯು ನಮಗೆ ಪ್ರಭೂತವಾದ ಧನವನ್ನೂ, ಅನ್ನವನ್ನೂ, ಬಲವನ್ನೂ ವಿಸ್ತರಿಸಿ ಕೊಡಲಿ. ಎಲೈ ದೇವತೆಗಳೇ, ನಮ್ಮನ್ನು ನೀವು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

English Translation

Thus has Vasishtha, wishing for riches, glorified the vigorous Agni for the sake of every sort of wealth may he bestow upon us food, riches, strength . and do you, (gods), ever cherish us with blessings.

---

## ನಲವತ್ತಮೂರನೆಯ ಸೂಕ್ತವು

**ಪ್ರ ವೋ ಯಜ್ಞೇಷ್ವಿತಿ ಪಂಚರ್ಚಂ ದಶಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವೈಶ್ವದೇವಂ। ಪ್ರ ವಃ ಪಂಚೇತ್ಯನುಕ್ರಾಂತಂ॥ ಸೂಕ್ತವಿನಿಯೋಗೋ ಲೈಂಗಿಕಃ॥ ಪ್ರಥಮೇ ಛಂದೋಮೇ ಪ್ರಉಗಶಸ್ತ್ರೇ ಪ್ರ ವೋ ಯಜ್ಞೇಷ್ವಿತಿ ವೈಶ್ವದೇವಸ್ತೃಚಃ। ಸೂತ್ರಿತಂ ಚ। ಪ್ರ ವೋ ಯಜ್ಞೇಷು ದೇವಯಂತೋ ಅರ್ಚನ್ ಪ್ರ ಕ್ಷೋದಸಾ ಧಾಯಸಾ ಸಸ್ರ ಏಷೇತಿ ಪ್ರಉಗಂ। ಆ. ೮ ೯। ಇತಿ॥**

**ಅನುವಾದವು—ಪ್ರ ವೋ ಯಜ್ಞೇಷು** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ವಿಶ್ವೇದೇವತೆಗಳು ದೇವತೆಯು, ತ್ರಿಷ್ಟುಪ್‌ಛಂದಸ್ಸು ಅನುಕ್ರಮಣಿಕೆಯಲ್ಲಿ **ಪ್ರ ವಃ ಪಂಚ** ಎಂದು ಹೇಳಿರುವುದು ಸೂಕ್ತವಿನಿಯೋಗವು ಲೈಂಗಿಕವು. ಪ್ರಥಮಛಂದೋಮದಲ್ಲಿ ಪ್ರಉಗಶಸ್ತ್ರಮಂತ್ರಪಠನಮಾಡುವಾಗ **ಪ್ರ ವೋ ಯಜ್ಞೇಷು** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವೈಶ್ವದೇವತೃಚವನ್ನಾಗಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ-**ಪ್ರ ವೋ ಯಜ್ಞೇಷು ದೇವಯಂತೋ ಅರ್ಚನ್ ಪ್ರ ಕ್ಷೋದಸಾ ಧಾಯಸಾ ಸಸ್ರ ಏಷೇತಿ ಪ್ರಉಗಂ** ಎಂಬ **ಸೂತ್ರದಿಂದ** (ಆ. ೮-೯) ವಿವೃತವಾಗಿರುವುದು.

### ಸೂಕ್ತ—೪೩

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೪೩ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಸಿಷ್ಠಃ ॥
ದೇವತಾ—ವಿಶ್ವೇ ದೇವಾಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರ ವೋ ಯಜ್ಞೇಷು ದೇವಯಂತೋ ಅರ್ಚನ್ದ್ಯಾವಾ ನಮೋಭಿಃ ಪೃಥಿವೀ ಇಷಧ್ಯೈ ।

ಯೇಷಾಂ ಬ್ರಹ್ಮಾಣ್ಯಸಮಾನಿ ವಿಪ್ರಾ ವಿಷ್ವಗ್ವಿಯಂತಿ ವನಿನೋ ನ ಶಾಖಾಃ॥

ಪದಪಾಠಃ

ಪ್ರ । ವಃ । ಯಜ್ಞೇಷು । ದೇವಯಂತಃ । ಅರ್ಚನ್ । ದ್ಯಾವಾ । ನಮಃಭಿಃ । ಪೃಥಿವೀ ಇತಿ ಇಷಧ್ಯೈ ।

ಯೇಷಾಂ । ಬ್ರಹ್ಮಾಣಿ । ಅಸಮಾನಿ । ವಿಪ್ರಾಃ । ವಿಷ್ವಕ್ । ವಿಯಂತಿ । ವನಿನಃ । ನ । ಶಾಖಾಃ ॥ ೧

ಸಾಯಣಭಾಷ್ಯಂ

ದೇವಯಂತೋ ದೇವಾನ್ಕಾಮಯಮಾನಾ ವಿಪ್ರಾ ಯಜ್ಞೇಷು ನಮೋಭಿಃ ಸ್ತುತಿಭಿರ್ಹವಿರ್ಭಿರ್ವಾ ವೋ ಯುಷ್ಮಾನಿಷಧ್ಯಾ ಅಭಿಪ್ರಾಪ್ತುಂ ಪ್ರಾರ್ಚನ್ । ಪ್ರಾರ್ಚಯಂತಿ । ಪ್ರಕರ್ಷೇಣ ಸ್ತುವಂತಿ । ದ್ಯಾವಾ ದಿವಂ ಚ ಪೃಥಿವೀ ಭೂಮಿಂ ಚ ಪ್ರಸ್ತುವಂತಿ । ಯೇಷಾಂ ವಿಪ್ರಾಣಾಂ ಮೇಧಾವಿನಾಂ ಬ್ರಹ್ಮಾಣಿ ಸ್ತೋತ್ರಾಣಿ ವನಿನೋ ನ ಶಾಖಾ ವೃಕ್ಷಸ್ಯ ಶಾಖಾ ಇವ ವಿಷ್ವಗ್ವಿಶ್ವತೋ ವಿಯಂತಿ । ಗಚ್ಛಂತಿ । ತೇ ವಿಪ್ರಾಃ ಪ್ರಾರ್ಚನ್ನಿತಿ ಪೂರ್ವೇಣ ಸಂಬಂಧಃ ॥

ಪ್ರತಿಪದಾರ್ಥ

(ಎಲೈ ದೇವತೆಗಳೇ,) **ಯೇಷಾಂ** — ಯಾವ ಸ್ತುತಿಕರ್ತನ । **ಅಸಮಾನಿ** — ಅಸಾಧಾರಣಗಳಾದ । **ಬ್ರಹ್ಮಾಣಿ**—ಸ್ತೋತ್ರಗಳು । **ವನಿನಃ**—ವೃಕ್ಷದ । **ಶಾಖಾಃ ನ**—ಕೊಂಬೆಗಳಂತೆ । **ವಿಷ್ವಕ್**—ಸರ್ವತ್ರ । **ವಿಯಂತಿ** — ಹರಡುತ್ತವೆಯೋ ಅಂತಹ । **ದೇವಯಂತಃ**—ದೇವತೆಗಳ ಅನುಗ್ರಹವನ್ನು ಅಪೇಕ್ಷಿಸುವವರೂ । **ವಿಪ್ರಾಃ**—ಮೇಧಾವಿಗಳೂ ಆದ ಯಜಮಾನರು (ಸ್ತುತಿಕರ್ತರು) । **ಯಜ್ಞೇಷು**—ಯಜ್ಞಗಳಲ್ಲಿ । **ನಮೋಭಿಃ**—ಹವಿಸ್ಸುಗಳೊಡಗೂಡಿ । **ವಃ**—ನಿಮ್ಮನ್ನು । **ಇಷಧ್ಯೈ**—ಸಮೀಪಿಸಲು । **ಪ್ರಾರ್ಚನ್**—ಅತಿಶಯವಾಗಿ ಸ್ತುತಿಸುತ್ತಾರೆ । **ದ್ಯಾವಾ**—ದ್ಯುಲೋಕವನ್ನೂ । **ಪೃಥಿವೀಂ**—ಪೃಥ್ವಿಯನ್ನೂ ಸ್ತುತಿಸುತ್ತಾರೆ.

ಭಾವಾರ್ಥ

ಎಲೈ ದೇವತೆಗಳೇ, ಯಾವ ಸ್ತುತಿಕರ್ತರ ಅಸಾಧಾರಣಗಳಾದ ಸ್ತೋತ್ರಗಳು ವೃಕ್ಷದ ಕೊಂಬೆಗಳಂತೆ ಸರ್ವತ್ರ ಹರಡುತ್ತವೆಯೋ ಅಂತಹ ದೇವತೆಗಳ ಅನುಗ್ರಹವನ್ನು ಅಪೇಕ್ಷಿಸುವವರೂ ಮೇಧಾವಿಗಳೂ ಆದ ಸ್ತುತಿಕರ್ತರು ಯಜ್ಞಗಳಲ್ಲಿ ನಿಮ್ಮನ್ನು ಸಮೀಪಿಸಲು ಹವಿಸ್ಸುಗಳೊಡಗೂಡಿ ಅತಿಶಯವಾಗಿ ಸ್ತುತಿಸುತ್ತಾರೆ ದ್ಯುಲೋಕವನ್ನೂ ಮತ್ತು ಪೃಥ್ವಿಯನ್ನೂ ಸಹ ಸ್ತುತಿಸುತ್ತಾರೆ.

English Translation

Devout worshippers seek to attain you, gods, by praises at sacrifices: they (worship) the heaven and earth, they of whom the diversified adorations spread everywhere like the branches of trees.

ಸಂಹಿತಾಪಾಠಃ

ಪ್ರ ಯಜ್ಞ ಏತು ಹೇತ್ವೋ ನ ಸಪ್ತಿರುದ್ಯಚ್ಛಧ್ವಂ ಸಮನಸೋ ಘೃತಾಚೀಃ।

ಸ್ತೃಣೀತ ಬರ್ಹಿರಧ್ವರಾಯ ಸಾಧೂರ್ಧ್ವಾ ಶೋಚೀಂಷಿ ದೇವಯೂನ್ಯಸ್ಥುಃ ॥

ಪದಪಾಠಃ

ಪ್ರ । ಯಜ್ಞಃ । ಏತು । ಹೇತ್ವಃ । ನ । ಸಪ್ತಿಃ । ಉತ್ । ಯಚ್ಛಧ್ವಂ । ಸಽಮನಸಃ । ಘೃತಾಚೀಃ ।
ಸ್ತೃಣೀತ । ಬರ್ಹಿಃ । ಅಧ್ವರಾಯ । ಸಾಧು । ಊರ್ಧ್ವಾ । ಶೋಚೀಂಷಿ । ದೇವಽಯೂನಿ । ಅಸ್ಥುಃ ॥

ಸಾಯಣಭಾಷ್ಯಂ

ಅಯಮಸ್ಮದೀಯೋ ಯಜ್ಞಃ ಪ್ರೈತು । ದೇವಾನ್ಪ್ರತಿ ಗಚ್ಛತು । ತತ್ರ ದೃಷ್ಟಾಂತಃ । ಹೇತ್ವೋ ನ ಸಪ್ತಿಃ ಶೀಘ್ರಗಾಮ್ಯಶ್ವೋ ಯಥಾ ತದ್ವತ್ । ಹೇ ಋತ್ವಿಜಃ ಸರ್ವೇ ಯೂಯಂ ಸಮನಸಃ ಸದೃಶಮನಸ್ಕಾಃ ಸಂತೋ ಘೃತಾಚೀಃ ಸ್ರುಚ ಉದ್ಯಚ್ಛಧ್ವಂ । ಹಸ್ತ ಉದ್ಯಮ್ಯ ಧಾರಯತ । ತಥಾಧ್ವರಾಯ ಯಾಗಂ ಕರ್ತುಂ ಸಾಧು ಸಾಧಕಂ ಬರ್ಹಿಃ ಕುಶಮಯಂ ಸ್ತೃಣೀತ । ವೇದ್ಯಾಂ ಛಾದಯತ । ಹೇ ಅಗ್ನೇ ದೇವಯೂನಿ ದೇವಾನ್ಕಾಮಯಮಾನಾನಿ ತ್ವದೀಯಾನಿ ಶೋಚೀಂಷ್ಯರ್ಚೀಂಷ್ಯೂರ್ಧ್ವೋರ್ಧ್ವಮುಖಾನ್ಯಸ್ಥುಃ । ತಿಷ್ಠಂತು ॥

ಪ್ರತಿಪದಾರ್ಥ

**ಯಜ್ಞಃ**—ನಮ್ಮ ಯಜ್ಞವು । **ಹೇತ್ವಃ**—ವೇಗಗಾಮಿಯಾದ । **ಸಪ್ತಿಃ ನ**—ಅಶ್ವದಂತೆ । **ಪ್ರ ಏತು**—ದೇವತೆಗಳನ್ನು ಶೀಘ್ರವಾಗಿ ಹೋಗಿ ಸೇರಲಿ । (ಎಲೈ ಋತ್ವಿಕ್ಕುಗಳೇ,) **ಸಮನಸಃ**—ನೀವೆಲ್ಲರೂ ಒಂದೇ ಮನಸ್ಸುಳ್ಳವರಾಗಿ । **ಘೃತಾಚೀಃ**—ಸ್ರುಕ್ಪಾತ್ರೆಯನ್ನು । **ಉದ್ಯಚ್ಛಧ್ವಂ**—ಮೇಲಕ್ಕೆತ್ತಿರಿ । **ಅಧ್ವರಾಯ**—ಯಜ್ಞನಿರ್ವಹಣಕ್ಕಾಗಿ । **ಸಾಧು**—ತತ್ಸಾಧಕವಾದ । **ಬರ್ಹಿಃ**—ದರ್ಭಾಸನವನ್ನು । **ಸ್ತೃಣೀತ**—ವೇದಿಯಲ್ಲಿ ಹರಡಿರಿ । (ಎಲೈ ಅಗ್ನಿಯೇ,) **ದೇವಯೂನಿ**—ದೇವತೆಗಳನ್ನು ಅಪೇಕ್ಷಿಸುವ । **ಶೋಚೀಂಷಿ**—ನಿನ್ನ ತೇಜಸ್ಸುಗಳು । **ಊರ್ಧ್ವಾ**—ಮೇಲುಮುಖವಾಗಿ । **ಅಸ್ಥುಃ**—ಎದ್ದುನಿಲ್ಲಲಿ

ಭಾವಾರ್ಥ

ನಮ್ಮ ಯಜ್ಞವು ವೇಗಗಾಮಿಯಾದ ಅಶ್ವದಂತೆ ದೇವತೆಗಳನ್ನು ಶೀಘ್ರವಾಗಿ ಹೋಗಿ ಸೇರಲಿ ಎಲೈ ಋತ್ವಿಕ್ಕುಗಳೇ, ನೀವೆಲ್ಲರೂ ಒಂದೇ ಮನಸ್ಸುಳ್ಳವರಾಗಿ ಸ್ರುಕ್ಪಾತ್ರೆಯನ್ನು ಮೇಲಕ್ಕೆತ್ತಿ ಹಿಡಿಯಿರಿ ಯಜ್ಞನಿರ್ವಹಣಕ್ಕಾಗಿ ತತ್ಸಾಧಕವಾದ ದರ್ಭಾಸನವನ್ನು ವೇದಿಯಲ್ಲಿ ಹರಡಿರಿ ಎಲೈ ಅಗ್ನಿಯೇ, ದೇವತೆಗಳನ್ನು ಅಪೇಕ್ಷಿಸುವ ನಿನ್ನ ತೇಜಸ್ಸುಗಳು ಮೇಲುಮುಖವಾಗಿ ಎದ್ದುನಿಲ್ಲಲಿ.

## English Translation

Let the sacrifice proceed like a swift courser (to the gods) elevate, (priests), with one accord, your ladles, charged with butter spread for the solemnity the sacred grass . let the flames (of the burnt offering) to the gods ascend on high.

ಸಂಹಿತಾಪಾಠಃ

ಆ ಪುತ್ರಾಸೋ ನ ಮಾತರಂ ವಿಭೃತ್ರಾಃ ಸಾನೌ ದೇವಾಸೋ ಬರ್ಹಿಷಃ ಸದಂತು

ಆ ವಿಶ್ವಾಚೀ ವಿದಥ್ಯಾಮನಕ್ತ್ವಗ್ನೇ ಮಾ ನೋ ದೇವತಾತಾ ಮೃಧಸ್ಕಃ ॥೩॥

ಪದಪಾಠಃ

ಆ । ಪುತ್ರಾಸಃ । ನ । ಮಾತರಂ । ವಿऽಭೃತ್ರಾಃ । ಸಾನೌ । ದೇವಾಸಃ । ಬರ್ಹಿಷಃ । ಸದಂತು ।

ಆ । ವಿಶ್ವಾಚೀ । ವಿದಥ್ಯಾಂ । ಅನಕ್ತು । ಅಗ್ನೇ । ಮಾ । ನಃ । ದೇವऽತಾತಾ । ಮೃಧಃ । ಕರಿತಿ ಕಃ ॥೩॥

ಸಾಯಣಭಾಷ್ಯಂ

ಮಾತರಂ ಜನನೀಂ ವಿಭೃತ್ರಾ ವಿಶೇಷೇಣ ಭರ್ತವ್ಯಾಃ ಪುತ್ರಾಸೋ ನ ಪುತ್ರಾ ಇವ ತದ್ವದಸ್ಮಾಕಂ ಭರಣೀಯಾ ದೇವಾಸೋ ದೇವಾ ಬರ್ಹಿಷಃ ಕುಶಮಯಸ್ಯ ವೇದ್ಯಾಮಾಸ್ತೀರ್ಣಸ್ಯ ಸಾನಾವುನ್ನತೇ ದೇಶ ಆ ಸದಂತು । ಉಪವಿಶಂತು । ಹೇ ಅಗ್ನೇ ವಿದಥ್ಯಾಂ ಯಜ್ಞಯೋಗ್ಯಾಂ ತ್ವದೀಯಾಂ ಜ್ವಾಲಾಂ ವಿಶ್ವಾಚೀ । ವಿಶ್ವಂ ಸರ್ವಂ ಹವಿರಂಚತಿ ಗಚ್ಛತೀತಿ ವಿಶ್ವಾಚೀ ಜುಹೂಃ । ಅನಕ್ತು । ಆ ಸಮಂತಾತ್ಸಿಂಚತು । ದೇವತಾತಾ ದೇವತಾತೌ ಯುದ್ಧೇ ನೋऽಸ್ಮಾಕಂ ಮೃಧೋ ಹಿಂಸಕಾನ್ ಹೇ ಅಗ್ನೇ ತ್ವಂ ಮಾ ಕಃ । ಮಾ ಕಾರ್ಷೀಃ । ಯಜ್ಞವಾಚಕೋ ದೇವತಾತಿಶಬ್ದೋऽತ್ರ ಸಂಗ್ರಾಮೇ ವರ್ತತೇ ॥

ಪ್ರತಿಪದಾರ್ಥ

**ಮಾತರಂ**—ಹೆತ್ತ ತಾಯಿಯ ತೊಡೆಯಮೇಲೆ । **ವಿಭೃತ್ರಾಃ**—ಅತಿಶಯವಾಗಿ ಭರಿಸತಕ್ಕ । **ಪುತ್ರಾಸೋ ನ**—ಪುತ್ರರಂತೆ । **ದೇವಾಸಃ**—ನಮ್ಮಿಂದ ಭರಿಸಲ್ಪಡುವ ದೇವತೆಗಳು । **ಬರ್ಹಿಷಃ**—ದರ್ಭಾಸನದ । **ಸಾನೌ**—ಉನ್ನತಪ್ರದೇಶದಲ್ಲಿ । **ಆ ಸದಂತು**—ಕುಳಿತುಕೊಳ್ಳಲಿ. । **ಅಗ್ನೇ**—ಎಲೈ ಅಗ್ನಿಯೇ, । **ವಿದಥ್ಯಾಂ**—ಪೂಜಾಯೋಗ್ಯವಾದ ನಿನ್ನ ಜ್ವಾಲೆಯಲ್ಲಿ । **ವಿಶ್ವಾಚೀ**—ಸಕಲ ಹವಿಸ್ಸುಗಳನ್ನು ಸುರಿಸುವ ಜುಹೂಪಾತ್ರೆಯು । **ಆ ಅನಕ್ತು**—ಹವಿಸ್ಸನ್ನು ಸುರಿಯಲಿ । (ಎಲೈ ಅಗ್ನಿಯೇ) **ದೇವತಾತಾ**—ಯುದ್ಧದಲ್ಲಿ । **ನಃ**—ನಮಗೆ । **ಮೃಧಃ**—ಹಿಂಸಕರನ್ನು । **ಮಾ ಕಃ**—ಉತ್ಪನ್ನಮಾಡಬೇಡ

ಭಾವಾರ್ಥ

ಹೆತ್ತ ತಾಯಿಯ ತೊಡೆಯಮೇಲೆ ಅತಿಶಯವಾಗಿ ಭರಿಸಲ್ಪಡುವ ಪುತ್ರರಂತೆ ನಮ್ಮಿಂದ ಭರಿಸಲ್ಪಡುವ ದೇವತೆಗಳು ದರ್ಭಾಸನದ ಉನ್ನತವಾದ ಪ್ರದೇಶದಲ್ಲಿ ಕುಳಿತುಕೊಳ್ಳಲಿ. ಎಲೈ ಅಗ್ನಿಯೇ ಪೂಜಾಯೋಗ್ಯವಾದ ನಿನ್ನ ಜ್ವಾಲೆಯಲ್ಲಿ ಸಕಲ ಹವಿಸ್ಸುಗಳನ್ನು ಸುರಿಯುವ ಜುಹೂಪಾತ್ರೆಯು ಹವಿಸ್ಸನ್ನು ಸುರಿಯಲಿ. ಎಲೈ ಅಗ್ನಿಯೇ ಯುದ್ಧದಲ್ಲಿ ನಮಗೆ ಹಿಂಸಕರನ್ನು ಉತ್ಪನ್ನಮಾಡಬೇಡ.

## English Translation

Let the gods sit down on the summit of the sacred grass, like the children nursed on the (lap of the) mother : let the full ladle, Agni, pour

(the oblation) on the sacrificial flame . gives us not up to our adversaries in battle.

ಸಂಹಿತಾಪಾಠಃ

ತೇ ಸೀಷಪಂತ ಜೋಷಮಾ ಯಜತ್ರಾ ಋತಸ್ಯ ಧಾರಾಃ ಸುದುಘಾ ದುಹಾನಾಃ ।
ಜ್ಯೇಷ್ಠಂ ವೋ ಅದ್ಯ ಮಹ ಆ ವಸೂನಾಮಾ ಗಂತನ ಸಮನಸೋ ಯತಿ ಷ್ಠ॥

ಪದಪಾಠಃ

ತೇ । ಸೀಷಪಂತ । ಜೋಷಂ । ಆ । ಯಜತ್ರಾಃ । ಋತಸ್ಯ । ಧಾರಾಃ । ಸುऽದುಘಾಃ । ದುಹಾನಾಃ ।
ಜ್ಯೇಷ್ಠಂ । ವಃ । ಅದ್ಯ । ಮಹಃ । ಆ । ವಸೂನಾಂ । ಆ । ಗಂತನ । ಸऽಮನಸಃ । ಯತಿ । ಸ್ಥ ॥ ೪ ॥

ಸಾಯಣಭಾಷ್ಯಂ

ಯಜತ್ರಾ ಯಜನೀಯಾಸ್ತ ಇಂದ್ರಾದಯೋ ದೇವಾ ಋತಸ್ಯೋದಕಸ್ಯ ಸುದುಘಾಃ ಸುಖೇನ ದೋಗ್ಧುಂ ಶಕ್ಯಾ ಧಾರಾ ದುಹಾನಾ ವರ್ಷಂತೋ ಜೋಷಂ ಪರ್ಯಾಪ್ತಿಂ ಯಥಾ ಭವತಿ ತಥಾ ಆ ಸೀಷಪಂತ । ಸಪತಿಃ ಪರಿಚರಣಾರ್ಥಃ । ಸ್ತುತಿಭಿರಾ ಸಮಂತಾತ್ಪರ್ಯಚೀಚರನ್ । ಅಸ್ಮಾನ್ಪರಿಚರಣಂ ಕುರ್ವಂತು । ಸ್ವೀಕುರ್ವಂತ್ವಿತಿ ಯಾವತ್ । ಅದ್ಯಾಸ್ಮಿನ್ದಿನೇ ಹೇ ದೇವಾಃ ವಸೂನಾಂ ಧನಾನಾಂ ಮಧ್ಯೇ ಜ್ಯೇಷ್ಠಂ ಶ್ರೇಷ್ಠಂ ವೋ ಯುಷ್ಮದೀಯಂ ಮಹೋ ಮಂಹನೀಯಂ ಧನಮಾ ಗಚ್ಛತು । ಯೂಯಮಪಿ ಸಮನಸಸ್ತುಲ್ಯಮತಯಃ ಸಂತ ಆ ಗಂತನ । ಆಗಚ್ಛತ। ಹೇ ದೇವಾಃ ಯೂಯಂ ಯತಿ ಸ್ಥ ಆಗಂತನೇತಿ ಸಂಬಂಧಃ ॥

ಪ್ರತಿಪದಾರ್ಥ

**ಯಜತ್ರಾಃ**—ಪೂಜ್ಯರಾದ । **ತೇ**—ಇಂದ್ರಾದಿದೇವತೆಗಳು । **ಋತಸ್ಯ**— ಉದಕವನ್ನು । **ಸುದುಘಾಃ**—ಕರೆಯಲು ಶಕ್ತರಾಗಿಯೂ । **ಧಾರಾಃ**—ವೃಷ್ಟಿಧಾರೆಗಳನ್ನು । **ದುಹಾನಾಃ**—ಸುರಿಸುವವರಾಗಿಯೂ । **ಜೋಷಂ**—ತೃಪ್ತಿಯನ್ನು ಹೊಂದುವಂತೆ । **ಆ ಸೀಷಪಂತ**—ನಮ್ಮಿಂದ ಸೇವಿಸಲ್ಪಡಲಿ (ಅಥವಾ ನಮಗೆ ತೃಪ್ತಿಯನ್ನು ಕೊಡುವಂತೆ ನಮ್ಮನ್ನು ಪಚರಿಸಲಿ) । (ಎಲೈ ದೇವತೆಗಳೇ,) **ಅದ್ಯ**—ಈ ಯಾಗದ ದಿನ । **ವಸೂನಾಂ**—ಧನಗಳ ನಡುವೆಯೆಲ್ಲಾ । **ಜ್ಯೇಷ್ಠಂ**—ಪ್ರಶಸ್ತವಾದ । **ವಃ**—ನಿಮ್ಮ । **ಮಹಃ**—ಪೂಜ್ಯವಾದ ಧನವು । **ಆ ಗಂತನ**—ನಮ್ಮಲ್ಲಿಗೆ ಬಂದುಸೇರಲಿ । (ನೀವೂ ಸಹ) । **ಸಮನಸಃ**—ಒಂದೇ ಮನಸ್ಸುಳ್ಳವರಾಗಿ । **ಆ ಗಂತನ**—ನಮ್ಮಲ್ಲಿಗೆ ಬಂದು ಸೇರಿಕೊಳ್ಳಿರಿ । **ಯತಿ ಷ್ಠ**—ಒಟ್ಟುಗೂಡಿರಿ

ಭಾವಾರ್ಥ

ಉದಕವನ್ನು ಕರೆಯಲು ಶಕ್ತರಾದವರೂ, ವೃಷ್ಟಿಧಾರೆಗಳನ್ನು ಸುರಿಸುವವರೂ, ಪೂಜ್ಯರೂ ಆದ ಇಂದ್ರಾದಿ ದೇವತೆಗಳು ನಮಗೆ ತೃಪ್ತಿಯನ್ನುಂಟುಮಾಡುವಂತೆ ನಮ್ಮನ್ನು ಪಚರಿಸಲಿ. ಎಲೈ ದೇವತೆಗಳೇ, ಈ ಯಾಗದ ದಿನ ಧನಗಳ ನಡುವೆಯೆಲ್ಲಾ ಪ್ರಶಸ್ತವಾದ ನಿಮ್ಮ ಪೂಜ್ಯವಾದ ಧನವು ನಮ್ಮಲ್ಲಿಗೆ ಬಂದು ಸೇರಲಿ. ನೀವೂ ಸಹ ಒಂದೇ ಮನಸ್ಸುಳ್ಳವರಾಗಿ ನಮ್ಮಲ್ಲಿಗೆ ಒಂದುಗೂಡಿ ಬಂದುಸೇರಿರಿ.

## English Translation

May the adorable deities, who are the bestowers of water, the shedders of showers, be fully propitiated (by our praises) may the most precious and commendable of your treasures (be ours) to-day · and do you with one accord come hither.

### ಸಂಹಿತಾಪಾಠಃ

ಏವಾ ನೋ ಅಗ್ನೇ ವಿಕ್ಷ್ವಾ ದಶಸ್ಯ ತ್ವಯಾ ವಯಂ ಸಹಸಾವನ್ನಾಸ್ಕ್ರಾಃ ।
ರಾಯಾ ಯುಜಾ ಸಧಮಾದೋ ಅರಿಷ್ಟಾ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೫ ॥

### ಪದಪಾಠಃ

ಏವ । ನಃ । ಅಗ್ನೇ । ವಿಕ್ಷು । ಆ । ದಶಸ್ಯ । ತ್ವಯಾ । ವಯಂ । ಸಹಸಾಽವನ್ । ಅಸ್ಕ್ರಾಃ ।
ರಾಯಾ । ಯುಜಾ । ಸಧಽಮಾದಃ । ಅರಿಷ್ಟಾಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೫ ॥

### ಸಾಯಣಭಾಷ್ಯಂ

ಹೇ ಅಗ್ನೇ ಏವ್ಮೇವಂ ಸ್ತುತಸ್ತ್ವಂ ವಿಕ್ಷು ಪ್ರಜಾಸು ಮಧ್ಯೇ ನೋಽಸ್ಮಭ್ಯಮಾ ದಶಸ್ಯ । ಧನಮಭಿಪ್ರಯಚ್ಛ । ಹೇ ಸಹಸಾವನ್ಬಲವನ್ನಗ್ನೇ ತ್ವಯಾಸ್ಕ್ರಾ ಅಸ್ಕನ್ನಾ ವಯಂ ಯುಜಾ ನಿತ್ಯಯುಕ್ತೇನ ರಾಯಾ ಧನೇನ ಸಧಮಾದಃ ಸಹ ಮಾದ್ಯಂತೋಽರಿಷ್ಟಾ ಅಹಿಂಸಿತಾ ಭವೇಮ । ಅಸ್ಮಿನ್ಸೂಕ್ತೇ ಪ್ರತಿಪಾದಿತಾಃ ಸರ್ವೇ ದೇವಾಃ ಯೂಯಂ ನೋಽಸ್ಮಾನ್ಕಲ್ಯಾಣೈಃ ಸರ್ವದಾ ಪಾಲಯತ ॥

### ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ಏವ**—ಈರೀತಿ ಸ್ತುತನಾದ ನೀನು । **ವಿಕ್ಷು**—ಪ್ರಜೆಗಳ ನಡುವೆ । **ನಃ**—ನಮಗೆ । **ಆ ದಶಸ್ಯ**—ಧನವನ್ನು ಕೊಡು. । **ಸಹಸಾವನ್**—ಶಕ್ತಿಯುತನಾದ ಎಲೈ ಅಗ್ನಿಯೇ, । **ತ್ವಯಾ**—ನಿನ್ನಿಂದ । **ಅಸ್ಕ್ರಾಃ**—ತ್ಯಜಿಸಲ್ಪಡದಿರುವ । **ವಯಂ**—ನಾವು । **ಯುಜಾ**—ಶಾಶ್ವತವಾಗಿ ಸಂಯುಕ್ತವಾಗಿರುವ **ರಾಯಾ**—ಧನದಿಂದ । **ಸಧಮಾದಃ**—ಒಟ್ಟಿಗೆ ಹರ್ಷವನ್ನು ಹೊಂದುವವರಾಗಿಯೂ । **ಅರಿಷ್ಟಾಃ**—ಅಹಿಂಸಿತರಾಗಿಯೂ ಆಗಿರುವಂತಾಗಲಿ. । (ಎಲೈ ದೇವತೆಗಳೇ,) **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

### ಭಾವಾರ್ಥ

ಎಲೈ ಅಗ್ನಿಯೇ, ಈರೀತಿ ಸ್ತುತನಾದ ನೀನು ಪ್ರಜೆಗಳ ನಡುವೆ ನಮಗೆ ಧನವನ್ನು ಕೊಡು. ಶಕ್ತಿಯುತನಾದ ಎಲೈ ಅಗ್ನಿಯೇ, ನಿನ್ನಿಂದ ತ್ಯಜಿಸಲ್ಪಡದಿರುವ ನಾವು ಶಾಶ್ವತವಾಗಿ ನಮ್ಮೊಡನೆ ಸಂಯುಕ್ತವಾಗಿರುವ ಧನದ ಸಹಾಯದಿಂದ ಒಟ್ಟಿಗೆ ಹರ್ಷವನ್ನು ಹೊಂದುವವರಾಗಿಯೂ, ಅಹಿಂಸಿತರಾಗಿಯೂ ಆಗಿರುವಂತಾಗಲಿ ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

Be glorified, Agni grant us (wealth) among the people may we, vigorous Agni, ever be undeserted by you, but always be rejoicing and unmolested in the possession of riches and do you, (gods), ever cherish us with blessings

## ನಲವತ್ತನಾಲ್ಕನೆಯ ಸೂಕ್ತವು

**ದಧಿಕ್ರಾಂ ವ ಇತಿ ಪಂಚರ್ಚಮೇಕಾದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ದಧಿಕ್ರಾಖ್ಯದೇವತಾಕಂ । ಆದ್ಯಾ ಜಗತೀ ಸಾ ತು ದಧಿಕ್ರಾದಿಲಿಂಗೋಕ್ತದೇವತಾಕಾ ಶಿಷ್ಟಾಶ್ಚತಸ್ರಸ್ತ್ರಿಷ್ಟುಭಃ । ಅನುಕ್ರಮ್ಯತೇ ಹಿ । ದಧಿಕ್ರಾಂ ದಾಧಿಕ್ರಂ ಜಗತ್ಯಾದ್ಯಾ ಲಿಂಗೋಕ್ತದೇವತೇತಿ ॥ ಗತೋ ವಿನಿಯೋಗಃ ॥**

**ಅನುವಾದವು—ದಧಿಕ್ರಾಂ ವಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ದಧಿಕ್ರಾವಾ ಎಂಬುದು ದೇವತೆಯು, ಈ ಸೂಕ್ತದ ಮೊದಲನೆಯ ಋಕ್ಕು ಜಗತೀಛಂದಸ್ಕವು, ಮತ್ತು ದಧಿಕ್ರಾ ಮೊದಲಾದ ಲಿಂಗೋಕ್ತ ದೇವತಾಕವು ಉಳಿದ ನಾಲ್ಕು ಋಕ್ಕುಗಳೂ ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ದಧಿಕ್ರಾಂ ದಾಧಿಕ್ರಂ ಜಗತ್ಯಾದ್ಯಾ ಲಿಂಗೋಕ್ತದೇವತಾ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೪೪

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೪೪ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಸಿಷ್ಠಃ ॥
ದೇವತಾ—೧ ಲಿಂಗೋಕ್ತದೇವತಾಃ । ೨-೫ ದಧಿಕ್ರಾಃ ॥
ಛಂದಃ—೧ ಜಗತೀ । ೨-೫ ತ್ರಿಷ್ಟುಪ್ ॥

ಸಂಹಿತಾಪಾಠಃ

ದಧಿಕ್ರಾಂ ವಃ ಪ್ರಥಮಮಶ್ವಿನೋಷಸಮಗ್ನಿಂ ಸಮಿದ್ಧಂ ಭಗಮೂತಯೇ ಹುವೇ ।
ಇಂದ್ರಂ ವಿಷ್ಣುಂ ಪೂಷಣಂ ಬ್ರಹ್ಮಣಸ್ಪತಿಮಾದಿತ್ಯಾನ್ದ್ಯಾವಾಪೃಥಿವೀ ಅಪಃ ಸ್ವಃ ॥ ೧ ॥

ಪದಪಾಠಃ

ದಧಿಽಕ್ರಾಂ । ವಃ । ಪ್ರಥಮಂ । ಅಶ್ವಿನಾ । ಉಷಸಂ । ಅಗ್ನಿಂ । ಸಂಽಇದ್ಧಂ । ಭಗಂ । ಊತಯೇ । ಹುವೇ ।
ಇಂದ್ರಂ । ವಿಷ್ಣುಂ । ಪೂಷಣಂ । ಬ್ರಹ್ಮಣಃ । ಪತಿಂ । ಆದಿತ್ಯಾನ್ । ದ್ಯಾವಾಪೃಥಿವೀ ಇತಿ । ಅಪಃ ।
ಸ್ವ೧ರಿತಿ ಸ್ವಃ ॥ ೧ ॥

**ಸಾಯಣಭಾಷ್ಯಂ**

**ಹೇ ಸ್ತೋತಾರಃ ವೋ ಯುಷ್ಮಾಕಮೂತಯೇ ರಕ್ಷಣಾಯ ಪ್ರಥಮಂ ದಧಿಕ್ರಾಮಶ್ವಾಭಿಮಾನಿನೀಂ ದೇವತಾಂ ಹುವೇ । ಆಹ್ವಯಾಮಿ । ತತೋಽಶ್ವಿನಾಶ್ವಿದೇವಾವುಷಸಮುಷೋದೇವತಾಂ ಚ ಸಮಿದ್ಧಂ ಸಮ್ಯಗ್ದೀಪ್ತಮಗ್ನಿಂ ಚ ಭಗಮೇತದಾಖ್ಯಂ ದೇವಂ ಚಾಹ್ವಯಾಮಿ । ಇಂದ್ರಂ ವಿಷ್ಣುಂ ಪೂಷಣಂ ಚ ಬ್ರಹ್ಮಣಸ್ಪತಿಮಾದಿತ್ಯಾನ್ ದ್ಯಾವಾಪೃಥಿವೀ ಅಪ ಉದಕದೇವತಾಃ ಸ್ವಃ ಸೂರ್ಯಮಿತ್ಯೇತಾನ್ದೇವಾನಾಹ್ವಯಾಮಿ ॥**

ಪ್ರತಿಪದಾರ್ಥ

(ಎಲೈ ಸ್ತೋತೃಗಳೇ) **ವಃ**—ನಿಮ್ಮ । **ಊತಯೇ**—ರಕ್ಷಣಾರ್ಥವಾಗಿ । **ಪ್ರಥಮಂ**—ಮೊದಲು । **ದಧಿಕ್ರಾಂ**—ಅಶ್ವಾಭಿಮಾನಿದೇವತೆಯನ್ನು । **ಹುವೇ**—ಕರೆಯುತ್ತೇನೆ । (ಅನಂತರ) **ಅಶ್ವಿನಾ**—ಅಶ್ವಿನೀದೇವತೆಗಳನ್ನೂ । **ಉಷಸಂ**—ಉಷೋದೇವತೆಯನ್ನೂ । **ಸಮಿದ್ಧಂ**—ಪ್ರಜ್ವಲಿತನಾದ । **ಅಗ್ನಿಂ**—ಅಗ್ನಿಯನ್ನೂ । **ಭಗಂ** ಭಗದೇವನನ್ನೂ ಕರೆಯುತ್ತೇನೆ । **ಇಂದ್ರಂ**—ಇಂದ್ರನನ್ನೂ । **ವಿಷ್ಣುಂ**—ವಿಷ್ಣುವನ್ನೂ । **ಪೂಷಣಂ**—ಪೂಷದೇವನನ್ನೂ । **ಬ್ರಹ್ಮಣಸ್ಪತಿಂ**—ಬ್ರಹ್ಮಣಸ್ಪತಿಯನ್ನೂ । **ಆದಿತ್ಯಾನ್**—ಆದಿತ್ಯರನ್ನೂ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನೂ । **ಅಪಃ**—ಅಬ್ದೇವತೆಗಳನ್ನೂ । **ಸ್ವಃ**—ಸೂರ್ಯನನ್ನು ಕರೆಯುತ್ತೇನೆ

ಭಾವಾರ್ಥ

ಎಲೈ ಸ್ತೋತೃಗಳೇ, ನಿಮ್ಮ ರಕ್ಷಣಾರ್ಥವಾಗಿ ಮೊದಲು ಅಶ್ವಾಭಿಮಾನಿದೇವತೆಯನ್ನು ಕರೆಯುತ್ತೇನೆ. ಅನಂತರ ಅಶ್ವಿನೀದೇವತೆಗಳನ್ನೂ, ಉಷೋದೇವತೆಯನ್ನೂ, ಪ್ರಜ್ವಲಿತನಾದ ಅಗ್ನಿಯನ್ನೂ, ಭಗನನ್ನೂ, ಇಂದ್ರ, ಪೂಷ, ವಿಷ್ಣು, ಬ್ರಹ್ಮಣಸ್ಪತಿ, ಆದಿತ್ಯರು, ದ್ಯಾವಾಪೃಥಿವಿಗಳು, ಅಬ್ದೇವತೆಗಳು, ಸೂರ್ಯ, ಈ ಎಲ್ಲಾ ದೇವತೆಗಳನ್ನೂ ಕರೆಯುತ್ತೇನೆ

English Translation

For your preservation (worshippers), I invoke, first, Dadhikra, then the Ashwins, the Dawn, the kindled Agni, Bhaga, Indra, Vishnu, Pushan, Brahmanaspati, the Adityas, heaven and earth, the waters, the sun.

ವಿಶೇಷವಿಷಯಗಳು

ಪ್ರಕೃತಋಕ್ಕಿನಲ್ಲಿ ದಧಿಕ್ರಾ ಎಂಬ ದೇವತೆಯ ಜತೆಯಲ್ಲಿ ಉಷೋದೇವತೆ, ಅಗ್ನಿ, ಭಗ, ಇಂದ್ರ, ವಿಷ್ಣು, ಪೂಷನ್, ಬ್ರಹ್ಮಣಸ್ಪತಿ, ಆದಿತ್ಯರು, ದ್ಯಾವಾಪೃಥಿವಿಗಳು, ಉದಕಾಭಿಮಾನಿದೇವತೆಗಳು ಇವರನ್ನೆಲ್ಲಾ ಸ್ತುತಿಸಲಾಗಿದೆ. ಈ ಸೂಕ್ತದ ಮುಂದಿನ ಋಕ್ಕುಗಳಲ್ಲಿ ದಧಿಕ್ರಾ ಎಂಬ ದೇವತೆಯನ್ನು ಮಾತ್ರ ಸ್ತುತಿಸಲಾಗಿದೆ

ದೇವತೆಗಳ ರಥವಾಹಕಗಳಾದ ಅಶ್ವಗಳಲ್ಲದೆ ಇತರ ಕೆಲವು ಅಶ್ವಗಳನ್ನು ವೈಯಕ್ತಿಕವಾಗಿ ಋಗ್ವೇದದಲ್ಲಿ ನಿರ್ದೇಶಿಸಲಾಗಿದೆ. ಇವುಗಳಲ್ಲಿ ದಧಿಕ್ರಾ, ತಾರ್ಕ್ಷ್ಯ, ಪೈದ್ವ, ಏತಶ ಎಂಬಿವು ಮುಖ್ಯವಾದವು ಪ್ರಕೃತ ಸೂಕ್ತದಲ್ಲಿ ದಧಿಕ್ರಾ ಎಂಬ ಅಶ್ವದೇವತೆಯು ಸ್ತುತಿಯಿರುವುದರಿಂದ ಈ ದೇವತೆಯ ವಿಷಯವನ್ನು ಮಾತ್ರ ಇಲ್ಲಿ ವಿಮರ್ಶಿಸಲಾಗಿದೆ. ಅಶ್ವದೇವತೆಗಳಲ್ಲೆಲ್ಲಾ ದಧಿಕ್ರಾ ಎಂಬ ದೇವತೆಯೇ ಮುಖ್ಯವಾದುದು. ಋಗ್ವೇದದ ೪-೩೮, ೪-೩೯, ೪-೪೦, ೭-೪೪ ಈ ನಾಲ್ಕು ಸೂಕ್ತಗಳಲ್ಲಿ ಈ ಅಶ್ವದ ಪ್ರಸ್ತಾಪವಿದೆ ಈ ಸೂಕ್ತಗಳಲ್ಲಿ ದಧಿಕ್ರಾ ಎಂಬ ಶಬ್ದದ ಪ್ರಯೋಗವು ಹನ್ನೆರಡು ಸಲವೂ ದಧಿಕ್ರಾವನ್ ಎಂಬ ಶಬ್ದದ ಪ್ರಯೋಗವು ಹತ್ತು ಸಲವೂ ಇರುವುದು. ಇತರ

ವೇದಗಳಲ್ಲಿ ಇದರ ಪ್ರಸ್ತಾಪವು ವಿಶೇಷವಾಗಿಲ್ಲ ನಿರುಕ್ತದಲ್ಲಿ ದಧಿಕ್ರಾ ಎಂಬ ಶಬ್ದವನ್ನು ಅಶ್ವನಾಮಗಳಲ್ಲಿ ಸೇರಿಸಿ ಪಠಿಸಲಾಗಿದೆ (ನಿ. ೧-೧೪). ಈ ಅಶ್ವವು ಬಹಳ ವೇಗಶಾಲಿ (ಋ ಸಂ ೪-೩೮-೨-೯, ೪-೩೯-೧) ;) ಅನೇಕ ರಥಗಳ ಸಾಲಿನಲ್ಲಿ ಮೊದಲನೆಯ ಅಶ್ವವಾಗಿದೆ (೭-೪೪-೪) ಅದು ರಥಗಳನ್ನು ನಾಶಮಾಡುತ್ತದೆ ಮತ್ತು ವಾಯುವೇಗದಿಂದ ಓಡುತ್ತದೆ. (೪-೩೮-೩), ಅದರ ವೇಗವನ್ನು ಜನರೆಲ್ಲರೂ ಪ್ರಶಂಸಿಸುತ್ತಾರೆ (೪-೩೮ ೩ ೯), ರಸ್ತೆಗಳ ತಿರುವುಗಳಲ್ಲಿಯೂ ಧಾವಿಸುತ್ತದೆ (೪ ೪೦-೪) ಇದಕ್ಕೆ ರೆಕ್ಕೆಗಳೂ ಉಂಟು ಮತ್ತು ಪಕ್ಷಿಯಂತೆ ಇದೆ ಮತ್ತು ಇದರ ರೆಕ್ಕೆಗಳು ಶ್ಯೇನಪಕ್ಷಿಯ ರೆಕ್ಕೆಗಳಿಗೆ ಹೋಲಿಸಲ್ಪಟ್ಟಿವೆ (೪ ೪೦-೨&೩) ಕೆಲವು ಕಡೆ ಇದನ್ನು ಶ್ಯೇನ ಪಕ್ಷಿಯೆಂದೇ ಕರೆಯಲಾಗಿದೆ (೪-೩೮-೨&೫) ಋ ಸಂ ೪-೪೦-೫ ನೇ ಋಕ್ಕಿನಲ್ಲಿ ಇದನ್ನು ಬೆಳಕಿನಲ್ಲಿ ವಾಸಿಸುವ ಹಂಸ, ಅಂತರಿಕ್ಷದಲ್ಲಿರುವ ವಸು, ವೇದಿಕೆಯ ಮೇಲೆ ಕುಳಿತಿರುವ ಹೋತೃ, ಮನೆಯಲ್ಲಿ ಸುಖವಾಗಿ ಉಪವಿಷ್ಟನಾಗಿರು ಅಥಿತಿ ಇತ್ಯಾದಿ ಅಗ್ನಿಗೆ ಅನ್ವಯಿಸುವ ವಿಶೇಷಣಗಳಿಂದ ವರ್ಣಿಲಾಗಿದೆ

ದಧಿಕ್ರನೂ ಒಬ್ಬ ವೀರ. ಇವನು ದಸ್ಯುಜನರನ್ನು ಸಂಹಾರಮಾಡಿ ಜಯಶಾಲಿಯಾಗುತ್ತಾನೆ (ಋ. ಸಂ ೪-೩೮ ೧, ೨, ೩, & ೭) ಸಹಸ್ರಾರು ಜನಗಳನ್ನೆದುರಿಸಿ ಯುದ್ಧಮಾಡುವಾಗ ಶತ್ರುಗಳು ಅವನಿಗೆ ಹೆದರುತ್ತಾರೆ. ಯುದ್ಧದಲ್ಲಿ ಕೊಳ್ಳೆ ಹೊಡೆಯುತ್ತಾನೆ ಯುದ್ಧಗಳಲ್ಲಿ ನಾನಾಸಂಗಡಗಳು ಅವನನ್ನುದ್ದೇಶಿಸಿ ಕೂಗಿಕೊಳ್ಳುತ್ತವೆ. (೪-೩೮-೮, ೫, ೪). ಅವು ಎಲ್ಲಾ ಪಂಗಡಗಳಿಗೂ ಸೇರಿದೆ ಸೂರ್ಯನು ತನ್ನ ತೇಜಸ್ಸಿನಿಂದ ನೀರನ್ನಾವರಿಸು ವಂತೆ ತನ್ನ ಸಾಮರ್ಥ್ಯದಿಂದ ಐದು ಪಂಗಡಗಳನ್ನು ಆವರಿಸಿಕೊಂಡಿದೆ ೪-೩೮ ೨, ೪, ೧೦) ಜಯಶಾಲಿಯಾದ ಈ ಅಶ್ವವನ್ನು ಮಿತ್ರಾವರುಣರು ಪೂರುಗಳಿಗೆ ಕೊಟ್ಟರು (೪-೩೯-೨, ೪ ೩೮ ೧, ೨) ಮನುಷ್ಯರ ಅನುಗ್ರಹಾ ರ್ಥವಾಗಿ ಅವರು ದಧಿಕ್ರಾ ಎಂಬ ಅಶ್ವವನ್ನು ಕೊಟ್ಟರು

ಅರುಣೋದಯ ಕಾಲದಲ್ಲಿ ಅಗ್ನ್ಯುದ್ದೀಪನ ಮಾಡುವಾಗ ದಧಿಕ್ರಾವನೆಂಬ ಅಶ್ವವನ್ನು ಸ್ತುತಿಸುತ್ತಾರೆ. (೭-೪೧-೬) ಉಷೋದೇವತೆಯ ಜತೆಯಲ್ಲಿ ಅವನೂ ಆಹೂತನಾಗಿದ್ದಾನೆ (೪-೩೯ ೧, ೪ ೪೦-೧) ದಧಿಕ್ರಾವ ನಂತೆ ಯಜ್ಞಾಭಿಮುಖರಾಗಿ ಬರಬೇಕೆಂದು ಉಷೋದೇವತೆಯರನ್ನೂ ಪ್ರಾರ್ಥಿಸಿದೆ (೭ ೪೧ ೬) ಈ ದೇವತೆಯು ಉಷೋದೇವತೆ, ಅಗ್ನಿ, ಅಶ್ವಿನೀದೇವತೆಗಳು ಸೂರ್ಯ ಮತ್ತು ಇತರ ದೇವತೆಗಳೊಡನೆ ಸ್ತುತನಾಗಿದ್ದಾನೆ (೩ ೨೦-೧, ೭-೯೪-೧ ರಿಂದ ೪, ೧೦-೧೦೧-೧) ಆದರೆ ದಧಿಕ್ರಾವನಿಗೇ ಮೊದಲನೆಯ ಆಹ್ವಾನ (೭-೪೪ ೧)

ಪದದ ನಿಷ್ಪತ್ತಿಯಿಂದ ಈ ಅಶ್ವದ ಸ್ವಭಾವ ಮತ್ತು ಲಕ್ಷಣಗಳು ಏನೂ ತಿಳಿದುಬರುವುದಿಲ್ಲ ಕ್ರಾ ಎಂದರೆ ಚದುರಿಸುವ ಎಂವರ್ಥವಾಗಬಹುದು ಎಂದರೆ ಸೂರ್ಯೋದಯಕಾಲದಲ್ಲಿ ಕಂಡುಬರುವ ದಧಿಯಂತಿರುವ ಹಿಮವನ್ನು ಚದುರಿಸುವವನು ಎಂದಾಗಬಹುದು. ಉದಯಿಸುತ್ತಿರುವ ಸೂರ್ಯಮಂಡಲವೇ ಈ ದಧಿಕ್ರಾ ಎಂಬ ದೇವತೆಯಿರ ಬಹುದೆಂದು ಕೆಲವರ ಅಭಿಪ್ರಾಯ ದಧಿಕ್ರನಿಗೆ ಉಷೋದೇವತೆಯೊಡನೆ ವಿಶೇಷ ಸಂಬಂಧವಿರುವುದು ಸೂರ್ಯ ನಿಗೂ ಅಶ್ವ ಅಥವಾ ಪಕ್ಷಿಯೆಂದು ಅನೇಕವೇಳೆ ಹೆಸರಿದೆ ಮತ್ತು ಅವನು ಯೋಧನ ಸ್ವಭಾವವುಳ್ಳವನೆಂದು ಕೆಲವು ಕಡೆ ಉಕ್ತವಾಗಿರುವುದರಿಂದ ದಧಿಕ್ರನು ಸೂರ್ಯಮಂಡಲವೇ ಇರಬಹುದೆಂದು ಹೇಳಬಹುದು. ದಧಿಕ್ರನು ಅಗ್ನಿಯ ರೂಪವಿಶೇಷವೆಂದು ಕೆಲವರ ಅಭಿಪ್ರಾಯ. ಮತ್ತೆ ಕೆಲವರು ಇದು ದೇವತೆಯೇ ಅಲ್ಲ ಒಂದು ಉತ್ತಮಾಶ್ವ ಎನ್ನುತ್ತಾರೆ.

---

ಸಂಹಿತಾಪಾಠಃ

ದಧಿಕ್ರಾಮ್ಣು ನಮಸಾ ಬೋಧಯಂತ ಉದೀರಾಣಾ ಯಜ್ಞಮುಪಪ್ರಯಂತಃ
ಇಳಾಂ ದೇವೀಂ ಬರ್ಹಿಷಿ ಸಾದಯಂತೋಽಶ್ವಿನಾ ವಿಪ್ರಾ ಸುಹವಾ ಹು-
ವೇಮ ॥ ೨ ॥

ಪದಪಾಠಃ

ದಧಿಽಕ್ರಾಂ । ಊಂ ಇತಿ । ನಮಸಾ । ಬೋಧಯಂತಃ । ಉತ್ಽಈರಾಣಾಃ । ಯಜ್ಞಂ । ಉಪಽಪ್ರ-
ಯಂತಃ ।
ಇಳಾಂ । ದೇವೀಂ । ಬರ್ಹಿಷಿ । ಸಾದಯಂತಃ । ಅಶ್ವಿನಾ । ವಿಪ್ರಾ । ಸುಽಹವಾ । ಹುವೇಮ ॥ ೨ ॥

ಸಾಯಣಭಾಷ್ಯಂ

ದಧಿಕ್ರಾನೇತನ್ನಾಮಕಮಶ್ವವಿಶೇಷಂ ದೇವಂ ನಮಸಾ ಸ್ತೋತ್ರೇಣ ಬೋಧಯಂತಃ ಪ್ರಜ್ಞಾಪಯಂತಃ ಉದೀರಾಣಾಃ ಪ್ರೇರಯಂತೋ ಯಜ್ಞಂ ಯಾಗಮುಪಪ್ರಯಂತ ಉಪಕ್ರಮಮಾಣಾ ವಯಂ ಬರ್ಹಿಷೀಳಾಂ ಹವೀರೂಪಾಂ ದೇವೀಂ ಸಾದಯಂತ ಆಸ್ಥಾಪಯಂತಃ ಸುಹವಾ ಶೋಭನಾಹ್ವಾನೌ ವಿಪ್ರಾ ವಿಪ್ರೌ ಮೇಧಾವಿನಾವಶ್ವಿನಾಶ್ವಿನೌ ದೇವೌ ಹುವೇಮ । ಆಹ್ವಯಾಮ । ಉ ಇತಿ ಪೂರಣಃ ॥

ಪ್ರತಿಪದಾರ್ಥ

**ದಧಿಕ್ರಾಂ**—ದಧಿಕ್ರಾ ಸಂಜ್ಞಕವಾದ ಅಶ್ವಾಭಿಮಾನಿದೇವತೆಯನ್ನು । **ನಮಸಾ**—ಸ್ತುತಿಗಳಿಂದ । **ಬೋಧಯಂತಃ**—ಎಚ್ಚರಗೊಳಿಸುತ್ತಲೂ । **ಉದೀರಾಣಾಃ**—ತ್ವರೆಗೊಳಿಸುತ್ತಲೂ । **ಯಜ್ಞಂ**—ಯಾಗವನ್ನು । **ಉಪಪ್ರಯಂತಃ**—ಆರಂಭಿಸುತ್ತಲೂ । **ಬರ್ಹಿಷಿ**—ದರ್ಭಾಸನದ ಮೇಲೆ । **ದೇವೀಂ**—ದೇವತಾತ್ಮಳಾದ । **ಇಳಾಂ**—ಇಳಾದೇವಿಯನ್ನು । **ಸಾದಯಂತಃ**—ಸ್ಥಾಪಿಸುತ್ತಲೂ । **(ವಯಂ**—ನಾವು) । **ಸುಹವಾ**—ಉತ್ತಮವಾದ ಆಹ್ವಾನಕ್ಕೆ ಪಾತ್ರರೂ, । **ವಿಪ್ರಾ**—ಮೇಧಾವಿಗಳೂ ಆದ । **ಅಶ್ವಿನಾ**—ಅಶ್ವಿನೀದೇವತೆಗಳನ್ನು । **ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ

ಭಾವಾರ್ಥ

ದಧಿಕ್ರಾಸಂಜ್ಞಕವಾದ ಅಶ್ವಾಭಿಮಾನಿದೇವತೆಯನ್ನು ಸ್ತುತಿಗಳಿಂದ ಎಚ್ಚರಗೊಳಿಸುತ್ತಲೂ, ತ್ವರೆಗೊಳಿಸುತ್ತಲೂ, ಯಾಗವನ್ನು ಆರಂಭಗೊಳಿಸುತ್ತಲೂ ದರ್ಭಾಸನದ ಮೇಲೆ ದೇವತಾತ್ಮಳಾದ ಇಳಾದೇವಿಯನ್ನು ಸ್ಥಾಪಿಸುತ್ತಲೂ ನಾವು ಉತ್ತಮವಾದ ಆಹ್ವಾನಕ್ಕೆ ಪಾತ್ರರೂ, ಮೇಧಾವಿಗಳೂ ಆದ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿ ಕರೆಯುತ್ತೇವೆ.

English Translation

Arousing and animating Dadhikra, procceding diligently with the sacrifice . seating the divine Ila on the sacred grass, let us invoke the intelligent and worthily-invoked Ashwins.

ಸಂಹಿತಾಪಾಠಃ

ದಧಿಕ್ರಾವಾಣಂ ಬುಬುಧಾನೋ ಅಗ್ನಿಮುಪ ಬ್ರುವ ಉಷಸಂ ಸೂರ್ಯಂ ಗಾಂ ।
ಬ್ರಧ್ನಂ ಮಂಶ್ಚತೋರ್ವರುಣಸ್ಯ ಬಭ್ರುಂ ತೇ ವಿಶ್ವಾಸ್ಮದ್ದುರಿತಾ ಯಾವಯಂತು ॥ ೩ ॥

ಪದಪಾಠಃ

ದಧಿಽಕ್ರಾವಾಣಂ । ಬುಬುಧಾನಃ । ಅಗ್ನಿಂ । ಉಪ । ಬ್ರುವೇ । ಉಷಸಂ । ಸೂರ್ಯಂ । ಗಾಂ ।
ಬ್ರಧ್ನಂ । ಮಂಶ್ಚತೋಃ । ವರುಣಸ್ಯ । ಬಭ್ರುಂ । ತೇ । ವಿಶ್ವಾ । ಅಸ್ಮತ್ । ದುಃಽಇತಾ । ಯವಯಂತು ॥

ಸಾಯಣಭಾಷ್ಯಂ

ದಧಿಕ್ರಾವಾಣಮಶ್ವವಿಶೇಷಂ ಬುಬುಧಾನಃ ಸ್ತೋತ್ರೇಣ ಬೋಧಯನ್ನಹಮಗ್ನಿಂ ದೇವಮುಪ ಬ್ರುವೇ । ಉಪಸ್ತೌಮಿ । ತಥಾ ಚೋಷಸಮುಷೋದೇವತಾಂ ಸೂರ್ಯಂ ಸರ್ವಸ್ಯ ಪ್ರೇರಕಂ ದೇವಂ ಗಾಂ ಭೂಮಿಂ । ವಾಗ್ದೇವತಾಂ ವಾ । ಏವಂಭೂತಾನ್ದೇವಾನಹಮುಪಸ್ತೌಮಿ । ಮಂಶ್ಚತೋಃ । ಮನ್ಯಮಾನಾನ್ ಸ್ತುವತೋ ಜನಾಂಶ್ಚೇತಯತೇ ಜಾನಾತೀತಿ ಯದ್ವಾಭಿಮನ್ಯಮಾನಾಂಶ್ಚಾತಯತೇ ನಾಶಯತೀತಿ ಮಂಶ್ಚತುಃ । ತಸ್ಯ ವರುಣಸ್ಯ ಬ್ರಧ್ನಂ ಮಹಾಂತಂ ಬಭ್ರುಂ ಪಿಂಗಲವರ್ಣಮಶ್ವಂ ತಸ್ಯಾನಯನಾರ್ಥಮಹಮುಪ ಬ್ರುವೇ । ತೇ ದೇವಾ ಅಸ್ಮದಸ್ಮತ್ತೋ ವಿಶ್ವಾ ವಿಶ್ವಾನಿ ಸರ್ವಾಣಿ ದುರಿತಾ ದುರಿತಾನಿ ಪಾಪಾನಿ ಯವಯಂತು । ಪೃಥಕ್ಕುರ್ವಂತು ॥

ಪ್ರತಿಪದಾರ್ಥ

**ದಧಿಕ್ರಾವಾಣಂ**—ದಧಿಕ್ರಾಸಂಜ್ಞಕವಾದ ಅಶ್ವವಿಶೇಷವನ್ನು । **ಬುಬುಧಾನಃ**—ಸ್ತುತಿಗಳಿಂದ ಎಚ್ಚರಗೊಳಿಸುವ ನಾನು । **ಅಗ್ನಿಂ**—ಅಗ್ನಿಯನ್ನು । **ಉಪ ಬ್ರುವೇ**—ಪ್ರಶಂಸಿಸುತ್ತೇನೆ. । **ಉಷಸಂ**—ಉಷೋದೇವಿಯನ್ನೂ । **ಸೂರ್ಯಂ**—ಸೂರ್ಯದೇವನನ್ನೂ । **ಗಾಂ**—ವಾಗ್ದೇವಿಯನ್ನೂ । **ಮಂಶ್ಚತೋಃ**—ಸ್ತುತಿಕರ್ತರಿಗೆ ಉತ್ತೇಜನಗೊಳಿಸುವ । **ವರುಣಸ್ಯ**—ವರುಣನ । **ಬ್ರಧ್ನಂ**—ಮಹತ್ಸ್ವರೂಪವುಳ್ಳದ್ದೂ । **ಬಭ್ರುಂ**—ಕೂಂಬಣ್ಣವುಳ್ಳದ್ದೂ ಆದ ಅಶ್ವವನ್ನು ಸ್ತುತಿಸುತ್ತೇನೆ । **ತೇ** - ಈ ದೇವತೆಗಳೆಲ್ಲರೂ । **ಅಸ್ಮತ್**—ನಮ್ಮಿಂದ । **ವಿಶ್ವಾ**—ಸಮಸ್ತವಾದ । **ದುರಿತಾ**—ಪಾಪಗಳನ್ನು । **ಯವಯಂತು**—ದೂರಮಾಡಲಿ (ನಾಶಪಡಿಸಲಿ)

ಭಾವಾರ್ಥ

ದಧಿಕ್ರಾಸಂಜ್ಞಕವಾದ ಅಶ್ವವಿಶೇಷವನ್ನು ಸ್ತುತಿಗಳಿಂದ ಎಚ್ಚರಗೊಳಿಸುವ ನಾನು ಅಗ್ನಿಯನ್ನು ಪ್ರಶಂಸಿಸುತ್ತೇನೆ. ಉಷೋದೇವಿಯನ್ನೂ, ಸೂರ್ಯನನ್ನೂ, ವಾಗ್ದೇವಿಯನ್ನೂ, ಸ್ತುತಿಕರ್ತರಿಗೆ ಉತ್ತೇಜನ ಕೊಡತಕ್ಕ ವರುಣನ ಮಹತ್ಸ್ವರೂಪವುಳ್ಳದ್ದೂ, ಕೆಂಬಣ್ಣವುಳ್ಳದ್ದೂ ಆದ ಅಶ್ವವನ್ನೂ ಸ್ತುತಿಸುತ್ತೇನೆ ಈ ದೇವತೆಗಳೆಲ್ಲರೂ ನಮ್ಮಿಂದ ಸಮಸ್ತವಾದ ಪಾಪಗಳನ್ನು ದೂರಮಾಡಲಿ. (ನಾಶಪಡಿಸಲಿ)

## English Translation

Propitiating Dadhikravan, I glorify Agni, Ushas, the sun, the earth, the great brown horse of Varuna, who is mindful of his adorers may they put far away from us all iniquities

ಸಂಹಿತಾಪಾಠಃ

ದಧಿಕ್ರಾವಾ ಪ್ರಥಮೋ ವಾಜ್ಯರ್ವಾಗ್ರೇ ರಥಾನಾಂ ಭವತಿ ಪ್ರಜಾನನ್ ।
ಸಂವಿದಾನ ಉಷಸಾ ಸೂರ್ಯೇಣಾದಿತ್ಯೇಭಿರ್ವಸುಭಿರಂಗಿರೋಭಿಃ ॥ ೪ ॥

ಪದಪಾಠಃ

ದಧಿऽಕ್ರಾವಾ । ಪ್ರಥಮಃ । ವಾಜೀ । ಅರ್ವಾ । ಅಗ್ರೇ । ರಥಾನಾಂ । ಭವತಿ । ಪ್ರऽಜಾನನ್ ।
ಸಂಽವಿದಾನಃ । ಉಷಸಾ । ಸೂರ್ಯೇಣ । ಆದಿತ್ಯೇಭಿಃ । ವಸುऽಭಿಃ । ಅಂಗಿರಃऽಭಿಃ ॥ ೪ ॥

ಸಾಯಣಭಾಷ್ಯಂ

ಪ್ರಥಮಃ ಸರ್ವೇಷಾಮಶ್ವಾನಾಂ ಮುಖ್ಯೋ ವಾಜೀ ಶೀಘ್ರಗಾಮ್ಯರ್ವಾ ಗಮನಶೀಲೋ ದಧಿಕ್ರಾವಾಶ್ವರೂಪೋ ದೇವಃ ಪ್ರಜಾನನ್ ರಥಸಂಯೋಜನೀಯಾಂಸ್ತಾಂಸ್ತಾನಶ್ವಾನಧಿಷ್ಠಾಯ ಜ್ಞಾತವ್ಯಾನಿ ಸಮ್ಯಗ್ಜಾನನ್ ರಥಾನಾಮಗ್ರೇ ಪ್ರಮುಖೋ ಭವತಿ । ಕೀದೃಶೋऽಶ್ವಃ । ಉಷಸೋಷೋದೇವತಯಾ ಸೂರ್ಯೇಣ ಸರ್ವಸ್ಯ ಪ್ರೇರಕೇಣ ದೇವೇನಾದಿತ್ಯೇಭಿರಾದಿತ್ಯೈಶ್ಚ ವಸುಭಿಶ್ಚಾಂಗಿರೋಭಿರ್ದೇವೈಃ ಸಹ ಸ್ತೋತವ್ಯೈರ್ಋಷಿಭಿಶ್ಚ ಸಂವಿದಾನಃ ಸಮ್ಯಗ್ಜಾನನ್ । ಐಕಮತ್ಯಂ ಪ್ರಾಪ್ತ ಇತ್ಯರ್ಥಃ ॥

ಪ್ರತಿಪದಾರ್ಥ

**ಉಷಸಾ**—ಉಷೋದೇವಿಯೊಡನೆಯೂ । **ಸೂರ್ಯೇಣ**—ಸೂರ್ಯನೊಡನೆಯೂ । **ಆದಿತ್ಯೇಭಿಃ**—ಆದಿತ್ಯರೊಡನೆಯೂ । **ವಸುಭಿಃ**--ವಸುಗಳೊಡನೆಯೂ । **ಅಂಗಿರೋಭಿಃ**—ಅಂಗಿರಸ್ಸುಗಳೊಡನೆಯೂ । **ಸಂವಿದಾನಃ**—ಒಂದುಗೂಡಿದವನೂ । **ಪ್ರಥಮಃ**—ಅಶ್ವಗಳಲ್ಲೆಲ್ಲಾ ಅತಿ ಮುಖ್ಯನೂ । **ವಾಜೀ**—ಶೀಘ್ರಗಾಮಿಯೂ **ಅರ್ವಾ**—ಗಮನಶೀಲನೂ ಆದ । **ದಧಿಕ್ರಾವಾ**—ದಧಿಕ್ರಾಸಂಜ್ಞಕನಾದ ಅಶ್ವಾಭಿಮಾನಿದೇವನು । **ಪ್ರಜಾನನ್**—ತಿಳಿಯಬೇಕಾದ ಎಲ್ಲವನ್ನು ತಿಳಿದವನಾಗಿ । **ರಥಾನಾಂ**—ರಥಗಳ । **ಅಗ್ರೇ**—ಅಗ್ರಭಾಗದಲ್ಲಿ । **ಭವತಿ**—ಪ್ರಕಾಶಿಸುತ್ತಾನೆ

ಭಾವಾರ್ಥ

ಉಷೋದೇವಿಯೊಡನೆಯೂ, ಸೂರ್ಯನೊಡನೆಯೂ, ಆದಿತ್ಯರೊಡನೆಯೂ, ವಸುಗಳೊಡನೆಯೂ, ಅಂಗಿರಸ್ಸುಗಳೊಡನೆಯೂ, ಒಂದುಗೂಡಿದವನೂ, ಅಶ್ವಗಳಲ್ಲೆಲ್ಲಾ ಅತಿ ಮುಖ್ಯನೂ, ಶೀಘ್ರಗಾಮಿಯೂ, ಗಮನಶೀಲನೂ ಆದ ದಧಿಕ್ರಾಸಂಜ್ಞಕನಾದ ಅಶ್ವಾಭಿಮಾನಿದೇವನು ತಿಳಿಯಬೇಕಾದ ಎಲ್ಲವನ್ನೂ ತಿಳಿದವನಾಗಿ ರಥಗಳ ಅಗ್ರಭಾಗದಲ್ಲಿ (ಮುಂದುಗಡೆ) ಪ್ರಕಾಶಿಸುತ್ತಾನೆ.

### English Translation

Dahikravan, the swift steed, the first (of horses), knowing (his office), is in the front of the chariots (of the gods), consentient with Ushas, with Surya, with the Adityas, with the Vasus, with the Angirasas.

###### ಸಂಹಿತಾಪಾಠಃ

ಆ ನೋ ದಧಿಕ್ರಾಃ ಪಥ್ಯಾಮನಕ್ತ್ವೃತಸ್ಯ ಪಂಥಾಮನ್ವೇತವಾ ಉ |
ಶೃಣೋತು ನೋ ದೈವ್ಯಂ ಶರ್ಧೋ ಅಗ್ನಿಃ ಶೃಣ್ವಂತು ವಿಶ್ವೇ ಮಹಿಷಾ
ಅಮೂರಾಃ ॥ ೫ ॥

###### ಪದಪಾಠಃ

ಆ । ನಃ । ದಧಿಽಕ್ರಾಃ । ಪಥ್ಯಾಂ । ಅನಕ್ತು । ಋತಸ್ಯ । ಪಂಥಾಂ । ಅನುಽಏತವೈ । ಊಂ ಇತಿ । ಶೃಣೋತು । ನಃ । ದೈವ್ಯಂ । ಶರ್ಧಃ । ಅಗ್ನಿಃ । ಶೃಣ್ವಂತು । ವಿಶ್ವೇ । ಮಹಿಷಾಃ । ಅಮೂರಾಃ ॥ ೫ ॥

###### ಸಾಯಣಭಾಷ್ಯಂ

ದಧಿಕ್ರಾ ಅಶ್ವರೂಪೋ ದೇವ ಋತಸ್ಯ ಯಜ್ಞಸ್ಯ ಪಂಥಾಂ ಪಂಥಾನಂ ಮಾರ್ಗಮನ್ವೇತವಾ ಅನುಗಂತುಂ ಪ್ರವೃತ್ತಾನಾಂ ನೋಽಸ್ಮಾಕಂ ಪಥ್ಯಾಂ ಪದವೀಮಾನಕ್ತು । ಉದಕೇನಾಸಿಂಚತು । ಉ ಇತಿ ಪೂರಣಃ । ದೈವ್ಯಂ ಶರ್ಧೋ ದೇವಸಂಬಂಧಿ ಬಲಮೀದೃಗ್ರೂಪೋಽಗ್ನಿರ್ನೋಽಸ್ಮದೀಯಂ ಹವಂ ಶೃಣೋತು । ಅಮೂರಾ ಅಮೂಢಾ ಮಹಿಷಾ ಮಹಾಂತೋ ವಿಶ್ವೇ ಸರ್ವೇ ದೇವಾ ಅಸ್ಮದೀಯಂ ಹವಂ ಶೃಣ್ವಂತು ॥

###### ಪ್ರತಿಪದಾರ್ಥ

**ದಧಿಕ್ರಾಃ**—ದಧಿಕ್ರಾದೇವನು । **ಋತಸ್ಯ**—ಯಜ್ಞದ । **ಪಂಥಾಂ**—ಮಾರ್ಗವನ್ನು । **ಅನ್ವೇತವೈ**—ಅನುಸರಿಸಲು ಪ್ರಯತ್ನಿಸಿರುವ । **ನಃ**—ನಮಗೆ । **ಪಥ್ಯಾಂ**—ಸಂಚಾರಯೋಗ್ಯವಾದ ಮಾರ್ಗವನ್ನು । **ಆ ಅನಕ್ತು**—ಉದಕದಿಂದ ಸೇಕಿಸಲಿ । **ದೈವ್ಯಂ**—ದೇವಸಂಬಂಧಿಯಾದ । **ಶರ್ಧಃ**—ಬಲರೂಪನಾದ । **ಅಗ್ನಿಃ**—ಅಗ್ನಿಯು । **ನಃ**—ನಮ್ಮ ಆಹ್ವಾನವನ್ನು । **ಶೃಣೋತು**—ಕೇಳಲಿ. । **ಅಮೂರಾಃ**—ಪ್ರಾಜ್ಞರೂ । **ಮಹಿಷಾಃ**—ಮಹಾತ್ಮರೂ ಆದ । **ವಿಶ್ವೇ**—ಸಕಲ ದೇವತೆಗಳೂ । **ಶೃಣ್ವಂತು**—ನಮ್ಮ ಆಹ್ವಾನವನ್ನು ಕೇಳಲಿ

###### ಭಾವಾರ್ಥ

ದಧಿಕ್ರಾದೇವನು ಯಜ್ಞದ ಮಾರ್ಗವನ್ನು ಅನುಸರಿಸಲು ಪ್ರಯತ್ನಿಸಿರುವ ನಮಗೆ ಸಂಚಾರಯೋಗ್ಯವಾದ ಮಾರ್ಗವನ್ನು ಉದಕದಿಂದ ಸೇಕಿಸಲಿ ದೇವತೆಗಳಿಗೆ ಬಲರೂಪನಾದ ಅಗ್ನಿಯು ನಮ್ಮ ಆಹ್ವಾನವನ್ನು ಕೇಳಲಿ. ಪ್ರಾಜ್ಞರೂ, ಮಹಾತ್ಮರೂ ಆದ ಸಕಲದೇವತೆಗಳೂ ನಮ್ಮ ಆಹ್ವಾನವನ್ನು ಕೇಳಲಿ.

English Translation

May Dadhikra sprinkle our path (with water), that we may follow the road of sacrifice . may Agni, the strength of the gods, hear our (invocation) : may the mighty, unperplexed, universal deities hear it.

## ನಲವತ್ತೈದನೆಯ ಸೂಕ್ತವು

ಸಾಯಣಭಾಷ್ಯಂ

**ಆ ದೇವೋ ಯಾತ್ವಿತಿ ಚತುರ್ಋಚಂ ದ್ವಾದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ಸವಿತೃದೇವತಾಕಂ ತ್ರೈಷ್ಟುಭಂ । ಆ ದೇವಶ್ಚತುಷ್ಕಂ ಸಾವಿತ್ರಮಿತ್ಯನುಕ್ರಾಂತಂ ॥ ವ್ಯೂಳ್ಹೇ ದಶರಾತ್ರೇ ಚತುರ್ಥೇಽಹನಿ ವೈಶ್ವದೇವಶಸ್ತ್ರ ಇದಂ ಸಾವಿತ್ರನಿವಿದ್ಧಾನಂ । ಸೂತ್ರ್ಯತೇ ಹಿ । ಚತುರ್ಥೇಽಹನ್ಯಾ ದೇವೋ ಯಾತು । ಆ. ೮-೮-॥ ... .. ಇತ್ಯೇಷಾ ವಪಾನುವಾಕ್ಯಾ । ಸೂತ್ರಿತಂ ಚ । ಆ ದೇವೋ ಯಾತು ಸವಿತಾ ಸುರತ್ನಃ ಸ ಘಾ ನೋ ದೇವಃ ಸವಿತಾ ಸಹಾವಾ । ಆ. ೩. ೭ । ಇತಿ ॥ ಅಶ್ವಮೇಧೇಽನುಸವನಂ ತಿಸ್ರಃ ಸಾವಿತ್ರ್ಯ ಇಷ್ಟಯಃ । ತತ್ರ ದ್ವಿತೀಯಸ್ಯಾಮಿಷ್ಟೌ ಯಾಜ್ಯೇಯಂ । ಸೂತ್ರಿತಂ ಚ । ಯ ಇಮಾ ವಿಶ್ವಾ ಜಾತಾನ್ಯಾ ದೇವೋ ಯಾತು । ಆ. ೧೦-೬ । ಇತಿ ॥**

**ಅನುವಾದವು— ಆ ದೇವೋ ಯಾತು** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹನ್ನೆರಡನೆಯ **ಸೂಕ್ತವು** ಇದರಲ್ಲಿ ನಾಲ್ಕು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಸವಿತೃವು ದೇವತೆಯು, ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ— **ಆ ದೇವಶ್ಚತುಷ್ಕಂ ಸಾವಿತ್ರಂ** ಎಂದು ಹೇಳಿರುವುದು ವ್ಯೂಳ್ಹ ವೆಂಬ ದಶರಾತ್ರ ಯಾಗದಲ್ಲಿ ನಾಲ್ಕನೆಯ ದಿವಸ ವೈಶ್ವದೇವಶಸ್ತ್ರಮಂತ್ರ ಪಠನಮಾಡುವಾಗ ಈ ಸೂಕ್ತವನ್ನು ಸವಿತೃ ದೇವತಾಕವಾದ ನಿವಿದ್ಧಾನೀಯಸೂಕ್ತವನ್ನಾಗಿ ಸೇರಿಸಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ **ಚತುರ್ಥೇಽಹನ್ಯಾ ದೇವೋ ಯಾತು.......** ಎಂಬ ಸೂತ್ರದಿಂದ (ಆ. ೮-೮) ವಿವೃತವಾಗಿರುವುದು ... ... ... ಯಲ್ಲಿ **ಆ ದೇವೋ ಯಾತು** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ವಪಾಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- **ಆ ದೇವೋ ಯಾತು ಸವಿತಾ ಸುರತ್ನಃ ಸ ಘಾ ನೋ ದೇವಃ ಸವಿತಾ ಸಹಾವಾ** ಎಂಬ ಸೂತ್ರದಿಂದ (ಆ ೩-೭) ವಿವೃತವಾಗಿರುವುದು ಅಶ್ವಮೇಧಯಾಗದಲ್ಲಿ ಅನುಸವನಕರ್ಮದಲ್ಲಿ ಸವಿತೃಸಂಬಂಧವಾದ ಮೂರು ಇಷ್ಟಿಗಳನ್ನು ಮಾಡಬೇಕು. ಆ ಸಂದರ್ಭದಲ್ಲಿ ಎರಡನೆಯ ಇಷ್ಟಿಯಲ್ಲಿ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಯ ಇಮಾ ವಿಶ್ವಾ ಜಾತಾನ್ಯಾ ದೇವೋ ಯಾತು** ಎಂಬ ಸೂತ್ರದಿಂದ (ಆ ೧೦-೬) ವಿವೃತವಾಗಿರುವುದು

### ಸೂಕ್ತ—೪೫

ಮಂಡಲ—೭ ॥ ಅನುವಾಕ—೩ ॥ ಸೂಕ್ತ —೪೫ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
ಋಷಿಃ—ವಸಿಷ್ಠಃ ॥
ದೇವತಾ—ಸವಿತಾ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಆ ದೇವೋ ಯಾತು ಸವಿತಾ ಸುರತ್ನೋಽನ್ತರಿಕ್ಷಪ್ರಾ ವಹಮಾನೋ ಅಶ್ವೈಃ ।
ಹಸ್ತೇ ದಧಾನೋ ನರ್ಯಾ ಪುರೂಣಿ ನಿವೇಶಯಞ್ಚ ಪ್ರಸುವಞ್ಚ ಭೂಮ ॥

ಪದಪಾಠಃ

ಆ । ದೇವಃ । ಯಾತು । ಸವಿತಾ । ಸುಽರತ್ನಃ । ಅನ್ತರಿಕ್ಷಽಪ್ರಾಃ । ವಹಮಾನಃ । ಅಶ್ವೈಃ ।

ಹಸ್ತೇ । ದಧಾನಃ । ನರ್ಯಾ । ಪುರೂಣಿ । ನಿಽವೇಶಯನ್ । ಚ । ಪ್ರಽಸುವನ್ । ಚ । ಭೂಮ ॥ ೧ ॥

ಸಾಯಣಭಾಷ್ಯಂ

ಸುರತ್ನಃ ಶೋಭನರತ್ನೋಪೇತೋಽನ್ತರಿಕ್ಷಪ್ರಾಃ ಸ್ವಕೀಯೇನ ತೇಜಸಾಂತರಿಕ್ಷಸ್ಯ ಪೂರಯಿತಾಶ್ವೈಃ ಸ್ವಕೀಯೈರ್ವಾಹೈರ್ವಹಮಾನ ಉಹ್ಯಮಾನಃ ಸವಿತಾ ಸರ್ವಸ್ಯ ಪ್ರೇರಕೋ ದೇವ ಆ ಯಾತು । ಆಗಚ್ಛತು । ಕೀದೃಶ । ನರ್ಯಾ ನರ್ಯಾಣಿ ಮನುಷ್ಯಹಿತಾನಿ ಪುರೂಣಿ ಬಹೂನಿ ಧನಾನಿ ಹಸ್ತೇ ಪಾಣೌ ದಧಾನೋ ದಾತುಂ ಧಾರಯನ್ ಭೂಮ ಭೂತಾನಿ ನಿವೇಶಯಂಶ್ಚ ರಾತ್ರಿಷು ಸ್ವೇ ಸ್ವೇ ಸ್ಥಾನೇ ಸ್ಥಾಪಯಂಶ್ಚ ಪ್ರಸುವಂಶ್ಚಾಹಃಸು ಪ್ರೇರಯಂಶ್ಚ । ಏವಂಭೂತಃ ಸವಿತಾ ದೇವ ಆ ಯಾತು ॥

ಪ್ರತಿಪದಾರ್ಥ

**ನರ್ಯಾ**—ಮಾನವರಿಗೆ ಹಿತಕಾರಿಗಳಾದ । **ಪುರೂಣಿ**—ಅಧಿಕವಾದ ಧನಗಳನ್ನು । **ಹಸ್ತೇ**—ಕೈಯಿನಲ್ಲಿ । **ದಧಾನಃ**—ಧರಿಸಿದವನಾಗಿಯೂ, । **ಭೂಮ**—ಸಕಲ ಭೂತಗಳನ್ನೂ । **ನಿವೇಶಯಂಶ್ಚ**—ರಾತ್ರಿಕಾಲಗಳಲ್ಲಿ ಸ್ವಸ್ಥಾನಗಳಲ್ಲಿ ಸ್ಥಾಪಿಸುತ್ತಲೂ । **ಪ್ರಸುವಂಶ್ಚ**—ಹಗಲುಗಳಲ್ಲಿ ಕಾರ್ಯತತ್ಪರರನ್ನಾಗಿ ಮಾಡುತ್ತಲೂ ಇರುವವನೂ । **ಸುರತ್ನಃ**—ಉತ್ತಮವಾದ ಧನೋಪೇತನೂ । **ಅಂತರಿಕ್ಷಪ್ರಾಃ**—ಸ್ವಪ್ರಭೆಯಿಂದ ಅಂತರಿಕ್ಷಗಳನ್ನೆಲ್ಲಾ ವ್ಯಾಪಿಸುವವನೂ । **ಅಶ್ವೈಃ**—ಅಶ್ವಗಳಿಂದ । **ವಹಮಾನಃ**—ವಹಿಸಲ್ಪಡುವವನೂ । **ಸವಿತಾ**—ಸರ್ವಪ್ರೇರಕನೂ ಆದ । **ದೇವಃ**—ಸವಿತೃದೇವನು । **ಆ ಯಾತು**—ದಯಮಾಡಲಿ.

ಭಾವಾರ್ಥ

ಮಾನವರಿಗೆ ಹಿತಕಾರಿಗಳಾದ ಅಧಿಕವಾದ ಧನಗಳನ್ನು ಕೈಯಲ್ಲಿ ಹಿಡಿದು, ಸಕಲ ಭೂತಗಳನ್ನೂ ರಾತ್ರಿಕಾಲದಲ್ಲಿ ಸ್ವಸ್ಥಾನಗಳಲ್ಲಿ ಸ್ಥಾಪಿಸುತ್ತಲೂ, ಹಗಲುಗಳಲ್ಲಿ ಕಾರ್ಯತತ್ಪರರನ್ನಾಗಿ ಮಾಡುತ್ತಲೂ ಇರುವವನೂ, ಉತ್ತಮವಾದ ಧನೋಪೇತನೂ, ಸ್ವಪ್ರಭೆಯಿಂದ ಅಂತರಿಕ್ಷಗಳನ್ನೆಲ್ಲಾ ವ್ಯಾಪಿಸುವವನೂ, ಅಶ್ವಗಳಿಂದ ವಹಿಸಲ್ಪಡುವವನೂ, ಸರ್ವಪ್ರೇರಕನೂ ಆದ ಸವಿತೃದೇವನು ದಯಮಾಡಲಿ (ಉದಯಿಸಲಿ)

English Translation

Borne by his steeds, may the divine Savitri, who ie possessed of precious treasure, and filling the firmament (with radiance), come hither, holding in his hands many things good for man, and (both) tranquillizing and animating living beings.

ಸಂಹಿತಾಪಾಠಃ

ಉದಸ್ಯ ಬಾಹೂ ಶಿಥಿರಾ ಬೃಹಂತಾ ಹಿರಣ್ಯಯಾ ದಿವೋ ಅಂತಾ ಅನಷ್ಟಾಂ

ನೂನಂ ಸೋ ಅಸ್ಯ ಮಹಿಮಾ ಪನಿಷ್ಟ ಸೂರಶ್ಚಿದಸ್ಮಾ ಅನು ದಾದಪಸ್ಯಾಂ ||

ಪದಪಾಠಃ

ಉತ್ | ಅಸ್ಯ | ಬಾಹೂ ಇತಿ | ಶಿಥಿರಾ | ಬೃಹಂತಾ | ಹಿರಣ್ಯಯಾ | ದಿವಃ | ಅಂತಾನ್ | ಅನಷ್ಟಾಂ |

ನೂನಂ | ಸಃ | ಅಸ್ಯ | ಮಹಿಮಾ | ಪನಿಷ್ಟ | ಸೂರಃ | ಚಿತ್ | ಅಸ್ಮೈ | ಅನು | ದಾತ್ | ಅಪಸ್ಯಾಂ ||

ಸಾಯಣಭಾಷ್ಯಂ

ಶಿಥಿರಾ ಶಿಥಿಲೌ ದಾನಾರ್ಥಂ ಪ್ರಸಾರಿತೌ ಬೃಹಂತಾ ಬೃಹಂತೌ ಮಹಾಂತೌ ಹಿರಣ್ಯಯಾ ಹಿರಣ್ಯಯೌ ಸುವರ್ಣಮಯಾವಸ್ಯ ಸವಿತುಃ ಸಂಬಂಧಿನೌ ಬಾಹೂ ಹಸ್ತೌ ದಿವೋಽಂತರಿಕ್ಷಸ್ಯಾಂತಾನ್ ಪರ್ಯಂತಾನುದನಷ್ಟಾಂ | ಊರ್ಧ್ವಂ ಸಂತೌ ವ್ಯಾಪ್ನುವತಾಂ | ನೂನಮುದ್ಯಾಸ್ಯೇದೃಗ್ಭೂತಸ್ಯ ಸವಿತುಃ ಸ ತಾದೃಶೋ ಮಹಿಮಾ ಮಹತ್ತ್ವಂ ಪನಿಷ್ಟ | ಅಸ್ಮಾಭಿಃ ಸ್ತೂಯತೇ | ಸೂರಶ್ಚಿತ್ಸೂರ್ಯೋಽಪ್ಯಸ್ಮೈ ಸವಿತ್ರೇಽಪಸ್ಯಾಂ ಕರ್ಮೇಚ್ಛಾಮನು ದಾತ್ | ಅನುದದಾತು ||

ಪ್ರತಿಪದಾರ್ಥ

**ಅಸ್ಯ**—ಈ ಸವಿತೃವಿನ | **ಶಿಥಿರಾ**—ದಾನಾರ್ಥವಾಗಿ ಹರಡಿದವೂ | **ಬೃಹಂತಾ**—ವಿಸ್ತೃತವಾದವೂ | **ಹಿರಣ್ಯಯಾ**—ಸುವರ್ಣಮಯವಾದವೂ ಆದ | **ಬಾಹೂ**—ಹಸ್ತಗಳು | **ದಿವಃ**—ಅಂತರಿಕ್ಷದ | **ಅಂತಾನ್**—ಕೊನೆಯ ಭಾಗಗಳನ್ನು | **ಉದನಷ್ಟಾಂ**—ಆವರಿಸಿ ಹರಡಿವೆ. | **ನೂನಂ**—ಈಗ | **ಅಸ್ಯ**—ಇಂತಹ ಸವಿತೃವಿನ | **ಸಃ**—ಪ್ರಸಿದ್ಧವಾದ | **ಮಹಿಮಾ**—ಮಹತ್ವವು | **ಪನಿಷ್ಟ**—ಪ್ರಶಂಸಿತವಾಗುತ್ತದೆ | **ಸೂರಶ್ಚಿತ್**—ಸೂರ್ಯನೂ ಕೂಡ | **ಅಸ್ಮೈ**—ಈ ಸವಿತೃವಿಗೆ | **ಅಪಸ್ಯಾಂ**—ಕರ್ಮೇಚ್ಛೆಯನ್ನು | **ಅನು ದಾತ್**—ಅನುಗ್ರಹಿಸಲಿ.

ಭಾವಾರ್ಥ

ದಾನಾರ್ಥವಾಗಿ ಹರಡಿದವೂ, ವಿಸ್ತೃತವಾದವೂ, ಸುವರ್ಣಮಯವಾದವೂ ಆದ ಈ ಸವಿತೃವಿನ ಹಸ್ತಗಳು ಅಂತರಿಕ್ಷದ ಕೊನೆಯ ಭಾಗಗಳನ್ನು ಆವರಿಸಿ ಹರಡಿವೆ. ಈಗ ಇಂತಹ ಸವಿತೃವಿನ ಪ್ರಸಿದ್ಧವಾದ ಮಹತ್ವವು ಪ್ರಶಂಸಿತವಾಗುತ್ತದೆ. ಸೂರ್ಯನೂ ಸಹ ಈ ಸವಿತೃವಿಗೆ ಕರ್ಮೇಚ್ಛೆಯನ್ನು ಅನುಗ್ರಹಿಸಲಿ.

English Translation

May the outspread, vast, and golden arms of Savitri extend to the ends of the sky : verily his greatness is glorified (by us) may the sun impart energy unto him

ಸಂಹಿತಾಪಾಠಃ

ಸ ಘಾ ನೋ ದೇವಃ ಸವಿತಾ ಸಹಾವಾ ಸಾವಿಷದ್ವಸುಪತಿರ್ವಸೂನಿ |

ವಿಶ್ರಯಮಾಣೋ ಅಮತಿಮುರೂಚೀಂ ಮರ್ತಭೋಜನಮಧ ರಾಸತೇ ನಃ॥

ಪದಪಾಠಃ

ಸಃ । ಘ । ನಃ । ದೇವಃ । ಸವಿತಾ । ಸಹಽವಾ । ಆ । ಸಾವಿಷತ್ । ವಸುಽಪತಿಃ । ವಸೂನಿ ।

ವಿಽಶ್ರಯಮಾಣಃ । ಅಮತಿಂ । ಉರೂಚೀಂ । ಮರ್ತಽಭೋಜನಂ । ಅಧ । ರಾಸತೇ । ನಃ ॥ ೩ ॥

ಸಾಯಣಭಾಷ್ಯಂ

ಸಾವಿತ್ರೇ ಪಶೌ ಪುರೋಡಾಶಸ್ಯ ಹವಿಷೋಃ ಸ ಘಾ ನ ಇತಿ ದ್ವೇ ಅನುವಾಕ್ಯೇ । ಸೂತ್ರೇ ಪೂರ್ವಮುದಾಹೃತಂ ॥ ಆಶ್ವಮೇಧಿಕೇಷು ಸಾವಿತ್ರೇಷ್ಟಿಷು ತೃತೀಯಸ್ಯಾಮಿಷ್ಟಾವಿಮೇ ಏವ ಯಾಜ್ಯಾನುವಾಕ್ಯೇ । ಸೂತ್ರಿತಂ ಚ । ಸ ಘಾ ನೋ ದೇವಃ ಸವಿತಾ ಸಹಾವೇತಿ ದ್ವೇ । ಆ ೧೦ ೬ । ಇತಿ ॥

ಸಹಾವಾ । ತೇಜೋಽಂತರಾಣ್ಯಭಿಭಾವುಕಂ ತೇಜೋ ಯಸ್ಯ ಸಃ । ವಸುಪತಿರ್ಧನಾನಾಂ ಪಾಲಕಃ ಸ ಸವಿತಾ ದೇವೋ ನೋಽಸ್ಮಭ್ಯಂ ವಸೂನಿ ಧನಾನ್ಯಾ ಸಾವಿಷತ್ । ಆ ಸಮಂತಾತ್ಪ್ರೇರಯತಿ । ಘೇತಿ ಪೂರಣಃ । ಸ ಸವಿತಾ ದೇವ ಉರೂಚೀಂ ವಿಸ್ತೀರ್ಣಗಮನಾಮಮತಿಂ ರೂಪಂ । ದೀಪ್ತಿಮಿತ್ಯರ್ಥಃ । ವಿಶ್ರಯಮಾಣೋ ನಿಷೇವಮಾಣಃ ಸನ್ನಧಾಧುನಾ ನೋಽಸ್ಮಭ್ಯಂ ಮರ್ತಭೋಜನಂ ಮನುಷ್ಯಾಣಾಂ ಭೋಗಯೋಗ್ಯಂ ಧನಂ ರಾಸತೇ । ದದಾತು ॥

ಪ್ರತಿಪದಾರ್ಥ

**ಸಹಾವಾ**—ಸಕಲವನ್ನೂ ವ್ಯಾಪಿಸುವ ತೇಜಸ್ಸುಳ್ಳವನೂ, । **ವಸುಪತಿಃ**—ಧನಪಾಲಕನೂ । **ಸಃ**—ಪ್ರಸಿದ್ಧನೂ ಆದ । **ಸವಿತಾ ದೇವಃ**—ಸವಿತೃದೇವನು । **ನಃ**—ನಮಗೆ । **ವಸೂನಿ**—ಧನಗಳನ್ನು । **ಆ ಸಾವಿಷತ್** ಒದಗಿಸಿಕೊಡಲಿ । **ಉರೂಚೀಂ**—ವಿಸ್ತೃತವಾಗಿ ಹರಡಿದ । **ಅಮತಿಂ**—ರೂಪವನ್ನು । **ವಿಶ್ರಯಮಾಣಃ**—ಸೇವಿಸುತ್ತಾ । **ಅಧ**—ಈಗ । **ನಃ**—ನಮಗೆ । **ಮರ್ತಭೋಜನಂ**—ಮಾನವರ ಭೋಗಕ್ಕೆ ಯೋಗ್ಯವಾದ ಧನವನ್ನು । **ರಾಸತೇ**—ಕೊಡಲಿ

ಭಾವಾರ್ಥ

ಸಕಲವನ್ನೂ ವ್ಯಾಪಿಸುವ ತೇಜಸ್ಸುಳ್ಳವನೂ, ಧನಪಾಲಕನೂ ಪ್ರಸಿದ್ಧನೂ ಆದ ಸವಿತೃದೇವನು ನಮಗೆ ಧನಗಳನ್ನು ಒದಗಿಸಿಕೊಡಲಿ. ವಿಸ್ತೃತವಾಗಿ ಹರಡಿದ ರೂಪವನ್ನು ಸೇವಿಸುತ್ತ ಈಗ ನಮಗೆ ಮಾನವರ ಭೋಗಕ್ಕೆ ಯೋಗ್ಯವಾದ ಧನವನ್ನು ಕೊಡಲಿ.

English Translation

May the divine Savitri, who is endowed with energy, the lord of treasure, bestow treasures upon us concentrating infinite lustre may he bestow upon us wealth, the source of the enjoyment of mortals

ವಿಶೇಷವಿಷಯಗಳು

ಸವಿತೃಸಂಬಂಧವಾದ ಪಶುಯಾಗದಲ್ಲಿ ಪುರೋಡಾಶ ಮತ್ತು ಹವಿಸ್ಸಿನ ಹೋಮದಲ್ಲಿ **ಸ ಘಾ ನಃ** ಎಂಬ ಈ ಋಕ್ಕನ್ನೂ ಇದರ ಮುಂದಿನ ಋಕ್ಕನ್ನೂ (೪ನೇ ಋಕ್ಕನ್ನೂ) ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಹೇಳಿರುವ

ಸೂತ್ರವನ್ನು ಹಿಂದೆಯೇ ಉದಾಹರಿಸಲಾಗಿದೆ ಅಶ್ವಮೇಧಯಾಗದಲ್ಲಿ ಮಾಡುವ ಸಾವಿತ್ರೇಷ್ಟಿಗಳಲ್ಲಿ ಮೂರನೆಯ ಇಷ್ಟಿಯಲ್ಲಿ ಈ ಎರಡು ಋಕ್ಕುಗಳನ್ನು ಯಾಜ್ಯಾ ಮತ್ತು ಅನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಸ ಘಾ ನೋ ದೇವಃ ಸವಿತಾ ಸಹಾವೇತಿ ದ್ವೇ** ಎಂಬ ಸೂತ್ರದಿಂದ (ಆ ೧೦-೬) ವಿವೃತವಾಗಿರುವುದು.

ಸಂಹಿತಾಪಾಠಃ

ಇಮಾ ಗಿರಃ ಸವಿತಾರಂ ಸುಜಿಹ್ವಂ ಪೂರ್ಣಗಭಸ್ತಿಮೀಳತೇ ಸುಪಾಣಿಂ ।
ಚಿತ್ರಂ ವಯೋ ಬೃಹದಸ್ಮೇ ದಧಾತು ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೪ ॥

ಪದಪಾಠಃ

ಇಮಾಃ । ಗಿರಃ । ಸವಿತಾರಂ । ಸುऽಜಿಹ್ವಂ । ಪೂರ್ಣऽಗಭಸ್ತಿಂ । ಈಳತೇ । ಸುऽಪಾಣಿಂ ।
ಚಿತ್ರಂ । ವಯಃ । ಬೃಹತ್ । ಅಸ್ಮೇ ಇತಿ । ದಧಾತು । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥

ಸಾಯಣಭಾಷ್ಯಂ

**ಇಮಾ ಈದೃಗ್ಭೂತಾ ಗಿರಃ । ಗೃಣಂತಿ ಸ್ತುವಂತೀತಿ ಗಿರಃ ಸ್ತೋತ್ರ್ಯಃ ಪ್ರಜಾಃ । ಯದ್ವಾ । ಇಮಾಃ ಸ್ತುತಿರೂಪಾ ವಾಚಃ । ಸುಜಿಹ್ವಂ ಶೋಭನಜಿಹ್ವಂ । ಶೋಭನವಾಚಮಿತ್ಯರ್ಥಃ ಪೂರ್ಣಗಭಸ್ತಿಂ ಸಂಪೂರ್ಣಧನಹಸ್ತಂ ಸವಿತಾರಂ ದೇವಮೀಳತೇ । ಸ್ತುವಂತಿ । ಸ ಚ ಸವಿತಾ ಚಿತ್ರಂ ಚಾಯನೀಯಂ ಬೃಹನ್ಮಹದ್ವಯೋऽನ್ನಮಸ್ಮೇ ಅಸ್ಮಾಸು ದಧಾತು । ಯದ್ವಾ । ಅಸ್ಮೇ ಅಸ್ಮಭ್ಯಂ ಪ್ರಯಚ್ಛತು । ಹೇ ಸವಿತೃಪ್ರಮುಖಾ ದೇವಾಃ ಯೂಯಂ ನೋऽಸ್ಮಾನ್ ಸ್ವಸ್ತಿಭಿಃ ಕಲ್ಯಾಣೈಃ ಸದಾ ಸರ್ವದಾ ಪಾತ । ಪಾಲಯತ ॥**

ಪ್ರತಿಪದಾರ್ಥ

**ಇಮಾಃ ಗಿರಃ**—ನಮ್ಮ ಈ ಸ್ತುತಿಗಳು । **ಪೂರ್ಣಗಭಸ್ತಿಂ**—ಸಂಪೂರ್ಣವಾದ ಧನದಿಂದ ತುಂಬಿದ ಹಸ್ತವುಳ್ಳವನೂ । **ಸುಜಿಹ್ವಂ**—ಉತ್ತಮವಾದ ವಾಕ್ಕುಳ್ಳವನೂ, । **ಸುಪಾಣಿಂ**—ಉತ್ತಮವಾದ ಪಾಣಿಯುಳ್ಳವನೂ । **ಸವಿತಾರಂ**—ಸರ್ವಪ್ರೇರಕನೂ ಆದ ಸವಿತೃವನ್ನು । **ಈಳತೇ**—ಸ್ತುತಿಸುತ್ತವೆ. । **ಚಿತ್ರಂ**—ಆಕರ್ಷಕವಾದುದೂ, । **ಬೃಹತ್**—ಮಹತ್ತಾದುದೂ ಆದ । **ವಯಃ**—ಅನ್ನವನ್ನು । **ಅಸ್ಮೇ**—ನಮಗೆ । (ಈ ಸವಿತೃವು) **ದಧಾತು**—ಒದಗಿಸಿಕೊಡಲಿ । (ಎಲೈ ದೇವತೆಗಳೇ) **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

ಭಾವಾರ್ಥ

ನಮ್ಮ ಈ ಸ್ತುತಿಗಳು ಸಂಪೂರ್ಣವಾದ ಧನದಿಂದ ತುಂಬಿದ ಹಸ್ತವುಳ್ಳವನೂ, ಉತ್ತಮವಾದ ವಾಕ್ಕುಳ್ಳವನೂ, ಸರ್ವಪ್ರೇರಕನೂ ಆದ ಸವಿತೃವನ್ನು ಸ್ತುತಿಸುತ್ತವೆ ಆಕರ್ಷಕವಾದುದೂ, ಮಹತ್ತಾದುದೂ ಆದ ಅನ್ನವನ್ನು ನಮಗೆ ಈ ಸವಿತೃವು ಒದಗಿಸಿಕೊಡಲಿ. ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

These praises glorify the eloquent-tongued, dextrous handed, whose **hands** are full (of wealth) may he bestow upon us manifold and abundant **food** and do you, (gods), ever cherish us with blessings

---

## ನಲವತ್ತಾರನೆಯ ಸೂಕ್ತವು

### ಪೀಠಿಕೆ

ಈ ಸೂಕ್ತವು ರುದ್ರದೇವತಾಕವಾದುದು. ಋಗ್ವೇದದಲ್ಲಿ ರುದ್ರನ ಸ್ಥಾನವು ಅಷ್ಟೇನೂ ಪ್ರಾಮುಖ್ಯತೆಯುದಲ್ಲ ಯಜುರ್ವೇದದಲ್ಲಿ ಮಾತ್ರ ರುದ್ರನಿಗೆ ಪ್ರಾಮುಖ್ಯವಾದ ಸ್ಥಾನವಿದೆ ಋಗ್ವೇದದಲ್ಲಿ ಮೂರು ಸೂಕ್ತಗಳು, ಒಂದು ಸೂಕ್ತದ ಭಾಗ, ಒಂದು ಸೂಕ್ತದಲ್ಲಿ ಸೋಮದೇವತೆಯೊಡನೆ, ಇಷ್ಟೇ ಈ ದೇವತೆಯನ್ನು ಸ್ತುತಿಸುವುವು. ರುದ್ರನ ಹೆಸರು ಎಪ್ಪತ್ತೈದು ಸಲ ಮಾತ್ರ ಪಠಿತವಾಗಿದೆ

ಅವನ ಅಂಗಾಂಗಗಳ ವರ್ಣನೆಯು ಈರೀತಿ ಇದೆ ಅವನಿಗೆ ಒಂದು ಕೈ (೨-೩೩-೭) ಬಾಹುಗಳು (೨-೩೩-೩, ವಾ ಸಂ ೧೬-೧) ಮತ್ತು ದೃಢವಾದ ಅಂಗಗಳು (೨-೩೩ ೧೧) ಇವೆ ಅವನ ತುಟಿಗಳು ಸುಂದರವಾಗಿವೆ ಅವನ ಶರೀರವು ಕಂದುಬಣ್ಣದ್ದು (೨-೩೩-೫) ಅವನ ರೂಪವು ಕಣ್ಣುಕೋರೈಸುವಷ್ಟು ಪ್ರಕಾಶವುಳ್ಳದ್ದು (೧-೧೧೪-೫) ಮತ್ತು ಅವನು ಅನೇಕ ರೂಪವುಳ್ಳವನು (೨-೩೩ ೯) ಜ್ವಲಿಸುವ ಸೂರ್ಯನಂತೆಯೂ ಸುವರ್ಣದಂತೆಯೂ ಪ್ರಕಾಶಿಸುತ್ತಾನೆ (೧-೪೩-೫) ಸುವರ್ಣಾಭರಣಗಳನ್ನೂ (೨-೩೩ ೯) ಮತ್ತು ನಾನಾವರ್ಣದ [illegible] ಕಂಠಹಾರವನ್ನೂ ಧರಿಸಿದಾನೆ (೨-೩೩-೧೦) ರಥದ ಆಸನದಲ್ಲಿ ಕುಳಿತಿದಾನೆ (೨ ೩೩ ೪) ವಾಜಸನೇಯ ಮೊದಲಾದ ಇತರ ಸಂಹಿತೆಗಳಲ್ಲಿ ಇನ್ನೂ ಅನೇಕ ಲಕ್ಷಣಗಳು ಉಕ್ತವಾಗಿವೆ ಅವನು ಸಹಸ್ರಾಕ್ಷ (ಅ ವೇ ೧೧-೨ ೨ ಮತ್ತು ೭; ವಾ. ಸಂ ೧೬-೭) ಅವನಿಗೆ ಉದರ, ಬಾಯಿ, ನಾಲಿಗೆ ಮತ್ತು ಹಲ್ಲುಗಳು ಇವೆ (ಅ ವೇ ೧೧-೨-೬) ಅವನ ಹೊಟ್ಟೆಯು ಕಪ್ಪು ಮತ್ತು ಅವನ ಬೆನ್ನು ಕೆಂಪು (ಅ ವೇ ೧೫-೧-೭, ೮). ಅವನ ಕಂಠವು ನೀಲಿ (ವಾ ಸಂ. ೧೬-೭) ಮತ್ತು ಕೇಶವೂ ನೀಲಿ (ಅ ವೇ ೨ ೨೭-೬) ಅವನದು ತಾಮ್ರವರ್ಣ, ಕೆಂಪುಬಣ್ಣ (ವಾ. ಸಂ. ೧೬-೭) ಚರ್ಮವನ್ನು ಧರಿಸಿದಾನೆ (ವಾ ಸಂ ೩ ೬೧, ೧೬-೫೧) ಮತ್ತು ಪರ್ವತದಲ್ಲಿ ವಾಸಿಸುತ್ತಾನೆ. (ವಾ ಸಂ ೧೬-೨, ೩, ೪)

ಅವನ ಬಳಿ ಆಕ್ರಮಣಸಾಧನವಾದ ಅನೇಕ ಆಯುಧಗಳಿವೆ ವಜ್ರಾಯುಧವನ್ನು ಹಿಡಿದಿದಾನೆ (೨-೩೩-೩) ಅವನ ಬಾಣವು ಆಕಾಶದಿಂದ ವಿಸೃಷ್ಟವಾಗಿ ಭೂಮಿಯನ್ನು ಹಾದು ಹೋಗುತ್ತದೆ (೭ ೪೬-೩) ಅವನು ಸಾಧಾರಣವಾಗಿ ಧನುರ್ಬಾಣಗಳನ್ನು ಧರಿಸಿರುತ್ತಾನೆ (೨-೩೩-೧೦, ೧೧, ೫-೪೨ ೧೧, ೧೦-೧೨೫-೬) ಆ ಬಾಣಗಳು ಬಲಿಷ್ಠವಾದವು ಮತ್ತು ವೇಗವುಳ್ಳವು (೭-೪೬-೧) ಅವನು ಕೃಶನು ಮತ್ತು ಇತರ ಧನುರ್ಧಾರಿಗಳೊಡನೆ ಸ್ತುತನಾಗಿದಾನೆ (೧೦-೬೪-೮) ಅಥರ್ವವೇದದಲ್ಲಿಯೂ ಅವನಿಗೆ ಧನುರ್ಧಾರಿಯೆಂತಲೇ ಸಂಜ್ಞೆ (ಅ ವೇ ೧-೨೮ ೧; ೬-೯೩-೧; ೧೫-೫-೧ ರಿಂದ ೭) ಅಥರ್ವವೇದ ಮತ್ತು ಇತರ ವೇದಭಾಗಗಳಲ್ಲಿ ಅವನ ಧನುಸ್ಸು ಬಾಣ, ಆಯುಧ, ವಜ್ರಾಯುಧ, ಗದೆ ಇವುಗಳು ಪದೇಪದೇ ಪ್ರಸಕ್ತವಾಗಿವೆ. (ಅ. ವೇ ೧-೨೮-೫, ಶ ಬ್ರಾ ೯-೧-೧-೬ ಇತ್ಯಾದಿ).

ರುದ್ರನ ವಿಷಯದಲ್ಲಿ ಪದೇಪದೇ ಪ್ರಸಕ್ತವಾಗುವ ಅಂಶವೆಂದರೆ, ಅವನಿಗೂ ಮರುತ್ತುಗಳಿಗೂ ಇರುವ ಸಂಬಂಧ. ರುದ್ರನು ಮರುತ್ತುಗಳಿಗೆ ತಂದೆಯು (೧-೧೧೪-೬, ೯, ೨-೩೩-೧) ಅಥವಾ ಮರುತ್ತುಗಳು ರುದ್ರನ ಪುತ್ರರೆಂದು ಹೇಳಲ್ಪಟ್ಟಿದಾರೆ ಮತ್ತು ಅವರಿಗೆ ರುದ್ರರು, ರುದ್ರಿಯರು ಎಂದೂ ಹೆಸರು ಪೃಶ್ನಿಯೆಂಬ ಗೋವಿನ ಪ್ರಕಾಶಮಾನವಾದ ಕೆಚ್ಚಲಿನಿಂದ ರುದ್ರನು ಮರುತ್ತುಗಳನ್ನು ಸೃಜಿಸಿದನು (೨-೩೪-೨) ಆದರೆ ಇಂದ್ರ ಮತ್ತು ಮರುತ್ತುಗಳು ಸ್ನೇಹಭಾವದಿಂದ ಯುದ್ಧಾದಿಗಳಲ್ಲಿ ಭಾಗಿಯಾಗುವಂತೆ ರುದ್ರ ಮತ್ತು ಮರುತ್ತುಗಳು ಎಲ್ಲಿಯೂ ಕಾಣಿಲ್ಲ ಏಕೆಂದರೆ, ರುದ್ರನು ರಾಕ್ಷಸರೊಡನೆ ಯುದ್ಧದಲ್ಲಿ ಯಾವಾಗಲೂ ತೊಡಗಿಲ್ಲ ಪುರಾಣಾದಿಗಳಲ್ಲಿ ಅನೇಕವೇಳೆ ರುದ್ರನಿಗೆ ಪ್ರಯುಕ್ತವಾದ ತ್ರ್ಯಂಬಕನೆಂಬ ಹೆಸರು ವೇದಗಳಲ್ಲಿಯೂ ಕಂಡುಬರುತ್ತದ (ವಾ. ಸಂ ೩ ೫೮, ಶ ಬ್ರಾ. ೨-೬-೨-೯) ಋಗ್ವೇದದಲ್ಲಿಯೂ ಒಂದುಕಡೆಮಾತ್ರ (೭ ೫೯ ೧೨) ಅವನಿಗೆ ಈ ಹೆಸರಿದ ಈ ಪದಕ್ಕೆ ಮೂರುಮಂದಿ ಜನನಿಯರನ್ನು ಹೊಂದಿರುವ ಎಂದರ್ಥ ಇಲ್ಲಿ ಮೂರುಜನ ಮಾತೃಗಳೆಂದರೆ ಮೂರು ಲೋಕಗಳು ಅಥವಾ ವಿಶ್ವದ ಮೂರು ಭಾಗಗಳಿರಬಹುದು ಪುರಾಣಾದಿಗಳಲ್ಲಿ ಅಂಬಿಕಾ ಎಂಬುವಳು ರುದ್ರನ ಪತ್ನಿಯು ಆದರ ವೇದಗಳಲ್ಲಿ ಅವಳು ಅವನ ಸೋದರಿ (ವಾ ಸಂ ೩ ೫೭) ರುದ್ರನ ಪತ್ನಿಯ ನಾಮಗಳಾದ ಉಮಾ ಮತ್ತು ಪಾರ್ವತೀ ಎಂಬ ಹೆಸರುಗಳ ಪ್ರಯೋಗವು ತೈತ್ತಿರೀಯ ಆರಣ್ಯಕ ಮತ್ತು ಕೇನೋಪನಿಷತ್ತುಗಳಲ್ಲಿದೆ.

ಅಗ್ನಿಗೆ ಸಮಾನರೆಂದು ಹೇಳಿರುವ ಅನೇಕ ದೇವತೆಗಳಲ್ಲಿ ರುದ್ರನೂ ಒಬ್ಬನು (೨-೧-೬) ಇತರ ಕಡೆಗಳಲ್ಲಿಯೂ ಅವನೂ ಅಗ್ನಿಯೂ ಒಂದು (ಅ ವೇ ೮-೮೭-೧, ತೈ ಸಂ. ೫ ೪-೩ ೧, ೫-೫ ೭-೪; ಶ. ಬ್ರಾ ೬-೧-೩-೧೦, ೯ ೧-೧-೧) ರುದ್ರ ಎಂಬುದು ಅನೇಕವೇಳೆ ವಿಶೇಷಣವಾಗಿ ಪ್ರಯುಕ್ತವಾಗಿದೆ ಅನೇಕ ಸಲ ಈ ಶಬ್ದವು ಅಗ್ನಿಗೂ, ಅಶ್ವಿನೀದೇವತೆಗಳಿಗೂ ವಿಶೇಷಣಪದವಾಗಿ ಪ್ರಯುಕ್ತವಾಗಿದ ರುದ್ರನಿಗೆ ಶರ್ವ ಮತ್ತು ಭವ ಎಂಬ ಎರಡು ಹೆಸರುಗಳು (ವಾ. ಸಂ. ೧೬-೧೮) ಈ ಎರಡು ಹೆಸರುಗಳೂ ಅವನ ನಾಶಕಾರಕವಾದ ಬಾಣಗಳು ಅಥರ್ವವೇದದಲ್ಲಿಯೂ ಪ್ರಸಕ್ತವಾಗಿವೆ (ಅ. ವೇ. ೨-೨೭ ೬, ೬-೯೩-೧, ೧೦-೧-೨೩, ೧೧-೨-೧, ೧೨) ಅದು ಇಲ್ಲಿ ಶರ್ವ, ಭವ, ರುದ್ರ ಎಂಬುವರು ಬೇರೆಬೇರೆ ದೇವತೆಗಳೆಂಬ ಭಾವನೆ ಇರುವಂತಿದ ಶರ್ವ ಮತ್ತು ಭವರು ರುದ್ರಪುತ್ರರು. ಮತ್ತು ಬೇಟೆಯಲ್ಲಿ ಬಹಳ ಆಸಕ್ತರು (ಸಾಂ ಶ್ರೌ. ಸೂ ೪ ೨೦-೧) ಅಗ್ನಿ, ಅಶನಿ, ಪಶುಪತಿ, ಭವ, ಶರ್ವ, ಈಶಾನ, ಮಹಾದೇವ, ಉಗ್ರದೇವ ಇವರೆಲ್ಲರೂ ಒಂದೇ ದೇವತೆಯ ನಾನಾರೂಪಗಳು (ವಾ. ಸಂ ೩೯ ೮). ರುದ್ರ, ಶರ್ವ, ಪಶುಪತಿ, ಉಗ್ರ, ಅಶನಿ, ಭವ ಈಶಾನ, ಮತ್ತು ಮಹಾದೇವ ಇವುಗಳು ಅಗ್ನಿಯ ಎಂಟು ರೂಪಗಳು (ಶ. ಬ್ರಾ. ೬-೧-೩-೭, ಸಾಂಖ್ಯಾ ಬ್ರಾ. ೬-೧); ಶರ್ವ, ಭವ, ಪಶುಪತಿ ಮತ್ತು ರುದ್ರ ಇವುಗಳೆಲ್ಲಾ ಅಗ್ನಿಯ ನಾಮಗಳು (ಶ. ಬ್ರಾ. ೧-೭-೩ ೮) ಈ ಮೇಲಿನ ನಾಮಗಳಲ್ಲಿ ಒಂದಾದ ಅಶನಿ ಎಂಬುದು ವಿದ್ಯುತ್ ಅಥವಾ ಅಗ್ನಿಕುಮಾರನ ಹೆಸರು (ಶ ಬ್ರಾ ೬ ೧-೩-೧೦) ಆದರೆ ಸಾಂಖ್ಯಾಯನ ಬ್ರಾಹ್ಮಣದಲ್ಲಿ ಅದು ಇಂದ್ರನ ನಾಮವೆಂದು ಉಕ್ತವಾಗಿದೆ. ಮನೆಯಿಂದ ಓಡಿಸಲ್ಪಟ್ಟ ಗೋವುಗಳು ರುದ್ರನ ಆಘಾತಕ್ಕೆ ಒಳಪಡುವುದು ಹೆಚ್ಚು, ಆದ್ದರಿಂದಲೇ ಅವುಗಳು ಅವನ ರಕ್ಷಣೆಗೆ ಒಳಪಟ್ಟಿವೆ ಈ ಕಾರಣದಿಂದ ರುದ್ರನಿಗೆ ಪಶುಪತಿ ಎಂಬ ಹೆಸರು ಬಂದಿದೆ,

ರುದ್ರನು ಘೋರರೂಪಿ (೨ ೩೩-೬,೧೧; ೧೦-೧೨೬ ೫) ಮತ್ತು ಕ್ರೂರಮೃಗದಂತೆ ನಾಶಕಾರಕನು (೨-೩೩-೧೧). ಅವನು ಆಕಾಶದ ಕೆಂಪುಛಾಯೆಯ ವರಾಹ (೧-೧೧೪-೫), ವೃಷಭ (೨-೩೩ ೭, ೮, ೧೫) ಉದಾತ್ತಸ್ವಭಾವವುಳ್ಳವನು (೭-೧೦-೪) ಬಲಾಢ್ಯನು (೧-೪೩-೧, ೧-೧೧೪-೧) ಬಲಾಢ್ಯರಲ್ಲೆಲ್ಲಾ ಬಲಿಷ್ಠನು. (೨-೩೩-೩) ಅಪ್ರತಿಹತನು (೭-೪೬-೧) ಪರಾಕ್ರಮದಲ್ಲಿ ಇವನನ್ನು ಮೀರಿಸಿದವರಿಲ್ಲ (೨-೩೩-೧೦) ವೇಗಶಾಲಿಯು (೧೦-೯೨-೫), ಚುರುಕುಬುದ್ಧಿಯುಳ್ಳವನು (೧-೧೧೪-೪) ತರುಣನು (೫-೬೦-೫) ಮತ್ತು ಇವನು ವೃದ್ಧನಾಗುವುದಿಲ್ಲ (೬-೪೯-೧೦)

ಅಸುರನಾಮಧೇಯನು (೫ ೪೨-೧೧) ಸ್ವರ್ಗಲೋಕದ ಮಹಾ ಅಸುರನು (೨ ೧ ೬) ಅತ್ಯಧಿಖ್ಯಾತನು (೧ ೧೨೯-೩ ; ೧೦ ೯೨-೯) ವೀರರನ್ನು ಆಳುತ್ತಾನೆ (೧ ೧೧೪ ೧, ೨) ಇವನು ಈ ಪ್ರಪಂಚಕ್ಕೆ ಅಧಿಪತಿಯು (೨ ೩೩ ೯) ಮತ್ತು ಜನಕನು (೬-೪೯ ೧೦), ಅವನು ನಿಯಮಗಳನ್ನು ವಿಧಿಸುವವನು (೬-೪೬ ೧) ಮತ್ತು ತನ್ನ ವಿಧಿಗಳಿಂದ ಮತ್ತು ಜಗದಾಧಿಪತ್ಯದಿಂದ ದೇವಮಾನವರ ಎಲ್ಲಾ ಕಾರ್ಯಗಳನ್ನು ತಿಳಿದುಕೊಳ್ಳುತ್ತಾನೆ (೭-೪೬-೨), ಅವನ ಅಪ್ಪಣೆಯಿಂದಲೇ ನದಿಗಳು ಹರಿದು ಭೂಮಿಯೆಲ್ಲವನ್ನೂ ಆರ್ದ್ರವನ್ನಾಗಿ ಮಾಡುತ್ತವೆ (೧೦-೯೨ ೫); ಅವನು ಬುದ್ಧಿಶಾಲಿಯು (೧-೪೩ ೧) ಜ್ಞಾನಿ (೧ ೧೧೪-೪) ಮತ್ತು ಉದಾರಿಯು (೨-೩೩ ೭, ೬ ೪೯ ೧೦), ಆದ್ದರಿಂದಲೇ ಅನೇಕ ಸಲ ಅವನನ್ನು ಮೀಢ್ವ (ಉದಾರಿ) ಎಂಬ ಹೆಸರಿನಿಂದ ಕರೆಯಲಾಗಿದೆ (೧ ೧೧೪ ೩) ಮತ್ತು ಇತರ ವೇದಗಳಲ್ಲಿ ಮೀಢ್ವಶಬ್ದಪ್ರಯೋಗವು ರುದ್ರನಿಗೆ ಮಾತ್ರ ಅನ್ವಯಿಸುವುದು. ಅವನು ಸುಲಭವಾಗಿ ಸ್ತುತ್ಯನು (೨ ೩೩-೬) ಮತ್ತು ಮಂಗಳಕರನು (೨ವ ೧೦ ೯೨ ೯)

ಕಡೆಗಾಣಡುವುದು ಇವನ ವಿಶೇಷಸ್ವಭಾವವಿದ್ದಂತೆ ಕಾಣುತ್ತದೆ. ಅವನನ್ನು ಸ್ತುತಿಸುವ ಸೂಕ್ತಗಳೆಲ್ಲಾ ಅವನ ಬಾಣದ ಭಯ, ಅವನ ಕೋಪದ ಅನಿಷ್ಟಪರಿಣಾಮಗಳು ಇಂತಹ ಗುಣಗಳೇ ಉಕ್ತವಾಗಿವೆ. ಸ್ತೋತ್ರ ಮಾಡುವಾಗ, ಮಾತಾಪಿತೃಗಳು, ಮಕ್ಕಳು, ಅನುಯಾಯಿಗಳು, ದನಕರುಗಳು, ಅಶ್ವಗಳು ಮುಂತಾದುವುಗಳನ್ನು ಕೋಪದಿಂದ ಕೊಲ್ಲಬಾರದೆಂದೂ, ಹಿಂಸಿಸಬಾರದೆಂದೂ ಪ್ರಾರ್ಥಿಸಲಾಗಿದೆ (೧ ೧೧೪ ೭, ೮) ಮತ್ತು ಸ್ತೋತೃಗಳು ತಮ್ಮ ಅಶ್ವಗಳನ್ನು ಉಳಿಸಿಕೊಡಬೇಕು (೨ ೩೩ ೧) ಬಾಣಗಳನ್ನು ಬೇರೆ ಕಡೆಗೆ ತಿರುಗಿಸಿ ಇತರರನ್ನು ಅವುಗಳಿಂದ ಧ್ವಂಸ ಮಾಡಬೇಕು (೨ ೩೩ ೧೧,೧೪) ಕೋಪಬಂದಾಗ ತನ್ನ ಆಯುಧವನ್ನು ಶಿಥಿಲವನ್ನಾಗಿ ಮಾಡಬೇಕು, ತನ್ನ ಸ್ತುತಿಕರ್ತರನ್ನು ತೊಂದರಪಡಿಸಬಾರದು (೬-೨೮-೭, ೬ ೪೬-೨,೩,೪) ಗೋವುಗಳನ್ನೂ, ಮಕ್ಕಳನ್ನೂ, ಮನುಷ್ಯರನ್ನೂ ವಧಿಸುವ ಇವನ ಆಯುಧವನ್ನು ತಮ್ಮಿಂದ ದೂರ ಇಡಬೇಕೆಂದು ಪ್ರಾರ್ಥಿಸಿದಾರೆ (೨ ೩೩-೧) ಸಂತತಿಗಳನ್ನು ನಷ್ಟಪಡಿಸಬಾರದೆಂದೂ (೨ ೩೩-೪,೫,೬,೧೫) ಆಹಾರದ ವಿಷಯದಲ್ಲಿ ಕೃಪೆ ಇಡಬೇಕೆಂದೂ ಸ್ತೋತೃಗಳು ಮೊರೆಯಿಟ್ಟಿದ್ದಾರೆ (೧೦ ೧೬೯-೧) ಮನುಷ್ಯರನ್ನು ವಧಿಸುವವನೆಂಬ (ನೃಘ್ನ) ಎಂಬ ವಿಶೇಷಣವಿದೆ (೪-೩-೬) ಅಂದರೆ ಸ್ತುತಿಕರ್ತರ ಶತ್ರುಗಳಾದ ಮನುಷ್ಯರೆಂದು ಭಾವನೆ. ಮನುಷ್ಯರನ್ನು ವಧಿಸಲು ಅಪೇಕ್ಷಿಸುತ್ತಾನೆ (ಅ ವೇ. ೧-೮-೩೨) ಇವನ ಕೋಪದ ವಿಷಯವು ಇತರ ವೇದಗಳಲ್ಲಿ ಇನ್ನೂ ವಿಶದವಾಗಿ ಹೇಳಲ್ಪಟ್ಟಿದೆ. ಪದೇಪದೇ ಈ ವಿಷಯದಲ್ಲಿ ಸ್ತುತಿಕರ್ತರು ಅವನಿಗೆ ಮೊರೆಯಿಟ್ಟಿದಾರೆ (ವಾ. ಸಂ ೩-೬೧ ; ಅ ವೇ ೧-೨೮-೫ ಇತ್ಯಾದಿ) ಸ್ವರ್ಗೀಯಾಗ್ನಿಯನ್ನು (ವಿದ್ಯುತ್) ತಮ್ಮ ಮೇಲೆ ಪ್ರಯೋಗಿಸಬಾರದೆಂದೂ, ಅದಲು ಬೇರೆ ಸ್ಥಳದಲ್ಲಿ ಬೀಳುವಂತೆ ಮಾಡಬೇಕೆಂದೂ ಬೇಡಿದಾರೆ (ಅ ವೇ. ೧೧-೨-೨೬, ೧೦-೧-೨೩), ಜ್ವರ, ಕೆಮ್ಮು ವಿಷ ಇವುಗಳ ಮೂಲಕವೂ ಇವನು ಮನುಷ್ಯರನ್ನು ಹಿಂಸಿಸುತ್ತಾನೆ (ಅ ವೇ ೧೧ ೨-೨೨, ೨೬) ಬೇಟೆಯಾಡಿ ಕೊಂದ ಮೃಗಗಳನ್ನು ಅಗಿಯದೆ ನುಂಗುವ ಅಗಲವಾದ ಬಾಯುಳ್ಳ, ಸದಾ ಬೊಗಳುವ ನಾಯಿಗಳೂ ಅವನ ಹತ್ತಿರ ಇವೆ (ಅ ವೇ. ೧೦-೧-೩೦, ವಾ ಸಂ. ೧೬-೨೮) ಹೆದೆಯೇರಿಸಿದ ಅವನ ಬಿಲ್ಲು ಬಾಣಗಳನ್ನು ಕಂಡರೆ ತಮ್ಮನ್ನು ಎಲ್ಲಿ ನಾಶಮಾಡುವನೋ ಎಂದು ದೇವತೆಗಳಿಗೂ ಬಹಳ ಭಯ (ಶ. ಬ್ರಾ ೯-೧-೧-೧,೬) ಮಹಾದೇವನೆಂಬ ಹೆಸರಿನಿಂದ ಇವನು ಗೋವುಗಳನ್ನು ವಧಿಸುತ್ತಾನೆ. (ತಾಂಡ್ಯ ಮಹಾ. ಬ್ರಾ. ೬-೯-೭) ಸಮಸ್ತ ಭಯಂಕರ ವಸ್ತುಗಳಿಂದ ಸೃಷ್ಟನಾದವನು. (ಐ ಬ್ರಾ ೩-೩೩-೧) ಇವನ ಭಯಂಕರ ಗುಣಗಳಿಂದಲೇ ಇವನು ಇತರ ದೇವತೆಗಳಿಂದ ಪ್ರತ್ಯೇಕವಾಗಿರುತ್ತಾನೆಂದು ಬ್ರಾಹ್ಮಣ ಮತ್ತು ಸೂತ್ರಗ್ರಂಥಗಳಲ್ಲಿ ಹೇಳಿದೆ. ದೇವತೆಗಳೆಲ್ಲಾ ಸ್ವರ್ಗವನ್ನು ಸೇರಿದಾಗ ರುದ್ರನು ಹಿಂದುಳಿದನು (ಶ. ಬ್ರಾ, ೧-೭-೩-೧). ವೈದಿಕ ಕರ್ಮಗಳಲ್ಲಿ ಪ್ರಾಯಶಃ ಇತರ ದೇವತೆಗಳಿಗೆ ಆಹುತಿಗಳನ್ನು ಅರ್ಪಿಸಿದಮೇಲೆ ಉಳಿದ ಶೇಷವು ರುದ

ನಿಗೆ ಅರ್ಪಿತವಾಗುತ್ತದೆ. (ಆಶ್ವ ಧರ್ಮ. ಸೂ. ೨-೪-೨೩). ಇತರ ದೇವತೆಗಳ ವಾಸಸ್ಥಾನವು ಪೂರ್ವದಿಕ್ಕಿನಲ್ಲಿದೆ ಆದರೆ ರುದ್ರನು ಉತ್ತರದಿಕ್ಕಿನಲ್ಲಿ ವಾಸಿಸುತ್ತಾನೆ (ತೈ ಸಂ ೬-೧-೧-೧) ಇವನು ರೌದ್ರಸ್ವಭಾವನಾದುದರಿಂದಲೇ ಇತರ ದೇವತೆಗಳೊಡನೆ ವಿಶೇಷವಾಗಿ ಸೇರುವುದಿಲ್ಲ, ಮತ್ತು ದ್ವಂದ್ವದೇವತೆಯಾಗಿ ಸೋಮನೊಡನೆ ಒಂದು ಸೂಕ್ತದಲ್ಲಿ ಮಾತ್ರ ಸ್ತುತನಾಗಿದಾನೆ. (೬-೭೪)

ಇವುಗಳಲ್ಲದೆ ಪುರಾಣಾದಿಗ್ರಂಥಗಳಲ್ಲಿ ಉಕ್ತವಾಗಿರುವ ರುದ್ರನ ಭೀಕರವಾದ ಮತ್ತು ಕೆಡಕನ್ನುಂಟುಮಾಡುವ ಅನೇಕ ಗುಣಗಳಿಗೆ ವಾಜಸನೇಯ ಸಂಹಿತೆ ಮೊದಲಾದ ವೈದಿಕಗ್ರಂಥಗಳಲ್ಲಿ ಸಮರ್ಥನೆ ಇದೆ ಆದರೆ ರುದ್ರನು ಪಿಶಾಚಾದಿಗಳಂತೆ ಸಂಪೂರ್ಣವಾಗಿ ಅನಿಷ್ಟಕಾರಕನಲ್ಲ ಇತರ ದೇವತೆಗಳಿಂದ ಆಗಬಹುದಾದ ತೊಂದರೆಯನ್ನು ಪರಿಹರಿಸಬೇಕೆಂದು ಪ್ರಾರ್ಥಿತನಾಗಿದಾನೆ (೧-೧೧೪-೧, ೨, ೨-೩೩-೬) ಮತ್ತು ಮನುಷ್ಯರಿಗೂ ಪ್ರಾಣಿಗಳಿಗೂ ಕ್ಷೇಮವನ್ನುಂಟುಮಾಡುತ್ತಾನೆ (೧-೪೩-೬) ರೋಗಗಳನ್ನು ಗುಣಪಡಿಸುವ ಶಕ್ತಿಯು ಇವನಿಗುಂಟೆಂದು ಪದೇಪದೇ ಉಕ್ತವಾಗಿದೆ ಇವನು ಮನುಷ್ಯರಿಗೆ ಔಷಧಗಳನ್ನು ಅನುಗ್ರಹಿಸುತ್ತಾನೆ (೭-೪೬ ३) ಅವನ ಕೈಯಲ್ಲಿ ಉತ್ತಮವಾದ ಔಷಧಗಳಿವೆ. (೧-೧೧೪ ೫) ಎಲ್ಲಾ ಔಷಧಿಗಳೂ ಇವನಿಗಧೀನವಾಗಿವೆ (೫ ೪೨ ೧೧) ಮತ್ತು ಇವನ ಹತ್ತಿರ ಸಹಸ್ರಾರು ಔಷಧಗಳಿವೆ (೭-೪೬-೩) ಅವನ ಹಸ್ತವೇ ರೋಗಗಳನ್ನು ಗುಣಪಡಿಸುವ ಶಕ್ತಿಯುಳ್ಳದ್ದು (೨ ೩೩-೭). ತನ್ನ ಚಿಕಿತ್ಸೆಯಿಂದ ವೀರರನ್ನು ಬೆಳೆಸುತ್ತಾನೆ ಅವನು ವೈದ್ಯರಲ್ಲೆಲ್ಲಾ ಉತ್ತಮ ವೈದ್ಯನು (೨-೩೩-೪) ಮತ್ತು ಅವನ ಔಷಧಗಳ ಸಹಾಯದಿಂದ ಆರಾಧಕನು ನೂರುವರ್ಷ ಜೀವಿಸಲು ಆಶಿಸುತ್ತಾನೆ. (೨-೩೩ ೨) ಪೂಜೆಮಾಡುವವರ ಸಂತಾನಕ್ಕೆ ಶುಭಪ್ರದನಾಗುವಂತೆಯೂ (೭-೪೬-೨) ಗ್ರಾಮವಾಸಿಗಳೆಲ್ಲರೂ ರೋಗರುಜಿನಗಳಿಲ್ಲದೆ ಆರೋಗ್ಯವಾಗಿರುವಂತೆಯೂ, ಪಶುಪ್ರಾಣಿಗಳಿಗೂ ಮನುಷ್ಯರಿಗೂ ಅನುಕೂಲನಾಗಿರುವಂತೆಯೂ (೧-೧೧೪-೧) ಪ್ರಾರ್ಥಿತನಾಗಿದಾನೆ. ಈ ಸಂದರ್ಭದಲ್ಲಿ ಅವನಿಗೆ ಜಲಾಷ, ಜಲಾಷಭೇಷಜ ಎಂಬ ಎರಡು ವಿಶೇಷಣಗಳಿವೆ (೧-೪೩ ೪, ಅ. ವೇ ೨ ೨೭ ೬ ಇಲ್ಲಿ ಔಷಧಿಗಳೆಂದರೆ ವೃಷ್ಟಿಜಲವಿರಬಹುದು ರುದ್ರನ ವಿದ್ಯುತ್ತು ಮತ್ತು ಅವನ ಚಿಕಿತ್ಸಾಶಕ್ತಿಗಳೂ ಒಟ್ಟಾಗಿ ಹೇಳಲ್ಪಟ್ಟಿವೆ (೭-೪೬-೩) ವೈದ್ಯಸ್ವಭಾವದ ಈ ರುದ್ರನು ಇತರ ರುದ್ರರೊಡನೆ ಪ್ರಸನ್ನನಾಗಬೇಕೆಂದು ಪ್ರಾರ್ಥಿತನಾಗಿದಾನೆ (೭-೩೫-೬) ರುದ್ರನ ಜತೆಯಲ್ಲಿ ಅವನ ಪುತ್ರರಾದ ಮರುತ್ತುಗಳಿಗೂ ಚಿಕಿತ್ಸಾಶಕ್ತಿಗಳು ಉಕ್ತವಾಗಿವೆ (೨-೩೩ ೧೩) ರುದ್ರನ ಈ ಶಕ್ತಿಯ ವರ್ಣನೆಯು ಇತರ ವೇದಗಳಲ್ಲಿಯೂ ಉಕ್ತವಾಗಿದೆ (ವಾ ಸಂ ३-೫೯, ಅ ವೇ ೨-೨೭-೬) ಆದರೆ ಅವನ ವಿನಾಶಕಾರಕಶಕ್ತಿಯನ್ನು ಹೇಳಿರುವಷ್ಟು ಸಲ್ಲ ಈ ಚಿಕಿತ್ಸಾಶಕ್ತಿಯು ಹೇಳಲ್ಪಟ್ಟಿಲ್ಲ. ರೋಗ ಪರಿಹಾರ ಮತ್ತು ಅದರ ನಿವಾರಣೆಗಾಗಿ ರುದ್ರನನ್ನುದ್ದೇಶಿಸಿ ಮಾಡಬೇಕಾದ ಅನೇಕ ಯಾಗಗಳು ಉಕ್ತವಾಗಿವೆ (ಆ. ಗೃ ೪-೮-೪೦, ಕೌ. ಸೂ. ೫೧ ೭)

ಸಾಯಣಭಾಷ್ಯಂ

**ಇಮಾ ರುದ್ರಾಯೇತಿ ಚತುರ್ಋಚಂ ತ್ರಯೋದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ರುದ್ರದೇವತಾಕಂ । ಅಂತ್ಯಾ ತ್ರಿಷ್ಟುಪ್ ಶಿಷ್ಟಾ ಜಗತ್ಯಃ । ತಥಾ ಚಾನುಕ್ರಮಣಿಕಾ । ಇಮಾ ರೌದ್ರಂ ತ್ರಿಷ್ಟುಬಂತಮಿತಿ ॥ ಶೂಲಗವಾದಿಷು ರೌದ್ರಯಜ್ಞೇಷ್ವನೇನ ಸೂಕ್ತೇನೋದೀಚೀ ದಿಗುಪಸ್ಥೇಯಾ । ಸೂತ್ರ್ಯತೇ ಹಿ। ಇಮಾ ರುದ್ರಾಯ ಸ್ಥಿರಧನ್ವನ ಇತಿ ಸರ್ವರುದ್ರಯಜ್ಞೇಷು ದಿಶಾಮುಪಸ್ಥಾನಂ । ಆ ಗೃ. ४೯-೨೧ । ಇತಿ ॥**

**ಅನುವಾದವು—ಇಮಾ ರುದ್ರಾಯ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು, ಇದರಲ್ಲಿ ನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ರುದ್ರನು ದೇವತೆಯು;

ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು, ಉಳಿದ ಋಕ್ಕುಗಳು ಜಗತೀಛಂದಸ್ಕವು ಅನುಕ್ರಮಣಿಕೆಯಲ್ಲಿ **ಇಮಾ ರೌದ್ರಂ ತ್ರಿಷ್ಟುಬಂತಂ** ಎಂದು ಹೇಳಿರುವುದು ಶೂಲಗವವೇ ಮೊದಲಾದ ರುದ್ರಯಜ್ಞಗಳಲ್ಲಿ ಈ ಸೂಕ್ತದಿಂದ ಉತ್ತರದಿಕ್ಕನ್ನು ಉದ್ದೇಶಿಸಿ ಉಪಸ್ಥಾನಮಾಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ **ಇಮಾ ರುದ್ರಾಯ ಸ್ಥಿರಧನ್ವನ ಇತಿ ಸರ್ವರುದ್ರಯಜ್ಞೇಷು ದಿಶಾಮುಪಸ್ಥಾನಂ** ಎಂಬ ಸೂತ್ರದಿಂದ (ಆ ಗೃ ೪ ೯-೨೧) ವಿವೃತವಾಗಿರುವುದು

## ಸೂಕ್ತ—೪೬

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೪೬ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧೩ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
ಋಷಿಃ—ವಸಿಷ್ಠಃ ॥
ದೇವತಾ—ರುದ್ರಃ ॥
ಛಂದಃ—೧-೩ ಜಗತೀ | ೪ ತ್ರಿಷ್ಟುಪ್ ॥

ಸಂಹಿತಾಪಾಠಃ

ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ ।
ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ॥ ೧ ॥

ಪದಪಾಠಃ

ಇಮಾಃ । ರುದ್ರಾಯ । ಸ್ಥಿರಽಧನ್ವನೇ । ಗಿರಃ । ಕ್ಷಿಪ್ರಽಇಷವೇ । ದೇವಾಯ । ಸ್ವಧಾಽವ್ನೇ ।
ಅಷಾಳ್ಹಾಯ । ಸಹಮಾನಾಯ । ವೇಧಸೇ । ತಿಗ್ಮಽಆಯುಧಾಯ । ಭರತ । ಶೃಣೋತು । ನಃ ॥ ೧ ॥

ಸಾಯಣಭಾಷ್ಯಂ

**ಹೇ ಅಸ್ಮದೀಯಾಃ ಸ್ತೋತಾರಃ ಯೂಯಮಿಮಾ ಗಿರಃ ಸ್ತುತೀಃ ರುದ್ರಾಯೈತನ್ನಾಮಕಾಯ ದೇವಾಯ ಭರತ । ಧಾರಯತ । ಕೀದೃಶಾಯ । ಸ್ಥಿರಧನ್ವನೇ ದೃಢಧನುಷ್ಕಾಯ ಕ್ಷಿಪ್ರೇಷವೇ ಶೀಘ್ರಗಾಮಿಬಾಣಾಯ ಸ್ವಧಾವ್ನೇಽನ್ನವತೇಽಷಾಳ್ಹಾಯ ಕೇನಾಪ್ಯನಭಿಭೂತಾಯ ಸಹಮಾನಾಯ ಶತ್ರೂಣಾಮಭಿಭವಿತ್ರೇ ವೇಧಸೇ ವಿಧಾತ್ರೇ ತಿಗ್ಮಾಯುಧಾಯ ತೀಕ್ಷ್ಣಾಸ್ತ್ರಾಯ । ಏವಂಭೂತಾಯ ರುದ್ರಾಯ ಸ್ತುತೀರ್ಭರತ । ಸ ಚ ರುದ್ರೋ ನೋಽಸ್ಮದೀಯಾಃ ಸ್ತುತೀಃ ಶೃಣೋತು ॥**

ಪ್ರತಿಪದಾರ್ಥ

(ಎಲೈ ಸ್ತೋತೃಗಳೇ,) **ಇಮಾಃ ಗಿರಃ**—ಈ ಸ್ತುತಿಗಳನ್ನು । **ಸ್ಥಿರಧನ್ವನೇ**—ದೃಢವಾದ ಧನುಸ್ಸುಳ್ಳವನೂ, । **ಕ್ಷಿಪ್ರೇಷವೇ**—ವೇಗವಾಗಿ ಹೋಗುವ ಬಾಣವುಳ್ಳವನೂ, । **ಸ್ವಧಾವ್ನೇ**—ಅನ್ನವಂತನೂ, । **ಅಷಾಳ್ಹಾಯ**—ಅಪ್ರತಿಹತನೂ, । **ಸಹಮಾನಾಯ**—ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನೂ । **ವೇಧಸೇ**—ಜಗ

**ನ್ನಿರ್ಮಾಪಕನೂ | ತಿಗ್ಮಾಯುಧಾಯ**—ತೀಕ್ಷ್ಣವಾದ ಆಯುಧವುಳ್ಳವನೂ | **ದೇವಾಯ**—ದೇವತಾತ್ಮನೂ ಆದ **ರುದ್ರಾಯ** — ರುದ್ರನಿಗೆ ಅರ್ಪಿಸಲು | **ಭರತ** — ಧರಿಸಿರಿ. | (ಅದೇ ರುದ್ರನು) **ನಃ** — ನಮ್ಮ ಸ್ತುತಿಗಳನ್ನು | **ಶೃಣೋತು**—ಕೇಳಲಿ.

**ಭಾವಾರ್ಥ**

ಎಲೈ ಸ್ತೋತೃಗಳೇ, ಈ ಸ್ತುತಿಗಳನ್ನು ದೃಢವಾದ ಧನುಸ್ಸುಳ್ಳವನೂ, ವೇಗವಾಗಿ ಹೋಗುವ ಬಾಣವುಳ್ಳವನೂ, ಅನ್ನವಂತನೂ, ಅಪ್ರತಿಹತನೂ, ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನೂ, ಜಗನ್ನಿರ್ಮಾಪಕನೂ, ತೀಕ್ಷ್ಣವಾದ ಆಯುಧಗಳುಳ್ಳವನೂ, ದೇವತಾತ್ಮನೂ ಆದ ರುದ್ರನಿಗೆ ನಿರ್ಮಿಸಿ ಅರ್ಪಿಸಿರಿ ಅದೇ ರುದ್ರನು ನಮ್ಮ ಸ್ತುತಿಗಳನ್ನು ಕೇಳಲಿ.

## English Translation

Offer these praises to the divine Rudra, armed with the strong bow and fast-flying arrows, the bestower of food, the invincible, the conqueror, the creator, the wielder of sharp weapons . may he hear our (praises).

**ವಿಶೇಷವಿಷಯಗಳು**

ರುದ್ರಶಬ್ದನಿರ್ವಚನವನ್ನು ಯಾಸ್ಕರು ಈ ರೀತಿ ವಿವರಿಸಿದಾರೆ—

**ರುದ್ರೋ ರೌತೀತಿ ಸತಃ | ರೋರೂಯಮಾಣೋ ದ್ರವತೀತಿ ವಾ ರೋದಯತೇರ್ವಾ | ಯದರುದತ್ತದ್ರುದ್ರಸ್ಯ ರುದ್ರತ್ವಂ ಇತಿ ಕಾಠಕಂ | ಯದರೋದೀತ್ತದ್ರುದ್ರಸ್ಯ ರುದ್ರತ್ವಂ ಇತಿ ಹಾರಿದ್ರವಿಕಂ | ತಸ್ಯೈಷಾ ಭವತಿ ||**

(ನಿ ೧೦-೬)

ರುದ್ರಶಬ್ದವು ಘಟ್ಟಿಯಾಗಿ ಕಿರಿಚು, ಕೂಗು ಎಂಬರ್ಥವುಳ್ಳ **ರೌತಿ** ಎಂಬ ಧಾತುವಿನಿಂದಾಗಲಿ ಕಿರಿಚುತ್ತಾ ಓಡು ಎಂಬ **ಅರ್ಥವುಳ್ಳ ರು ಪೂರ್ವಕವಾದ ದ್ರವತಿ** ಧಾತುವಿನಿಂದಾಗಲಿ ಅಥವಾ ಘರ್ಜಿಸು ಎಂಬರ್ಥವುಳ್ಳ **ರುದ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು ಈ ವಿಷಯದಲ್ಲಿ **ಯದರುದತ್ತದ್ರುದ್ರಸ್ಯ ರುದ್ರತ್ವಂ**- ಈ ದೇವನು ಘಟ್ಟಿಯಾಗಿ ಗರ್ಜನೆಮಾಡಿದ್ದರಿಂದ ಇವನಿಗೆ ರುದ್ರನೆಂಬ ಹೆಸರು ಬಂದಿತು ಎಂಬರ್ಥವುಳ್ಳ ಕಾಠಕಶ್ರುತಿಯು ಉದಾಹರಣೆಯಾಗಿದೆ. ಮತ್ತು ಇವನು ಗರ್ಜನೆಮಾಡಿದ್ದರಿಂದ ಈ ದೇವನಿಗೆ ರುದ್ರನೆಂಬ ಹೆಸರು ಬಂದಿತು ಗರ್ಜನೆಮಾಡುವುದು ಇವನ ಸ್ವಭಾವಗುಣವು ಎಂಬರ್ಥವುಳ್ಳ **ಯದರೋದೀತ್ತದ್ರುದ್ರಸ್ಯ ರುದ್ರತ್ವಂ** ಎಂಬ ಹಾರಿದ್ರವಿಕೀ ಶ್ರುತಿವಾಕ್ಯವೂ ಈ ವಿಷಯದಲ್ಲಿ ಪ್ರಮಾಣವನ್ನಾಗಿ ಉದಾಹರಿಸಬಹುದಾಗಿದೆ ಋಗ್ವೇದದಲ್ಲಿ ಈ ರುದ್ರದೇವನ ವಿಷಯವನ್ನು ತಿಳಿಸುವ ಋಕ್ಕನ್ನು ಇಲ್ಲಿ ಉದಾಹರಣೆಗಾಗಿ ಕೊಡಲಾಗಿದೆ—

**ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾಮ್ನೇ |**
**ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ||**

(ಮಾ. ಸಂ. ೭ ೪೬-೧)

**ಇಮಾ ರುದ್ರಾಯ ದೃಢಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯಾನ್ನವತೇಽಷಾಢಾಯಾನ್ನ್ಯೈಃ ಸಹಮಾನಾಯ ವಿಧಾತ್ರೇ ತಿಗ್ಮಾಯುಧಾಯ ಭರತ ಶೃಣೋತು ನಃ |**

**ತಿಗ್ಮಂ ತೇಜತೇರುತ್ಸಾಹಕರ್ಮಣಃ ।**
**ಆಯುಧಮಾಯೋಧನಾತ್ । ತಸ್ಯೈಷಾ ಪರಾಭವತಿ ॥**

(೭. ೧೦—೬)

ಈ ಸ್ತುತಿವಾಕ್ಯಗಳನ್ನು ರುದ್ರದೇವನಿಗೆ ಅರ್ಪಿಸಿರಿ. ಈ ದೇವನ ಧನುಸ್ಸು ದೃಢವಾಗಿರುವುದು. ಇವನ ಧನುಸ್ಸಿನಿಂದ ಹೊರಹೊರಡುವ ಬಾಣಗಳು ಬಹಳ ವೇಗವುಳ್ಳವು. ಈ ದೇವನು ಬಹಳ ಅನ್ನಯುಕ್ತನಾಗಿರುವನು. ಏಕೆಂದರೆ ತನ್ನನ್ನು ಸ್ತುತಿಸುವವರಿಗೆ ಕೊಡುವುದಕ್ಕಾಗಿ ಈ ದೇವನ ಬಳಿ ಬಹಳ ಅನ್ನಾದ್ಯಾಹಾರಗಳಿರುವವು. ಈ ದೇವನು ತನ್ನ ಶತ್ರುಗಳನ್ನು ಹಿಂಸಿಸುವನು. ಆದರೆ ಇವನು ಮಾತ್ರ ಅಪ್ರತಿಹತನು. ಜನಗಳು ಮಾಡುವ ಕರ್ಮಗಳಿಗೆ ನಿಯಾಮಕನು. ಇವನ ಆಯುಧವು ಅತಿ ತೀಕ್ಷ್ಣ (ಹರಿತ)ವಾಗಿರುವುದು. ಇಂತಹ ಈ ದೇವನು ನಮ್ಮ ಸ್ತುತಿವಾಕ್ಯಗಳನ್ನು ಆಲಿಸಿ ಕೇಳಲಿ ಎಂದು ಸರ್ವಜನಾಭಿಪ್ರಾಯವು.

ತಿಗ್ಮಶಬ್ದವು **ತಿಜ್**-ಹರಿತಮಾಡು ಎಂಬ ಧಾತುವಿನಿಂದ ನಿಷ್ಪನ್ನವಾಗಿ ಬಹಳ ಹರಿತವಾದ ಎಂಬರ್ಥವುಳ್ಳದ್ದಾಗಿರುವುದು. **ಆಯುಧ**ವೆಂದರೆ ಯುದ್ಧಮಾಡಿ ಶತ್ರುಗಳನ್ನು ಕೊಲ್ಲುವ ಸಾಧನವು ಎಂದರ್ಥವು. ಈ ರುದ್ರದೇವನ ವಿಷಯದಲ್ಲಿ ಇನ್ನೊಂದು ಉದಾಹರಣೆಯನ್ನು ಕೊಡಲಾಗುವುದು. (ಈ ಸೂಕ್ತದ ಮೂರನೆಯ ಋಕ್ಕಿನ ವಿಶೇಷವಿಷಯಗಳನ್ನು ನೋಡಿ)

ಸಂಹಿತಾಪಾಠಃ

ಸ ಹಿ ಕ್ಷಯೇಣ ಕ್ಷಮ್ಯಸ್ಯ ಜನ್ಮನಃ ಸಾಮ್ರಾಜ್ಯೇನ ದಿವ್ಯಸ್ಯ ಚೇತತಿ ।
ಅವನ್ನವಂತೀರುಪ ನೋ ದುರಶ್ಚರಾನಮೀವೋ ರುದ್ರ ಜಾಸು ನೋ ಭವ ॥

ಪದಪಾಠಃ

**ಸಃ** । ಹಿ । **ಕ್ಷಯೇಣ** । **ಕ್ಷಮ್ಯಸ್ಯ** । ಜನ್ಮನಃ । **ಸಾಂಽರಾಜ್ಯೇನ** । **ದಿವ್ಯಸ್ಯ** । **ಚೇತತಿ** ।
**ಅವನ್** । ಅವಂತೀಃ । **ಉಪ** । ನಃ । ದುರಃ । ಚರ । ಅನಮೀವಃ । ರುದ್ರ । ಜಾಸು । ನಃ । ಭವ ॥ ೨ ॥

ಸಾಯಣಭಾಷ್ಯಂ

**ಸ ಹಿ ಸ ಖಲು ರುದ್ರೋ ದೇವಃ ಕ್ಷಮ್ಯಸ್ಯ । ಕ್ಷಮಾಯಾಂ ಪೃಥಿವ್ಯಾಂ ಭವಃ । ತಸ್ಯ ಜನ್ಮನೋ ಜನಸ್ಯ ಕ್ಷಯೇಣೈಶ್ವರ್ಯೇಣ ಚೇತತಿ । ಪ್ರಜ್ಞಾಯತೇ । ದಿವ್ಯಸ್ಯ ಜನಸ್ಯ ಚ ಸಾಮ್ರಾಜ್ಯೇನೈಶ್ವರ್ಯೇಣ ಪ್ರಜ್ಞಾಯತೇ । ಶೇಷಃ ಪ್ರತ್ಯಕ್ಷಕೃತಃ । ಹೇ ರುದ್ರ ದೇವ ತ್ವಂ ಚಾವಂತೀಸ್ತ್ವಾಂ ಸ್ತೋತ್ರೈಸ್ತರ್ಪಯಂತೀರ್ನೋಽಸ್ಮದೀಯಾಃ ಪ್ರಜಾ ಅವನ್ ಪಾಲಯನ್ ದುರೋ ದುರ್ಯಾಣ್ಯಸ್ಮದೀಯಾನಿ ಗೃಹಾಣ್ಯುಪ ಚರ । ಉಪಗಚ್ಛ । ಕಿಂಚ ತ್ವಂ ನೋಽಸ್ಮದೀಯಾಸು ಪ್ರಜಾಸ್ವನಮೀವಃ । ಅಮೀವಾ ರೋಗಃ । ತಾಮಕುರ್ವನ್ ಭವ ॥**

ಪ್ರತಿಪದಾರ್ಥ

**ಸ ಹಿ**—ಅದೇ ರುದ್ರನು । **ಕ್ಷಮ್ಯಸ್ಯ**—ಪೃಥ್ವಿಯಲ್ಲಿ ಉತ್ಪನ್ನರಾದ । **ಜನ್ಮನಃ**—ಜನರಿಗೆ । **ಕ್ಷಯೇಣ**—ತನ್ನ ಐಶ್ವರ್ಯದ ಮೂಲಕ । **ಚೇತತಿ**—ಗೋಚರನಾಗುತ್ತಾನೆ. । **ದಿವ್ಯಸ್ಯ**—ದೇವಲೋಕದ ಜನರಿಗೆ । **ಸಾಮ್ರಾ-**

**ಜ್ಯೇನ**—ತನ್ನ ಪ್ರಭುತ್ವದಿಂದ ಅರಿಯಲ್ಪಡುತ್ತಾನೆ | **ರುದ್ರ**—ಎಲೈ ರುದ್ರದೇವನೇ, | **ಅವಂಶೀಃ**—ನಿನ್ನನ್ನು ಸ್ತುತಿಗಳಿಂದ ತೃಪ್ತಿಪಡಿಸುವ | **ನಃ**—ನಮ್ಮನ್ನು | **ಅವನ್**—ರಕ್ಷಿಸುತ್ತ | **ದುರಃ**—ನಮ್ಮ ಗೃಹಗಳಿಗೆ | **ಉಪ ಚರ**—ಬಂದುಸೇರು | **ನಃ ಜಾಸು**—ನಮಗೆ ಸೇರಿದ ಪ್ರಜೆಗಳಲ್ಲಿ | **ಅನಮೀವಃ**—ರೋಗಪ್ರತಿಬಂಧಕನಾಗಿ | **ಭವ**—ಆಗಿರು.

ಭಾವಾರ್ಥ

ರುದ್ರನು ಪೃಥ್ವಿಯಲ್ಲಿ ಉತ್ಪನ್ನರಾದ ಜನರಿಂದ ತನ್ನ ಸಂಪತ್ತಿನ ರೂಪದಿಂದಲೂ, ದ್ಯುಲೋಕೋತ್ಪನ್ನರಾದ ಜನರಿಗೆ ತನ್ನ ಪ್ರಭುತ್ವದಿಂದಲೂ ಅರಿಯಲ್ಪಡುತ್ತಾನೆ ಎಲೈ ರುದ್ರದೇವನೇ, ನಿನ್ನನ್ನು ಸ್ತುತಿಗಳಿಂದ ತೃಪ್ತಿಪಡಿಸುವ ನಮ್ಮನ್ನು ರಕ್ಷಿಸುತ್ತ ನಮ್ಮ ಗೃಹಗಳಿಗೆ ಬಂದು ಸೇರು. ನಮಗೆ ಸೇರಿದ ಪ್ರಜೆಗಳಲ್ಲಿ ರೋಗಪ್ರತಿಬಂಧಕನಾಗಿ ಆಗಿರು.

English Translation

He is known by his rule over those of terrestrial birth, by his sovereignty over those of celestial (origin). protecting our progeny, Rudra, propitiating you (by praise), come to our dwellings, and be to them a guardian against disease

ಸಂಹಿತಾಪಾಠಃ

ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ಕ್ಷ್ಮಯಾ ಚರತಿ ಪರಿ ಸಾ ವೃಣಕ್ತು ನಃ |
ಸಹಸ್ರಂ ತೇ ಸ್ವಪಿವಾತ ಭೇಷಜಾ ಮಾ ನಸ್ತೋಕೇಷು ತನಯೇಷು ರೀರಿಷಃ ||

ಪದಪಾಠಃ

**ಯಾ | ತೇ | ದಿದ್ಯುತ್ | ಅವSಸೃಷ್ಟಾ | ದಿವಃ | ಪರಿ | ಕ್ಷ್ಮಯಾ | ಚರತಿ | ಪರಿ | ಸಾ | ವೃಣಕ್ತು | ನಃ | ಸಹಸ್ರಂ | ತೇ | ಸುSಅಪಿವಾತ | ಭೇಷಜಾ | ಮಾ | ನಃ | ತೋಕೇಷು | ತನಯೇಷು | ರೀರಿಷಃ || ೩ ||**

ಸಾಯಣಭಾಷ್ಯಂ

**ಹೇ ರುದ್ರ ತೇ ವೈದ್ಯುತಾತ್ಮನಸ್ತವ ಸಂಬಂಧಿನೀ ದಿವಸ್ಪರ್ಯಂತರಿಕ್ಷಸಕಾಶಾದವಸೃಷ್ಟಾ ವಿಮುಕ್ತಾ ಯಾ ದಿದ್ಯುದಶನಿರೂಪಾ ಹೇತಿಃ ಕ್ಷ್ಮಯಾ ಕ್ಷಿತ್ಯಾ ಕ್ಷಿತೌ ವಾ ಚರತಿ ವರ್ತತೇ ಸಾ ದಿದ್ಯುನ್ನೋSಸ್ಮಾನ್ಪರಿ ವೃಣಕ್ತು | ಪರಿತ್ಯಜತು | ಅಪಿ ಚ ಹೇ ಸ್ವಪಿವಾತ ತೇ ತವ ಸಹಸ್ರಂ ಬಹೂನಿ ಭೇಷಜಾ ಭೇಷಜಾನಿ ಯಾನ್ಯೌಷಧಾನಿ ಸಂತಿ ತಾನ್ಯಸ್ಮಭ್ಯಂ ಪ್ರಯಚ್ಛೇತಿ ಶೇಷಃ | ನೋSಸ್ಮಾಕಂ ತೋಕೇಷು ಪುತ್ರೇಷು ತನಯೇಷು ಚ ಮಾ ರಿರಿಷಃ | ಹಿಂಸಾಂ ಮಾ ಕೃಥಾಃ ||**

ಪ್ರತಿಪದಾರ್ಥ

(ಎಲೈ ರುದ್ರದೇವನೇ,) **ತೇ**—ನಿನಗೆ ಸೇರಿದುದೂ ! **ದಿವಸ್ಪರಿ**—ಅಂತರಿಕ್ಷದಿಂದ | **ಅವಸೃಷ್ಟಾ**—ಬಿಡಲ್ಪಟ್ಟುದೂ ಆದ | **ಯಾ ದಿದ್ಯುತ್**—ಯಾವ ವಿದ್ಯುದ್ರೂಪವಾದ ಆಯುಧವು | **ಕ್ಷ್ಮಯಾ**—ಪೃಥ್ವಿಯಮೇಲೆ | **ಚರತಿ**

—ಸಂಚರಿಸುವುದೋ | **ಸಾ**—ಅದೇ ಶಕ್ತಿರೂಪವಾದ ಆಯುಧವು | **ನಃ**—ನಮ್ಮನ್ನು | **ಪರಿ ವೃಣಕ್ತು**—ಬಿಟ್ಟು ಬಿಡಲಿ | **ಸ್ವಪಿವಾತ**—ಕಲ್ಯಾಣಕಾರಕವಾದ ವ್ಯವಹಾರವುಳ್ಳ ಎಲೈ ರುದ್ರನೇ, | **ತೇ**—ನಿನ್ನಲ್ಲಿ | **ಸಹಸ್ರಂ**—ಅತ್ಯಧಿಕವಾಗಿ | **ಭೇಷಜಾ**—ಔಷಧಿಗಳು ಇರುತ್ತವೆ | **ನಃ**—ನಮ್ಮ | **ತೋಕೇಷು**—ಪುತ್ರರಲ್ಲಿಯೂ | **ತನಯೇಷು**—ತತ್ಪುತ್ರರಲ್ಲಿಯೂ (ಮೊಮ್ಮಕ್ಕಳಲ್ಲಿಯೂ) | **ಮಾ ರೀರಿಷಃ**—ಹಿಂಸೆಯನ್ನುಂಟುಮಾಡಬೇಡ

ಭಾವಾರ್ಥ

ಎಲೈ ರುದ್ರದೇವನೇ, ನಿನಗೆ ಸೇರಿದುದೂ, ಅಂತರಿಕ್ಷದಿಂದ ಬಿಡಲ್ಪಟ್ಟುದೂ ಆದ ಯಾವ ವಿದ್ಯುದ್ರೂಪವಾದ ಆಯುಧವು ಪೃಥ್ವಿಯ ಮೇಲೆ ಸಂಚರಿಸುವುದೋ ಅದೇ ಶಕ್ತಿರೂಪವಾದ ಆಯುಧವು ನಮ್ಮನ್ನು ಬಿಟ್ಟುಬಿಡಲಿ. ಕಲ್ಯಾಣಕಾರಕವಾದ ವ್ಯವಹಾರವುಳ್ಳ ಎಲೈ ರುದ್ರನೇ, ನಿನ್ನಲ್ಲಿ ಅನೇಕವಿಧವಾದ ಔಷಧಿಗಳು ಇರುತ್ತವೆ. ನಮ್ಮ ಪುತ್ರರಿಗೂ, ತತ್ಪುತ್ರರಿಗೂ ಹಿಂಸೆಯನ್ನುಂಟುಮಾಡಬೇಡ

English Translation

May your blazing (weapon), which, discharged from heaven traverses the earth, avoid us yours, appeaser of the wind, are a thousand medicaments inflict not evil upon our sons and grandsons

ವಿಶೇಷವಿಷಯಗಳು

ರುದ್ರಶಬ್ದದ ನಿಷ್ಪತ್ತಿಯನ್ನೂ ಅರ್ಥವನ್ನೂ ವಿವರಿಸುವಾಗ ಯಾಸ್ಕರು ಈ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು ಇದಕ್ಕೆ ನಿರುಕ್ತವನ್ನು ಹೇಳಿದಾರೆ—

> **ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ದಿವೋಽಧಿ | ದಿದ್ಯುತ್ ದ್ಯತೇರ್ವಾ, ದ್ಯುತೇರ್ವಾ, ದ್ಯೋತತೇರ್ವಾ | ಕ್ಷ್ಮಯಾ ಚರತಿ ಕ್ಷ್ಮಾ ಪೃಥಿವೀ ತಸ್ಯಾಂ ಚರತಿ ತಯಾ ಚರತಿ ವಿಕ್ಷ್ಮಾಪಯಂತೀ ಚರತೀತಿ ವಾ, | ಪರಿವೃಣಕ್ತು ನಃ ಸಾ ಸಹಸ್ರಂ ತೇ ಸ್ವಾಪ್ತವಚನಭೃಷಜ್ಯಾನಿ ಮಾ ನಸ್ತ್ವಂ ಪುತ್ರೇಷು ಚ ಪೌತ್ರೇಷು ಚ ರೀರಿಷಃ |**
> **ತೋಕಂ ತುದ್ಯತೇಃ | ತನಯಂ ತನೋತೇಃ ||**
> **ಅಗ್ನಿರಪಿ ರುದ್ರ ಉಚ್ಯತೇ । ತಸ್ಯೈಷಾ ಭವತಿ |**
> **ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ |**
> **ಸ್ತೋಮಂ ರುದ್ರಾಯ ದೃಶೀಕಂ || ಜರಾ ಸ್ತುತಿ. ....ದರ್ಶನೀಯಂ ||**

(ನಿ ೧೦ ೭)

ಎಲೈ ರುದ್ರದೇವನೇ, ಸ್ವರ್ಗಲೋಕದ ಮೇಲಿನಿಂದ ಎಸೆಯಲ್ಪಡುವ ಪ್ರಕಾಶಮಾನವಾದ ನಿನ್ನ ಆಯುಧವು ನಮ್ಮನ್ನು ತಾಕದಿರಲಿ **ದಿದ್ಯುತ್** ಎಂಬ ಶಬ್ದವು ಕತ್ತರಿಸು ಎಂಬರ್ಥವುಳ್ಳ ದ್ಯತಿಧಾತುವಿನಿಂದಾಗಲಿ, ಪ್ರಯೋಗಿಸು, ಹಿಂಸಿಸು ಎಂಬರ್ಥವುಳ್ಳ **ದ್ಯುತಿ** ಧಾತುವಿನಿಂದಾಗಲಿ, ಅಥವಾ ಪ್ರಕಾಶಿಸು ಎಂಬರ್ಥವುಳ್ಳ **ದ್ಯುತ್** (ದ್ಯೋತತಿ) ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಶಬ್ದಕ್ಕೆ ಪ್ರಕಾಶಿಸುವ ಎಂಬರ್ಥವಿರುವುದು **ಕ್ಷ್ಮಯಾ ಚರತಿ** | **ಕ್ಷ್ಮಾ** ಎಂದರೆ ಪೃಥಿವಿಯು **ಕ್ಷ್ಮಯಾ ಚರತಿ** ಎಂದರೆ ಪೃಥಿವಿಯಮೇಲೆ ಅಥವಾ ಪೃಥಿವಿಯೊಡನೆ ಚಲಿಸುವುದು ಎಂದರ್ಥವು ಅಥವಾ ಚಲಿಸುತ್ತಾ ನಾಶವನ್ನುಂಟುಮಾಡುವುದು ಎಂದೂ ಅರ್ಥವು. ಇಂತಹ ರುದ್ರದೇವನ ವಿನಾಶಕರವಾದ ಆಯುಧವು ನಮಗೆ ಹಿಂಸೆಯನ್ನುಂಟುಮಾಡದೆ, ನಮಗೆ ತಾಕದೆ ನಮ್ಮಮೇಲೆ ಹಾದುಹೋಗಲಿ (ಸ್ವಪಿವಾತ =

ಸ್ವಾಪ್ತವಚನ) ಹಿತಕರವಾದ ವಾಕ್ಯಗಳುಳ್ಳ ಎಲೈ ರುದ್ರನೇ, ನಿನ್ನಬಳಿ ಸಾವಿರಾರು ಔಷಧಗಳಿವೆ ನೀನು ನಮ್ಮ ಪುತ್ರರನ್ನೂ, ಪೌತ್ರರನ್ನೂ ಹಿಂಸಿಸಬೇಡ. **ತೋಕಂ** ಎಂಬ ಶಬ್ದವು ಇದನ್ನು ಮಾಡು, ಪ್ರೇರಿಸು, ಎಂಬರ್ಥವುಳ್ಳ **ತುದ್** (ನೂಕು, ತಳ್ಳು, ಪ್ರೇರಿಸು) ಎಂಬ ಧಾತುವಿನಿಂದ ನಿಷ್ಪನ್ನವಾಗಿ ಪುತ್ರನು ಎಂಬರ್ಥವುಳ್ಳದ್ದಾಗಿದೆ ತಂದೆಯಿಂದ ಇಂತಹ ಕೆಲಸವನ್ನು ಮಾಡು ಎಂದು ಪ್ರೇರಿತನಾಗುವ ಪುತ್ರನು ಎಂದರ್ಥವು **ತನಯ** ಶಬ್ದವು **ತನು ವಿಸ್ತಾರೇ**—ವೃದ್ಧಿಪಡಿಸು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿ ಪೌತ್ರನು ಅಥವಾ ಮೊಮ್ಮಗನು ಎಂದರ್ಥವುಳ್ಳದ್ದಾಗಿರುವುದು ಕುಲವನ್ನು ವಿಸ್ತಾರಮಾಡಿ ಅಭಿವೃದ್ಧಿಪಡಿಸುವವನು ಎಂದಭಿಪ್ರಾಯವು.

ಅಗ್ನಿಯೂ ಕಲವು ಸಂದರ್ಭಗಳಲ್ಲಿ ರುದ್ರನೆಂದು ಕರೆಯಲ್ಪಡುವನು. ಈ ವಿಷಯದಲ್ಲಿ—**ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ । ಸ್ತೋಮಂ ರುದ್ರಾಯ ದೃಶೀಕಂ** ಎಂಬ ಋಕ್ಕೇ ಉದಾಹರಣೆಯಾಗಿರುವುದು ಎಂದು ನಿರುಕ್ತದ ಮುಖ್ಯಾಭಿಪ್ರಾಯವು.

ಸಂಹಿತಾಪಾಠಃ

ಮಾ ನೋ ವಧೀ ರುದ್ರ ಮಾ ಪರಾ ದಾ ಮಾ ತೇ ಭೂಮ ಪ್ರಸಿತೌ ಹೀಳಿ-
ತಸ್ಯ ।
ಆ ನೋ ಭಜ ಬರ್ಹಿಷಿ ಜೀವಶಂಸೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

ಪದಪಾಠಃ

**ಮಾ । ನಃ । ವಧೀಃ । ರುದ್ರ । ಮಾ । ಪರಾ । ದಾಃ । ಮಾ । ತೇ । ಭೂಮ । ಪ್ರಽಸಿತೌ । ಹೀಳಿತಸ್ಯ ।**

**ಆ । ನಃ । ಭಜ । ಬರ್ಹಿಷಿ । ಜೀವಽಶಂಸೇ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೪ ॥**

ಸಾಯಣಭಾಷ್ಯಂ

**ಹೇ ರುದ್ರ ತ್ವಂ ನೋಽಸ್ಮಾನ್ಮಾ ವಧೀಃ । ಮಾ ಹಿಂಸೀಃ । ತಥಾ ಮಾ ಪರಾ ದಾಃ । ಮಾ ಚ ತ್ಯಾಕ್ಷೀಃ । ಅಪಿ ಚ ಹೀಳಿತಸ್ಯ ಕ್ರುದ್ಧಸ್ಯ ತೇ ತವ ಪ್ರಸಿತೌ ಪ್ರಕರ್ಷೇಣ ಬಂಧನೇ ವಯಂ ಚ ಮಾ ಭೂಮ । ಕಿಂಚ ಜೀವಶಂಸೇ ಜೀವೈರಾಶಂಸನೀಯೇ ಬರ್ಹಿಷಿ ಯಜ್ಞೇ ನೋಽಸ್ಮಾನಾ ಭಜ । ಭಾಗಿನಃ ಕುರು । ಹೇ ರುದ್ರಪ್ರಮುಖಾ ದೇವಾಃ ಯೂಯಂ ನೋಽಸ್ಮಾನ್ಕಲ್ಯಾಣೈಃ ಸರ್ವದಾ ಪಾಲಯತ ॥**

ಪ್ರತಿಪದಾರ್ಥ

ರುದ್ರ—ಎಲೈ ರುದ್ರನೇ । **ನಃ**—ನಮ್ಮನ್ನು । **ಮಾ ವಧೀಃ**—ಹಿಂಸಿಸಬೇಡ. । **ಮಾ ಪರಾ ದಾಃ**—ಶತ್ರುಗಳಿಗೆ ಬಿಟ್ಟುಕೊಡಬೇಡ, । **ಹೀಳಿತಸ್ಯ**—ಕ್ರುದ್ಧನಾದ । **ತೇ**—ನಿನ್ನ । **ಪ್ರಸಿತೌ**—ಬಂಧನದಲ್ಲಿ । **ಮಾ ಭೂಮ**—ನಾವು ಸಿಕ್ಕದಿರುವಂತಾಗಲಿ. । **ಜೀವಶಂಸೇ**—ಬದುಕಿಗೆ ಅಪೇಕ್ಷಿತವಾದ । **ಬರ್ಹಿಷಿ**—ಯಾಗದಲ್ಲಿ । **ನಃ**—ನಮ್ಮನ್ನು । **ಆ ಭಜ**—ಭಾಗಿಗಳಾಗುವಂತೆ ಮಾಡು. (ಎಲೈ ದೇವತೆಗಳೇ) **ಯೂಯಂ**—ನೀವು । **ನಃ**—ನಮ್ಮನ್ನು **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ. ।

ಭಾವಾರ್ಥ

ಎಲೈ ರುದ್ರನೇ, ನಮ್ಮನ್ನು ಹಿಂಸಿಸಬೇಡ ನಮ್ಮನ್ನು ಶತ್ರುಗಳಿಗೆ ಬಿಟ್ಟುಕೊಡಬೇಡ. ಕ್ರುದ್ಧನಾದ ನಿನ್ನ ಬಂಧನದಲ್ಲಿ ನಾವು ಸಿಕ್ಕದಿರುವಂತಾಗಲಿ ಮನುಷ್ಯರಿಗೆ ಅಪೇಕ್ಷಿತವೂ, ಮಾನವರಿಂದ ಆಶಂಸಿತವೂ ಆದ ಯಜ್ಞದಲ್ಲಿ ನಾವೂ ಭಾಗಿಗಳಾಗುವಂತೆ ಮಾಡು. ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

Harm us not, Rudra abandon us not let us not fall under the bondage of you when displeased make us partakers of the life-promoting sacrifice : and do you, (gods), ever cherish us with blessings.

---

## ನಲವತ್ತೇಳನೆಯ ಸೂಕ್ತವು

ಸಾಯಣಭಾಷ್ಯಂ

**ಆಪೋ ಯಂ ವ ಇತಿ ಚತುರ್ಋಚಂ ಚತುರ್ದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಬ್ದೇವತಾಕಂ । ಆಪೋ ಯಮಾಪಮಿತ್ಯನುಕ್ರಾಂತಂ ಚ ॥ ಗತೋ ವಿನಿಯೋಗಃ ॥**

**ಅನುವಾದವು—ಆಪೋ ಯಂ ವಃ**—ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು ಇದರಲ್ಲಿ ನಾಲ್ಕು ಋಕ್ಕುಗಳಿರುವವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಆಪಃ (ಉದಕಗಳು) ದೇವತೆಯು, ತ್ರಿಷ್ಟುಪ್ಛಂದಸ್ಸು ಅನುಕ್ರಮಣಿಕೆಯಲ್ಲಿ—**ಆಪೋ ಯಮಾಪಂ** ಎಂದು ಹೇಳಿರುವುದು. **ವಿನಿಯೋಗ**ವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೪೭

ಮಂಡಲ—೭ ॥ ಅನುವಾಕ—೩ ॥ ಸೂಕ್ತ —೪೭ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
ಋಷಿಃ—ವಸಿಷ್ಠಃ ॥
ದೇವತಾ— ಆಪಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ಆಪೋ ಯಂ ವಃ ಪ್ರಥಮಂ ದೇವಯಂತ ಇಂದ್ರಪಾನಮೂರ್ಮಿಮಕೃಣ್ವತೇಳಃ ।**

**ತಂ ವೋ ವಯಂ ಶುಚಿಮರಿಪ್ರಮದ್ಯ ಘೃತಪ್ರುಷಂ ಮಧುಮಂತಂ ವನೇಮ**

ಪದಪಾಠಃ

ಆಪಃ । ಯಂ । ವಃ । ಪ್ರಥಮಂ । ದೇವಽಯಂತಃ । ಇಂದ್ರಽಪಾನಂ । ಊರ್ಮಿಂ । ಅಕೃಣ್ವತ । ಇಳಃ ।

ತಂ । ವಃ । ವಯಂ । ಶುಚಿಂ । ಅರಿಪ್ರಂ । ಅದ್ಯ । ಘೃತಽಪ್ರುಷಂ । ಮಧುಽಮಂತಂ । ವನೇಮ ॥ ೧ ॥

ಸಾಯಣಭಾಷ್ಯಂ

ದೇವಯಂತೋ ದೇವಾನಿಚ್ಛಂತೋಽಧ್ವರ್ಯವೋ ಹೇ ಆಪೋ ಹೇ ಅಬ್ದೇವತಾಃ ವೋ ಯುಷ್ಮಾಕಂ ಕಾರ್ಯಭೂತಮಿಂದ್ರಪಾನಮಿಂದ್ರೇಣ ಪಾತವ್ಯಮಿಳ ಇಳಾಯಾ ಭೂಮ್ಯಾಃ ಸಂಭೂತಂ ಯಮೂರ್ಮಿಂ ಸೋಮಾಖ್ಯಂ ಯಂ ರಸಂ ಪ್ರಥಮಂ ಪುರಾಕೃಣ್ವತ ಅಭಿಷವಣವಚನಾದಿಭಿಃ ಸಮಸ್ಕುರ್ವತ ಅದ್ಯೇದಾನೀಂ ವಯಮಪಿ ವೋ ಯುಷ್ಮದೀಯಂ ತಮೂರ್ಮಿಂ ವನೇಮ । ಸಂಭಜೇಮಹಿ । ಕೀದೃಶಂ । ಶುಚಿಂ ಶುದ್ಧಮರಿಪ್ರಂ ಪಾಪರಹಿತಂ ಘೃತಪ್ರುಷಂ ವೃಷ್ಟಿಲಕ್ಷಣಮುದಕಂ ಸಿಂಚಂತಂ ಮಧುಮಂತಂ ಮಧುರರಸೋಪೇತಂ । ಏವಂಭೂತಂ ತಂ ವನೇಮೇತಿ ಸಂಬಂಧಃ ॥

ಪ್ರತಿಪದಾರ್ಥ

**ಆಪಃ**—ಎಲೈ ಅಬ್ದೇವತೆಗಳೇ, । **ವಃ**—ನಿಮಗೆ ಸೇರಿದುದೂ । **ಇಂದ್ರಪಾನಂ**-- ಇಂದ್ರನಪಾನಕ್ಕೆ ಯೋಗ್ಯವಾದುದೂ । **ಇಳಃ**—ಪೃಥ್ವಿಯಿಂದ ಉತ್ಪನ್ನವಾದುದೂ ಆದ । **ಯಂ ಊರ್ಮಿಂ**—ಯಾವ ಸೋಮರೂಪದ ರಸವನ್ನು । **ಪ್ರಥಮಂ**—ಮೊದಲು । **ದೇವಯಂತಃ**—ದೇವಪೂಜಾಕಾಂಕ್ಷಿಗಳಾದ ಅಧ್ವರ್ಯುಗಳು । **ಅಕೃಣ್ವತ**—ಅಭಿಷವಾದಿಗಳಿಂದ ಉತ್ಪನ್ನಮಾಡಿದರೋ, । **ತಂ**—ಅಂತಹುದೂ । **ವಃ**—ನಿಮಗೆ ಸಂಬಂಧಿಸಿದುದೂ । **ಶುಚಿಂ**—ಪರಿಶುದ್ಧವಾದುದೂ । **ಅರಿಪ್ರಂ**—ಪಾಪರಹಿತವಾದುದೂ । **ಘೃತಪ್ರುಷಂ**—ವೃಷ್ಟಿಯನ್ನು ಸುರಿಸತಕ್ಕದ್ದೂ । **ಮಧುಮಂತಂ**—ಮಧುರರಸೋಪೇತವಾದುದೂ ಆದ ಸೋಮವನ್ನು । **ಅದ್ಯ**—ಈ ಯಾಗಕಾಲದಲ್ಲಿ । **ವಯಂ**—ನಾವೂ ಸಹ । **ವನೇಮ**—ಆರಾಧಿಸುವಂತಾಗಲಿ. (ಹೊಂದುವಂತಾಗಲಿ)

ಭಾವಾರ್ಥ

ಎಲೈ ಅಬ್ದೇವತೆಗಳೇ, ನಿಮಗೆ ಸೇರಿದುದೂ, ಇಂದ್ರಪಾನಕ್ಕೆ ಯೋಗ್ಯವಾದುದೂ, ಪೃಥ್ವಿಯಿಂದ ಉತ್ಪನ್ನವಾದುದೂ ಆದ ಯಾವ ಸೋಮರೂಪದ ರಸವನ್ನು ಮೊದಲು ದೇವಪೂಜಾಕಾಂಕ್ಷಿಗಳಾದ ಅಧ್ವರ್ಯುಗಳು ಅಭಿಷವಾದಿಗಳಿಂದ ಉತ್ಪನ್ನಮಾಡಿದರೋ ಅಂತಹುದೂ, ನಿಮಗೆ ಸಂಬಂಧಿಸಿದುದೂ ಪರಿಶುದ್ಧವಾದುದೂ, ಪಾಪರಹಿತವಾದುದೂ ವೃಷ್ಟಿಯನ್ನು ಸುರಿಸತಕ್ಕದ್ದೂ, ಮಧುರರಸೋಪೇತವಾದುದೂ ಆದ ಸೋಮವನ್ನು ಈ ಯಾಗಕಾಲದಲ್ಲಿ ನಾವೂ ಆರಾಧಿಸುವಂತಾಗಲಿ. (ಪಾನಮಾಡುವಂತಾಗಲಿ)

English Translation

We solicit from you, waters, to-day, that pure, faultless, rain-shedding, sweet essence of the earth, which the devout have first consecreated as the beverage of Indra.

ಸಂಹಿತಾಪಾಠಃ

ತಮೂರ್ಮಿಮಾಪೋ ಮಧುಮತ್ತಮಂ ವೋಽಪಾಂ ನಪಾದವತ್ವಾಶುಹೇಮಾ ।

ಯಸ್ಮಿನ್ನಿಂದ್ರೋ ವಸುಭಿರ್ಮಾದಯಾತೇ ತಮಶ್ಯಾಮ ದೇವಯಂತೋ ವೋ ಅದ್ಯ ॥ ೨ ॥

ಪದಪಾಠಃ

ತಂ । ಊರ್ಮಿಂ । ಆಪಃ । ಮಧುಮತ್ಽತಮಂ । ವಃ । ಅಪಾಂ । ನಪಾತ್ । ಅವತು । ಆಶುಽಹೇಮಾ ॥

ಯಸ್ಮಿನ್ । ಇಂದ್ರಃ । ವಸುಽಭಿಃ । ಮಾದಯಾತೇ । ತಂ । ಅಶ್ಯಾಮ । ದೇವಽಯಂತಃ । ವಃ । ಅದ್ಯ ॥

ಸಾಯಣಭಾಷ್ಯಂ

ಹೇ ಆಪ ಏತತ್ಸಂಜ್ಞಕಾ ದೇವಾಃ ವೋ ಯುಷ್ಮದೀಯಂ ಮಧುಮತ್ತಮಂ ರಸವತ್ತಮಂ ತಮೂರ್ಮಿಂ ಪ್ರಸಿದ್ಧಂ ಸೋಮಾಖ್ಯಂ ರಸಮಾಶುಹೇಮಾ ಶೀಘ್ರಗತಿರಪಾಂ ನಪಾದೇತದಾಖ್ಯೋ ದೇವೋಽವತು । ಪಾಲಯತು । ಇಂದ್ರೋ ಯಸ್ಮಿನ್ನೂರ್ಮೌ ವಸುಭಿರ್ವಾಸಕೈರ್ದೇವೈಃ ಸಹ ಮಾದಯಾತೇ ಮಾದ್ಯೇತ್ ಅದ್ಯಾಸ್ಮಿನ್ದಿನೇ ದೇವಯಂತೋ ದೇವಕಾಮಾ ವಯಂ ವೋ ಯುಷ್ಮದೀಯಂ ತಮೂರ್ಮಿಮಶ್ಯಾಮ । ಪ್ರಾಪ್ನುಯಾಮ ॥

ಪ್ರತಿಪದಾರ್ಥ

**ಆಪಃ**—ಎಲೈ ಅಬ್ದೇವತೆಗಳೇ, । **ವಃ**—ನಿಮ್ಮ ಸಂಬಂಧಿಯಾದುದೂ, । **ತಂ**—ಪ್ರಸಿದ್ಧವಾದುದೂ । **ಮಧುಮತ್ತಮಂ**—ಅತ್ಯಂತ ರುಚಿಕರವಾದುದೂ ಆದ । **ಊರ್ಮಿಂ**—ಸೋಮರೂಪವಾದ ರಸವನ್ನು । **ಆಶುಹೇಮಾ**—ಶೀಘ್ರಗಾಮಿಯಾದವನೂ । **ಅಪಾಂ ನಪಾತ್**—ಅಪಾಂನಪಾತ್ಸಂಜ್ಞಕನೂ ಆದ ದೇವನು । **ಅವತು**—ರಕ್ಷಿಸಲಿ. । **ಯಸ್ಮಿನ್**—ಯಾವ ಈ ಸೋಮರಸದಲ್ಲಿ । **ಇಂದ್ರಃ**—ಇಂದ್ರನು । **ವಸುಭಿಃ**—ವಸುಸಂಜ್ಞಕರಾದ ದೇವತೆಗಳೊಡನೆ ಕೂಡಿಕೊಂಡು । **ಮಾದಯಾತೇ**—ಹರ್ಷವನ್ನು ಹೊಂದುವನೋ ಅಂತಹುದೂ । **ವಃ**—ನಿಮ್ಮ ಸಂಬಂಧಿಯಾದುದೂ ಆದ । **ತಂ**—ಅದೇ ರಸವನ್ನು । **ಅದ್ಯ**—ಈ ಯಾಗದಿನದಲ್ಲಿ । **ದೇವಯಂತಃ**—ದೇವಪೂಜಾಕಾಂಕ್ಷಿಗಳಾದ ನಾವೂ ಸಹ । **ಅಶ್ಯಾಮ**—ಹೊಂದುವಂತಾಗಲಿ

ಭಾವಾರ್ಥ

ಎಲೈ ಅಬ್ದೇವತೆಗಳೇ, ನಿಮ್ಮ ಸಂಬಂಧಿಯಾದುದೂ, ಪ್ರಸಿದ್ಧವಾದುದೂ, ಅತ್ಯಂತ ರುಚಿಕರವಾದುದೂ ಆದ ಸೋಮರೂಪದ ರಸವನ್ನು ಶೀಘ್ರಗಾಮಿಯೂ, ಅಪಾಂನಪಾತ್ಸಂಜ್ಞಕನೂ ಆದ ದೇವನು ರಕ್ಷಿಸಲಿ ಯಾವ ಈ ಸೋಮರಸದಲ್ಲಿ ಇಂದ್ರನು ವಸುಸಂಜ್ಞಕರಾದ ದೇವತೆಗಳೊಡನೆ ಕೂಡಿಕೊಂಡು ಹರ್ಷವನ್ನು ಹೊಂದುವನೋ ಅಂತಹುದೂ ನಿಮ್ಮ ಸಂಬಂಧಿಯಾದುದೂ ಆದ ಅದೇ ರಸವನ್ನು ಈ ಯಾಗದಿನದಲ್ಲಿ ದೇವಪೂಜಾಕಾಂಕ್ಷಿಗಳಾದ ನಾವೂಸಹ ಹೊಂದುವಂತಾಗಲಿ.

## English Translation

May the swift-moving grandson of the waters protect, waters, your most sweet essence wherewith may Indra and the Vasus be delighted : and may we, devoted to the gods, partake (of it).

### ವಿಶೇಷವಿಷಯಗಳು

**ಅಪಾಂ ನಪಾತ್**— ಈ ಶಬ್ದಕ್ಕೆ ಯಾಸ್ಕರು— **ಅಪಾಂ ನಪಾತ್ತನೂನಪಾತ್ರಾ ವ್ಯಾಖ್ಯಾತಃ** (ನಿ ೧೦-೧೮) **ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ ನಿರ್ಣತತಮಾ ಭವತಿ** (ನಿ ೮-೬) **ಅಪಾಂ ನಪಾತ್** ಎಂಬ ಶಬ್ದದ ನಿಷ್ಪತ್ತಿಯನ್ನು **ತನೂನಪಾತ್** ಎಂಬ ಶಬ್ದವನ್ನು ವ್ಯಾಖ್ಯಾನಮಾಡುವ ಸಂದರ್ಭದಲ್ಲಿ ವಿವರಿಸಲಾಗಿದೆ ಇಲ್ಲಿ ಅಪಾಂ ನಪಾತ್ ಎಂಬ ಎರಡು ಪ್ರತ್ಯೇಕಪದಗಳು ಸೇರಿ ಅಪಾಂನಪಾತ್ ಎಂಬ ಶಬ್ದವಾಗಿದೆ **ಅಪಾಂ** ಎಂದರೆ ಉದಕಗಳ ಎಂದರ್ಥವು. ನಪಾತ್ ಎಂದರೆ ಪುತ್ರನ ಅನಂತರ ಹುಟ್ಟುವ ಸಂತತಿಗೆ ಎಂದರೆ ಪೌತ್ರ ಅಥವಾ ಮೊಮ್ಮಗನಿಗೆ ಹೆಸರು ಉದಕಗಳ ಮೊಮ್ಮಗನು ಎಂದು ಅಭಿಪ್ರಾಯವು. ಈ ಶಬ್ದವು ಸಾಧಾರಣವಾಗಿ ಅಗ್ನಿಯನ್ನು ಉದ್ದೇಶಿಸಿ ಹೇಳಲ್ಪಡುವುದು ಹೇಗೆಂದರೆ—

**ಅಪೋಽತ್ರ ತನ್ನ ಉಚ್ಯಂತೇ । ತತಾ ಅಂತರಿಕ್ಷೇ ತಾಭ್ಯ ಓಷಧಿವನಸ್ಪತಯೋ ಜಾಯಂತೆ ಓಷಧಿವನಸ್ಪತಿಭ್ಯ ಏಷ ಜಾಯತೇ ॥**

(ನಿ ೮-೬)

ಉದಕಗಳಿಂದ ಓಷಧಿವನಸ್ಪತಿಗಳು (ವೃಕ್ಷಾದಿಗಳು) ಉತ್ಪತ್ತಿಯಾಗುತ್ತದೆ ಓಷಧಿವನಸ್ಪತಿಗಳಿಂದ (ವೃಕ್ಷ, ಮರ, ಅರಣಿ) ಅಗ್ನಿಯು ಉತ್ಪತ್ತಿಯಾಗುತ್ತದೆ ಇಲ್ಲಿ ವನಸ್ಪತಿಸಂಬಂಧವಾದ ಎಂದರೆ ಮರದ ಅರಣಿಗಳಲ್ಲಿ ಕಡೆದು ಅಗ್ನಿಯನ್ನು ಉತ್ಪತ್ತಿಮಾಡುವುದು ಯಜ್ಞಾದಿಗಳಲ್ಲಿ ರೂಢಿಯು. ಆದ್ದರಿಂದ ಅಗ್ನಿಯು ಓಷಧಿವನಸ್ಪತಿಗಳಲ್ಲಿ ಉತ್ಪನ್ನನಾಗುವನೆಂದು ಹೇಳಿದೆ ಈರೀತಿ ಉದಕಗಳಿಂದ ವನಸ್ಪತಿ (ವೃಕ್ಷ)ಯೂ ವನಸ್ಪತಿಯಿಂದ ಅಗ್ನಿಯೂ ಉತ್ಪನ್ನವಾಗುವುದರಿಂದ ಅಗ್ನಿಯು ಉದಕಗಳಿಗೆ ಪೌತ್ರ ಅಥವಾ ಮೊಮ್ಮಗನೆಂದಾಯಿತು ಋಗ್ವೇದದಲ್ಲಿ ಅಪಾಂನಪಾತ್ ಎಂಬುದು ಅಗ್ನಿಯ ರೂಪವಿಶೇಷವೆಂದು ಹೇಳಲ್ಪಡುವ ಒಂದು ಪ್ರತ್ಯೇಕದೇವತೆಯೆಂದೇ ಪರಿಗಣಿಸಲ್ಪಟ್ಟಿರುವುದು

ಈ ದೇವತೆಯ ವಿಷಯವಾದ ಒಂದು ಪ್ರತ್ಯೇಕಸೂಕ್ತವೂ (೨-೩೫) ಪ್ರತ್ಯೇಕ ಎರಡು ಋಕ್ಕುಗಳೂ (ಋ. ಸಂ. ೧೦-೩೦-೩, ೪) ಋಗ್ವೇದದಲ್ಲಿವೆ. ಸುಮಾರು ಮೂವತ್ತುಸಲ ಈ ದೇವತೆಯ ಹೆಸರು ಪಠಿತವಾಗಿದೆ

ಈ ದೇವತೆಯ ವಿಷಯವಾಗಿ ಕೆಲವು ವಿಷಯಗಳನ್ನು ತಿಳಿಸುವುದು ಅವಶ್ಯಕವಾಗಿದೆ ತೇಜಸ್ವಿಯಾದ ಅಪಾಂನಪಾದ್ದೇವತೆಯ ಸುತ್ತಲೂ ನೀರು ನಿಂತಿತ್ತು ಯುವಕನಾದ ಇವನನ್ನು ನೀರು ಸುತ್ತುಗಟ್ಟಿರುತ್ತದೆ ಶ್ರೇಷ್ಠನಾದ ಇವನಿಗೆ ಮೂವರು ದೇವತಾಸ್ತ್ರೀಯರು ಆಹಾರವನ್ನು ಕೊಡಲಿಚ್ಛಿಸುತ್ತಾರೆ ಆ ಮಾತೃಗಳ ಸ್ತನ್ಯವನ್ನು ಅವನು ಪಾನಮಾಡುತ್ತಾನೆ. (೨-೩೫-೩, ೫) ವೃಷಭರೂಪನಾದ ಅವನು ಅವರಲ್ಲಿ ಗರ್ಭವನ್ನು ಸ್ಥಾಪಿಸಿದನು ಶಿಶುರೂಪನಾದ ಅವನು ಅವರ ಸ್ತನ್ಯಪಾನಮಾಡುತ್ತಾನೆ ಅವರು ಅವನನ್ನು ಚುಂಬಿಸುತ್ತಾರೆ ಇವನು ನೀರಿನಲ್ಲಿಯೇ ಶ್ರಮರಹಿತನಾಗಿ ಪ್ರಕಾಶಿಸುತ್ತಾನೆ ಕಾಷ್ಠಾದಿ(ಸೌದೆ)ಗಳ ಸಹಾಯವಿಲ್ಲದೆ ನೀರಿನಲ್ಲಿ ಪ್ರಜ್ವಲಿಸುತ್ತಾನೆ (೧೦-೩೦-೪) ಮಿಂಚನ್ನೇ ತನ್ನ ವಸ್ತ್ರವನ್ನಾಗಿ ಧರಿಸುತ್ತಾನೆ. ವೇಗವಾಗಿ ಪ್ರವಹಿಸುವ ಸುವರ್ಣವರ್ಣದ ನೀರು ಅವನನ್ನು ವಹಿಸಿ ಚಕ್ರಾಕಾರವಾಗಿ ತಿರುಗುತ್ತದೆ. (೧-೯೫-೪, ೫) ಇವನ ಶರೀರವು ಸ್ವರ್ಣದಕಾಂತಿಯಿಂದ ಬೆಳಗುತ್ತದೆ ಸ್ವರ್ಣಗರ್ಭದಿಂದ ಜನಿಸಿ ಇವನು ತನ್ನನ್ನು ಪೂಜಿಸುವವರಿಗೆ ಆಹಾರವನ್ನನುಗ್ರಹಿಸುತ್ತಾನೆ ಅತ್ಯನ್ತದೂರದೇಶದಲ್ಲಿದ್ದು ಕಳೆಗುಂದದಂತೆ ಪ್ರಕಾಶಿಸುತ್ತಾನೆ. ವೇಗವಾಗಿ ಹರಿಯುವ ಉದಕಗಳು ತಮ್ಮ ಪುತ್ರನ ಆಹಾರಕ್ಕಾಗಿ ಘೃತವನ್ನು ತೆಗೆದುಕೊಂಡುಬಂದು ವಸ್ತ್ರಗಳನ್ನು ಧರಿಸಿ ಸುತ್ತಲೂ ಹರಿಯುತ್ತವೆ. ಇವನ ಮುಖವು ಬಂಗಾರದ ವರ್ಣದ್ದು ಇವನನ್ನು ಕನ್ಯೆಯರು ಬೆಳಗುವಂತೆ ಮಾಡುತ್ತಾರೆ. ಇವನಿಗೆ ತುಪ್ಪವೇ ಆಹಾರ. ಯಾರ ಗಮನಕ್ಕೂ ಬಾರದ ರೀತಿಯಲ್ಲಿ ಅಭಿವೃದ್ಧಿಹೊಂದುತ್ತಾನೆ. ಅವನ ಮನೆಯಲ್ಲಿ ಒಳ್ಳೆಯಹಾಲನ್ನು ಕರೆಯುವ ಗೋವು ಒಂದಿದೆ. ಮನೋವೇಗವುಳ್ಳ

ಅಶ್ವಗಳು ಇವನನ್ನು ವಹಿಸುತ್ತವೆ. ಇವನಿಗೂ ನದಿಗಳಿಗೂ ಸಂಬಂಧವಿದೆ. ಇವನೇ ಎಲ್ಲಾ ಪ್ರಾಣಿಗಳನ್ನೂ ಜನಿಸುವಂತೆ ಮಾಡಿದವನು. ಆ ಪ್ರಾಣಿಗಳೆಲ್ಲವೂ ಅವನ ಅಂಶಗಳು. ಈ ದೇವತಾಕವಾದ ಸೂಕ್ತದ ಕೊನೆಯ ಋಕ್ಕಿನಲ್ಲಿ ಇವನೇ ಅಗ್ನಿಯೆಂದು ಹೇಳಿದೆ ಅನೇಕ ಅಗ್ನಿದೇವತಾಕವಾದ ಸೂಕ್ತಗಳಲ್ಲಿಯೂ ಅಗ್ನಿಯನ್ನು ಅಪಾಂನಪಾತ್ ಎಂದು ಕರೆದಿದೆ (ವಾ ಸಂ. ೮-೨೪)

ಅಪಾಂನಪಾದ್ದೇವತೆಯ ಹೆಸರು ಅನೇಕ ದೇವತೆಗಳ ಜತೆಯಲ್ಲಿ ಪಠಿತವಾಗಿದೆ ಅಜಏಕಪಾತ್ (೨-೩೧-೬, ೭-೩೫-೧೩) ಅಹಿರ್ಬುಧ್ನ್ಯ (೧-೧೮೬-೫, ೨-೩೧-೬, ೭-೩೫-೧೩) ಸವಿತೃ (೨ ೩೧ ೬, ೬-೫೦ ೧೩) ಎಂಬ ದೇವತೆಗಳೊಡನೆ ಸ್ತುತನಾಗಿದಾನೆ. ಸವಿತೃವೂ ಅಗ್ನಿಯ ಒಂದು ರೂಪವಿಶೇಷವಾದ್ದರಿಂದ ಆ ಸವಿತೃವನ್ನು ಒಂದುಕಡೆ (೧ ೨೨-೬) ಅಪಾಂನಪಾತ್ ಶಬ್ದದಿಂದ ಕರೆಯಲಾಗಿದೆ ಬಂಗಾರದ ಬಣ್ಣದವನೂ, ಮಿಂಚಿನ ಉಡುಪುಳ್ಳವನೂ, ಅತ್ಯುನ್ನತ ಪ್ರದೇಶದಲ್ಲಿ ವಾಸಿಸುವವನೂ, ಗುಪ್ತರೀತಿಯಲ್ಲಿ ಬಳೆಯುವವನೂ, [illegible] ವನೂ ನೀರಿನ [illegible], ಭೂಮಿಗೆ ಇಳಿದುಬರುವವನೂ, ಅಗ್ನಿಗೆ ಸಮನಾದ [illegible] ಅಪಾಂನಪಾದ್ದೇವತೆಯು ಮೇಘಗಳಲ್ಲಿ ಅಡಗಿರುವ ಮಿಂಚಿನರೂಪನಾದ ಅಗ್ನಿಯೇ ಇರಬಹುದು ಅಗ್ನಿಯು ಅಪಾಂನಪಾತ್ ಎಂದೂ ನೀರಿನ ಗರ್ಭನೆಂದೂ (ಅಪಾಂ ಗರ್ಭಃ) ಕರೆಯಲ್ಪಟ್ಟಿದಾನೆ (೭ ೯-೩, ೧೦ ೭೦ ೩) ಆ ರೂಪದಲ್ಲಿಯೇ ಮನುಷ್ಯರ ಗೃಹಗಳಲ್ಲಿ ಸ್ಥಾಪಿತನಾಗಿದಾನೆ (೩-೫-೩) [illegible] ಅವನ ವಾಸ (೮-೪೩ ೯) ಸಸ್ಯಗಳ [illegible] ನೀರಿನ ಗರ್ಭರೂಪನಾದ ಅಗ್ನಿಯು ಅರಣಿಗಳಿಂದ ಉತ್ಪನ್ನನಾಗುತ್ತಾನೆ (೩ ೧-೧೩) [illegible] ಸೂನುಂ ಪರ್ವತಪುತ್ರನೆಂದು (೧೦ ೨೦-೭) ಹೇಳಿರುವುದರಿಂದ ಪರ್ವತಾಕಾರವಾದ ಮೇಘದಿಂದ [illegible]ವಾದ ವಿದ್ಯುತ್ತೇ ಪರ್ವತಪುತ್ರನಿರಬೇಕು ಅಗ್ನಿಯ ತೃತೀಯರೂಪವು, ನೀರಿನಲ್ಲಿ, ಸಾಗರದಲ್ಲಿ, ಆಕಾಶದ ಸ್ತನದಲ್ಲಿ, ಅಥವಾ ನೀರಿನ ಮಡಲಿನಲ್ಲಿ ಪ್ರಜ್ವಲಿತವಾಗುತ್ತದೆ (೧೦-೪೫-೧, ೨, ೩) ಎಂಬ ವರ್ಣನೆಗಳಿಂದ ಇಲ್ಲೆಲ್ಲಾ ಅಪಾಂನಪಾತ್ ದೇವತೆಯೇ ನಿರ್ದಿಷ್ಟವಾಗಿರಬೇಕು. ಈ ದೇವತೆಯು ನೀರಿನ ದೇವತೆ, ನೀರಿನಲ್ಲಿ ಹುಟ್ಟಿದ ಅಗ್ನಿ, ಸೂರ್ಯ, ವಿದ್ಯುತ್ ಇವೇ ಮೊದಲಾಗಿ ನಾನಾರೀತಿಯ ಅಭಿಪ್ರಾಯಕ್ಕೆ ಎಡೆಗೊಟ್ಟಿವೆ.

ಸಂಹಿತಾಪಾಠಃ

ಶತಪವಿತ್ರಾಃ ಸ್ವಧಯಾ ಮದಂತೀರ್ದೇವೀರ್ದೇವಾನಾಮಪಿ ಯಂತಿ ಪಾಥಃ।
ತಾ ಇಂದ್ರಸ್ಯ ನ ಮಿನಂತಿ ವ್ರತಾನಿ ಸಿಂಧುಭ್ಯೋ ಹವ್ಯಂ ಘೃತವಜ್ಜು-
ಹೋತ ॥ ೪ ॥

ಪದಪಾಠಃ

ಶತಽಪವಿತ್ರಾಃ । ಸ್ವಧಯಾ । ಮದಂತೀಃ । ದೇವೀಃ । ದೇವಾನಾಂ । ಅಪಿ । ಯಂತಿ । ಪಾಥಃ ।
ತಾಃ । ಇಂದ್ರಸ್ಯ । ನ । ಮಿನಂತಿ । ವ್ರತಾನಿ । ಸಿಂಧುಽಭ್ಯಃ । ಹವ್ಯಂ । ಘೃತಽವತ್ । ಜುಹೋತ ॥ ೪ ॥

ಸಾಯಣಭಾಷ್ಯಂ

ಶತಪವಿತ್ರಾಃ ಶತಂ ಬಹೂನಿ ಪವಿತ್ರಾಣಿ ಪಾವನಾನಿ ರೂಪಾಣಿ ಯಾಸಾಂ ತಾಃ ಸ್ವಧಯಾ ಸ್ವ-ಕಾರ್ಯಭೂತೇನಾನ್ನೇನ ಮದಂತೀರ್ಜನಾನ್ಮಾದಯಂತ್ಯೋ ದೇವೀರ್ದೇವ್ಯೋ ದ್ಯೋತಮಾನಾ

**ಆಪೋ ದೇವಾನಾಮಿಂದ್ರಾದೀನಾಂ ಪಾಥಃ ಸ್ಥಾನಮಪಿ ಯಂತಿ । ಪ್ರವಿಶಂತಿ । ತಾಸ್ತಾದೃಶ್ಯ ಆಪ ಇಂದ್ರಸ್ಯ ಪ್ರೀಣನಾನಿ ವ್ರತಾನಿ ಯಜ್ಞಾದೀನಿ ಕರ್ಮಾಣಿ ನ ಮಿನಂತಿ । ನ ಹಿಂಸಂತಿ ಉತ್ಪಾದಯಂತೀತ್ಯರ್ಥಃ । ಹೇ ಅಧ್ವರ್ಯವಃ ಯೂಯಂ ಸಿಂಧುಭ್ಯಸ್ತಾಭ್ಯೋಽದ್ಭ್ಯಃ ಘೃತವದುಪಸ್ತರಣಾಭಿಘಾರಣಲಕ್ಷಣಾಜ್ಯಯುಕ್ತಂ ಹವ್ಯಂ ಪುರೋಡಾಶಾದಿಕಂ ಹವಿರ್ಜುಹೋತ । ಜುಹುತ ॥**

ಪ್ರತಿಪದಾರ್ಥ

**ಶತಪವಿತ್ರಾಃ** –ಅನೇಕ ವಿಧವಾದ ಶುದ್ಧಿಕಾರಕವಾದ ರೂಪವುಳ್ಳವೂ, । **ಸ್ವಧಯಾ**—ತಮ್ಮಿಂದಲೇ ಉತ್ಪನ್ನವಾದ ಅನ್ನದಿಂದ । **ಮದಂತೀಃ**—ಹರ್ಷವನ್ನು ಹೊಂದುವುವೂ । **ದೇವೀಃ**—ಪ್ರಕಾಶಯುತವೂ ಆದ ಉದಕಗಳು । **ದೇವಾನಾಂ**—ಇಂದ್ರಾದಿ ದೇವತೆಗಳ । **ಪಾಥಃ**—ಸ್ಥಾನವನ್ನು । **ಅಪಿ ಯಂತಿ**—ಪ್ರವೇಶಿಸುತ್ತವೆ. । **ತಾಃ**—ಅದೇ ಉದಕಗಳು । **ಇಂದ್ರಸ್ಯ**—ಇಂದ್ರನಿಗೆ ತೃಪ್ತಿಕರವಾದ । **ವ್ರತಾನಿ**—ಯಜ್ಞಾದಿ ಕರ್ಮಗಳನ್ನು । **ನ ಮಿನಂತಿ**- ಹಿಂಸಿಸುವುದಿಲ್ಲ । (ಎಲೈ ಅಧ್ವರ್ಯುಗಳೇ) **ಸಿಂಧುಭ್ಯಃ**—ಪ್ರವಾಹಾತ್ಮಕಗಳಾದ ಅದೇ ಉದಕಗಳಿಗೆ । **ಘೃತವತ್**—ಆಜ್ಯಪೂರಿತವಾದ । **ಹವ್ಯಂ**—ಹವಿಸ್ಸನ್ನು । **ಜುಹೋತ**—ಆಹುತಿರೂಪದಲ್ಲಿ ಅರ್ಪಿಸಿರಿ.

ಭಾವಾರ್ಥ

ಶುದ್ಧಿಕಾರಕವಾದ ಅನೇಕರೂಪವುಳ್ಳವೂ, ತಮ್ಮಿಂದಲೇ ಉತ್ಪನ್ನವಾದ ಅನ್ನದಿಂದ ಹರ್ಷವನ್ನು ಹೊಂದುವುವೂ, ಪ್ರಕಾಶಯುತವೂ ಆದ ಉದಕಗಳು ಇಂದ್ರಾದಿದೇವತೆಗಳ ಸ್ಥಾನವನ್ನು ಪ್ರವೇಶಿಸುತ್ತವೆ ಅದೇ ಉದಕಗಳು ಇಂದ್ರನಿಗೆ ತೃಪ್ತಿಕರವಾದ ಯಜ್ಞಾದಿಕರ್ಮಗಳನ್ನು ಹಿಂಸಿಸುವುದಿಲ್ಲ ಎಲೈ ಅಧ್ವರ್ಯುಗಳೇ, ಪ್ರವಾಹಾತ್ಮಕಗಳಾದ ಅದೇ ಉದಕಗಳಿಗೆ ಆಜ್ಯಪೂರಿತವಾದ ಹವಿಸ್ಸನ್ನು ಆಹುತಿರೂಪದಲ್ಲಿ ಅರ್ಪಿಸಿರಿ

English Translation

The divine Waters, the purifiers of many, gratifying men with food, pursue the paths of the gods they impede not the sacred rites of Indra: offer, (priests), the butter-charged oblation to the rivers.

ವಿಶೇಷವಿಷಯಗಳು

**ಶತಪವಿತ್ರಾಃ—ಶತಂ ಬಹೂನಿ ಪವಿತ್ರಾಣಿ ಪಾವನಾನಿ ರೂಪಾಣಿ ಯಾಸಾಂ ತಾಃ** ಬಹುವಿಧವಾದವೂ ಶುದ್ಧಿಕಾರಕವೂ ಆದ ರೂಪಗಳುಳ್ಳ ಉದಕಗಳು ಎಂದು ಭಾಷ್ಯಕಾರರ ವಿವರಣೆಯು. ಪವಿತ್ರಶಬ್ದಕ್ಕೆ ಅನೇಕಾರ್ಥಗಳಿರುವವು. ಅವುಗಳನ್ನು ಯಾಸ್ಕರು ಈರೀತಿ ವಿವರಿಸಿದಾರೆ—

**ಪವಿತ್ರಂ । ಪವಿತ್ರಂ ಪುನಾತೇಃ । ಮಂತ್ರಃ ಪವಿತ್ರಮುಚ್ಯತೇ । ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ ಇತ್ಯಪಿ ನಿಗಮೋ ಭವತಿ ॥**

(ನಿ ೫-೬)

ಪವಿತ್ರಶಬ್ದವು ಶುದ್ಧಿಗೊಳಿಸು ಎಂಬರ್ಥವುಳ್ಳ ಪುನಾತಿಧಾತುವಿನಿಂದ ನಿಷ್ಪನ್ನವಾಗಿದೆ. ಮಂತ್ರವು ಪಠನಮಾಡುವವರನ್ನು ಶುದ್ಧಿಗೊಳಿಸುವುದರಿಂದ ಪವಿತ್ರವೆಂದರೆ ಮಂತ್ರವು ಎಂದರ್ಥವಾಗುವುದು. ಈ ವಿಷಯದಲ್ಲಿ—ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ ಎಂಬ ಶ್ರುತಿವಾಕ್ಯವು ಉದಾಹರಣೆಯಾಗಿರುವುದು ಈ ವಾಕ್ಯದಲ್ಲಿ ಪವಿತ್ರೇಣ ಎಂದರೆ ಮಂತ್ರದಿಂದ ಎಂದರ್ಥವು. ಯಾವ ಮಂತ್ರಪಠನಸಾಮರ್ಥ್ಯದಿಂದ ದೇವತೆಗಳು ತಮ್ಮನ್ನು ಶುದ್ಧರನ್ನಾಗಿ ಮಾಡಿಕೊಳ್ಳುವರೋ ಅಂತಹ ಮಂತ್ರವು ಎಂದು ಈ ವಾಕ್ಯದ ಅಭಿಪ್ರಾಯವು.

ರಶ್ಮಯಃ ಪವಿತ್ರಮುಚ್ಯಂತೇ । ಗಭಸ್ತಿಪೂತೋ ನೃಭರದ್ರಿಭಿಃ ಸುತಃ । ಇತ್ಯಪಿ ನಿಗಮೌ ಭವತಃ ॥

ರಶ್ಮಿಗಳಿಗೂ ಪವಿತ್ರವೆಂದು ಹೆಸರು. ಈ ವಿಷಯದಲ್ಲಿ ಗಭಸ್ತಿಪೂತಃ ಇತ್ಯಾದಿ ಮೇಲೆ ಉಕ್ತವಾಗಿರುವ ಎರಡು ಶ್ರುತಿವಾಕ್ಯಗಳೂ ಉದಾಹರಣೆಯಾಗಿವೆ.

ಆಪಃ ಪವಿತ್ರಮುಚ್ಯಂತೇ । ಶತಪವಿತ್ರಾಃ ಸ್ವಧಯಾ ಮದಂತೀಃ । ಬಹೂದಕಾಃ (ನಿ ೫-೬)

ಪವಿತ್ರಶಬ್ದಕ್ಕೆ ಉದಕಗಳು ಎಂದೂ ಅರ್ಥವಾಗುವುದು. ಶತಪವಿತ್ರಾಃ ಎಂಬ ಪ್ರಕೃತಋಕ್ಕಿನ ವಾಕ್ಯವೇ ಈ ವಿಷಯದಲ್ಲಿ ಶ್ರುತ್ಯುದಾಹರಣೆಯು. ಇಲ್ಲಿ ಶತಪವಿತ್ರಾಃ ಎಂದರೆ ಬಹಳವಾದ ಉದಕಗಳು ಎಂದರ್ಥವು.

ಅಗ್ನಿಃ ಪವಿತ್ರಮುಚ್ಯತೇ । ವಾಯುಃ ಪವಿತ್ರಮುಚ್ಯತೇ । ಸೋಮಃ ಪವಿತ್ರಮುಚ್ಯತೇ । ಸೂರ್ಯಃ ಪವಿತ್ರಮುಚ್ಯತೇ । ಇಂದ್ರಃ ಪವಿತ್ರಮುಚ್ಯತೇ । ಅಗ್ನಿಃ ಪವಿತ್ರಂ ಸ ಮಾ ಪುನಾತು ವಾಯುಃ ಸೋಮಃ ಸೂರ್ಯ ಇಂದ್ರಃ ಪವಿತ್ರಂ ತೇ ಮಾ ಪುನಂತು ಇತ್ಯಪಿ ನಿಗಮೋ ಭವತಿ ॥

ಶುದ್ಧಿಕಾರಕವಾದ ಯಾವ ವಸ್ತುವನ್ನಾಗಲಿ, ದೇವತೆಯನ್ನಾಗಲಿ ಪವಿತ್ರಶಬ್ದದಿಂದ ಕರೆಯುವುದು ರೂಢಿಯು. ಈ ಅರ್ಥದಲ್ಲಿ ಅಗ್ನಿ, ವಾಯು, ಸೋಮ, ಸೂರ್ಯ, ಇಂದ್ರ ಈ ದೇವತೆಗಳೂ ಪವಿತ್ರಶಬ್ದವಾಚ್ಯರು. ಈ ವಿಷಯದಲ್ಲಿ ಮೇಲೆ ಉದಾಹರಿಸಿರುವ ಶ್ರುತಿವಾಕ್ಯವೇ ಉದಾಹರಣೆಯಾಗಿದೆ.

**ದೇವಾನಾಮಪಿ ಯಂತಿ ಪಾಥಃ**— ಈ ಉದಕಗಳು ದೇವತೆಗಳ ಸಂಚಾರಮಾರ್ಗವನ್ನು ಎಂದರೆ ಅಂತರಿಕ್ಷವನ್ನು ಪ್ರವೇಶಿಸುತ್ತವೆ. ಉದಕಗಳು ಅಂತರಿಕ್ಷಕ್ಕೆ ಪ್ರವೇಶಿಸುವುದರಿಂದೇನು ಎಂಬ ಶಂಕೆಯಲ್ಲಿ ವಿವರಣೆಯು. ಅನ್ಯಕವು ಸೂರ್ಯನ ಪ್ರಚಂಡರಶ್ಮಿಗಳಿಂದ ತಪ್ತವಾದ ಸಮುದ್ರಾದಿಜಲಾಶಯಗಳು ಆವಿಯರೂಪದಿಂದ ಮೇಘಗಳಾಗಿ ಪರಿವರ್ತಿತವಾಗುತ್ತವೆ. ಈ ಮೇಘಗಳಿಗೆ ಸ್ಥಾನವು ಅಂತರಿಕ್ಷವೇ ಆಗಿದೆ. ಆದ್ದರಿಂದ ಉದಕಗಳು ಅಂತರಿಕ್ಷವನ್ನು ಪ್ರವೇಶಿಸಿದವು ಎಂದರೆ ಮೇಘರೂಪದಿಂದಿರುವ ಉದಕಗಳು ಅಂತರಿಕ್ಷವನ್ನು ವ್ಯಾಪಿಸಿರುತ್ತವೆ ಎಂದಭಿಪ್ರಾಯವು. ಇದೇ ವಿಷಯವು ಮುಂದಿನ ಋಕ್ಕಿನ **ಯಾಃ ಸೂರ್ಯಃ ರಶ್ಮಿಭಿಃ ತತಾನ** ಎಂಬ ವಾಕ್ಯದಿಂದ ಸಮರ್ಥಿಸಲ್ಪಟ್ಟಿರುವುದು.

ಸಂಹಿತಾಪಾಠಃ

ಯಾಃ ಸೂರ್ಯೋ ರಶ್ಮಿಭಿರಾತತಾನ ಯಾಭ್ಯ ಇಂದ್ರೋ ಅರದದ್ಗಾತುಮೂರ್ಮಿಂ ।
ತೇ ಸಿಂಧವೋ ವರಿವೋ ಧಾತನಾ ನೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೪ ॥

ಪದಪಾಠಃ

ಯಾಃ । ಸೂರ್ಯಃ । ರಶ್ಮಿಽಭಿಃ । ಆಽತತಾನ । ಯಾಭ್ಯಃ । ಇಂದ್ರಃ । ಅರದತ್ । ಗಾತುಂ । ಊರ್ಮಿಂ । ತೇ । ಸಿಂಧವಃ । ವರಿವಃ । ಧಾತನ । ನಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೪ ॥

ಸಾಯಣಭಾಷ್ಯಂ

ಸೂರ್ಯೋ ದೇವೋ ಯಾ ಅಪೋ ರಶ್ಮಿಭಿಃ ಸ್ವಕೀಯೈಃ ಕಿರಣೈರಾತತಾನ ವಿಸ್ತಾರಯತಿ। ಸೂರ್ಯೋ ಹಿ ರಶ್ಮಿಭಿರುದಕಸಾರಮಾದಾಯ ವರ್ಷತೀತ್ಯರ್ಥಃ। ಯಾಭ್ಯೋಽದ್ಭ್ಯಃ ಶ್ಯೋಽರ್ಮಿಂ ॥ ಆರ್ತೇರಿದಂ ರೂಪಂ ॥ ಗಮನಯೋಗ್ಯಂ ಗಾತುಂ ಮೇಘೇಭ್ಯೋ ನಿರ್ಗಮನಸಾಧನಂ ಮಾರ್ಗಮಿಂದ್ರೋಽರದತ್ ವಜ್ರೇಣ ಮೇಘಾಂಸ್ತಾಡಯನ್ಪ್ರಯಚ್ಛತಿ ಹೇ ಸಿಂಧವ ಆಪಃ ತೇ ಯೂಯಂ ನೋಽಸ್ಮಭ್ಯಂ ವರಿವೋ ಧನಂ ಧಾತನ ಧತ್ತ। ಪ್ರಯಚ್ಛತ ॥ ತ ಇತಿ ಸಿಂಧುಶಬ್ದೇನ ಸಮಾನಾಧಿಕರಣತ್ವಾತ್ಪುಲ್ಲಿಂಗತ್ವಂ ॥ ಹೇ ಅಬ್ದೇವತಾಃ ಯೂಯಂ ಸರ್ವದಾ ನೋಽಸ್ಮಾನ್ಕಲ್ಯಾಣೈಃ ಪಾಲಯತ ॥

ಪ್ರತಿಪದಾರ್ಥ

**ಸಿಂಧವಃ**—ಪ್ರವಾಹಾತ್ಮಕಗಳಾದ। **ಯಾಃ**—ಯಾವ ನಿಮ್ಮನ್ನು। **ಸೂರ್ಯಃ**—ಸೂರ್ಯನು। **ರಶ್ಮಿಭಿಃ**—ತನ್ನ ಕಿರಣಗಳಿಂದ। **ಆತತಾನ**—ವಿಸ್ತರಿಸುವಂತೆ ಮಾಡಿದನೋ। **ಯಾಭ್ಯಃ**—ಯಾವ ನಿಮ್ಮ ಮೂಲಕ। **ಇಂದ್ರಃ**—ಇಂದ್ರನು। **ಊರ್ಮಿಂ**—ಗಮನಸಾಧನವಾದುದೂ, **ಗಾತುಂ**—ಮೇಘಗಳಿಗೆ ಸಂಚಾರಯೋಗ್ಯವಾದವಾದುದೂ ಆದ ಮಾರ್ಗವನ್ನು। **ಅರದತ್**—(ವಜ್ರದ ಸಹಾಯ ದಿಂದ) ನಿರ್ಮಿಸಿದನೋ। **ತೇ**—ಅಂತಹ ನೀವು। **ನಃ**—ನಮಗೆ। **ವರಿವಃ**—ಧನವನ್ನು। **ಧಾತನ**—ಕೊಡಿರಿ। (ಎಲೈ ದೇವತೆಗಳೇ) **ಯೂಯಂ**—ನೀವು। **ನಃ**—ನಮ್ಮನ್ನು। **ಸದಾ**—ಯಾವಾಗಲೂ। **ಸ್ವಸ್ತಿಭಿಃ**—ಕಲ್ಯಾಣಗಳಿಂದ। **ಪಾತ**—ರಕ್ಷಿಸಿರಿ

ಭಾವಾರ್ಥ

ಪ್ರವಾಹಾತ್ಮಕಗಳಾದ ಎಲೈ ಉದಕಗಳೇ, ಯಾವ ನಿಮ್ಮನ್ನು ಸೂರ್ಯನು ತನ್ನ ಕಿರಣಗಳಿಂದ ವಿಸ್ತರಿಸುವಂತೆ ಮಾಡಿದನೋ, ಯಾವ ನಿಮ್ಮ ಮೂಲಕ ಇಂದ್ರನು ಗಮನಸಾಧನವಾದುದೂ, ಮೇಘಗಳಿಗೆ ಸಂಚಾರಯೋಗ್ಯವಾದುದೂ ಆದ ಮಾರ್ಗವನ್ನು ವಜ್ರದ ಸಹಾಯದಿಂದ ನಿರ್ಮಿಸಿದನೋ ಅಂತಹ ನೀವು ನಮಗೆ ಧನವನ್ನು ಕೊಡಿರಿ. ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

Waters, whom the sun has evaporized by his rays, for whom Indra has opened a path by which to issue, bestow upon us wealth . and do you (also) ever cherish us with blessings.

———

## ನಲವತ್ತೆಂಟನೆಯ ಸೂಕ್ತವು

ಸಾಯಣಭಾಷ್ಯಂ

ಋಭುಕ್ಷಣ ಇತಿ ಚತುರ್ಋಚಂ ಪಂಚದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೃಭುದೇವತಾಕಂ। ಅಂತ್ಯಾಯಾ ವಿಕಲ್ಪೇನ ವಿಶ್ವೇ ದೇವಾ ದೇವತಾ। ತಥಾ ಚಾನುಕ್ರಾಂತಂ। ಋಭುಕ್ಷಣ ಆರ್ಭವಮಂತ್ಯಾ ವೈಶ್ವದೇವೀ ವೇತಿ ॥ ದಶಮೇಽಹನಿ ವೈಶ್ವದೇವಶಸ್ತ್ರ ಆರ್ಭವನಿವಿದ್ಧಾನಂ। ಸೂತ್ರ್ಯತೇ ಹಿ। ಋಭುಕ್ಷಣ ಇತ್ಯಾರ್ಭವಂ। ಆ. ೮ ೧೨ ॥ ಇತಿ ॥

**ಅನುವಾದವು—ಋಭುಕ್ಷಣಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಋಭುಗಳು ದೇವತೆಯು, ಕೊನೆಯ ಋಕ್ಕಿಗೆ ಋಭುಗಳು ಅಥವಾ ವಿಶ್ವೇದೇವತೆಗಳು ದೇವತೆಯು. ಅನುಕ್ರಮಣಿಕೆಯಲ್ಲಿ **ಋಭುಕ್ಷಣ ಆರ್ಭವ ಮಂತ್ರ್ಯಾ ವೈಶ್ವದೇವೀ ವಾ** ಎಂದು ಹೇಳಿರುವುದು. ... ಯಾಗದ ... ನೆಯ ದಿನ ವೈಶ್ವದೇವಶಸ್ತ್ರಪ್ರಯೋಗ ಮಾಡುವಾಗ ಈ ಸೂಕ್ತವನ್ನು ಋಭುದೇವತಾಕನಾದ ... ಸೂಕ್ತವನ್ನಾಗಿ ಹೇಳಿ ... ಬೇಕೆಂದು ಆಶ್ವಲಾಯನಶ್ರೌತಸೂತ್ರದ **ಋಭುಕ್ಷಣ ಇತ್ಯಾರ್ಭವಂ** ... ದಿಂದ (ಆ ೮-೧೧) ವಿವೃತವಾಗಿರುವುದು

## ಸೂಕ್ತ—೪೮

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೪೮ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
ಋಷಿಃ—ವಸಿಷ್ಠಃ ॥
ದೇವತಾ—೧-೩ ಋಭವಃ । ೪ ಋಭವೋ ವಿಶ್ವೇದೇವಾ ವಾ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಋಭುಕ್ಷಣೋ ವಾಜಾ ಮಾದಯಧ್ವಮಸ್ಮೇ ನರೋ ಮಘವಾನಃ ಸುತಸ್ಯ ।
ಆ ವೋಽರ್ವಾಚಃ ಕ್ರತವೋ ನ ಯಾತಾಂ ವಿಭ್ವೋ ರಥಂ ನರ್ಯಂ ವರ್ತ-
ಯಂತು ॥ ೧ ॥

ಪದಪಾಠಃ

ಋಭುಕ್ಷಣಃ । ವಾಜಾಃ । ಮಾದಯಧ್ವಂ । ಅಸ್ಮೇ ಇತಿ । ನರಃ । ಮಘವಾನಃ । ಸುತಸ್ಯ ।
ಆ । ವಃ । ಅರ್ವಾಚಃ । ಕ್ರತವಃ । ನ । ಯಾತಾಂ । ವಿಭ್ವಃ । ರಥಂ । ನರ್ಯಂ । ವರ್ತಯಂತು ॥ ೧ ॥

ಸಾಯಣಭಾಷ್ಯಂ

ಋಭುಕ್ಷೇತ್ಯೃಭೂಣಾಂ ಜ್ಯೇಷ್ಠಸ್ಯಾಖ್ಯಾ ವಾಜ ಇತಿ ತು ಕನಿಷ್ಠಸ್ಯ । ಅತ್ರರ್ಭುಕ್ಷಣೋ ವಾಜಾ ಇತಿ ಬಹುವಚನೇನರ್ಭವಸ್ತ್ರಯೋ ಗೃಹ್ಯಂತೇ । ಹೇ ಋಭುಕ್ಷಣೋ ವಾಜಾ ನರೋ ನೇತಾರೋ ಮಘವಾನೋ ಧನವಂತ ಏವಂಭೂತಾ ಹೇ ಋಭವಃ ಯೂಯಮಸ್ಮೇ ಅಸ್ಮಾಸು ಸ್ಥಿತೇನ ಸುತಸ್ಯಾಭಿಷುತೇನ ಸೋಮೇನ ಮಾದಯಧ್ವಂ । ತೃಪ್ತಾ ಭವತ । ನೇತಿ ಸಂಪ್ರತ್ಯರ್ಥೇ । ಇದಾನೀಂ ಯಾತಾಂ ಗಚ್ಛತಾಂ ವೋ ಯುಷ್ಮದೀಯಾಃ ಕ್ರತವಃ ಕರ್ಮಣಾಂ ಕರ್ತಾರೋ ವಿಭ್ವೋ ವಿಭವಃ ಸಮರ್ಥಾ ಅಶ್ವಾ ಅರ್ವಾಚೋಽರ್ವಾಂಚೋಽಸ್ಮದಭಿಮುಖಾ ನರ್ಯಂ ಮನುಷ್ಯಹಿತಂ ರಥಂ ಯುಷ್ಮದೀಯಮಾ ವರ್ತಯಂತು । ಆಗಮಯಂತು ॥

ಪ್ರತಿಪದಾರ್ಥ

**ವಾಜಾಃ**—ಅನ್ನವಂತರಾದ । **ಋಭುಕ್ಷಣಃ**—ಎಲೈ ಋಭುಗಳೇ, । **ನರಃ**—ಕರ್ಮನೇತೃಗಳೂ । **ಮಘವಾನಃ**—ಧನವಂತರೂ ಆದ ನೀವು । **ಅಸ್ಮೇ**—ನಮ್ಮಲ್ಲಿರುವುದೂ । **ಸುತಸ್ಯ**—ಹಿಂಡಿರುವುದೂ ಆದ ಸೋಮಪಾನ

**ದಿಂದ** | **ಮಾದಯಧ್ವಂ**—ತೃಪ್ತಿಯನ್ನು ಹೊಂದಿರಿ | **ನ**—ಈಗ | **ಯಾತಾಂ**—ಸಂಚರಿಸತಕ್ಕ | **ವಃ**—ನಿಮ್ಮ | **ಋತವಃ**—ಕರ್ಮಸಾಧಕಗಳೂ | **ವಿಭ್ವಃ**—ಸಾಮರ್ಥ್ಯವುಳ್ಳವೂ ಆದ ಅಶ್ವಗಳು | **ಅರ್ವಾಚಃ**—ನಮಗಭಿಮುಖವಾಗಿದ್ದು | **ನರ್ಯಂ**—ಮಾನವರಿಗೆ ಹಿತಕರವಾದ | **ರಥಂ**—ನಿಮ್ಮ ರಥವನ್ನು | **ಆ ವರ್ತಯಂತು**—ನಮ್ಮ ಕಡೆಗೆ ಬರುವಂತೆ ಮಾಡಲಿ.

ಭಾವಾರ್ಥ

ಅನ್ನವಂತರಾದ ಎಲೈ ಋಭುಗಳೇ, ಕರ್ಮನೇತೃಗಳೂ, ಧನವಂತರೂ ಆದ ನೀವು ನಮ್ಮಲ್ಲಿರುವುದೂ, ಹಿಂಡಿರುವುದೂ ಆದ ಸೋಮಪಾನದಿಂದ ತೃಪ್ತಿಯನ್ನು ಹೊಂದಿರಿ. ಈಗ ಸಂಚರಿಸತಕ್ಕ ನಿಮ್ಮ ಕರ್ಮಸಾಧಕಗಳೂ, ಸಾಮರ್ಥ್ಯವುಳ್ಳವೂ ಆದ ಅಶ್ವಗಳು ನಮಗಭಿಮುಖವಾಗಿದ್ದು ಮಾನವರಿಗೆ ಹಿತಕರವಾದ ನಿಮ್ಮ ರಥವನ್ನು ನಮ್ಮ ಕಡೆಗೆ ಬರುವಂತೆ ಮಾಡಲಿ

English Translation

Ribhu, (Vibhu), and Vaja, leaders of rites, possessors of opulence, be exhilarated by our effused (libation) may your active and powerful (horses) bring to our presence your chariot, beneficial to mankind

ವಿಶೇಷವಿಷಯಗಳು

ಈ ಸೂಕ್ತದಲ್ಲಿ ಋಭುಗಳೆಂಬ ದೇವತೆಗಳನ್ನು ಸ್ತುತಿಸಲಾಗಿದೆ. ಈ ಋಭುಗಳ ವಿಷಯವನ್ನು ನಾವು ಹಿಂದೆ ಅನೇಕಾವರ್ತಿ ವಿವರಿಸಿದೇವೆ. ಸುಧನ್ವಾ ಎಂಬ ಋಷಿಯ ಪುತ್ರರಾದ ಋಭು, ವಿಭು, ವಾಜ ಎಂಬ ಮೂರುಮಂದಿಯು ತಮ್ಮ ಸತ್ಕರ್ಮಾಚರಣೆಯಿಂದಲೂ, ದೇವತೆಗಳಿಗೆ ಸಹಾಯ ಮಾಡಿದುದರಿಂದಲೂ ದೇವತ್ವವನ್ನು ಪಡೆದರೆಂದು ಪ್ರಸಿದ್ಧಿಯಾಗಿದೆ. ಇವರು ತ್ವಷ್ಟೃವಿಗೆ ಶಿಷ್ಯರು ಮತ್ತು ಕುಶಲಕಲಾಕರ್ಮಗಳಲ್ಲಿ ಪ್ರವೀಣರು ಇಂದ್ರನಿಗೆ ವಜ್ರಾಯುಧವನ್ನು, ಅಶ್ವಿನೀದೇವತೆಗಳಿಗೆ ರಥವನ್ನು ಮಾಡಿಕೊಟ್ಟರೆಂದು ಅಲ್ಲಲ್ಲಿ ಹೇಳಿದೆ. ಒಂದಾಗಿದ್ದ ಚಮಸಪಾತ್ರೆಯನ್ನು ನಾಲ್ಕಾಗುವಂತೆ ಮಾಡಿದರೆಂದೂ, ವೃದ್ಧರಾಗಿದ್ದ ತಮ್ಮ ತಂದೆತಾಯಿಗಳನ್ನು ಯುವಕರನ್ನಾಗಿ ಮಾಡಿದರೆಂದೂ ಇವರ ಕಲಾನೈಪುಣ್ಯದ ವಿವರಣೆ ಇದೆ ಇವರ ವಿಷಯವಾದ ವಿವರಣೆಗಳಿಗಾಗಿ ಋ ಭಾಗ 3 ಪುಟ 4 ಮತ್ತು 3-16; 5-658, 8-666, 8-671, 8-693, 8-699, 8-704 ಈ ಪುಟಗಳನ್ನು ನೋಡಿ.

ಸಂಹಿತಾಪಾಠಃ

ಋಭುರ್ಋಭುಭಿರಭಿ ವಃ ಸ್ಯಾಮ ವಿಭ್ವೋ ವಿಭುಭಿಃ ಶವಸಾ ಶವಾಂಸಿ ।
ವಾಜೋ ಅಸ್ಮಾँ ಅವತು ವಾಜಸಾತಾವಿಂದ್ರೇಣ ಯುಜಾ ತರುಷೇಮ ವೃತ್ರಂ ॥ ೨ ॥

ಪದಪಾಠಃ

ಋಭುಃ । ಋಭುऽಭಿಃ । ಅಭಿ । ವಃ । ಸ್ಯಾಮ । ವಿऽಭ್ವಃ । ವಿಭುऽಭಿಃ । ಶವಸಾ । ಶವಾಂಸಿ ।
ವಾಜಃ । ಅಸ್ಮಾನ್ । ಅವತು । ವಾಜऽಸಾತೌ । ಇಂದ್ರೇಣ । ಯುಜಾ । ತರುಷೇಮ । ವೃತ್ರಂ ॥ ೨ ॥

ಸಾಯಣಭಾಷ್ಯಂ

ಹೇ ಋಭವಃ ಋಭುಭಿರ್ಯುಷ್ಮಾಭಿರ್ವಯಮೃಭುಮಂತಃ । [illegible]ಮಂತ ಇತ್ಯೃಭವಃ । ಸಂತೋ ವಿಭುಭಿರ್ಯುಷ್ಮಾಭಿರ್ವಿಭ್ವೋ ವಿಭವಶ್ಚ ಸಂತಃ ಶವಾಂಸಿ ಶತ್ರೂಣಾಂ ಬಲಾನಿ ಶವಸಾ ಯುಷ್ಮದೀಯೇನ ಬಲೇನಾಭಿ ಸ್ಯಾಮ । ಅಭಿಭವೇಮ । ತಥಾ ವಾಜಸಾತೌ ಸಂಗ್ರಾಮೇ ವಾಜ ಏತತ್ಸಂಜ್ಞಕ ಋಭುರಸ್ಮಾನವತು । ಪಾಲಯತು । ಅಪಿ ಚ ಯುಜಾ ಸಹಾಯಭೂತೇನೇಂದ್ರೇಣ ವೃತ್ರಂ ಶತ್ರುಂ ವಯಂ ತರುಷೇಮ । ಹನಾಮ । ಪ್ರಾಯೇಣರ್ಭವೋಽಪೀಂದ್ರೇಣ ಸಹ ಸ್ತೂಯಂತ ಇತಿ ॥

ಪ್ರತಿಪದಾರ್ಥ

(ಎಲೈ ಋಭುಗಳೇ) **ವಃ ಋಭುಭಿಃ**—ಪ್ರಕಾಶಮಾನರಾದ ನಿಮ್ಮೊಡನೆ ಸೇರಿ । **ಋಭು:**—ವಿಸ್ತೃತವಾದ ಪ್ರಕಾಶವುಳ್ಳವರಾಗಿಯೂ । **ವಿಭುಭಿಃ**—ಸಂಪದ್ಯುಕ್ತರಾದ ನಿಮ್ಮೊಡನೆ ಸೇರಿ । **ವಿಭ್ವಃ**—ಸಂಪದ್ವಿಭವಗಳಿಂದ ಕೂಡಿದವರಾಗಿಯೂ । **ಶವಾಂಸಿ**—ಶತ್ರುಗಳ ಬಲಗಳನ್ನು । **ಶವಸಾ**—ನಮ್ಮ ಬಲದಿಂದ । **ಅಭಿ ಷ್ಯಾಮ**—(ನಾವು) ಸೋಲಿಸುವಂತಾಗಲಿ । **ವಾಜಸಾತೌ**—ಯುದ್ಧದಲ್ಲಿ । **ವಾಜಃ**—ನಿಮ್ಮ ನಡುವೆ ವಾಜನು । **ಅಸ್ಮಾನ್**—ನಮ್ಮನ್ನು । **ಅವತು**—ರಕ್ಷಿಸಲಿ । **ಯುಜಾ**—ನಮಗೆ ಸಹಾಯಕನಾಗಿರುವ । **ಇಂದ್ರೇಣ**—ಇಂದ್ರನೊಡಗೂಡಿ । **ವೃತ್ರಂ**—ನಿರೋಧಕನಾದ ಶತ್ರುವನ್ನು । **ತರುಷೇಮ**—ನಾವು ನಾಶಪಡಿಸುವಂತಾಗಲಿ.

ಭಾವಾರ್ಥ

ಎಲೈ ಋಭುಗಳೇ, ಪ್ರಕಾಶಮಾನರಾದ ನಿಮ್ಮೊಡನೆ ಸೇರಿ ವಿಸ್ತೃತವಾದ ಪ್ರಕಾಶವುಳ್ಳವರಾಗಿಯೂ, ಸಂಪದ್ಯುಕ್ತರಾದ ನಿಮ್ಮೊಡನೆ ಸೇರಿ ಸಂಪದ್ವಿಭವಗಳಿಂದ ಕೂಡಿದರಾಗಿಯೂ ಶತ್ರುಗಳ ಬಲವನ್ನು ನಮ್ಮ ಬಲದಿಂದ ನಾವು ಸೋಲಿಸುವಂತಾಗಲಿ. ನಿಮ್ಮಲ್ಲಿ ಪ್ರಭಾವಶಾಲಿಯಾದ ವಾಜನು ನಮ್ಮನ್ನು ರಕ್ಷಿಸಲಿ. ನಮಗೆ ಸಹಾಯಕನಾಗಿರುವ ಇಂದ್ರನೊಡಗೂಡಿ ನಿರೋಧಕನಾದ ಶತ್ರುವನ್ನು ನಾವು ನಾಶಪಡಿಸುವಂತಾಗಲಿ

English Translation

Mighty with the Ribhus, opulent with the Vibhus, may we overcome by strength the strength (of our foes) may Vaja defend us in battle with Indra, our ally, may we destroy the enemy.

ಸಂಹಿತಾಪಾಠಃ

ತೇ ಚಿದ್ಧಿ ಪೂರ್ವೀರಭಿ ಸಂತಿ ಶಾಸಾ ವಿಶ್ವಾ ಅರ್ಯ ಉಪರತಾತಿ ವನ್ವನ್ ।
ಇಂದ್ರೋ ವಿಭ್ವಾ ಋಭುಕ್ಷಾ ವಾಜೋ ಅರ್ಯಃ ಶತ್ರೋರ್ಮಿಥತ್ಯಾ ಕೃಣ-
ವನ್ವಿ ನೃಮ್ಣಂ ॥ ೩ ॥

### ಪದಪಾಠಃ

**ತೇ** । ಚಿತ್ । ಹಿ । ಪೂರ್ವೀಃ । ಅಭಿ । ಸಂತಿ । ಶಾಸಾ । ವಿಶ್ವಾನ್ । ಅರ್ಯಃ । ಉಪರಽತಾತಿ । ವನ್ವನ್ ।
ಇಂದ್ರಃ । ವಿಽಭ್ವಾ । ಋಭುಕ್ಷಾಃ । ವಾಜಃ । ಅರ್ಯಃ । ಶತ್ರೋಃ । ಮಿಥತ್ಯಾ । ಕೃಣವನ್ । ವಿ ।
ನೃಮ್ಣಂ ॥ ೩ ॥

### ಸಾಯಣಭಾಷ್ಯಂ

ತೇ ತಾದೃಶಾ ಇಂದ್ರ ಋಭವಶ್ಚ ಪೂರ್ವೀರ್ಬಹ್ವೀರಸ್ಮಚ್ಛತ್ರುಸೇನಾಃ ಶಾಸಾ ಶಾಸನೇನ ಸ್ವಕೀಯಯಾಜ್ಞಯಾ । ಯದ್ವಾ । ಶಿಶಸ್ಯತೇ ಹಿಂಸ್ಯತೇಽನೇನೇತಿ ಶಾಸಶಬ್ದ ಆಯುಧವಾಚೀ । ತೇನ । ಅಭಿ ಸಂತಿ । ಅಭಿಭವಂತಿ । ಚಿದ್ಧೀತ್ಯೇತೌ ಪೂರಣೌ । ಕಿಂಚೋಪರತಾತಿ ॥ ಸಪ್ತಮ್ಯಾ ಲುಕ್ ॥ ಉಪರೈರುಪಲೈಃ ಪಾಷಾಣಸದೃಶೈರಾಯುಧೈಸ್ತಾಯತೇ ವಿಸ್ತಾರ್ಯತ ಇತ್ಯುಪರತಾತಿ ಯುದ್ಧಂ । ತಸ್ಮಿನ್ವಿಶ್ವಾನ್ ಸಮಸ್ತಾನರ್ಯೋಽರೀಞ್ಛತ್ರೂನ್ವನ್ವನ್ । ಹಿಂಸಂತಿ । ವಿಭ್ವಾ ಋಭುಕ್ಷಾ ವಾಜ ಏತತ್ಸಂಜ್ಞಕಾ ಋಭವಶ್ಚೇಂದ್ರಶ್ಚಾರ್ಯಃ ಶತ್ರೂಣಾಮಭಿಗಂತಾರಃ ಸಂತಃ ಶತ್ರೋಃ ಸಂಬಂಧಿ ನೃಮ್ಣಂ ಬಲಂ ಮಿಥತ್ಯಾ ॥ ಮೇಥತೇರಿದಂ ರೂಪಂ ॥ ಮಿಥತಿರ್ಹಿಂಸಾ । ತಯಾ ವಿ ಕೃಣವನ್ । ವಿಕುರ್ವಂತು । ವಿನಾಶಯಂತ್ವಿತ್ಯರ್ಥಃ ॥

### ಪ್ರತಿಪದಾರ್ಥ

**ತೇ**—ಪೂರ್ವೋಕ್ತಗುಣಗಳುಳ್ಳ ಇಂದ್ರ ಮತ್ತು ಋಭುಗಳು । **ಪೂರ್ವೀಃ**—ಅನೇಕಸಂಖ್ಯೆಯುಳ್ಳ ಶತ್ರುಸೇನೆಗಳನ್ನು । **ಶಾಸಾ**—ತಮ್ಮ ಆಜ್ಞೆಯಿಂದ । **ಅಭಿ ಸಂತಿ ಹಿ**—ತಿರಸ್ಕರಿಸಿ ಸೋಲಿಸುತ್ತಾರೆ । **ಉಪರತಾತಿ**—ಯುದ್ಧದಲ್ಲಿ । **ವಿಶ್ವಾನ್**—ಸಮಸ್ತರಾದ । **ಅರ್ಯಃ**—ಶತ್ರುಗಳನ್ನೂ । **ವನ್ವನ್**—ಹಿಂಸಿಸುತ್ತಾರೆ । **ವಿಭ್ವಾ**—ವಿಭ್ವನೂ, । **ಋಭುಕ್ಷಾಃ**—ಋಭುಕ್ಷನೂ । **ವಾಜಃ**—ವಾಜನೂ । **ಇಂದ್ರಃ**—ಇಂದ್ರನೂ । **ಅರ್ಯಃ**—ಶತ್ರುಗಳನ್ನು ಸುತ್ತುವರಿದವರಾಗಿ । **ಶತ್ರೋಃ**—ಶತ್ರುವಿನ । **ನೃಮ್ಣಂ**—ಬಲವನ್ನು । **ಮಿಥತ್ಯಾ**—ಹಿಂಸಾರೂಪದಿಂದ । **ವಿ ಕೃಣವನ್**—ನಾಶಪಡಿಸಲಿ.

### ಪದಪಾರಃ

ಪೂರ್ವೋಕ್ತ ಗುಣಗಳುಳ್ಳ ಇಂದ್ರ ಮತ್ತು ಋಭುಗಳು ಅನೇಕಸಂಖ್ಯೆಯುಳ್ಳ ಶತ್ರುಸೇನೆಗಳನ್ನು ತಮ್ಮ ನಿಯಮನದಿಂದ ತಿರಸ್ಕರಿಸಿ ಸೋಲಿಸುತ್ತಾರೆ. ಯುದ್ಧದಲ್ಲಿ ಸಮಸ್ತ ಶತ್ರುಗಳನ್ನೂ ನಾಶಪಡಿಸುತ್ತಾರೆ . ವಿಭ್ವನೂ, ಋಭುಕ್ಷನೂ, ವಾಜನೂ, ಇಂದ್ರನೂ ಶತ್ರುಗಳನ್ನು ಸುತ್ತುವರಿದವರಾಗಿ ಶತ್ರುವಿನ ಬಲವನ್ನು ಹಿಂಸಾರೂಪದಿಂದ ನಾಶಪಡಿಸಲಿ.

## English Translation

They verily, (Indra and the Ribhus), overcome multitudes by their prowess : they overcome all enemies in the missile conflict . may Indra, Vibwan Ribhukshin and Vaja, the subduers of foes, annihilate by their wrath the strength of the enemy

ಸಂಹಿತಾಪಾಠಃ

ನೂ ದೇವಾಸೋ ವರಿವಃ ಕರ್ತನಾ ನೋ ಭೂತ ನೋ ವಿಶ್ವೇಽವಸೇ ಸ-
ಜೋಷಾಃ ।
ಸಮಸ್ಮೇ ಇಷಂ ವಸವೋ ದದೀರನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥೪॥

ಪದಪಾಠಃ

ನು । ದೇವಾಸಃ । ವರಿವಃ । ಕರ್ತನ । ನಃ । ಭೂತ । ನಃ । ವಿಶ್ವೇ । ಅವಸೇ । ಸಽಜೋಷಾಃ ।

ಸಂ । ಅಸ್ಮೇ ಇತಿ । ಇಷಂ । ವಸವಃ । ದದೀರನ್ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥೪॥

ಸಾಯಣಭಾಷ್ಯಂ

ಹೇ ದೇವಾಸೋ ದೇವಾ ದ್ಯೋತಮಾನಾ ಋಭವಃ ಯೂಯಂ ನ್ವದ್ಯ ನೋಽಸ್ಮಭ್ಯಂ ವರಿವೋ ಧನಂ ಕರ್ತನ । ಕುರುತ । ಪ್ರಯಚ್ಛತ । ತಥಾ ವಿಶ್ವೇ ಸರ್ವ ಋಭವೋ ಯೂಯಂ ಸಜೋಷಾಃ ಸಹ ಪ್ರೀಯಮಾಣಾಃ ಸಂತೋ ನೋಽಸ್ಮಾಕಮವಸೇ ರಕ್ಷಣಾಯ ಭೂತ । ಭವತ । ಅಪಿ ಚ ವಸವಃ ಪ್ರಶಸ್ತಾ ಋಭವ ಇಷಮನ್ನಮಸ್ಮೇ ಅಸ್ಮಭ್ಯಂ ಸಂ ದದೀರನ್ । ಸಂ ಪ್ರಯಚ್ಛೇಯುಃ । ಹೇ ಋಭವಃ ಯೂಯ-ಮಸ್ಮಾನ್ ಸರ್ವದಾ ಕಲ್ಯಾಣೈ ರಕ್ಷತ ॥

ಪ್ರತಿಪದಾರ್ಥ

**ದೇವಾಸಃ**—ದೇವತಾತ್ಮಕರಾದ ಎಲೈ ಋಭುಗಳೇ, । **ನು**—ಈಗ । **ನಃ**—ನಮಗೆ । **ವರಿವಃ**—ಧನವನ್ನು । **ಕರ್ತನ**—ಒದಗಿಸಿರಿ । **ವಿಶ್ವೇ**—ನೀವೆಲ್ಲರೂ । **ಸಜೋಷಾಃ**—ಒಟ್ಟಿಗೆ ಹರ್ಷವನ್ನು ಹೊಂದಿದವರಾಗಿ । **ನಃ**—ನಮ್ಮ । **ಅವಸೇ**—ರಕ್ಷಣಾರ್ಥವಾಗಿ । **ಭೂತ**—ಸಂಕಲ್ಪಿಸಿರಿ । **ವಸವಃ**—ಪ್ರಶಸ್ತರಾದ ಋಭುಗಳು । **ಇಷಂ**—ಅನ್ನವನ್ನು । **ಅಸ್ಮೇ**—ನಮಗೆ । **ಸಂ ದದೀರನ್**—ಒದಗಿಸಿಕೊಡಲಿ. (ಎಲೈ ದೇವತೆಗಳೇ) **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

ಭಾವಾರ್ಥ

ದೇವತಾತ್ಮರಾದ ಎಲೈ ಋಭುಗಳೇ, ನಮಗೆ ಧನವನ್ನು ಒದಗಿಸಿರಿ. ನೀವೆಲ್ಲರೂ ಒಟ್ಟಿಗೆ ಹರ್ಷವನ್ನು ಹೊಂದಿದವರಾಗಿರಿ ನಮ್ಮ ರಕ್ಷಕರಾಗಿರಿ. ಪ್ರಶಸ್ತರಾದ ಋಭುಗಳು ನಮಗೆ ಅನ್ನವನ್ನು ಒದಗಿಸಲಿ. ಎಲೈ ದೇವತೆಗಳೇ. ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

English Translation

Grant us, deities, this day opulence . may you all, well pleased alike, be (ready) for our protection . may the exalted (Ribhus) bestow upon us food . and do you (all) ever cherish us with blessings.

# ನಲವತ್ತೊಂಭತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಸಮುದ್ರಜ್ಯೇಷ್ಠಾ ಇತಿ ಚತುರ್ಋಚಂ ಷೋಡಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಬ್ದೇವತಾಕಂ । ತಥಾ ಚಾನುಕ್ರಾಂತಂ । ಸಮುದ್ರಜ್ಯೇಷ್ಠಾ ಆಪಮಿತಿ ॥ ಗತೋ ವಿನಿಯೋಗಃ ॥**

**ಅನುವಾದವು—ಸಮುದ್ರಜ್ಯೇಷ್ಠಾಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಆಪಃ ( ಉದಕಗಳು ) ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ-**ಸಮುದ್ರಜ್ಯೇಷ್ಠಾ ಆಪಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ

## ಸೂಕ್ತ—೪೯

ಮಂಡಲ—೭ ॥ ಅನುವಾಕ—೩ ॥ ಸೂಕ್ತ —೪೯ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
ಋಷಿಃ—ವಸಿಷ್ಠಃ ॥
ದೇವತಾ— ಆಪಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಸಮುದ್ರಜ್ಯೇಷ್ಠಾಃ ಸಲಿಲಸ್ಯ ಮಧ್ಯಾತ್ಪುನಾನಾ ಯಂತ್ಯನಿವಿಶಮಾನಾಃ ।
ಇಂದ್ರೋ ಯಾ ವಜ್ರೀ ವೃಷಭೋ ರರಾದ ತಾ ಆಪೋ ದೇವೀರಿಹ ಮಾಮವಂತು ॥ ೧ ॥

ಪದಪಾಠಃ

ಸಮುದ್ರಽಜ್ಯೇಷ್ಠಾಃ । ಸಲಿಲಸ್ಯ । ಮಧ್ಯಾತ್ । ಪುನಾನಾಃ । ಯಂತಿ । ಅನಿಽವಿಶಮಾನಾಃ ।
ಇಂದ್ರಃ । ಯಾಃ । ವಜ್ರೀ । ವೃಷಭಃ । ರರಾದ । ತಾಃ । ಆಪಃ । ದೇವೀಃ । ಇಹ । ಮಾಂ । ಅವಂತು ॥

ಸಾಯಣಭಾಷ್ಯಂ

**ಸಮುದ್ರಜ್ಯೇಷ್ಠಾಃ ಸಮುದ್ರೋಽರ್ಣವೋ ಜ್ಯೇಷ್ಠಃ ಪ್ರಶಸ್ಯತಮೋ ಯಾಸಾಮಪಾಂ ತಾಃ । ಸಲಿಲಸ್ಯ । ಅಂತರಿಕ್ಷನಾಮೈತತ್ । ಅಂತರಿಕ್ಷಸ್ಯ ಮಧ್ಯಾನ್ಮಾಧ್ಯಮಿಕಾತ್ಸ್ಥಾನಾದ್ಯಂತಿ । ಗಚ್ಛಂತಿ । ಕೀದೃಶ್ಯಃ । ಪುನಾನಾ ವಿಶ್ವಂ ಶೋಧಯಂತ್ಯೋಽನಿವಿಶಮಾನಾಃ ಸರ್ವದಾ ಗಚ್ಛಂತ್ಯಃ । ವಜ್ರೀ ವಜ್ರಭೃದ್ವೃಷಭಃ ಕಾಮಾನಾಂ ವರ್ಷಿತೇಂದ್ರೋ ಯಾ ನಿರುದ್ಧಾ ಅಪೋ ರರಾದ ಲಿಖತಿ ದೇವೀರ್ದೇವ್ಯಸ್ತಾ ಆಪ ಇಹಾಸ್ಮಿನ್ಪ್ರದೇಶೇ ಸ್ಥಿತಂ ಮಾಮವಂತು । ರಕ್ಷಂತು । ಅಭಿ ಗಚ್ಛಂತು ವಾ ॥**

### ಪ್ರತಿಪದಾರ್ಥ

**ಪುನಾನಾಃ**—ಜಗತ್ತನ್ನು ಶುದ್ಧಿಗೊಳಿಸುವವೂ | **ಅನಿವಿಶಮಾನಾಃ**—ವಿಚ್ಛಿತ್ತಿಯಿಲ್ಲದೇ ಪ್ರವಹಿಸುವವೂ | **ಸಮುದ್ರಜ್ಯೇಷ್ಠಾಃ**—ಸಮುದ್ರವೇ ಉತ್ತಮವಾದ ಆಶ್ರಯಸ್ಥಾನವಾಗಿ ಉಳ್ಳವೂ ಆದ ಉದಕಗಳು | **ಸಲಿಲಸ್ಯ**—ಅಂತರಿಕ್ಷದ | **ಮಧ್ಯಾತ್**—ಮಧ್ಯಭಾಗದಿಂದ | **ಯಂತಿ**—ಹರಿದ ಬರುತ್ತವೆ | **ವಜ್ರೀ**—ವಜ್ರಾಯುಧವನ್ನು ಹಿಡಿದಿರುವವನೂ | **ವೃಷಭಃ** – ಕಾಮವರ್ಷಕನೂ ಆದ | **ಇಂದ್ರಃ**—ಇಂದ್ರನು | **ಯಾಃ**—ಯಾವ ಉದಕಗಳನ್ನು | **ರರಾಧ**—(ತಡೆಯನ್ನು) ಸೀಳಿ ಪ್ರವಹಿಸುವಂತೆ ಮಾಡಿದನೋ, | **ದೇವೀಃ**—ದೇವತಾತ್ಮಗಳಾದ | **ತಾಃ ಆಪಃ**—ಅದೇ ಉದಕಗಳು (ಉದಕಾಭಿಮಾನಿದೇವತೆಗಳು) | **ಇಹ**—ಈ ಯಜ್ಞದಲ್ಲಿ ಸ್ಥಿರತನಾದ | **ಮಾಂ**—ನನ್ನನ್ನು | **ಅವಂತು**—ರಕ್ಷಿಸಲಿ.

### ಭಾವಾರ್ಥ

ಜಗತ್ತನ್ನು ಶುದ್ಧಿಗೊಳಿಸುವವೂ, ವಿಚ್ಛಿತ್ತಿಯಿಲ್ಲದೇ ಪ್ರವಹಿಸುವವೂ ಸಮುದ್ರವೇ ಉತ್ತಮವಾದ ಆಶ್ರಯಸ್ಥಾನವಾಗಿ ಉಳ್ಳವೂ ಆದ ಉದಕಗಳು ಅಂತರಿಕ್ಷದ ಮಧ್ಯಭಾಗದಿಂದ ಹರಿದು ಬರುತ್ತವೆ ವಜ್ರಾಯುಧವನ್ನು ಹಿಡಿದಿರುವವನೂ, ಕಾಮವರ್ಷಕನೂ ಆದ ಇಂದ್ರನು ಯಾವ ಉದಕಗಳನ್ನು ಬಂಧನದಿಂದ ಬಿಡಿಸಿ ಹರಿಯುವಂತೆ ಮಾಡಿದನೋ, ದೇವತಾತ್ಮಗಳಾದ ಅದೇ ಉದಕಗಳು (ಉದಕಾಭಿಮಾನಿದೇವತೆಗಳು) ಈ ಯಜ್ಞದಲ್ಲಿ ಸ್ಥಿರತನಾದ ನನ್ನನ್ನು ರಕ್ಷಿಸಲಿ

### English Translation

The waters, with their ocean chief, proceed from the midst of the firmament, purifying (all things), flowing unceasingly may the divine waters, whom the thunder bearing Indra, the showerer, sent forth, protect me here (on earth)

### ವಿಶೇಷವಿಷಯಗಳು

**ಸಮುದ್ರಜ್ಯೇಷ್ಠಾಃ**—ಸಮುದ್ರವೇ ಉತ್ತಮವಾದ ಆಶ್ರಯಸ್ಥಾನವಾಗಿ ಉಳ್ಳ ಉದಕಗಳು ಎಂದರ್ಥವು ಇಲ್ಲಿ ಇನ್ನೊಂದು ವಿಷಯವನ್ನು ವಿಶದಪಡಿಸಬೇಕಾಗಿದೆ ಭೂಮಿಯ ಮೇಲಿರುವ ಉದಕಗಳಿಗೆಲ್ಲಾ ಸಮುದ್ರವೇ ಉತ್ಪತ್ತಿಸ್ಥಾನವು ಎಂದರೆ ಕೆರೆ, ಕೊಳ, ಬಾವಿ, ಕುಂಟೆ, ನದಿ ಮೊದಲಾದವುಗಳಲ್ಲಿರುವ ಜಲಗಳೆಲ್ಲಾ ಒಂದಾನೊಂದು ಕಾಲದಲ್ಲಿ ಸಮುದ್ರದ ಭಾಗವೇ ಆಗಿತ್ತು ಎಂದರೆ ಸಮುದ್ರದ ನೀರು ಸೂರ್ಯನ ಕಿರಣಗಳಿಂದ ತಪ್ತವಾಗಿ ಆವಿಯ ರೂಪದಿಂದ ಮೇಘಮಂಡಲಗಳಾಗಿ ಪರಿವರ್ತಿತವಾಗುತ್ತವೆ ಅನಂತರ ಆ ಮೇಘಗಳು ವೃಷ್ಟಿಯ ಮೂಲಕ ಸುರಿಸುವ ಉದಕಗಳಿಂದ ಬಹುಭಾಗವು ನದಿಗಳಾಗಿ ಪ್ರವಹಿಸಿ ಪುನಃ ಸಮುದ್ರವನ್ನೇ ಸೇರುತ್ತವೆ. ಇನ್ನೂ ಕೆಲವು ಭಾಗ ಕೆರೆ, ಕುಂಟೆ ಸರೋವರ ಮೊದಲಾದ ಜಲಾಶಯಗಳಲ್ಲಿ ನಿಲ್ಲುವುದು ಇನ್ನೂ ಸ್ವಲ್ಪಭಾಗ ಭೂಮಿಯಲ್ಲಿ ಇಳಿದು (ಇಂಗಿ)ಇಲ್ಲಿ ಸ್ವಲ್ಪದೂರದವರಿಗೂ ಹೋಗಿ ಘಟ್ಟಿಯಾದ ಬಂಡೆಯು ಸಿಕ್ಕಿದನಂತರ ಅಲ್ಲಿಯೇ ಸಂಗ್ರಹವಾಗಿರುವುದು. ಈ ನೀರಿಗೆ ಸೂರ್ಯರಶ್ಮಿಗಳ ಸಂಪರ್ಕವಿಲ್ಲದ್ದರಿಂದ ಇದು ಆವಿಯಾಗಿ ಹೋಗುವ ಸಂಭವವಿರುವುದಿಲ್ಲ ಆದ್ದರಿಂದ ಪ್ರತಿವರ್ಷವೂ ವರ್ಷಾಕಾಲದಲ್ಲಿ ಬೀಳುವ ವೃಷ್ಟ್ಯುದಕದ ಕೆಲವು ಭಾಗವು ಭೂಮಿಯಲ್ಲಿ ಇಳಿದು ಹೋಗಿ ಸಂಗ್ರಹವಾಗುತ್ತಿರುವುದರಿಂದ ಇದರ ಪ್ರಮಾಣವು ಹೆಚ್ಚಾಗಿಯೇ ಇರುತ್ತದೆ. ನಾವು ಭಾವಿಯನ್ನು ತೋಡಿದಾಗ ಉಕ್ಕಿಬರುವ ಜಲವೇ ಈ ವಿಧವಾದ ನೀರು ಈ ನೀರೂ, ಕೆರೆ, ಕೊಳ, ನದಿ ಇವುಗಳಲ್ಲಿರುವ ನೀರೂ ಸಮುದ್ರದ ನೀರಿನಂತೆ ಉಪ್ಪಾಗಿರದೆ ಸ್ವಚ್ಛವಾಗಿಯೂ ಸಿಹಿಯಾಗಿಯೂ ಇರುವುದು ಏಕೆಂದರೆ ಸಮುದ್ರದಿಂದ ಆವಿಯಾಗಿ ಹೋಗುವ ಜಲವು ಸಮುದ್ರದ

ಲ್ಲಿರುವ ಉಪ್ಪನ್ನು ತೆಗೆದುಕೊಂಡು ಹೋಗದೆ ಅಲ್ಲಿಯೇ ಬಿಟ್ಟು ಸ್ವಚ್ಛವಾದ ನೀರುಮಾತ್ರ ಆವಿಯರೂಪದಲ್ಲಿ ಹೋಗುವುದು ಆದ್ದರಿಂದ ಈ ಉದಕಗಳು ಉಪ್ಪಾಗಿರದೆ ಸಿಹಿಯಾಗಿರುವುವು. ಸಮುದ್ರದ ನೀರು ಉಪ್ಪಾಗಿರಲು ಕಾರಣವೇನೆಂದರೆ ಭೂಮಿಯು ಮೊದಲು ಸೃಷ್ಟಿಯಾದಾಗ ಆವೆಯರೂಪದಲ್ಲಿದ್ದ ಆಮ್ಲಜನಕವೂ ( Oxegen ) ಜಲಜನಕವೂ (Hydrogen) ಸಂಯೋಗವಾಗಿ ಜಲವು ಉತ್ಪತ್ತಿಯಾಯಿತು ಆಗ ಅದು ಯಾವ ವಿಧವಾದ ಬಣ್ಣವೂ, ರುಚಿಯೂ, ವಾಸನೆಯೂ ಇಲ್ಲದೆ ಸ್ವಚ್ಛವಾಗಿದ್ದಿತು ಆ ಜಲವೆಲ್ಲಾ ಭೂಮಿಯ ತಗ್ಗಾಗಿರುವ ಪ್ರದೇಶವನ್ನಾವರಿಸಿ ತುಂಬಿಕೊಂಡಿತು ಇದೇ ಸಮುದ್ರವು. ಬರಬರುತ್ತಾ ಪ್ರತಿಕ್ಷಣದಲ್ಲಿಯೂ ಸೂರ್ಯರಶ್ಮಿಯಿಂದ ಸಮುದ್ರದ ನೀರು ಕಾದು ಕೆಲವು ಭಾಗ ಆವೆಯಾಗಿ ಹೋಗಿ ಅಂತರಿಕ್ಷದಲ್ಲಿ ಮೇಘವಾಗಿ ಕೆಲವು ಕಾಲವಿದ್ದು ಬಳಿಕ ಮಳೆಯರೂಪದಲ್ಲಿ ಭೂಮಿಯಮೇಲೆ ಬಿದ್ದು ನದಿಯಾಗಿ ಪ್ರವಹಿಸಿ ಸಮುದ್ರವನ್ನು ಸೇರುವುದು. ವೃಷ್ಟ್ಯುದಕವು ನದಿಯಾಗಿ ಪ್ರವಹಿಸುವಾಗ ಭೂಮಿಯ ಮೇಲಿರುವ ಮಣ್ಣು ಮತ್ತು ಇತರ ಖನಿಜಪದಾರ್ಥವನ್ನು ಕೊಚ್ಚಿಕೊಂಡು ಹೋಗಿ ಸಮುದ್ರವನ್ನು ಸೇರುವುದು. ಮಣ್ಣುಮುಂದಾದ ವಸ್ತುಗಳು ನೀರಿನೊಡನೆ ಕೆಲವು ಕಾಲವಿದ್ದರೂ ನೀರು ಸಮುದ್ರವನ್ನು ಸೇರಿದ ನಂತರ ಆ ಮಣ್ಣು ಸಮುದ್ರತಳದಲ್ಲಿ ನಿಂತುಬಿಡುವುದು. ತಿಳಿನೀರು ಮಾತ್ರ ಸಮುದ್ರದ ನೀರಿನೊಡನೆ ಬೆರತುಹೋಗುವುದು ಆದರೆ ನದಿಯು ಹರಿಯುವಾಗ ನೀರಿನೊಡನೆ ಬೆರೆತ ಖನಿಜ ಪದಾರ್ಥಗಳು ಅದರಲ್ಲೂ ಮುಖ್ಯವಾಗಿ ಉಪ್ಪು (Chloride) ನೀರಿನಲ್ಲಿ ಚೆನ್ನಾಗಿ ಕರಗಿರುವುದರಿಂದ ನದಿಯು ಸಮುದ್ರವನ್ನು ಸೇರಿದಮೇಲೂ ಈ ಉಪ್ಪು ಆ ನೀರಿನಿಂದ ಪ್ರತ್ಯೇಕವಾಗುವುದಿಲ್ಲ ಅದಕ್ಕೆ ಬದಲಾಗಿ ಸಮುದ್ರದ ನೀರನ್ನು ಉಪ್ಪನ್ನಾಗಿ ಮಾಡುವುದು ಈರೀತಿ ಪ್ರತಿವರ್ಷವೂ ಸಾವಿರಾರು ನದಿಗಳು ಸಮುದ್ರಕ್ಕೆ ಸ್ವಲಸ್ವಲ್ಪವಾಗಿ ಉಪ್ಪನ್ನು ತಂದು ಸೇರಿಸುತ್ತಿರುವುವು. ಈ ಕಾರ್ಯವು ಕೋಟ್ಯಂತರ ವರ್ಷಗಳಿಂದ ಅವಿಚ್ಛಿನ್ನವಾಗಿ ನಡೆಯುತ್ತಿರುವುದರಿಂದ ಸಮುದ್ರದ ನೀರು ಈಗಿರುವಂತೆ ಬಹಳ ಉಪ್ಪಿನಿಂದ ಕೂಡಿದೆ ಪ್ರತಿವರ್ಷವೂ ಸಮುದ್ರಕ್ಕೆ ನದಿಗಳ ಮೂಲಕ ಹೆಚ್ಚುಹೆಚ್ಚಾಗಿ ಉಪ್ಪು ಸೇರುತ್ತದೆಯೇ ವಿನಹ ಆ ಉಪ್ಪು ಯಾವ ವಿಧದಿಂದಲೂ ಸಮುದ್ರವನ್ನು ಬಿಟ್ಟು ಹೊರಕ್ಕೆ ಹೋಗುವಂತಿಲ್ಲ ಆದ್ದರಿಂದ ಕ್ರಮೇಣ ಸಮುದ್ರದ ನೀರು ಹೆಚ್ಚುಹೆಚ್ಚಾಗಿ ಉಪ್ಪಾಗುವುದು. ಸಮುದ್ರದ ನೀರಿನಲ್ಲಿರುವ ಉಪ್ಪಿನ ಅಂಶದಿಂದಲೂ ಪ್ರತಿವರ್ಷವೂ ಸಮುದ್ರಕ್ಕೆ ಸೇರುವ ಉಪ್ಪಿನ ಅಂಶದಿಂದಲೂ ಲೆಕ್ಕಮಾಡಿದಲ್ಲಿ ಭೂಮಿಯು ಉತ್ಪತ್ತಿಯಾಗಿ ಎಷ್ಟು ಕೋಟಿವರ್ಷಗಳಾಗಿವೆ ಎಂಬುದನ್ನು ವಿಜ್ಞಾನಿಗಳು ಕಂಡುಹಿಡಿಯಬಹುದು.

ಸಂಹಿತಾಪಾಠಃ

**ಯಾ ಆಪೋ ದಿವ್ಯಾ ಉತ ವಾ ಸ್ರವಂತಿ ಖನಿತ್ರಿಮಾ ಉತ ವಾ ಯಾಃ ಸ್ವಯಂಜಾಃ ।**
**ಸಮುದ್ರಾರ್ಥಾ ಯಾಃ ಶುಚಯಃ ಪಾವಕಾಸ್ತಾ ಆಪೋ ದೇವೀರಿಹ ಮಾಮವಂತು ॥ ೨ ॥**

ಪದಪಾಠಃ

**ಯಾಃ । ಆಪಃ । ದಿವ್ಯಾಃ । ಉತ । ವಾ । ಸ್ರವಂತಿ । ಖನಿತ್ರಿಮಾಃ । ಉತ । ವಾ । ಯಾಃ । ಸ್ವಯಂऽಜಾಃ ।**
**ಸಮುದ್ರಽಅರ್ಥಾಃ । ಯಾಃ । ಶುಚಯಃ । ಪಾವಕಾಃ । ತಾಃ । ಆಪಃ । ದೇವೀಃ । ಇಹ । ಮಾಂ । ಅವಂತು ॥ ೨ ॥**

ಸಾಯಣಭಾಷ್ಯಂ

**ಯಾ ಆಪೋ ದಿವ್ಯಾ ಅಂತರಿಕ್ಷಭವಾಃ ಸಂತಿ । ಉತ ವಾಪಿ ಚ ಯಾ ಆಪೋ ನದ್ಯಾದಿಗತಾಃ ಸತ್ಯಃ ಸ್ರವಂತಿ ಗಚ್ಛಂತಿ । ಯಾಶ್ಚ ಖನಿತ್ರಿಮಾಃ ಖನನೇನ ನಿರ್ವೃತ್ತಾಃ । ಉತ ವಾಪಿ ಚ ಯಾಃ ಸ್ವಯಂ-ಜಾಃ ಸ್ವಯಮೇವ ಪ್ರಾದುರ್ಭವಂತ್ಯಃ ಸಮುದ್ರಾರ್ಥಾಃ । ಸಮುದ್ರ ಏವಾರ್ಥೋ ಗಂತವ್ಯೋ ಯಾಸಾಂ ತಾಃ ಸಮುದ್ರಾರ್ಥಾಃ । ಶುಚಯೋ ದೀಪ್ತಿಯುಕ್ತಾಃ ಪಾವಕಾಃ ಶೋಧಯಿತ್ರ್ಯಶ್ಚ ಭವಂತಿ । ತಾ ಆಪೋ ಮಾಮವಂತ್ವಿತಿ ॥**

ಪ್ರತಿಪದಾರ್ಥ

**ಯಾಃ ಆಪಃ**—ಯಾವ ಉದಕಗಳು । **ದಿವ್ಯಾಃ**—ದ್ಯುಲೋಕೋತ್ಪನ್ನವಾಗಿವೆಯೋ, । **ಉತ ವಾ**—ಮತ್ತು । **ಸ್ರವಂತಿ**—ಪ್ರವಾಹಾತ್ಮಕವಾಗಿವೆಯೋ, । **ಉತ ವಾ**—ಅಲ್ಲದೇ, । **ಯಾಃ**—ಯಾವ ಉದಕಗಳು । **ಖನಿತ್ರಿಮಾಃ**—ತಡೆಯನ್ನು ಸೀಳುವುದರಿಂದ ಹೊರಹೊರಟು ಹರಿಯುವುವೋ, । **ಉತ ವಾ**—ಅದೂ ಅಲ್ಲದೇ, । **ಯಾಃ**—ಯಾವ ಉದಕಗಳು । **ಸ್ವಯಂಜಾಃ**—ತಾವಾಗಿಯೇ ಪ್ರಾದುರ್ಭವಿಸಿ । **ಸಮುದ್ರಾರ್ಥಾಃ**—ಸಮುದ್ರವನ್ನು ಹೋಗಿ ಸೇರುವುವೋ । **ದೇವೀಃ**—ದೇವತಾತ್ಮಗಳಾದ । **ತಾ ಆಪಃ**—ಅದೇ ಉದಕಗಳು । **ಇಹ**—ಈ ಯಜ್ಞದಲ್ಲಿ ನಿರತನಾದ । **ಮಾಂ**—ನನ್ನನ್ನು । **ಅವಂತು**—ರಕ್ಷಿಸಲಿ.

ಭಾವಾರ್ಥ

ಯಾವ ಉದಕಗಳು ದ್ಯುಲೋಕೋತ್ಪನ್ನವಾಗಿವೆಯೋ ಮತ್ತು ಯಾವುವು ಪ್ರವಾಹಾತ್ಮಕವಾಗಿಯೋ, ಅಲ್ಲದೇ ಯಾವ ಉದಕಗಳು ತಮ್ಮ ತಡೆಯನ್ನು ಸೀಳುವುದರಿಂದ ಹೊರಹೊರಟು ಹರಿಯುವುವೋ ಅಲ್ಲದೇ, ಯಾವ ಉದಕಗಳು ತಾವಾಗಿಯೇ ಪ್ರಾದುರ್ಭವಿಸಿ ಸಮುದ್ರವನ್ನು ಹೋಗಿ ಸೇರುವುವೋ ದೇವತಾತ್ಮಗಳಾದ ಅದೇ ಉದಕಗಳು ಈ ಯಜ್ಞದಲ್ಲಿ ನಿರತನಾದ ನನ್ನನ್ನು ರಕ್ಷಿಸಲಿ

English Translation

May the waters that are in the sky, or those that flow (on the earth), those (whose channels) have been dug, or those that have sprung up spontaneously, and those that seek the ocean, all pnre and purifying, may those divine waters protect me here (on earth)

ವಿಶೇಷವಿಷಯಗಳು

**ಯಾ ಆಪಃ ದಿವ್ಯಾಃ**—ದ್ಯುಲೋಕ ಅಥವಾ ಅಂತರಿಕ್ಷದಲ್ಲಿ ಉತ್ಪನ್ನವಾದ ಉದಕಗಳು ಎಂದರೆ ಮೇಘಮಂಡಲಗಳಿಂದ ವೃಷ್ಟಿರೂಪದಲ್ಲಿ ಸುರಿಯುವ ಮಳೆಯನೀರು.

**ಉತ ವಾ ಸ್ರವಂತಿ**—ಹರಿಯುವ ನೀರು ಎಂದರೆ ಪ್ರವಾಹರೂಪದಿಂದ ಹರಿಯುವ ನದಿಯ ನೀರು.

**ಯಾ ಖನಿತ್ರಿಮಾಃ**—ಅಗೆಯುವ ಸಾಧನಗಳಾದ ಗುದ್ದಲಿ ಮೊದಲಾದ ಆಯುಧಗಳಿಂದ ಅಗೆದು ತೋಡಿರುವ ಭಾವಿ, ಕೊಳ ಮೊದಲಾದ ಜಲಾಶಯಗಳ ನೀರು.

**ಯಾಃ ಸ್ವಯಂಜಾಃ**—ಭೂಮಿ ಕೆಳಭಾಗದಲ್ಲಿ ಶೇಖರವಾಗಿ ಬುಗ್ಗೆ ಮೊದಲಾದುವುಗಳ ಮೂಲಕ ಉಕ್ಕಿ ಬರುವ ನೀರು.

ಸಂಹಿತಾಪಾಠಃ

ಯಾಸಾಂ ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ ಅವಪಶ್ಯ-
ಞ್ಜನಾನಾಂ ।
ಮಧುಶ್ಚುತಃ ಶುಚಯೋ ಯಾಃ ಪಾವಕಾಸ್ತಾ ಆಪೋ ದೇವೀರಿಹ ಮಾಮ-
ವಂತು ॥ ೩ ॥

ಪದಪಾಠಃ

ಯಾಸಾಂ । ರಾಜಾ । ವರುಣಃ । ಯಾತಿ । ಮಧ್ಯೇ । ಸತ್ಯಾನೃತೇಽಇತಿ । ಅವಽಪಶ್ಯನ್ । ಜನಾನಾಂ ।

ಮಧುಽಶ್ಚುತಃ । ಶುಚಯಃ । ಯಾಃ । ಪಾವಕಾಃ । ತಾಃ । ಆಪಃ । ದೇವೀಃ । ಇಹ । ಮಾಂ । ಅವಂತು ॥

ಸಾಯಣಭಾಷ್ಯಂ

ವರುಣೋ ಯಾಸಾಮಪಾಂ ರಾಜಾ ಸ್ವಾಮೀ ಮಧ್ಯೇ ಮಧ್ಯಮಲೋಕೇ ಯಾತಿ ಗಚ್ಛತಿ । ಕಿಂ ಕುರ್ವನ್ । ಜನಾನಾಂ ಪ್ರಜಾನಾಂ ಸತ್ಯಾನೃತೇ ಸತ್ಯಂ ಚಾನೃತಂ ಚಾವಪಶ್ಯನ್ । ಜಾನನ್ನಿತ್ಯರ್ಥಃ । ಯಾ ಆಪೋ ಮಧುಶ್ಚುತೋ ರಸಂ ಕ್ಷರಂತ್ಯಃ ಶುಚಯೋ ದೀಪ್ತಿಯುಕ್ತಾಃ ಪಾವಕಾಃ ಶೋಧಯಿತ್ರ್ಯಃ ತಾ ಆಪೋ ದೇವ್ಯೋ ಮಾಂ ರಕ್ಷಂತ್ವಿತಿ ॥

ಪ್ರತಿಪದಾರ್ಥ

**ಮಧ್ಯೇ**—ಮಧ್ಯಮಲೋಕಸ್ಥನಾದ । **ವರುಣಃ**—ವರುಣದೇವನು । **ಜನಾನಾಂ**—ಪ್ರಜೆಗಳ । **ಸತ್ಯಾನೃತೇ**—ಸತ್ಯ ಮತ್ತು ಅಸತ್ಯಜೀವನಗಳನ್ನು । **ಅವಪಶ್ಯನ್**—ನೋಡುತ್ತ । **ಯಾಸಾಂ**—ಯಾವ ಉದಕಗಳಿಗೆ । **ರಾಜಾ**—ಪ್ರಭುವಾಗಿ । **ಯಾತಿ**—ಸಂಚರಿಸುವನೋ । **ಯಾಃ**—ಯಾವ ಉದಕಗಳು । **ಮಧುಶ್ಚುತಃ**—ಮಧುರವಾದ ರಸಗಳನ್ನು ಹಿಂಡುತ್ತಲೂ । **ಶುಚಯಃ**—ಪ್ರಕಾಶಮಾನವಾಗಿಯೂ । **ಪಾವಕಾಃ**—ಶುದ್ಧಿಕಾರಕಗಳಾಗಿಯೂ ಇರುವುವೋ । **ದೇವೀಃ**—ದೇವತಾತ್ಮಗಳಾದ । **ತಾಃ ಆಪಃ**—ಅದೇ ಉದಕಗಳು । **ಇಹ**—ಈ ಯಜ್ಞದಲ್ಲಿ ನಿರತನಾದ । **ಮಾಂ**—ನನ್ನನ್ನು । **ಅವಂತು**—ರಕ್ಷಿಸಲಿ

ಭಾವಾರ್ಥ

ಮಧ್ಯಮಲೋಕಸ್ಥನಾದ ವರುಣದೇವನು ಪ್ರಜೆಗಳ ಸತ್ಯ ಮತ್ತು ಅಸತ್ಯಜೀವನಗಳನ್ನು ನೋಡುತ್ತ ಯಾವ ಉದಕಗಳಿಗೆ ಪ್ರಭುವಾಗಿ ಸಂಚರಿಸುವನೋ ಯಾವ ಉದಕಗಳು ಮಧುರವಾದ ರಸಗಳನ್ನು ಹಿಂಡುತ್ತಲೂ, ಪ್ರಕಾಶಮಾನವಾಗಿಯೂ, ಶುದ್ಧಿಕಾರಕಗಳಾಗಿಯೂ ಇರುವುವೋ ದೇವತಾತ್ಮಗಳಾದ ಅದೇ ಉದಕಗಳು ಈ ಯಜ್ಞದಲ್ಲಿ ನಿರತನಾದ ನನ್ನನ್ನು ರಕ್ಷಿಸಲಿ.

## English Translation

Those whose sovereign, Varuna, passes in the middle sphere, discriminating the truth and falsehood of mankind . those shedding sweet showers, pure and purifying . may those divine waters protect me here (on earth).

ವಿಶೇಷವಿಷಯಗಳು

**ಯಾಸಾಂ ರಾಜಾ ವರುಣಃ**—**ಯಾಸಾಂ ಉದಕಾನಾಂ ರಾಜಾ ವರುಣಃ** । ಉದಕಗಳಿಗೆ ರಾಜನಾದ ವರುಣನು ಎಂದು ಇಲ್ಲಿ ಹೇಳಿದೆ ಎಂದರೆ ಉದಕಾಭಿಮಾನಿದೇವತೆಯಾದ ವರುಣನು ಎಂದರ್ಥವು **ವರುಣೋಽಪಾಮಧಿಪತಿಃ**—ಎಂದು ತೈತ್ತಿರೀಯಶ್ರುತಿವಾಕ್ಯವೂ ಇರುವುದು. ಇದಲ್ಲದೆ ವರುಣನು ರಾತ್ರ್ಯಭಿಮಾನಿದೇವತೆಯೆಂದು ಪ್ರಸಿದ್ಧನಾಗಿರುವನು **ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ** ಎಂದರೆ ಮಿತ್ರನು ಅಹಸ್ಸಿಗೂ ವರುಣನು ರಾತ್ರಿಗೂ ಅಧಿಪತಿಯು ಎಂದು ತೈತ್ತಿರೀಯಶ್ರುತಿಯೇ ಹೇಳುವುದು.

**ರಾಜಾ ವರುಣಃ**—ಇಲ್ಲಿ ವರುಣನನ್ನು **ರಾಜಾ** ಎಂಬ ಶಬ್ದದಿಂದ ಕರೆದಿದೆ ಅನೇಕಕಡೆ ವರುಣನನ್ನು ಅಥವಾ ಮಿತ್ರಾವರುಣರನ್ನೂ ಸಮ್ರಾಜ ಎಂಬ ಶಬ್ದದಿಂದಲೂ ಕರೆಯಲಾಗಿದೆ ಏಕೆಂದರೆ ವರುಣನು ಜನಗಳು ಮಾಡುವ ಕರ್ಮಗಳನ್ನು ಸತ್ಯ ಅನೃತಗಳನ್ನು ವೀಕ್ಷಿಸುವನೆಂದೂ ಅವನ ನಿಯಮಕ್ಕೆ ಎಲ್ಲರೂ ಒಳಪಟ್ಟಿರುವರೆಂದೂ ಅನೇಕಕಡೆ ಹೇಳಿದೆ ಪ್ರಕೃತ ಋಕ್ಕಿನಲ್ಲಿ **ಸತ್ಯಾನೃತೇ ಅವ ಪಶ್ಯನ್ ಜನಾನಾಂ** ಎಂದು ಹೇಳಿದೆ ವರುಣನ ನಿಯಮಗಳಿಗೆ ಎಲ್ಲರೂ ಒಳಪಟ್ಟಿರುವರೆಂಬ ವಿಷಯದಲ್ಲಿ ವರುಣನಿಗೆ **ಧೃತವ್ರತ** ಎಂಬ ಶಬ್ದದ ಪ್ರಯೋಗವು ಇದನ್ನು ಸಮರ್ಥಿಸುವುದು

ಸಂಹಿತಾಪಾಠಃ

ಯಾಸು ರಾಜಾ ವರುಣೋ ಯಾಸು ಸೋಮೋ ವಿಶ್ವೇದೇವಾ ಯಾಸೂರ್ಜಂ

ಮದಂತಿ ।

ವೈಶ್ವಾನರೋ ಯಾಸ್ವಗ್ನಿಃ ಪ್ರವಿಷ್ಟಸ್ತಾ ಆಪೋ ದೇವೀರಿಹ ಮಾಮವಂತು ॥

ಪದಪಾಠಃ

**ಯಾಸು । ರಾಜಾ । ವರುಣಃ । ಯಾಸು । ಸೋಮಃ । ವಿಶ್ವೇ । ದೇವಾಃ । ಯಾಸು । ಊರ್ಜಂ । ಮದಂತಿ ।**

**ವೈಶ್ವಾನರಃ । ಯಾಸು । ಅಗ್ನಿಃ । ಪ್ರಽವಿಷ್ಟಃ । ತಾಃ । ಆಪಃ । ದೇವೀಃ । ಇಹ । ಮಾಂ । ಅವಂತು ॥೪॥**

ಸಾಯಣಭಾಷ್ಯಂ

ಅಪಾಂ ರಾಜಾ ವರುಣೋ ಯಾಸ್ವಪ್ಸು ವರ್ತತೇ । ಸೋಮೋ ಯಾಸ್ವಪ್ಸು ವರ್ತತೇ । ಯಾಸ್ವಪ್ಸು ಸ್ಥಿತಾ ವಿಶ್ವೇ ಸರ್ವೇ ದೇವಾ ಊರ್ಜಮನ್ನಂ ಮದಂತಿ । ವೈಶ್ವಾನರೋಽಗ್ನಿರ್ಯಾಸು ಪ್ರವಿಷ್ಟಃ । ತಾ ಆಪೋ ದೇವ್ಯ ಇಹ ಸ್ಥಿತಂ ಮಾಮವಂತು ॥

ಪ್ರತಿಪದಾರ್ಥ

**ಯಾಸು**—ಯಾವ ಉದಕಗಳ ಮಧ್ಯೇ । **ರಾಜಾ**—ಪ್ರಭುವಾದ । **ವರುಣಃ**—ವರುಣದೇವನು ಪ್ರಕಾಶಿಸುವನೋ । **ಯಾಸು**—ಯಾವ ಉದಕಗಳಲ್ಲಿ । **ಸೋಮಃ**—ಸೋಮದೇವನು ಸ್ಥಿತನಾಗಿರುವನೋ । **ಯಾಸು**—ಯಾವ ಉದಕಗಳಲ್ಲಿ । **ವಿಶ್ವೇ ದೇವಾಃ**—ಸಮಸ್ತದೇವತೆಗಳೂ । **ಊರ್ಜಂ**—ಅನ್ನವನ್ನು । **ಮದಂತಿ**—ಸವಿಯುವರೋ । **ಯಾಸು**—ಯಾವ ಉದಕಗಳಲ್ಲಿ । **ವೈಶ್ವಾನರಃ**—ವಿಶ್ವಕ್ಕೆಲ್ಲಾ ನೇತೃವಾದ । **ಅಗ್ನಿಃ**—ಅಗ್ನಿಯು ।

**ಪ್ರವಿಷ್ಟಃ**—ಪ್ರವೇಶಿಸಿ ಅಡಗಿದ್ದನೋ | **ದೇವೀಃ**—ದೇವತಾತ್ಮಗಳಾದ | **ತಾಃ ಆಪಃ**—ಅದೇ ಉದಕಗಳು | **ಇಹ**—ಈ ಯಜ್ಞದಲ್ಲಿ ನಿರತನಾದ | **ಮಾಂ**—ನನ್ನನ್ನು | **ಅವಂತು**—ರಕ್ಷಿಸಲಿ.

ಭಾವಾರ್ಥ

ಪ್ರಭುವಾದ ವರುಣದೇವನು ಯಾವ ಉದಕಗಳ ಮಧ್ಯೆ ಪ್ರಕಾಶಿಸುವನೋ ಯಾವ ಉದಕಗಳಲ್ಲಿ ಸೋಮದೇವನು ಸ್ಥಿತನಾಗಿರುವನೋ ಯಾವ ಉದಕಗಳಲ್ಲಿ ಸಮಸ್ತ ದೇವತೆಗಳೂ ಅನ್ನವನ್ನು ಸವಿಯುವರೋ ಯಾವ ಉದಕಗಳಲ್ಲಿ ವೈಶ್ವಾನರರೂಪಿಯಾದ ಅಗ್ನಿಯು ಪ್ರವೇಶಿಸಿದ್ದನೋ ದೇವತಾತ್ಮಗಳಾದ ಅದೇ ಉದಕಗಳು ಈ ಯಜ್ಞದಲ್ಲಿ ನಿರತನಾದ ನನ್ನನ್ನು ರಕ್ಷಿಸಲಿ.

English Translation

May they in which their king, Varuna, in which Soma, abides, in which the gods delight (to receive) the sacrificial food, into which Agni Vaishwanara entered, may those divine waters protect me here (on earth).

ವಿಶೇಷವಿಷಯಗಳು

**ವೈಶ್ವಾನರೋ ಯಾಸು ಅಗ್ನಿಃ ಪ್ರವಿಷ್ಟಃ**—ವೈಶ್ವಾನರರೂಪಿಯಾದ ಅಗ್ನಿಯು ಯಾವ ಉದಕಗಳಲ್ಲಿ ಪ್ರವೇಶಿಸಿ ಗೂಢವಾಗಿದ್ದನೋ ಆ ಉದಕಗಳು ನನ್ನನ್ನು ರಕ್ಷಿಸಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ. ಅಗ್ನಿಯು ನೀರಿನಲ್ಲಿ ಏತಕ್ಕೆ ಅಡಗಿಕೊಂಡಿದ್ದನು ಎಂಬ ವಿಷಯದಲ್ಲಿ ಒಂದು ಪೂರ್ವೇತಿಹಾಸವು ಋಗ್ವೇದದಲ್ಲಿಯೂ ಯಜುರ್ವೇದದಲ್ಲಿಯೂ ಉಕ್ತವಾಗಿರುವುದು—

**ಅಗ್ನೇಃ ಪೂರ್ವೇ ಭ್ರಾತರೋ ಅರ್ಥಮೇತಂ ರಥೀವಾಧ್ವಾನಮನ್ವಾವರೀವುಃ |**
**ತಸ್ಮಾದ್ಭಿಯಾ ವರುಣ ದೂರಮಾಯಂ ಗೌರೋ ನಕ್ಷೇಪ್ನೋರವಿಜೇ ಜ್ಯಾಯಾಃ ||**
**ಕುರ್ಮಸ್ತ ಆಯುರಜರಂ ಯದಗ್ನೇ ಯಥಾ ಯುಕ್ತೋ ಜಾತವೇದೋ ನ ರಿಷ್ಯಾಃ |**
**ಅಥಾ ವಹಾಸಿ ಸುಮನಸ್ಯಮಾನೋ ಭಾಗಂ ದೇವೇಭ್ಯೋ ಹವಿಷಃ ಸುಜಾತ ||**
**ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತ ಭಾಗಂ |**
**ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ ||**
**ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ |**
**ತವಾಗ್ನೇ ಯಜ್ಞೋ ೩ ಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ||**

(ಋ. ಸಂ. ೧೦-೫೧-೬ ರಿಂದ ೯)

ಈ ಸೂಕ್ತದಲ್ಲಿ ದೇವತೆಗಳಿಗೂ ಅಗ್ನಿಗೂ ನಡೆದ ಸಂಭಾಷಣೆಯು ಉಕ್ತವಾಗಿದೆ. ಮುಖ್ಯವಿಚಾರವೇನೆಂದರೆ—ಅಗ್ನಿಗೆ **ಭೂಪತಿಃ, ಭುವನಪತಿಃ, ಭೂತಾನಾಂ ಪತಿಃ** ಎಂಬ ಹೆಸರಿನ ಮೂವರು ಜ್ಯೇಷ್ಠಸಹೋದರರಿದ್ದರು. ಅವರೂ ಅಗ್ನಿಯಂತೆಯೇ ಯಜ್ಞದಲ್ಲಿ ಯಜಮಾನರು ಅರ್ಪಿಸುವ ಹವಿಸ್ಸನ್ನು ದೇವತೆಗಳ ಬಳಿಗೆ ವಹಿಸುತ್ತಿದ್ದರು. ಹೀಗಿರುವಲ್ಲಿ ಯಜ್ಞದಲ್ಲಿ ಹೋಮಮಾಡುವಾಗ ವಜ್ರಸದೃಶವಾದ ವಷಟ್ಕಾರಶಬ್ದಪೂರ್ವಕವಾದ ಹೋಮಗಳಿಂದ ಈ ಮೂವರು ಸಹೋದರರೂ ಮೃತರಾದರು. ಅದನ್ನು ಕಂಡು ಕಿರಿಯವನಾದ ಅಗ್ನಿಯು ತನಗೂ ಆ ದೆಶೆ ಸಂಭವಿಸಬಹುದೆಂದು ಭೀತನಾಗಿ ನೀರಿನಲ್ಲಿ ಹೋಗಿ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯನ್ನು ಎಲ್ಲಿಯೂ ಕಾಣದೆ ಹುಡುಕುತ್ತಿರುವಾಗ ನೀರಿನಲ್ಲಿದ್ದ ಮೀನುಗಳು ಅಗ್ನಿಯು ನೀರಿನಲ್ಲಿ ಇರುವನೆಂದು ದೇವತೆಗಳಿಗೆ ತಿಳಿಸಿದವು. ಆಗ ದೇವತೆಗಳು

ಅಗ್ನಿಯ ಬಳಿಗೆ ಬಂದು ಅವನೊಡನೆ ಈ ರೀತಿ ಸಂಭಾಷಿಸಿದರು ಈ ಸಂಭಾಷಣೆಯೇ ಈ ಸೂಕ್ತದಲ್ಲಿ ವಿವರಿಸಲ್ಪಟ್ಟಿದೆ ದೇವತೆಗಳು ಅಗ್ನಿಯನ್ನು ನೀರಿನಿಂದ ಎದ್ದು ಬರಬೇಕೆಂದೂ ಹಿಂದಿನಂತೆ ತಮಗೆ ಹವಿಸ್ಸನ್ನು ವಹಿಸಬೇಕೆಂದೂ ಪ್ರಾರ್ಥಿಸಲು ಅಗ್ನಿಯು, ತನ್ನ ಸಹೋದರರು ಮೃತರಾದುದರಿಂದ ತನಗೂ ಅದೇ ಗತಿ ಪ್ರಾಪ್ತವಾಗುವುದೆಂದೂ ಆದ್ದರಿಂದ ತಾನು ಬರುವುದಿಲ್ಲವೆಂದೂ ಹೇಳಿದನು ಅದಕ್ಕೆ ದೇವತೆಗಳು ಮರಣಕ್ಕಾಗಿ ಹೆದರಬೇಡವೆಂದೂ ನಿನಗೆ ಮರಣದ ಭಯವುಂಟಾಗದಂತೆ ಮಾಡುವೆವೆಂದೂ ಹೇಳಲು ಅಗ್ನಿಯು ಪುನಃ ಇಂತೆಂದನು—ಒಳ್ಳೆಯದು, ಮರಣಭಯವನ್ನು ನನಗೆ ತಪ್ಪಿಸುವುದಲ್ಲದೆ ಯಜ್ಞಗಳಲ್ಲಿ ಪ್ರಯಾಜಾ, ಅನೂಯಾಜಾ, ಊರ್ಜಸ್ವತ್, ಸ್ವಿಷ್ಟಕೃತ್ ಆಜ್ಯಭಾಗ ಮೊದಲಾದ ಕೆಲವು ವಿಶೇಷ ಆಹುತಿಗಳನ್ನು ನನಗೆ ಕೊಡಬೇಕು ಎಂದನು ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಅವನು ಕೇಳಿದ ಹವಿರ್ಭಾಗಗಳನ್ನು ಕೊಟ್ಟು, ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವಂತೆಯೂ, ಸರ್ವರಿಂದಲೂ ನಮಸ್ಕೃತನಾಗುವಂತೆಯೂ, ದೀರ್ಘಾಯುವಾಗುವಂತೆಯೂ ವರವನ್ನಿತ್ತು ಪೂರ್ವದಂತೆ ಹವಿರ್ವಹನಕಾರ್ಯದಲ್ಲಿ ಅವನನ್ನು ನಿಯಮಿಸಿದರು ಎಂದು ಈ ಸೂಕ್ತದ ಮುಖ್ಯಾಭಿಪ್ರಾಯವು ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ ಈ ವಿಷಯವಾಗಿ ಈರೀತಿ ಇರುವುದು

> **ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್ತೇ ದೇವೇಭ್ಯೋ ಹವ್ಯಂ ವಹಂತಃ ಪ್ರಾಮೀಯಂತ ಸೋಽಗ್ನಿರಬಿಭೇದಿತ್ಥಂ ವಾವಸ್ಯ ಆರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್ತಂ ಮತ್ಸ್ಯಃ ಪ್ರಾಬ್ರವೀತ್ತಮಶಪದ್ಧಿಯಾಧಿಯಾ ತ್ವಾ ವಧ್ಯಾಸುರ್ಯೋ ಮಾ ಪ್ರಾವೋಚ ಇತಿ ತಸ್ಮಾನ್ಮತ್ಸ್ಯಂ ಧಿಯಾಧಿಯಾ ಘ್ನಂತಿ ಶಪ್ತೋ ಹಿ ತಮನ್ವವಿಂದನ್ತಮಬ್ರುವನ್ನುಪ ನ ಆ ವರ್ತಸ್ವ ಹವ್ಯಂ ನೋ ವಹೇತಿ ಸೋಽಬ್ರವೀದ್ವರಂ ವೃಣೈ ಯದೇವ ಗೃಹೀತಸ್ಯಾಹುತಸ್ಯ ಬಹಿಃ ಪರಿಧಿಸ್ಕಂದಾತ್ತನ್ಮೇ ಭ್ರಾತೃಣಾಂ ಭಾಗಧೇಯಮಸದಿತಿ ತಸ್ಮಾದ್ಯದ್ಗೃಹೀತಸ್ಯಾಹುತಸ್ಯ ಬಹಿಃಪರಿಧಿ ಸ್ಕಂದತಿ ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ಪರಿಧೀನ್ಪರಿ ದಧಾತಿ ರಕ್ಷಸಾಮಪಹತ್ಯೈ ||**
>
> (ತೈ ಸಂ ೨ ೬-೬-೧,೨)

ಪೂರ್ವದಲ್ಲಿ ಅಗ್ನಿಗೆ ಮೂರು ಮಂದಿ ಜ್ಯೇಷ್ಠಸಹೋದರರಿದ್ದರು ಅವರು ದೇವತೆಗಳಿಗೆ ಯಜ್ಞಯಾಗಾದಿಗಳಲ್ಲಿ ಯಜಮಾನನು ಅರ್ಪಿಸುವ ಹವಿಸ್ಸನ್ನು ಒಯ್ಯುತ್ತಿದ್ದರು ಅವರು ಮೃತರಾಗಲು ಅಗ್ನಿಯು ತನಗೂ ಆ ಗತಿ ಪ್ರಾಪ್ತವಾಗಬಹುದೆಂದು ಹೆದರಿ ಓಡಿಹೋಗಿ ನೀರಿನಲ್ಲಿ ಪ್ರವೇಶಿಸಿ ಯಾರಿಗೂ ಕಾಣದಂತೆ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯು ಎಲ್ಲಿ ಹೋದನೆಂದು ಹುಡುಕುತ್ತಿರುವಾಗ ನೀರಿನಲ್ಲಿದ್ದ ಒಂದು ಮೀನು, ಅಗ್ನಿಯು ನೀರಿನಲ್ಲಿ ಅವಿತುಕೊಂಡಿರುವನೆಂದು ದೇವತೆಗಳಿಗೆ ಹೇಳಿತು ಮೀನಿನ ಈ ಚಾಡಿಮಾತನ್ನು ಕೇಳಿ ಅಗ್ನಿಗೆ ಕೋಪಬಂದು ಇನ್ನುಮೇಲೆ ನೀರಿನಲ್ಲಿರುವ ಮೀನುಗಳನ್ನು ಜನರು ಬಲೆ ಮೊದಲಾದ ಸಾಧನಗಳಿಂದ ಹಿಡಿದು ಕೊಲ್ಲುವಂತೆ ಶಪಿಸಿದನು ಅದರಂತೆ ಈಗಲೂ ಜನರು ಮೀನುಗಳನ್ನು ಹಿಡಿದು ಕೊಂದು ತಿನ್ನುತ್ತಿರುವರು. ಒಳಿಕ ದೇವತೆಗಳು ಅಗ್ನಿಯನ್ನು ಕುರಿತು ಎಲೈ ಅಗ್ನಿಯೇ, ನೀನು ಹಿಂತಿರುಗಿ ಬಂದು ನಮಗೆ ಹವಿರ್ವಹನಕಾರ್ಯದಲ್ಲಿ ಉದ್ಯುಕ್ತನಾಗಿರು ಎನ್ನಲು ಅದಕ್ಕೆ ಅಗ್ನಿಯು ಯಜ್ಞದಲ್ಲಿ ಹೋಮಮಾಡುವಾಗ ಪರಿಧಿಯ (ರಾಕ್ಷಸರು ಬಂದು ಯಜ್ಞಕ್ಕೆ ವಿಘ್ನಮಾಡದಂತೆ ಅಗ್ನಿಕುಂಡದ ನಾಲ್ಕು ದಿಕ್ಕುಗಳಲ್ಲಿಯೂ ಇಡುವ ದರ್ಭೆಯಶೀಲಗಳಿಗೆ ಪರಿಧಿಯೆಂದು ಹೆಸರು ) ಹೊರಗಡೆ ಎಂದರೆ ಈಚೆ ಬೀಳುವ ಆಜ್ಯವೇ ಮೊದಲಾದ ಆಹುತಿಗಳ ಭಾಗವು ನನ್ನ ಸಹೋದರರಿಗೆ ಹವಿರ್ಭಾಗವಾಗುವಂತೆ ವರವನ್ನು ಕೊಟ್ಟರೆ ತಾನು ನೀರಿನಿಂದ ಎದ್ದುಬಂದು ಪೂರ್ವದಂತೆ ಹವಿಸ್ಸನ್ನು ಒಯ್ಯುವೆನೆಂದು ಹೇಳಿದನು. ಅದಕ್ಕೆ ದೇವತೆಗಳು ಸಮ್ಮತಿಸಿ ಅವನಿಗೆ ಆರೀತಿ ವರವನ್ನು ಕೊಟ್ಟರು. ಇತ್ಯಾದಿ ಉಪಾಖ್ಯಾನವಿದೆ

# ಐವತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಆ ಮಾಂ ಮಿತ್ರಾವರುಣೇತಿ ಚತುರ್ಋಚಂ ಸಪ್ತದಶಂ ಸೂಕ್ತಂ ವಸಿಷ್ಠಸ್ಯಾರ್ಷಂ । ಚತುರ್ಥ್ಯತಿಜಗತೀ ವ್ಯೂಹೇನ ಶಕ್ವರೀ ವಾದಿತಸ್ತಿಸ್ರೋ ಜಗತ್ಯಃ । ಪ್ರಥಮಾ ಮೈತ್ರಾವರುಣೀ ದ್ವಿತೀಯಾಗ್ನೇಯೀ ತೃತೀಯಾ ವೈಶ್ವದೇವೀ ಚತುರ್ಥೀ ಗಂಗಾದಿನದೀದೇವತಾಕಾ । ತಥಾ ಚಾನುಕ್ರಮಣಿಕಾ । ಆ ಮಾಂ ಮೈತ್ರಾವರುಣ್ಯಾಗ್ನೇಯೀ ವೈಶ್ವದೇವೀ ನದೀಸ್ತುತಿರ್ಜಾಗತಮಂತ್ಯಾತಿಜಗತೀ ಶಕ್ವರೀ ವೇತಿ ॥ ಅಸ್ಯ ಸೂಕ್ತಸ್ಯ ಪ್ರತ್ಯೃಚಂ ವಿಷಾದಿಹರಣೇ ವಿನಿಯೋಗೋ ಲಿಂಗಾದವಗಂತವ್ಯಃ ॥**

**ಅನುವಾದವು — ಆ ಮಾಂ ಮಿತ್ರಾವರುಣಾ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು ಇದರಲ್ಲಿ ನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಈ ಸೂಕ್ತದ ಮೊದಲ ಮೂರು ಋಕ್ಕುಗಳು ಜಗತೀಛಂದಸ್ಕವು. ನಾಲ್ಕನೆಯದು ಅತಿಜಗತೀ ಅಥವಾ ಶಕ್ವರೀಛಂದಸ್ಕವು ಮೊದಲನೆಯ ಋಕ್ಕಿಗೆ ಮಿತ್ರಾವರುಣರು ದೇವತೆಯು, ಎರಡನೆಯ ಋಕ್ಕಿಗೆ ಅಗ್ನಿಯು ದೇವತೆಯು, ಮೂರನೆಯ ಋಕ್ಕಿಗೆ ವಿಶ್ವೇದೇವತೆಗಳು ದೇವತೆಯು, ನಾಲ್ಕನೆಯ ಋಕ್ಕಿಗೆ ಗಂಗಾದಿ ನದಿಗಳು ದೇವತೆಯು **ಆ ಮಾಂ ಮೈತ್ರಾವರುಣ್ಯಾಗ್ನೇಯೀ ವೈಶ್ವದೇವೀ ನದೀಸ್ತುತಿರ್ಜಾಗತಮಂತ್ಯಾತಿಜಗತೀ ಶಕ್ವರೀ ವಾ** ಎಂದು ಹೇಳಿರುವುದು **ಈ** ಸೂಕ್ತದ ಪ್ರತಿಋಕ್ಕಿನ ವಿನಿಯೋಗವನ್ನು ಅರ್ಥಾನುಸಾರವಾಗಿ ವಿಷಾದಿಹರಣಾದಿಗಳಲ್ಲಿ ಉಪಯೋಗಿಸಬೇಕೆಂದು ತಿಳಿಯಬೇಕು

## ಸೂಕ್ತ—೫೦

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೫೦ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
ಋಷಿಃ—ವಸಿಷ್ಠಃ ॥
ದೇವತಾ—೧ ಮಿತ್ರಾವರುಣೌ । ೨ ಅಗ್ನಿಃ । ೩ ವಿಶ್ವೇದೇವಾಃ । ೪ ನದ್ಯಃ ॥
ಛಂದಃ—೧-೩ ಜಗತೀ । ೪. ಅತಿಜಗತೀ ಶಕ್ವರೀ ವಾ ॥

ಸಂಹಿತಾಪಾಠಃ

ಆ ಮಾಂ ಮಿತ್ರಾವರುಣೇಹ ರಕ್ಷತಂ ಕುಲಾಯಯದ್ವಿಶ್ವಯನ್ಮಾ ನ ಆ ಗನ್ ।
ಅಜಕಾವಂ ದುರ್ದೃಶೀಕಂ ತಿರೋ ದಧೇ ಮಾ ಮಾಂ ಪದ್ಯೇನ ರಪಸಾ ವಿದತ್ತ್ಸರುಃ ॥ ೧ ॥

ಪದಪಾಠಃ

**ಆ । ಮಾಂ । ಮಿತ್ರಾವರುಣಾ । ಇಹ । ರಕ್ಷತಂ । ಕುಲಾಯಯತ್ । ವಿಽಶ್ವಯತ್ । ಮಾ । ನಃ । ಆ । ಗನ್ ।**
**ಅಜಕಾಽವಂ । ದುಃಽದೃಶೀಕಂ । ತಿರಃ । ದಧೇ । ಮಾ । ಮಾಂ । ಪದ್ಯೇನ । ರಪಸಾ । ವಿದತ್ । ತ್ಸರುಃ ॥**

ಸಾಯಣಭಾಷ್ಯಂ

ಹೇ ಮಿತ್ರಾವರುಣಾ ಹೇ ಮಿತ್ರಾವರುಣೌ ಯುವಾಮಿಹಾಸ್ಮಿಲ್ಲೋಕೇ ಮಾಮಾ ರಕ್ಷತಂ । ಅ-ಭಿಮುಖ್ಯೇನ ಪಾಲಯತಂ । ಕುಲಾಯಯತ್ । ಕುಲಾಯಂ ಸ್ಥಾನಂ । ತತ್ಕುರ್ವದ್ವಿಶ್ವಯದ್ವಿಶೇಷೇಣ ವರ್ಧಮಾನಂ ವಿಷಂ ನೋಽಸ್ಮಾನಾ ಅಭಿಮುಖ್ಯೇನ ಮಾ ಗನ್ । ಮಾ ಗಮತ್ । ಮಾ ಗಚ್ಛತು । ತಥಾ-ಜಕಾವಂ । ಅಜಕಾ ನಾಮ ರೋಗವಿಶೇಷಃ । ತದ್ವದ್ದುರ್ದೃಶೀಕಂ ದುರ್ದರ್ಶನಂ ವಿಷಂ ತಿರೋ ದಧೇ । ತಿರೋ ಧತ್ತಾಂ । ನಶ್ಯತ್ವಿತ್ಯರ್ಥಃ । ತಥಾ ತ್ಸರುಶ್ಛದ್ಮಗಾಮೀ । ಜಿಹ್ಮಗಃ ಸರ್ಪ ಇತ್ಯರ್ಥಃ । ಮಾಂ ಪ-ದ್ಯೇನ ಪಾದಭವೇನ ರಪಸಾ । ರಪಿಃ ಶಬ್ದಕರ್ಮಾ । ಶಬ್ದೇನ ಮಾ ವಿದತ್ । ನ ಜಾನಾತು ॥

ಪ್ರತಿಪದಾರ್ಥ

**ಮಿತ್ರಾವರುಣಾ**—ಎಲೈ ಮಿತ್ರಾವರುಣರೇ, । **ಇಹ**—ಈ ಯಜ್ಞದಲ್ಲಿ । **ಮಾಂ**—ನನ್ನನ್ನು । **ಆ ರ-ಕ್ಷತಂ**—ರಕ್ಷಿಸಿರಿ । **ಕುಲಾಯಯತ್**—ಇಲ್ಲಿ ಸ್ಥಾನವನ್ನು ಕಲ್ಪಿಸಿಕೊಳ್ಳುವುದೂ, । **ವಿಶ್ವಯತ್**—ಸರ್ವತ್ರ ಪುಷ್ಟಿಗೊಳ್ಳುವುದೂ ಆದ ವಿಷವು । **ನಃ**—ನಮ್ಮಲ್ಲಿಗೆ । **ಮಾ ಆ ಗನ್**—ಬಂದು ಸಮೀಪಿಸದಿರಲಿ । **ಅಜಕಾವಂ**—ರೋಗಕಾರಕವಾದುದೂ । **ದುರ್ದೃಶೀಕಂ**—ನೋಡಲು ಅಸಹ್ಯವಾದುದೂ ಆದ ವಿಷವು । **ತಿರೋದಧೇ**—ಮಾಯವಾಗಲಿ । **ತ್ಸರುಃ**—ವಕ್ರಗಾಮಿಯಾದ ಸರ್ಪವು । **ಮಾಂ**—ನನ್ನನ್ನು । **ಪದ್ಯೇನ**—ನನ್ನ ಪಾದದ ಚಲನದಿಂದ ಉಂಟಾಗುವ । **ರಪಸಾ**—ಶಬ್ದದಿಂದ । **ಮಾ ವಿದತ್**—(ನನ್ನ ಇರುವಿಕೆಯನ್ನು) ತಿಳಿಯದಿರಲಿ

ಭಾವಾರ್ಥ

ಎಲೈ ಮಿತ್ರಾವರುಣರೇ, ಈ ಯಜ್ಞದಲ್ಲಿ ನನ್ನನ್ನು ರಕ್ಷಿಸಿರಿ ಇಲ್ಲಿ ಸ್ಥಾನವನ್ನು ಕಲ್ಪಿಸಿಕೊಳ್ಳುವುದೂ, ಸರ್ವತ್ರ ಪುಷ್ಟಿಗೊಳ್ಳುವುದೂ ಆದ ವಿಷವು ನಮ್ಮಲ್ಲಿಗೆ ಬಂದು ನಮ್ಮನ್ನು ಸಮೀಪಿಸದಿರಲಿ ರೋಗಕಾರಕವಾದುದೂ, ನೋಡಲು ಅಸಹ್ಯವಾದುದೂ ಆದ ವಿಷವು ಮಾಯವಾಗಲಿ ವಕ್ರಗಾಮಿಯಾದ ಸರ್ಪವು ನನ್ನನ್ನು ನನ್ನ ಪಾದದ ಚಲನದಿಂದ ಉಂಟಾಗುವ ಶಬ್ದದಿಂದ (ನನ್ನ ಇರುವಿಕೆಯನ್ನು) ತಿಳಿಯದಿರಲಿ

English Translation

Mitra and Varuna, protect me here (in this world) let not the insidiousand spreading (poison) reach me may the equally malignant and undiscernible (venom) disappear let not the tortuous (snake) recognize me by the sound of my footsteps.

ಸಂಹಿತಾಪಾಠಃ

ಯದ್ವಿಜಾಮನ್ಪರುಷಿ ವಂದನಂ ಭುವದಷ್ಠೀವಂತೌ ಪರಿ ಕುಲ್ಫೌ ಚ ದೇಹತ್।
ಅಗ್ನಿಷ್ಟಚ್ಛೋಚನ್ನಪ ಬಾಧತಾಮಿತೋ ಮಾ ಮಾಂ ಪದ್ಯೇನ ರಪಸಾ ವಿದ-
ತ್ತ್ಸರುಃ ॥ ೨ ॥

ಪದಪಾಠಃ

**ಯತ್ । ವಿಽಜಾಮನ್ । ಪರುಷಿ । ವಂದನಂ । ಭುವತ್ । ಅಷ್ಠೀವಂತೌ । ಪರಿ । ಕುಲ್ಫೌ । ಚ । ದೇಹತ್ । ಅಗ್ನಿಃ । ತತ್ । ಶೋಚನ್ । ಅಪ । ಬಾಧತಾಂ । ಇತಃ । ಮಾಂ । ಮಾಂ । ಪದ್ಯೇನ । ರಪಸಾ । ವಿದತ್ । ತ್ಸರುಃ ॥ ೨ ॥**

ಸಾಯಣಭಾಷ್ಯಂ

**ವಂದನಮೇತತ್ಸಂಜ್ಞಕಂ ಯದ್ವಿಷಂ ವಿಜಾಮನ್ ವಿವಿಧಜನ್ಮನಿ ಪರುಷಿ ವೃಕ್ಷಾದೀನಾಂ ಪರ್ವಣಿ ಭುವತ್ ಉದ್ಭವೇತ್ । ಯಚ್ಚ ವಿಷಮಷ್ಠೀವಂತೌ ಜಾನುನೀ ಕುಲ್ಫೌ ಗುಲ್ಫೌ ಚ ಪರಿ ದೇಹತ್ ॥ ದಿಹ ಉಪಚಯೇ ॥ ಉಪಚಿತಂ ಕುರ್ಯಾತ್ । ಅಗ್ನಿರ್ದೇವಃ ಶೋಚನ್ ದೀಪ್ಯಮಾನಃ ಸನ್ನಿತೋಽಸ್ಮಾತ್ಸ್ಥಾನಾತ್ತದ್ವಿಷಮಪ ಬಾಧತಾಂ । ಅಪಹಂತು । ಶಿಷ್ಟಂ ವ್ಯಾಖ್ಯಾತಂ ॥**

ಪ್ರತಿಪದಾರ್ಥ

**ವಂದನಂ**—ವಂದನಸಂಜ್ಞಕವಾದ । **ಯತ್**—ಯಾವ ವಿಷವು । **ವಿಜಾಮನ್**—ಅನೇಕ ರೂಪಗಳಲ್ಲಿ । **ಪರುಷಿ**—ವೃಕ್ಷಾದಿಗಳ ಗಿಣ್ಣುಗಳಲ್ಲಿ । **ಭುವತ್**—ಉದ್ಭವಿಸುವುದೋ । **(ಯತ್**—ಯಾವುದು) **ಅಷ್ಠೀವಂತೌ**—ಮೊಣಕಾಲುಗಳಲ್ಲಿ । **ಕುಲ್ಫೌ ಚ**—ಪಾದಗಳ ಸಂದಿಗಳಲ್ಲೂ । **ಪರಿ ದೇಹತ್**—ತುಂಬಿಕೊಳ್ಳುವುದೋ । **ತತ್**—ಆ ವಿಷವನ್ನು । **ಶೋಚನ್**—ಪ್ರಕಾಶಮಾನನಾದ । **ಅಗ್ನಿಃ**—ಅಗ್ನಿದೇವನು । **ಇತಃ**—ನಮ್ಮ ಜಾಗದಿಂದ । **ಅಪ ಬಾಧತಾಂ**—ದೂರಕ್ಕೆ ಓಡಿಸಿ ನಾಶಪಡಿಸಲಿ. । **ತ್ಸರುಃ**—ವಕ್ರಗಾಮಿಯಾದ ಸರ್ಪವು । **ಮಾಂ**—ನನ್ನನ್ನು । **ಪದ್ಯೇನ**-ನನ್ನ ಪಾದದ ಚಲನದಿಂದ ಉಂಟಾಗುವ । **ರಪಸಾ**—ಶಬ್ದದಿಂದ । **ಮಾ ವಿದತ್**-(ನನ್ನ ಇರುವಿಕೆಯನ್ನು) ತಿಳಿಯದಿರಲಿ.

ಭಾವಾರ್ಥ

ವಂದನಸಂಜ್ಞಕವಾದ ಯಾವ ವಿಷವು ಅನೇಕ ರೂಪಗಳಲ್ಲಿ ವೃಕ್ಷಾದಿಗಳ ಗಿಣ್ಣುಗಳಲ್ಲಿ ಉದ್ಭವಿಸುವುದೋ ಯಾವುದು ಮೊಣಕಾಲುಗಳ ಸಂದಿಗಳಲ್ಲೂ ಪಾದಗಳ ಸಂದಿಗಳಲ್ಲೂ ತುಂಬಿಕೊಳ್ಳುವುದೋ ಆ ವಿಷವನ್ನು ಪ್ರಕಾಶಮಾನನಾದ ಅಗ್ನಿದೇವನು ನಮ್ಮ ಜಾಗದಿಂದ ದೂರಕ್ಕೆ ಓಡಿಸಿ ನಾಶಪಡಿಸಲಿ. ವಕ್ರಗಾಮಿಯಾದ ಸರ್ಪವು ನನ್ನನ್ನು ನನ್ನ ಪಾದದ ಚಲನದಿಂದ ಉಂಟಾಗುವ ಶಬ್ದದಿಂದ ತಿಳಿಯದಿರಲಿ

## English Translation

May the brilliant Agni counteract that poison which is generated in the manifold knots (of trees) and the like, or which is smeared upon the knees or ankles . let not the tortuous snake recognize me by the sound of my footsteps.

ಸಂಹಿತಾಪಾಠಃ

**ಯಚ್ಛಲ್ಮಲೌ ಭವತಿ ಯನ್ನದೀಷು ಯದೋಷಧೀಭ್ಯಃ ಪರಿ ಜಾಯತೇ ವಿಷಂ ।**

ವಿಶ್ವೇ ದೇವಾ ನಿರಿತಸ್ತತ್ಸುವಂತು ಮಾ ಮಾಂ ಪದ್ಯೇನ ರಪಸಾ ವಿದತ್ತ್ಸರುಃ॥

ಪದಪಾಠಃ

ಯತ್ । ಶಲ್ಮಲೌ । ಭವತಿ । ಯತ್ । ನದೀಷು । ಯತ್ । ಓಷಧೀಭ್ಯಃ । ಪರಿ । ಜಾಯತೇ । ವಿಷಂ ।

ವಿಶ್ವೇ । ದೇವಾಃ । ನಿಃ । ಇತಃ । ತತ್ । ಸುವಂತು । ಮಾ । ಮಾಂ । ಪದ್ಯೇನ । ರಪಸಾ । ವಿದತ್ ।

ತ್ಸರುಃ ॥ ೩ ॥

ಸಾಯಣಭಾಷ್ಯಂ

ಯದ್ವಿಷಂ ಶಲ್ಮಲಾವೇತತ್ಸಂಜ್ಞಕೇ ವೃಕ್ಷೇ ಭವತಿ । ಯದ್ವಿಷಂ ನದೀಷು ತತ್ರಸ್ಥಾಪ್ಸು ಪ್ರಾದುರ್ಭವತಿ । ಪರೀತಿ ಪಂಚಮ್ಯರ್ಥಾನುವಾದೀ । ಓಷಧೀಭ್ಯಃ ಸಕಾಶಾದ್ಯದ್ವಿಷಂ ಜಾಯತೇ ಉತ್ಪದ್ಯತೇ । ವಿಶ್ವೇ ಸರ್ವೇ ದೇವಾಸ್ತದ್ವಿಷಮಿತೋಽಸ್ಮಾಜ್ಜನಾದ್ದೇಶಾದ್ವಾ ನಿಃ ಸುವಂತು । ನಿಃಶೇಷೇಣ ಪ್ರೇರಯಂತು । ಮಾ ಮಾಮಿತಿ ಶಿಷ್ಟಂ ವ್ಯಾಖ್ಯಾತಂ ॥

ಪ್ರತಿಪದಾರ್ಥ

**ಯತ್**—ಯಾವ ವಿಷವು । **ಶಲ್ಮಲೌ**—ಶಲ್ಮಲಿಯೆಂಬ ವೃಕ್ಷದಲ್ಲಿ । **ಭವತಿ**—ಉತ್ಪನ್ನವಾಗುವುದೋ । **ಯತ್**—ಯಾವ ವಿಷವು । **ನದೀಷು ಪರಿ**—ನದಿಗಳಿಂದಲೂ ಉತ್ಪನ್ನವಾಗುವುದೋ । **ಯತ್ ವಿಷಂ**—ಯಾವ ವಿಷವು । **ಓಷಧೀಭ್ಯಃ**—ಓಷಧಿಗಳಿಂದಲೂ । **ಜಾಯತೇ**—ಉತ್ಪನ್ನವಾಗುವುದೋ, । **ತತ್**—ಆ ವಿಷವನ್ನು । **ವಿಶ್ವೇ ದೇವಾಃ**—ಸಕಲ ದೇವತೆಗಳೂ । **ಇತಃ**—ನಮ್ಮಿಂದ । **ನಿಃ ಸುವಂತು**—ಓಡಿಸಿ ನಾಶಪಡಿಸಲಿ । **ತ್ಸರುಃ**—ವಕ್ರಗಾಮಿಯಾದ ಸರ್ಪವು । **ಪದ್ಯೇನ**—ನನ್ನ ಕಾಲಿನ ಚಲನದ । **ರಪಸಾ**—ಶಬ್ದದಿಂದ । **ಮಾಂ**—ನನ್ನ ಇರುವಿಕೆಯನ್ನು । **ಮಾ ವಿದತ್**—ಅರಿಯದಿರಲಿ

ಭಾವಾರ್ಥ

ಯಾವ ವಿಷವು ಶಲ್ಮಲಿಯೆಂಬ ವೃಕ್ಷದಲ್ಲಿ ಉತ್ಪನ್ನವಾಗುವುದೋ, ಯಾವ ವಿಷವು ನದಿಗಳಿಂದಲೂ ಉತ್ಪನ್ನವಾಗುವುದೋ, ಆ ವಿಷವನ್ನು ಸಕಲ ದೇವತೆಗಳೂ ನಮ್ಮಿಂದ ಓಡಿಸಿ ನಾಶಪಡಿಸಲಿ. ವಕ್ರಗಾಮಿಯಾದ ಸರ್ಪವು ನನ್ನ ಕಾಲಿನ ಚಲನದ ಶಬ್ದದಿಂದ ನನ್ನನ್ನು ತಿಳಿಯದಿರಲಿ.

English Translation

The poison that is in the Shalmali tree, in rivers, or which is generated from plants, may the universal gods remove from hence let not the tortuous (snake) recognize me by the sound of my footsteps.

ಸಂಹಿತಾಪಾಠಃ

ಯಾಃ ಪ್ರವತೋ ನಿವತ ಉದ್ವತ ಉದನ್ವತೀರನುದಕಾಶ್ಚ ಯಾಃ ।

ತಾ ಅಸ್ಮಭ್ಯಂ ಪಯಸಾ ಪಿನ್ವಮಾನಾಃ ಶಿವಾ ದೇವೀರಶಿಪದಾ ಭವಂತು ಸ-
ರ್ವಾ ನದ್ಯೋ ಅಶಿಮಿದಾ ಭವಂತು ॥ ೪ ॥

ಪದಪಾಠಃ

ಯಾಃ । ಪ್ರಽವತಃ । ನಿಽವತಃ । ಉತ್ಽವತಃ । ಉದನ್ಽವತೀಃ । ಅನುದಕಾಃ । ಚ । ಯಾಃ ।
ತಾಃ । ಅಸ್ಮಭ್ಯಂ । ಪಯಸಾ । ಪಿನ್ವಮಾನಾಃ । ಶಿವಾಃ । ದೇವೀಃ । ಅಶಿಪದಾಃ । ಭವಂತು । ಸರ್ವಾಃ ।
ನದ್ಯಃ । ಅಶಿಮಿದಾಃ । ಭವಂತು ॥

ಸಾಯಣಭಾಷ್ಯಂ

ಯಾ ನದ್ಯಃ ಪ್ರವತಃ ಪ್ರವಣದೇಶೇ ಗಚ್ಛಂತ್ಯಃ । ಯಾ ನಿವತೋ ನಿಮ್ನದೇಶೇ ಗಚ್ಛಂತ್ಯಃ । ಯಾ ಉದ್ವತ ಉನ್ನತದೇಶೇ ಗಚ್ಛಂತ್ಯಃ । ಯಾ ಉದನ್ವತೀರುದನ್ವತ್ಯ ಉದಕಯುಕ್ತಾಃ । ಅನುದಕಾಶ್ಚೋದಕರಹಿತಾಶ್ಚ ಯಾ ನದ್ಯೋ ಯಾಂತಿ । ಪಯಸೋದಕೇನ ಪಿನ್ವಮಾನಾ ವಿಶ್ವಮಾಪ್ಯಾಯಯಂತ್ಯೋ ದೇವೀರ್ದೇವ್ಯೋ ದ್ಯೋತಮಾನಾಸ್ತಾಸ್ತಾದೃಶ್ಯೋ ನದ್ಯೋಽಸ್ಮಭ್ಯಮಶಿಪದಾಃ । ಶಿಪದಂ ನಾಮ ರೋಗವಿಶೇಷಃ । ತದಕುರ್ವತ್ಯಃ ಸತ್ಯಃ ಶಿವಾಃ ಕಲ್ಯಾಣ್ಯೋ ಭವಂತು । ಅಪಿ ಚ ಸರ್ವಾಸ್ತಾ ನದ್ಯೋಽಶಿಮಿದಾಃ । ಶಿಮಿರ್ವಧಕರ್ಮಾ । ಅಹಿಂಸಾಪ್ರದಾ ಭವಂತು ॥

ಪ್ರತಿಪದಾರ್ಥ

**ಯಾಃ**—ಯಾವ ನದಿಗಳು । **ಪ್ರವತಃ**—ತಪ್ಪಲುಪ್ರದೇಶಗಳಲ್ಲಿ ಹರಿಯುವುವೋ । **ನಿವತಃ**—ಯಾವ ನದಿಗಳು ನಿಮ್ನ ಪ್ರದೇಶಗಳಲ್ಲಿ ಹರಿಯುವುವೋ । **ಉದ್ವತಃ**—ಯಾವುವು ಉನ್ನತಪ್ರದೇಶಗಳಲ್ಲಿ ಹರಿಯುವುವೋ । **ಉದನ್ವತೀಃ**—ಯಾವುವು ಉದಕಭರಿತವಾಗಿರುವುವೋ । **ಅನುದಕಾಶ್ಚ**—ಯಾವುವು ಉದಕರಹಿತವಾಗಿರುವುವೋ । **ಯಾಃ**—ಯಾವ ನದಿಗಳು । **ಪಯಸಾ**—ಉದಕದಿಂದ । **ಪಿನ್ವಮಾನಾಃ**—ಸಕಲ ಪ್ರದೇಶಗಳನ್ನು ತುಂಬಿ । **ದೇವೀಃ**—ಪ್ರಕಾಶಮಾನವಾಗಿರುವುವೋ । **ತಾಃ**—ಆ ಸಕಲ ನದಿಗಳೂ । **ಅಸ್ಮಭ್ಯಂ**—ನಮಗೆ । **ಅಶಿಪದಾಃ**—ರೋಗಕಾರಕವಲ್ಲದಂತೆಯೂ । **ಶಿವಾಃ**—ಮಂಗಳಕಾರಕವಾಗಿಯೂ । **ಭವಂತು**—ಆಗಿರಲಿ । **ಸರ್ವಾಃ ನದ್ಯಃ**—ಆ ಸಕಲ ನದಿಗಳೂ । **ಅಶಿಮಿದಾಃ**—ಹಿಂಸಾರಹಿತಗಳಾಗಿಯೂ । **ಭವಂತು**—ಆಗಿರಲಿ.

ಭಾವಾರ್ಥ

ಯಾವ ನದಿಗಳು ತಪ್ಪಲುಪ್ರದೇಶಗಳಲ್ಲಿ ಹರಿಯುವುವೋ, ಯಾವುವು ನಿಮ್ನಪ್ರದೇಶಗಳಲ್ಲಿ ಹರಿಯುವುವೋ ಯಾವುವು ಉನ್ನತಪ್ರದೇಶಗಳಲ್ಲಿ ಹರಿಯುವುವೋ, ಯಾವುವು ಉದಕಭರಿತವಾಗಿರುವುವೋ, ಯಾವುವು ಉದಕರಹಿತ ವಾಗಿರುವುವೋ ಯಾವ ನದಿಗಳು ಉದಕಗಳಿಂದ ಸಕಲ ಪ್ರದೇಶಗಳನ್ನೂ ತುಂಬಿ ಪ್ರಕಾಶಮಾನವಾಗಿರುವುವೋ, ಆ ಸಕಲ ನದಿಗಳೂ ನಮಗೆ ರೋಗಕಾರಕವಾಗದಂತೆಯೂ, ಕಲ್ಯಾಣಕಾರಕವಾಗಿರುವಂತೆಯೂ ಇರಲಿ. ಆ ಸಕಲ ನದಿಗಳೂ ನಮಗೆ ಹಿಂಸಾರಹಿತಗಳಾಗಿರಲಿ.

## English Translation

May the divine rivers, whether flowing down declivities, in hollow places or upwards, whether filled with water, or dry, nourishing all with their water be auspicious to us communicating not disease may all the rivers be unproductive of harm.

---

# ಐವತ್ತೊಂದನೆಯ ಸೂಕ್ತವು

## ಪೀಠಿಕೆ

ಈ ಸೂಕ್ತದಲ್ಲಿಯೂ ಮುಂದಿನ ಸೂಕ್ತದಲ್ಲಿಯೂ ಆದಿತ್ಯರೆಂಬ ದೇವತೆಗಳನ್ನು ಸ್ತುತಿಸಲಾಗಿದೆ ಆದಿತ್ಯರೆಂದರೆ ಅದಿತಿಪುತ್ರರು ಎಂದರ್ಥವು ಆದರೆ ಈ ದೇವತೆಗಳು ಯಾರು, ಇವರ ಸ್ವರೂಪವೇನು ಎಂದು ಮುಂತಾದ ವಿಷಯಗಳನ್ನು ವಿಮರ್ಶೆಮಾಡುವುದು ಇಲ್ಲಿ ಆವಶ್ಯಕವಾಗಿದೆ ಮೊದಲು ಆದಿತ್ಯಶಬ್ದದ ರೂಪನಿಷ್ಪತ್ತಿಯನ್ನು ವಿವರಿಸಿ ಅನಂತರ ಆದಿತ್ಯರೆಂಬ ದೇವತೆಗಳ ವಿಷಯವನ್ನು ಪ್ರಸ್ತಾಪಮಾಡುವೆವು ಆದಿತ್ಯನೆಂದರೆ, ಅದಿತಿಪುತ್ರನಾದ ಸೂರ್ಯನು ಎಂಬರ್ಥವು ಪ್ರಸಿದ್ಧವಾಗಿದೆ ಆದರೂ ಸೂರ್ಯನಿಗೆ ಈ ಹೆಸರು ಹೇಗೆ ಬಂತೆಂಬ ವಿಚಾರದಲ್ಲಿ ಯಾಸ್ಕರು ನಿರ್ವಚನವನ್ನು ಈರೀತಿ ಹೇಳಿದಾರೆ --

**ಆದಿತ್ಯಃ ಕಸ್ಮಾದಾದತ್ತೇ ರಸಾನಾದತ್ತೇ ಭಾಸಂ ಜ್ಯೋತಿಷಾಮಾದೀಪ್ತೋ ಭಾಸೇತಿ ವಾದಿತೇಃ ಪುತ್ರ ಇತಿ ವಾ ॥**

(ನಿ ೨-೧೩)

ಆದಿತ್ಯನು ಯಾರು ? ಎಂದರೆ—

(೧) **ಆದತ್ತ ಇತಿ ಆದಿತ್ಯಃ ।** ಸ್ವೀಕರಿಸುವವನು, ಗ್ರಹಿಸುವವನು ಅಥವಾ ಆಕರ್ಷಿಸುವವನು ಎಂದು ಆದಿತ್ಯಶಬ್ದಕ್ಕೆ ಅರ್ಥವು ಏನನ್ನು ಗ್ರಹಿಸುವವನು ಎಂದರೆ, **ರಸಾನ್**—ಉದಕಗಳನ್ನು ತನ್ನ ರಶ್ಮಿಗಳ ಮೂಲಕ ಆಕರ್ಷಿಸುವವನು ಹೀಗೆ ಆಕರ್ಷಿಸಲ್ಪಟ್ಟ ಉದಕವು ಮೇಘರೂಪದಿಂದ ವೃಷ್ಟಿಯನ್ನುಂಟುಮಾಡುವುದು ಆದುದರಿಂದ ಸಮುದ್ರಾದಿ ಜಲಾಶಯಗಳಿಂದ ರಶ್ಮಿಗಳ ಮೂಲಕ ಉದಕವನ್ನು ಆಕರ್ಷಿಸುವುದರಿಂದ ಸೂರ್ಯನಿಗೆ ಆದಿತ್ಯನೆಂದು ಹೆಸರು.

(೨) **ಅಥವಾ ಆದತ್ತೇ ಭಾಸಂ ಜ್ಯೋತಿಷಾಂ ।** ಸೂರ್ಯನು ಉದಯಿಸುವುದರಿಂದ ಸೂರ್ಯನ ಪ್ರಕಾಶವು ಇತರ (ಚಂದ್ರಾದಿಗಳೇ ಮೊದಲಾದ) ಎಲ್ಲಾ ವಸ್ತುಗಳ ಪ್ರಕಾಶವನ್ನೂ ತಗ್ಗಿಸಿ ಆ ಪ್ರಕಾಶವನ್ನು ಆಕರ್ಷಿಸುವುದರಿಂದ ಆದಿತ್ಯನೆಂದು ಹೆಸರು

(೩) **ಅಥವಾ ಆದೀಪ್ತೋ ಭಾಸೇತಿ ವಾ ।** ಎಲ್ಲಾ ಸ್ಥಳಗಳಲ್ಲಿಯೂ ಅಥವಾ ಸುತ್ತಲೂ (ರಶ್ಮಿಗಳ ಮೂಲಕ) ಆವರಿಸಿ ಪ್ರಕಾಶಿಸುವುದರಿಂದ ಆದಿತ್ಯನೆಂದು ಹೆಸರು.

(೪) **ಅಥವಾ ಅದಿತೇಃ ಪುತ್ರ ಇತಿ ವಾ ।** ದೇವಮಾತೆಯಾದ ಅದಿತಿದೇವಿಯ ಪುತ್ರನಾದುದರಿಂದ ಸೂರ್ಯನಿಗೆ ಆದಿತ್ಯನೆಂದು ಹೆಸರು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಆದಿತ್ಯಶಬ್ದವು ಸೂರ್ಯನಿಗೆ ಪರ್ಯಾಯವಾದಾಗೆಲ್ಲಾ ಇವುಗಳಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು. ಆದರೆ **ಪ್ರಕೃತಸೂಕ್ತಗಳಲ್ಲಿ ಆದಿತ್ಯಾನಾಂ** ಮೊದಲಾದ ಆದಿತ್ಯಶಬ್ದದ ಬಹುವಚನಪ್ರಯೋಗವಿರುವುದರಿಂದ ಇಲ್ಲಿ ಆದಿತ್ಯ ಶಬ್ದವು ಸೂರ್ಯನಿಗೇ ಅಲ್ಲದೇ ಇತರ ದೇವತೆಗಳಿಗೂ ಅನ್ವಯಿಸುತ್ತದೆ. ನಿರುಕ್ತಕಾರರೇ ಈ ವಿಷಯದಲ್ಲಿ—

**ಏವಮನ್ಯಾಸಾಮಪಿ ದೇವತಾನಾಮಾದಿತ್ಯಪ್ರವಾದಾಃ ಸ್ತುತಯೋ ಭವಂತಿ । ತದ್ಯಥೈತನ್ಮಿತ್ರಸ್ಯ ವರುಣಸ್ಯಾರ್ಯಮ್ಣೋ ದಕ್ಷಸ್ಯ ಭಗಸ್ಯಾಂಶಸ್ಯೇತಿ ॥**

(ನಿ ೨-೧೩)

ಆದಿತ್ಯಪರವಾದ ಸ್ತುತಿಗಳು ಮಿತ್ರ, ವರುಣ, ಅರ್ಯಮಾ, ದಕ್ಷ, ಭಗ, ಅಂಶ ಎಂಬ ದೇವತೆಗಳಿಗೂ ಅನ್ವಯಿಸುತ್ತವೆ ಎಂದರೆ ಈ ದೇವತೆಗಳನ್ನು ಆದಿತ್ಯರೆಂದು (ಇವರು ಅದಿತಿಯ ಪುತ್ರರಾದುದರಿಂದ) ಕರೆಯುತ್ತಾರೆ, ಎಂದು ಹೇಳಿ ಉದಾಹರಣೆಗಾಗಿ—

**ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।**
**ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥**

(ಋ ಸಂ. ೨-೨೭-೧)

ಎಂಬ ಋಕ್ಕನ್ನು ಕೊಟ್ಟಿದಾರೆ ಈ ಋಕ್ಕಿನಲ್ಲಿ ಮಿತ್ರ, ಅರ್ಯಮಾ, ಭಗ, ಧಾತಾ, ವರುಣ, ದಕ್ಷ, ಅಂಶ ಎಂಬುವರು ಆದಿತ್ಯರೆಂದೂ ಇವರು ಆರು ಮಂದಿಯೆಂದೂ ವಿವರಿಸಿದೆ. ಇದಲ್ಲದೆ,

**ಅಥಾಪಿ ಮಿತ್ರಾವರುಣಯೋಃ । ಆದಿತ್ಯಾ ದಾನುನಸ್ಪತೀ ॥**

(ನಿ. ೨-೧೩)

ಮಿತ್ರಾವರುಣರನ್ನೂ ಆದಿತ್ಯರೆಂದು ಪರಿಗಣಿಸಲಾಗುವುದು. ಉದಾಹರಣೆಗೆ—

**ತಾ ಸಮ್ರಾಜಾ ಘೃತಾಸುತೀ ಆದಿತ್ಯಾ ದಾನುನಸ್ಪತೀ ।**
**ಸಚೇತೇ ಅನವಹ್ವರಂ ॥**

(ಋ ಸಂ ೨ ೪೧-೬)

ಎಂಬ ಋಕ್ಕಿನಲ್ಲಿ ಮಿತ್ರಾವರುಣರನ್ನು ಆದಿತ್ಯರೆಂದು ಕರೆದಿದೆ ಇದಲ್ಲದೆ—

**ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್ಯಸ್ತ ಆದಿತ್ಯ ಶಿಕ್ಷತಿ ವ್ರತೇನ ।**
**ನ ಹನ್ಯತೇ ನ ಜೀಯತೇ ತ್ವೋತೋ ನೈನಮಂಹೋ ಅಶ್ನೋತ್ಯಂತಿತೋ ನ ದೂರಾತ್ ॥**

(ಋ. ಸಂ ೩-೫೯-೨)

ಎಂಬ ಋಕ್ಕಿನಲ್ಲಿ ಮಿತ್ರನನ್ನು ಮಾತ್ರ ಸ್ತುತಿಸುವಾಗ ಇವನನ್ನೂ ಆದಿತ್ಯನೆಂದು ಸಂಬೋಧಿಸಿದೆ.

**ಅಥಾಪಿ ವರುಣಸ್ಯೈಕಸ್ಯ । ಅಥಾ ವಯಮಾದಿತ್ಯ ವ್ರತೇ ತವ । ವ್ರತಮಿತಿ ಕರ್ಮನಾಮ । ವೃಣೋತೀತಿ ಸತಃ ॥**

(ನಿ. ೨-೧೩)

ಮಿತ್ರನನ್ನು ನಿರ್ದೇಶಿಸಿದಂತೆಯೇ ವರುಣನೆಂಬ ಒಂದೇ ದೇವತೆಯನ್ನು ಮಂತ್ರದಲ್ಲಿ ಸ್ತುತಿಸಲಾಗಿದ್ದರೂ ಆ ಸಂದರ್ಭದಲ್ಲಿಯೂ ವರುಣನನ್ನು ಆದಿತ್ಯನೆಂದೇ ಹೇಳಿದೆ —

**ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿ ಮಧ್ಯಮಂ ಶ್ರಥಾಯ ।**
**ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ ॥**

(ಋ. ಸಂ. ೧-೨೪-೧೫)

ಎಂಬ ಋಕ್ಕಿನಲ್ಲಿ ವರುಣನನ್ನು **ಆದಿತ್ಯನೆಂದು** ನಿರ್ದೇಶಿಸಿದೆ.

ಇನ್ನು ಆದಿತ್ಯರೆಂಬ ದೇವತೆಗಳ ಸಂಖ್ಯಾಪರಿಮಿತಿ ಎಷ್ಟು ಎಂಬ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ಚರ್ಚಿಸುವುದು ಅವಶ್ಯಕವಾಗಿದೆ ಮೇಲೆ ಉದಾಹರಣೆಗಾಗಿ ಕೊಟ್ಟಿರುವ **ಇಮಾ ಗಿರ ಆದಿತ್ಯೇಭ್ಯಃ** (ಋ ಸಂ. ೨-೨೭-೧) ಎಂಬ ಋಕ್ಕಿನಲ್ಲಿ ಮಿತ್ರ, ಅರ್ಯಮಾ, ಭಗ, ವರುಣ, ದಕ್ಷ, ಅಂಶ ಎಂದು ಆರು ಮಂದಿ ದೇವತೆಗಳ ಹೆಸರುಗಳಿವೆ ಇವರೇ ಆದಿತ್ಯರೆಂದು ಅಲ್ಲಿ ಹೇಳಲಾಗಿದೆ ಆದರೆ **ತುವಿಜಾತಃ** ಎಂಬ ಶಬ್ದಕ್ಕೆ ನಿರುಕ್ತಕಾರರು **ಬಹುಜಾತಶ್ಚ ಧಾತಾ** ಎಂದು ಅರ್ಥಮಾಡಿದ್ದಾರೆ ಹೇಗೆಂದರೆ— **ತುವೀತಿ ಬಹುನಾಮ । ಸರ್ವವಿಧಾತೃತ್ವಾದ್ಬಹುಜನ್ಮಾ ಧಾತಾ ಯೋವದಧಿಕಾರಂ ಜನ್ಮೇತಿ** । ತುವಿಶಬ್ದಕ್ಕೆ ಬಹು, ಅನೇಕ ಎಂದರ್ಥ ಜನ್ಮವೆಂದರೆ ಅಧಿಕಾರ. ತುವಿಜಾತ ಎಂದರೆ, ಅನೇಕವಿಧವಾದ ಅಧಿಕಾರಗಳುಳ್ಳ ಸರ್ವವಿಧಾತೃವಾದ, ಸರ್ವನಿಯಾಮಕನಾದ **ಧಾತಾ** ಎಂದರ್ಥವು ಎಂದು ತುವಿಜಾತಶಬ್ದಕ್ಕೆ ಅರ್ಥವಿವರಣೆಮಾಡಿರುವುದರಿಂದ ಈ ಋಕ್ಕಿನಲ್ಲಿ ಧಾತನೂ ಸೇರಿ ಏಳು ಮಂದಿ ಆದಿತ್ಯರೆಂದು ಹೇಳಬೇಕು ಮತ್ತು **ಸಪ್ತ ದಿಶೋ ನಾನಾ ಸೂರ್ಯಾಃ** ಎಂಬ ಮಂತ್ರದಲ್ಲಿ ಆದಿತ್ಯರ ಸಂಖ್ಯೆಯು ಏಳು ಎಂದು ನಿರ್ದೇಶಿಸಿದೆ ಆದರೆ ಈ ಋಕ್ಕಿನಲ್ಲಿ (ಋ. ಸಂ ೯-೧೧೪-೩) ನಾಮನಿರ್ದೇಶವಿಲ್ಲ **ದೇವಾ ಆದಿತ್ಯಾ ಯೇ ಸಪ್ತ** ಎಂದು ಮಾತ್ರ ತಿಳಿಸಿದೆ. ಹಿಂದೆ ಅದಿತಿಯ ವಿಷಯವನ್ನು ತಿಳಿಸುವಾಗ ಋ ಸಂ ೧೦-೭೨ ೮, ೯ ಎಂಬ ಋಕ್ಕುಗಳನ್ನು ಉದಾಹರಿಸಿ ಅದಿತಿಗೆ ಎಂಟುಮಂದಿ ಪುತ್ರರೆಂದೂ ಅವರಲ್ಲಿ ಏಳು ಜನನ್ನು ದೇವತೆಗಳಿಗೆ ಅರ್ಪಿಸಿದಳೆಂದೂ ಮಾರ್ತಾಂಡನೆಂಬ ಎಂಟನೆಯವನನ್ನು ತಾನೇ ಇರಿಸಿಕೊಂಡು ಪೋಷಿಸಿದಳೆಂಬುದನ್ನೂ ವಿವರಿಸಿದೆ ಇಲ್ಲಿಯೂ ಸಹ ಮಾರ್ತಾಂಡನನ್ನು ಬಿಟ್ಟು ಉಳಿದವರ ನಾಮ ನಿರ್ದೇಶವಿಲ್ಲ ಅಥರ್ವವೇದ ೮-೯-೨೧ನೇ ಮಂತ್ರದಲ್ಲಿಯೂ, ಋ ಸಂ ೧೦-೭೨-೮ನೇ ಮಂತ್ರದಲ್ಲಿಯೂ ಅದಿತಿಗೆ ಎಂಟುಮಂದಿ ಪುತ್ರರೆಂದು ತಿಳಿಸಿದೆ ಋ ಸಂ ೨-೨೭-೧ನೇ ಋಕ್ಕಿನ ತಾತ್ಪರ್ಯವನ್ನು ವಿವರಿಸುವಾಗ ಸಾಯಣರು ಆದಿತ್ಯರ ಸಂಖ್ಯೆಯನ್ನು ತಿಳಿಸುವುದಕ್ಕಾಗಿ ಯಜುರ್ವೇದದ ತೈತ್ತಿರೀಯಾರಣ್ಯಕದ **ಅಷ್ಟೌ ಪುತ್ರಾಸೋ ಅದಿತೇಃ । . । ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಗ್ಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್‌ಶ್ಚೇತ್ಯೇತೇ** (ತೈ ಆ. ೧-೧೩-೩) ಎಂಬ ಮಂತ್ರವನ್ನು ಉದಾಹರಿಸಿ ಅಲ್ಲಿ ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬ ಅದಿತಿಯ ಎಂಟು ಮಂದಿ ಪುತ್ರರ ಹೆಸರುಗಳನ್ನು ತಿಳಿಸಿದಾರೆ.

**ಉದಗಾದಯಮಾದಿತ್ಯಃ** (ಋ ಸಂ ೧-೫೦ ೧೩) **ಉದಪಪ್ತದಸೌ ಸೂರ್ಯಃ** (ಋ ಸಂ ೧-೧೯೧-೯) ಇತ್ಯಾದಿ ಸ್ಥಳಗಳಲ್ಲಿ ಸೂರ್ಯನಿಗೂ ಆದಿತ್ಯನಿಗೂ ತಾದಾತ್ಮ್ಯವನ್ನು ತಿಳಿಸಿದೆ ಆದಿತೇಯನಾದ ಎಂದರೆ ಅದಿತಿಪುತ್ರನಾದ ಅಗ್ನಿಯೇ ಅಂತರಿಕ್ಷದಲ್ಲಿ ಸೂರ್ಯರೂಪದಲ್ಲಿ ದೇವತೆಗಳಿಂದ ಸ್ಥಾಪಿತನಾಗಿದ್ದಾನೆ, ಅಗ್ನಿಯು ಪೃಥಿವಿಯಲ್ಲಿ ಪಾರ್ಥಿವಾಗ್ನಿರೂಪದಿಂದಲೂ, ಅಂತರಿಕ್ಷದಲ್ಲಿ ವೈದ್ಯುತಾಗ್ನಿ (ಮಿಂಚು) ರೂಪದಿಂದಲೂ, ಸ್ವರ್ಗದಲ್ಲಿ ಸೂರ್ಯರೂಪದಿಂದಲೂ ಪ್ರಕಾಶಿಸುತ್ತಾನೆ ಇತ್ಯಾದಿ ವರ್ಣನೆಗಳಲ್ಲಿ ಅಗ್ನಿಗೂ ಸೂರ್ಯ ಅಥವಾ ಆದಿತ್ಯನೆಂಬ ಹೆಸರು ಸಲ್ಲುವುದು ಆದಿತ್ಯರ ಉತ್ಪತ್ತಿವಿಚಾರದಲ್ಲಿ ತೈತ್ತಿರೀಯಬ್ರಾಹ್ಮಣದಲ್ಲಿ ಈರೀತಿ ಉಕ್ತವಾಗಿದೆ—

> **ಅದಿತಿಃ ಪುತ್ರಕಾಮಾ । ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಧಾತಾ ಚಾರ್ಯಮಾ ಚಾಜಾಯೇತಾಂ । ಸಾ ದ್ವಿತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ ॥ ಸಾ ರೇತೋಽಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಂ । ಸಾ ತೃತೀಯಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಅಗ್ಂಶಶ್ಚ**

**ಭಗಶ್ಚಾಜಾಯೇತಾಂ । ಸಾ ಚತುರ್ಥಮಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾ- ಶ್ನಾತ್ । ಸಾ ರೇತೋಽಧತ್ತ । ತಸ್ಯಾ ಇಂದ್ರಶ್ಚ ವಿವಸ್ವಾಗ್‌ಶ್ಚಾಜಾಯೇತಾಂ ॥**

(ತೈ. ಬ್ರಾ ೧-೧-೯-೧, ೨, ೩)

ಅದಿತಿದೇವಿಯು ತನಗೆ ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ದೇವತೆಗಳನ್ನೂ ಸಾಧ್ಯರನ್ನೂ ಉದ್ದೇಶಿಸಿ ಬ್ರಹ್ಮೌದನ ರೂಪವಾದ ಹವಿಸ್ಸನ್ನು ಪಕ್ವಮಾಡಿ ಅವರಿಗೆ ಅರ್ಪಿಸಿದಳು. ಅವರು ಆ ಹವಿಸ್ಸನ್ನು ಭುಜಿಸಿ ಅದರಲ್ಲಿ ಉಳಿದ ಶೇಷ ವನ್ನು ಅವಳಿಗೆ ಕೊಟ್ಟರು ಅವಳು ಅದನ್ನು ಭುಜಿಸಿದಾಗ ಅದರ ಪ್ರಭಾವದಿಂದ ಅದಿತಿಗೆ ಧಾತಾ, ಅರ್ಯಮಾ ಎಂಬಿಬ್ಬರು ಪುತ್ರರು (ಅವಳಿಯಾಗಿ) ಜನಿಸಿದರು ಇದೇ ಕ್ರಮವನ್ನು ಎರಡನೆಯ ಸಲ ಆಚರಿಸಿದಾಗ ಮಿತ್ರ ಮತ್ತು ವರುಣರೂ, ಮೂರನೆಯ ಸಲ ಅಂಶ ಮತ್ತು ಭಗರೂ, ನಾಲ್ಕನೆಯ ಸಲ ಇಂದ್ರ ಮತ್ತು ವಿವಸ್ವಾನ್ ಎಂಬಿಬ್ಬರು ಪುತ್ರರೂ ಉತ್ಪನ್ನರಾದರು ಇವರೇ ಆದಿತ್ಯರು ಎಂದು ತೈತ್ತಿರೀಯಬ್ರಾಹ್ಮಣವು ವರ್ಣಿಸಿದೆ. ಇದೇ ವಿಷಯವಾಗಿ ಶತಪಥಬ್ರಾಹ್ಮಣದಲ್ಲಿ ಈ ವಿವರಣೆ ಇದೆ—

**ಸ ಮನಸಾ ಏವ ವಾಚಂ ಮಿಥುನಂ ಸಮಭವತ್ಸ ದ್ವಾದಶದ್ರಪ್ಸಾನ್ಗರ್ಭ್ಯಭವತ್ । ತೇ ದ್ವಾ- ದಶ ಆದಿತ್ಯಾ ಅಸೃಜ್ಯಂತ ತಾನ್ ದಿಕ್ಷೂಪಾದಧತ್ ॥**

(ಶ. ಬ್ರಾ ೬ ೧-೨-೮)

ಪ್ರಜಾಪತಿಯು ವಾಕ್ಕಿನೊಡನೆ ತನ್ನ ಮಾನಸಿಕವಾದ ಸಂಬಂಧವನ್ನು ಹೊಂದಿದನು. ಆಗ ಹನ್ನೆರಡು ದ್ರಪ್ಸಾತ್ಮಕ ವಾದ ಗರ್ಭವನ್ನು ಹೊಂದಿದನು ಅದರ ಫಲವೇ ದ್ವಾದಶಾದಿತ್ಯರ ಆವಿರ್ಭಾವವು ಆಗ ಅವರನ್ನು ದಿಕ್ಕುಗಳ ಪಾಲಕರನ್ನಾಗಿ ಮಾಡಿ ಇರಿಸಿದನು ಎಂದಿದೆ ಇದೇ ರೀತಿಯಲ್ಲಿ ಆದಿತ್ಯರ ವಿಷಯವನ್ನು ತಿಳಿಸತಕ್ಕ ಇತರ ಶ್ರುತಿ ವಾಕ್ಯಗಳನ್ನು ವಿಮರ್ಶಿಸಬಹುದು

**ಕತಮ ಆದಿತ್ಯಾ ಇತಿ । ದ್ವಾದಶ ವೈ ಮಾಸಾಃ ಸಂವತ್ಸರಸ್ಯೈತ ಆದಿತ್ಯಾ ಏತೇ ಹೀದಂ ಸರ್ವಮಾದದಾನಾ ಯಂತಿ ತೇ ಯದಿದಂ ಸರ್ವಮಾದದಾನಾ ಯಂತಿ ತಸ್ಮಾದಾದಿತ್ಯಾ ಇತಿ ॥**

(ಶ ಬ್ರಾ ೧೧-೬ ೩-೮)

ಆದಿತ್ಯರು ಎಷ್ಟು ಮಂದಿ? ಆದಿತ್ಯರು ಹನ್ನೆರಡು ಮಂದಿ ಒಂದು ಸಂವತ್ಸರದಲ್ಲಿ ಹನ್ನೆರಡು ಮಾಸಗಳಿವೆ ಇವುಗಳೇ ಆದಿತ್ಯರು. ಆ ಮಾಸಗಳೇ ಸಕಲವನ್ನೂ ಪರಿಗ್ರಹಿಸಿ ಮುಂದುವರೆಯುತ್ತಿರುವುದರಿಂದ ಅವುಗಳಿಗೆ ಆದಿತ್ಯರೆಂದು ಹೆಸರು ಎಂದಿದೆ ಇದೇ ಆದಿತ್ಯರ ವಿಷಯಕವಾದ ಕಥೆಯು ತೈತ್ತಿರೀಯ ಬ್ರಾಹ್ಮಣದಲ್ಲಿ ಈರೀತಿ ಉಕ್ತವಾಗಿದೆ—

**ಆದಿತ್ಯಾಶ್ಚಾಂಗಿರಸಶ್ಚ ಸುವರ್ಗೇ ಲೋಕೇಽಸ್ಪರ್ಧಂತ । ತೇಽಂಗಿರಸ ಆದಿತ್ಯೇಭ್ಯಃ । ಅಮುಮಾದಿತ್ಯಮಶ್ವಗ್‌ಶ್ವೇತಂ ಭೂತಂ ದಕ್ಷಿಣಾಮನಯನ್ । ತೇಽಬ್ರುವನ್ । ಯನ್ನೋಽ ನೇಷ್ಟ । ಸ ವರ್ಯೋಽಭೂದಿತಿ । ತಸ್ಮಾದಶ್ವಗ್‌ಂ ಸವರ್ಯೇತ್ಯಾಹ್ವಯಂತಿ । ತಸ್ಮಾದ್ಯಜ್ಞೇ ವರೋ ದೀಯತೇ । ಯತ್ಪ್ರಜಾಪತಿರಾಲಬ್ಧೋಽಶ್ವೋಽಭವತ್ । ತಸ್ಮಾದಶ್ವೋ ನಾಮ । ಯಚ್ಛ್ವಯದರುರಾಸೀತ್ । ತಸ್ಮಾದರ್ವಾ ನಾಮ । ಯತ್ಸದ್ಯೋ ವಾಜಾನ್ತ್ಸಮಜಯತ್ । ತಸ್ಮಾದ್ವಾಜೀ ನಾಮ । ಯದಸುರಾಣಾಂ ಲೋಕಾನಾದತ್ತ । ತಸ್ಮಾದಾದಿತ್ಯೋ ನಾಮ ॥**

(ತೈ. ಬ್ರಾ. ೩-೯-೨೧-೧,೨)

ಹಿಂದೆ ಸ್ವರ್ಗದಲ್ಲಿ ಆದಿತ್ಯರೂ ಅಂಗಿರಸ್ಸುಗಳು ಪರಸ್ಪರ ಸ್ಪರ್ಧಿಸಿದರು. ಶ್ವೇತಾಶ್ವರೂಪನಾಗಿದ್ದ ಆದಿತ್ಯನನ್ನು ಅಂಗಿ ರಸ್ಸುಗಳು ಆದಿತ್ಯರಿಗೆ ದಕ್ಷಿಣಾರೂಪದಲ್ಲರ್ಪಿಸಿದರು. ಆಗ ಆದಿತ್ಯರು ಅಂಗಿರಸ್ಸುಗಳನ್ನು ಕುರಿತು—ನೀವು ತಂದಿರುವ

ಈ ಆದಿತ್ಯನು ಅತ್ಯಂತ ಶ್ರೇಷ್ಠರೂಪನಾಗಿದಾನೆ, ಎಂದರು ಆದಿತ್ಯರು ಅಶ್ವರೂಪಿಯಾದ ಆದಿತ್ಯನನ್ನು **ಸ ವರ್ಯಃ** (ಅವನು ಶ್ರೇಷ್ಠನು) ಎಂದು ಹೇಳಿದ್ದರಿಂದಲೇ ಲೋಕವ್ಯವಹಾರದಲ್ಲಿಯೂ ಅಶ್ವವು **ಸವರ್ಯಃ** ಎಂದೇ ಕರೆಯಲ್ಪಟ್ಟಿತು ಆದುದರಿಂದ ಯಜ್ಞದಲ್ಲಿ ಒಂದು ವರವು ದತ್ತವಾಯಿತು ಯಜ್ಞಾಧಿಪನಾದ ಪ್ರಜಾಪತಿಯು ಸರ್ವವ್ಯಾಪಿಯಾದುದರಿಂದ **ಅಶ್ವ**ನೆಂದೂ, ಚಕ್ಷುರೇಂದ್ರಿಯನ್ನನುಗ್ರಹಿಸಿದುದರಿಂದ **ಅರ್ವ**ನೆಂದೂ ಸಂಗ್ರಾಮಗಳನ್ನೆಲ್ಲಾ ತನ್ನ ವಶಮಾಡಿಕೊಂಡದ್ದರಿಂದ **ವಾಜೀ** ಎಂದೂ ಅಸುರರಿಂದ ಅವರ ಲೋಕಗಳನ್ನೆಲ್ಲಾ ಕಸಿದುಕೊಂಡದ್ದರಿಂದ ಆದತ್ತ (ಆದಿತ್ಯ) ನೆಂದೂ ಪ್ರಸಿದ್ಧನಾಗಿದಾನೆ, ಎಂದು ಆದಿತ್ಯಶಬ್ದದ ನಿರ್ವಚನವನ್ನು ಅಡಿಸಿದ ಇದೇ ನಿರ್ವಚನವನ್ನು ತೈತ್ತಿರೀಯಾರಣ್ಯಕದಲ್ಲಿ—

**ಯೋಽಸೌ ತಪನ್ನುದೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ ।**
**ಇತ್ಯಾದಿ**

(ತೈ ಆ ೧-೪-೧)

ಯಾವ ಸೂರ್ಯನು ಉದಯಿಸುವನೋ ಅವನು ಸಕಲ ಭೂತಗಳ (ಪ್ರಾಣಿಗಳ) ಪ್ರಾಣಗಳನ್ನು ಕಸಿದುಕೊಂಡು (ಆ + ದಾ) ಉದಯಿಸುತ್ತಾನೆ ಆದುದರಿಂದಲೇ ಅವನಿಗೆ ಆದಿತ್ಯನೆಂದು ಹೆಸರು ಹೀಗೆ ಅದಿತಿಪುತ್ರತ್ವದಿಂದಲೇ ಆದಿತ್ಯರೆಂಬುದೂ ಅಥವಾ ಆದಾನಕ್ರಿಯಾಪಿತ್ವರಾದುದರಿಂದಲೇ ಆದಿತ್ಯರೆಂಬುದೂ ಎರಡು ವಿಧವಾದ ನಿರ್ವಚನವೂ ವರ್ಣಿತವಾಗಿದೆ

ಈಗೆ ಆತ್ಮಗುಣವರ್ಣನವೇ ಆದಿತ್ಯಪದದ ತಾತ್ಪರ್ಯವಾದರೆ ಅದು ಸೂರ್ಯನಿಗೆ ಮಾತ್ರ ಅನ್ವಯಿಸುತ್ತದೆ. ಆದಿತಿಪುತ್ರತ್ವವನ್ನು ತೋರಿಸುವುದಾದರೆ ಮಿತ್ರಾವರುಣಾದಿಗಳಿಗೂ ಅನ್ವಯಿಸುತ್ತವೆ. ಎರಡನೆಯ ಅರ್ಥವನ್ನು ಹೇಳುವುದಾದರೆ ಆಗ ಆದಿತಿಪುತ್ರರೆಷ್ಟುಮಂದಿ ಎಂಬುದೂ ನಿಷ್ಕೃಷ್ಟವಾಗಿ ತಿಳಿಸಿಲ್ಲ ಆರು, ಏಳು, ಎಂಟು ಹನ್ನೆರಡು ಇತ್ಯಾದಿಯಾಗಿ ಸಂಖ್ಯಾನಿರ್ದೇಶಗಳಿವೆ. ಈ ಸಂಖ್ಯೆಯನ್ನು ಸಮರ್ಥಿಸುವ ಕೆಲವು ಶ್ರುತಿವಾಕ್ಯಗಳನ್ನು ಮೇಲೆ ಉದಾಹರಿಸಿದೆ ಪುರಾಣಾದಿ ಗ್ರಂಥಗಳಲ್ಲಿ ಮಿತ್ರ, ರವಿ, ಸೂರ್ಯ, ಭಾನು, ಖಗ, ಪೂಷನ್, ಹಿರಣ್ಯಗರ್ಭ, ಮರೀಚಿ, ಆದಿತ್ಯ, ಸವಿತೃ, ಅರ್ಕ, ಭಾಸ್ಕರ ಎಂದು ದ್ವಾದಶಾದಿತ್ಯರ ನಾಮನಿರ್ದೇಶವಿದೆ

ಸಾಯಣಭಾಷ್ಯಂ

**ಆದಿತ್ಯಾನಾಮಿತಿ ತೃಚಮಷ್ಟಾದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಾದಿತ್ಯದೇವತಾಕಂ। ಅನುಕ್ರಮ್ಯತೇ ಚ । ಆದಿತ್ಯಾನಾಂ ತೃಚಮಾದಿತ್ಯಂ ತ್ವಿತಿ ॥ ಗತಃ ಸೂಕ್ತವಿನಿಯೋಗಃ ॥ ಆದಿತ್ಯದೇವತಾಕೇ ಪಶಾವಾದಿತ್ಯಾನಾಮವಸೇತಿ ವಪಾಯಾ ಅನುವಾಕ್ಯಾ । ಸೂತ್ರಿತಂ ಚ । ಆದಿತ್ಯಾನಾಮವಸಾನೂತನೇನೇಮಾ ಗಿರ ಆದಿತ್ಯೇಭ್ಯಃ । ಆ. ೩-೮ । ಇತಿ ॥ ಆದಿತ್ಯಗ್ರಹಸ್ಯೈವಾನುವಾಕ್ಯಾ । ಸೂತ್ರಿತಂ ಚ। ಆದಿತ್ಯಾನಾಮವಸಾ ನೂತನೇನ ಹೋತಾ ಯಕ್ಷದಾದಿತ್ಯಾನ್ । ಆ ೮ ೧೭ । ಇತಿ ॥**

**ಅನುವಾದವು—ಆದಿತ್ಯಾನಾಂ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಏಳನೆಯ **ಸೂಕ್ತವು.** ಇದರಲ್ಲಿ ಮೂರು ಋಕ್ಕುಗಳಿರುವವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಆದಿತ್ಯರು ದೇವತೆಯು, **ತ್ರಿಷ್ಟುಪ್**ಛಂದಸ್ಸು ಅನುಕ್ರಮಣಿಕೆಯಲ್ಲಿ—**ಆದಿತ್ಯಾನಾಂ ತೃಚಮಾದಿತ್ಯಂ ತು** ಎಂದು ಹೇಳಿರುವುದು ಸೂಕ್ತ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ ಆದಿತ್ಯದೇವತಾಸಂಬಂಧವಾದ ಯಾಗದಲ್ಲಿ **ಆದಿತ್ಯಾನಾಮವಸಾ** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ವಪಾಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಆದಿತ್ಯಾನಾಮವಸಾ ನೂತನೇನೇಮಾ ಗಿರ ಆದಿತ್ಯೇಭ್ಯಃ** ಎಂಬ ಸೂತ್ರದಿಂದ

(ಆ. ೩-೮) ವಿವೃತವಾಗಿರುವುದು. ಆದಿತ್ಯಗ್ರಹಹೋಮದಲ್ಲಿಯೂ ಈ ಋಕ್ಕನ್ನೇ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಆದಿತ್ಯಾನಾಮವಸಾ ನೂತನೇನ ಹೋತಾ ಯಕ್ಷದಾದಿತ್ಯಾನ್** ಎಂಬ ಸೂತ್ರದಿಂದ (ಆ ೫-೧೭) ವಿವೃತವಾಗಿರುವುದು.

## ಸೂಕ್ತ—೫೧

ಮಂಡಲ—೭ ॥ ಅನುವಾಕ—೩ ॥ ಸೂಕ್ತ —೫೧ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೧೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
ಋಷಿಃ—ವಸಿಷ್ಠಃ ॥
ದೇವತಾ— ಆದಿತ್ಯಾಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ಆದಿತ್ಯಾನಾಮವಸಾ ನೂತನೇನ ಸಕ್ಷೀಮಹಿ ಶರ್ಮಣಾ ಶಂತಮೇನ ।**
**ಅನಾಗಾಸ್ತ್ವೇ ಅದಿತಿತ್ವೇ ತುರಾಸ ಇಮಂ ಯಜ್ಞಂ ದಧತು ಶ್ರೋಷಮಾಣಾಃ ॥ ೧ ॥**

ಪದಪಾಠಃ

**ಆದಿತ್ಯಾನಾಂ । ಅವಸಾ । ನೂತನೇನ । ಸಕ್ಷೀಮಹಿ । ಶರ್ಮಣಾ । ಶಂऽತಮೇನ ।**
**ಅನಾಗಾಃऽತ್ವೇ । ಅದಿತಿऽತ್ವೇ । ತುರಾಸಃ । ಇಮಂ । ಯಜ್ಞಂ । ದಧತು । ಶ್ರೋಷಮಾಣಾಃ ॥ ೧ ॥**

ಸಾಯಣಭಾಷ್ಯಂ

**ಆದಿತ್ಯಾನಾಮದಿತೇಃ ಪುತ್ರಾಣಾಮೇತತ್ಸಂಜ್ಞಕಾನಾಂ ದೇವಾನಾಮವಸಾ ರಕ್ಷಣೇನ । ತದ್ಧೇತು-ಭೂತೇನೇತ್ಯರ್ಥಃ । ನೂತನೇನಾದ್ಯತನೇನ ಶಂತಮೇನ । ಶಂ ಸುಖಂ । ಅತಿಶಯೇನ ತತ್ಕರಣೇನ ಶರ್ಮಣಾ । ಶರ್ಮೇತಿ ಗೃಹನಾಮೈತತ್ । ಗೃಹೇಣ ಸಕ್ಷೀಮಹಿ । ವಯಂ ಸಂಗಚ್ಛೇಮಹಿ । ತುರಾಸಸ್ತುರಾಸ್ತ್ವರಿತಾ ಆದಿತ್ಯಾಃ ಶ್ರೋಷಮಾಣಾ ಅಸ್ಮದೀಯಾನಿ ಸ್ತೋತ್ರಾಣಿ ಶೃಣ್ವಂತೋ ಯಜ್ಞಂ ಯಷ್ಟಾರಮಿಮಂ ಜನಮನಾಗಾಸ್ತ್ವೇऽನಪರಾಧತ್ವೇ ಚಾದಿತಿತ್ವೇऽದೀನತ್ವೇ ಚ ದಧತು । ಸ್ಥಾಪಯಂತು ॥**

ಪ್ರತಿಪದಾರ್ಥ

**ಆದಿತ್ಯಾನಾಂ**—ಆದಿತ್ಯರ । **ಅವಸಾ**—ರಕ್ಷಣೆಯ ಫಲವಾದುದೂ । **ನೂತನೇನ**—ನೂತನವಾದುದೂ । **ಶಂತಮೇನ**—ಅತ್ಯಂತ ಸುಖಕಾರಕವಾದುದೂ ಆದ । **ಶರ್ಮಣಾ**—ಗೃಹದೊಂದಿಗೆ । **ಸಕ್ಷೀಮಹಿ**—ನಾವು ಸೇರಿಕೊಳ್ಳುವಂತಾಗಲಿ. । **ತುರಾಸಃ**—ವೇಗಗಾಮಿಗಳೂ । **ಶ್ರೋಷಮಾಣಾಃ**—ನಮ್ಮ ಸ್ತುತಿಗಳನ್ನು ಕೇಳತಕ್ಕವರೂ ಆದ ಆದಿತ್ಯರು । **ಯಜ್ಞಂ**—ಯಜ್ಞಕರ್ತನಾದ । **ಇಮಂ**—ಈ ಯಜಮಾನನನ್ನು । **ಅನಾಗಾಸ್ತ್ವೇ**—ಪಾಪರಹಿತವಾದುದೂ । **ಅದಿತಿತ್ವೇ**—ದೈನ್ಯರಹಿತವಾದುದೂ ಆದ ಸ್ಥಿತಿಯಲ್ಲಿ । **ದಧತು**—ಸ್ಥಾಪಿಸಲಿ.

ಭಾವಾರ್ಥ

ಆದಿತ್ಯರ ರಕ್ಷಣೆಯ ಫಲವಾದುದೂ, ನೂತನವಾದುದೂ, ಅತ್ಯಂತ ಸುಖಕಾರಕವಾದುದೂ ಆದ ಗೃಹದೊಂದಿಗೆ ನಾವು ಸೇರಿಕೊಳ್ಳುವಂತಾಗಲಿ ವೇಗಗಾಮಿಗಳೂ, ನಮ್ಮ ಸ್ತುತಿಗಳನ್ನು ಕೇಳತಕ್ಕವರೂ ಆದ ಆದಿತ್ಯರು ಯಜ್ಞಕರ್ತನಾದ ಈ ಯಜಮಾನನನ್ನು ಪಾಪರಹಿತವಾದುದೂ, ದೈನ್ಯರಹಿತವಾದುದೂ ಆದ ಸ್ಥಿತಿಯಲ್ಲಿ ಸ್ಥಾಪಿಸಲಿ.

English Translation

May we, through the protection of the Adityas, be in the enjoyment of a new and comfortable dwelling . may the swift-moving Adityas, listening to our praises, preserve this their worshipper in sinlessness and independence.

ಸಂಹಿತಾಪಾಠಃ

ಆದಿತ್ಯಾಸೋ ಅದಿತಿರ್ಮಾದಯಂತಾಂ ಮಿತ್ರೋ ಅರ್ಯಮಾ ವರುಣೋ ರಜಿಷ್ಠಾಃ ।
ಅಸ್ಮಾಕಂ ಸಂತು ಭುವನಸ್ಯ ಗೋಪಾಃ ಪಿಬಂತು ಸೋಮಮವಸೇ ನೋ ಅದ್ಯ ॥ ೨ ॥

ಪದಪಾಠಃ

ಆದಿತ್ಯಾಸಃ । ಅದಿತಿಃ । ಮಾದಯಂತಾಂ । ಮಿತ್ರಃ । ಅರ್ಯಮಾ । ವರುಣಃ । ರಜಿಷ್ಠಾಃ ।
ಅಸ್ಮಾಕಂ । ಸಂತು । ಭುವನಸ್ಯ । ಗೋಪಾಃ । ಪಿಬಂತು । ಸೋಮಂ । ಅವಸೇ । ನಃ । ಅದ್ಯ ॥ ೨ ॥

ಸಾಯಣಭಾಷ್ಯಂ

ಆದಿತ್ಯಾಸೋ ಅದಿತಿರಿತ್ಯಾದಿತ್ಯಗ್ರಹಸ್ಯ ಯಾಜ್ಯಾ । ಸೂತ್ರಿತಂ ಚ । ಆದಿತ್ಯಾಸೋ ಅದಿತಿರ್ಮಾದಯಂತಾಮಿತಿ ನೈತಂ ಗ್ರಹಮಾಕ್ಷೇತ ಹೂಯಮಾನಂ । ಆ. ೫ ೧೭ । ಇತಿ ॥

ಆದಿತ್ಯಾಸ ಆದಿತ್ಯಾ ದೇವಾ ಅದಿತಿಸ್ತೇಷಾಂ ಮಾತಾ ಚ । ಯದ್ವಾ । ಅದಿತಿರಿತಿ ದೇವವಿಶೇಷಣಂ । ಅದಿತಿರದಿತಯೋಽದೀನಾಃ । ರಜಿಷ್ಠಾ ಅತಿಶಯೇನರ್ಜವೋ ಮಿತ್ರೋಽರ್ಯಮಾ ವರುಣಶ್ಚೈತತ್ಸಂಜ್ಞಕಾ ಮಾದಯಂತಾಂ । ತೃಪ್ತಾಃ ಸಂತು । ಭುವನಸ್ಯ ಸರ್ವಸ್ಯ ಜಗತೋ ಗೋಪಾ ರಕ್ಷಕಾ ಏವಂಭೂತಾ ದೇವಾ ಅಸ್ಮಾಕಂ ಸಂತು । ಅಸ್ಮಾಕಮೇವ ರಕ್ಷಕಾ ಭವಂತ್ವಿತ್ಯರ್ಥಃ । ಅದ್ಯಾಸ್ಮಿನ್ದಿನೇ ನೋಽಸ್ಮಾಕಮವಸೇ ರಕ್ಷಣಾಯ ಸೋಮಮಸ್ಮಾಭಿರಭಿಷುತಂ ಪಿಬಂತು ॥

ಪ್ರತಿಪದಾರ್ಥ

**ಆದಿತ್ಯಾಸಃ**— ಆದಿತ್ಯರೂ । **ಅದಿತಿಃ**— ಅದಿತಿದೇವತೆಯೂ । **ರಜಿಷ್ಠಾಃ**— ಅತ್ಯಂತ ನೇರವಾದ ಮಾರ್ಗವನ್ನನುಸರಿಸುವ । **ಮಿತ್ರಃ**— ಮಿತ್ರನೂ । **ಅರ್ಯಮಾ**— ಅರ್ಯಮನೂ । **ವರುಣಃ**— ವರುಣದೇವನೂ । **ಮಾದಯಂತಾಂ**— ಹರ್ಷವನ್ನು ಹೊಂದಲಿ. । **ಭುವನಸ್ಯ**— ಲೋಕಕ್ಕೆಲ್ಲಾ । **ಗೋಪಾಃ**- ರಕ್ಷಕರಾದ ಈ ದೇವತೆಗಳು ।

**ಅಸ್ಮಾಕಂ**- ನಮಗೆ ಸೇರಿದವರಾಗಿ । **ಸಂತು**— ಆಗಿರಲಿ । **ಅದ್ಯ**— ಈ ಯಾಗದಿನದಲ್ಲಿ । **ನಃ**— ನಮ್ಮ । **ಅವಸೇ**—ರಕ್ಷಣಾರ್ಥವಾಗಿ । **ಸೋಮಂ**—ಸೋಮವನ್ನು । **ಪಿಬಂತು**— ಪಾನಮಾಡಲಿ

ಭಾವಾರ್ಥ

ಆದಿತ್ಯರೂ, ಅದಿತಿಯೂ, ಅತ್ಯಂತ ಋಜುಗಾಮಿಗಳಾದ ಮಿತ್ರ, ಅರ್ಯಮ ಮತ್ತು ವರುಣರೂ ಹರ್ಷವನ್ನು ಹೊಂದಲಿ ಲೋಕಕ್ಕೆಲ್ಲಾ ರಕ್ಷಕರಾದ ಈ ದೇವತೆಗಳು ನಮಗೆ ಸೇರಿದವರಾಗಿರಲಿ ಈ ಯಾಗದಿನದಲ್ಲಿ ನಮ್ಮ ರಕ್ಷಣಾರ್ಥವಾಗಿ ಸೋಮವನ್ನು ಪಾನಮಾಡಲಿ

English Translation

May the Adityas and Aditi, and the upright Mitra, Aryaman, and Varuna, be exhilarated (by the libation) may the guardians of the world be ours also may they drink the Soma to day for our preservation.

ವಿಶೇಷವಿಷಯಗಳು

**ಆದಿತ್ಯಾಸೋ ಅದಿತಿಃ** ಎಂಬ ಈ ಋಕ್ಕನ್ನು ಆದಿತ್ಯಗ್ರಹಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಆದಿತ್ಯಾಸೋ ಅದಿತಿರ್ಮಾದಯಂತಾಮಿತಿ ಸ್ವೈತಂ ಗ್ರಹಮಿಾಕ್ಷೇತ ಹೂಯಮಾನಂ** ಎಂಬ ಸೂತ್ರದಿಂದ (ಆ ೫. ೧೭) ವಿಸ್ಪಷ್ಟವಾಗಿರುವುದು

ಸಂಹಿತಾಪಾಠಃ

ಆದಿತ್ಯಾ ವಿಶ್ವೇ ಮರುತಶ್ಚ ವಿಶ್ವೇ ದೇವಾಶ್ಚ ವಿಶ್ವ ಋಭವಶ್ಚ ವಿಶ್ವೇ ।
ಇಂದ್ರೋ ಅಗ್ನಿರಶ್ವಿನಾ ತುಷ್ಟುವಾನಾ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೩ ॥

ಪದಪಾಠಃ

ಆದಿತ್ಯಾಃ । ವಿಶ್ವೇ । ಮರುತಃ । ಚ । ವಿಶ್ವೇ । ದೇವಾಃ । ಚ । ವಿಶ್ವೇ । ಋಭವಃ । ಚ । ವಿಶ್ವೇ ।
ಇಂದ್ರಃ । ಅಗ್ನಿಃ । ಅಶ್ವಿನಾ । ತುಸ್ತುವಾನಾಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೩ ॥

ಸಾಯಣಭಾಷ್ಯಂ

ಆದಿತ್ಯಾ ಅದಿತೇಃ ಪುತ್ರಾ ವಿಶ್ವೇ ಸರ್ವೇ ದ್ವಾದಶಸಂಖ್ಯಾಕಾ ಅರ್ಕಾ ವಿಶ್ವೇ ಮರುತಶ್ಚ ಸರ್ವ ಏಕೋನಪಂಚಾಶತ್ಸಂಖ್ಯೋಪೇತಾಶ್ಚ ವಿಶ್ವೇ ದೇವಾಶ್ಚ ವಿಶ್ವ ಋಭವಶ್ಚೇಂದ್ರೋಽಗ್ನಿರಶ್ವಿನಾಶ್ವಿನಾವೇತತ್ಸಂಜ್ಞಕಾ ಏವಂಭೂತಾ ಯೇ ದೇವಾಸ್ತುಷ್ಟುವಾನಾ ಅಸ್ಮಾಭಿಃ ಸ್ತುತಾ ಬಭೂವುಃ ಸರ್ವೇ ತೇ ದೇವಾ ಯೂಯಂ ಸದಾ ಸರ್ವದಾ ನೋಽಸ್ಮಾನ್ ಸ್ವಸ್ತಿಭಿಃ ಕಲ್ಯಾಣೈಃ ಪಾತ । ರಕ್ಷತ ॥

ಪ್ರತಿಪದಾರ್ಥ

**ವಿಶ್ವೇ ಆದಿತ್ಯಾಃ**—ಸಕಲವಾದ ದ್ವಾದಶಾದಿತ್ಯರೂ । **ವಿಶ್ವೇ ಮರುತಃ**— ಸಕಲ ಮರುತ್ತುಗಳೂ । **ವಿಶ್ವೇ ದೇವಾಶ್ಚ**—ವಿಶ್ವೇದೇವತೆಗಳೂ । **ವಿಶ್ವೇ ಋಭವಶ್ಚ**—ಸಕಲ ಋಭುಗಳೂ (ಮೂವರು) । **ಇಂದ್ರಃ**—ಇಂದ್ರನೂ ।

**ಅಗ್ನಿಃ**—ಅಗ್ನಿಯೂ | **ಅಶ್ವಿನಾ**—ಅಶ್ವಿನೀದೇವತೆಗಳೂ | **ತುಷ್ಟುವಾನಾಃ**—ನಮ್ಮಿಂದ ಸ್ತುತರಾಗಿದ್ದಾರೆ (ಇಂತಹ ಪ್ರಶಂಸೆಯುಳ್ಳ ಎಲ್ಲಾ ಸಕಲ ದೇವತೆಗಳೇ) | **ಯೂಯಂ**—ನೀವು | **ನಃ**—ನಮ್ಮನ್ನು | **ಸದಾ**—ಯಾವಾಗಲೂ | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ.

ಭಾವಾರ್ಥ

ಸಕಲ ಆದಿತ್ಯರೂ, ಸಕಲ ಮರುತ್ತುಗಳೂ, ವಿಶ್ವೇದೇವತೆಗಳೂ, ಸಕಲ ಋಭುಗಳೂ, ಇಂದ್ರನೂ, ಅಗ್ನಿಯೂ, ಅಶ್ವಿನೀದೇವತೆಗಳೂ ನಮ್ಮಿಂದ ಸ್ತುತರಾಗಿದ್ದಾರೆ ಇಂತಹ ಪ್ರಶಂಸೆಯುಳ್ಳ ಎಲ್ಲಾ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿ.

English Translation

All the Adityas, all the Maruts, all the gods, all the Ribhus, Indra, Agni, and the Ashwins, (have been) glorified (by us) do you all ever cherish us with blessings.

———

## ಐವತ್ತೆರಡನೆಯ ಸೂಕ್ತವು

ಸಾಯಣಭಾಷ್ಯಂ

ಆದಿತ್ಯಾಸೋ ಅದಿತಯ ಇತಿ ತೃಚಾತ್ಮಕಮೇಕೋನವಿಂಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಾದಿತ್ಯದೇವತಾಕಂ | ಆದಿತ್ಯಾಸ ಇತ್ಯನುಕ್ರಮಣಿಕಾ || ಗತೋ ವಿನಿಯೋಗಃ ||

ಅನುವಾದವು—**ಆದಿತ್ಯಾಸೋ ಅದಿತಯಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹತ್ತೊಂಬತ್ತನೆಯ ಸೂಕ್ತವು ಇದರಲ್ಲಿ ಮೂರು ಋಕ್ಕುಗಳಿರುವವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಆದಿತ್ಯರು ದೇವತೆಯು, ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಆದಿತ್ಯಾಸಃ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ

### ಸೂಕ್ತ—೫೨

ಮಂಡಲ—೭ || ಅನುವಾಕ—೩ || ಸೂಕ್ತ—೫೨ ||
ಅಷ್ಟಕ—೫ || ಅಧ್ಯಾಯ—೪ || ವರ್ಗ—೧೯ ||
ಸೂಕ್ತದಲ್ಲಿನ ಋಕ್ಸಂಖ್ಯೆ—೩ ||
ಋಷಿಃ—ವಸಿಷ್ಠಃ ||
ದೇವತಾ—ಆದಿತ್ಯಾಃ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

**ಆದಿತ್ಯಾಸೋ ಅದಿತಯಃ ಸ್ಯಾಮ ಪೂರ್ದೇವತ್ರಾ ವಸವೋ ಮರ್ತ್ಯತ್ರಾ |**

**ಸನೇಮ ಮಿತ್ರಾವರುಣಾ ಸನಂತೋ ಭವೇಮ ದ್ಯಾವಾಪೃಥಿವೀ ಭವಂತಃ ||**

ಪದಪಾಠಃ

ಆದಿತ್ಯಾಸಃ । ಅದಿತಯಃ । ಸ್ಯಾಮ । ಪೂಃ । ದೇವऽತ್ರಾ । ವಸವಃ । ಮರ್ತ್ಯऽತ್ರಾ ।

ಸನೇಮ । ಮಿತ್ರಾವರುಣಾ । ಸನಂತಃ । ಭವೇಮ । ದ್ಯಾವಾಪೃಥಿವೀ ಇತಿ । ಭವಂತಃ ॥ ೧ ॥

ಸಾಯಣಭಾಷ್ಯಂ

ಹೇ ಆದಿತ್ಯಾಸ ಆದಿತ್ಯಾ ದೇವಾಃ ॥ ವ್ಯತ್ಯಯೇನಾದ್ಯುದಾತ್ತತ್ವಾಭಾವಃ ॥ ಯದ್ವಾ ॥ ಅದಿತ್ಯಾನಾಮಿಮ ಆದಿತ್ಯಾಃ ॥ ತಸ್ಯೇದಮಿತ್ಯರ್ಥೇ ಪ್ರಾಗ್ದೀವ್ಯತೀಯೋ ಣ್ಯಪ್ರತ್ಯಯಃ ॥ ಆದಿತ್ಯಾನಾಂ ಶೇಷಭೂತಾ ವಯಮದಿತಯೋऽಖಂಡನೀಯಾಃ ಸ್ಯಾಮ । ಭವೇಮ । ದೇವತ್ರಾ ದೇವೇಷು ವಸವೋ ವಾಸಕಾ ದೇವಾಃ ಯುಷ್ಮದೀಯಂ ಪೂಃ ಪಾಲನಂ ಮರ್ತ್ಯತ್ರಾ ಮನುಷ್ಯೇಷ್ವಸ್ಮಾಸು ಭವತು । ಹೇ ಮಿತ್ರಾವರುಣಾ ಮಿತ್ರಾವರುಣೌ ಸನಂತೋ ಯುವಾಂ ಸಂಭಜಂತೋ ವಯಂ ಸನೇಮ । ಯುವಾಭ್ಯಾಂ ದತ್ತಂ ಧನಂ ಸಂಭಜೇಮಹಿ । ಹೇ ದ್ಯಾವಾಪೃಥಿವೀ ದ್ಯಾವಾ-ಪೃಥಿವ್ಯೌ ಯುವಯೋಃ ಪ್ರಸಾದಾ-ದ್ವಯಂ ಭವಂತೋ ಭವೇಮ । ಭೂತಿಮಂತಃ ಸ್ಯಾಮ ॥

ಪ್ರತಿಪದಾರ್ಥ

**ಆದಿತ್ಯಾಸಃ**—ಎಲೈ ಆದಿತ್ಯರೇ । (**ವಯಂ**—ನಾವು) **ಅದಿತಯಃ**—ಯಾವ ನ್ಯೂನತೆಯೂ ಇಲ್ಲದ ಜೀವನವುಳ್ಳವರಾಗಿ । **ಸ್ಯಾಮ**—ಇರುವಂತಾಗಲಿ । **ದೇವತ್ರಾ**—ದೇವತೆಗಳಲ್ಲೆಲ್ಲಾ । **ವಸವಃ**—ಪೂಜ್ಯರಾದ ಎಲೈ ವಸುಗಳೇ । **ಪೂಃ**—ನಿಮ್ಮ ಪಾಲನಕರ್ಮವು । **ಮರ್ತ್ಯತ್ರಾ**—ಮಾನವರಾದ ನಮಗೆ ಸಂಬಂಧಿಸಿರಲಿ । **ಮಿತ್ರಾವರುಣಾ**—ಎಲೈ ಮಿತ್ರಾವರುಣರೇ, । **ಸನಂತಃ**—ನಿಮ್ಮನ್ನು ಪೂಜಿಸುವ ನಾವು । **ಸನೇಮ**—ನಿಮ್ಮಿಂದ ದತ್ತವಾದ ಧನವನ್ನು ಅನುಭವಿಸುವಂತಾಗಲಿ । **ದ್ಯಾವಾಪೃಥಿವೀ**—ಎಲೈ ದ್ಯಾವಾಪೃಥಿವಿಗಳೇ । **ಭವಂತಃ**—ನಿಮ್ಮ ಅನುಗ್ರಹಕ್ಕೆ ಪಾತ್ರರಾಗಿರುವ ನಾವು । **ಭವೇಮ**—ಸಂಪದ್ಯುಕ್ತರಾಗುವಂತಾಗಲಿ.

ಭಾವಾರ್ಥ

ಎಲೈ ಆದಿತ್ಯರೇ, ನಾವು ಯಾವ ನ್ಯೂನತೆಯೂ ಇಲ್ಲದ ಜೀವನವುಳ್ಳವರಾಗಿರುವಂತೆ ಅನುಗ್ರಹಿಸಿ. ದೇವತೆಗಳಲ್ಲೆಲ್ಲಾ ಪೂಜ್ಯರಾದ ಎಲೈ ವಸುಗಳೇ, ನಿಮ್ಮ ಪಾಲನಕರ್ಮವು ಮಾನವರಾದ ನಮಗೆ ಸಂಬಂಧಿಸಿರಲಿ ಎಲೈ ಮಿತ್ರಾವರುಣರೇ, ನಿಮ್ಮನ್ನು ಪೂಜಿಸುವ ನಾವು ನಿಮ್ಮಿಂದ ದತ್ತವಾದ ಧನವನ್ನು ಅನುಭವಿಸುವಂತಾಗಲಿ. ಎಲೈ ದ್ಯಾವಾಪೃಥಿವಿಗಳೇ, ನಿಮ್ಮ ಅನುಗ್ರಹಕ್ಕೆ ಪಾತ್ರರಾಗಿರುವ ನಾವು ಸಂಪದ್ಯುಕ್ತರಾಗುವಂತೆ ಅನುಗ್ರಹಿಸಿ.

English Translation

Adityas, may we be independent · Vasus, (dwelling) among the gods, may your protection (extend) to mortals : offering (oblations to you), Mitra and Varuna, may we partake (of your bounty) : may we, heaven and earth, exist (through your favour).

ಸಂಹಿತಾಪಾಠಃ

ಮಿತ್ರಸ್ತನ್ನೋ ವರುಣೋ ಮಾಮಹಂತ ಶರ್ಮ ತೋಕಾಯ ತನಯಾಯ ಗೋಪಾಃ ।

ಮಾ ವೋ ಭುಜೇಮಾನ್ಯಜಾತಮೇನೋ ಮಾ ತತ್ಕರ್ಮ ವಸವೋ ಯಚ್ಚ-
ಯಧ್ವೇ ॥ ೨ ॥

ಪದಪಾಠಃ

ಮಿತ್ರಃ । ತತ್ । ನಃ । ವರುಣಃ । ಮಮಹಂತ । ಶರ್ಮ । ತೋಕಾಯ । ತನಯಾಯ । ಗೋಪಾಃ ।
ಮಾ । ವಃ । ಭುಜೇಮ । ಅನ್ಯಽಜಾತಂ । ಏನಃ । ಮಾ । ತತ್ । ಕರ್ಮ । ವಸವಃ । ಯತ್ ।
ಚಯಧ್ವೇ ॥ ೨ ॥

ಸಾಯಣಭಾಷ್ಯಂ

ಮಿತ್ರೋ ವರುಣೋಽಹರ್ನಿಶಾಭಿಮಾನಿನೌ ದೇವಾವೇತದಾದ್ಯಾಃ ಸರ್ವ ಆದಿತ್ಯಾ ನೋಽಸ್ಮಭ್ಯಂ ತತ್ಪ್ರಸಿದ್ಧಂ ಶರ್ಮ ಸುಖಂ ಮಮಹಂತ । ಮಹಂತಿರ್ದಾನಕರ್ಮಾ । ದದತು । ಗೋಪಾ ವಿಶ್ವಸ್ಯ ರಕ್ಷಕಾಸ್ತೇ ದೇವಾಸ್ತೋಕಾಯಾಸ್ಮದೀಯಾಯ ಪುತ್ರಾಯ ತನಯಾಯ ತತ್ಪುತ್ರಾಯ ಚ ಶರ್ಮ ಪ್ರಯಚ್ಛಂತು । ಅಥ ಪ್ರತ್ಯಕ್ಷಸ್ತುತಿಃ । ಹೇ ದೇವಾಃ ವೋ ಯುಷ್ಮದೀಯಾ ವಯಮನ್ಯಜಾತಮನ್ಯೇ-ನೋತ್ಪಾದಿತಮೇನಃ ಪಾಪಂ ಮಾ ಭುಜೇಮ । ಮಾ ಭುಕ್ತವಂತಃ ಸ್ಯಾಮ । ಹೇ ವಸವೋ ವಾಸಕಾ ದೇವಾಃ ಯದ್ಯೇನ ಯುಷ್ಮದಪ್ರಿಯೇಣ ಕರ್ಮಣಾ ಚಯಧ್ವೇ ಯೂಯಮಸ್ಮಾನ್ನಾಶಯತ ತತ್ತಾದೃ-ಶಂ ಕರ್ಮ ವಯಂ ಮಾ ಕರ್ಮ । ಮಾ ಕಾರ್ಷ್ಮ ॥ ಲುಙಿ ಕರೋತೇರುತ್ತಮಸ್ಯ ಬಹುವಚನಂ । ಮಂತ್ರೇ ಘಸಹ್ವರೇತ್ಯಾದಿನಾ ಚ್ಲೇರ್ಲೋಪಃ ॥

ಪ್ರತಿಪದಾರ್ಥ

ಮಿತ್ರಃ—ಮಿತ್ರನೂ । ವರುಣಃ—ವರುಣನೂ । ನಃ—ನಮಗೆ । ತತ್—ಪ್ರಸಿದ್ಧವಾದ । ಶರ್ಮ—ಸುಖವನ್ನು । ಮಮಹಂತ—ಕೊಡಲಿ । ಗೋಪಾಃ—ವಿಶ್ವರಕ್ಷಕರಾದ ಆದಿತ್ಯಾದಿ ದೇವತೆಗಳು । ತೋಕಾಯ—ನಮ್ಮ ಪುತ್ರರಿಗೂ । ತನಯಾಯ—ತತ್ಪುತ್ರರಿಗೂ ಆ ಸುಖವನ್ನುಂಟುಮಾಡಲಿ । (ಎಲೈ ದೇವತೆಗಳೇ) ವಃ—ನಿಮಗೆ ಸೇರಿದ ನಾವು । ಅನ್ಯಜಾತಂ—ಬೇರೊಬ್ಬರಿಂದ ಕೃತವಾದ । ಏನಃ—ಪಾಪದ ಫಲವನ್ನು । ಮಾ ಭುಜೇಮ—ಅನುಭವಿಸುವಂತೆ ಆಗದಿರಲಿ । ವಸವಃ—ವಸುಸಂಜ್ಞಕರಾದ ಎಲೈ ದೇವತೆಗಳೇ, । ಯತ್—ಯಾವ ಪಾಪಕರ್ಮಾಚರಣೆಯಿಂದ । ಚಯಧ್ವೇ—ನೀವು ನಮ್ಮನ್ನು ನಾಶಪಡಿಸಬಹುದೋ । ತತ್—ಅಂತಹ ಪಾಪ ಕರ್ಮವನ್ನು । ಮಾ ಕರ್ಮ—ನಾವು ಮಾಡದಿರುವಂತಾಗಲಿ

ಭಾವಾರ್ಥ

ಮಿತ್ರನೂ, ವರುಣನೂ, ನಮಗೆ ಜಗತ್ಪ್ರಸಿದ್ಧವಾದ ಸುಖವನ್ನು ಕೊಡಲಿ. ವಿಶ್ವರಕ್ಷಕರಾದ ಆದಿತ್ಯಾದಿ ದೇವತೆಗಳು ನಮ್ಮ ಪುತ್ರರಿಗೂ ತತ್ಪುತ್ರರಿಗೂ ಆ ಸುಖವನ್ನು ಕೊಡಲಿ ಎಲೈ ದೇವತೆಗಳೇ, ನಿಮಗೆ ಸೇರಿದ ನಾವು ಬೇರೊಬ್ಬರಿಂದ ಕೃತವಾದ ಪಾಪದ ಫಲವನ್ನು ಅನುಭವಿಸದೇ ಇರುವಂತಾಗಲಿ ವಸುಸಂಜ್ಞಕರಾದ ಎಲೈ ದೇವತೆಗಳೇ, ಯಾವ ಪಾಪಕರ್ಮಾಚರಣೆಯಿಂದ ನೀವು ನಮ್ಮನ್ನು ನಾಶಪಡಿಸಬಹುದೋ ಅಂತಹ ಪಾಪಕರ್ಮವನ್ನು ನಾವು ಮಾಡದಿರುವಂತಾಗಲಿ

## English Translation

May Mitra and Varuna bestow upon us felicity (may they) the guardians (of all men, bestow felicity) upon our sons and grandsons let us not suffer (gods), for offences committed by anothei let us not, Vasus, do any act by which you may be offended

ಸಂಹಿತಾಪಾಠಃ

ತುರಣ್ಯವೋಽಂಗಿರಸೋ ನಕ್ಷಂತ ರತ್ನಂ ದೇವಸ್ಯ ಸವಿತುರಿಯಾನಾಃ ।
ಪಿತಾ ಚ ತನ್ನೋ ಮಹಾನ್ಯಜತ್ರೋ ವಿಶ್ವೇ ದೇವಾಃ ಸಮನಸೋ ಜುಷಂತ ॥

ಪದಪಾಠಃ

ತುರಣ್ಯವಃ । ಅಂಗಿರಸಃ । ನಕ್ಷಂತ । ರತ್ನಂ । ದೇವಸ್ಯ । ಸವಿತುಃ । ಇಯಾನಾಃ ।
ಪಿತಾ । ಚ । ತತ್ । ನಃ । ಮಹಾನ್ । ಯಜತ್ರಃ । ವಿಶ್ವೇ । ದೇವಾಃ । ಸಽಮನಸಃ । ಜುಷಂತ ॥ ೩ ॥

ಸಾಯಣಭಾಷ್ಯಂ

ತುರಣ್ಯವೋ ಯಜ್ಞಾದಿಕರ್ಮಸು ತ್ವರಿತಾ ಅಂಗಿರಸ ಏತನ್ನಾಮಕಾ ಋಷಯ ಇಯಾನಾಃ ಸವಿತಾರಂ ಯಾಚಮಾನಾಃ ಸಂತಃ ಸವಿತುಃ ಪ್ರೇರಕಸ್ಯ ದೇವಸ್ಯ ಸಂಬಂಧಿ ರತ್ನಂ ರಮಣೀಯಂ ಯದ್ಧನಂ ನಕ್ಷಂತ ಆಶ್ನುವಂತ । ಉತ್ತರಾರ್ಧಗತತಚ್ಛಬ್ದಾಪೇಕ್ಷಯಾ ಯಚ್ಛಬ್ದೋಽತ್ರಾಧ್ಯಾಹ್ರಿಯತೇ । ಯಜತ್ರೋ ಯಜನಶೀಲೋ ಮಹಾನ್ ಪ್ರಭೂತಃ ಪಿತಾ ಚ ವಸಿಷ್ಠಸ್ಯ ಪಿತೃಭೂತೋ ವರುಣಶ್ಚ । ಯದ್ವಾ । ಸರ್ವೇಷಾಂ ಪಿತಾ ಪ್ರಜಾಪತಿಃ । ವಿಶ್ವೇ ಸರ್ವೇ ದೇವಾಃ ಸಮನಸಃ ಸಮಾನಮನಸ್ಕಾಸ್ತತ್ತಾದೃಶಂ ರತ್ನಂ ನೋಽಸ್ಮಾಞ್ಜುಷಂತ । ಸೇವಯಂತು । ಯದ್ವಾ । ನೋಽಸ್ಮಭ್ಯಂ ದದತು ॥

ಪ್ರತಿಪದಾರ್ಥ

**ತುರಣ್ಯವಃ**—ಯಜ್ಞಕರ್ಮದಲ್ಲಿ ಆಸಕ್ತರಾದ । **ಅಂಗಿರಸಃ**—ಅಂಗಿರಸ್ಸುಗಳು । **ಇಯಾನಾಃ**—ಸವಿತೃವನ್ನು ಯಾಚಿಸುತ್ತ । **ದೇವಸ್ಯ**—ದೇವತಾತ್ಮನಾದ । **ಸವಿತುಃ**—ಸವಿತೃದೇವನಿಂದ । **ರತ್ನಂ**—ಆಕರ್ಷಕವಾದ ಧನವನ್ನು । **ನಕ್ಷಂತ**—ಹೊಂದುತ್ತಾರೆ । **ಯಜತ್ರಃ**—ಪೂಜ್ಯನೂ । **ಮಹಾನ್**—ಮಹತ್ಸ್ವರೂಪವುಳ್ಳವನೂ । **ಪಿತಾ ಚ**—ಜಗತ್ತಿಗೆ ಪಿತೃಭೂತನೂ ಆದ ಪ್ರಜಾಪತಿಯೂ (ಅಥವಾ ವಸಿಷ್ಠಪಿತೃವಾದ ವರುಣನು) । **ವಿಶ್ವೇ ದೇವಾಃ**—ಸಕಲ ದೇವತೆಗಳೂ । **ಸಮನಸಃ**—ಒಂದೇ ಮನಸ್ಸುಳ್ಳವರಾಗಿ । **ತತ್**—ಪ್ರಸಿದ್ಧವಾದ ಧನವನ್ನು ಕೊಡುವುದರಿಂದ । **ನಃ**—ನಮ್ಮನ್ನು । **ಜುಷಂತ**—ಸಂತೋಷಪಡಿಸಲಿ.

ಭಾವಾರ್ಥ

ಯಜ್ಞಕರ್ಮದಲ್ಲಿ ಆಸಕ್ತರಾದ ಅಂಗಿರಸ್ಸುಗಳು ಸವಿತೃವನ್ನು ಯಾಚಿಸಿ ದೇವತಾತ್ಮನಾದ ಸವಿತೃವಿನಿಂದ ಆಕರ್ಷಕವಾದ ಧನವನ್ನು ಹೊಂದುತ್ತಾರೆ. ಪೂಜ್ಯನೂ, ಮಹತ್ಸ್ವರೂಪವುಳ್ಳವನೂ ಜಗತ್ತಿಗೆ ಪಿತೃಭೂತನೂ ಆದ

ಪ್ರಜಾಪತಿಯೂ ಮತ್ತು ಸಕಲ ದೇವತೆಗಳೂ ಒಂದೇ ಮನಸ್ಸುಳ್ಳವರಾಗಿ ಪ್ರಸಿದ್ಧವಾದ ಧನವನ್ನು ಕೊಡುವುದರಿಂದ ನಮ್ಮನ್ನು ಸಂತೋಷಪಡಿಸಲಿ

English Translation

The **A**ngirasas, prompt (in worship), soliciting him, obtain precious (wealth) from Savitri may the mighty adorable parent, and the universal god, alike favourably minded, approve (of the donation)

---

## ಐವತ್ತಮೂರನೆಯ ಸೂಕ್ತವು

ಸಾಯಣಭಾಷ್ಯಂ

**ಪ್ರ ದ್ಯಾವಾ ಯಜ್ಞೈರಿತಿ ತೃಚಾತ್ಮಕಂ ವಿಂಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ದ್ಯಾವಾ-ಪೃಥಿವ್ಯಂ । ಅನುಕ್ರಮ್ಯತೇ ಚ । ಪ್ರ ದ್ಯಾವಾ ದ್ಯಾವಾಪೃಥಿವ್ಯಮಿತಿ ॥ ಚತುರ್ಥೇಽಹನಿ ವೈಶ್ವದೇವಶಸ್ತ್ರ ಇದಂ ದ್ಯಾವಾಪೃಥಿವ್ಯನಿವಿದ್ಧಾನಂ । ಸೂತ್ರಿತಂ ಚ । ಆ ದೇವೋ ಯಾತು ಪ್ರ ದ್ಯಾವೇತಿ ವಾಸಿಷ್ಠಂ । ಆ. ೮ ೮ । ಇತಿ ॥ ದ್ಯಾವಾಪೃಥಿವ್ಯೇ ಪಶೌ ವಪಾಪುರೋಡಾಶಯೋಃ ಪ್ರ ದ್ಯಾವೇತಿ ದ್ವೇ ಋಚೌ ಯಾಜ್ಯೇ । ಸೂತ್ರಿತಂ ಚ । ಪ್ರ ದ್ಯಾವಾ ಯಜ್ಞೈಃ ಪೃಥಿವೀ ನಮೋಭಿರಿತಿ ದ್ವೇ । ಆ ೩ ೮ । ಇತಿ ॥**

**ಅನುವಾದವು – ಪ್ರ ದ್ಯಾವಾ ಯಜ್ಞೈಃ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಇಪ್ಪತ್ತನೆಯ **ಸೂಕ್ತವು.** ಇದರಲ್ಲಿ ಮೂರು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ದ್ಯಾವಾಪೃಥಿವಿಗಳು ದೇವತೆಯು, ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ—**ಪ್ರ ದ್ಯಾವಾ ದ್ಯಾವಾಪೃಥಿವ್ಯಂ** ಎಂದು ಹೇಳಿರುವುದು. ಯಾಗದ ನಾಲ್ಕನೆಯ ದಿವಸ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ಈ ಸೂಕ್ತವನ್ನು ದ್ಯಾವಾಪೃಥಿವೀ ದೇವತಾಕವಾದ ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಆ ದೇವೋ ಯಾತು ಪ್ರ ದ್ಯಾವೇತಿ ವಾಸಿಷ್ಠಂ** ಎಂಬ ಸೂತ್ರದಿಂದ (ಆ ೮-೮) ವಿವೃತವಾಗಿರುವುದು ದ್ಯಾವಾಪೃಥಿವೀದೇವತೆಗನ್ನು ಧ್ಯಾನಿಸಿ ಮಾಡುವ ಪಶುಯಾಗದಲ್ಲಿ **ಪ್ರ ದ್ಯಾವಾ** ಎಂಬ ಈ ಸೂಕ್ತದ ಮೊದಲಿನ ಎರಡು ಋಕ್ಕುಗಳನ್ನುವಪಾ ಮತ್ತು ಪುರೋಡಾಶಹೋಮಗಳಲ್ಲಿ ಕ್ರಮವಾಗಿ ಯಾಜ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಪ್ರ ದ್ಯಾವಾ ಯಜ್ಞೈಃ ಪೃಥಿವೀ ನಮೋಭಿರಿತಿ ದ್ವೇ** ಎಂಬ ಸೂತ್ರದಿಂದ (ಆ ೩ ೮) ವಿವೃತವಾಗಿರುವುದು

### ಸೂಕ್ತ—೫೩

ಮಂಡಲ—೭ ॥ ಅನುವಾಕ—೩ ॥ ಸೂಕ್ತ —೫೩ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೨೦ ॥
**ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥**
**ಋಷಿಃ—ವಸಿಷ್ಠಃ ॥**
**ದೇವತಾ— ದ್ಯಾವಾಪೃಥಿವ್ಯೌ॥**
**ಛಂದಃ—ತ್ರಿಷ್ಟುಬ್ ॥**

ಸಂಹಿತಾಪಾಠಃ

**ಪ್ರ ದ್ಯಾವಾ ಯಜ್ಞೈಃ ಪೃಥಿವೀ ನಮೋಭಿಃ ಸಬಾಧ ಈಳೇ ಬೃಹತೀ ಯಜತ್ರೇ ।**

ತೇ ಚಿದ್ಧಿ ಪೂರ್ವೇ ಕವಯೋ ಗೃಣಂತಃ ಪುರೋ ಮಹೀ ದಧಿರೇ ದೇವ-
ಪುತ್ರೇ ॥ ೧ ॥

ಪದಪಾಠಃ

ಪ್ರ । ದ್ಯಾವಾ । ಯಜ್ಞೈಃ । ಪೃಥಿವೀ ಇತಿ । ನಮಃऽಭಿಃ । ಸಽಬಾಧಃ । ಈಳೇ । ಬೃಹತೀ ಇತಿ ।
ಯಜತ್ರೇ ಇತಿ ।

ತೇ ಇತಿ । ಚಿತ್ । ಹಿ । ಪೂರ್ವೇ । ಕವಯಃ । ಗೃಣಂತಃ । ಪುರಃ । ಮಹೀ ಇತಿ । ದಧಿರೇ । ದೇವ-
ಪುತ್ರೇ ಇತಿ ದೇವಽಪುತ್ರೇ । ೧ ॥

ಸಾಯಣಭಾಷ್ಯಂ

ಯಜತ್ರೇ ಯಜನೀಯೇ ಬೃಹತೀ ಬೃಹತ್ಯೌ ಮಹತ್ಯೌ ದ್ಯಾವಾ ಪೃಥಿವೀ ದ್ಯಾವಾಪೃಥಿವ್ಯೌ ಯಜ್ಞೈರ್ಯಾಗೈರ್ನಮೋಭಿಃ ಸ್ತೋತ್ರೈಶ್ಚಾಹಂ ಸ್ತೋತಾ ಸಬಾಧೋ ಬಾಧಾಸಹಿತಃ । ಋತ್ವಿಜಾಂ ಸಂಬಾಧಯುಕ್ತ ಇತ್ಯರ್ಥಃ । ಪ್ರೇಳೇ । ಪ್ರಕರ್ಷೇಣ ಸ್ತೌಮಿ । ಮಹೀ ಮಹತ್ಯೌ ದೇವಪುತ್ರೇ । ದೇವಾಃ ಪುತ್ರಾಃ ಯಯೋಸ್ತೇ । ತೇ ಚಿದ್ಧಿ ತಾದೃಶ್ಯೌ ಖಲ್ವಪಿ ದ್ಯಾವಾಪೃಥಿವ್ಯೌ ಪೂರ್ವೇ ಪುರಾತನಾಃ ಕವಯೋ ಗೃಣಂತಃ ಸ್ತುವಂತಃ ಪುರೋ ದಧಿರೇ । ಪುರಸ್ತಾತ್ಸ್ಥಾಪಯಾಮಾಸುಃ ॥

ಪ್ರತಿಪದಾರ್ಥ

**ಯಜತ್ರೇ**—ಪೂಜಾರ್ಹರೂ । **ಬೃಹತೀ**—ಮಹತ್ಸ್ವರೂಪವುಳ್ಳವರೂ ಆದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನು । **ಯಜ್ಞೈಃ**—ಯಾಗಗಳಿಂದಲೂ । **ನಮೋಭಿಃ**—ನಮಸ್ಕಾರಪೂರ್ವಕವಾಗಿಯೂ । **ಸಬಾಧಃ**—ಋತ್ವಿಕ್ಕುಗಳಿಂದ ಕೂಡಿದವನಾಗಿಯೂ । **ಪ್ರ ಈಳೇ**—ನಾನು ಸ್ತುತಿಸಿ ಪೂಜಿಸುತ್ತೇನೆ । **ಮಹೀ**—ಮಹತ್ಸ್ವರೂಪವುಳ್ಳವರೂ । **ದೇವಪುತ್ರೇ**—ದೇವತೆಗಳನ್ನು ಪುತ್ರರನ್ನಾಗಿ ಪಡೆದವರೂ ಆದ । **ತೇ ಚಿದ್ಧಿ**—ಆ ದ್ಯಾವಾಪೃಥಿವಿಗಳನ್ನೇ । **ಪೂರ್ವೇ**—ಪುರಾತನರಾದ । **ಕವಯಃ**—ಋಷಿಗಳು । **ಗೃಣಂತಃ**—ಸ್ತುತಿಸಿ । **ಪುರಃ ದಧಿರೇ**—ಯಜ್ಞಭಾಗದಲ್ಲಿ ಮುಂದುಗಡೆ ಸ್ಥಾಪಿಸಿದರು.

ಭಾವಾರ್ಥ

ಪೂಜಾರ್ಹರೂ, ಮಹತ್ಸ್ವರೂಪವುಳ್ಳವರೂ ಆದ ದ್ಯಾವಾಪೃಥಿವಿಗಳನ್ನು ಯಾಗಗಳಿಂದಲೂ, ನಮಸ್ಕಾರಪೂರ್ವಕವಾಗಿಯೂ, ಋತ್ವಿಕ್ಕುಗಳಿಂದ ಕೂಡಿದವನಾಗಿಯೂ ನಾನು ಸ್ತುತಿಸಿ ಆರಾಧಿಸುತ್ತೇನೆ. ಮಹತ್ಸ್ವರೂಪವುಳ್ಳವರೂ, ದೇವತೆಗಳನ್ನು ಪುತ್ರರನ್ನಾಗಿ ಪಡೆದವರೂ ಆದ ಆ ದ್ಯಾವಾಪೃಥಿವಿಗಳನ್ನೇ ಪುರಾತನರಾದ ಋಷಿಗಳು ಸ್ತುತಿಸಿ ಯಜ್ಞಭಾಗದಲ್ಲಿ ಸ್ಥಾಪಿಸಿದರು.

## English Translation

Attended by a concourse (of priests), I worship the adorable and mighty Heaven and Earth with sacrifices and praises, those two great ones

of whom the gods are the sons, whom ancient sages glorifying have formerly detained.

ಸಂಹಿತಾಪಾಠಃ

ಪ್ರ ಪೂರ್ವಜೇ ಪಿತರಾ ನವ್ಯಸೀಭಿರ್ಗೀರ್ಭಿಃ ಕೃಣುಧ್ವಂ ಸದನೇ ಋತಸ್ಯ ।

ಆ ನೋ ದ್ಯಾವಾಪೃಥಿವೀ ದೈವ್ಯೇನ ಜನೇನ ಯಾತಂ ಮಹಿ ವಾಂ ವರೂಥಂ॥

ಪದಪಾಠಃ

ಪ್ರ । ಪೂರ್ವಜೇ ಇತಿ ಪೂರ್ವऽಜೇ । ಪಿತರಾ । ನವ್ಯಸೀಭಿಃ । ಗೀಃऽಭಿಃ । ಕೃಣುಧ್ವಂ । ಸದನೇ ಇತಿ । ಋತಸ್ಯ ।

ಆ । ನಃ । ದ್ಯಾವಾಪೃಥಿವೀ ಇತಿ । ದೈವ್ಯೇನ । ಜನೇನ । ಯಾತಂ । ಮಹಿ । ವಾಂ । ವರೂಥಂ ॥ ೨ ॥

ಸಾಯಣಭಾಷ್ಯಂ

ಆಗ್ರಯಣೇ ದ್ಯಾವಾಪೃಥಿವ್ಯೈಕಕಪಾಲಸ್ಯ ಪ್ರ ಪೂರ್ವಜೇ ಇತಿ ಯಾಜ್ಯಾ । ಸೂತ್ರಿತಂ ಚ । ಮಹೀ ದ್ಯೌಃ ಪೃಥಿವೀ ಚ ನಃ ಪ್ರ ಪೂರ್ವಜೇ ಪಿತರಾ ನವ್ಯಸೀಭಿಃ । ಆ ೨-೯ । ಇತಿ ॥

ಹೇ ಅಸ್ಮದೀಯಾಃ ಸ್ತೋತಾರಃ ಯೂಯಂ ನವ್ಯಸೀಭಿರ್ನವತರಾಭಿರ್ಗೀರ್ಭಿಃ ಸ್ತುತಿರೂಪಾಭಿರ್ವಾಗ್ಭಿರ್ಋತಸ್ಯ ಯಜ್ಞಸ್ಯ ಸದನೇ ಸ್ಥಾನಭೂತೇ ಪೂರ್ವಜೇ ಪೂರ್ವಂ ಪ್ರಜಾತೇ ಪಿತರಾ ಪಿತರೌ ವಿಶ್ವಸ್ಯ ಮಾತಾಪಿತೃಭೂತೇ ದ್ಯಾವಾಪೃಥಿವ್ಯೌ ಪ್ರ ಕೃಣುಧ್ವಂ । ಪುರಸ್ಕುರುತ । ಅಥ ಪ್ರತ್ಯಕ್ಷಸ್ತುತಿಃ । ಹೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಯುವಾಂ ದೈವ್ಯೇನ ದೇವಸಂಬಂಧಿನಾ ಜನೇನ ಸಹ ನೋऽಸ್ಮಾನಭ್ಯಾ ಯಾತಂ । ಆಗಚ್ಛತಂ । ಕಿಮರ್ಥಮಾಯಾತಮಿತಿ ಉಚ್ಯತೇ । ವಾಂ ಯುವಯೋರ್ವರೂಥಮಸ್ಮಾಭಿರ್ವರಣೀಯಂ ಮಹಿ ಮಹತ್ । ಯದ್ಧನಮಸ್ತೀತಿ ಶೇಷಃ । ತದ್ಧನಮಸ್ಮಭ್ಯಂ ದೀಯತಾಮಿತ್ಯರ್ಥಃ ॥

ಪ್ರತಿಪದಾರ್ಥ

(ಎಲೈ ದೇವತೆಗಳೇ,) **ನವ್ಯಸೀಭಿಃ** — ನೂತನವಾಗಿ ನಿರ್ಮಿತಗಳಾದ । **ಗೀರ್ಭಿಃ** — ಸ್ತುತಿಗಳಿಂದ । **ಋತಸ್ಯ**—ಯಜ್ಞಕ್ಕೆ । **ಸದನೇ**—ಆಧಾರಭೂತರೂ ! **ಪೂರ್ವಜೇ**—ಪ್ರಥಮೋತ್ಪನ್ನರೂ । **ಪಿತರಾ**—ಜಗತ್ತಿಗೆಲ್ಲಾ ಮಾತಾಪಿತೃಗಳೂ ಆದ ದ್ಯಾವಾಪೃಥಿವಿಗಳನ್ನು । **ಪ್ರ ಕೃಣುಧ್ವಂ**—ಪುರಸ್ಕರಿಸಿ ಆರಾಧಿಸಿರಿ । **ದ್ಯಾವಾಪೃಥಿವೀ**—ಎಲೈ ದ್ಯಾವಾಪೃಥಿವಿಗಳೇ, । **ದೈವ್ಯೇನ**—ದೇವಸಂಬಂಧಿಯಾದ । **ಜನೇನ**—ಜನಸಮೂಹದೊಡನೆ । **ನಃ**—ನಮ್ಮಲ್ಲಿಗೆ । **ಆ ಯಾತಂ**—ಬನ್ನಿರಿ. । **ವಾಂ**—ನಿಮ್ಮ ಸಂಬಂಧಿಯಾದುದೂ । **ವರೂಥಂ**—ನಮ್ಮಿಂದ ಅಪೇಕ್ಷಿತವಾದುದೂ । **ಮಹಿ**—ಪ್ರಭೂತವಾದುದೂ ಆದ ಧನವನ್ನು ನಮಗೆ ಕೊಡಿರಿ

### ಭಾವಾರ್ಥ

ಎಲೈ ಸ್ತೋತೃಗಳೇ, ಯಜ್ಞಕ್ಕೆ ಆಧಾರಭೂತರೂ, ಪ್ರಥಮೋತ್ಪನ್ನರೂ, ಜಗತ್ತಿಗೆಲ್ಲಾ ಮಾತಾಪಿತೃಗಳೂ ಆದ ದ್ಯಾವಾಪೃಥಿವಿಗಳನ್ನು ನೂತನವಾಗಿ ನಿರ್ಮಿತಗಳಾದ ಸ್ತುತಿಗಳಿಂದ ಪುರಸ್ಕರಿಸಿ ಆರಾಧಿಸಿರಿ ಎಲೈ ದ್ಯಾವಾಪೃಥಿವಿಗಳೇ, ನಮ್ಮಿಂದ ಅಪೇಕ್ಷಿತವಾದುದೂ, ನಿಮ್ಮಲ್ಲಿ ತುಂಬಿರುವುದೂ ಆದ ಧನವನ್ನು ಪ್ರಭೂತವಾಗಿ ನಮಗೆ ಕೊಡಲು ದೇವಜನರೊಡನೆ ನಮ್ಮ ಯಾಗಕ್ಕೆ ಬನ್ನಿರಿ.

### English Translation

Place before (us) in the hall of sacrifice, with new songs, the ancient parents (of all beings) come to us, Heaven and Earth, with the celestial people, for vast is your protecting (wealth)

### ವಿಶೇಷವಿಷಯಗಳು

ಆಗ್ರಯಣೇಷ್ಟಿಯಲ್ಲಿ ದ್ಯಾವಾಪೃಥಿವೀದೇವತೆಗಳನ್ನು ಉದ್ದೇಶಿಸಿ ಮಾಡುವ ಏಕಕಪಾಲಹೋಮದಲ್ಲಿ **ಪ್ರ ಪೂರ್ವಜೇ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಮಹೀ ದ್ಯೌಃ ಪೃಥಿವೀ ಚ ನಃ ಪ್ರ ಪೂರ್ವಜೇ ಪಿತರಾ ನವ್ಯಸೀಭಿಃ** ಎಂಬ ಸೂತ್ರದಿಂದ (ಆ ೨-೯) ವಿವೃತವಾಗಿರುವುದು

### ಸಂಹಿತಾಪಾಠಃ

ಉತೋ ಹಿ ವಾಂ ರತ್ನಧೇಯಾನಿ ಸಂತಿ ಪುರೂಣಿ ದ್ಯಾವಾಪೃಥಿವೀ ಸುದಾಸೇ ।
ಅಸ್ಮೇ ಧತ್ತಂ ಯದಸದಸ್ಕೃಧೋಯು ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೩ ॥

### ಪದಪಾಠಃ

ಉತೋ ಇತಿ । ಹಿ । ವಾಂ । ರತ್ನಽಧೇಯಾನಿ । ಸಂತಿ । ಪುರೂಣಿ । ದ್ಯಾವಾಪೃಥಿವೀ ಇತಿ । ಸುಽದಾಸೇ । ಅಸ್ಮೇ ಇತಿ । ಧತ್ತಂ । ಯತ್ । ಅಸತ್ । ಅಸ್ಕೃಧೋಯು । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೩ ॥

### ಸಾಯಣಭಾಷ್ಯಂ

**ಉತೋ ಹ್ಯಪಿ ಚ ಖಲು ಹೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ವಾಂ ಯುವಯೋಃ ಸುದಾಸೇ ಶೋಭನಹವಿರ್ದಾನಾಯ ಯಜಮಾನಾಯ ದೇಯಾನಿ ಪುರೂಣಿ ಬಹೂನಿ ರತ್ನಧೇಯಾನಿ ರಮಣೀಯಾನಿ ಧನಾನಿ ಸಂತಿ । ಭವಂತಿ । ತೇಷಾಂ ಮಧ್ಯೇ ಯದ್ಧನಮಸ್ಕೃಧೋಯು । ಕೃಧುಕೋ ಹ್ರಸ್ವಃ । ಅಹ್ರಸ್ವಮನಲ್ಪಮಸತ್ ಭವೇತ್ ತದ್ಧನಮಸ್ಮೇ ಅಸ್ಮಭ್ಯಂ ಧತ್ತಂ । ಪ್ರಯಚ್ಛತಂ । ಹೇ ದ್ಯಾವಾಪೃಥಿವ್ಯೌ ಯೂಯಂ ಯುವಾಂ ನೋಽಸ್ಮಾನ್ ಸರ್ವದಾ ಕಲ್ಯಾಣೈಃ ಪಾತ । ಪಾಲಯತ ॥**

### ಪ್ರತಿಪದಾರ್ಥ

**ದ್ಯಾವಾಪೃಥಿವೀ**— ಎಲೈ ದ್ಯಾವಾಪೃಥಿವಿಗಳೇ, | **ಉತೋ ಹಿ**—ಅಲ್ಲದೇ | **ವಾಂ**—ನಿಮ್ಮಲ್ಲಿ | **ಸುದಾಸೇ**—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಕೊಡಬೇಕಾದ | **ರತ್ನಧೇಯಾನಿ**—ರಮಣೀಯವಾದ ಧನಗಳು| **ಪುರೂಣಿ**—ಅತ್ಯಧಿಕವಾಗಿ | **ಸಂತಿ**—ಇರುತ್ತವೆ | **ಯತ್**—ಅವುಗಳಲ್ಲಿ ಯಾವ ಭಾಗವು | **ಅಸ್ನಧೋಯು**—ಅತ್ಯಧಿಕವಾಗಿ | **ಅಸತ್**—ಇರುವುದೋ ಅದನ್ನು | **ಅಸ್ಮೇ**—ನಮಗೆ | **ಧತ್ತಂ**—ಕೊಡಿರಿ | **ಯೂಯಂ**—ನೀವು **ನಃ**—ನಮ್ಮನ್ನು | **ಸದಾ**—ಯಾವಾಗಲೂ | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ

### ಭಾವಾರ್ಥ

ಎಲೈ ದ್ಯಾವಾಪೃಥಿವಿಗಳೇ, ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಕೊಡಬೇಕಾದ ರಮಣೀಯವಾದ ಧನಗಳು ನಿಮ್ಮಲ್ಲಿ ಅತ್ಯಧಿಕವಾಗಿರುತ್ತವೆ ಅವುಗಳಲ್ಲಿ ಯಾವ ಭಾಗವು ಅತ್ಯಧಿಕವಾಗಿರುವುದೋ ಅದನ್ನು ನಮಗೆ ಕೊಡಿರಿ ಎಲೈ ದ್ಯಾವಾಪೃಥಿವಿಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

### English Translation

Many, Heaven and Earth, are the treasures fit to be given to the pious donor (of the oblation) give to us that wealth which is unlimited and do you ever cherish us with blessings

---

## ಐವತ್ತನಾಲ್ಕನೆಯ ಸೂಕ್ತವು

### ಸಾಯಣಭಾಷ್ಯಂ

**ವಾಸ್ತೋಷ್ಪತ ಇತಿ ತೃಚಾತ್ಮಕಮೇಕಪಿಂಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವಾಸ್ತೋಷ್ಪತ್ಯಂ | ತಥಾ ಚಾನುಕ್ರಮ್ಯತೇ | ವಾಸ್ತೋಷ್ಪತೇ ವಾಸ್ತೋಷ್ಪತ್ಯಮಿತಿ || ಸ್ಮಾರ್ತೇ ಗೃಹನಿರ್ಮಾಣೇ ವಾಸ್ತೋಷ್ಪತ ಇತಿ ಚತಸೃಭಿಃ ಪ್ರತ್ಯೃಚಂ ಜುಹುಯಾತ್ | ಸೂತ್ರಿತಂ ಚ | ವಾಸ್ತೋಷ್ಪತೇ ಪ್ರತಿ ಜಾನೀಹ್ಯಸ್ಮಾನಿತಿ ಚತಸೃಭಿಃ ಪ್ರತ್ಯೃಚಂ ಹುತ್ವಾ | ಆ ಗೃ. ೨೯೯ | ಇತಿ ||**

**ಅನುವಾದವು—ವಾಸ್ತೋಷ್ಪತೇ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಇಪ್ಪತ್ತೊಂದನೆಯ ಸೂಕ್ತವು ಇವರಲ್ಲಿ ಮೂರು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ವಾಸ್ತೋಷ್ಪತಿಯು ದೇವತೆಯು, ತ್ರಿಷ್ಟುಪ್‌ಛಂದಸ್ಸು ಅನುಕ್ರಮಣಿಕೆಯಲ್ಲಿ—**ವಾಸ್ತೋಷ್ಪತೇ ವಾಸ್ತೋಷ್ಪತ್ಯಂ** ಎಂದು ಹೇಳಿರುವುದು ಸ್ಮೃತ್ಯಾದಿಗಳಲ್ಲಿ ಹೇಳಿರುವ ಗೃಹನಿರ್ಮಾಣಕರ್ಮದಲ್ಲಿ **ವಾಸ್ತೋಷ್ಪತೇ** ಎಂಬ ಈ ಸೂಕ್ತದ ಮೂರು ಋಕ್ಕು ಮತ್ತು ಮುಂದಿನ ಸೂಕ್ತದ ಮೊದಲನೆಯ ಋಕ್ಕು ಒಟ್ಟು ನಾಲ್ಕು ಋಕ್ಕುಗಳಿಂದ ಪ್ರತಿಋಕ್ಕಿನಿಂದಲೂ ಒಂದೊಂದು ಆಹುತಿಯಂತೆ ಹೋಮಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ವಾಸ್ತೋಷ್ಪತೇ ಪ್ರತಿ ಜಾನೀಹ್ಯಸ್ಮಾನಿತಿ ಚತಸೃಭಿಃ ಪ್ರತ್ಯೃಚಂ ಹುತ್ವಾ** ಎಂಬ ಸೂತ್ರದಿಂದ (ಆ. ಗೃ ೨೯-೯) ವಿವೃತವಾಗಿರುವುದು.

## ಸೂಕ್ತ—೫೪

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೫೪ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೨೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
ಋಷಿಃ—ವಸಿಷ್ಠಃ ॥
ದೇವತಾ—ವಾಸ್ತೋಷ್ಪತಿಃ ॥
ಛಂದಃ—ತ್ರಿಷ್ಟುಪ್ ।

ಸಂಹಿತಾಪಾಠಃ

ವಾಸ್ತೋಷ್ಪತೇ ಪ್ರತಿ ಜಾನೀಹ್ಯಸ್ಮಾನ್ತ್ಸ್ವಾವೇಶೋ ಅನಮೀವೋ ಭವಾ ನಃ
ಯತ್ತ್ವೇಮಹೇ ಪ್ರತಿ ತನ್ನೋ ಜುಷಸ್ವ ಶಂ ನೋ ಭವ ದ್ವಿಪದೇ ಶಂ ಚತು-
ಷ್ಪದೇ ॥ ೧ ॥

ಪದಪಾಠಃ

ವಾಸ್ತೋಃ । ಪತೇ । ಪ್ರತಿ । ಜಾನೀಹಿ । ಅಸ್ಮಾನ್ । ಸುಽಆವೇಶಃ । ಅನಮೀವಃ । ಭವ । ನಃ ।
ಯತ್ । ತ್ವಾ । ಈಮಹೇ । ಪ್ರತಿ । ತತ್ । ನಃ । ಜುಷಸ್ವ । ಶಂ । ನಃ । ಭವ । ದ್ವಿಽಪದೇ । ಶಂ । ಚ-
ತುಃಽಪದೇ ॥ ೧ ॥

ಸಾಯಣಭಾಷ್ಯಂ

ಹೇ ವಾಸ್ತೋಷ್ಪತೇ ಗೃಹಸ್ಯ ಪಾಲಯಿತರ್ದೇವ ತ್ವಮಸ್ಮಾಂಸ್ತ್ವದೀಯಾನ್ ಸ್ತೋತ್ರ್̤ನಿತಿ ಪ್ರತಿ ಜಾನೀಹಿ । ಪ್ರಬುಧ್ಯಸ್ವ । ತದನಂತರಂ ನೋಽಸ್ಮಾಕಂ ಸ್ವಾವೇಶಃ ಶೋಭನನಿವೇಶೋಽನಮೀವೋಽರೋಗಕೃಚ್ಚ ಭವ । ಕಿಂಚ ವಯಂ ತ್ವಾ ತ್ವಾಂ ಯದ್ಧನಮೀಮಹೇ ಯಾಚಾಮಹೇ ತ್ವಮಪಿ ತದ್ಧನಂ ನೋಽಸ್ಮಭ್ಯಂ ಪ್ರತಿ ಜುಷಸ್ವ । ಪ್ರಯಚ್ಛ । ಅಪಿ ಚ ನೋಽಸ್ಮಾಕಂ ದ್ವಿಪದೇ ಪುತ್ರಪೌತ್ರಾದಿಜನಾಯ ಶಂ ಸುಖಕರೋ ಭವ । ಚತುಷ್ಪದೇಽಸ್ಮದೀಯಾಯ ಗವಾಶ್ವಾದಿವರ್ಗಾಯ ಚ ಶಂ ಸುಖಕರೋ ಭವ ॥

ಪ್ರತಿಪದಾರ್ಥ

**ವಾಸ್ತೋಷ್ಪತೇ**—ಗೃಹಪಾಲಕನಾದ ಎಲೈ ವಾಸ್ತೋಷ್ಪತಿದೇವನೇ, । **ಅಸ್ಮಾನ್**—ನಮ್ಮನ್ನು । **ಪ್ರತಿ ಜಾನೀಹಿ**—ನಿನ್ನ ಪೂಜಕರೆಂದು ತಿಳಿ. । **ನಃ**—ನಮಗೆ । **ಸ್ವಾವೇಶಃ**—ಉತ್ತಮವಾದ ವಸತಿದಾಯಕನೂ । **ಅನಮೀವಃ**—ರೋಗನಾಶಕನೂ । **ಭವ**—ಆಗಿರು. । **ತ್ವಾ**—ನಿನ್ನಿಂದ । **ಯತ್**—ಯಾವ ಧನವನ್ನು । **ಈಮಹೇ**—ಯಾಚಿಸುತ್ತೇನೆಯೋ । **ತತ್**—ಆ ಧನವನ್ನು । **ನಃ**—ನಮಗೆ । **ಪ್ರತಿ ಜುಷಸ್ವ**—ಕೊಡು । **ನಃ**—ನಮ್ಮ । **ದ್ವಿಪದೇ**—ಪುತ್ರಪೌತ್ರಾದಿಗಳಿಗೂ । **ಶಂ**—ಸುಖಕಾರಕನಾಗಿ । **ಭವ**—ಆಗು. । **ಚತುಷ್ಪದೇ**—ಪಶ್ವಾದಿಗಳಿಗೂ । **ಶಂ**—ಸುಖಕಾರಕನಾಗು.

### ಭಾವಾರ್ಥ

ಗೃಹಪಾಲಕನಾದ ಎಲೈ ವಾಸ್ತೋಷ್ಪತಿದೇವನೇ, ನಮ್ಮನ್ನು ನಿನ್ನ ಆರಾಧಕರೆಂದು ತಿಳಿ ನಮಗೆ ಉತ್ತಮವಾದ ವಸತಿದಾಯಕನೂ, ರೋಗನಾಶಕನೂ ಆಗು. ನಿನ್ನಿಂದ ಯಾವ ಧನವನ್ನು ಯಾಚಿಸುತ್ತೇವೆಯೋ ಆ ಧನವನ್ನು ನಮಗೆ ಕೊಡು ನಮ್ಮ ಪುತ್ರಪೌತ್ರಾದಿಗಳಿಗೂ, ಪಶ್ವಾದಿಗಳಿಗೂ ಸುಖಕಾರಕನಾಗು

### English Translation

Protector of the dwelling, recognize us be to us an excellent abode, the non-inflicter of disease whatever we ask of you, be pleased to grant be the bestower of happiness on our bipeds and quadrupeds

### ವಿಶೇಷವಿಷಯಗಳು

ವಾಸ್ತೋಷ್ಪತಿ ಎಂಬ ದೇವತೆಯ ವಿಷಯವಾದ ವಿವರಣೆಗಾಗಿ ಇದೇ ಭಾಗದ ೫೪ನೇ ಸೂಕ್ತದ ಒಂದನೇ ಋಕ್ಕಿನ ವಿಶೇಷವಿಷಯಗಳನ್ನು ನೋಡಿ.

### ಸಂಹಿತಾಪಾಠಃ

ವಾಸ್ತೋಷ್ಪತೇ ಪ್ರತರಣೋ ನ ಏಧಿ ಗಯಸ್ಫಾನೋ ಗೋಭಿರಶ್ವೇಭಿರಿಂದೋ।
ಅಜರಾಸಸ್ತೇ ಸಖ್ಯೇ ಸ್ಯಾಮ ಪಿತೇವ ಪುತ್ರಾನ್ಪ್ರತಿ ನೋ ಜುಷಸ್ವ ॥ ೨ ॥

### ಪದಪಾಠಃ

ವಾಸ್ತೋಃ । ಪತೇ । ಪ್ರಽತರಣಃ । ನಃ । ಏಧಿ । ಗಯಽಸ್ಫಾನಃ । ಗೋಭಿಃ । ಅಶ್ವೇಭಿಃ । ಇಂದೋ ಇತಿ ।
ಅಜರಾಸಃ । ತೇ । ಸಖ್ಯೇ । ಸ್ಯಾಮ । ಪಿತಾಽಇವ । ಪುತ್ರಾನ್ । ಪ್ರತಿ । ನಃ । ಜುಷಸ್ವ ॥ ೨ ॥

### ಸಾಯಣಭಾಷ್ಯಂ

ಹೇ ವಾಸ್ತೋಷ್ಪತೇ ಗೃಹಸ್ಯ ಪಾಲಯಿತರ್ದೇವ ತ್ವಂ ನೋಽಸ್ಮಾಕಂ ಪ್ರತರಣಃ ಪ್ರವರ್ಧಕೋ ಗಯಸ್ಫಾನೋ ಗಯಸ್ಯಾಸ್ಮದೀಯಸ್ಯ ಧನಸ್ಯ ಸ್ಫಾಯಯಿತಾ ಪ್ರವರ್ಧಕ ಏಧಿ । ಭವ । ಹೇ ಇಂದೋ ಸೋಮವದಾಹ್ಲಾದಕ ತೇ ತ್ವಯಾ ಸಹ ಸಖ್ಯೇ ಸತಿ ವಯಂ ಗೋಭಿಃ ಪಶುಭಿರಶ್ವೇಭಿರಶ್ವೈಶ್ಚ ಸಹಿತಾ ಅಜರಾಸೋ ಜರಾರಹಿತಾಃ ಸ್ಯಾಮ । ಭವೇಮ । ವಿನಾಶರಹಿತಾ ಇತ್ಯರ್ಥಃ । ಪಿತೇವ ಪುತ್ರಾನ್ ಯಥಾ ಪಿತಾ ಪುತ್ರಾನ್ರಕ್ಷಕತ್ವೇನ ಸೇವತೇ ತಥಾ ತ್ವಮಪಿ ನೋಽಸ್ಮಾನ್ಪ್ರತಿ ಜುಷಸ್ವ । ಸೇವಸ್ವ ॥

### ಪ್ರತಿಪದಾರ್ಥ

**ವಾಸ್ತೋಷ್ಪತೇ**—ಎಲೈ ವಾಸ್ತೋಷ್ಪತಿದೇವನೇ, । **ನಃ**—ನಮಗೆ । **ಪ್ರತರಣಃ**—ವೃದ್ಧಿಕಾರಕನಾಗಿಯೂ । **ಗಯಸ್ಫಾನಃ**—ನಮ್ಮ ಗೃಹದ ವೃದ್ಧಿಕಾರಕನಾಗಿಯೂ । **ಏಧಿ**—ಆಗು. । **ಇಂದೋ**—ಆಹ್ಲಾದಕರನಾದ ಎಲೈ ದೇವನೇ, । **ತೇ**—ನಿನ್ನೊಡನೆ । **ಸಖ್ಯೇ**—ಮಿತ್ರತ್ವವಿರಲಾಗಿ । (**ವಯಂ**—ನಾವು) । **ಗೋಭಿಃ**—ಗೋವುಗಳಿಂದಲೂ । **ಅಶ್ವೇಭಿಃ**—ಅಶ್ವಗಳಿಂದಲೂ ಕೂಡಿ । **ಅಜರಾಸಃ**—ಕ್ಷಯರಹಿತರಾಗಿ । **ಸ್ಯಾಮ**—ಬದುಕು

ವಂತಾಗಲಿ | **ಪಿತಾ**—ತಂದೆಯು | **ಪುತ್ರಾನ್ ಇವ**—ಮಕ್ಕಳನ್ನು ಆದರಿಸಿ ಕಾಪಾಡುವಂತೆ | **ತ್ವಂ**—ನೀನು | **ನಃ**—ನಮ್ಮನ್ನು | **ಪ್ರತಿ ಜುಷಸ್ವ**—ಸಲಹು

ಭಾವಾರ್ಥ

ಎಲೈ ವಾಸ್ತೋಷ್ಪತಿದೇವನೇ, ನಮಗೆ ವೃದ್ಧಿಕಾರಕನಾಗಿಯೂ, ನಮ್ಮ ಗೃಹದ ವೃದ್ಧಿಕಾರಕನಾಗಿಯೂ ಆಗು. ದು ಆಹ್ಲಾದಕಾರಕನಾದ ಎಲೈ ದೇವನೇ, ನಿನ್ನೊಡನೆ ಮಿತ್ರತ್ವವಿರಲಾಗಿ ನಾವು ಗೋವುಗಳಿಂದಲೂ, ಅಶ್ವಗಳಿಂದಲೂ ಕೂಡಿ, ಕ್ಷಯರಹಿತರಾಗಿ ಇರುವಂತಾಗಲಿ ತಂದೆಯು ಮಕ್ಕಳನ್ನು ಆದರಿಸಿ ಕಾಪಾಡುವಂತೆ ನೀನು ನಮ್ಮನ್ನು ಆದರದಿಂದ ಸಲಹು

English Translation

Protector of the dwelling, be our preserver and the augmenter of our wealth possessed of cattle and horses, Indra, may we, through your friendship, be exempt from decay be favourable to us like a father to his sons.

ಸಂಹಿತಾಪಾಠಃ

ವಾಸ್ತೋಷ್ಪತೇ ಶಗ್ಮಯಾ ಸಂಸದಾ ತೇ ಸಕ್ಷೀಮಹಿ ರಣ್ವಯಾ ಗಾತುಮತ್ಯಾ ।
ಪಾಹಿ ಕ್ಷೇಮ ಉತ ಯೋಗೇ ವರಂ ನೋ ಯೂಯಂ ಪಾತ ಸ್ವಸ್ತಿಭಿಃ
ಸದಾ ನಃ ॥ ೩ ॥

ಪದಪಾಠಃ

ವಾಸ್ತೋಃ । ಪತೇ । ಶಗ್ಮಯಾ । ಸಂऽಸದಾ । ತೇ । ಸಕ್ಷೀಮಹಿ । ರಣ್ವಯಾ । ಗಾತುऽಮತ್ಯಾ ।
ಪಾಹಿ । ಕ್ಷೇಮೇ । ಉತ । ಯೋಗೇ । ವರಂ । ನಃ । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥

ಸಾಯಣಭಾಷ್ಯಂ

**ಹೇ ವಾಸ್ತೋಷ್ಪತೇ ದೇವ ಶಗ್ಮಯಾ ಸುಖಕರ್ಯಾ ರಣ್ವಯಾ ರಮಣೀಯಯಾ ಗಾತುಮತ್ಯಾ ಧನವತ್ಯಾ ತೇ ತ್ವಯಾ ದೇಯಯಾ ಸಂಸದಾ ಸ್ಥಾನೇನ ಸಕ್ಷೀಮಹಿ । ವಯಂ ಸಂಗಚ್ಛೇಮಹಿ । ತ್ವಮಪಿ ಕ್ಷೇಮೇ ಪ್ರಾಪ್ತಸ್ಯ ರಕ್ಷಣ ಉತಾಪಿ ಚ ಯೋಗೇऽಪ್ರಾಪ್ತಸ್ಯ ಪ್ರಾಪಣೇ ವರಂ ವರಣೀಯಂ ನೋऽಸ್ಮದೀಯಂ ಧನಂ ಪಾಹಿ । ರಕ್ಷ । ಹೇ ವಾಸ್ತೋಷ್ಪತೇ ಯೂಯಂ ತ್ವಂ ನೋऽಸ್ಮಾನ್ ಸರ್ವದಾ ಕಲ್ಯಾಣೈಃ ಪಾತ । ಪಾಹಿ ॥**

ಪ್ರತಿಪದಾರ್ಥ

**ವಾಸ್ತೋಷ್ಪತೇ**—ಎಲೈ ವಾಸ್ತೋಷ್ಪತಿದೇವನೇ, | **ಶಗ್ಮಯಾ** —ಸುಖವನ್ನುಂಟುಮಾಡತಕ್ಕದ್ದೂ, | **ರಣ್ವಯಾ**—ರಮಣೀಯವಾದುದೂ | **ಗಾತುಮತ್ಯಾ**—ಧನಯುಕ್ತವಾದುದೂ | **ತೇ**—ನಿನ್ನಿಂದ ದತ್ತವಾದುದೂ ಆದ | **ಸಂಸದಾ**—ಗೃಹದೊಡನೆ | **ಸಕ್ಷೀಮಹಿ**—ನಾವು ಸೇರಿಕೊಳ್ಳುವಂತಾಗಲಿ. | **ಉತ**—ಮತ್ತು | **ಕ್ಷೇಮೇ**—

ನಮ್ಮ ರಕ್ಷಣೆಯಿಂದಲೂ | **ಯೋಗೇ**—ನಮಗೆ ಅಪೇಕ್ಷಿತವಾದುದನ್ನು ಹೊಂದಿಸುವುದರಿಂದಲೂ | **ವರಂ**—ಶ್ರೇಷ್ಠವಾದ | **ನಃ**—ನಮ್ಮ ಧನವನ್ನು | **ಪಾಹಿ**—ರಕ್ಷಿಸು | (ಎಲೈ ವಾಸ್ತೋಷ್ಪತಿ ಮೊದಲಾದ ದೇವತೆಗಳಿರಾ) **ಯೂಯಂ**—ನೀವು | **ನಃ**—ನಮ್ಮನ್ನು | **ಸದಾ**—ಯಾವಾಗಲೂ | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ

ಭಾವಾರ್ಥ

ಎಲೈ ವಾಸ್ತೋಷ್ಪತಿದೇವನೇ, ಸುಖವನ್ನು ಕೊಡತಕ್ಕದ್ದೂ, ರಮಣೀಯವಾದದ್ದೂ, [illegible] ಆದ ನಿನ್ನ [illegible]ನೆ ನಾವು ಸೇರಿಕೊಳ್ಳುವಂತಾಗಲಿ. ನಮ್ಮ ರಕ್ಷಣೆಯಿಂದಲೂ ನಮಗೆ ಅಪೇಕ್ಷಿತ[illegible]ವುದರಿಂದಲೂ ನಮ್ಮ ಶ್ರೇಷ್ಠವಾದ ಧನವನ್ನು ರಕ್ಷಿಸು. ಎಲೈ ವಾಸ್ತೋಷ್ಪತಿ ಮೊದಲಾದ ದೇವತೆಗಳಿರಾ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

Protector of the dwelling, may we be possessed of a comfortable, delightful, opulent abode, bestowed by you: protect our wealth, whether in possession or expectation: and do you, (gods) ever cherish us with blessings.

---

## ಐವತ್ತೈದನೆಯ ಸೂಕ್ತವು

ಸಾಯಣಭಾಷ್ಯಂ

**ಅಮೀವಹೇತ್ಯಷ್ಟರ್ಚಂ ದ್ವಾವಿಂಶಂ ಸೂಕ್ತಂ | ಆದ್ಯಾ ಗಾಯತ್ರೀ ಪಂಚಮ್ಯಾದ್ಯಾಸ್ತಿಸ್ರೋಽನುಷ್ಟುಭೋ ದ್ವಿತೀಯಾದ್ಯಾಸ್ತಿಸ್ರ ಉಪರಿಷ್ಟಾದ್ಬೃಹತ್ಯಃ | ತ್ರ್ಯಷ್ಟಕಾ ಚತುರ್ಥಪಾದಾ ದಶಕೇ ಬೃಹತೀತಿ ತಲ್ಲಕ್ಷಣಯೋಗಾತ್ | ಆದ್ಯಾಯಾ ವಾಸ್ತೋಷ್ಪತಿರ್ದೇವತಾ ಶಿಷ್ಟಾ ಐಂದ್ರ್ಯಃ | ತಥಾ ಚಾನುಕ್ರಾಂತಂ | ಅಮೀವಹಾಷ್ಟ ವಾಸ್ತೋಷ್ಪತ್ಯಾದ್ಯಾ ಗಾಯತ್ರೀ ಶೇಷಾ ಉಪರಿಷ್ಟಾದ್ಬೃಹತ್ಯಾದ್ಯಾಸ್ತಿಸ್ರೋಽನುಷ್ಟುಭಃ ಪ್ರಸ್ವಾಪಿನ್ಯ ಉಪನಿಷದಿತಿ || ಗತೋ ವಿನಿಯೋಗಃ || ಬೃಹದ್ದೇವತಾಯಾಂ ಯದುಕ್ತಂ ತದಿಹ ಲಿಖ್ಯತೇ | ವರುಣಸ್ಯ ಗೃಹಾನ್ರಾತ್ರೌ ವಸಿಷ್ಠಃ ಸ್ವಪ್ನಮಾಚರನ್ | ಪ್ರವಿವೇಶಾಥ ತಂ ತತ್ರ ಶ್ವಾ ನದನ್ನಭ್ಯವರ್ತತ || ಕ್ರಂದಂತಂ ಸಾರಮೇಯಂ ಸ ಧಾವಂತಂ ದಷ್ಟುಮುದ್ಯತಂ | ಯದರ್ಜುನೇತಿ ಚ ದ್ವಾಭ್ಯಾಂ ಸಾಂತ್ವಯಿತ್ವಾ ಹ್ಯಸೂಷುಪತ್ | ಏವಂ ಪ್ರಸ್ವಾಪಯಾಮಾಸ ಜನಮನ್ಯಂ ಚ ವಾರುಣಂ | ಬೃ[illegible] | ಇತಿ || ಅತ್ರ ಕೇಚಿತ್ಪುನರೇವಮಾಹುಃ | ಅಸಾಂ ಪ್ರಸ್ವಾಪಿನಿತ್ವಂ ತು ಕಥಾಸು ಪರಿಕಲ್ಪ್ಯತೇ | ವಸಿಷ್ಠಸ್ತ್ರ್ಯುಷಿತೋಽನ್ನಾರ್ಥೀ ತ್ರಿರಾತ್ರಾಲಬ್ಧಭೋಜನಃ | ಚತುರ್ಥರಾತ್ರೌ ಚೌರ್ಯಾರ್ಥಂ ವಾರುಣಂ ಗೃಹಮೇತ್ಯಸು || ಕೋಷ್ಠಾಗಾರೇ ಪ್ರವೇಶಾಯ ಪಾಲಕಶ್ವಾದಿಸುಪ್ತಯೇ | ಯದರ್ಜುನೇತಿ ಸಪ್ತರ್ಚಂ ದದರ್ಶ ಚ ಜಜಾಪ ಚೇತಿ ||**

**ಅನುವಾದವು—** **ಅಮೀವಹಾ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಇಪ್ಪತ್ತೆರಡನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತದ ಮೊದಲನೆಯ ಋಕ್ಕು ಗಾಯತ್ರೀಛಂದಸ್ಕವು. ಐದ

ನೆಯ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳು ಅನುಷ್ಟುಪ್‌ಛಂದಸ್ಕವು; ಎರಡನೆಯ ಋಕ್ಕಿನಿಂದ ಮುಂದಿನ ಮೂರು ಋಕ್ಕುಗಳು ಉಪರಿಷ್ಟಾದ್ಬೃಹತೀ ಎಂಬ ಛಂದಸ್ಸಿನವು. **ತ್ರ್ಯಷ್ಟಕಾ ಚತುರ್ಥದ್ವಾದಶಕೀ ಬೃಹತೀ** ಎಂದರೆ ಒಂದು ಛಂದಸ್ಸಿನಲ್ಲಿ ನಾಲ್ಕು ಪಾದಗಳಿದ್ದು ಮೊದಲಿನ ಮೂರು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ನಾಲ್ಕ ನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ ಇದ್ದರೆ ಅದು ಉಪರಿಷ್ಟಾದ್ಬೃಹತೀ ಛಂದಸ್ಸೆನಿಸುವುದು. ಈ ಸೂಕ್ತದ ಮೊದಲನೆಯ ಋಕ್ಕಿಗೆ ವಾಸ್ತೋಷ್ಪತಿಯು ದೇವತೆಯು; ಉಳಿದ ಋಕ್ಕುಗಳಿಗೆ ಇಂದ್ರನು ದೇವತೆಯು. ಅನುಕ್ರಮ ಣಿಕೆಯಲ್ಲಿ- **ಅಮೀವಹಾಷ್ಟೌ ವಾಸ್ತೋಷ್ಪತ್ಯಾದ್ಯಾ ಗಾಯತ್ರೀ ಶೇಷಾಸ್ತ್ರ್ಯುಪರಿಷ್ಟಾದ್ಬೃಹತ್ಯಾದಯೋಽ- ನುಷ್ಟುಭಃ ಪ್ರಸ್ವಾಪಿನ್ಯ ಉಪನಿಷತ್** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಈ ಸೂಕ್ತದ ವಿಷಯದಲ್ಲಿ ಶೌನಕೋಕ್ತವಾದ ಬೃಹದ್ದೇವತಾ ಎಂಬ ಗ್ರಂಥದಲ್ಲಿ ಈರೀತಿ ವಿವರಣೆ ಇದೆ—

**ವರುಣಸ್ಯ ಗೃಹಾನ್ ರಾತ್ರೌ ವಸಿಷ್ಠಃ ಸ್ವಪ್ನಮಾಚರನ್ ।**
**ಪ್ರವಿವೇಶಾಥ ತಂ ತತ್ರ ಶ್ವಾ ನದನ್ನಭ್ಯವರ್ತತ ॥**
**ಕ್ರಂದಂತಂ ಸಾರಮೇಯಂ ಸ ಧಾವಂತಂ ದಷ್ಟುಮುದ್ಯತಂ ।**
**ಯದರ್ಜುನೇತಿ ಚ ದ್ವಾಭ್ಯಾಂ ಸಾಂತ್ವಯಿತ್ವಾ ಹ್ಯಸೂಷುಪತ್ ।**
**ಏವಂ ಪ್ರಸ್ವಾಪಯಾಮಾಸ ಜನಮನ್ಯಂ ಚ ವಾರುಣಂ ॥**

( ಬೃ ದೇ ೬-೧೧,೧೨,೧೩ )

ಒಂದು ದಿವಸ ರಾತ್ರಿ ವಸಿಷ್ಠ ಋಷಿಯು ಸ್ವಪ್ನದಲ್ಲಿಯೇ (ನಿದ್ರೆಯಲ್ಲಿಯೇ) ಸಂಚರಿಸುತ್ತಾ ತನ್ನ ಪಿತೃವಾದ ವರುಣನ ಮನೆಗೆ ಹೋದನು. ಆಗ ಅಲ್ಲಿ ಕಾವಲಿದ್ದ ಒಂದು ನಾಯಿಯು ಬೊಗಳುತ್ತಾ ಈ ವಸಿಷ್ಠನನ್ನು ಅಟ್ಟಿಸಿಕೊಂಡು ಕಚ್ಚುವುದಕ್ಕೆ ಬಂದಿತು ತನ್ನನ್ನು ಕಚ್ಚಲು ಬರುತ್ತಿರುವ ಈ ನಾಯಿಯನ್ನು ವಸಿಷ್ಠನು ಕಂಡು ಯದರ್ಜುನ ಎಂದು ಮೊದಲಾಗುವ ಈ ಸೂಕ್ತದ ಎರಡು ಋಕ್ಕುಗಳಿಂದ (೨ ೩ ಋಕ್ಕುಗಳು) ಸಮಾಧಾನಪಡಿಸಿ ನಿದ್ರಿಸುವಂತೆ ಮಾಡಿದನು ಎಂದಿದೆ ಇನ್ನು ಕೆಲನರು ಈ ಕಥೆಯನ್ನು ಬೇರೆ ರೀತಿಯಲ್ಲಿ ಹೇಳುವರು —

**ಆಸಾಂ ಪ್ರಸ್ವಾಪಿನಿತ್ವಂ ತು ಕಥಾಸು ಪರಿಕಲ್ಪ್ಯತೇ ।**
**ವಸಿಷ್ಠಸ್ತೃಷಿತೋಽನ್ನಾರ್ಥೀ ತ್ರಿರಾತ್ರಾಲಬ್ಧಭೋಜನಃ ।**
**ಚತುರ್ಥರಾತ್ರೌ ಚೌರ್ಯಾರ್ಥಂ ವಾರುಣಂ ಗೃಹಮೇತ್ಯ ತು ।**
**ಕೋಷ್ಠಾಗಾರೇ ಪ್ರವೇಶಾಯ ಪಾಲಕಶ್ವಾದಿಸುಪ್ತಯೇ ।**
**ಯದರ್ಜುನೇತಿ ಸಪ್ತರ್ಚಂ ದದರ್ಶ ಚ ಜಜಾಪ ಚ ॥**

(ಅನು. ಭಾ. ೭-೫೫)

**ಒಂದಾನೊಂದು ಕಾಲದಲ್ಲಿ ವಸಿಷ್ಠನು ಮೂರು ದಿನಗಳವರೆಗೂ ಯಾವ ಆಹಾರವೂ ದೊರೆಯದೆ ಉಪವಾಸದಿಂದಲೂ, ಬಾಯಾರಿಕೆಯಿಂದಲೂ ಬಳಲಿ ಬೆಂಡಾಗಿ ನಾಲ್ಕನೆಯ ದಿವಸದ ರಾತ್ರಿ ತನ್ನ ತಂದೆಯಾದ ವರುಣನ ಮನೆಗಾದರೂ ಹೋಗಿ ಕದ್ದಾದರೂ ಅನ್ನವನ್ನು ತಿಂದು ಬರಬೇಕೆಂದು ನಿಶ್ಚಯಿಸಿ ವರುಣನ ಗೃಹವನ್ನು ಪ್ರವೇಶಿಸಿದನು. ಆಗ ಕೊಟ್ಟಿಗೆಯ ಸಮೀಪದಲ್ಲಿ ಮಲಗಿದ್ದ ನಾಯಿಯು ಇವನನ್ನು ಕಚ್ಚುವುದಕ್ಕೆ ಬರಲು ಆಗ ವಸಿಷ್ಠನು ಹೆದರಿ ಯದ- ರ್ಜುನ ಸಾರಮೇಯ ಎಂದು ಮೊದಲಾಗುವ ಈ ಸೂಕ್ತದ ಏಳು ಋಕ್ಕುಗಳಿಂದ (೨-೮ ಋಕ್ಕುಗಳಿಂದ) ಆ ನಾಯಿ ಯನ್ನು ಸಮಾಧಾನಪಡಿಸಿ ನಿದ್ರಿಸುವಂತೆ ಮಾಡಿ ಆ ಋಕ್ಕುಗಳನ್ನು ಪಠಿಸಿ ಅವುಗಳಿಗೆ ಮಂತ್ರದ್ರಷ್ಟೃವಾದ ಋಷಿ ಯಾದನು ಎಂದು ಮಹಾಭಾರತದ ಅನುಶಾಸನಪರ್ವದಲ್ಲಿ ಹೇಳಿದೆ.**

## ಸೂಕ್ತ—೫೫

ಮಂಡಲ—೭ ‖ ಅನುವಾಕ—೩ ‖ ಸೂಕ್ತ—೫೫ ‖
ಅಷ್ಟಕ—೫ ‖ ಅಧ್ಯಾಯ—೪ ‖ ವರ್ಗ—೨೨ ‖
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ‖
ಋಷಿಃ—ವಸಿಷ್ಠಃ ‖
ದೇವತಾ—೧ ವಾಸ್ತೋಷ್ಪತಿಃ । ೨-೮ ಇಂದ್ರಃ ‖
ಛಂದಃ—೧ ಗಾಯತ್ರೀ । ೨-೪ ಉಪರಿಷ್ಟಾದ್ಬೃಹತೀ ।
೫-೮, ಅನುಷ್ಟುಪ್ ‖

ಸಂಹಿತಾಪಾಠಃ

ಅಮೀವಹಾ ವಾಸ್ತೋಷ್ಪತೇ ವಿಶ್ವಾ ರೂಪಾಣ್ಯಾವಿಶನ್ ।
ಸಖಾ ಸುಶೇವ ಏಧಿ ನಃ ‖ ೧ ‖

ಪದಪಾಠಃ

ಅಮೀವಽಹಾ । ವಾಸ್ತೋಃ । ಪತೇ । ವಿಶ್ವಾ । ರೂಪಾಣಿ । ಆಽವಿಶನ್ ।
ಸಖಾ । ಸುಽಶೇವಃ । ಏಧಿ । ನಃ ‖ ೧ ‖

ಸಾಯಣಭಾಷ್ಯ

ಹೇ ವಾಸ್ತೋಷ್ಪತೇ ಗೃಹಸ್ಯ ಪಾಲಕೈತತ್ಸಂಜ್ಞಕ ದೇವ ಅಮೀವಹಾಮೀವಾನಾಂ ರೋಗಾಣಾಂ ನಾಶಕಸ್ತ್ವಂ ವಿಶ್ವಾ ವಿಶ್ವಾನಿ ಬಹೂನಿ ರೂಪಾಣ್ಯಾವಿಶನ್ ಪ್ರವಿಶನ್ । ಯದ್ಯದ್ರೂಪಂ ಕಾಮಯಂತೇ ತತ್ತದ್ದೇವಾ ವಿಶಂತಿ । ನಿ ೧೦-೧೭ । ಇತಿ ಯಾಸ್ಕಃ । ನೋಽಸ್ಮಾಕಂ ಸಖಾ ಮಿತ್ರಭೂತಃ **ಸುಶೇವಃ ಸುಷ್ಠು ಸುಖಕರ ಏಧಿ । ಭವ** ‖

ಪ್ರತಿಪದಾರ್ಥ

**ವಾಸ್ತೋಷ್ಪತೇ**—ಎಲೈ ವಾಸ್ತೋಷ್ಪತಿದೇವನೇ, । **ಅಮೀವಹಾ**—ರೋಗನಾಶಕನಾದ ನೀನು । **ವಿಶ್ವಾ**—ಅನೇಕವಿಧವಾದ । **ರೂಪಾಣಿ**—ಸ್ವರೂಪಗಳನ್ನು । **ಆವಿಶನ್**—ಹೊಂದುತ್ತ । **ನಃ**—ನಮಗೆ । **ಸಖಾ**—ಮಿತ್ರನಾಗಿಯೂ । **ಸುಶೇವಃ**—ಸುಖಕಾರಕನಾಗಿಯೂ । **ಏಧಿ**—ಆಗಿರು.

ಭಾವಾರ್ಥ

ಎಲೈ ವಾಸ್ತೋಷ್ಪತಿದೇವನೇ, ರೋಗನಾಶಕನಾದ ನೀನು ಅನೇಕವಿಧವಾದ ಸ್ವರೂಪಗಳನ್ನು ಹೊಂದುತ್ತ ನಮಗೆ ಮಿತ್ರನಾಗಿಯೂ, ಸುಖಕಾರಕನಾಗಿಯೂ ಆಗಿರು.

English Translation

Protector of the dwelling, remover of disease, assuming all (kinds of) forms, be to us a friend the granter of happiness.

ವಿಶೇಷವಿಷಯಗಳು

ವಾಸ್ತೋಷ್ಪತಿಶಬ್ದದ ನಿರ್ವಚನವನ್ನು ವಿವರಿಸುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ

**ವಾಸ್ತೋಷ್ಪತಿಃ । ವಾಸ್ತುರ್ವಸತೇರ್ನಿವಾಸಕರ್ಮಣಸ್ತಸ್ಯ ಪಾತಾ ವಾ ಪಾಲಯಿತಾ ವಾ ॥ ತಸ್ಯೈಷಾ ಭವತಿ ॥ ಅಮೀವಹಾ ವಾಸ್ತೋಷ್ಪತೇ ವಿಶ್ವಾರೂಪಾಣ್ಯಾವಿಶನ್ । ಸಖಾ ಸುಶೇವ ಏಧಿನಃ ॥**

ಅಭ್ಯಮನಹಾ ವಾಸ್ತೋಷ್ಪತೇ **ಸರ್ವಾಣಿ ರೂಪಾಣ್ಯಾವಿಶನ್ ಸಖಾ ನಃ ಸುಸುಖೋ ಭವ।** ಶೇವ ಇತಿ **ಸುಖನಾಮ ಶಿಷ್ಯತೇರ್ವಕಾರೋ ನಾಮಕರಣೋಽನ್ತಸ್ಥಾನ್ತರೋಪಲಿಂಗೀ ।** ವಿಭಾಷಿತಗುಣಃ **ಶಿವಮಿತ್ಯಪ್ಯಸ್ಯ ಭವತಿ । ಯದ್ರೂಪಂ ಕಾಮಯತೇ ತತ್ತದ್ದೇವತಾ ಭವತಿ। ರೂಪಂ ರೂಪಂ ಮಘವಾ ಬೋಭವೀತಿ ಇತ್ಯಪಿ ನಿಗಮೋ ಭವತಿ ॥**

(ನಿ ೧೦-೧೭)

**ವಾಸ್ತು**ಶಬ್ದವು **ವಸ್**-ವಾಸಿಸು ಎಂಬ ಧಾತುವಿನಿಂದ ನಿಷ್ಪನ್ನವಾಗಿ ಈ ಶಬ್ದಕ್ಕೆ ವಾಸಮಾಡುವ ಗೃಹವೆಂದರ್ಥವಿರುವುದು **ಪತಿಃ** ಎಂದರೆ ಸ್ವಾಮಿಯು ಅಥವಾ ರಕ್ಷಕನು ಆದ್ದರಿಂದ **ವಾಸ್ತೋಷ್ಪತಿ** ಯೆಂದರೆ ವಾಸಮಾಡುವ ಗೃಹಕ್ಕೆ ಸ್ವಾಮಿಯು ಅಥವಾ ಅದರ ಸಂರಕ್ಷಕನು ಎಂದರ್ಥವು. ಈ ಶಬ್ದದ ಪ್ರಯೋಗವನ್ನು ವಿವರಿಸುವುದಕ್ಕಾಗಿ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅರ್ಥವಿವರಣೆಮಾಡಿರುವರು

ಎಲೈ ಗೃಹಾಧಿಪತಿಯೇ, ನೀನು ರೋಗಗಳ ನಾಶಕನು ನೀನು ನಾನಾರೂಪಗಳನ್ನು ಧರಿಸಲು ಶಕ್ತನಾಗಿದ್ದೀಯೆ. ನೀನು ನಮಗೆ ಯಾವಾಗಲೂ ಸುಖಕರನಾದ ಎಂದರೆ ಹಿತಕಾರಿಯಾದ ಸ್ನೇಹಿತನಾಗಿರು ಎಂದು ಈ ಮಂತ್ರದ ಅರ್ಥವು ಶೇವಃ ಎಂಬ ಶಬ್ದಕ್ಕೆ ಸುಖವೆಂದರ್ಥವು. ಈ ಶಬ್ದವು **ಶಿಷ್** ಎಂಬ ಧಾತುವಿಗೆ **ವ** ಎಂಬ ಪ್ರತ್ಯಯವು ಸೇರಿ **ಶಿವ** ಎಂದಾಗಿ ಅನಂತರ ಇಕಾರಕ್ಕೆ ಗುಣ ಬಂದು **ಶೇ** ಎಂದಾಗಿರುವುದು. ಎಂದರೆ **ಶೇವ** ಎಂಬ ರೂಪವು ಸಿದ್ಧಿಸುವುದು **ಶಿವ** ಎಂಬ ಶಬ್ದವೂ ಇದೇ ಧಾತುವಿನಿಂದ ನಿಷ್ಪನ್ನವಾಗಿದೆ

ಈ ವಾಸ್ತೋಷ್ಪತಿಯಾದ ದೇವನು ಯಾರು ಎಂದರೆ ಈ ದೇವನಿಗೆ ರೋಗರುಜಿನಗಳನ್ನು ಗುಣಪಡಿಸುವ ಶಕ್ತಿಯಿರುವುದರಿಂದ ವಾಸ್ತೋಷ್ಪತಿಯೆಂದರೆ ರುದ್ರನೆಂದು ಕೆಲವರು ಹೇಳುವರು ದೇವತೆಗಳು ನಾನಾರೂಪವನ್ನು ಧರಿಸಬೇಕೆಂದು ಇಷ್ಟಬಂದರೆ ಆಯಾ ರೂಪಗಳನ್ನು ಧರಿಸಬಲ್ಲರು ಈ ವಿಷಯದಲ್ಲಿ **ರೂಪಂರೂಪಂ ಮಘವಾ ಬೋಭವೀತಿ** ಎಂಬ ಶ್ರುತಿವಾಕ್ಯವೇ ಉದಾಹರಣೆಯಾಗಿರುವುದು

ಸಂಹಿತಾಪಾಠಃ

ಯದರ್ಜುನ ಸಾರಮೇಯ ದತಃ ಪಿಶಂಗ ಯಚ್ಛಸೇ ।
ವೀವ ಭ್ರಾಜಂತ ಋಷ್ಟಯ ಉಪ ಸ್ರಕ್ವೇಷು ಬಪ್ಸತೋ ನಿ ಷು ಸ್ವಪ ॥

ಪದಪಾಠಃ

**ಯತ್ । ಅರ್ಜುನ । ಸಾರಮೇಯ । ದತಃ । ಪಿಶಂಗ । ಯಚ್ಛಸೇ ।**

**ವಿಽಇವ । ಭ್ರಾಜಂತೇ । ಋಷ್ಟಯಃ । ಉಪ । ಸ್ರಕ್ವೇಷು । ಬಪ್ಸತಃ । ನಿ । ಸು । ಸ್ವಪ ॥ ೨ ॥**

ಪ್ರಕೃತ ಋಕ್ಕಿನಲ್ಲಿ ವಿವರಿಸಿರುವ ನಾಯಿಯ ವಿಷಯದಲ್ಲಿ ಬೃಹದ್ದೇವತೋಕ್ತವಾದ ಒಂದು ಪೂರ್ವೇತಿಹಾಸವಿದೆ.—

ವರುಣಸ್ಯ ಗೃಹಾನ್ರಾತ್ರೌ ವಸಿಷ್ಠಃ ಸ್ವಪ್ನ ಆಚರತ್ ।
ಪ್ರವಿವೇಶಾಥ ತಂ ತತ್ರ ಶ್ವಾ ನದನ್ನಭ್ಯಧಾವತ ॥
ಕ್ರಂದಂತಂ ಸಾರಮೇಯಂ ಸ ಧಾವಂತಂ ದಷ್ಟುಮುದ್ಯತಂ ।
ಯದರ್ಜುನೇತಿ ಚ ದ್ವಾಭ್ಯಾಂ ಸಾಂತಯಿತ್ವಾ ವ್ಯಸುಷ್ವಪತ್ ।
ಸ ತಂ ಪ್ರಸ್ವಾಪಯೊಮಾಸ ಜನಮನ್ಯಂ ಚ ವಾರುಣಂ ॥

(ಬೃ. ದೇ. ೬-೧೩)

ಒಂದು ದಿವಸ ರಾತ್ರಿಕಾಲದಲ್ಲಿ ಸ್ವಪ್ನದಲ್ಲಿ ಎಂದರೆ ನಿದ್ರೆಯಲ್ಲಿಯೇ ಎಚ್ಚರವಿಲ್ಲದೆ ತಿರಗಾಡುತ್ತಾ ತನ್ನ ತಂದೆಯಾದ ವರುಣನ ಗೃಹಕ್ಕೆ ಪ್ರವೇಶಮಾಡಿದನು ಆ ವೇಳೆಯಲ್ಲಿ ಅಲ್ಲಿ ಮಲಗಿದ್ದ ಒಂದು ನಾಯಿಯು ಇವನನ್ನು ಕಚ್ಚುವುದಕ್ಕಾಗಿ ಬೊಗಳುತ್ತ ಅಟ್ಟಿಸಿಕೊಂಡು ಬಂದಿತು. ಅದನ್ನು ಸಮಾಧಾನಪಡಿಸುವುದಕ್ಕಾಗಿ ಪ್ರಕೃತ ಸೂಕ್ತದ ಯದರ್ಜುನ ಎಂದು ಮೊದಲಾಗುವ ಈ ಸೂಕ್ತದ ೨-೮ ಋಕ್ಕುಗಳಿಂದ ಆ ನಾಯಿಯನ್ನು ಸಮಾಧಾನಗೊಳಿಸಿ ಅದನ್ನೂ ಅಲ್ಲಿ ಮಲಗಿದ್ದ ವರುಣನ ಕಡೆಯ ಜನರನ್ನೂ ನಿದ್ರಿಸುವಂತೆ ಮಾಡಿದನು ಎಂಬ ಕಥೆ ಇದೆ. ಈ ನಾಯಿಯನ್ನೂ ಭೃತ್ಯಾದಿ ಜನರನ್ನೂ ಸಮಾಧಾನಪಡಿಸಿ ನಿದ್ರಿಸುವಂತೆಮಾಡಿದ ವಿಷಯವೇ ಈ ಸೂಕ್ತದಲ್ಲಿ ವರ್ಣಿತವಾಗಿದೆ

ಸಂಹಿತಾಪಾಠಃ

ಸ್ತೇನಂ ರಾಯ ಸಾರಮೇಯ ತಸ್ಕರಂ ವಾ ಪುನಸ್ಸರ ।
ಸ್ತೋತೄನಿಂದ್ರಸ್ಯ ರಾಯಸಿ ಕಿಮಸ್ಮಾನ್ದುಚ್ಛುನಾಯಸೇ ನಿ ಷು ಸ್ವಪ ॥ ೩ ॥

ಪದಪಾಠಃ

ಸ್ತೇನಂ । ರಾಯ । ಸಾರಮೇಯ । ತಸ್ಕರಂ । ವಾ । ಪುನಃऽಸರ ।
ಸ್ತೋತೄನ್ । ಇಂದ್ರಸ್ಯ । ರಾಯಸಿ । ಕಿಂ । ಅಸ್ಮಾನ್ । ದುಚ್ಛುನಾऽಯಸೇ । ನಿ । ಸು । ಸ್ವಪ ॥ ೩ ॥

ಸಾಯಣಭಾಷ್ಯಂ

ಹೇ ಪುನಃಸರ । ಗತಮೇವ ದೇಶಂ ಪುನಃ ಸರತೀತಿ ಪುನಃಸರಃ । ತಾದೃಗ್ಭೂತ ಹೇ ಸಾರಮೇಯ ತ್ವಂ ಸ್ತೇನಂ । ಪ್ರಚ್ಛನ್ನಧನಾಪಹಾರೀ ಸ್ತೇನಃ । ತಂ ತಸ್ಕರಂ । ಪ್ರತ್ಯಕ್ಷಧನಾಪಹಾರೀ ತಸ್ಕರಃ ತಂ ವಾ ರಾಯ । ಗಚ್ಛ । ಇಂದ್ರಸ್ಯ ಸ್ತೋತೄನಸ್ಮಾನ್ ಕಿಂ ರಾಯಸಿ । ಗಚ್ಛಸಿ । ಅಸ್ಮಾನ್ದುಚ್ಛುನಾಯಸೇ । ಕಿಂ ಬಾಧಸೇ । ನಿ ಷು ಸ್ವಪ । ಅತ್ಯಂತಂ ನಿದ್ರಾಂ ಕುರು ॥

ಪ್ರತಿಪದಾರ್ಥ

ಪುನಃಸರ—ಪುನಃಪುನಃ ಅಟ್ಟಿಸಿಕೊಂಡು ಬರತಕ್ಕ । ಸಾರಮೇಯ—ಎಲೈ ಸಾರಮೇಯನೇ । ಸ್ತೇನಂ—ಕದಿಯತಕ್ಕ । ತಸ್ಕರಂ ವಾ—ಕಳ್ಳನನ್ನು ಮಾತ್ರ । ರಾಯ—ಅಟ್ಟಿಸಿಕೊಂಡು ಹೋಗು. । ಇಂದ್ರಸ್ಯ—

ಇಂದ್ರನ | **ಸ್ತೋತೃನ್**—ಸ್ತುತಿಕರ್ತರಾದ ನಮ್ಮನ್ನು | **ಕಿಂ ರಾಯಸಿ**—ಯಾತಕ್ಕೆ ಅಟ್ಟಿಸಿಕೊಂಡು ಬರುವೆ ? | **ಅಸ್ಮಾನ್**—ನಮ್ಮನ್ನು | **ದುಚ್ಛುನಾಯಸೇ**—ಯಾತಕ್ಕಾಗಿ ಬಾಧಿಸುವೆ? | **ನಿ ಸು ಸ್ವಪ**—ಸದ್ದಿಲ್ಲದೆ ನಿದ್ರೆಮಾಡು

ಭಾವಾರ್ಥ

ಪುನಃಪುನಃ ಅಟ್ಟಿಸಿಕೊಂಡು ಬರುವ ಎಲೈ ಸಾರಮೇಯವೇ, ಧನಾಪಹಾರವನ್ನು ಮಾಡುವ ಕಳ್ಳನನ್ನು ಮಾತ್ರ ನೀನು ಅಟ್ಟಿಸಿಕೊಂಡು ಹೋಗು. ಇಂದ್ರನ ಸ್ತುತಿಕರ್ತರಾದ ನಮ್ಮನ್ನು ಏತಕ್ಕೆ ಅಟ್ಟಿಸಿಕೊಂಡು ಬರುವೆ ? ಏತಕ್ಕಾಗಿ ನಮ್ಮನ್ನು ಹಿಂಸಿಸುವೆ ? ಸದ್ದಿಲ್ಲದೆ ನಿದ್ರೆಮಾಡು

English Translation

Offspring of Sarama, returning (to the charge), attack the pilferer or the thief why do you assail the worshippers of Indra ? why do you intimidate us ? go quietly to sleep

ಸಂಹಿತಾಪಾಠಃ

ತ್ವಂ ಸೂಕರಸ್ಯ ದರ್ದೃಹಿ ತವ ದರ್ದರ್ತು ಸೂಕರಃ |

ಸ್ತೋತೃನಿಂದ್ರಸ್ಯ ರಾಯಸಿ ಕಿಮಸ್ಮಾನ್ದುಚ್ಛುನಾಯಸೇ ನಿ ಷು ಸ್ವಪ || ೪ ||

ಪದಪಾಠಃ

ತ್ವಂ | ಸೂಕರಸ್ಯ | ದರ್ದೃಹಿ | ತವ | ದರ್ದರ್ತು | ಸೂಕರಃ |

ಸ್ತೋತೃನ್ | ಇಂದ್ರಸ್ಯ | ರಾಯಸಿ | ಕಿಂ | ಅಸ್ಮಾನ್ | ದುಚ್ಛುನಾಯಸೇ | ನಿ | ಸು | ಸ್ವಪ || ೪ ||

ಸಾಯಣಭಾಷ್ಯಂ

**ಹೇ ಸಾರಮೇಯ ತ್ವಂ ಸೂಕರಸ್ಯ ವರಾಹಸ್ಯ || ದ್ವಿತೀಯಾರ್ಥೇ ಷಷ್ಠೀ || ದರ್ದೃಹಿ | ವಿದಾರಯ | ಸೂಕರೋಽಪಿ ತವ ದರ್ದರ್ತು | ವಿದಾರಯತು | ಯುವಯೋರ್ನಿತ್ಯವೈರಿತ್ವಾತ್ | ಅಸ್ಮಾನ್ಮಾ ದಶೇತ್ಯರ್ಥಃ || ಸ್ತೋತೃನಿತ್ಯರ್ಧರ್ಚಃ ಪೂರ್ವಸ್ಯಾಮೃಚಿ ವ್ಯಾಖ್ಯಾತಃ ||**

ಪ್ರತಿಪದಾರ್ಥ

(ಎಲೈ ಸಾರಮೇಯವೇ) **ತ್ವಂ**—ನೀನು | **ಸೂಕರಸ್ಯ**—ಹಂದಿಯನ್ನು | **ದರ್ದೃಹಿ**—ಕಚ್ಚು | **ಸೂಕರಃ** ವರಾಹವು | **ತವ**—ನಿನ್ನನ್ನು | **ದರ್ದರ್ತು**—ಕಚ್ಚಲಿ | **ಇಂದ್ರಸ್ಯ**—ಇಂದ್ರನ | **ಸ್ತೋತೃನ್**—ಸ್ತುತಿಕರ್ತ ರಾದ ನಮ್ಮನ್ನು | **ಕಿಂ ರಾಯಸಿ**—ಏತಕ್ಕಾಗಿ ಅಟ್ಟಿಸಿಕೊಂಡು ಬರುವೆ ? | **ಅಸ್ಮಾನ್**—ನಮ್ಮನ್ನು | (**ಕಿಂ**) **ದುಚ್ಛುನಾಯಸೇ**—ಏತಕ್ಕೆ ಹಿಂಸಿಸುವೆ ? | **ನಿ ಸು ಸ್ವಪ**—ಸದ್ದಿಲ್ಲದೆ ನಿದ್ರೆಮಾಡು.

ಭಾವಾರ್ಥ

ಎಲೈ ಸಾರಮೇಯವೇ, ನೀನು ಹಂದಿಯನ್ನು ಕಚ್ಚು ಹಂದಿಯು ನಿನ್ನನ್ನು ಕಚ್ಚಲಿ. ಪರಸ್ಪರ ನಿಮ್ಮಲ್ಲಿ ಮಾತ್ರ ಕಲಹವಾಗಲಿ. ಇಂದ್ರನ ಸ್ತುತಿಕರ್ತರಾದ ನಮ್ಮನ್ನು ಏತಕ್ಕಾಗಿ ಅಟ್ಟಿಸಿಕೊಂಡು ಬರುವೆ? ನಮ್ಮನ್ನು ಏತಕ್ಕೆ ಹಿಂಸಿಸುವೆ ? ಸದ್ದಿಲ್ಲದೆ ನಿದ್ರೆಮಾಡು.

## English Translation

Do you rend the hog: let the hog rend you: why do you assail the worshippers of Indra? why do you intimidate us? go quietly to sleep.

ಸಂಹಿತಾಪಾಠಃ

ಸಸ್ತು ಮಾತಾ ಸಸ್ತು ಪಿತಾ ಸಸ್ತು ಶ್ವಾ ಸಸ್ತು ವಿಶ್ಪತಿಃ ।
ಸಸಂತು ಸರ್ವೇ ಜ್ಞಾತಯಃ ಸಸ್ತ್ವಯಮಭಿತೋ ಜನಃ ॥ ೫ ॥

ಪದಪಾಠಃ

ಸಸ್ತು । ಮಾತಾ । ಸಸ್ತು । ಪಿತಾ । ಸಸ್ತು । ಶ್ವಾ । ಸಸ್ತು । ವಿಶ್ಪತಿಃ ।
ಸಸಂತು । ಸರ್ವೇ । ಜ್ಞಾತಯಃ । ಸಸ್ತು । ಅಯಂ । ಅಭಿತಃ । ಜನಃ ॥ ೫ ॥

ಸಾಯಣಭಾಷ್ಯಂ

ಹೇ ಸಾರಮೇಯ ಮಾತಾ ತ್ವದೀಯಾ ಜನನೀ ಸಸ್ತು । ಸ್ವಪತು । ಪಿತಾ ಚ ಸಸ್ತು । ಶ್ವಾ ಸಾರಮೇಯೋ ಭವಾನ್ ಸಸ್ತು । ವಿಶ್ಪತಿರ್ಜಾಮಾತಾ ಯದ್ವಾ ವಿಶಾಂ ಜನಾನಾಂ ಪಾಲಕೋ ಗೃಹೀ ಸಸ್ತು । ಸರ್ವೇ ಜ್ಞಾತಯೋ ಬಂಧವೋಽಪಿ ಸಸಂತು । ಸ್ವಪಂತು । ಅಭಿತಃ ಪರಿತಃ ಸ್ಥಿತೋಽಯಮಪಿ ಸರ್ವೋ ಜನಃ ಸಸ್ತು । ಸ್ವಪತು ॥

ಪ್ರತಿಪದಾರ್ಥ

(ಎಲೈ ಸಾರಮೇಯವೇ,) **ಮಾತಾ**—ನಿನ್ನ ಜನನಿಯು । **ಸಸ್ತು**—ಮಲಗಿ ನಿದ್ರೆಮಾಡಲಿ. । **ಪಿತಾ**—ನಿನ್ನ ತಂದೆಯೂ । **ಸಸ್ತು**—ನಿದ್ರೆಮಾಡಲಿ । **ಶ್ವಾ**—ಸರಮಾಪುತ್ರನಾದ ನೀನೂ । **ಸಸ್ತು**—ನಿದ್ರೆಮಾಡು. ।**ವಿಶ್ಪತಿಃ**—ಗೃಹಜನರ ಪಾಲಕನಾದ ಯಜಮಾನನೂ । **ಸಸ್ತು**—ನಿದ್ರೆಮಾಡಲಿ. । **ಸರ್ವೇ ಜ್ಞಾತಯಃ**—ಸಕಲ ಬಂಧುಜನರೂ । **ಸಸಂತು**—ನಿದ್ರೆಮಾಡಲಿ. । **ಅಭಿತಃ**—ಸುತ್ತಲೂ ಇರುವ । **ಅಯಂ ಜನಃ**—ಈ ಪರಿವಾರಜನರೆಲ್ಲರೂ **ಸಸ್ತು**—ನಿದ್ರೆಮಾಡಲಿ.

ಭಾವಾರ್ಥ

ಎಲೈ ಸಾರಮೇಯವೇ, ನಿನ್ನ ಜನನಿಯು ಮಲಗಿ ನಿದ್ರೆಮಾಡಲಿ. ನಿನ್ನ ತಂದೆಯೂ ನಿದ್ರೆಮಾಡಲಿ. ಸರಮಾಪುತ್ರನಾದ ನೀನೂ ನಿದ್ರೆಮಾಡು. ಗೃಹಜನರ ಪಾಲಕನಾದ ಯಜಮಾನನೂ ನಿದ್ರೆಮಾಡಲಿ. ಸಕಲ ಬಂಧುಜನರೂ ನಿದ್ರೆಮಾಡಲಿ. ಸುತ್ತಲೂ ಇರುವ ಈ ಪರಿವಾರಜನವೆಲ್ಲವೂ ನಿದ್ರೆಮಾಡಲಿ.

## English Translation

Let the mother sleep, let the father sleep, let the dog sleep, let the lord of the house sleep, let all the kindred sleep, let the people (who are stationed) around sleep.

ಸಂಹಿತಾಪಾಠಃ

**ಯ ಆಸ್ತೇ ಯಶ್ಚ ಚರತಿ ಯಶ್ಚ ಪಶ್ಯತಿ ನೋ ಜನಃ ।**

**ತೇಷಾಂ ಸಂ ಹನ್ಮೋ ಅಕ್ಷಾಣಿ ಯಥೇದಂ ಹರ್ಮ್ಯಂತಥಾ ॥ ೬ ॥**

ಪದಪಾಠಃ

**ಯಃ । ಆಸ್ತೇ । ಯಃ । ಚ । ಚರತಿ । ಯಃ । ಚ । ಪಶ್ಯತಿ । ನಃ । ಜನಃ ।**

**ತೇಷಾಂ । ಸಂ । ಹನ್ಮಃ । ಅಕ್ಷಾಣಿ । ಯಥಾ । ಇದಂ । ಹರ್ಮ್ಯಂ । ತಥಾ ॥ ೬ ॥**

ಸಾಯಣಭಾಷ್ಯಂ

ಯೋ ಜನ ಆಸ್ತೇ ಅಸ್ಮಿನ್ಪ್ರದೇಶೇ ತಿಷ್ಠತಿ ಯಶ್ಚ ಚರತಿ ಗಚ್ಛತಿ ಯಶ್ಚ ಜನೋ ನೋಽಸ್ಮಾನ್ಪಶ್ಯತಿ ಏವಂಭೂತಾನಾಂ ತೇಷಾಂ ಜನಾನಾಮಕ್ಷಾಣೀಂದ್ರಿಯಾಣಿ ಸಂ ಹನ್ಮಃ । ಸಂಹನಾಮ । ಸಂಹತಿರ್ನಿಮೀಲನಂ । ನಿಮೀಲಯಾಮೇತ್ಯರ್ಥಃ । ಇದಂ ಪ್ರತ್ಯಕ್ಷೇಣೋಪಲಭ್ಯಮಾನಂ ಹರ್ಮ್ಯಂ ಪ್ರಾಸಾದಾದಿಸ್ಥಾವರಾತ್ಮಕಂ ವಸ್ತುಜಾತಂ ಯಥಾ ನಿಶ್ಚಲಂ ಭವತಿ ತಥೇಮೇ ಸರ್ವೇ ಜನಾ ನಿಶ್ಚಲಾ ಭವಂತ್ವಿತ್ಯರ್ಥಃ ॥

ಪ್ರತಿಪದಾರ್ಥ

**ಯಃ**—ಯಾವ ಜನರು । **ಆಸ್ತೇ**—ಇಲ್ಲಿ ನಿಂತಿದ್ದಾರೆಯೋ । **ಯಶ್ಚ**—ಯಾರು । **ಚರತಿ**—ಸಂಚರಿಸುವರೋ, । **ಯಶ್ಚ ಜನಃ**—ಯಾವ ಜನರು । **ನಃ**—ನಮ್ಮನ್ನು । **ಪಶ್ಯತಿ**—ನೋಡಬಲ್ಲರೋ । **ತೇಷಾಂ**—ಆ ಎಲ್ಲ ಜನರ । **ಅಕ್ಷಾಣಿ**—ಚಕ್ಷುರಾದೀಂದ್ರಿಯಗಳನ್ನು । **ಇದಂ ಹರ್ಮ್ಯಂ**—ಈ ಉಪ್ಪರಿಗೆಮನೆಯು । **ಯಥಾ**—ಯಾವ ರೀತಿ ನಿಶ್ಚಲವಾಗಿರುವುದೋ । **ತಥಾ**—ಹಾಗೆ ಇವರೂ ನಿಶ್ಚಲವಾಗಿರುವಂತೆ । **ಸಂ ಹನ್ಮಃ**—ಕಣ್ಣನ್ನು ಮುಚ್ಚಿಬಿಡುತ್ತೇವೆ

ಭಾವಾರ್ಥ

ಇಲ್ಲಿ ಯಾವ ಜನರು ನಿಂತಿದ್ದಾರೆಯೋ, ಯಾರು ಸಂಚರಿಸುವರೋ, ಯಾರು ನಮ್ಮನ್ನು ನೋಡಬಲ್ಲರೋ ಆ ಎಲ್ಲ ಜನರ ಚಕ್ಷುರಾದೀಂದ್ರಿಯಗಳನ್ನು ಸಹ ಈ ಉಪ್ಪರಿಗೆಮನೆಯು ಯಾವ ರೀತಿ ನಿಶ್ಚಲವಾಗಿರುವುದೋ ಅದೇ ರೀತಿ ನಿಶ್ಚಲವಾಗಿಬಿಡುವಂತೆ ನಾವು ಕಣ್ಣನ್ನು ಮುಚ್ಚಿಬಿಡುತ್ತೇವೆ.

English Translation

The man who sits, or he who walks, or he who sees us, of these we shut up the eyes, so that they may bc as unconcious as the mansion.

ಸಂಹಿತಾಪಾಠಃ

**ಸಹಸ್ರಶೃಂಗೋ ವೃಷಭೋ ಯಃ ಸಮುದ್ರಾದುದಾಚರತ್ ।**

ತೇನಾ ಸಹಸ್ಯೇನಾ ವಯಂ ನಿ ಜನಾನ್ತ್ಸ್ವಾಪಯಾಮಸಿ ॥ ೭ ॥

ಪದಪಾಠಃ

ಸಹಸ್ರऽಶೃಂಗಃ । ವೃಷಭಃ । ಯಃ । ಸಮುದ್ರಾತ್ । ಉತ್ऽಆಚರತ್ ।

ತೇನ । ಸಹಸ್ಯೇನ । ವಯಂ । ನಿ । ಜನಾನ್ । ಸ್ವಾಪಯಾಮಸಿ ॥ ೭ ॥

ಸಾಯಣಭಾಷ್ಯಂ

ಸಹಸ್ರಶೃಂಗಃ ಸಹಸ್ರಕಿರಣೋ ವೃಷಭೋ ಕಾಮಾನಾಂ ವರ್ಷಿತಾ ಯಃ ಸೂರ್ಯಃ ಸಮುದ್ರಾದಂಬುಧೇಃ ಸಕಾಶಾದುದಾಚರತ್ ಉದಾಗಚ್ಛತಿ ಸಹಸ್ಯೇನಾಭಿಭವಿತ್ರಾ ತೇನ ಸೂರ್ಯೇಣ ವಯಂ ಸ್ತೋತಾರೋ ಜನಾನ್ ಸರ್ವಾನ್ನಿ ಷ್ವಾಪಯಾಮಸಿ । ನಿತರಾಂ ಸ್ವಾಪಯಾಮಃ ॥

ಪ್ರತಿಪದಾರ್ಥ

ಸಹಸ್ರಶೃಂಗಃ—ಸಾವಿರಾರು ಕಿರಣಗಳುಳ್ಳವನೂ । ವೃಷಭಃ—ಕಾಮವರ್ಷಕನೂ ಆದ । ಯಃ—ಯಾವ ಸೂರ್ಯನು । ಸಮುದ್ರಾತ್—ಸಮುದ್ರದಿಂದ । ಉದಾಚರತ್—ಉದಯಿಸಿ ಬರುವನೋ । ಸಹಸ್ಯೇವ—ಸಕಲವನ್ನು ನಿರೋಧಿಸುವ । ತೇನ—ಆ ಸೂರ್ಯನ ಸಹಾಯದಿಂದ । ವಯಂ—ಸ್ತುತಿಕರ್ತರಾದ ನಾವು । ಜನಾನ್—ಈ ಸಕಲ ಜನರನ್ನೂ । ನಿ ಷ್ವಾಪಯಾಮಸಿ—ನಿಶ್ಚಲರಾಗಿ ನಿದ್ರಿಸುವಂತೆ ಮಾಡುವೆವು

ಭಾವಾರ್ಥ

ಸಾವಿರಾರು ಕಿರಣಗಳುಳ್ಳವನೂ, ಕಾಮವರ್ಷಕನೂ ಆದ ಯಾವ ಸೂರ್ಯನು ಸಮುದ್ರದಿಂದ ಉದಯಿಸಿಬರುವನೋ, ಅಂತಹ ಸಕಲವನ್ನು ನಿರೋಧಿಸುವ ಆ ಸೂರ್ಯನ ಸಹಾಯದಿಂದ ಸ್ತುತಿಕರ್ತರಾದ ನಾವು ಈ ಸಕಲ ಜನರನ್ನು ತಡೆಗಟ್ಟಿ ನಿಲ್ಲಿಸಿ ನಿಶ್ಚಲರಾಗಿ ನಿದ್ರಿಸುವಂತೆ ಮಾಡುವೆವು.

English Translation

We put men to sleep through the irresistible might of the bull with a thousand horns, (sun) who rises out of the ocean.

ಸಂಹಿತಾಪಾಠಃ

ಪ್ರೋಷ್ಠೇಶಯಾ ವಹ್ಯೇಶಯಾ ನಾರೀರ್ಯಾಸ್ತಲ್ಪಶೀವರೀಃ ।

ಸ್ತ್ರಿಯೋ ಯಾಃ ಪುಣ್ಯಗಂಧಾಸ್ತಾಃ ಸರ್ವಾಃ ಸ್ವಾಪಯಾಮಸಿ ॥ ೮ ॥

ಪದಪಾಠಃ

ಪ್ರೋಷ್ಠೇऽಶಯಾಃ । ವಹ್ಯೇऽಶಯಾಃ । ನಾರೀಃ । ಯಾಃ । ತಲ್ಪऽಶೀವರೀಃ ।

ಸ್ತ್ರಿಯಃ । ಯಾಃ । ಪುಣ್ಯऽಗಂಧಾಃ । ತಾಃ । ಸರ್ವಾಃ । ಸ್ವಾಪಯಾಮಸಿ ॥ ೮ ॥

### ಸಾಯಣಭಾಷ್ಯಂ

**ಯಾ ಯಾದೃಶ್ಯೋ ನಾರೀರ್ನಾರ್ಯಃ ಸ್ತ್ರಿಯಃ ಪ್ರೋಷ್ಠೇಶಯಾಃ ಪ್ರಾಂಕಣೇ ಶಯಾನಾಃ । ಯಾ ವಹ್ಯೇಶಯಾಃ । ವಹ್ಯಂ ವಾಹನಂ । ತಸ್ಮಿಞ್ಛಯಾನಾಃ । ಯಾಸ್ತಲ್ಪಶೀವರೀಸ್ತಲ್ಪಶಯಾಃ । ಯಾಃ ಸ್ತ್ರಿಯಃ ಪುಣ್ಯಗಂಧಾಃ ಮಂಗಲ್ಯಗಂಧಾಃ । ತಾಸ್ತಾದೃಶೀಃ ಸರ್ವಾಃ ಸ್ತ್ರೀಃ ಸ್ವಾಪಯಾಮಸಿ । ವಯಂ ನಿದ್ರಾಂ ಕಾರಯಾಮಃ ॥**

### ಪ್ರತಿಪದಾರ್ಥ

**ಯಾಃ ನಾರೀಃ**—ಯಾವ ಸ್ತ್ರೀಯರು । **ಪ್ರೋಷ್ಠೇಶಯಾಃ**—ಹೊರಗಿನ ಅಂಗಳದಲ್ಲಿ ಮಲಗಿರುವರೋ । **ವಹ್ಯೇಶಯಾಃ**—ಯಾರು ಮಂಚಗಳ ಮೇಲೆ ಮಲಗಿರುವರೋ, । **ತಲ್ಪಶೀವರೀಃ**—ಯಾರು ಸುಪ್ಪತ್ತಿಗೆಯ ಮೇಲೆ ಮಲಗಿರುವರೋ । **ಯಾಃ ಸ್ತ್ರಿಯಃ**—ಯಾವ ಸ್ತ್ರೀಯರು । **ಪುಣ್ಯಗಂಧಾಃ**—ಮಂಗಳಕರವಾದ ಗಂಧಯುಕ್ತರಾಗಿರುವರೋ । **ತಾಃ ಸರ್ವಾಃ**—ಆ ಎಲ್ಲಾ ಸ್ತ್ರೀಯರನ್ನೂ । **ಸ್ವಾಪಯಾಮಸಿ**—ನಿದ್ರಿಸುವಂತೆ ಮಾಡುವೆವು.

### ಭಾವಾರ್ಥ

ಯಾವ ಸ್ತ್ರೀಯರು ಹೊರಗಿನ ಅಂಗಳದಲ್ಲಿ ಮಲಗಿರುವರೋ ಅವರನ್ನೂ, ಹಾಗೆಯೇ ಮಂಚಗಳ ಮೇಲೆ ಮಲಗಿರುವವರನ್ನೂ, ಸುಪ್ಪತ್ತಿಗೆಯಮೇಲೆ ಮಲಗಿರುವವರನ್ನೂ ಮತ್ತು ಯಾವ ಸ್ತ್ರೀಯರು ಮಂಗಳಕರವಾದ ಸುಗಂಧಯುಕ್ತರಾಗಿರುವರೋ ಅವರನ್ನೂ ಈ ಎಲ್ಲಾ ಸ್ತ್ರೀಯರನ್ನೂ ಸಹ ನಿದ್ರಿಸುವಂತೆ ಮಾಡುತ್ತೇವೆ

### English Translation

We put to sleep all those women who are lying in the courtyard, in litter on the bed, the women who are decorated with holiday perfumes

---

## ಐವತ್ತಾರನೆಯ ಸೂಕ್ತವು

### ಪೀಠಿಕೆ

ಈ ಸೂಕ್ತದಲ್ಲಿಯೂ ಮುಂದಿನ ಮೂರು ಸೂಕ್ತಗಳಲ್ಲಿಯೂ ಮರುದ್ದೇವತೆಗಳನ್ನು ಸ್ತುತಿಸಲಾಗಿದೆ **ಈ** ಮರುದ್ದೇವತೆಗಳ ವಿಷಯವನ್ನು ಇಲ್ಲಿ ವಿವರಿಸುವುದು ಆವಶ್ಯಕವಾಗಿದೆ

## ಮರುದ್ದೇವತೆಗಳ ಸೂಕ್ಷ್ಮಪರಿಚಯ

ಋಗ್ವೇದದಲ್ಲಿ ಮರುದ್ದೇವತೆಗಳನ್ನು ರುದ್ರಪುತ್ರರೆಂದು ಕರೆಯುವ ರೂಢಿಇದೆ. ಇವರು ರುದ್ರಪುತ್ರರು ಹೇಗಾದರು ಎಂಬ ವಿಷಯದಲ್ಲಿ ಸಾಯಣರು ಈರೀತಿ ವಿವರಿಸಿದಾರೆ—

**ರುದ್ರೋ ಯದ್ವೋ ಮರುತೋ ರುಕ್ಮವಕ್ಷಸೋ ವೃಷಾಜನಿ ಪೃಶ್ನ್ಯಾಃ ಶುಕ್ರ ಊಧನಿ ॥**

(ಋ. ಸಂ. ೨-೩೪-೨)

ಎಂಬ ಋಕ್ಕಿನಲ್ಲಿ ಹೇಳುವಂತೆ ಮರುತ್ತುಗಳು ರುದ್ರಪುತ್ರರಾಗಿ ಪೃಶ್ನಿಯಲ್ಲಿ ಹುಟ್ಟಿದರೆಂದು ಪ್ರಸಿದ್ಧವಾದ ಕಥೆ ಇರುವುದರಿಂದ ಇವರನ್ನು ಸಂಬೋಧಿಸುವಾಗಲೆಲ್ಲಾ ಈ ವಿಶೇಷಣವನ್ನೇ ಹೆಚ್ಚಾಗಿ ಉಪಯೋಗಿಸಿದೆ. ಈ ಋಕ್ಕನ್ನು ವಿವರಿಸುವಾಗ ಸಾಯಣಾಚಾರ್ಯರು ಇನ್ನೊಂದು ಕಥೆಯನ್ನೂ ಹೇಳುತ್ತಾರೆ—

**ಪೃಶ್ನಿರ್ನಾನಾವರ್ಣಾ ಇಯಂ ಭೂಮಿಃ ಪುರಾ ಗೋರೂಪಧರಾಸೀತ್ । ತಸ್ಯಾಂ ಮಹೇಶೋ ವೃಷೋ ಭೂತ್ವಾ ಮರುತ ಉತ್ಪಾದಯಾಮಾಸೇತ್ಯಾಚಕ್ಷತೇ ॥**

(ಸಾಯಣಭಾಷ್ಯ. ಋ. ಸಂ. ೨-೩೪-೨)

ನಾನಾವರ್ಣವುಳ್ಳ ಪೃಥ್ವಿಯು ಹಿಂದೆ ಗೋರೂಪವನ್ನು ಧರಿಸಿದಾಗ ಮಹೇಶನು ವೃಷಭರೂಪದಿಂದ ಮರುತ್ತುಗಳನ್ನು ಉತ್ಪನ್ನಮಾಡಿದನು ಎಂಬ ಕಥೆಯಿದೆ ಎಂದು ಸಾಯಣರು ರುದ್ರನ ಮತ್ತು ಮರುತ್ತುಗಳ ಪಿತಾಪುತ್ರಸಂಬಂಧವನ್ನು ತಿಳಿಸಿದಾರೆ ಮತ್ತು ಮೇಲಿನ ಋ. ಸಂ ೨-೩೪-೨ ನೇ ಋಕ್ಕಿನಲ್ಲಿ ಹೇಳಿರುವ ಕಥೆಯು ತೈತ್ತಿರೀಯಸಂಹಿತೆಯಲ್ಲಿಯೂ ಉಕ್ತವಾಗಿರುವುದರಿಂದ ಅಲ್ಲಿನ ವಾಕ್ಯವನ್ನೂ ಉದಾಹರಿಸಿದಾರೆ.

**ಪೃಶ್ನಿಯೈ ವೈ ಪಯಸೋ ಮರುತೋ ಜಾತಾಃ ।**

(ತೈ ಸಂ ೨-೨-೧೧-೪)

ಆದುದರಿಂದಲೇ ಅನೇಕ ಕಡೆಗಳಲ್ಲಿ ಮರುತ್ತುಗಳಿಗೆ ರುದ್ರಪುತ್ರರೆಂದೇ ಸಂಬೋಧನೆ ಇದೆ. ಉದಾಹರಣೆಗೆ—

**ಪ್ರ ಯೇ ಶುಂಭಂತೇ ಜನಯೋ ನ ಸಪ್ತಯೋ ಯಾಮನ್ರುದ್ರಸ್ಯ ಸೂನವಃ ಸುದಂಸಸಃ ।**

(ಋ ಸಂ ೧-೮೫-೧)

ಇದಂ ಪಿತ್ರೇ ಮರುತಾಮುಚ್ಯತೇ ವಚಃ ಸ್ವಾದೋಃ ಸ್ವಾದೀಯೋ ರುದ್ರಾಯ ವರ್ಧನಂ ।
ರಾಸ್ವಾ ಚ ನೋ ಅಮೃತ ಮರ್ತಭೋಜನಂ ತ್ಮನೇ ತೋಕಾಯ ತನಯಾಯ ಮೃಳ ॥

(ಋ ಸಂ ೧-೧೧೪-೬)

ಎಂಬ ಋಕ್ಕುಗಳಲ್ಲಿಯೂ, ಹೀಗೆಯೇ ಋ. ಸಂ. ೧ ೧೬೮-೯, ೨-೩೩-೧ ಮುಂತಾದ ಅನೇಕ ಕಡೆಗಳಲ್ಲಿಯೂ ಮರುತ್ತುಗಳಿಗೆ ರುದ್ರಪುತ್ರರೆಂಬ ವಿಶೇಷಣವಿದೆ. ಮೇಲೆ ಉದಹರಿಸಿರುವ ೧-೧೧೪-೬ ನೇ ಋಕ್ಕನ್ನು ವಿವರಿಸುವಾಗ ಸಾಯಣರು ಇನ್ನೊಂದು ಕಥೆಯನ್ನು ಹೇಳಿದ್ದಾರೆ—

**ರುದ್ರಸ್ಯ ಚ ಮರುತಾಂ ಪಿತೃತ್ವಮೇವಮಾಖ್ಯಾಯತೇ । ಪುರಾ ಕದಾಚಿದಿಂದ್ರೋಽಸುರಾನ್ ಜಿಗಾಯ । ತದಾನೀಂ ದಿತಿರಸುರಮಾತಾ ಇಂದ್ರಹನನಸಮರ್ಥಂ ಪುತ್ರಂ ಕಾಮಯಮಾನಾ ತಪಸಾ ಭರ್ತುಃ ಸಕಾಶಾದ್ಗರ್ಭಂ ಲೇಭೇ । ಇಮಂ ವೃತ್ತಾಂತಮವಗಚ್ಛನ್ನಿಂದ್ರೋ ವಜ್ರಹಸ್ತಃಸನ್ ಸೂಕ್ಷ್ಮರೂಪೋ ಭೂತ್ವಾ ತಸ್ಯಾ ಉದರಂ ಪ್ರವಿಶ್ಯ ತಂ ಗರ್ಭಂ ಸಪ್ತಧಾ ಬಿಭೇದ । ಪುನರಪ್ಯೇಕೈಕಂ ಸಪ್ತಖಂಡಮಕರೋತ್ । ತೇ ಸರ್ವೇ ಗರ್ಭೈಕದೇಶಾಯೋನೇರ್ನಿರ್ಗತ್ಯ ಅರುದನ್ । ಏತಸ್ಮಿನ್ನವಸರೇ ಲೀಲಾರ್ಥಂ ಗಚ್ಛಂತೌ ಪಾರ್ವತೀಪರಮೇಶ್ವರೌ ಇಮಾನ್ ದದೃಶತುಃ । ಮಹೇಶಂ ಪ್ರತಿ ಪಾರ್ವತೀ ಏವಮುವಾಚ । ಇಮೇ ಮಾಂಸಖಂಡಾ ಯಥಾ ಪ್ರತ್ಯೇಕಂ ಪುತ್ರಾಃ ಸಂಪದ್ಯಂತಾಮೇವಂ ತ್ವಯಾ ಕಾರ್ಯಂ ಮಯಿ ಚೇತ್ಪ್ರೀತಿರಸ್ತೀತಿ । ಸ ಚ ಮಹೇಶ್ವರಸ್ತಾನ್ ಸಮಾನರೂಪಾನ್ ಸಮಾನವಯಸಃ ಸಮಾನಾಲಂಕಾರಾನ್ ಪುತ್ರಾನ್ ಕೃತ್ವಾ ಗೌರ್ಯೈ ಪ್ರದದೌ ತವೇಮೇ ಪುತ್ರಾಃ ಸಂತ್ವಿತಿ । ಅತಃ ಸರ್ವೇಷು ಮಾರುತೇಷು ಸೂಕ್ತೇಷು ಮರುತೋ ರುದ್ರಪುತ್ರಾ ಇತಿ ಸ್ತೂಯಂತೇ । ರೌದ್ರೇಷು ಚ ಮರುತಾಂ ಪಿತಾ ರುದ್ರ ಇತಿ ॥**

(ಸಾಯಣಭಾಷ್ಯ. ಋ. ಸಂ. ೧-೧೧೪-೬)

ಪೂರ್ವದಲ್ಲಿ ಒಂದುಸಲ ಇಂದ್ರನು ಅಸುರರನ್ನು ಜಯಿಸಿದನು. ಆಗ ಅಸುರಮಾತೆಯಾದ ದಿತಿಯು ಇಂದ್ರನನ್ನು ಕೊಲ್ಲಲು ಸಮರ್ಥನಾದ ಒಬ್ಬ ಪುತ್ರನನ್ನು ಪಡೆಯಬೇಕೆಂಬ ಆಸೆಯಿಂದ ತಪಸ್ಸನ್ನಾಚರಿಸಿ ತನ್ನ ಪತಿಯ ಅನುಗ್ರಹ ದಿಂದ ಗರ್ಭವನ್ನು ಧರಿಸಿದಳು. ಇಂದ್ರನು ಈ ಸಮಾಚಾರವನ್ನು ತಿಳಿದು ವಜ್ರಾಯುಧವನ್ನು ಕೈಯಲ್ಲಿ ಹಿಡಿದು ಕೊಂಡು ಸೂಕ್ಷ್ಮರೂಪಿಯಾಗಿ ಬಂದು ಅವಳ ಉದರವನ್ನು ಪ್ರವೇಶಿಸಿ ಆ ಗರ್ಭವನ್ನು ಏಳುಭಾಗವಾಗಿ ಸೀಳಿದನು. ಅವುಗಳಲ್ಲಿ ಪ್ರತಿಯೊಂದನ್ನೂ ಪುನಃ ಏಳೇಳು ತುಂಡುಗಳನ್ನಾಗಿ ಮಾಡಿದನು ಆಗ ಅವೆಲ್ಲವೂ ಮಾತೃಗರ್ಭದಿಂದ ಹೊರಕ್ಕೆ ಬಂದು ಅಳುತ್ತಿದ್ದವು. ಆ ಸಮಯದಲ್ಲಿ ಲೀಲಾರ್ಥವಾಗಿ ಪಾರ್ವತೀಪರಮೇಶ್ವರರಿಬ್ಬರೂ ಸಂಚರಿಸುತ್ತಿದ್ದಾಗ ಇವನ್ನು ನೋಡಿ ಪಾರ್ವತಿಯು ಮರುಕಗೊಂಡು, ಮಹೇಶ್ವರನನ್ನು ಕುರಿತು, ಎಲೈ ಪ್ರಿಯನೇ, ನಿನಗೆ ನನ್ನಲ್ಲಿ ಪ್ರೀತಿಯಿರುವುದಾದರೆ ಅಳುತ್ತಿರುವ ಈ ಮಾಂಸಖಂಡಗಳೆಲ್ಲವನ್ನೂ ಮಕ್ಕಳನ್ನಾಗಿ ಪರಿವರ್ತಿಸಬೇಕೆಂದು ಪ್ರಾರ್ಥಿಸಿದಳು ಆಗ ಪರಮೇಶ್ವರನು ಪಾರ್ವತಿಯ ಪ್ರಾರ್ಥನೆಯನ್ನು ಮನ್ನಿಸಿ ಅವೆಲ್ಲವನ್ನೂ ಒಂದೇ ವಿಧವಾದ ರೂಪವುಳ್ಳವರನ್ನಾಗಿಯೂ, ಒಂದೇ ವಯಸ್ಸಿನವರಾಗಿಯೂ, ಒಂದೇವಿಧ ಅಲಂಕಾರವುಳ್ಳವರನ್ನಾಗಿಯೂ ಮಾಡಿ ಪುತ್ರರೂಪರಾದ ಅವರನ್ನು-ಇವು ನಿನ್ನ ಪುತ್ರರಾಗಲಿ ಎಂದು ಗೌರಿಗೆ ಕೊಟ್ಟನು ಆದುದರಿಂದ ಮರುತ್ಸೂಕ್ತಗಳಲ್ಲೆಲ್ಲಾ ಮರುತ್ತುಗಳಿಗೆ ರುದ್ರಪುತ್ರರೆಂದೂ, ರುದ್ರಸೂಕ್ತಗಳಲ್ಲಿ ರುದ್ರನಿಗೆ ಮರುತ್ತುಗಳ ತಂದೆಯೆಂದೂ ಹೇಳುವ ರೂಢಿ ಬಂದಿತೆಂದು ಸಾಯಣರು ಈ ಇತಿಹಾಸವನ್ನು ಹೇಳಿರುತ್ತಾರೆ

## ಇಂದ್ರನಿಗೂ ಮರುತ್ತುಗಳಿಗೂ ಇರುವ ಸಾಹಚರ್ಯ

ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವು ಪ್ರಸಿದ್ಧವಾದುದು ಇಂದ್ರನಿಗೂ, ಮರುತ್ತುಗಳಿಗೂ ಇರುವ ರಾಜಪ್ರಜಾಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ ಮತ್ತು ವೃತ್ರಾಸುರನೊಡನೆ ಯುದ್ಧವನ್ನು ಮಾಡುವಾಗ ಇಂದ್ರನಿಗೆ ಮರುತ್ತುಗಳು ಸಹಾಯಮಾಡುವುದೂ ಸಂಹಿತೆಗಳಲ್ಲಿಯೂ, ಬ್ರಾಹ್ಮಣಗಳಲ್ಲಿಯೂ ಅನೇಕಕಡೆ ವರ್ಣಿತವಾಗಿವೆ ಇಂದ್ರನು ಮರುತ್ತುಗಳೊಡನೆ ಸೇರಿಕೊಂಡು ಉಳಿದ ದೇವತೆಗಳಿಂದ ಪ್ರತ್ಯೇಕವಾಗಿದ್ದುದನ್ನು ಹೇಳುವ ಪೂರ್ವಕಥೆಯು ಶತಪಥಬ್ರಾಹ್ಮಣದಲ್ಲಿರುವುದು

**ಆತಿಥ್ಯೇನ ವೈ ದೇವಾ ಇಷ್ಟ್ವಾ । ತಾನ್ತ್ಸಮದವಿಂದತ್ತೇ ಚತುರ್ಧಾ ವ್ಯದ್ರವನ್ನನ್ಯೋಽನ್ಯಸ್ಯ ಶ್ರಿಯಾ ಅತಿಷ್ಠಮಾನಾ ಅಗ್ನಿರ್ವಸುಭಿಸ್ಸೋಮೋ ರುದ್ರೈರ್ವರುಣ ಆದಿತ್ಯೈರಿಂದ್ರೋ ಮರುದ್ಭಿರ್ಬೃಹಸ್ಪತಿರ್ವಿಶ್ವೈರ್ದೇವೈಃ ॥**

(ಶ. ಬ್ರಾ ೩-೪-೨-೧)

ಹಿಂದೆ ದೇವತೆಗಳು ಆತಿಥ್ಯಕ್ರಿಯೆಯನ್ನು ನೆರವೇರಿಸಿದಾಗ ಅವರವರಲ್ಲೇ ವೈಮನಸ್ಯವುಂಟಾಗಿ ಒಬ್ಬರಿಗೊಬ್ಬರು ಸೇರಲಿಷ್ಟಪಡದೆ ನಾಲ್ಕು ಗುಂಪುಮಾಡಿಕೊಂಡು ಬೇರೆಬೇರೆಯಾದರು ಆಗ ಅಗ್ನಿಯು ವಸುಗಳೊಂದಿಗೂ, ಸೋಮನು ರುದ್ರರೊಂದಿಗೂ, ವರುಣನು ಆದಿತ್ಯರೊಂದಿಗೂ, ಇಂದ್ರನು ಮರುತ್ತುಗಳೊಂದಿಗೂ, ಬೃಹಸ್ಪತಿಯು ವಿಶ್ವೇದೇವತೆಗಳೊಂದಿಗೂ ಕೂಡಿಕೊಂಡು ಪ್ರತ್ಯೇಕವಾಗಿ ಗುಂಪುಮಾಡಿಕೊಂಡರು ಎಂಬ ಕಥೆಯಲ್ಲಿ ಇಂದ್ರನು ಮರುತ್ತುಗಳೊಡನೆ ಸಾಹಚರ್ಯವನ್ನು ಬೆಳೆಸಿ ಅವರೊಡನೆ ಇಟ್ಟುಕೊಂಡಿರುವ ನಿಕಟವಾದ ಸಂಬಂಧವನ್ನು ಹೇಳಿರುವುದು. ಇದೂ ಅಲ್ಲದೆ ಇಂದ್ರನೇ ರಾಜನೆಂದೂ ಮರುತ್ತುಗಳೇ ಪ್ರಜೆಗಳೆಂದೂ ಅನೇಕಕಡೆ ಹೇಳಿದೆ. ಉದಾಹರಣೆಗೆ—

**ಕ್ಷತ್ರಂ ವಾ ಇಂದ್ರೋ ವಿಶೋ ಮರುತೋ ವಿಶಾ ವೈ ಕ್ಷತ್ರಿಯೋ ಬಲವಾನ್ ಭವತಿ ||**
(ಶ ಬ್ರಾ. ೪-೩-೩-೬)

ಇಂದ್ರನು ಕ್ಷಾತ್ರತೇಜಸ್ಸುಳ್ಳ ರಾಜನು, ಮರುತ್ತುಗಳೇ ಪ್ರಜೆಗಳು. ಪ್ರಜೆಗಳ ಸಹಕಾರದಿಂದಲೇ ರಾಜನು ಶಕ್ತಿಯುಳ್ಳವನಾಗಿ ಆಗುತ್ತಾನೆಂದೂ ಮರುತ್ತುಗಳ ಸಾಹಾಯದಿಂದ ಇಂದ್ರನ ಪರಾಕ್ರಮವು ವೃದ್ಧಿಯಾಯಿತೆಂದೂ ಸೂಚಿಸಿದೆ. ಈ ರೀತಿಯಾದ ನಿಕಟವಾದ ಸಂಬಂಧವೂ, ಸಾಹಚರ್ಯವೂ ಇರುವುದರಿಂದಲೇ ಇಂದ್ರನನ್ನೂ ಮರುತ್ತುಗಳನ್ನೂ ಒಟ್ಟಿಗೆ ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುವ ಕ್ರಮವೂ ಶ್ರುತಿಗಳಲ್ಲಿ ಕಂಡುಬರುತ್ತದೆ

**ಅನವದ್ಯೈರಭಿ ದ್ಯುಭಿರ್ಮಖಃ ಸಹಸ್ವದರ್ಚತಿ |**
**ಗಣೈರಿಂದ್ರಸ್ಯ ಕಾಮ್ಯೈಃ ||**
(ಋ. ಸಂ. ೧-೬ ೮)

**ಮಂದ್ರಾಃ ಸುಜಿಹ್ವಾಃ ಸ್ವರಿತಾರ ಆಸಭಿಃ ಸಂಮಿಶ್ಲಾ ಇಂದ್ರೇ ಮರುತಃ ಪರಿಷ್ಟುಭಃ |**
(ಋ ಸಂ ೧೬೬-೧೧)

**ಸ ನೋ ಮರುದ್ಭಿರ್ವೃಷಭ ಶ್ರವೋ ಧಾ ಉಗ್ರೇಭಿಃ ಸ್ಥವಿರಃ ಸಹೋದಾಃ |**
(ಋ ಸಂ ೧-೧೭೧-೫)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನಿಗೂ ಮರುತ್ತುಗಳಿಗೂ ಒಟ್ಟಿಗೆ ಸೇರಿಸಿ ಆಹ್ವಾನವೂ ಹವಿರರ್ಪಣೆಯೂ ಇರುವುದು ಕಂಡುಬರುತ್ತದೆ. ಈರೀತಿಯ ಸಾಹಚರ್ಯವಿರುವುದರಿಂದಲೇ ಇಲ್ಲಿಯೂ ಸಹ ಮರುತ್ವಾನ್ ಎಂಬ ವಿಶೇಷಣವಿದೆ ಮರುತ್ತುಗಳೊಡಗೂಡಿರುವ ಇಂದ್ರನನ್ನು ಉದ್ದೇಶಿಸಿರುವ ಸಂದರ್ಭಗಳಲ್ಲೆಲ್ಲಾ ಇಂದ್ರನನ್ನು ಮರುತ್ವಾನ್ ಎಂದೇ ಕರೆದಿದೆಯೆಂದು ಬೃಹದ್ದೇವತೆಯೆಂಬ ಗ್ರಂಥದಲ್ಲಿ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ.

**ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ |**
(ಬೃ. ದೇ ೪-೫೬)

## ಮರುದ್ದೇವತೆಗಳ ವಿಶೇಷವಿವರಣೆ

ಪುರಾಣಾದಿಗ್ರಂಥಗಳಲ್ಲಿಯೂ, ಆಧುನಿಕಸಾಹಿತ್ಯದಲ್ಲಿಯೂ ಮರುತ್, ವಾಯು ಎಂಬ ಶಬ್ದಗಳ ಅರ್ಥ ವಿಷಯದಲ್ಲಿ ವಿಶೇಷವ್ಯತ್ಯಾಸವು ಕಂಡುಬರುವುದಿಲ್ಲ. ಈ ಶಬ್ದಗಳ ವಿಷಯದಲ್ಲಿ ಗಾಳಿ ಅಥವಾ ವಾಯುದೇವತೆ ಎಂದೇ ಅರ್ಥಮಾಡಿ ವ್ಯವಹರಿಸುವ ರೂಢಿ ಇದೆ. ಆದರೆ ಋಗ್ವೇದದಲ್ಲಿ ಈ ಎರಡು ಶಬ್ದಗಳಿಗೂ ಅರ್ಥದಲ್ಲಿಯೂ, ಪ್ರಯೋಗ ಅಥವಾ ವ್ಯವಹಾರದಲ್ಲಿಯೂ ಪರಸ್ಪರ ಬಹಳ ವ್ಯತ್ಯಾಸವಿದೆ. ವಾಯು ಅಥವಾ ವಾತ ಎಂದರೆ ಅಂತರಿಕ್ಷ ಅಥವಾ ಆಕಾಶದಲ್ಲಿ ವ್ಯಾಪಿಸಿರುವ ಗಾಳಿ ಅಥವಾ ವಾಯದೇವತೆ ಗಾಳಿ ಎಂಬ ಅರ್ಥಕ್ಕಿಂತಲೂ ವಾಯುದೇವತೆ ಎಂಬ ವ್ಯವಹಾರವೇ ಹೆಚ್ಚು ಬಳಕೆಯಲ್ಲಿದೆ. ಮತ್ತು ಈ ದೇವತೆಯನ್ನು ಸ್ತುತಿಸುವಾಗಲೆಲ್ಲಾ ಏಕವಚನಪ್ರಯೋಗವೇ ಇರುವುದು. ಆದರೆ ಮರುದ್ದೇವತೆಗಳನ್ನು ಯಾವಾಗಲೂ ಬಹುವಚನಪ್ರಯೋಗದಿಂದಲೇ ವ್ಯವಹರಿಸಲಾಗಿದೆ. ಇದಲ್ಲದೆ ವಾಯು ಮತ್ತು ಮರುತ್ತುಗಳ ವೈಶಿಷ್ಟ್ಯದಲ್ಲಿಯೂ ಬಹಳ ವ್ಯತ್ಯಾಸವಿದೆ. ವಾಯುವಿನ ಗುಣವರ್ಣನೆಯು ವಿಶೇಷವಾಗಿಲ್ಲ. ವಾಯುವು ಅಂತರಿಕ್ಷದಲ್ಲಿ ನೆಲೆಸಿರುವುದರಿಂದ ಮಧ್ಯಸ್ಥಾನದೇವತೆಯೆಂದು ಪ್ರಸಿದ್ಧನಾಗಿದ್ದಾನೆ. ಮರುತ್ತುಗಳು ಅನೇಕರಾದ್ದರಿಂದ ಇವರನ್ನು ದೇವಗಣವೆಂದು ಕರೆಯುವ ರೂಢಿ ಇದೆ. **ಸಪ್ತಗಣಾವೈ ವೈ ಮರುತಃ, ಮಾರುತಂ ಶರ್ಧಃ; ಮಾರುತಂ ಗಣಂ** ಇತ್ಯಾದಿ ಶಬ್ದಗಳಿಂದ ಅಥವಾ ಇದೇ ಅರ್ಥವಿರುವ ಇತರ ಶಬ್ದಗಳಿಂದ ವ್ಯವಹರಿಸುವುದೇ ರೂಢಿಯು. ಇವರೂ ವಾಯುವಿನಂತೆ ಮಧ್ಯಮಸ್ಥಾನ (ಅಂತರಿಕ್ಷ) ದೇವತೆಗಳೇ ಆಗಿದ್ದಾರೆ.

ಮರುತ್ತುಗಳು ಅತಿರಭಸದಿಂದ ಬೀಸುವ ಚಂಡಮಾರುತದ ಸ್ವರೂಪವು. ಮುಂಗಾರುಮಳೆ ಹುಯ್ಯುವಾಗ ಮಳೆ ಬರುವುದಕ್ಕೆ ಮೊದಲು ಅಥವಾ ಮಳೆಯು ಸುರಿಯುತ್ತಿರುವಾಗ ಗಾಳಿಯು ಅತಿರಭಸವಾಗಿ ಬೀಸುವುದು ಎಲ್ಲರಿಗೂ ಅನುಭವದ ವಿಷಯವೇ ಆಗಿದೆ. ರಭಸದಿಂದ ಬೀಸುವ ಈ ಚಂಡಮಾರುತವನ್ನೇ ಮರುದ್ದೇವತೆಗಳ ಸಂಘವೆಂದು ಋಗ್ವೇದದಲ್ಲಿ ವರ್ಣಿಸಿದೆ ಮಳೆಯು ಹುಯ್ಯುವುದಕ್ಕೆ ಮೊದಲು ಅಥವಾ ಹುಯ್ಯುವಾಗ ಗಾಳಿಯ ರಭಸವು ವಿಶೇಷವಾಗಿರುವುದು ಆದ್ದರಿಂದ ಮಳೆಗೂ ಮರುತ್ತುಗಳಿಗೂ ವಿಶೇಷ ಸಂಬಂಧವಿದೆ ಆದುದರಿಂದಲೇ ಮರುತ್ತುಗಳನ್ನು **ಉಕ್ಷಣಃ, ಜಲಸ್ಯ ಸೇಕ್ತಾರಃ** ನೀರಿನಿಂದ ಎಲ್ಲವನ್ನೂ ತೋಯಿಸುವವರು ಎಂದು ಮೊದಲಾದ ವಿಶೇಷಣಗಳಿಂದ ಸ್ತುತಿಸಲಾಗಿದೆ. ಇದಲ್ಲದೆ ಗುಡುಗು, ಮಿಂಚು, ಸಿಡಿಲು ಇವುಗಳಿಂದಲೂ, ಅತಿರಭಸವಾಗಿ ಬೀಸುತ್ತಿರುವ ಗಾಳಿಯಿಂದಲೂ ಕೂಡಿರುವ ವೃಷ್ಟಿಗೆ ವೃತ್ರಹನನಾದಿರೂಪವಾದ ಇಂದ್ರನ ಸಂಬಂಧವೂ ಇರುವುದರಿಂದ ಮರುದ್ದೇವತೆಗಳಿಗೂ ಇಂದ್ರನಿಗೂ ಸ್ನೇಹವೂ ಸಾಹಚರ್ಯವೂ ಇರುವುದೆಂದು ಅನೇಕಕಡೆ ಹೇಳಿದೆ ವೃಷ್ಟಿಯನ್ನು ಸುರಿಸದೆ ತಡೆದು ನಿಲ್ಲಿಸಿದ ಮೇಘಗಳನ್ನು ಅಥವಾ ವೃತ್ರನನ್ನು ಇಂದ್ರನು ತನ್ನ ವಜ್ರಾಯುಧದಿಂದ ಪ್ರಹರಿಸಿ ಮಳೆಗರೆಯುವಂತೆ ಮಾಡುತ್ತಾನೆ. ಆ ವೃಷ್ಟಿಕರ್ಮದಲ್ಲಿ ಮೇಘಗಳನ್ನು ಚದುರಿಸಿ ಮಳೆಹುಯ್ಯುವಂತೆ ಮರುತ್ತುಗಳು ಮಾಡುವುದರಿಂದ ವೃಷ್ಟಿಕರ್ಮಕ್ಕೆ ಮರುತ್ತುಗಳು ಇಂದ್ರನಿಗೆ ಸಹಾಯಮಾಡಿದಂತಾಗುತ್ತದೆ ಈ ಕಾರಣದಿಂದಲೇ ಇಂದ್ರನಿಗೂ ಮರುತ್ತುಗಳಿಗೂ ವಿಶೇಷರೀತಿಯ ಸಖ್ಯವಿದೆ. ಇಂದ್ರನಿಗೆ ಮರುತ್ವಾನ್ ಎಂಬ ವಿಶೇಷಣವು ಸಹ ಈ ಕಾರಣದಿಂದಲೇ ಉಂಟಾಗಿದೆ.

## ಮರುತಃ ಎಂಬ ಶಬ್ದದ ನಿರ್ವಚನ

ಯಾಸ್ಕರು ಮರುತಃ ಎಂಬ ಶಬ್ದದ ನಿರ್ವಚನವನ್ನು ಈರೀತಿ ಹೇಳಿದ್ದಾರೆ—

**ಅಥಾತೋ ಮಧ್ಯಮಸ್ಥಾನಾ ದೇವಗಣಾಃ । ತೇಷಾಂ ಮರುತಃ ಪ್ರಥಮಾಗಾಮಿನೋ ಭವಂತಿ । ಮರುತಃ । ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ ॥**

(ನಿ ೧೧-೧೪)

ಎಂದರೆ, ಈಗ ಮಧ್ಯಮಸ್ಥಾನವಾದ ಅಂತರಿಕ್ಷಸ್ಥ ದೇವಗಣಗಳ ವಿಷಯವನ್ನು ಹೇಳುತ್ತೇವೆ. ಈ ಗಣಗಳಲ್ಲಿ ಮರುತ್ತುಗಳಿಗೇ ಪ್ರಥಮಸ್ಥಾನವು **ಮರುತ್** ಎಂಬ ಶಬ್ದವು ಮಿ + ರು ಎಂಬ ಎರಡು ಧಾತುಗಳಿಂದ ನಿಷ್ಪನ್ನವಾಗಿದೆ. ಕ್ಲಪ್ತವಾದ ಎಂದರೆ ಅಳತೆಗೆ ಸರಿಯಾದ, ಒಂದೇವಿಧವಾದ ಅಥವಾ ಒಂದೇಸಮನಾದ ಶಬ್ದಮಾಡುವವರಾದ್ದರಿಂದ ಈ ದೇವತೆಗಳಿಗೆ ಮರುತ್ತುಗಳೆಂದು ಹೆಸರು. ಅಥವಾ ಮಿ + ರುಚ್ ಎಂಬ ಧಾತುಗಳಿಂದ ಮರುತ್ ಶಬ್ದವು ನಿಷ್ಪನ್ನವಾದರೆ ಒಂದೇಸಮನಾದ ಪ್ರಕಾಶವುಳ್ಳವರು ಎಂದೂ, ಮಹತ್‌ಪೂರ್ವಕವಾದ ದ್ರು ಧಾತುವಿನಿಂದ ನಿಷ್ಪನ್ನವಾದರೆ ಬಹಳವಾಗಿ, ರಭಸವಾಗಿ ಬೀಸುವವರು ಅಥವಾ ಚಲಿಸುವವರು ಎಂದೂ ನಿರ್ವಚನದ ಅರ್ಥವು

## ಸೂಕ್ತಗಳಲ್ಲಿಯೂ ಋಕ್ಕುಗಳಲ್ಲಿಯೂ ಕಂಡುಬರುವ ಮರುದ್ದೇವತೆಗಳ ವಿವರಣೆ

ಈ ಮರುದ್ದೇವತೆಗಳಿಗೆ ಇತರ ದೇವತೆಗಳ ಮಧ್ಯದಲ್ಲಿ ಬಹುಮುಖ್ಯವಾದ ಸ್ಥಾನವಿದೆ. ೩೩ ಪೂರ್ಣ ಸೂಕ್ತಗಳು ಇವರನ್ನು ಸ್ತುತಿಸಿರುವುದಲ್ಲದೆ ಇಂದ್ರನೊಡನೆ ೭ ಸೂಕ್ತಗಳಲ್ಲಿಯೂ, ಅಗ್ನಿ ಮತ್ತು ಪೂಷನ್ ಎಂಬ ದೇವತೆ

ಗಳೊಡನೆ ಒಂದೊಂದು ಸೂಕ್ತದಲ್ಲಿಯೂ ಒಟ್ಟು ೪೨ ಸೂಕ್ತಗಳಲ್ಲಿ ಇವರು ಸ್ತುತರಾಗಿದಾರೆ. ಇವರನ್ನು ಗಣ ಅಥವಾ ಶರ್ಧ (೧-೩೭-೧) ಇತ್ಯಾದಿ ಶಬ್ದಗಳಿಂದಲೂ ಬಹುವಚನಪ್ರಯೋಗದಿಂದಲೂ ವರ್ಣಿಸಲಾಗಿದೆ. ಅವರು ರುದ್ರನ ಪುತ್ರರು. ಅನೇಕಕಡೆ ಅವರನ್ನು ರುದ್ರರೆಂದೇ ಕರೆಯಲಾಗಿದೆ (೧-೩೯-೪,೭ ಇತ್ಯಾದಿ) ಕೆಲವುವೇಳೆ ಇವರಿಗೆ ರುದ್ರಿಯರೆಂದೂ (೧-೩೮-೭, ೨-೩೪ ೧೦ ಇತ್ಯಾದಿ) ಹೆಸರಿದೆ. ಪೃಶ್ನಿಯ ಪುತ್ರರು (೨-೩೪-೨, ೫-೫೨-೧೬, ೫-೬೦-೫ ; ೫-೬೬-೩) ಪೃಶ್ನಿಮಾತರಃ (ಪೃಶ್ನಿಯೇ ತಾಯಿಯಾಗಿ ಉಳ್ಳವರು) ಎಂದೂ ಅನೇಕಸಲ ಕರೆದಿದೆ. (೧-೨೩-೧೦ ; ಅ ವೇ. ೫.೨೧ ೧೧ ಇತ್ಯಾದಿ) ಪೃಶ್ನಿ ಎಂಬ ಗೋವೇ (೫ ೫೨-೧೬) ಅಥವಾ ಸಾಧಾರಣವಾದ ಗೋವೇ (೮ ೮೩-೧ ಅವರ ಜನನಿಯು ಅವರನ್ನು ಗೋಮಾತರಃ ಎಂದೂ ಕರೆದಿದೆ (೧-೮೫-೩ , ೮ ೨೦ ೮) ಈ ಗೋವು ಪ್ರಾಯಶಃ ಚಂಡಮಾರುತದ ನಾನಾವರ್ಣರಂಜಿತವಾದ ಮೇಘವಿರಬಹುದು. ದೊಡ್ಡದಾದ ಕೆಚ್ಚಲುಳ್ಳ ಗೋವುಗಳು ಉರಿಯುತ್ತಾ ಬರುತ್ತವೆ (೨-೩೪-೫) ಎಂಬಲ್ಲಿ ಅವು ಬಿರುಗಾಳಿಯು ಬೀಸುತ್ತಿರುವಾಗ ಮಿಂಚು, ಸಿಡಿಲುಗಳಿಂದಕೂಡಿದ ಮೇಘಗಳೇ ಆಗಿರಬೇಕು. ಪೃಶ್ನಿಯಿಂದ ಜನಿಸಿದಾಗ ಮರುತ್ತುಗಳನ್ನು ಅಗ್ನಿಗೆ ಹೋಲಿಸಿದೆ (೬-೬೬ ೧, ೨, ೩) ಸಿಡಿಲಿನ ನಗುವಿನಿಂದ ಮರುತ್ತುಗಳು ಜನಿಸಿದರು (೧-೨೩-೧೨) ಅಗ್ನಿಯು ಅವರಿಗೆ ರೂಪವನ್ನು ಕೊಟ್ಟನು ಅಥವಾ ಅವರನ್ನು ಪಡೆದನು (೬-೩-೮ , ೧-೭೧-೮) ವಾಯುವು ಅವರನ್ನು ಅಂತರಿಕ್ಷದ ಯೋನಿಯಲ್ಲಿ ಇಟ್ಟನು (೧ ೧೩೪-೪) ಮತ್ತು ಅವರು ಆಕಾಶದ ಪುತ್ರರು (೧೦-೭೭-೨) ಮತ್ತು ಆಕಾಶದ ವೀರರು. (೧-೬೪ ೪ , ೧-೧೨೨-೧ ; ೫-೫೪-೧೦) ಅಥವಾ ಆಕಾಶದ ಗಂಡುಗಳು (೩-೫೪ ೧೩ ; ೫-೫೯ ೬) ಒಂದು ಕಡೆ ಅವರಿಗೆ ಸಮುದ್ರವು ತಾಯಿ ( ಸಮುದ್ರಮಾತರಃ) ಎಂದು ಹೇಳಿದೆ (೧೦ ೭೮ ೬) ಬೇರೆ ಕೆಲವು ಸ್ಥಳಗಳಲ್ಲಿ ಆತ್ಮಯೋನಿಗಳು) ತಮ್ಮಿಂದ ತಾವೇ ಜನಿಸಿದವರು) ಎಂದೂ (೧-೧೬೮ ೨ ; ೫-೮೭-೨) ಹೇಳಿದೆ.

ಅವರು ಸಹೋದರರಾದರೂ ಅವರಲ್ಲಿ ಜ್ಯೇಷ್ಠ, ಕನಿಷ್ಠ ಎಂಬ ವ್ಯತ್ಯಾಸವಿಲ್ಲ (೫ ೫೯-೬ , ೫-೬೦ ೫) ಏಕೆಂದರೆ, ಅವರೆಲ್ಲರೂ ಸಮಾನವಯಸ್ಸಿನವರು (೧-೧೬೫-೧) ಅವರೆಲ್ಲಾ ಒಟ್ಟಿಗೆ ಬೆಳೆದವರು (೫-೫೬-೫ , ೭-೫೮ -೧) ಮತ್ತು ಒಂದೇವಿಧವಾದ ಮನಸ್ಸುಳ್ಳವರು (೮-೨೦-೧ ಮತ್ತು ೨೧). ಅವರಿಗೆಲ್ಲಾ ಒಂದೇ ಜನ್ಮಸ್ಥಾನ (೫ ೫೩-೩) ಮತ್ತು ಒಂದೇ ವಾಸಸ್ಥಳ (೧-೧೬೫ ೧ , ೭-೫೬ ೧) ಅವರು ಆಕಾಶದಲ್ಲಿಯೂ, ಭೂಮಿಯಲ್ಲಿಯೂ, ಸ್ವರ್ಗದಲ್ಲಿಯೂ ಬೆಳೆದರು (೫ ೫೫-೭) ಅಥವಾ ಮೂರುಸ್ವರ್ಗದಲ್ಲಿ ಬೆಳೆದರು (೫-೬೦-೬) ಅವರು ಪರ್ವತವಾಸಿಗಳೆಂದೂ ಒಂದುಕಡೆ (೮ ೮೩-೧, ೨) ಹೇಳಿದೆ

ಇಂದ್ರಾಣಿಯು ಅವರಿಗೆ ಮಿತ್ರಳು. ಇಂದ್ರಾಣಿ (೧೦-೮೬-೯) ಮತ್ತು ಸರಸ್ವತಿಯರೊಡನೆ (೭-೯೬-೨) ಕಲೆಯುತ್ತಾರೆ. ಅವರು ಈರೀತಿ ಬಾಂಧವ್ಯವಿಟ್ಟುಕೊಂಡಿರುವುದು ರೋದಸೀ (ದ್ಯಾವಾಪೃಥಿವೀ ಅಥವಾ ರುದ್ರಪತ್ನಿ) ಎಂಬ ದೇವತೆಯೊಡನೇಯೇ ಹೆಚ್ಚು ಅವಳು ಅವರಿಗೆ ಸುಖಸಾಧನಗಳನ್ನು ಒದಗಿಸುತ್ತಾ ಅವರೊಡನೆ ರಥದಲ್ಲಿ ನಿಂತಿರುತ್ತಾಳೆ (೫ ೫೬-೮) ಅಥವಾ ಪಾರ್ಶ್ವದಲ್ಲಿ ನಿಂತಿರುತ್ತಾಳೆ (೬-೬೬-೬). ಅವಳ ಹೆಸರು ಬರುವ ಐದುಸ್ಥಳಗಳಲ್ಲಿಯೂ ಮರುದ್ದೇವತೆಗಳ ಸಹಿತವಾಗಿಯೇ ಇರುವುದು (೧ ೧೬೭-೪, ೫). ಆದುದರಿಂದ ಅಶ್ವಿನೀದೇವತೆಗಳಿಗೆ ಸೂರ್ಯೆಯಂತೆ ಅವಳು ಅವರ ವಧುವೆಂದು ಪರಿಗಣಿತಳಾಗಿದ್ದಾಳೆ. ಇದರಿಂದಲೇ ಅವರಿಗೆ ಭದ್ರಜಾನಯಃ (ಸುಂದರಳಾದ ಭಾರ್ಯೆಯುಳ್ಳವರು (೫-೬೧-೪) ಎಂಬ ವಿಶೇಷಣವು. ಮತ್ತು ಅವರನ್ನು ವರರಿಗೆ (೫-೬೦-೪) ಅಥವಾ ಯುವಕರಾದ ಪ್ರಣಯಿಗಳಿಗೆ (೧೦ ೭೮-೬) ಹೋಲಿಸಲಾಗಿದೆ.

ಮರುದ್ದೇವತೆಗಳ ತೇಜಸ್ಸು ಆಗಾಗ್ಗೆ ಪ್ರಸಕ್ತವಾಗುತ್ತದೆ. ಅವರು ಸುವರ್ಣವರ್ಣದವರು, ಸೂರ್ಯನಂತೆ ಉಜ್ಜ್ವಲವಾದ ಕಾಂತಿಯುಳ್ಳವರು, ಜ್ವಲಿಸುವ ಅಗ್ನಿಯಂತೆ ಈಷದ್ರಕ್ತವರ್ಣವುಳ್ಳವರು. (೬-೬೬-೨, ೭-೫೯-೧೧;

೮-೭-೭) ಬೆಂಕಿಯ ಜ್ವಾಲೆಗಳಂತೆ ಪ್ರಕಾಶಿಸುತ್ತಾರೆ (೧೦ ೭೮-೩) ಅಗ್ನಿಯ ರೂಪವುಳ್ಳವರು ಅಥವಾ ಅಗ್ನಿಯ ತೇಜಸ್ಸುಳ್ಳವರು (೧೦-೮೪ ೧, ೩-೨೬ ೫) ತೇಜಸ್ಸಿನಲ್ಲಿ ಅವರನ್ನು ಅಗ್ನಿಗೆ ಹೋಲಿಸಿದೆ. (೧೦-೭೮-೨) ಅವರು ಅಗ್ನಿಯಂತೆ (೨-೩೪-೧) ಅಥವಾ ಉದ್ದೀಪ್ತನಾದ ಅಗ್ನಿಯಂತೆ (೬-೬೬-೨) ಇದ್ದಾರೆ ಅವರಿಗೆ ಅಗ್ನಿಯೆಂದೇ ಹೆಸರು (೩-೨೬-೪) ಸರ್ಪಗಳ ಕಾಂತಿಯುಳ್ಳವರು (ಅಹಿಭಾನವಃ ೧-೧೭೨ ೧). ಪರ್ವತಗಳಲ್ಲಿ ಪ್ರಕಾಶಿಸುತ್ತಾರೆ (೮ ೭-೧) ಅವರು ಸ್ವಭಾನುಗಳು (ಸ್ವತಃ ಪ್ರಕಾಶಿಸುವವರು ೧ ೩೭-೨ ಇತ್ಯಾದಿ) ಈ ವಿಶೇಷಣವು ಬೇರೆ ಯಾವ ದೇವತೆಗಳಿಗೂ ಹೇಳಿಲ್ಲ ಮತ್ತು ಅವರನ್ನು ತೇಜಸ್ವಿಗಳು ಜಾಜ್ವಲ್ಯಮಾನರು ಎಂಬ ವಿಶೇಷಣಗಳಿಂದ ಪದೇಪದೇ ವರ್ಣಿಸಲಾಗಿದೆ. (೧ ೧೬೫-೧೨)

ಅವರಿಗೆ ವಿದ್ಯುತ್ತಿನೊಡನೆ ವಿಶೇಷವಾದ ಸಂಬಂಧವಿದೆ (೫ ೫೪-೨, ೩ ೧, ೧-೬೪-೫) ಮರುತ್ತುಗಳು ಘೃತವನ್ನು ಎಂದರೆ ವೃಷ್ಟಿಯನ್ನು ಸುರಿಸುವಾಗ ವಿದ್ಯುತ್ತುಗಳು ಭೂಮಿಯನ್ನು ನೋಡಿ ಹಸನ್ಮುಖಿಗಳಾಗುತ್ತಾರ (೧-೧೬೮ ೮, ೫-೫೨-೬) ಮರುತ್ತುಗಳು ಮಳೆಯನ್ನು ಕರೆಯುವಾಗ ಕರುವನ್ನು ಹಿಂಬಾಲಿಸುತ್ತಾ ಹಸುವು ಅರಚುವಂತೆ ಸಿಡಿಲು ಧ್ವನಿಮಾಡುತ್ತದೆ (೭-೫೬-೧೩) ವಿದ್ಯುತ್ತು ಅವರಿಗೆ ಎಷ್ಟರಮಟ್ಟಿಗೆ ಸಂಬಂಧಿಸಿದೆ ಎಂದರೆ ವಿದ್ಯುತ್ತು ಸಮಾಪ್ತಪದವಾಗಿ ಪ್ರಯುಕ್ತವಾಗಿರುವ ಐದು ಸ್ಥಳಗಳಲ್ಲಿ, ಒಂದು ಹೊರತಾಗಿ ಉಳಿದುದೆಲ್ಲವೂ ಮರುತ್ ಎಂಬುದರೊಡನೆಯೇ ಇದೆ ಅವರು ಸಿಡಿಲನ್ನು ಕೈಯಲ್ಲಿ ಹಿಡಿದುಕೊಂಡಿದ್ದಾರೆ (೮ ೭-೨೫, ೫-೫೪-೧೧) ಸಿಡಿಲೆಂದರೆ ಅವರಿಗೆ ಬಹಳ ಆನಂದ (೫ ೫೪-೩) ಅವರ ಕೈಯಲ್ಲಿ ಭರ್ಜಿಗಳಿವೆ ಇಲ್ಲಿ ಭರ್ಜಿ ಅಥವಾ ಋಷ್ಟಿ ಎಂ[illegible] ಸಿಡಿಲೇ ಇರಬೇಕು ಏಕೆಂದರೆ ಅವರಿಗೆ ಋಷ್ಟಿವಿದ್ಯುತ್—ಸಿಡಿಲನ್ನೇ ಭರ್ಜಿಯನ್ನಾಗಿ ಉಪಯೋಗಿಸುವವರು ಎಂಬ ವಿಶೇಷಣವಿದೆ (೧ ೧೬೮ ೫, ೫-೫೨ ೧೩) ಇನ್ನು ಕೆಲವು ಸ್ಥಳಗಳಲ್ಲಿ ಅವರಿಗೆ ಭಂಗಾರದಿಂದ (೮-೭-೩೨) ಮಾಡಿದ ಕೊಡಲಿಯೂ ಆಯುಧವೆಂದಿದೆ (೧-೩೭-೨, ೧ ೮೮-೩, ೫-೩೩-೪, ೫-೫೭-೨, ೮-೨೦-೪)೫-೫೭-೨, ೮-೨೦-೪) ಒಂದು ಸಲ ಅವರು ವಜ್ರಾಯುಧವನ್ನು ಧರಿಸಿದ್ದಾರೆಂಬ ವರ್ಣನೆಯೂ ಇದೆ. ಕೆಲವು ಸ್ಥಳಗಳಲ್ಲಿ ಅವರನ್ನು ಧನುರ್ಬಾಣಧಾರಿಗಳೆಂದೂ (೫-೫೩-೪ ; ೫-೫೭-೨, ೮-೨೦-೪, ೧೨) ಒಂದುಸಲ ಬಾಣವನ್ನು ಬಿಡುತ್ತಿರುವ ಬಿಲ್ಲುಗಾರರೆಂದೂ ಹೇಳಿದೆ ಆದರೆ ಈ ಲಕ್ಷಣವು ಅವರಿಗೆ ಅಪರೂಪ ಅವರು ಪುಷ್ಪಹಾರ ಮೊದಲಾದ ಅಲಂಕಾರಗಳಿಂದ ಅಲಂಕೃತರಾಗಿದ್ದಾರೆ (೫-೫೩-೪) ಭಂಗಾರದ ನಡುಪಟ್ಟಿಗಳನ್ನು ಹಾಕಿಕೊಂಡಿದ್ದಾರೆ (೫ ೫೫ ೬) ವಿವಾಹಾರ್ಥಿಯಾದ ಶ್ರೀಮಂತನಂತೆ ತಮ್ಮ ದೇಹವನ್ನು ಸುವರ್ಣಾಭರಣಗಳಿಂದ ಅಲಂಕರಿಸಿಕೊಳ್ಳುತ್ತಾರೆ (೫-೬೦-೪). ಬಾಹುಪುರಿ, ಕಾಲಂದಿಗೆಗಳು ಅವರ ವೈಯಕ್ತಿಕ ಆಭರಣಗಳು ಈ ಆಭರಗಳಿಂದ ಅಲಂಕೃತರಾದ ಅವರು ನಕ್ಷತ್ರರಂಜಿತವಾದ ಆಕಾಶದಂತೆ ಅಥವಾ ಮೋಡದಿಂದ ಬೀಳುತ್ತಿರುವ ಮಳೆಯ ಹನಿಗಳಂತೆ ಥಳಥಳಿಸುತ್ತಾರೆ. ಅವರ ಭುಜದ ಮೇಲೆ ಭಲ್ಲೆಗಳೂ, ಕಾಲಿನಲ್ಲಿ ಕಾಲಂದಿಗೆಗಳೂ, ಎದೆಯಮೇಲೆ ಸುವರ್ಣಾಭರಣಗಳೂ, ಕೈಗಳಲ್ಲಿ ಕೆಂಡಕಾರುತ್ತಿರುವ ಸಿಡಿಲುಗಳೂ, ತಲೆಯಮೇಲೆ ಸುವರ್ಣಮಯವಾದ ಶಿರಸ್ತ್ರಾಣಗಳೂ ಇವೆ (೫-೫೪-೧೧)

ಮರುದ್ದೇವತೆಗಳು ಉಪಯೋಗಿಸುವ ರಥಗಳು ಮಿಂಚಿನಿಂದ ಹೊಳೆಯುತ್ತವೆ (೧-೮೮-೧, ೩-೫೪-೧೩) ಅವು ಸುವರ್ಣಮಯವಾದವು. (೫-೫೭-೧) ಮತ್ತು ಅವಕ್ಕೆ ಚಿನ್ನದ ಚಕ್ರಗಳು ಅಥವಾ ನೇಮಿಗಳು (೧-೬೪-೧೧ ; ೧-೫೮-೫) ಇವೆ. ಅವುಗಳಲ್ಲಿ ಅವರ ಆಯುಧಗಳಿವೆ. (೫-೫೭-೬) ನೀರಿನ ಬಾನೆಗಳಿವೆ (೧-೮೭-೨) ರಥವನ್ನು ಎಳೆಯುವ ಕುದುರೆಗಳು ಕಂದುಬಣ್ಣದವು (೧-೮೮-೨ ; ೫-೫೭-೪) ಆ ಕುದುರೆಗಳಿಗೆ ಭಂಗಾರದ ಗೊರಸುಗಳಿವೆ. (೮-೭-೨೭) ಅವು ಮನೋವೇಗವುಳ್ಳವು. (೧-೮೫-೪) ಈ ಅಶ್ವಗಳು ಚುಕ್ಕೆಗಳುಳ್ಳವು. ಪೃಷದಶ್ವರೆಂದು (ಚುಕ್ಕೆ

ಚುಕ್ಕೆಯಾಗಿರುವ ಅಶ್ವಗಳುಳ್ಳವರು) ಇವರಿಗೆ ವೈಯಕ್ತಿಕವಾದ ಹೆಸರಿದೆ. ಇವರ ರಥಕ್ಕೆ ಹೆಣ್ಣುಕುದುರೆಗಳನ್ನು ಕಟ್ಟಿದಾರೆಂದೂ (೧-೩೯-೬) ಇದೆ. ಇವರು ಗಾಳಿಯನ್ನು ತಮ್ಮ ರಥಕ್ಕೆ ಅಶ್ವವಾಗಿ ಕಟ್ಟಿದಾರೆಂದು (೫-೫೮-೭)ಹೇಳಿದೆ.

ಮರುತ್ತುಗಳು ಆಕಾಶದಂತೆ ಬೃಹದಾಕಾರವುಳ್ಳವರು (೫-೫೭-೪) ಭೂಮ್ಯಾಕಾಶಗಳನ್ನು ವ್ಯಾಪಿಸಿದ್ದಾರೆ (೧೦-೭೭-೩) ಅವರ ಮಹತ್ಸ್ವರೂಪವು ಅಪರಿಮಿತವಾದುದು (೫-೫೮-೨). ಅವರ ಸಾಮರ್ಥ್ಯದ ಮಿತಿಯನ್ನು ಯಾರೂ ತಿಳಿಯಲಾರರು (೧-೧೬೭-೯) ಅವರು ಯುವಕರು (೧-೬೪-೨, ೧-೧೬೫-೨, ೫-೪೨-೧೫) ಮತ್ತು ಅವರಿಗೆ ವಾರ್ಧಕ್ಯವೇ ಇಲ್ಲ (೧-೬೪-೩) ಅವರು ಅಸುರರು, ಉತ್ಸಾಹಶಾಲಿಗಳು, ಓಜಸ್ವಿಗಳು, ಕೋಪಿಯಿಲ್ಲದವರು (೧-೬೪-೨, ೧೨) ಮತ್ತು ಧೂಳು ಇಲ್ಲದವರು (೬-೬೬-೨) ಭಯಂಕರರೂಪವುಳ್ಳವರು (೧-೧೯-೪) ಸಿಡುಕುಸ್ವಭಾವದವರು (೭-೫೬-೮) ಭಯಂಕರರು (೫-೫೬-೨, ೩, ೭-೫೮-೨) ದುಷ್ಟಮೃಗಗಳಂತೆ ಭೀಕರರು (೨-೩೪-೧) ಮಕ್ಕಳಂತೆ ಅಥವಾ ಕರುಗಳಂತೆ ಕ್ರೀಡಾಸಕ್ತರು (೧-೧೬೬-೨, ೭-೫೬-೧೬, ೧೦-೭೮-೬) ಕಪ್ಪಾದ ಬೆನ್ನುಗಳುಳ್ಳ ಹಂಸಗಳಂತಿದ್ದಾರೆ (೭-೫೯-೭) ಅಯೋಮಯವಾದ ಕೋರೆದಾಡೆಗಳುಳ್ಳ ಕಾಡುಹಂದಿಗಳಂತೆಯೂ (೧-೮೮-೫) ಸಿಂಹಗಳಂತೆಯೂ (೧-೬೪-೮) ಇದ್ದಾರೆ.

ಅವರು ಗಟ್ಟಿಯಾಗಿ ಧ್ವನಿಮಾಡುತ್ತಾರೆ (೧-೧೬೯-೭ ಇತ್ಯಾದಿ) ಆ ಧ್ವನಿಯೇ ಗುಡುಗು (೧-೨೩-೧೧) ಮತ್ತು ಅದು ಗಾಳಿಬೀಸುವ ಶಬ್ದವು (೭-೫೬-೩) ಅವರು ಬಂದರೆ ಆಕಾಶವು ಭಯದಿಂದ ಅರಚುತ್ತದಯೋ ಎನ್ನುವಂತಿದೆ (೮-೭-೨೬) ಪರ್ವತಗಳನ್ನು ಕಂಪಿಸುವಂತೆಯೂ, ಭೂಮಿ ಅಥವಾ ಎರಡು ಲೋಕಗಳನ್ನು ನಡುಗುವಂತೆಯೂ ಮಾಡುತ್ತಾರೆ ರಥನೇಮಿಗಳಿಂದ ಪರ್ವಗಳನ್ನು ಅಥವಾ ಬಂಡೆಗಳನ್ನು ಚೂರುಚೂರುಮಾಡುತ್ತಾರೆ (೧-೬೪-೧೧, ೫-೫೨-೯) ಅವರು ಗಾಳಿಯಿಂದ ಸಹಿತರಾಗಿ ಬಂದು ಪರ್ವತಗಳನ್ನು ಕಂಪಿಸುವಂತೆ ಮಾಡುತ್ತಾರೆ (೮-೨-೪) ವೃಕ್ಷಗಳನ್ನು ಉರುಳಿಸಿ ಕಾಡಾನೆಗಳಂತೆ ಕಾಡುಗಳನ್ನು ಭಕ್ಷಿಸುತ್ತಾರೆ (೧-೩೯-೫, ೧-೬೪-೭) ಕಾಡುಗಳು ಅವರಿಗೆ ಹೆದರಿ ನೆಲಕ್ಕೆ ಬಗ್ಗುತ್ತವೆ. (೫-೬೦-೨) ಪರ್ವತಗಳಂತೆ ಅಪ್ರತಿಹತರಾಗಿ ಸ್ವರ್ಗ ಮತ್ತು ಭೂಮಿಗಳ ಪ್ರಾಣಿಗಳನ್ನು ಕೆಳಕ್ಕೆ ಎಸೆಯುತ್ತಾರೆ (೧-೬೪ ೩). ಸರ್ವಪ್ರಾಣಿಗಳೂ ಅವರಿಗೆ ಹೆದರುತ್ತವೆ (೧-೮೫-೮) ಬಿರುಗಾಳಿಯಂತೆ ವೇಗವಾಗಿ ಚಲಿಸುತ್ತಾರೆ (೧೦-೭೮-೩). ಧೂಳನ್ನು ಸುಳಿಯರೂಪದಲ್ಲಿ ಮೇಲಕ್ಕೆ ಎಬ್ಬಿಸುತ್ತಾರೆ (೧-೬೪-೧೨) ಗಾಳಿಯನ್ನು ಅಥವಾ ಗಾಳಿಯ ಶಬ್ದವನ್ನು ಉಂಟುಮಾಡುತ್ತಾರೆ (೭-೫೬-೩) ಗಾಳಿಯ ಜತೆಯಲ್ಲಿ ಬರುತ್ತಾರೆ (೮-೭ ೩,೪,೧೭) ಅದನ್ನು ತಮ್ಮ ಅಶ್ವವನ್ನಾಗಿ ಮಾಡಿಕೊಳ್ಳುತ್ತಾರೆ (೫ ೫೮-೭)

ಮಳೆಗರೆಯುವುದೇ ಅವರ ಕಾರ್ಯಗಳಲ್ಲಿ ಮುಖ್ಯವಾದುದು ಮಳೆಯು ಅವರ ಉಡುಪು (೫ ೫೭-೪). ಅವರು ಸಮುದ್ರದಿಂದ ಮೇಲಕ್ಕೆ ಎದ್ದು ಮಳೆಯನ್ನು ಸುರಿಸುತ್ತಾರೆ (೧-೩೮ ೯) ಎರಡು ಪ್ರಪಂಚಗಳಲ್ಲಿಯೂ ಮಳೆ ಸುರಿಸುತ್ತಾ ಬೀಸುತ್ತಾರೆ (೧-೬೪-೬, ೮-೭-೧೬). ಮಳೆಯು ಅವರನ್ನು ಅನುಸರಿಸುತ್ತದೆ (೫-೫೩-೧೦). ನೀರನ್ನು ತರುತ್ತಾರ ಮತ್ತು ಮಳೆಯನ್ನುಂಟುಮಾಡುತ್ತಾರೆ (೫-೫೮-೩) ಮಳೆಯಿಂದ ತಮ್ಮ ಪ್ರಕಾಶವನ್ನು ಮರೆಮಾಡಿಕೊಳ್ಳುತ್ತಾರೆ (೫ ೫೯-೧) ಸೂರ್ಯನ ಕಣ್ಣನ್ನು ಮಳೆಯಿಂದ ಮುಚ್ಚುತ್ತಾರೆ (೫-೫೯-೫). ಮಳೆಗರೆದಾಗ ಮೋಡಗಳಿಂದ ಕತ್ತಲನ್ನುಂಟುಮಾಡುತ್ತಾರೆ (೧-೩೮-೯). ಗಾಳಿಯೊಡನೇ ವೇಗವಾಗಿ ಚಲಿಸುತ್ತಾ ಹಿಮವನ್ನೆರಚುತ್ತಾರೆ (೮-೭-೪) ಅಂತರಿಕ್ಷದ ಬಾನೆ, ಮೋಡ (೫-೫೩ ೬, ೫-೫೯-೮) ಮತ್ತು ಪರ್ವತಪ್ರವಾಹಗಳು ನೀರುಸುರಿಯುವಂತೆ ಮಾಡುತ್ತಾರೆ (೫-೫೯-೭). ಅವರು ಧಾವಿಸುವಾಗ ನೀರು ಪ್ರವಹಿಸುತ್ತದೆ (೫-೫೮-೬) ಅವರ ಈ ಕಾರ್ಯದಿಂದ ಭೂಲೋಕದ ನದಿಯೊಂದಕ್ಕೆ ಮರುದ್ವೃಧಾ (ಮರುತ್ತುಗಳಿಂದ ಅಭಿವೃದ್ಧಿಪಡಿಸಲ್ಪಟ್ಟುದು (೧೦-೭೫-೫) ಎಂಬ

ಹೆಸರು ಬಂದಿದೆ. ರುದ್ರಪುತ್ರರ ಬೆವರೇ ಮಳೆಯಾಯಿತು (೫-೫೮ ೭). ಮರುತ್ತುಗಳಿಂದ ಸೃಷ್ಟವಾದ ವೃಷ್ಟಿಯು ಆಲಂಕಾರಿಕವಾಗಿ ಕ್ಷೀರ (೧-೧೬೬-೩) ಘೃತ (೧-೮೫-೩, ೧೦ ೭೮-೪) ಕ್ಷೀರ ಮತ್ತು ಘೃತ (೧-೬೪-೬) ಎನಿಸಿಕೊಂಡಿದೆ ವಸಂತಕಾಲ (ಮಧುವನ್ನೇ) ಸುರಿಸುತ್ತಾರೆ (೧-೮೫-೧೧) ಅಥವಾ ಭೂಮಿಯನ್ನು ಮಧುವಿನಿಂದ ತೋಯಿಸುತ್ತಾರೆ (೫ ೫೪ ೮) ಸಮುದ್ರದಿಂದ ನೀರನ್ನು ಆಕಾಶಕ್ಕೆ ಎತ್ತಿ ಅಲ್ಲಿಂದ ಮಳೆಯ ರೂಪದಲ್ಲಿ ಭೂಮಿಯ ಮೇಲೆ ಸುರಿಸುತ್ತಾರೆ (ಅ. ವೇ ೪-೨೭ ೪). ಅವರು ಸುರಿಸುವ ಮಳೆಯ ಜತೆಯಲ್ಲಿ ಯಾವಾಗಲೂ ಮಿಂಚು, ಗುಡುಗುಗಳು ಇದ್ದೇ ಇರುತ್ತವೆ ನೀರನ್ನು ಸುರಿಸುವ ಇಚ್ಛೆಯಿಂದ ಮರುತ್ತುಗಳು ಘರ್ಜಿಸುತ್ತಾ ರಭಸದಿಂದ ನುಗ್ಗುತ್ತಾರೆ (೫-೫೪-೩). ತಮ್ಮ ಸಾಮರ್ಥ್ಯದಿಂದ ಗಾಳಿ, ಮಿಂಚು, ಸಿಡಿಲುಗಳನ್ನು ಉಂಟುಮಾಡುತ್ತಾರೆ ಕೆಚ್ಚಲಿನಿಂದ ಸ್ವರ್ಗೀಯ ವಸ್ತುಗಳನ್ನು ದೋಹನಮಾಡಿ ಭೂಮಿಯನ್ನು ಹಾಲಿನಿಂದ ತುಂಬಿಸುತ್ತಾರೆ (೧-೬೪ ೫) ಅವರಿಂದ ದುಗ್ಧನಾದ ಚಿಲುಮೆಯು ಘರ್ಜಿಸುತ್ತದೆ (೧ ೬೪ ೬) ಅವರಿಂದ ಉದಕವು ಸುರಿಸಿದಾಗ ಆಕಾಶವು ಕೆಂಬಣ್ಣದ ವೃಷಭವು ಗುಟುರುಹಾಕುತ್ತದೆ (೫ ೫೮-೬) ಅಶ್ವವು ನೀರನ್ನು ಸೃಜಿಸುವಂತೆ ಮಾಡುತ್ತಾರೆ (೧-೬೪ ೬) ಆಕಾಶದ ಮಳೆಯನ್ನು ಅನುಗ್ರಹಿಸಿ, ಅಶ್ವದಿಂದ ಉತ್ಪನ್ನವಾದ ಪ್ರವಾಹಗಳು ಚೆನ್ನಾಗಿ ಪ್ರವಹಿಸುವಂತೆ ಮಾಡುತ್ತಾರೆ (೫-೮೩-೬) ಅಶ್ವದೊಡನೆ ಸೇರಿ ನೀರನ್ನುಂಟುಮಾಡುವಾಗ, ಮರುತ್ತುಗಳು ಸ್ವರ್ಣವರ್ಣದವರಾಗುತ್ತಾರೆ (೨-೩೪-೧೩ ಮೇಘಗಳು ಧ್ವನಿಗೈಯ್ಯುವಾಗ ಪ್ರವಾಹಗಳು ಮರುತ್ತುಗಳ ರಥನೇಮಿಗಳ ಧ್ವನಿಯನ್ನು ಪ್ರತಿಧ್ವನಿಸುತ್ತವೆ. (೧-೧೬೮ ೮) ಇಂದ್ರನು ಸುರಿಸುವ ನೀರಿಗೆ **ಮರುತ್ವತೀಃ** (ಮರುದ್ದೇವತೆಗಳಿಂದ ಸಹಿತವಾದವು) ಎಂದು ಹೆಸರು (೧-೮೦-೪) ವೃಷ್ಟಿಕಾರಕರೆಂಬ ಅರ್ಥದಲ್ಲಿಯೇ ಅವರಿಗೆ **ಪುರುದ್ರಪ್ಸಾಃ** (೫ ೫೭ ೫) ಅಥವಾ ದ್ರಪ್ಸಿನಃ (೧-೬೪-೨) ಹೆಚ್ಚಾದ ಜಲಬಿಂದುಗಳುಳ್ಳವರು ಮತ್ತು ಸುದಾನವಃ (ಚೆನ್ನಾಗಿ ನೀರಿನಲ್ಲಿ ನೆನೆದಿರುವವರು) ಎಂಬ ಹೆಸರುಗಳಿವೆ ಅವರು ಶಾಖವನ್ನು ಕಡಿಮೆ ಮಾಡುತ್ತಾರೆ (೫-೫೪-೧) ಆದರೆ ಅವರೇ ಕತ್ತಲನ್ನು ಹೋಗಲಾಡಿಸಿ (೭ ೫೬-೨೦) ಬೆಳಕನ್ನುಂಟುಮಾಡಿ (೧ ೮೬ ೧೦) ಸೂರ್ಯನಿಗೆ ದಾರಿಮಾಡುತ್ತಾರೆ (೮-೭-೮) ವಾಯುವಿನ ಪರಿಮಿತಿಯನ್ನು ಗೊತ್ತುಮಾಡಿದಾರೆ. (೫ ೫೫ ೨) ಭೂಭಾಗಗಗನ್ನು ಮತ್ತು ತೇಜೋವಿಶಿಷ್ಟವಾದ ಆಕಾಶಭಾಗಗಳನ್ನು ವಿಸ್ತರಿಸಿ ಎರಡು ಲೋಕಗಳನ್ನು ಪ್ರತ್ಯೇಕಿಸಿದಾರೆ (೮ ೮೩-೯,೧೦)

ಗಾಳಿಯಲ್ಲಿ ಕೇಳಿಬರುವ ಧ್ವನಿಯಿಂದಲೇ ಅವರನ್ನು ಗಾಯಕರೆಂದು ಕರೆದಿರಬಹುದು (೫-೫೨-೧, ೫-೬೦-೮, ೫-೩೫-೯) ಅವರು ಸ್ವರ್ಗಲೋಕದ ಗಾಯಕರು (೫-೫೭-೫) ಅವರು ಗಾನವನ್ನು ಮಾಡುತ್ತಾರೆ (೧-೧೯-೪; ೧-೧೬೬-೭) ಅವರು ಹಾಡುತ್ತಾ ಸೂರ್ಯನು ಪ್ರಕಾಶಿಸುವಂತೆ ಮಾಡಿದರು. (೮-೨೯ ೧೦) ಕೊಳಲು ಊದುತ್ತಾ ಪರ್ವತವನ್ನು ಸೀಳಿದರು (೧-೮೫-೧೦) ಇಂದ್ರನು ಅಹಿಯನ್ನು ವಧಿಸಿದಾಗ ಮರುತ್ತುಗಳು ಅವನಿಗಾಗಿ ಗಾನಮಾಡಿ ಸೋಮರಸವನ್ನು ಸಿದ್ಧಪಡಿಸಿದರು (೫-೨೯ ೨; ೫-೩೦-೬) ಗಾನಮಾಡಿ ಇಂದ್ರನಿಗೆ ಸಾಮರ್ಥ್ಯವನ್ನುಂಟುಮಾಡಿದರು (೧-೮೫-೨) ಅವರ ಗಾನವೆಂದರೆ ಮುಖ್ಯವಾಗಿ ಗಾಳಿಯಲ್ಲಿ ಕೇಳಿಬರುವ ಶಬ್ದ (೪ ೨೨-೪) ಆದರೂ ಅದು ಸ್ತುತಿಯೆಂದು ಭಾವಿಸಲ್ಪಟ್ಟಿದೆ (೩ ೧೪-೪) ಇಂದ್ರಸಹಿತರಾಗಿರುವಾಗ ಅವರು ಋತ್ವಿಜರೆಂದು ಆಹೂತರಾಗುತ್ತಾರೆ (೫-೨೯-೩) ಮತ್ತು ಋತ್ವಿಜರಿಗೆ ಹೋಲಿಸಲ್ಪಟ್ಟಿದಾರೆ (೧೦-೭೮-೧). ಅವರೇ ಮೊದಲು ಯಾಗಮಾಡಿದವರು (೨ ೩೬-೨). ಶಿಷ್ಯರ ಮನೆಗಳಲ್ಲಿ ಅಗ್ನಿಯನ್ನು ಶುದ್ಧಿಮಾಡಿದವರೂ ಇವರೇ. ಅಗ್ನಿಯನ್ನು ಉದ್ದೀಪ್ತಿಗೊಳಿಸಿದವರು ಭೃಗುಗಳು (೧೦-೧೨೨-೫). ಇತರ ಅನೇಕ ದೇವತೆಗಳಂತೆ ಇವರೂ ಸೋಮಪಾನಮಾಡಿದವರೆಂದು (೨-೩೬-೨; ೮-೮೩ ೯, ೧೦, ೧೧, ೧೨ ಇತ್ಯಾದಿ) ಹೇಳಲ್ಪಟ್ಟಿದಾರೆ

ಗುಡುಗು, ಮಳೆ ಮತ್ತೂ ಇವರೂ ಒಂದು ಎಂಬ ಭಾವನೆ ಇರುವುದರಿಂದ ಸ್ವಭಾವವಾಗಿ ಇವರು ಇಂದ್ರನ ಸ್ನೇಹಿತರು. ಸಹೋದ್ಯೋಗಿಗಳಾಗಿ ಅವನೊಡನೆ ನಿಕಟಬಾಂಧವ್ಯವುಳ್ಳವರಾಗಿದ್ದಾರೆ. ತಮ್ಮ ಸ್ತುತಿ ಗಾನ ಇವುಗಳಿಂದ (೧.೧೬೫ ೧೧ ಇತ್ಯಾದಿ) ಇಂದ್ರನ ಶಕ್ತಿಸಾಮರ್ಥ್ಯಗಳನ್ನು ಹೆಚ್ಚಿಸುತ್ತಾರೆ (೩-೩೫ ೯, ೭-೧೭-೧೧). ವೃತ್ರನೊಡನೆ ಯುದ್ಧದಲ್ಲಿ ಸಾಧಾರಣವಾಗಿ ಮರುತ್ತುಗಳೇ ಅವನಿಗೆ ಸಹಾಯಕರು (೮-೬೫-೨, ೩ ; ೧೦ ೧೧೨-೩) ತ್ರಿತ ಮತ್ತು ಇಂದ್ರರಿಗೆ ಅವರು ವೃತ್ರವಧೆಯಲ್ಲಿ ಸಹಾಯಮಾಡುತ್ತಾರೆ (೮-೭-೨೪) ವೃತ್ರವಧವನ್ನು ವರ್ಣಿಸುವ ಸೂಕ್ತವನ್ನು ಗಾನಮಾಡುವಂತೆ ಪ್ರಾರ್ಥಿತರಾಗಿದಾರೆ (೮-೭೮-೧, ೨, ೩). ಅಹಿ ಮತ್ತು ಶಂಬರನೊಡನೆ ಇಂದ್ರನು ಮಾಡಿದ ಯುದ್ಧಗಳಲ್ಲಿ ಮರುತ್ತುಗಳು ಅವನಿಗೆ ಸಹಾಯಮಾಡಿದರು (೩-೪೭-೩,೪) ಮರುತ್ಸಹಿತನಾಗಿಯೇ ಇಂದ್ರನು ಬೆಳಕು (೮-೬೫-೪) ಮತ್ತು ಗೋವುಗಳನ್ನು(೧-೬-೫) ಪಡೆದನು. ಮತ್ತು ಆಕಾಶಕ್ಕೆ ಆಧಾರಭೂತನಾದನು (೭-೪೭-೫) ವಾಸ್ತವವಾಗಿ ನೋಡಿದರೆ ಇವರ ಸಹಾಯದಿಂದಲೇ ಇಂದ್ರನು ತನ್ನ ಎಲ್ಲಾ ಸಾಹಸಕಾರ್ಯಗಳನ್ನೂ ಮಾಡಿದಾನೆ (೧-೧೦೦, ೧೦೧, ೧೬೫ ಮತ್ತು ೧೦-೬೫ ನೆಯ ಸೂಕ್ತಗಳು) ಕೆಲವು ಸಂದರ್ಭಗಳಲ್ಲಿ ಮರುದ್ದೇವತೆಗಳೇ ಈ ಸಾಹಸ ಕಾರ್ಯಗಳಲ್ಲಿ ಇಂದ್ರನಿಗಿಂತ ಹೆಚ್ಚು ಸ್ವತಂತ್ರರು ಇಂದ್ರನಿಂದ ಸಹಿತರಾಗಿ ಮರುತ್ತುಗಳು ವೃತ್ರನನ್ನು ಪ್ರಹರಿಸುತ್ತಾರೆ (೧-೨೩-೯) ವೃತ್ರಾಸುರನ ಕೀಲುಗಳನ್ನು ಬೇರೆಮಾಡಿದರು (೮-೭-೨೩) ಅಪಹೃತವಾದ ಗೋವುಗಳನ್ನು ಕಂಡುಹಿಡಿದರು (೨-೩೪-೧) ಇತರ ದೇವತೆಗಳಂತೆ ಇವರಿಗೂ ಇಂದ್ರನೇ ನಾಯಕನು (೧ ೨೩-೮ ಇತ್ಯಾದಿ) ಇಂದ್ರನಿಂದ ಸಹಿತರಾಗಿಯೇ ಇವರು ಇರುವರು (೧೦-೧೨೮-೨) ಅವರು ಇಂದ್ರನಿಗೆ ಪುತ್ರಸದೃಶರು (೧-೧೦೦-೫)ಅವನ ಭ್ರಾತೃಗಳೆನಿಸಿಕೊಂಡಿದಾರೆ (೧-೧೭೦-೨) ಒಂದೆರಡು ಸಲಮಾತ್ರ ಮರುತ್ತುಗಳು ಇಂದ್ರನ ಕೈಬಿಟ್ಟರೆಂದು ಹೇಳಿದೆ ಅಹಿಯೊಡನೆ ಅವನೊಬ್ಬನೇ ಯುದ್ಧಮಾಡುವಂತೆ ಸನ್ನಿವೇಶವೊದಗುವಂತೆ ಮಾಡಿ (೧-೧೬೫-೬) ಅವನನ್ನು ಒಂಟಿಯಾಗಿ ಬಿಟ್ಟುಬಿಟ್ಟರು (೮-೭-೩೧) ಒಂದು ಋಕ್ಕಿನಲ್ಲಿ ಮಾತ್ರ ಇಂದ್ರನಿಗೂ ಇವರಿಗೂ ದ್ವೇಷವೆಂದು ಉಕ್ತವಾಗಿದೆ ಮರುತ್ತುಗಳು– ಎಲೈ ಇಂದ್ರನೇ, ನಮ್ಮನ್ನು ವಧಿಸಲು ಇಚ್ಛಿಸುವುದೇಕೆ? ಯುದ್ಧದಲ್ಲಿ ನಮ್ಮನ್ನು ವಧಿಸಬೇಡ ಎಂದು ಇಂದ್ರನಿಗೆ ಹೇಳಿದಾರೆ (೧-೧೭೦-೨ , ೧ ೧೭೧-೬) ತೈತ್ತರೀಯಬ್ರಾಹ್ಮಣದಲ್ಲಿ (ತೈ ಬ್ರಾ ೨-೭ ೧೧-೧) ಇಂದ್ರನಿಗೂ ಮರುತ್ತುಗಳಿಗೂ ಘರ್ಷಣೆಯಾಯಿತೆಂದು ಹೇಳಿದೆ.

ಮರುತ್ತುಗಳು ಇಂದ್ರನೊಡನೆ ಇಲ್ಲದಿರುವ ಕಾಲದಲ್ಲಿ ಅವರಲ್ಲಿ ಹಿಂಸಾತ್ಮಕವಾದ ಗುಣಗಳು ಕಂಡುಬರುತ್ತವೆ. ಈ ವಿಷಯದಲ್ಲಿ ಅವರು ತಮ್ಮ ತಂದೆಯಾದ ರುದ್ರನ ಗುಣಗಳನ್ನು ಪ್ರದರ್ಶಿಸುತ್ತಾರೆ. ಅವರನ್ನು ಸ್ತುತಿಸುವ ಜನರನ್ನೂ ಸಿಡಿಲು ತೊಂದರೆಪಡಿಸದಂತೆಯೂ ಅವರ ದುರಾಗ್ರಹವು ಅವರನ್ನು ಮುಟ್ಟದಂತೆಯೂ ಮಾಡಬೇಕೆಂದು ಪ್ರಾರ್ಥಿತರಾಗಿದಾರೆ (೭ ೫೬-೯). ಅವರು ಎಸೆಯುವ ಬಾಣ ಮತ್ತು ಕಲ್ಲುಗಳನ್ನು(೧-೧೭೨ ೨) ಸಿಡಿಲು (೭ ೫೭-೪) ಗೋವು ಮತ್ತು ಮನುಷ್ಯರನ್ನು ವಧಿಸುವ ವಜ್ರಾಯುಧ (೭-೫೬-೧೭) ಮೊದಲಾದ ಆಯುಧಗಳಿಂದ ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿತರಾಗಿದಾರೆ ಅವರಿಂದ ಕೆಡಕುಂಟಾಗಬಹುದು (೧ ೩೯-೮) ಅವರು ಕುಪಿತರಾಗಬಾರದೆಂದು ಬೇಡಲಾಗಿದೆ. (೧-೭೧-೧ , ೭-೫೮-೫). ಅವರಿಗೆ ಸರ್ಪಗಳಂತೆ ಕೋಪಬರುತ್ತದೆ (೧ ೬೪-೮,೯) ರುದ್ರನಂತೆ ಇವರಿಂದಲೂ ಸಿಂಧು. ಅಸಿಕ್ನಿ ಎಂಬ ನದಿಗಳೂ, ಸಮುದ್ರಗಳೂ ಮತ್ತು ಪರ್ವತಗಳಲ್ಲಿರುವ ಓಷಧಿಗಳೂ ಪ್ರಾರ್ಥಿತರಾಗಿದಾರೆ (೮-೨೦-೨೩,೨೪,೨೫–೨೬) ಶುದ್ಧವೂ ಅನುಕೂಲವೂ ಸುಖಕರವೂ ಆದ ಚಿಕಿತ್ಸಾವಿಧಾನಗಳು ಮರುತ್ಸಹಿತನಾದ ರುದ್ರನಲ್ಲಿವೆ (೨-೨೩-೧೩) ಅದನ್ನು ಮರುತ್ತುಗಳು ಮಳೆಯರೂಪದಲ್ಲಿ ಕೊಡುತ್ತಾರೆ (೫ ೫೩-೧೪) ಆದುದರಿಂದ ಓಷಧಿ ಎಂದರೆ ಇಲ್ಲಿ ಉದಕವೇ ಇರಬೇಕು. ಅಗ್ನಿಯಂತೆ ಇವರಿಗೂ ಪಾವಕ (ಶುದ್ಧಿಮಾಡುವವರು) ಎಂಬ ವಿಶೇಷಣ ಶಬ್ದಪ್ರಯೋಗವಿದೆ. (೭-೫೬-೧೨ ಇತ್ಯಾದಿ)

ಮೇಲೆ ಹೇಳಿದ ಗುಣಗಳಿಂದ ಮರುತ್ತುಗಳು ಚಂಡಮಾರುತದ ಅಥವಾ ರಭಸದಿಂದ ಬೀಸುವ ಬಿರುಗಾಳಿಯ ದೇವತೆಗಳೆಂಬುದು ಸ್ಪಷ್ಟವಾಗುತ್ತದೆ. ಮರುತ್ ಶಬ್ದಕ್ಕೆ ಗಾಳಿ ಎಂಬ ಸಾಮಾನ್ಯಾರ್ಥಮಾಡುವುದು ಆಧುನಿಕಸಂಸ್ಕೃತ ಭಾಷೆಯಲ್ಲಿ ಯುಕ್ತವೆಂದು ತೋರಿದರೂ ವೇದಗಳಲ್ಲಿ ಮೇಲೆ ಕಂಡ ಗುಣಗಳನ್ನು ಅದರಲ್ಲಿ ವಿವರಿಸಿದಂತೆ ಆಗುವುದಿಲ್ಲ.

---

# ಐವತ್ತಆರನೆಯ ಸೂಕ್ತವು

ಸಾಯಣಭಾಷ್ಯಂ

**ಅಥ ಚತುರ್ಥೇಽನುವಾಕೇ ಪಂಚದಶ ಸೂಕ್ತಾನಿ । ತತ್ರ ಕ ಈಂ ವ್ಯಕ್ತಾ ಇತಿ ಪಂಚವಿಂಶತ್ಯೃಚಂ ಪ್ರಥಮಂ ಸೂಕ್ತಂ ವಸಿಷ್ಠಸ್ಯಾರ್ಷಂ ಮರುದ್ದೇವತಾಕಂ । ಆದ್ಯಾ ಏಕಾದಶ ದ್ವಿಪದಾ ವಿಂಶತ್ಯಕ್ಷರಾ ವಿರಾಜಃ ಶಿಷ್ಟಾಶ್ಚತುರ್ದಶ ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಕ ಈಂ ಪಂಚಾಧಿಕಾ ಮಾರುತಂ ಹಾದ್ಯಾ ಏಕಾದಶ ದ್ವಿಪದಾ ಇತಿ ॥ ದಶರಾತ್ರೇ ಚತುರ್ಥೇಽಹನ್ಯಾಗ್ನಿಮಾರುತೇ ಶಸ್ತ್ರ ಇದಂ ಮಾರುತನಿವಿದ್ಧಾನಂ । ಸೂತ್ರ್ಯತೇ ಹಿ । ವೈಶ್ವಾನರಸ್ಯ ಸುಮತೌ ಕ ಈಂ ವ್ಯಕ್ತಾ ನರಃ । ಆ ೮.೮ । ಇತಿ ॥**

**ಅನುವಾದವು**—ಏಳನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಹದಿನೈದು ಸೂಕ್ತಗಳಿರುವುವು ಅವುಗಳಲ್ಲಿ **ಕ ಈಂ ವ್ಯಕ್ತಾಃ** ಎಂಬ ಈ ಸೂಕ್ತವು ಮೊದಲನೆಯದು ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಮರುತ್ತುಗಳು ದೇವತೆಯು ಈ ಸೂಕ್ತದ ಮೊದಲನೆಯ ಹನ್ನೊಂದು ಋಕ್ಕುಗಳು ಇಪ್ಪತ್ತು ಅಕ್ಷರಗಳುಳ್ಳ ದ್ವಿಪದಾ ವಿರಾಟ್ ಎಂಬ ಛಂದಸ್ಸಿನವು ಉಳಿದ ಹದಿನಾಲ್ಕು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು ಅನುಕ್ರಮಣಿಕೆಯಲ್ಲಿ **ಕ ಈಂ ಪಂಚಾಧಿಕಾ ಮಾರುತಂ ಹಾದ್ಯಾ ಏಕಾದಶ ದ್ವಿಪದಾ** ಎಂದು ಹೇಳಿರುವುದು. ದಶರಾತ್ರನೆಂಬ ಯಾಗದ ನಾಲ್ಕನೆಯ ದಿವಸ ಆಗ್ನಿಮಾರುತಶಸ್ತ್ರಮಂತ್ರಗಳ ಮಧ್ಯದಲ್ಲಿ ಈ ಸೂಕ್ತವನ್ನು ಮಾರುತನಿವಿದ್ಧಾನಸೂಕ್ತವನ್ನಾಗಿ ಸೇರಿಸಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ವೈಶ್ವಾನರಸ್ಯ ಸುಮತೌ ಕ ಈಂ ವ್ಯಕ್ತಾ ನರಃ** ಎಂಬ ಸೂತ್ರದಿಂದ (ಆ. ೮-೮) ವಿವೃತವಾಗಿರುವುದು.

## ಸೂಕ್ತ—೫೬

ಮಂಡಲ—೭ ॥ ಅನುವಾಕ—೪ ॥ ಸೂಕ್ತ —೫೬ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೨೩, ೨೪, ೨೫, ೨೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೫ ॥
ಋಷಿಃ—ವಸಿಷ್ಠಃ ॥
ದೇವತಾ— ಮರುತಃ ॥
ಛಂದಃ—೧.೧೧ ದ್ವಿಪದಾ । ೧೨—೨೫ ತ್ರಿಷ್ಟುಪ್ ॥

ಸಂಹಿತಾಪಾಠಃ

**ಕ ಈಂ ವ್ಯಕ್ತಾ ನರಃ ಸನೀಳಾ ರುದ್ರಸ್ಯ ಮರ್ಯಾ ಅಧಾ ಸ್ವಶ್ವಾಃ ॥ ೧ ॥**

ಪದಪಾಠಃ

**ಕೇ । ಈಂ । ವಿಽಅಕ್ತಾಃ । ನರಃ । ಸಽನೀಳಾಃ । ರುದ್ರಸ್ಯ । ಮರ್ಯಾಃ । ಅಧ । ಸುಽಅಶ್ವಾಃ ॥ ೧ ॥**

ಸಾಯಣಭಾಷ್ಯಂ

ವ್ಯಕ್ತಾಃ ಕಾಂತಿಯುಕ್ತಾ ನರೋ ನೇತಾರಃ ಸನೀಳಾಃ ಸಮಾನೌಕಸೋ ರುದ್ರಸ್ಯ ಮಹಾದೇವಸ್ಯ ಪುತ್ರಾ ಮರ್ಯಾ ಮರ್ಯೇಭ್ಯೋ ನೃಭ್ಯೋ ಹಿತಾ ಅಧಾಪಿ ಚ ಸ್ವಶ್ವಾಃ ಶೋಭನಾಶ್ವಾ ಈಮಿಮ ಏವಂಭೂತಾಃ ಕೇ ಭವಂತೀತಿ ರೂಪಾತಿಶಯಾದೃಷಿರಾಶ್ಚರ್ಯೇಣಾಹ ॥

ಪ್ರತಿಪದಾರ್ಥ

**ಸನೀಳಾಃ**—ಸಮಾನವಾದ ವಾಸಸ್ಥಾನವುಳ್ಳವರೂ, | **ವ್ಯಕ್ತಾಃ**—ಕಾಂತಿಯುತರೂ | **ನರಃ**—ಮಾರ್ಗದರ್ಶಕರೂ | **ರುದ್ರಸ್ಯ**—ರುದ್ರಪುತ್ರರೂ | **ಮರ್ಯಾಃ**—ಮಾನವರಿಗೆ ಹಿತಕಾರಿಗಳೂ | **ಅಧ**—ಮತ್ತು | **ಸ್ವಶ್ವಾಃ**—ಉತ್ತಮವಾದ ಅಶ್ವವುಳ್ಳವರೂ ಆದ | **ಈಂ**—ಈ ದಿವ್ಯವ್ಯಕ್ತಿಗಳು | **ಕೇ**—ಯಾರಾಗಿರಬಹುದು ?

ಭಾವಾರ್ಥ

ಸಮಾನವಾದ ವಾಸಸ್ಥಾನವುಳ್ಳವರೂ, ಕಾಂತಿಯುತರೂ, ಮಾರ್ಗದರ್ಶಕರೂ, ರುದ್ರಪುತ್ರರೂ, ಮಾನವರಿಗೆ ಹಿತಕಾರಿಗಳೂ ಮತ್ತು ಉತ್ತಮವಾದ ಅಶ್ವವುಳ್ಳವರೂ ಆದ ಈ ದಿವ್ಯವ್ಯಕ್ತಿಗಳು ಯಾರಾಗಿರಬಹುದು ?

English Translation

Who are these resplendent chiefs, the dwellers in one abode, the sons of Rudra, friends of man, at present well mounted ?

ಸಂಹಿತಾಪಾಠಃ

ನಕಿರ್ಹ್ಯೇಷಾಂ ಜನೂಂಷಿ ವೇದ ತೇ ಅಂಗ ವಿದ್ರೇ ಮಿಥೋ ಜನಿತ್ರಂ ॥ ೨ ॥

ಪದಪಾಠಃ

ನಕಿಃ । ಹಿ । ಏಷಾಂ । ಜನೂಂಷಿ । ವೇದ । ತೇ । ಅಂಗ । ವಿದ್ರೇ । ಮಿಥಃ । ಜನಿತ್ರಂ ॥ ೨ ॥

ಸಾಯಣಭಾಷ್ಯಂ

ಏಷಾಂ ಮರುತಾಂ ಜನೂಂಷಿ ಜನ್ಮಾನಿ ನಕಿರ್ಹಿ ವೇದ । ಕಶ್ಚಿದಪಿ ನ ಖಲು ಜಾನಾತಿ । ತೇ ತಾದೃಶಾ ಮರುತೋ ಮಿಥಃ ಪರಸ್ಪರಂ ಜನಿತ್ರಂ ರುದ್ರಪೃಶ್ನಿಭ್ಯಾಂ ಸಕಾಶಾತ್ಪ್ರಾದುರ್ಭೂತಂ ಸ್ವಕೀಯಂ ಜನ್ಮಾಂಗ ವಿದ್ರೇ । ಸ್ವಯಮೇವ ವಿದಂತಿ ॥

ಪ್ರತಿಪದಾರ್ಥ

**ಏಷಾಂ**—ಈ ಮರುತ್ತುಗಳ | **ಜನೂಂಷಿ**—ಜನ್ಮಗಳನ್ನು | **ನಕಿಃ ಹಿ ವೇದ**—ಯಾರೂ ಅರಿತಿಲ್ಲ | **ತೇ**—ಮಹದ್ರೂಪವುಳ್ಳ ಅದೇ ಮರುತ್ತುಗಳು | **ಮಿಥಃ**—ತಾವೇ ಪರಸ್ಪರ | **ಜನಿತ್ರಂ**—ರುದ್ರ ಮತ್ತು ಪೃಶ್ನಿಗಳ ಯೋಗದಿಂದ ಉತ್ಪನ್ನವಾದ ತಮ್ಮ ಜನ್ಮವನ್ನು | **ಅಂಗ**—ನಿಶ್ಚಯವಾಗಿಯೂ | **ವಿದ್ರೇ**—ಅರಿತಿದ್ದಾರೆ.

ಭಾವಾರ್ಥ

ಈ ಮರುತ್ತುಗಳ ಉತ್ಪತ್ತಿಕ್ರಮವನ್ನು ಅರಿತವರಾರೂ ಇಲ್ಲ. ಮಹತ್ಸ್ವರೂಪವುಳ್ಳ ಇದೇ ಮರುತ್ತುಗಳು ರುದ್ರ ಮತ್ತು ಪೃಶ್ನಿಗಳ ಯೋಗದಿಂದ-ಉತ್ಪನ್ನವಾದ ತಮ್ಮ ಜನ್ಮವನ್ನು ತಾವೇ ಪರಸ್ಪರ ಅರಿತಿದ್ದಾರೆ.

English Translation

No one indeed knows their origin, they alone respectively know their birth.

ಸಂಹಿತಾಪಾಠಃ

ಅಭಿ ಸ್ವಪೂಭಿರ್ಮಿಥೋ ವಪಂತ ವಾತಸ್ವನಸಃ ಶ್ಯೇನಾ ಅಸ್ಪೃಧ್ರನ್ ॥ ೩ ॥

ಪದಪಾಠಃ

ಅಭಿ । ಸ್ವಽಪೂಭಿಃ । ಮಿಥಃ । ವಪಂತ । ವಾತಽಸ್ವನಸಃ । ಶ್ಯೇನಾಃ । ಅಸ್ಪೃಧ್ರನ್ ॥ ೩ ॥

ಸಾಯಣಭಾಷ್ಯಂ

ಮರುತಃ ಸ್ವಪೂಭಿಃ ಸ್ವಕೀಯೈಃ ಪವನೈಃ ಸಂಚರಣೈಃ ಸ್ವಯಮೇವ ಸಂಚರಂತೋ ಮಿಥಃ ಪರಸ್ಪರಮಭಿ ವಪಂತ । ಸಂಗಚ್ಛಂತೇ । ಅಪಿ ಚ ವಾತಸ್ವನಸೋ ವಾಯುವತ್ಸ್ವನಂತಃ ಶಬ್ದಾಯಮಾನಾಃ ಶ್ಯೇನಾಃ ॥ ಶ್ಯೈಙ್ ಗತಾವಿತಿ ಧಾತೋ ರೂಪಂ ॥ ಗಮನಶೀಲಾಃ । ಯದ್ವಾ । ಶ್ಯೇನಾ ಇತಿ ಲುಪ್ತೋಪಮಮೇತತ್ । ಶ್ಯೇನಾಃ ಪಕ್ಷಿಣಃ । ತದ್ವದ್ಗಚ್ಛಂತಃ । ಅಸ್ಪೃಧ್ರನ್ । ಪರಸ್ಪರಂ ರೂಪಸೌಂದರ್ಯಾದಿಭಿಃ ಸ್ಪರ್ಧಂತೇ ॥

ಪ್ರತಿಪದಾರ್ಥ

**ಸ್ವಪೂಭಿಃ**—ತಮ್ಮ ಪವನವೇಗಗಳಿಂದಲೇ ಸಂಚರಿಸುವ ಮರುತ್ತುಗಳು । **ಮಿಥಃ**—ಪರಸ್ಪರವಾಗಿ । **ಅಭಿ ವಪಂತ**—ಒಟ್ಟಿಗೆ ಸೇರಿಕೊಳ್ಳುತ್ತಾರೆ. । **ವಾತಸ್ವನಸಃ**—ವಾಯುವಿನಂತೆ ಶಬ್ದಮಾಡತಕ್ಕವರೂ । **ಶ್ಯೇನಾಃ**—ಶ್ಯೇನಪಕ್ಷಿಯಂತೆ ಉತ್ತಮವಾದ ಗಮನವುಳ್ಳವರೂ ಆದ ಮರುತ್ತುಗಳು । **ಅಸ್ಪೃಧ್ರನ್**—ತಮ್ಮ ಸೌಂದರ್ಯಾದಿಗಳಿಂದ ಪರಸ್ಪರ ತಾವೇ ಸ್ಪರ್ಧಿಸುತ್ತಾರೆ

ಭಾವಾರ್ಥ

ತಮ್ಮ ಪವನವೇಗಗಳಿಂದಲೇ ಸಂಚರಿಸುವ ಮರುತ್ತುಗಳು ಪರಸ್ಪರ ಒಟ್ಟಿಗೆ ಸೇರಿಕೊಳ್ಳುತ್ತಾರೆ ವಾಯುವಿನಂತೆ ಶಬ್ದಮಾಡತಕ್ಕವರೂ, ಶ್ಯೇನಪಕ್ಷಿಯಂತೆ ಉತ್ತಮವಾದ ಗಮನವುಳ್ಳವರೂ ಆದ ಮರುತ್ತುಗಳು ತಮ್ಮ ಸೌಂದರ್ಯಾದಿಗಳಿಂದ ಪರಸ್ಪರ ತಾವೇ ಸ್ಪರ್ಧಿಸುತ್ತಾರೆ

English Translation

They go together by their own pure paths . roaring like the wind, fleet as falcons, they mutually rival each other

ಸಂಹಿತಾಪಾಠಃ

ಏತಾನಿ ಧೀರೋ ನಿಣ್ಯಾ ಚಿಕೇತ ಪೃಶ್ನಿರ್ಯದೂಧೋ ಮಹೀ ಜಭಾರ ॥ ೪ ॥

ಪದಪಾಠಃ

ಏತಾನಿ । ಧೀರಃ । ನಿಣ್ಯಾ । ಚಿಕೇತ । ಪೃಶ್ನಿಃ । ಯತ್ । ಊಧಃ । ಮಹೀ । ಜಭಾರ ॥

ಸಾಯಣಭಾಷ್ಯಂ

ಧೀರೋ ಧೀಮಾಞ್ಪ್ರಾಜ್ಞೋ ಜನೋ ನಿಣ್ಯಾ ನಿಣ್ಯಾನಿ ಶ್ವೇತವರ್ಣಾನ್ಯೇತಾನಿ ಮರುದಾತ್ಮಕಾನಿ ಭೂತಾನಿ ಚಿಕೇತ । ಜಾನೀಯಾತ್ । ಕಿಂತು ನ ಸರ್ವೇ ಜನಾ ಜಾನಂತೀತ್ಯರ್ಥಃ । ಮಹೀ ಮಹತೀ ಪೃಶ್ನಿರ್ಮರುತಾಂ ಜನನೀ ಯದ್ಯಾನಿ ಮರುದಾತ್ಮಕಾನಿ ಭೂತಾನ್ಯೂಧ ಊಧನ್ಯಂತರಿಕ್ಷೇ ಸ್ವಕೀಯೇ ಜಠರೇ ವಾ ಜಭಾರ ಬಭಾರ । ಏತಾನಿ ಚಿಕೇತೇತಿ ಪೂರ್ವೇಣ ಸಂಬಂಧಃ ॥

ಪ್ರತಿಪದಾರ್ಥ

**ಮಹೀ**—ಮಹತ್ಸ್ವರೂಪವುಳ್ಳ । **ಪೃಶ್ನಿಃ**—ರುದ್ರಪತ್ನಿಯಾದ ಪೃಶ್ನಿಯು । **ಯತ್**—ಯಾವ ಈ ಮರುತ್ತತ್ವಗಳನ್ನು । **ಊಧಃ**—ಅಂತರಿಕ್ಷರೂಪವಾದ ತನ್ನ ಜಠರದಲ್ಲಿ । **ಜಭಾರ**—ಧರಿಸಿದಳೋ । **ಏತಾನಿ**—ಅಂತಹ । **ನಿಣ್ಯಾ**—ಶ್ವೇತವರ್ಣವುಳ್ಳ ಈ ಮರುತ್ತುಗಳನ್ನು । **ಧೀರಃ**—ಪ್ರಾಜ್ಞನು ಮಾತ್ರ । **ಚಿಕೇತ**—ಅರಿಯುತ್ತಾನೆ

ಭಾವಾರ್ಥ

ಮಹತ್ಸ್ವರೂಪವುಳ್ಳವಳೂ ರುದ್ರಪತ್ನಿಯೂ ಆದ ಪೃಶ್ನಿಯು ಯಾವ ಈ ಮರುತ್ತುಗಳನ್ನು ಅಂತರಿಕ್ಷರೂಪವಾದ ತನ್ನ ಜಠರದಲ್ಲಿ ಧರಿಸಿದಳೋ, ಅಂತಹ ಶ್ವೇತವರ್ಣವುಳ್ಳ ಈ ಮರುತ್ತುಗಳನ್ನು ಪ್ರಾಜ್ಞನುಮಾತ್ರ ಅರಿಯುತ್ತಾನೆ

English Translation

The sage may know those white-complexioned beings (the Maruts) whom the vast Prishni bore at her udder.

ಸಂಹಿತಾಪಾಠಃ

ಸಾ ವಿಟ್ಸುವೀರಾ ಮರುದ್ಭಿರಸ್ತು ಸನಾತ್ಸಹಂತೀ ಪುಷ್ಯಂತೀ ನೃಮ್ಣಂ ॥ ೫ ॥

ಪದಪಾಠಃ

ಸಾ । ವಿಟ್ । ಸುऽವೀರಾ । ಮರುತ್ऽಭಿಃ । ಅಸ್ತು । ಸನಾತ್ । ಸಹಂತೀ । ಪುಷ್ಯಂತೀ । ನೃಮ್ಣಂ ॥

ಸಾಯಣಭಾಷ್ಯಂ

ಸಾ ವಿಟ್ ಸಾ ಪ್ರಜಾ ಮರುತಃ ಪರಿಚರತಿ । ಸಾ ಪ್ರಜಾ ಮರುದ್ಭಿರ್ಹೇತುಭಿಃ ಸನಾಚ್ಚಿರಾತ್ಸಹಂತೀ ಶತ್ರೂನಭಿಭವಂತೀ ನೃಮ್ಣಂ ಧನಂ ಬಲಂ ವಾ ಪುಷ್ಯಂತೀ ಲಭಂತೀ ಸುವೀರಾ ಶೋಭನಪುತ್ರಯುಕ್ತಾಸ್ತು । ಭವತು ॥

ಪ್ರತಿಪದಾರ್ಥ

**ಸಾ ವಿಟ್**—ಮರುತ್ತುಗಳನ್ನು ಪೂಜಿಸುವ ಪ್ರಜೆಗಳು । **ಮರುದ್ಭಿಃ**—ಮರುತ್ತುಗಳೊಡನೆ ಕೂಡಿಕೊಂಡು । **ಸನಾತ್**—ಬಹುಕಾಲ । **ಸಹಂತೀ**—(ಶತ್ರುಗಳನ್ನು) ಸೋಲಿಸುತ್ತಲೂ । **ನೃಮ್ಣಂ**—ಧನವನ್ನು । **ಪುಷ್ಯಂತೀ**—ಹೊಂದುತ್ತಲೂ ! **ಸುವೀರಾ**—ಉತ್ತಮವಾದ ಪುತ್ರಾದಿಗಳಿಂದ ಕೂಡಿದವರಾಗಿಯೂ । **ಅಸ್ತು**—ಆಗಿರಲಿ.

ಭಾವಾರ್ಥ

ಮರುತ್ತುಗಳನ್ನು ಪೂಜಿಸುವ ಪ್ರಜೆಗಳು ಮರುತ್ತುಗಳೊಡನೆ ಕೂಡಿಕೊಂಡು ಬಹುಕಾಲ ಶತ್ರುಗಳನ್ನು ಸೋಲಿಸುತ್ತಲೂ ಧನವನ್ನು ಹೊಂದುತ್ತಲೂ ಉತ್ತಮವಾದ ಪುತ್ರಾದಿಗಳಿಂದ ಕೂಡಿದವರಾಗಿಯೂ ಆಗಿರಲಿ.

## English Translation

May the people, through (the favours of) the Maruts, always be victorious, possessed of male posterity, and in the enjoyment of wealth.

ಸಂಹಿತಾಪಾಠಃ

ಯಾಮಂ ಯೇಷ್ಠಾಃ ಶುಭಾ ಶೋಭಿಷ್ಠಾಃ ಶ್ರಿಯಾ ಸಂಮಿಶ್ಲಾ ಓಜೋಭಿ-
ರುಗ್ರಾಃ ॥ ೬ ॥

ಪದಪಾಠಃ

ಯಾಮಂ । ಯೇಷ್ಠಾಃ । ಶುಭಾ । ಶೋಭಿಷ್ಠಾಃ । ಶ್ರಿಯಾ । ಸಂऽಮಿಶ್ಲಾಃ । ಓಜಃऽಭಿಃ । ಉಗ್ರಾಃ ॥

ಸಾಯಣಭಾಷ್ಯಂ

ಮರುತೋ ಯಾಮಂ ಯಾತವ್ಯಂ ಗಂತವ್ಯಂ ಪ್ರದೇಶಂ ಯೇಷ್ಠಾ ಯಾತೃತಮಾ ಅತಿಶಯೇನ ಗಂತಾರಃ ಶುಭಾಲಂಕಾರೇಣ ಶೋಭಿಷ್ಠಾ ಅತಿಶಯೇನ ಶೋಭಯುಕ್ತಾಃ ಶ್ರಿಯಾ ಕಾಂತ್ಯಾ ಸಂಮಿಶ್ಲಾಃ ಸಂಗಚ್ಛಮಾನಾ ಓಜೋಭಿರ್ಬಲೈರುಗ್ರಾ ಉದ್ಗೂರ್ಣಾಃ । ಏವಂಭೂತಾ ಭವಂತೀತಿ ಶೇಷಃ ॥

ಪ್ರತಿಪದಾರ್ಥ

(**ಮರುತಃ**—ಮರುತ್ತುಗಳು) । **ಯಾಮಂ**—ಸೇರಬೇಕಾದ ಸ್ಥಾನವನ್ನು । **ಯೇಷ್ಠಾಃ**—ಅತಿಶಯವಾಗಿ ಹೋಗಿ ಸೇರುವವರೂ । **ಶುಭಾ**—ಉತ್ತಮವಾದ ಅಲಂಕಾರದಿಂದ । **ಶೋಭಿಷ್ಠಾಃ**—ಪ್ರಕಾಶಿಸುವವರೂ । **ಶ್ರಿಯಾ**—ಕಾಂತಿಯೊಡನೆ । **ಸಂಮಿಶ್ಲಾಃ**—ಹೊಂದಿಕೊಂಡಿರುವವರೂ । **ಓಜೋಭಿಃ**—ತಮ್ಮ ಬಲಗಳೊಡನೆ । **ಉಗ್ರಾಃ**—ಅತ್ಯಧಿಕವಾದ ಶಕ್ತಿಯುಳ್ಳವರೂ ಆದವರಾಗಿರುತ್ತಾರೆ.

ಭಾವಾರ್ಥ

ಮರುತ್ತುಗಳು ಸೇರಬೇಕಾದ ಸ್ಥಾನವನ್ನು ಅತಿಶಯವಾಗಿ ಹೋಗಿ ಸೇರುವವರೂ, ಕಾಂತಿಯೊಡನೆ ಹೊಂದಿಕೊಂಡಿರುವವರೂ ತಮ್ಮ ಬಲಗಳೊಡನೆ ಅತ್ಯಧಿಕವಾದ ಶಕ್ತಿಯನ್ನು ಹೊಂದಿದವರೂ ಆಗಿರುತ್ತಾರೆ.

## English Translation

The Maruts rapidly repair to the place (of their destination), richly decorated with ornaments, invested with beauty, terrible by their strength

ಸಂಹಿತಾಪಾಠಃ

ಉಗ್ರಂ ವ ಓಜಃ ಸ್ಥಿರಾ ಶವಾಂಸ್ಯಧಾ ಮರುದ್ಭಿರ್ಗಣಸ್ತುವಿಷ್ಮಾನ್ ॥ ೭ ॥

ಪದಪಾಠಃ

ಉಗ್ರಂ । ವಃ । ಓಜಃ । ಸ್ಥಿರಾ । ಶವಾಂಸಿ । ಅಧ । ಮರುತ್ऽಭಿಃ । ಗಣಃ । ತುವಿಷ್ಮಾನ್ ॥

ಸಾಯಣಭಾಷ್ಯಂ

**ಹೇ ಮರುತಃ ವೋ ಯುಷ್ಮಾಕಮೋಜಸ್ತೇಜ ಉಗ್ರಮುದ್ಗೂರ್ಣಂ ಭವತು । ಶವಾಂಸಿ ಯುಷ್ಮದೀಯಾನಿ ಬಲಾನಿ ಸ್ಥಿರಾ ಸ್ಥಿರಾಣಿ ಕೈಶ್ಚಿದನಪಹರ್ತವ್ಯಾನಿ ಭವಂತು । ಅಥಾಪಿ ಚ ಮರುದ್ಭಿರ್ಗಣೋ ಮರುತಾಂ ಸಂಘಸ್ತುವಿಷ್ಮಾನ್ ವೃದ್ಧಿಮಾನ್ಭವತು ॥**

ಪ್ರತಿಪದಾರ್ಥ

(ಎಲೈ ಮರುತ್ತುಗಳೇ) **ವಃ**—ನಿಮ್ಮ । **ಓಜಃ**—ತೇಜಸ್ಸು । **ಉಗ್ರಂ**—ಅತ್ಯಧಿಕವಾಗಿರಲಿ । **ಶವಾಂಸಿ**—ನಿಮ್ಮ ಬಲಗಳು । **ಸ್ಥಿರಾ**—ಶಾಶ್ವತವಾಗಿರಲಿ. । **ಅಥ**—ಮತ್ತು । **ಮರುದ್ಭಿಃ**—ಮರುತ್ತುಗಳ । **ಗಣಃ**—ಸಂಘವು। **ತುವಿಷ್ಮಾನ್**—ಪುಷ್ಟಿಯನ್ನು ಹೊಂದಿದುದಾಗಿರಲಿ.

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ತೇಜಸ್ಸು ಅಧಿಕವಾಗಿರಲಿ. ನಿಮ್ಮ ಬಲಗಳು ಶಾಶ್ವತವಾಗಿರಲಿ ಮತ್ತು ಮರುತ್ತುಗಳ ಸಂಘವು ಪುಷ್ಟಿಯನ್ನು ಹೊಂದಿದುದಾಗಿರಲಿ.

## English Translation

Terrible by your strength, steadfast your energies, pro'perous be the company of the Maruts.

ಸಂಹಿತಾಪಾಠಃ

ಶುಭ್ರೋ ವಃ ಶುಷ್ಮಃ ಕ್ರುಧ್ಮೀ ಮನಾಂಸಿ ಧುನಿರ್ಮುನಿರಿವ ಶರ್ಧಸ್ಯ ಧೃಷ್ಣೋಃ ॥ ೮ ॥

ಪದಪಾಠಃ

ಶುಭ್ರಃ । ವಃ । ಶುಷ್ಮಃ । ಕ್ರುಧ್ಮೀ । ಮನಾಂಸಿ । ಧುನಿಃ । ಮುನಿಃऽಇವ । ಶರ್ಧಸ್ಯ । ಧೃಷ್ಣೋಃ ॥

ಸಾಯಣಭಾಷ್ಯಂ

**ಹೇ ಮರುತಃ ವೋ ಯುಷ್ಮಾಕಂ ಶುಷ್ಮೋ ಬಲಂ ಶುಭ್ರಃ ಸರ್ವತಃ ಶೋಭಮಾನಂ । ಕಿಂಚ ವೋ ಮನಾಂಸಿ ಕ್ರುಧ್ಮೀ ಸಂಗ್ರಾಮೇಷು ಶತ್ರುಹನನಾರ್ಥಂ ಕ್ರೋಧನಶೀಲಾನಿ । ಧೃಷ್ಣೋರ್ಧರ್ಷಣಶೀಲಸ್ಯ ಶರ್ಧಸ್ಯ ಬಲವತೋ ಯುಷ್ಮದೀಯಸ್ಯ ಗಣಸ್ಯ ಧುನಿರ್ವೃಕ್ಷಾದೀನಾಂ ಕಂಪಯಿತುರ್ವೇಗೋ ಮುನಿರಿವ । ಮನನಾನ್ಮುನಿಃ ಸ್ತೋತಾ । ಸ ಯಥಾ ಬಹುವಿಧಂ ಶಬ್ದಮುತ್ಪಾದಯತಿ ಏವಂ ಬಹುವಿಧಶಬ್ದಸ್ಯೋತ್ಪಾದಕ ಇತ್ಯರ್ಥಃ ॥**

ಪ್ರತಿಪದಾರ್ಥ

( ಎಲೈ ಮರುತ್ತುಗಳೇ,) **ವಃ** — ನಿಮ್ಮ । **ಶುಷ್ಮಃ** — ಬಲವು । **ಶುಭ್ರಃ** — ಪ್ರಕಾಶಮಾನವಾಗಿದೆ. । **ಮನಾಂಸಿ**—ನಿಮ್ಮ ಮನಸ್ಸುಗಳು । **ಕ್ರುಧ್ಮೀ**—ಸಂಗ್ರಾಮಗಳಲ್ಲಿ ಶತ್ರುಗಳ ಮೇಲೆ ಕ್ರೋಧವನ್ನು ಪ್ರಕಟಿಸುವುದಾಗಿದೆ. । **ಧೃಷ್ಣೋಃ**—ಶತ್ರುವನ್ನು ಪ್ರತಿಭಟಿಸುವುದೂ । **ಶರ್ಧಸ್ಯ**—ಶಕ್ತಿಯುತವಾದುದೂ ಆದ ನಿಮ್ಮ ಗಣದ । **ಧುನಿಃ**—ವೃಕ್ಷಗಳನ್ನು ಕಂಪಿಸುವಂತೆ ಮಾಡುವ ವೇಗವು । **ಮುನಿರಿವ**—ಸ್ತುತಿಕರ್ತನ ಶಬ್ದದಂತೆ ಶಬ್ದಾತ್ಮಕವಾಗಿರುತ್ತದೆ.

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ಬಲವು ಪ್ರಕಾಶಮಾನವಾದುದಾಗಿದೆ. ನಿಮ್ಮ ಮನಸ್ಸುಗಳು ಸಂಗ್ರಾಮಗಳಲ್ಲಿ ಶತ್ರುಗಳ ಮೇಲೆ ಕ್ರೋಧವನ್ನು ಪ್ರಕಟಿಸುವುದಾಗಿದೆ. ಶತ್ರುವನ್ನು ಪ್ರತಿಭಟಿಸುವುದೂ, ಶಕ್ತಿಯುತವಾದುದೂ ಆದ ನಿಮ್ಮ ಗಣದ ವೃಕ್ಷಾದಿಗಳನ್ನು ಕಂಪಿಸುವಂತೆ ಮಾಡುವ ವೇಗವು ಸ್ತುತಿಕರ್ತನ ಶಬ್ದದಂತೆ ಶಬ್ದಾತ್ಮಕವಾದುದಾಗಿರುತ್ತದೆ.

English Translation

Glorious is your vigour, unrelenting are your minds . (the exertion) of your irrestible force, the agitator (of the trees), is like (the manifold tone of the prayers of) a muni.

ಸಂಹಿತಾಪಾಠಃ

ಸನೇಮ್ಯಸ್ಮದ್ಯುಯೋತ ದಿದ್ಯುಂ ಮಾ ವೋ ದುರ್ಮತಿರಿಹ ಪ್ರಣಙ್ನಃ ‖ ೯ ‖

ಪದಪಾಠಃ

ಸನೇಮಿ । ಅಸ್ಮತ್ । ಯುಯೋತ । ದಿದ್ಯುಂ । ಮಾ । ವಃ । ದುಃऽಮತಿಃ । ಇಹ । ಪ್ರಣಕ್ । ನಃ ‖

ಸಾಯಣಭಾಷ್ಯಂ

[ ಹೇ ಮರುತಃ ಸನೇಮಿ ಪುರಾಣಂ ದಿದ್ಯುಮಾಯುಧಮಸ್ಮದಸ್ಮತ್ತೋ ಯುಯೋತ । ಪೃಥಕ್ಕುರುತ । ವೋ ಯುಷ್ಮದೀಯಾ ದುರ್ಮತಿಃ ಕ್ರೂರಮತಿರಿಹಾಸ್ಮಿನ್ಕರ್ಮಣಿ ನೋऽಸ್ಮಾನ್ಮಾ ಪ್ರಣಕ್ ಮಾ ವ್ಯಾಪ್ನೋತು ‖]

ಪ್ರತಿಪದಾರ್ಥ

(ಎಲೈ ಮರುತ್ತುಗಳೇ) **ಸನೇಮಿ**—ಪುರಾತನವಾದ । **ದಿದ್ಯುಂ**—ನಿಮ್ಮ ಆಯುಧವನ್ನು । **ಅಸ್ಮತ್**—ನಮ್ಮಿಂದ । **ಯುಯೋತ**—ಬೇರೆಮಾಡಿರಿ । **ವಃ**—ನಿಮ್ಮ । **ದುರ್ಮತಿಃ**—ಕ್ರೂರವಾದ ಬುದ್ಧಿಯು । **ಇಹ**—ಈ ಕರ್ಮಕಾಲದಲ್ಲಿ । **ನಃ**—ನಮ್ಮನ್ನು । **ಮಾ ಪ್ರಣಕ್**—ವ್ಯಾಪಿಸದಿರಲಿ.

ಭಾವಾರ್ಥ

ಎಲೈ ಮರುತ್ತುಗಳೇ, ಪುರಾತನವಾದ ನಿಮ್ಮ ಆಯುಧವನ್ನು ನಮ್ಮ ಹತ್ತಿರ ಬರಮಾಡದಿರಿ. ನಿಮ್ಮ ಶಿಕ್ಷಾರೂಪವಾದ ಬುದ್ಧಿಯು ಈ ಕರ್ಮಕಾಲದಲ್ಲಿ ನಮ್ಮನ್ನು ಆವರಿಸದಿರಲಿ

English Translation

Withhold from us your ancient blazing (weapon) let not your displeasure light upon us at this sacrifice

ಸಂಹಿತಾಪಾಠಃ

ಪ್ರಿಯಾ ವೋ ನಾಮ ಹುವೇ ತುರಾಣಾಮಾ ಯತ್ತೃಪನ್ಮರುತೋ ವಾವಶಾನಾಃ ‖ ೧೦ ‖

ಪದಪಾಠಃ

ಪ್ರಿಯಾ । ವಃ । ನಾಮ । ಹುವೇ । ತುರಾಣಾಂ । ಆ । ಯತ್ । ತೃಪತ್ । ಮರುತಃ । ವಾವಶಾನಾಃ ॥

ಸಾಯಣಭಾಷ್ಯಂ

[ ಹೇ ಮರುತಃ ತುರಾಣಾಂ ಶತ್ರೂಣಾಂ ಹಿಂಸಕಾನಾಂ ತ್ವರಾವತಾಂ ವಾ ವೋ ಯುಷ್ಮಾಕಂ ಪ್ರಿಯಾ ಪ್ರಿಯೇಣ ನಾಮ ನಾಮ್ನಾ ಹುವೇ । ಆಹ್ವಯಾಮಿ । ಯದ್ಯೇನಾನೇನ ವಾವಶಾನಾಃ ಕಾಮಯಮಾನಾಃ ಸಂತಸ್ತೃಪತ್ ತೃಪ್ತಿಂ ಗಚ್ಛಂತಿ ॥ ]

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ । **ಯತ್**—ಯಾವ ನನ್ನ ಆಹ್ವಾನವನ್ನು । **ವಾವಶಾನಾಃ**—ಅಪೇಕ್ಷಿಸಿದವರಾಗಿ । **ತೃಪತ್**—ನೀವು ತೃಪ್ತಿಯನ್ನು ಹೊಂದುವಿರೋ ಆ ರೀತಿ । **ತುರಾಣಾಂ**—ಶತ್ರುಹಿಂಸಕರಾದ । **ವಃ**—ನಿಮ್ಮ । **ಪ್ರಿಯಾ**—ಹಿತಕರವಾದ । **ನಾಮ**—ಹಸರಿನ ಉಚ್ಚಾರದಿಂದ । **ಆ ಹುವೇ**—ಕರೆಯುತ್ತೇನೆ

ಭಾವಾರ್ಥ

ಎಲೈ ಮರುತ್ತುಗಳೇ, ಯಾವ ನನ್ನ ಆಹ್ವಾನವನ್ನು ಅಪೇಕ್ಷಿಸಿದವರಾಗಿ ನೀವು ತೃಪ್ತಿಯನ್ನು ಹೊಂದುವಿರೋ ಆ ರೀತಿ, ಶತ್ರುಹಿಂಸಕರಾದ ನಿಮ್ಮ ಹಿತಕರವಾದ ಹೆಸರನ್ನು ಹರಿಸಿ ನಿಮ್ಮನ್ನು ಕರೆಯುತ್ತೇನೆ

English Translation

I invoke your beloved names, Maruts, destroyers (of foes), that they who are desirous of the offering may be satisfied

ಸಂಹಿತಾಪಾಠಃ

ಸ್ವಾಯುಧಾಸ ಇಷ್ಮಿಣಃ ಸುನಿಷ್ಕಾ ಉತ ಸ್ವಯಂ ತನ್ವಃ ಶುಂಭಮಾನಾಃ॥

ಪದಪಾಠಃ

ಸುಽಆಯುಧಾಸಃ । ಇಷ್ಮಿಣಃ । ಸುಽನಿಷ್ಕಾಃ । ಉತ । ಸ್ವಯಂ । ತನ್ವಃ । ಶುಂಭಮಾನಾಃ ॥ ೧೧ ॥

ಸಾಯಣಭಾಷ್ಯಂ

ಸ್ವಾಯುಧಾಸಃ ಸ್ವಾಯುಧಾಃ ಶೋಭನಾಸ್ತ್ರಾ ಇಷ್ಮಿಣೋ ಗಂತಾರಃ ಸುನಿಷ್ಕಾಃ ಶೋಭನಾಲಂಕಾರಾ ಉತಾಪಿ ಚ ತನ್ವಃ ಸ್ವಕೀಯಾನಿ ಶರೀರಾಣಿ ಶುಂಭಮಾನಾಃ ಸ್ವಯಮೇವ ಶೋಭಯಂತೋ ಮರುತ ಏವಂಭೂತಾ ಭವಂತೀತ್ಯರ್ಥಃ ॥

ಪ್ರತಿಪದಾರ್ಥ

**ಸ್ವಾಯುಧಾಸಃ**—ಉತ್ತಮವಾದ ಅಸ್ತ್ರಗಳುಳ್ಳವರೂ । **ಇಷ್ಮಿಣಃ**—ಸಂಚಾರಶೀಲರೂ । **ಸುನಿಷ್ಕಾಃ**—ಉತ್ತಮವಾದ ಅಲಂಕಾರವುಳ್ಳವರೂ । **ಉತ**—ಮತ್ತು । **ತನ್ವಃ**—ತಮ್ಮ ಶರೀರಗಳನ್ನು । **ಸ್ವಯಂ ಶುಂಭಮಾನಾಃ**—ತಾವೇ ಅಲಂಕರಿಸಿಕೊಳ್ಳುವವರೂ ಆದ ಮರುತ್ತುಗಳು ಪ್ರಕಾಶಿಸುತ್ತಾರೆ.

ಭಾವಾರ್ಥ

ಉತ್ತಮವಾದ ಅಸ್ತ್ರಗಳುಳ್ಳವರೂ, ಸಂಚಾರಶೀಲರೂ, ಉತ್ತಮವಾದ ಅಲಂಕಾರವುಳ್ಳವರೂ ಮತ್ತು ತಮ್ಮ ಶರೀರಗಳನ್ನು ತಾವೇ ಅಲಂಕರಿಸಿಕೊಳ್ಳುವವರೂ ಆದ ಮರುತ್ತುಗಳು ಪ್ರಕಾಶಿಸುತ್ತಾರೆ

English Translation

Bearers are (the Maruts) of bright weapons, rapid are they in motion wearers of brilliant ornaments and, self-irradiators of their persons

ಸಂಹಿತಾಪಾಠಃ

**ಶುಚೀ ವೋ ಹವ್ಯಾ ಮರುತಃ ಶುಚೀನಾಂ ಶುಚಿಂ ಹಿನೋಮ್ಯಧ್ವರಂ ಶುಚಿಭ್ಯಃ ।**
**ಋತೇನ ಸತ್ಯಮೃತಸಾಪ ಆಯಂಛುಚಿಜನ್ಮಾನಃ ಶುಚಯಃ ಪಾವಕಾಃ ॥**

ಪದಪಾಠಃ

ಶುಚೀ । ವಃ । ಹವ್ಯಾ । ಮರುತಃ । ಶುಚೀನಾಂ । ಶುಚಿಂ । ಹಿನೋಮಿ । ಅಧ್ವರಂ । ಶುಚಿऽಭ್ಯಃ ।
ಋತೇನ । ಸತ್ಯಂ । ಋತಽಸಾಪಃ । ಆಯನ್ । ಶುಚಿऽಜನ್ಮಾನಃ । ಶುಚಯಃ । ಪಾವಕಾಃ ॥ ೧೨ ॥

ಸಾಯಣಭಾಷ್ಯಂ

ಮಾರುತೇ ಪಶೌ ಶುಚೀ ವೋ ಹವ್ಯೇತಿ ವಪಾಯಾ ಅನುವಾಕ್ಯಾ । ಸೂತ್ರಿತಂ ಚ । ಶುಚೀ ವೋ ಹವ್ಯಾ ಮರುತಃ ಶುಚೀನಾಂ ನೂ ಷ್ಠಿರಂ ಮರುತಃ । ಅ. ೩-೭ । ಇತಿ ॥

ಹೇ ಮರುತಃ ಶುಚೀನಾಂ ಶುದ್ಧಾನಾಂ ವೋ ಯುಷ್ಮಾಕಂ ಶುಚೀ ಶುಚೀನಿ ಹವ್ಯಾ ಹವ್ಯಾನಿ ಹವೀಂಷಿ ಭವಂತು । ಶುಚಿಭ್ಯಃ ಪ್ರಕಾಶಮಾನೇಭ್ಯೋ ಯುಷ್ಮಭ್ಯಂ ಶುಚಿಂ ಶುದ್ಧಮಧ್ವರಂ ಯಾಗಂ ಹಿನೋಮಿ । ಅಹಂ ಪ್ರೇರಯಾಮಿ । ಋತಸಾಪ ಋತಮುದಕಂ ಸ್ಪೃಶಂತೋ ಮರುತ ಋತೇನ ಸತ್ಯೇನೈವ ಸತ್ಯಮಾಯನ್ । ಗಚ್ಛಂತಿ । ಕೀದೃಶಾಃ । ಶುಚಿಜನ್ಮಾನಃ ಶೋಭನಜನನಾಃ ಶುಚಯೋ ದೀಪ್ಯಮಾನಾಃ ಪಾವಕಾಃ ಶೋಧಕಾಃ । ಏವಂಭೂತಾ ಗಚ್ಛಂತೀತ್ಯರ್ಥಃ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ಶುಚೀನಾಂ**—ಶುದ್ಧರಾದ । **ವಃ**—ನಿಮಗೆ । **ಶುಚೀ**—ಶುದ್ಧವಾದ **ಹವ್ಯಾ**—ಹವಿಸ್ಸುಗಳು ಅರ್ಪಿತವಾಗುತ್ತವೆ । **ಶುಚಿಭ್ಯಃ**—ಶುದ್ಧರಾದ ನಿಮ್ಮನ್ನುದ್ದೇಶಿಸಿ । **ಶುಚಿಂ**—ಶುದ್ಧವಾದ। **ಅಧ್ವರಂ**—ಯಾಗವನ್ನು । **ಹಿನೋಮಿ**—ನೆರವೇರಿಸುತ್ತೇನೆ । **ಶುಚಿಜನ್ಮಾನಃ**—ಶುದ್ಧವಾದ ಜನ್ಮವುಳ್ಳವರೂ । **ಶುಚಯಃ**—ಪ್ರಕಾಶಮಾನರೂ । **ಪಾವಕಾಃ**—ಶುದ್ಧಿಕಾರಕರೂ ಆದ ಮರುತ್ತುಗಳು । **ಋತಸಾಪಃ**—ಉದಕವನ್ನು ಸ್ಪರ್ಶಿಸುತ್ತ । **ಋತೇನ**—ಸತ್ಯದಿಂದ । **ಸತ್ಯಂ**—ಸತ್ಯವನ್ನು । **ಆಯನ್**—ಪ್ರವೇಶಿಸುತ್ತಾರೆ.

ಭಾವಾರ್ಥ

ಎಲೈ ಮರುತ್ತುಗಳೇ, ಶುದ್ಧರಾದ ನಿಮಗೆ ಪರಿಶುದ್ಧವಾದ ಹವಿಸ್ಸುಗಳು ಅರ್ಪಿತವಾಗುತ್ತವೆ. ಶುದ್ಧರಾದ ನಿಮ್ಮನ್ನುದ್ದೇಶಿಸಿ ಶುದ್ಧವಾದ ಯಾಗವನ್ನು ನೆರವೇರಿಸುತ್ತೇನೆ. ಶುದ್ಧವಾದ ಜನ್ಮವುಳ್ಳವರೂ, ಪ್ರಕಾಶಮಾನರೂ, ಶುದ್ಧಿಕಾರಕರೂ ಆದ ಮರುತ್ತುಗಳು ಉದಕವನ್ನು ಸ್ಪರ್ಶಿಸುತ್ತ ತಮ್ಮ ಸತ್ಯಸ್ವರೂಪದಿಂದ ಸತ್ಯವನ್ನು ಪ್ರವೇಶಿಸುತ್ತಾರೆ.

## English Translation

Pure oblations be offered, Maruts, to you who are pure the shedders of water proceed by truth to truth, pure, purifiying, of pure birth.

ವಿಶೇಷವಿಷಯಗಳು

ಮರುದ್ದೇವತೆಗಳನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ **ಶುಚೀ ವೋ ಹವ್ಯಾ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- **ಶಚೀ ವೋ ಹವ್ಯಾ ಮರುತಃ ಶುಚೀನಾಂ ನೂ ಷ್ಠಿರಂ ಮರುತಃ** ಎಂಬ ಸೂತ್ರದಿಂದ (ಆ ೩-೭) ವಿವೃತವಾಗಿರುವುದು

ಸಂಹಿತಾಪಾಠಃ

ಅಂಸೇಷ್ವಾ ಮರುತಃ ಖಾದಯೋ ವೋ ವಕ್ಷಃಸು ರುಕ್ಮಾ ಉಪಶಿಶ್ರಿಯಾಣಾಃ
ವಿ ವಿದ್ಯುತೋ ನ ವೃಷ್ಟಿಭೀ ರುಚಾನಾ ಅನು ಸ್ವಧಾಮಾಯುಧೈರ್ಯಚ್ಛಮಾನಾಃ ॥ ೧೩ ॥

ಪದಪಾಠಃ

ಅಂಸೇಷು । ಆ । ಮರುತಃ । ಖಾದಯಃ । ವಃ । ವಕ್ಷಃಽಸು । ರುಕ್ಮಾಃ । ಉಪಽಶಿಶ್ರಿಯಾಣಾಃ ।
ವಿ । ವಿಽದ್ಯುತಃ । ನ । ವೃಷ್ಟಿಽಭಿಃ । ರುಚಾನಾಃ । ಅನು । ಸ್ವಧಾಂ । ಆಯುಧೈಃ । ಯಚ್ಛಮಾನಾಃ ॥

ಸಾಯಣಭಾಷ್ಯಂ

**ಹೇ ಮರುತಃ ಅಂಸೇಷು ಯುಷ್ಮದೀಯೇಷು ಸ್ಕಂಧಪ್ರದೇಶೇಷು ಖಾದಯೋಽಲಂಕಾರವಿಶೇಷಾ ಆ ಮುಕ್ತಾ ಭವಂತೀತಿ ಶೇಷಃ । ಸುರುಕ್ಮಾಃ ಸುಷ್ಠು ರೋಚಮಾನಾ ಹಾರಾ ವೋ ಯುಷ್ಮದೀಯಂ ವಕ್ಷ ಉರಃಪ್ರದೇಶಮುಪಶಿಶ್ರಿಯಾಣಾ ಆಶ್ರಿತಾ ಭವಂತಿ । ಕಿಂ ಚ ಹೇ ಮರುತಃ ವೃಷ್ಟಿಭಿರ್ವರ್ಷೈಃ ಸಾರ್ಧಂ ವಿದ್ಯುತೋ ನ ತಡಿತೋ ಯಥಾ ರುಚಾನಾ ರೋಚಮಾನಾಸ್ತಾದೃಗ್ಭೂತಾ ಯೂಯಮಾಯುಧೈರ್ಮೇಘಘಾತಕೈಃ ಸ್ವಧಾಮುದಕಮನು ಯಚ್ಛಮಾನಾಃ ಪ್ರಯಚ್ಛಂತೋ ವಿ ಚರಥೇತಿ ಶೇಷಃ ॥**

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ಅಂಸೇಷು**—ನಿಮ್ಮ ಸ್ಕಂಧಪ್ರದೇಶಗಳಲ್ಲಿ । **ಖಾದಯಃ**—ಅಲಂಕಾರವಿಶೇಷಗಳು । **ಆ (ಮುಕ್ತಾ)**—ಪ್ರಕಾಶಿಸುತ್ತಿವೆ. । **ವಃ ವಕ್ಷಃಸು**—ನಿಮ್ಮ ಎದೆಗಳಮೇಲೆ । **ರುಕ್ಮಾಃ**—

ಹೊಂಬಣ್ಣದ ಹಾರಗಳು | **ಉಪಶಿಶ್ರಿಯಾಣಾಃ**—ಆಶ್ರಯವನ್ನು ಹೊಂದಿವೆ | **ವೃಷ್ಟಿಭಿಃ**—ಮಳೆಯೊಡನೆ ಕೂಡಿದ **ವಿದ್ಯುತೋ ನ**—ಮಿಂಚುಗಳಂತೆ | **ಆಯುಧೈಃ**—ನಿಮ್ಮ ಆಯುಧಗಳಿಂದ ಕೂಡಿ | **ರುಚಾನಾಃ**—ಪ್ರಕಾಶಿಸುವ ನೀವು | **ಸ್ವಧಾಂ**—ಉದಕವನ್ನು | **ಅನು ಯಚ್ಛಮಾನಾಃ**—ಒದಗಿಸುತ್ತ | **ವಿ (ಚರಥ)**—ಸಂಚರಿಸುತ್ತೀರಿ

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ಸ್ಕಂಧಪ್ರದೇಶಗಳಲ್ಲಿ ಅಲಂಕಾರವಿಶೇಷಗಳು ಪ್ರಕಾಶಿಸುತ್ತಿವೆ ನಿಮ್ಮ ಎದೆಗಳ ಮೇಲೆ ಹೊಂಬಣ್ಣದ ಹಾರಗಳು ಆಶ್ರಯವನ್ನು ಹೊಂದಿವೆ ಮಳೆಗಳೊಡನೆ ಕೂಡಿದ ಮಿಂಚುಗಳಂತೆ ನಿಮ್ಮ ಆಯುಧಗಳೊಡನೆ ಕೂಡಿ ಪ್ರಕಾಶಿಸುವ ನೀವು ಉದಕವನ್ನು ಒದಗಿಸುತ್ತ ಸಂಚರಿಸುತ್ತೀರಿ.

English Translation

Bright ornaments, Maruts are on your shoulders, shining (necklaces) are pendant on your breasts, glittering with rain, like lightnings, you are distributing the waters with your weapons.

ಸಂಹಿತಾಪಾಠಃ

ಪ್ರ ಬುಧ್ನ್ಯಾ ವ ಈರತೇ ಮಹಾಂಸಿ ಪ್ರ ನಾಮಾನಿ ಪ್ರಯಜ್ಯವಸ್ತಿರಧ್ವಂ ।
ಸಹಸ್ರಿಯಂ ದಮ್ಯಂ ಭಾಗಮೇತಂ ಗೃಹಮೇಧೀಯಂ ಮರುತೋ ಜುಷಧ್ವಂ

ಪದಪಾಠಃ

ಪ್ರ । ಬುಧ್ನ್ಯಾ । ವಃ । ಈರತೇ । ಮಹಾಂಸಿ । ಪ್ರ । ನಾಮಾನಿ । ಪ್ರಽಯಜ್ಯವಃ । ತಿರಧ್ವಂ ।
ಸಹಸ್ರಿಯಂ । ದಮ್ಯಂ । ಭಾಗಂ । ಏತಂ । ಗೃಹಽಮೇಧೀಯಂ । ಮರುತಃ । ಜುಷಧ್ವಂ ॥ ೧೪ ॥

ಸಾಯಣಭಾಷ್ಯಂ

ಗೃಹಮೇಧೀಯೇ ಪ್ರ ಬುಧ್ನ್ಯಾ ವ ಇತಿ ಪ್ರಧಾನಸ್ಯ ಯಾಜ್ಯಾ । ಸೂತ್ರಿತಂ ಚ । ಪ್ರ ಬುಧ್ನ್ಯಾ ವ ಈರತೇ ಮಹಾಂಸೀತಿ ಪುಷ್ಟಿಮಂತೌ ವಿರಾಜೌ ಸಂಯಾಜ್ಯೇ । ಆ ೨-೧೮ । ಇತಿ ॥

ಹೇ ಮರುತಃ ವೋ ಯುಷ್ಮದೀಯಾನಿ ಬುಧ್ನ್ಯಾ ಬುಧ್ನ್ಯಾನ್ಯಂತರಿಕ್ಷೇ ಭವಾನಿ ಮಹಾಂಸಿ ತೇಜಾಂಸಿ ಪ್ರೇರತೇ । ಪ್ರಕರ್ಷೇಣ ಗಚ್ಛಂತಿ । ಕಿಂ ಚ ಹೇ ಪ್ರಯಜ್ಯವಃ ಪ್ರಕರ್ಷೇಣ ಯಷ್ಟವ್ಯಾ ಮರುತಃ ಯೂಯಂ ನಾಮಾನಿ । ನಾಂಸೂನ್ನಮಯಂತೀತಿ ನಾಮಾನ್ಯುದಕಾನಿ । ಪ್ರ ತಿರಧ್ವಂ । ವರ್ಧಯತ । ಹೇ ಮರುತಃ ಯೂಯಂ ಸಹಸ್ರಿಯಂ ಸಹಸ್ರಸಂಖ್ಯಾಕಂ ದಮ್ಯಂ ದಮೇ ಗೃಹೇ ಭವಂ ಗೃಹಮೇಧೀಯಂ ಗೃಹಮೇಧಿಗುಣೇಭ್ಯೋ ಯುಷ್ಮಭ್ಯಂ ದೇಯಮೇತಮೇತಾದೃಶಂ ಭಾಗಂ ಜುಷಧ್ವಂ । ಸೇವಧ್ವಂ । ಏಕಂ ಭಾಗಂ ಸಹಸ್ರಿಯಮಿತಿ ಕಥಮಾಹ । ತಥಾ ಚ ಶ್ರೂಯತೇ । ಯಾವದೇಕಾ ದೇವತಾ ಕಾಮಯತೇ ಯಾವದೇಕಾ ತಾವದಾಹುತಿಃ ಪ್ರಥತೇ ನ ಹಿ ತದಸ್ತಿ ಯತ್ತಾವದೇವ ಸ್ಯಾದ್ಯಾವಜ್ಜುಹೋತೀತಿ ॥

ಪ್ರತಿಪದಾರ್ಥ

(ಎಲೈ ಮರುತ್ತುಗಳೇ) **ವಃ**—ನಿಮ್ಮ | **ಬುಧ್ನ್ಯಾ**—ಅಂತರಿಕ್ಷಸ್ಥವಾದ | **ಮಹಾಂಸಿ**—ತೇಜಸ್ಸುಗಳು | **ಪ್ರ ಈರತೇ**—ಅತಿಶಯವಾಗಿ ಹರಡಿ ಕಂಗೊಳಿಸುತ್ತವೆ | **ಪ್ರಯಜ್ಯವಃ**—ಉತ್ತಮವಾದ ಪೂಜೆಗೆ ಅರ್ಹರಾದ ಎಲೈ ಮರುತ್ತುಗಳೇ | **ನಾಮಾನಿ**—ಉದಕಗಳನ್ನು | **ಪ್ರ ತಿರಧ್ವಂ**—ಅಧಿಕವಾಗುವಂತೆ ಮಾಡಿರಿ. | **ಮರುತಃ**-ಎಲೈ ಮರುತ್ತುಗಳೇ, | **ಸಹಸ್ರಿಯಂ**—ಸಹಸ್ರಸಂಖ್ಯಾಕವಾದುದೂ, | **ದಮ್ಯಂ**—ಗೃಹಸ್ಥವಾದುದೂ, | **ಗೃಹಮೇಧೀಯಂ**—ಗೃಹದಲ್ಲಿ ಪೂಜಿತರಾಗುವ ನಿಮಗೆ ಅರ್ಪಿತವಾಗುವುದೂ ಆದ | **ಏತಂ ಭಾಗಂ**— ಈ ಯಜ್ಞಭಾಗವನ್ನು | **ಜುಷಧ್ವಂ**—ಸೇವಿಸಿರಿ.

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ಅಂತರಿಕ್ಷಸ್ಥವಾದ ತೇಜಸ್ಸುಗಳು ಅತಿಶಯವಾಗಿ ಹರಡಿ ಕಂಗೊಳಿಸುತ್ತವೆ. ಉತ್ತಮವಾದ ಪೂಜೆಗೆ ಅರ್ಹರಾದ ಎಲೈ ಮರುತ್ತುಗಳೇ, ಉದಕವನ್ನು ಅಧಿಕವಾಗುವಂತೆ ಮಾಡಿರಿ ಎಲೈ ಮರುತ್ತುಗಳೇ, ಸಹಸ್ರಸಂಖ್ಯಾಕವಾದುದೂ, ಗೃಹಸ್ಥವಾದುದೂ, ಗೃಹದಲ್ಲಿ ಪೂಜಿತವಾಗುವ ನಿಮಗೆ ಅರ್ಪಿತವಾಗುವುದೂ ಆದ ಈ ಯಜ್ಞಭಾಗವನ್ನು ಸೇವಿಸಿರಿ.

English Translation

Your celestial splendours, Maruts, spread wide objects of worship, you send down (the waters) that beat down (the dust) . accept, Maruts this your portion of the domestic worship of the household multiplied a thousand fold.

ವಿಶೇಷವಿಷಯಗಳು

ಗೃಹಮೇಧೀಯವೆಂಬ ಇಷ್ಟಿಯಲ್ಲಿ **ಪ್ರ ಬುಧ್ನ್ಯಾವಃ** ಎಂಬ ಈ ಋಕ್ಕನ್ನು ಪ್ರಧಾನಾಹುತಿಯಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪ್ರ ಬುಧ್ನ್ಯಾವ ಈರತೇ ಮಹಾಂಸೀತಿ ಪುಷ್ಟಿಮಂತೌ ವಿರಾಜೌ ಸಂಯಾಜ್ಯೇ** ಎಂಬ ಸೂತ್ರದಿಂದ (ಆ. ೨-೧೮) ವಿವೃತವಾಗಿರುವುದು.

ಸಂಹಿತಾಪಾಠಃ

**ಯದಿ ಸ್ತುತಸ್ಯ ಮರುತೋ ಅಧೀಥೇತ್ಥಾ ವಿಪ್ರಸ್ಯ ವಾಜಿನೋ ಹವೀಮನ್ |**

**ಮಕ್ಷೂ ರಾಯಃ ಸುವೀರ್ಯಸ್ಯ ದಾತ ನೂ ಚಿದ್ಯಮನ್ಯ ಆದಭದರಾವಾ ||**

ಪದಪಾಠಃ

**ಯದಿ | ಸ್ತುತಸ್ಯ | ಮರುತಃ | ಅಧಿऽಇಥ | ಇತ್ಥಾ | ವಿಪ್ರಸ್ಯ | ವಾಜಿನಃ | ಹವೀಮನ್ |**

**ಮಕ್ಷು | ರಾಯಃ | ಸುऽವೀರ್ಯಸ್ಯ | ದಾತ | ನು | ಚಿತ್ | ಯಂ | ಅನ್ಯಃ | ಆऽದಭತ್ | ಅರಾವಾ ||**

ಸಾಯಣಭಾಷ್ಯಂ

ವಾಜಿನೋ ಹವಿರ್ಲಕ್ಷಣಾನ್ನವತೋ ವಿಪ್ರಸ್ಯ ಮೇಧಾವಿನೋ ಮಮ ಸಂಬಂಧಿನಿ ಹವೀಮನ್ ಹವಿಷ್ಮತಿ ಹವಿಷಾ ಯುಕ್ತೇ ಸ್ತೋತ್ರೇ ಕ್ರಿಯಮಾಣೇ ಸತಿ ಹೇ ಮರುತಃ ಯೂಯಂ ಯದಿ ಯಸ್ಮಾತ್ಕಾರಣಾತ್ ಸ್ತುತಸ್ಯ ಸ್ತುತಂ ಮದೀಯಂ ಸ್ತೋತ್ರಮಿತ್ಥೇತ್ಥಮನೇನ ಪ್ರಕಾರೇಣಾಧೀಥ ಅವಗಚ್ಛಥ ತಸ್ಮಾತ್ಕಾರಣಾತ್ ಹೇ ಮರುತಃ ಯೂಯಂ ಸುವೀರ್ಯಸ್ಯ ಶೋಭನಪುತ್ರೋಪೇತಸ್ಯ ರಾಯೋ ರಾಯಂ ಧನಂ । ದ್ವಿತೀಯಾರ್ಥೇ ಷಷ್ಠೀ । ಮಕ್ಷು ಶೀಘ್ರಂ ದಾತ । ದತ್ತ । ಅರಾವಾಽರಾತಿಃ ಶತ್ರುಭೂತೋಽನ್ಯೋ ಜನೋ ಯಂ ರಾಯಂ ನೂ ಚಿದಾದಭತ್ ನೈವಾಭಿಹನ್ಯಾತ್ । ತದ್ಧನಮಸ್ಮಭ್ಯಂ ದತ್ತೇತಿ ಸಂಬಂಧಃ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ವಾಜಿನಃ**—ಹವಿಸ್ಸುಳ್ಳವನೂ । **ವಿಪ್ರಸ್ಯ**—ಮೇಧಾವಿಯೂ ಆದ ನನ್ನಿಂದ । **ಹವೀಮನ್**—ಹವಿಯುಕ್ತವಾದ ಸ್ತುತಿಪರನವಾಗುವ ಕಾಲದಲ್ಲಿ । **ಯದಿ**—ಯಾವ ನಿಮಿತ್ತವಾಗಿ । **ಸ್ತುತಸ್ಯ**—ಸ್ತುತಿಕರ್ತನಾದ ನನ್ನ ಸ್ತುತಿಯನ್ನು । **ಇತ್ಥಾ** — ಈ ಪ್ರಕಾರವಾಗಿ । **ಅಧೀಥ** — ತಿಳಿಯುವಿರೋ, (ಆದುದರಿಂದಲೇ) । **ಸುವೀರ್ಯಸ್ಯ**—ಉತ್ತಮವಾದ ವೀರಪುತ್ರಾದಿಗಳಿಂದ ಕೂಡಿದುದೂ, । **ಅರಾವಾ**—ಶತ್ರುವಾದ । **ಅನ್ಯಃ**—ಬೇರೊಬ್ಬನು । **ಯಂ**—ಯಾವುದನ್ನು । **ನೂ ಚಿತ್**—ಸುಲಭವಾಗಿ । **ಆ ದಭತ್**—ಅಪಹರಿಸಲಾರನೋ ಅಂತಹುದೂ ಆದ । **ರಾಯಃ**—ಧನವನ್ನು । **ಮಕ್ಷು**—ಶೀಘ್ರವಾಗಿ । **ದಾತ**—ಕೊಡಿರಿ

ಭಾವಾರ್ಥ

ಎಲೈ ಮರುತ್ತುಗಳೇ, ಹವಿರ್ವಂತನೂ, ಮೇಧಾವಿಯೂ ಆದ ನನ್ನಿಂದ ಹವಿಯುಕ್ತವಾದ ಸ್ತುತಿಪರನವಾಗುವ ಕಾಲದಲ್ಲಿ ಯಾವ ನಿಮಿತ್ತವಾಗಿ ಸ್ತುತಿಕರ್ತನಾದ ನನ್ನ ಸ್ತುತಿಯನ್ನು ಈ ಪ್ರಕಾರವಾಗಿ ಅರಿಯುವಿರೋ ಆದುದರಿಂದಲೇ ಉತ್ತಮವಾದ ವೀರಪುತ್ರಾದಿಗಳಿಂದ ಕೂಡಿದುದೂ ಶತ್ರುವಾದ ಅನ್ಯಪುರುಷನಿಂದ ಅಪಹರಿಸಲು ಸಾಧ್ಯವಿಲ್ಲದುದೂ ಆದ ಧನವನ್ನು ಶೀಘ್ರವಾಗಿ ಕೊಡಿರಿ

English Translation

If, Maruts, you justly appreciate the praise of the devout offerer of (sacrificial) food, conjoined with oblations, then promptly bestow (upon us) riches, comprehending excellent male posterity, such as no unfriendly man can take away.

ಸಂಹಿತಾಪಾಠಃ

ಅತ್ಯಾಸೋ ನ ಯೇ ಮರುತಃ ಸ್ವಂಚೋ ಯಕ್ಷದೃಶೋ ನ ಶುಭಯಂತ ಮರ್ಯಾಃ ।
ತೇ ಹರ್ಮ್ಯೇಷ್ಠಾಃ ಶಿಶವೋ ನ ಶುಭ್ರಾ ವತ್ಸಾಸೋ ನ ಪ್ರಕ್ರೀಳಿನಃ ಪಯೋಧಾಃ ॥ ೧೬ ॥

ಸಾಮಹಿತಾ

ಅಶ್ವಾ᳚ಸಃ । ನ । ಯೇ । ಮ॒ರುತಃ॑ । ಸ್ವ॒ಽಅಂಚಃ॑ । ಯ॒ಕ್ಷ॒ಽದೃಶಃ॑ । ನ । ಶು॒ಭಯಂ᳚ತ । ಮರ್ಯಾಃ᳚ ।

ತೇ । ಹ॒ರ್ಮ್ಯೇ॒ಽಸ್ಥಾಃ᳚ । ಶಿಶ॑ವಃ । ನ । ಶು॒ಭ್ರಾಃ । ವ॒ತ್ಸಾಸಃ॑ । ನ । ಪ್ರ॒ಽಕ್ರೀ॒ಳಿನಃ॑ । ಪ॒ಯಃ॒ಽಧಾಃ ॥ ೧೬ ॥

ಸಾಯಣಭಾಷ್ಯಂ

ಮರುದ್ಭ್ಯಃ ಕ್ರೀಳಿಭ್ಯಃ ಸಪ್ತಕಪಾಲಮಿತ್ಯಸ್ಯಾಶ್ವಾಸ ಇತಿ ಯಾಜ್ಯಾ । ಸೂತ್ರಿತಂ ಚ । ಅಶ್ವಾಸೋ ನ ಯೇ ಮರುತಃ ಸ್ವಂಚೋ ಜುಷ್ಟ್ವೋ ದಮೂನಾಃ । ಆ ೨೧೮ । ಇತಿ ॥

ಅಶ್ವಾಸೋ ನಾಶ್ವಾಃ ಸತತಗಾಮಿನೋಽಶ್ವಾ ಇವ ಸ್ವಂಚಃ ಸುಷ್ಠು ಗಚ್ಛಂತೋ ಯೇ ಮರುತೋ ಯಕ್ಷದೃಶೋ ನ ಮರ್ಯಾ ಯಕ್ಷಸ್ಯೋತ್ಸವಸ್ಯ ದ್ರಷ್ಟಾರೋ ಮನುಷ್ಯಾ ಇವ ಶುಭಯಂತ ಶೋಭಂತೇ ಹರ್ಮ್ಯೇಷ್ಠಾ ಹರ್ಮ್ಯೇ ಸ್ಥಿತಾಃ ಶಿಶವೋ ನ ಕುಮಾರಾ ಇವ ಶುಭ್ರಾಃ ಶೋಭಮಾನಾ ವತ್ಸಾಸೋ ನ ವತ್ಸಾ ಇವ ಪ್ರಕ್ರೀಳಿನಃ ಪ್ರಕರ್ಷೇಣ ಕ್ರೀಡಮಾನಾಸ್ತೇ ಮರುತಃ ಪಯೋಧಾಃ ಪಯಸ ಉದಕಸ್ಯ ಧಾರಯಿತಾರೋ ದಾತಾರೋ ವಾ ಭವಂತಿ ॥

ಪ್ರತಿಪದಾರ್ಥ

**ಯೇ ಮರುತಃ**—ಯಾವ ಮರುತ್ತುಗಳು । **ಅಶ್ವಾಸೋ ನ**—ವೇಗಗಾಮಿಗಳಾದ ಅಶ್ವಗಳಂತೆ । **ಸ್ವಂಚಃ**—ಶ್ರೇಷ್ಠವಾದ ಗತಿಯುಳ್ಳವರೋ, । **ಯಕ್ಷದೃಶಃ**—ಉತ್ಸವಗಳನ್ನು ನೋಡತಕ್ಕ । **ಮರ್ಯಾಃ ನ**—ಮಾನವರಂತೆ । **ಶುಭಯಂತ**—ಶೋಭಿಸುವರೋ । **ಹರ್ಮ್ಯೇಷ್ಠಾಃ**—ಉಪ್ಪರಿಗೆಮನೆಗಳಲ್ಲಿ ಇರುವ । **ಶಿಶವೋ ನ** — ಎಳೆಯ ಮಕ್ಕಳಂತೆ । **ಶುಭ್ರಾಃ** — ಪ್ರಕಾಶಮಾನರೋ । **ವತ್ಸಾಸೋ ನ** — ಎಳೆಯ ಕರುಗಳಂತೆ । **ಪ್ರಕ್ರೀಳಿನಃ**—ಆಟವಾಡುತ್ತಿರುವರೋ । **ತೇ**—ಆದೇ ಮರುತ್ತುಗಳು । **ಪಯೋಧಾಃ**—ಉದಕಧಾರಕರಾಗಿರುತ್ತಾರೆ.

ಭಾವಾರ್ಥ

ವೇಗಗಾಮಿಗಳಾದ ಅಶ್ವಗಳಂತೆ ಉತ್ತಮವಾದ ಗತಿಯುಳ್ಳವರೂ, ಉತ್ಸವಗಳನ್ನು ನೋಡಲು ಅಲಂಕರಿಸಿಕೊಂಡಿರುವ ಮಾನವರಂತೆ ಶೋಭಿಸುವವರೂ, ಉಪ್ಪರಿಗೆಮನೆಗಳಲ್ಲಿ ಇರುವ ಎಳೆಯಮಕ್ಕಳಂತೆ ಪ್ರಕಾಶಿಸುವವರೂ, ಎಳೆಯ ಕರುಗಳಂತೆ ಆಟವಾಡುತ್ತಿರುವವರೂ ಆದ ಮರುತ್ತುಗಳು ಉದಕಧಾರಕರಾಗಿರುತ್ತಾರೆ.

## English Translation.

The swift-moving Maruts are like rapid horses, shining like men gazing at a festival · innocent as children in the (paternal) mansion, frolicksome as calves, they are the dispensers of water.

ವಿಶೇಷವಿಷಯಗಳು

**ಮರುದ್ಭ್ಯಃ ಕ್ರೀಳಿಭ್ಯಃ ಸಪ್ತಕಪಾಲಂ** ಎಂಬ ಮರುದ್ದೇವತೆಗಳನ್ನುದ್ದೇಶಿಸಿ ಮಾಡುವ ಕಾಮ್ಯೇಷ್ಟಿಯಲ್ಲಿ (ತೈ. ಸಂ. ೧-೮-೪-೨) **ಅಶ್ವಾಸಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಶ್ವಾಸೋ ನ ಯೇ ಮರುತಃ ಸ್ವಂಚೋ ಜುಷ್ಟ್ವೋ ದಮೂನಾಃ** ಎಂಬ ಸೂತ್ರದಿಂದ (ಆ. ೨-೧೮) ವಿವೃತವಾಗಿರುವುದು.

ಸಂಹಿತಾಪಾಠಃ

ದಶಸ್ಯಂತೋ ನೋ ಮರುತೋ ಮೃಳಂತು ವರಿವಸ್ಯಂತೋ ರೋದಸೀ ಸುಮೇಕೇ ।
ಆರೇ ಗೋಹಾ ನೃಹಾ ವಧೋ ವೋ ಅಸ್ತು ಸುಮ್ನೇಭಿರಸ್ಮೇ ವಸವೋ ನಮಧ್ವಂ ॥ ೧೭ ॥

ಪದಪಾಠಃ

ದಶಸ್ಯಂತಃ । ನಃ । ಮರುತಃ । ಮೃಳಂತು । ವರಿವಸ್ಯಂತಃ । ರೋದಸೀ ಇತಿ । ಸುಮೇಕೇ ಇತಿ ಸುऽಮೇಕೇ ।
ಆರೇ । ಗೋऽಹಾ । ನೃऽಹಾ । ವಧಃ । ವಃ । ಅಸ್ತು । ಸುಮ್ನೇಭಿಃ । ಅಸ್ಮೇ ಇತಿ । ವಸವಃ । ನಮಧ್ವಂ ॥ ೧೭ ॥

ಸಾಯಣಭಾಷ್ಯಂ

ಮರುತೋ ನೋऽಸ್ಮಭ್ಯಂ ದಶಸ್ಯಂತೋ ಧನಾನಿ ಪ್ರಯಚ್ಛಂತಃ ಸುಮೇಕೇ ಸುರೂಪೇ ರೋದಸೀ ದ್ಯಾವಾಪೃಥಿವ್ಯೌ ವರಿವಸ್ಯಂತಃ ಸ್ವಮಹಿಮ್ನಾ ಪೂರಯಂತೋ ಮೃಳಂತು । ಮೃಳಯಂತು । ಅಸ್ಮಾನ್ಸುಖಯುಕ್ತಾನ್ ಕುರ್ವಂತು । ಅಪಿ ಚ ಹೇ ವಸವೋ ವಾಸಕಾ ಮರುತಃ ಗೋಹಾ ಗವಾಂ ಮೇಘಸ್ಥಾನಾಮುದಕಾನಾಂ ಭೇದಕೋ ನೃಹಾ ನೃಣಾಂ ಶತ್ರೂಣಾಂ ಹಂತಾ ವೋ ಯುಷ್ಮದೀಯೋ ವಧ ಆಯುಧಮಾರೇऽಸ್ತು । ಅಸ್ಮತ್ತೋ ದೂರೇ ಭವತು । ಯೂಯಮಪಿ ಸುಮ್ನೇಭಿಃ ಸುಮ್ನೈಃ ಸುಖೈಃ ಸಹಾಸ್ಮೇ ಅಸ್ಮಾಸು ನಮಧ್ವಂ । ಸ್ವಯಮೇವಾಭಿಮುಖಾ ಭವತ ॥

ಪ್ರತಿಪದಾರ್ಥ

**ಮರುತಃ**—ಮರುತ್ತುಗಳು । **ನಃ**—ನಮಗೆ । **ದಶಸ್ಯಂತಃ**—ಧನಾದಿಗಳನ್ನು ಕೊಡುತ್ತಲೂ, । **ಸುಮೇಕೇ**—ಉತ್ತಮವಾದ ರೂಪವುಳ್ಳ । **ರೋದಸೀ**—ದ್ಯಾವಾಪೃಥಿವಿಗಳನ್ನು । **ವರಿವಸ್ಯಂತಃ**—ತಮ್ಮ ಪ್ರಭಾವಗಳಿಂದ ತುಂಬುತ್ತಲೂ । **ಮೃಳಂತು**—ನಮ್ಮನ್ನು ಸುಖಪಡಿಸಲಿ । **ವಸವಃ**—ವಸತಿದಾಯಕರಾದ ಎಲೈ ಮರುತ್ತುಗಳೇ, । **ಗೋಹಾ**—ಮೇಘವನ್ನು ಸೀಳಿ ಉದಕವನ್ನು ಸುರಿಸುವುದೂ । **ನೃಹಾ**—ಶತ್ರುಜನರನ್ನು ನಾಶಪಡಿಸುವುದೂ ಆದ । **ವಃ ವಧಃ**—ನಿಮ್ಮ ಆಯುಧವು । **ಆರೇ ಅಸ್ತು**—ನಮ್ಮಿಂದ ದೂರವಾಗಿರಲಿ । **ಸುಮ್ನೇಭಿಃ**—ನಿಮ್ಮ ಸುಖಸಾಧನಗಳೊಡನೆ । **ಅಸ್ಮೇ**—ನಮ್ಮಲ್ಲಿಗೆ । **ನಮಧ್ವಂ**—ಆದರದಿಂದ ಬರುವವರಾಗಿ.

ಭಾವಾರ್ಥ

ಮರುತ್ತುಗಳು ನಮಗೆ ಧನಪ್ರದರಾಗಿಯೂ, ಆಕರ್ಷಕವಾದ ಸ್ವರೂಪವುಳ್ಳ ದ್ಯಾವಾಪೃಥಿವಿಗಳನ್ನು ತಮ್ಮ ಪ್ರಭಾವಗಳಿಂದ ತುಂಬುತ್ತಲೂ ನಮ್ಮನ್ನು ಸುಖಪಡಿಸಲಿ. ವಸತಿದಾಯಕರಾದ ಎಲೈ ಮರುತ್ತುಗಳೇ ಮೇಘವನ್ನು ಸೀಳಿ ಉದಕವನ್ನು ಸುರಿಸುವುದೂ, ಶತ್ರುಜನರನ್ನು ನಾಶಪಡಿಸುವುದೂ ಆದ ನಿಮ್ಮ ಆಯುಧವು ನಮ್ಮಿಂದ ದೂರವಾಗಿರಲಿ. ಎಲೈ ಮರುತ್ತುಗಳೇ, ನಿಮ್ಮ ಸುಖಸಾಧನಗಳೊಡನೆ ಸ್ವಯಂಪ್ರೇರಿತರಾಗಿ ನಮ್ಮಲ್ಲಿಗೆ ಬನ್ನಿರಿ

## English Translation

May the munificent Maruts, filling the beautiful heaven and earth with their glory, make us happy . your fatal weapon, the render of clouds, the destroyer of men, be far from us : bend down to us, Vasus with blessings.

ಸಂಹಿತಾಪಾಠಃ

ಆ ವೋ ಹೋತಾ ಜೋಹವೀತಿ ಸತ್ತಃ ಸತ್ರಾಚೀಂ ರಾತಿಂ ಮರುತೋ ಗೃಣಾನಃ ।
ಯ ಈವತೋ ವೃಷಣೋ ಅಸ್ತಿ ಗೋಪಾಃ ಸೋ ಅದ್ವಯಾವೀ ಹವತೇ ವ ಉಕ್ಥೈಃ ॥ ೧೮ ॥

ಪದಪಾಠಃ

ಆ । ವಃ । ಹೋತಾ । ಜೋಹವೀತಿ । ಸತ್ತಃ । ಸತ್ರಾಚೀಂ । ರಾತಿಂ । ಮರುತಃ । ಗೃಣಾನಃ ।
ಯಃ । ಈವತಃ । ವೃಷಣಃ । ಅಸ್ತಿ । ಗೋಪಾಃ । ಸಃ । ಅದ್ವಯಾವೀ । ಹವತೇ । ವಃ । ಉಕ್ಥೈಃ ॥೧೮॥

ಸಾಯಣಭಾಷ್ಯಂ

ಮಾರುತೇ ಪಶಾವಾ ವೋ ಹೋತೇತ್ಯೇಷಾನುವಾಕ್ಯಾ । ಸೂತ್ರಿತಂ ಚ ಆ ವೋ ಹೋತಾ ಜೋಹವೀತಿ ಸತ್ತಃ ಪ್ರ ಚಿತ್ರಮರ್ಕಂ ಗೃಣತೇ ತುರಾಯ । ಆ ೩-೭ । ಇತಿ ॥

ಹೇ ಮರುತಃ ಸತ್ತೋ ಹೋತೃಷದನೇ ನಿಷಣ್ಣೋಽಸ್ಮದೀಯೋ ಹೋತಾ ಸತ್ರಾಚೀಂ ಸರ್ವತೋ ಗಮನಶೀಲಂ ರಾತಿಂ ತ್ವದೀಯಂ ದಾನಂ ಗೃಣಾನಃ ಸ್ತುವನ್ ವೋ ಯುಷ್ಮಾನಾ ಜೋಹವೀತಿ । ಭೃಶಮಾಹ್ವಯತಿ । ಹೇ ವೃಷಣಃ ಕಾಮಾನಾಂ ವರ್ಷಿತಾರೋ ಮರುತಃ ಯೋ ಹೋತೇವತೋ ಗಚ್ಛತೋ ವ್ಯಾಪಾರವತೋ ಯಜಮಾನಸ್ಯ ಗೋಪಾ ಅಸ್ತಿ ಯುಷ್ಮದಾಹ್ವಾನನಿಮಿತ್ತೇನ ರಕ್ಷಕೋ ಭವತಿ ಸ ಹೋತಾದ್ವಯಾವೀ ಮಾಯಾರಹಿತಃ ಸನ್ವೋ ಯುಷ್ಮಾನುಕ್ಥೈಃ ಸ್ತೋತ್ರೈರ್ಹವತೇ । ಸ್ತೌತಿ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ಸತ್ತಃ**—ಸ್ವಸ್ಥಾನದಲ್ಲಿ ಕುಳಿತಿರುವ । **ಹೋತಾ**—ಹೋತೃವು । **ಸತ್ರಾಚೀಂ**—ಸರ್ವತ್ರವ್ಯಾಪಿಸುವುದೂ । **ರಾತಿಂ**—ನಿಮ್ಮಿಂದ ದತ್ತವಾದುದೂ ಆದ ದಾನವನ್ನು । **ಗೃಣಾನಃ**—ಸ್ತುತಿಸುತ್ತ । **ವಃ**—ನಿಮ್ಮನ್ನು । **ಆ ಜೋಹವೀತಿ**—ಪದೇಪದೇ ಕರೆಯುತ್ತಾನೆ । **ವೃಷಣಃ**—ಕಾಮವರ್ಷಕರಾದ ಎಲೈ ಮರುತ್ತುಗಳೇ, । **ಯಃ**—ಯಾವ ಹೋತೃವು । **ಈವತಃ**—ಕರ್ಮನಿರತನಾದ ಯಜಮಾನನಿಗೆ । **ಗೋಪಾಃ ಅಸ್ತಿ**—ರಕ್ಷಕನಾಗಿರುವನೋ । **ಸಃ**—ಅದೇ ಹೋತೃವು । **ಅದ್ವಯಾವೀ**—ವಂಚನೆಯಿಲ್ಲದೆ । **ವಃ**—ನಿಮ್ಮನ್ನು । **ಉಕ್ಥೈಃ**—ಸ್ತೋತ್ರಗಳಿಂದ । **ಹವತೇ**—ಸ್ತುತಿಸುತ್ತಾನೆ.

### ಭಾವಾರ್ಥ

ಎಲೈ ಮರುತ್ತುಗಳೇ, ತನ್ನ ನಿಯಮಿತವಾದ ಸ್ಥಾನದಲ್ಲಿ ಕುಳಿತಿರುವ ಹೋತೃವು ಸರ್ವತ ವ್ಯಾಪಿಸುವುದೂ ನಿಮ್ಮಿಂದ ದತ್ತವಾದುದೂ ಆದ ದಾನವನ್ನು ಸ್ತುತಿಸುತ್ತ ನಿಮ್ಮನ್ನು ಪದೇಪದೇ ಕರೆಯುತ್ತಾನೆ. ಕಾಮವರ್ಷಕರಾದ ಎಲೈ ಮರುತ್ತುಗಳೇ, ಯಾವ ಹೋತೃವು ಕರ್ಮನಿರತನಾದ ಯಜಮಾನನಿಗೆ ರಕ್ಷಕನಾಗಿರುವನೋ ಅದೇ ಹೋತೃವು ಯಾವ ವಂಚನೆಯೂ ಇಲ್ಲದವನಾಗಿ ನಿಮ್ಮನ್ನು ಸ್ತೋತ್ರಗಳಿಂದ ಸ್ತುತಿಸುತ್ತಾನೆ.

### English Translation

Praising your universal liberality, Maruts, the ministrant priest repeatedly worships you seated (in the sacrificial chamber) he, showerers (of benefits), who is the guardian of the zealous (worshipper), he, (the priest) who is void of insincerity, glorifies you with hymns

### ವಿಶೇಷವಿಷಯಗಳು

ಮರುದ್ದೇವತೆಗಳನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ **ಆ ವೋ ಹೋತಾ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಆ ವೋ ಹೋತಾ ಜೋಹವೀತಿ ಸತ್ತಃ ಪ್ರ ಚಿತ್ರಮರ್ಕಂ ಗೃಣತೇ ತುರಾಯ** ಎಂಬ ಸೂತ್ರದಿಂದ (ಆ ೩-೭) ವಿಶ್ವೃತವಾಗಿರುವುದು

### ಸಂಹಿತಾಪಾಠಃ

ಇಮೇ ತುರಂ ಮರುತೋ ರಾಮಯಂತೀಮೇ ಸಹಃ ಸಹಸ ಆ ನಮಂತಿ ।
ಇಮೇ ಶಂಸಂ ವನುಷ್ಯತೋ ನಿ ಪಾಂತಿ ಗುರು ದ್ವೇಷೋ ಅರರುಷೇ ದಧಂತಿ ॥ ೧೯ ॥

### ಪದಪಾಠಃ

ಇಮೇ । ತುರಂ । ಮರುತಃ । ರಮಯಂತಿ । ಇಮೇ । ಸಹಃ । ಸಹಸಃ । ಆ । ನಮಂತಿ ।
ಇಮೇ । ಶಂಸಂ । ವನುಷ್ಯತಃ । ನಿ । ಪಾಂತಿ । ಗುರು । ದ್ವೇಷಃ । ಅರರುಷೇ । ದಧಂತಿ ॥ ೧೯ ॥

### ಸಾಯಣಭಾಷ್ಯಂ

ಇಮ ಈದೃಶೋ ಮರುತಸ್ತುರಂ ಕರ್ಮಸು ಕ್ಷಿಪ್ರವಂತಂ ಯಜಮಾನಂ ರಮಯಂತಿ । ಕ್ರೀಡಯಂತಿ । ಇಮೇ ಮರುತಃ ಸಹಃ ಸಹಸಾ ಬಲೇನ ಸಹಸೋ ಬಲವತೋ ಜನಾನಾ ನಮಂತಿ । ಇಮೇ ಮರುತೋ ವನುಷ್ಯತೋ ಹಿಂಸಕಾತ್ಪುರುಷಾಚ್ಛಂಸಂ ಶಂಸಕಂ ಸ್ತೋತಾರಂ ನಿ ಪಾಂತಿ । ನಿತರಾಂ ಪಾಲಯಂತಿ । ಅರರುಷೇ ಹವಿರಪ್ರಯಚ್ಛತೇ ಜನಾಯ ಗುರು ಮಹದ್ದ್ವೇಷೋಽಪ್ರಿಯಂ ದಧಂತಿ

ಪ್ರತಿಪದಾರ್ಥ

**ಇಮೇ ಮರುತಃ**— ಈ ಮರುತ್ತುಗಳು | **ತುರಂ**— ಕರ್ಮಾಸಕ್ತನಾದ ಯಜಮಾನನನ್ನು | **ರಮಯಂತಿ** —ಸಂತೋಷಗೊಳಿಸುತ್ತಾರೆ | **ಇಮೇ**— ಈ ಮರುತ್ತುಗಳು | **ಸಹಃ**— ತಮ್ಮ ಶಕ್ತಿಯಿಂದ | **ಸಹಸಃ**— ಶಕ್ತಿಯುತರಾದ ಜನರನ್ನು | **ಆ ನಮಂತಿ**— ಕುಗ್ಗಿಸುತ್ತಾರೆ | **ಇಮೇ**— ಈ ಮರುತ್ತುಗಳು | **ವನುಷ್ಯತಃ**— ಹಿಂಸಕನಾದ ಶತ್ರುವಿನಿಂದ | **ಶಂಸಂ**— ಪ್ರಶಸ್ಯನಾದ ಸ್ತುತಿಕರ್ತನನ್ನು | **ನಿ ಪಾಂತಿ**— ಪೂರ್ಣವಾಗಿ ರಕ್ಷಿಸುತ್ತಾರೆ | **ಅರರುಷೇ** —ಅದಾತೃವಾದ ಜನರಿಗೆ | **ಗುರು**— ಅಧಿಕವಾದ | **ದ್ವೇಷಃ**— ಕೆಟ್ಟದ್ದನ್ನು | **ದಧಂತಿ**— ಮಾಡುತ್ತಾರೆ.

ಭಾವಾರ್ಥ

ಈ ಮರುತ್ತುಗಳು ಕರ್ಮಾಸಕ್ತನಾದ ಯಜಮಾನನನ್ನ ಸಂತೋಷಗೊಳಿಸುತ್ತಾರೆ ಇವರು ತಮ್ಮ ಶಕ್ತಿಯಿಂದ ಶಕ್ತಿಯುತರಾದ ಶತ್ರುಜನರನ್ನು ಕುಗ್ಗಿಸುತ್ತಾರೆ. ಇದೇ ಮರುತ್ತುಗಳು ಹಿಂಸಕನಾದ ಶತ್ರುವಿನಿಂದ ಪ್ರಶಸ್ಯನಾದ ಸ್ತುತಿಕರ್ತನನ್ನು ಪೂರ್ಣವಾಗಿ ರಕ್ಷಿಸುತ್ತಾರೆ. ಅದಾತೃವಾದ ಲೋಭಿಗಳಿಗೆ,ಅಧಿಕವಾಗಿ ಕೆಟ್ಟದ್ದನ್ನು ಮಾಡುತ್ತಾರೆ

## English Translation

These, Maruts, give pleasure to the zealous (worshipper) these humble the strength of the strong man . these protect their adorers from the malignant : they entertain severe displeasure towards the withholder of offerings.

ಸಂಹಿತಾಪಾಠಃ

ಇಮೇ ರಧ್ರಂ ಚಿನ್ಮರುತೋ ಜುನಂತಿ ಭೃಮಿಂ ಚಿದ್ಯಥಾ ವಸವೋ ಜುಷಂತ ।
ಅಪ ಬಾಧಧ್ವಂ ವೃಷಣಸ್ತಮಾಂಸಿ ಧತ್ತ ವಿಶ್ವಂ ತನಯಂ ತೋಕಮಸ್ಮೇ ॥

ಪದಪಾಠಃ

ಇಮೇ | ರಧ್ರಂ | ಚಿತ್ | ಮರುತಃ | ಜುನಂತಿ | ಭೃಮಿಂ | ಚಿತ್ | ಯಥಾ | ವಸವಃ | ಜುಷಂತ | ಅಪ | ಬಾಧಧ್ವಂ | ವೃಷಣಃ | ತಮಾಂಸಿ | ಧತ್ತ | ವಿಶ್ವಂ | ತನಯಂ | ತೋಕಂ | ಅಸ್ಮೇ ಇತಿ ||

ಸಾಯಣಭಾಷ್ಯಂ

ಇಮೇ ಮರುತೋ ರಧ್ರಂ ಚಿತ್ ಸಮೃದ್ಧಮಪಿ ಜನಂ ಜುನಂತಿ | ಪ್ರೇರಯಂತಿ | ಭೃಮಿಂ ಚಿದ್ಭ್ರಮಣಶೀಲಮಪಿ ದರಿದ್ರಂ ಜುನಂತಿ | ಪ್ರೇರಯಂತಿ | ವಸವೋ ವಾಸಕಾ ದೇವಾ ಯುಷ್ಮಾನ್ಯಥಾ ಜುಷಂತೆ ಕಾಮಯೇರನ್ ಹೇ ವೃಷಣಃ ಕಾಮಾನಾಂ ವರ್ಷಿತಾರಃ ಶೇ ಯೂಯಂ ತಮಾಂಸ್ಯಪ ಬಾ-

ಧಧ್ವಂ । ವಾತಯತ । ಅಪಿ ಚಾಸ್ಮೇ ಅಸ್ಮಭ್ಯಂ ವಿಶ್ವಂ ಬಹುಲಂ ತೋಕಂ ಪುತ್ರಂ ತನಯಂ ಪೌತ್ರಂ ಚ ಧತ್ತ । ಪ್ರಯಚ್ಛತ ॥

ಪ್ರತಿಪದಾರ್ಥ

ಇಮೇ ಮರುತಃ—ಈ ಮರುತ್ತುಗಳು । ರಧ್ರಂ ಚಿತ್—ಸಂಪದ್ವೃದ್ಧನನ್ನು । ಜುನಂತಿ—ಪ್ರೇರಿಸುತ್ತಾರೆ । ಭೃಮಿಂ ಚಿತ್—ದರಿದ್ರನನ್ನೂ ಸಹ ಪ್ರೇರಿಸಿ ಉತ್ತೇಜನವನ್ನು ಕೊಡುತ್ತಾರೆ. । ವೃಷಣಃ—ಕಾಮವರ್ಷಕರಾದ ಎಲೈ ಮರುತ್ತುಗಳೇ । ಯಥಾ—ಯಾವ ಪ್ರಕಾರ । ವಸವಃ—ವಸತಿದಾಯಕರಾದ ದೇವತೆಗಳು । ಜುಷಂತ—ನಿಮ್ಮ ಕರ್ಮವನ್ನು ಆಶಿಸುವರೋ ಆರೀತಿ । ತಮಾಂಸಿ—ಕತ್ತಲೆಗಳನ್ನು । ಅಪ ಬಾಧಧ್ವಂ—ನಾಶಪಡಿಸಿರಿ । ಅಸ್ಮೇ—ನಮಗೆ । ವಿಶ್ವಂ—ಅನೇಕವಾಗಿ । ತೋಕಂ—ಪುತ್ರರನ್ನೂ । ತನಯಂ—ಪೌತ್ರರನ್ನೂ । ಧತ್ತ—ಕೊಡಿರಿ.

ಭಾವಾರ್ಥ

ಈ ಮರುತ್ತುಗಳು ಸಂಪದ್ವೃದ್ಧನನ್ನು ಯಾವ ರೀತಿ ಪ್ರೇರಿಸುವರೋ, ದರಿದ್ರನನ್ನೂ ಅದೇ ರೀತಿ ಪ್ರೇರಿಸಿ ಹುರಿದುಂಬಿಸುತ್ತಾರೆ. ಕಾಮವರ್ಷಕರಾದ ಎಲೈ ಮರುತ್ತುಗಳೇ, ವಸತಿದಾಯಕರಾದ ದೇವತೆಗಳು ಯಾವ ರೀತಿ ನಿಮ್ಮ ಕರ್ಮವನ್ನು ಆಶಿಸುವರೋ ಆರೀತಿ ಕತ್ತಲೆಗಳನ್ನು ನಾಶಪಡಿಸಿರಿ. ನಮಗೆ ಅನೇಕವಾಗಿ ಪುತ್ರರನ್ನೂ ಪೌತ್ರರನ್ನೂ ಕೊಡಿರಿ.

English Translation

These, Maruts, encourage the prosperous man they encourage the (poor) wanderer they, as Vasus, are pleased (with you) showerers (of benefits), dissipate the darkness grant us many sons and grandsons

ಸಂಹಿತಾಪಾಠಃ

ಮಾ ವೋ ದಾತ್ರಾನ್ಮರುತೋ ನಿರರಾಮ ಮಾ ಪಶ್ಚಾದ್ದಘ್ಮ ರಥ್ಯೋ ವಿಭಾಗೇ ।
ಆ ನಃ ಸ್ಪಾರ್ಹೇ ಭಜತನಾ ವಸವ್ಯೇ೩ ಯದೀಂ ಸುಜಾತಂ ವೃಷಣೋ ವೋ ಅಸ್ತಿ ॥ ೨೧ ॥

ಪದಪಾಠಃ

ಮಾ । ವಃ । ದಾತ್ರಾತ್ । ಮರುತಃ । ನಿಃ । ಅರಾಮ । ಮಾ । ಪಶ್ಚಾತ್ । ದಘ್ಮ । ರಥ್ಯಃ । ವಿಽಭಾಗೇ ।
ಆ । ನಃ । ಸ್ಪಾರ್ಹೇ । ಭಜತನ । ವಸವ್ಯೇ । ಯತ್ । ಈಂ । ಸುಽಜಾತಂ । ವೃಷಣಃ । ವಃ । ಅಸ್ತಿ ॥

ಸಾಯಣಭಾಷ್ಯಂ

ಹೇ ಮರುತಃ ವೋ ಯುಷ್ಮಾಕಂ ದಾತ್ರಾದ್ದಾನಾನ್ಮಾ ನಿರರಾಮ । ವಯಂ ಮಾ ನಿರ್ಗಮಾಮ । ಯೋಯಮಸ್ಮಾನ್ಪರಿತ್ಯಜ್ಯಾನ್ಯೇಭ್ಯೋ ಧನಂ ಮಾ ದತ್ತೇತ್ಯರ್ಥಃ । ಹೇ ರಥ್ಯೋ ರಥವಂತೋ

**ಮರುತಃ ವಿಭಾಗೇ ಯುಷ್ಮದೀಯಸ್ಯ ಧನಸ್ಯ ದಾನೇ ಪಶ್ಚಾಸ್ಮಾ ದಘ್ನ । ದಘ್ನೈತಿರ್ಗತಿಕರ್ಮಾ । ವಯಂ ಪಶ್ಚಾದ್ಭಾಗಿನೋ ಮಾ ಭೂಮ । ಯೂಯಂ ಪ್ರಥಮಮಸ್ಮಭ್ಯಮೇವ ದತ್ತೇತಿ ಯಾವತ್ । ಸ್ಪಾರ್ಹೇ ಸ್ಪೃಹಣೀಯೇ ವಸವ್ಯೇ ಧನಸಮೂಹೇ ಯೂಯಂ ನೋಽಸ್ಮಾನಾ ಭಜತನ । ಭಾಗಿನಃ ಕುರುತ । ಹೇ ವೃಷಣೋ ವರ್ಷಿತಾರೋ ಮರುತಃ ವೋ ಯುಷ್ಮಾಕಂ ಸುಜಾತಂ ಶೋಭನಜನಂ ಯದ್ವಸವ್ಯಮಸ್ತಿ ತಸ್ಮಿನ್ಭಾಗಿನಃ ಕುರುತೇತಿ ಸಂಬಂಧಃ । ಈಮಿತಿ ಪೂರಣಃ ॥**

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ವಃ**—ನಿಮ್ಮ । **ದಾತ್ರಾತ್**—ದಾನದಿಂದ । **ಮಾ ನಿರರಾಮ**—ನಾವು ಬಿಡುಗಡೆಯನ್ನು ಹೊಂದದಂತೆ ಇರಲಿ. । **ರಥ್ಯಃ**—ರಥವಂತರಾದ ಎಲೈ ಮರುತ್ತುಗಳೇ । **ವಿಭಾಗೇ**—ನಿಮ್ಮ ದಾನದ ಸ್ವೀಕಾರದಲ್ಲಿ । **ಪಶ್ಚಾತ್ ಮಾ ದಘ್ನ**—ನಾವು ಕೊನೆಯ ಅಂಶದ ಭಾಗಿಗಳಾಗುವಂತೆ ಮಾಡಬೇಡಿರಿ । **ಸ್ಪಾರ್ಹೇ**—ಅತ್ಯಪೇಕ್ಷಿತವಾದುದೂ, । **ವಸವ್ಯೇ**—ವಿಸ್ತೃತವಾದುದೂ ಆದ ಧನಸಮೂಹಕ್ಕೆ । **ನಃ**—ನಮ್ಮನ್ನು । **ಆ ಭಜತನ**—ಭಾಗಿಗಳಾಗುವಂತೆ ಮಾಡಿರಿ. । **ವೃಷಣಃ**—ಕಾಮವರ್ಷಕರಾದ ಎಲೈ ಮರುತ್ತುಗಳೇ । **ವಃ**—ನಿಮಗೆ ಸೇರಿದುದೂ । **ಸುಜಾತಂ**—ಉತ್ತಮವಾದ ಜನಭರಿತವಾದುದೂ ಆದ । **ಯತ್ ಅಸ್ತಿ**—ಯಾವ ನಿಮ್ಮ ಸಂಪತ್ತಿರುವುದೋ ಅದಕ್ಕೆ ನಾವು ಭಾಗಿಗಳಾಗುವಂತೆ ಮಾಡಿರಿ

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ದಾನವನ್ನು ನಮಗೆ ಯಾವಾಗಲೂ ತಪ್ಪಿಸಬೇಡಿರಿ ರಥವಂತರಾದ ಎಲೈ ಮರುತ್ತುಗಳೇ, ನಿಮ್ಮ ದಾನದ ಸ್ವೀಕಾರದಲ್ಲಿ ನಾವು ಕೊನೆಯ ಅಂಶದ ಭಾಗಿಗಳಾಗುವಂತೆ ಮಾಡಬೇಡಿರಿ ಅತ್ಯ ಪೇಕ್ಷಿತವಾದುದೂ, ಪುಷ್ಕಳವಾದುದೂ ಆದ ಧನಸಮೂಹಕ್ಕೆ ನಮ್ಮನ್ನು ಭಾಗಿಗಳಾಗುವಂತೆ ಮಾಡಿರಿ. ಕಾಮವರ್ಷಕ ರಾದ ಎಲೈ ಮರುತ್ತುಗಳೇ, ನಿಮಗೆ ಸೇರಿದುದೂ, ಉತ್ತಮವಾದ ಜನಭರಿತವಾದುದೂ ಆದ ಯಾವ ನಿಮ್ಮ ಸಂಪತ್ತಿರು ವುದೋ ಅದಕ್ಕೆ ನಾವು ಭಾಗಿಗಳಾಗುವಂತೆ ಮಾಡಿರಿ.

English Translation

Never, Maruts, may we be excluded from your bounty : let us not, lordsof chariots, be lost in its apportionment make us sharers in that desirable opulence which, showerers (of benefits), is born of you.

ಸಂಹಿತಾಪಾಠಃ

**ಸಂ ಯದ್ಧನಂತ ಮನ್ಯುಭಿರ್ಜನಾಸಃ ಶೂರಾ ಯಹ್ವೀಷ್ವೋಷಧೀಷು ವಿಕ್ಷು ।**

**ಅಧ ಸ್ಮಾ ನೋ ಮರುತೋ ರುದ್ರಿಯಾಸಸ್ತ್ರಾತಾರೋ ಭೂತ ಪೃತನಾ-ಸ್ವರ್ಯಃ ॥ ೨೨ ॥**

ಪದಪಾಠಃ

ಸಂ । ಯತ್ । ಹನಂತ । ಮನ್ಯುಽಭಿಃ । ಜನಾಸಃ । ಶೂರಾಃ । ಯಹ್ವೀಷು । ಓಷಧೀಷು । ವಿಕ್ಷು ।
ಅಧ । ಸ್ಮ । ನಃ । ಮರುತಃ । ರುದ್ರಿಯಾಸಃ । ತ್ರಾತಾರಃ । ಭೂತ । ಪೃತನಾಸು । ಅರ್ಯಃ ॥ ೨೨ ॥

ಸಾಯಣಭಾಷ್ಯಂ

ಯದ್ಯದಾ ಶೂರಾ ವಿಕ್ರಾಂತಾ ಜನಾಸೋ ಜನಾ ಯಹ್ವೀಷು ಮಹತೀಷ್ವೋಷಧೀಷು ವಿಕ್ಷು ಪ್ರಜಾಸು ಚ ಜೇತವ್ಯಾಸು ಮನ್ಯುಭಿಃ ಕ್ರೋಧೈರಭಿಮಾನೈರ್ವಾ ಸಂ ಹನಂತ ಸಂಗಚ್ಛಂತೇ ಅಧ ತದಾನೀಂ ಹೇ ರುದ್ರಿಯಾಸೋ ರುದ್ರಪುತ್ರಾ ಹೇ ಮರುತಃ ಯೂಯಂ ಪೃತನಾಸು ಯುದ್ಧೇಷ್ವರ್ಯೋಽರೇಃ ಶತ್ರೋಃ ಸಕಾಶಾನ್ನೋಽಸ್ಮಾಕಂ ತ್ರಾತಾರೋ ಭೂತ । ರಕ್ಷಕಾ ಭವತ ॥

ಪ್ರತಿಪದಾರ್ಥ

ರುದ್ರಿಯಾಸಃ—ರುದ್ರಪುತ್ರರಾದ । ಮರುತಃ—ಎಲೈ ಮರುತ್ತುಗಳೇ, । ಪೃತನಾಸು—ಯುದ್ಧಗಳಲ್ಲಿ । ಯತ್—ಯಾವಾಗ । ಶೂರಾಃ—ಪರಾಕ್ರಮಿಗಳಾದ । ಜನಾಸಃ—ಜನರು । ಯಹ್ವೀಷು—ಮಹತ್ತಾದ । ಓಷಧೀಷು—ಓಷಧಿಗಳಲ್ಲಿಯೂ । ವಿಕ್ಷು—ಪ್ರಜೆಗಳಲ್ಲಿಯೂ ಇರುವ ಸಂಪತ್ತನ್ನು ಜಯಿಸಬೇಕೆಂದು । ಮನ್ಯುಭಿಃ—ತಮ್ಮ ಕ್ರೋಧಗಳೊಡಗೂಡಿ । ಸಂ ಹನಂತ—ಒಟ್ಟಿಗೆ ಸೇರಿಕೊಳ್ಳುವರೋ । ಅಧ—ಆ ಕಾಲದಲ್ಲಿ । ಅರ್ಯಃ—ಶತ್ರುವಿನಿಂದ । ನಃ—ನಮಗೆ । ತ್ರಾತಾರಃ—ರಕ್ಷಕರಾಗಿ । ಭೂತ—ಆಗಿರಿ

ಭಾವಾರ್ಥ

ರುದ್ರಪುತ್ರರಾದ ಎಲೈ ಮರುತ್ತುಗಳೇ, ಯುದ್ಧಗಳಲ್ಲಿ ಯಾವಾಗ ಪರಾಕ್ರಮಿಗಳಾದ ಜನರು ಮಹತ್ತಾದ ಓಷಧಿಗಳನ್ನೂ ಪ್ರಜೆಗಳನ್ನೂ ಜಯಿಸಲು ತಮ್ಮ ಕ್ರೋಧಗಳೊಡಗೂಡಿ ಒಟ್ಟಿಗೆ ಸೇರಿಕೊಳ್ಳುವರೋ ಆ ಕಾಲದಲ್ಲಿ ಶತ್ರುವಿನಿಂದ ನಮ್ಮನ್ನು ರಕ್ಷಿಸಿರಿ

English Translation

When heroic men filled with wrath, assemble for(the sake of conquering) many plants and people, then Maruts, sons of Rudra, be our defenders in battles against our enemies

ಸಂಹಿತಾಪಾಠಃ

ಭೂರಿ ಚಕ್ರ ಮರುತಃ ಪಿತ್ರ್ಯಾಣ್ಯುಕ್ಥಾನಿ ಯಾ ವಃ ಶಸ್ಯಂತೇ ಪುರಾ ಚಿತ್ ।
ಮರುದ್ಭಿರುಗ್ರಃ ಪೃತನಾಸು ಸಾಳ್ಹಾ ಮರುದ್ಭಿರಿತ್ಸನಿತಾ ವಾಜಮರ್ವಾ ॥೨೩॥

ಪದಪಾಠಃ

ಭೂರಿ । ಚಕ್ರ । ಮರುತಃ । ಪಿತ್ರ್ಯಾಣಿ । ಉಕ್ಥಾನಿ । ಯಾ । ವಃ । ಶಸ್ಯಂತೇ । ಪುರಾ । ಚಿತ್ ।

ಮರುತ್ಽಭಿಃ । ಉಗ್ರಃ । ಪೃತನಾಸು । ಸಾಳ್ಹಾ । ಮರುತ್ಽಭಿಃ । ಇತ್ । ಸನಿತಾ । ವಾಜಂ । ಅರ್ವಾ ॥

ಸಾಯಣಭಾಷ್ಯಂ

ಹೇ ಮರುತಃ ಯೂಯಂ ಭೂರಿ ಭೂರೀಣಿ ಬಹೂನಿ ಪಿತ್ರ್ಯಾಣ್ಯಸ್ಮತ್ಪಿತೃಸಂಬಂಧೀನಿ ಧನದಾನಾದೀನಿ ಕರ್ಮಾಣಿ ಚಕ್ರ । ಕೃತವಂತೋ ಭವತ । ಪುರಾ ಚಿತ್ ಪೂರ್ವಕಾಲೇಽಪಿ ವೋ ಯುಷ್ಮಾಕಮುಕ್ಥಾನಿ ಪ್ರಶಸ್ಯಾನಿ ಯಾನಿ ಕರ್ಮಾಣಿ ಪ್ರಶಸ್ಯಂತೇ ಪ್ರಖ್ಯಾಯಂತೇ ತಾನಿ ಚಕ್ರೇತಿ ಸಂಬಂಧಃ । ಉಗ್ರ ಓಜಸ್ವೀ ಪೃತನಾಸು ಯುದ್ಧೇಷು ಮರುದ್ಭಿರ್ಯುಷ್ಮಾಭಿರ್ಹೇತುಭಿಃ ಸಾಳ್ಹಾ ಶತ್ರೂಣಾಮಭಿಭವಿತಾ ಭವತಿ । ಮರುದ್ಭಿರಿನ್ಮರುದ್ಭಿರ್ಯುಷ್ಮಾಭಿರೇವ ಹೇತುಭಿರರ್ವಾ ಸ್ತೋತ್ರೈರಭಿಗಂತಾ ವಾಜಮನ್ನಂ ಸನಿತಾ ಸಂಭಕ್ತಾ ಭವತಿ । ಯದ್ವಾ । ಅರ್ವಾಶ್ವೋ ವಾಜಂ ಯುದ್ಧಂ ಸನಿತಾ ಭವತಿ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ಪುರಾ ಚಿತ್**—ಪೂರ್ವಕಾಲದಲ್ಲಿಯೂ । **ವಃ**—ನಿಮ್ಮ । **ಯಾ ಉಕ್ಥಾನಿ ಶಸ್ಯಂತೇ**—ಯಾವ ಕರ್ಮಗಳು ಪ್ರಶಸ್ಯವಾಗಿ ಇದ್ದವೋ ಅಂತಹ । **ಭೂರಿ**—ಅಧಿಕವಾದುದೂ । **ಪಿತ್ರ್ಯಾಣಿ**—ನಮ್ಮ ಪಿತ್ರಾದಿಗಳಿಗೆ ಅನುಗ್ರಹಿಸಲ್ಪಟ್ಟುದೂ ಆದ ದಾನಾದಿಕರ್ಮಗಳನ್ನು । **ಚಕ್ರ**—ನೆರವೇರಿಸಿದ್ದೀರಿ । **ಉಗ್ರಃ**—ಅಧಿಕವಾದ ಬಲವುಳ್ಳವನು । **ಪೃತನಾಸು**—ಯುದ್ಧಗಳಲ್ಲಿ । **ಮರುದ್ಭಿಃ**—ಮರುತ್ತುಗಳೊಡಗೂಡಿ । **ಸಾಳ್ಹಾ**—ಶತ್ರುಗಳನ್ನು ಜಯಿಸಬಲ್ಲವನಾಗುತ್ತಾನೆ । **ಅರ್ವಾ**—ಸ್ತುತಿಗಳಿಂದ ಸಮೀಪಿಸುವ ಸ್ತುತಿಕರ್ತನು । **ಮರುದ್ಭಿರಿತ್**—ಮರುತ್ತುಗಳ ಸಹಾಯದಿಂದಲೇ । **ವಾಜಂ**—ಅನ್ನಕ್ಕೆ । **ಸನಿತಾ**—ಭಾಗಿಯಾಗುತ್ತಾನೆ.

ಭಾವಾರ್ಥ

ಎಲೈ ಮರುತ್ತುಗಳೇ, ಹಿಂದೆ ನಮ್ಮ ಪಿತ್ರಾದಿಗಳಿಗೆಲ್ಲಾ ಹಿತವಾದ ಯಾವ ದಾನಾದಿಕರ್ಮಗಳನ್ನು ಮಾಡಿದ್ದೀರೋ ಆ ಪ್ರಶಸ್ಯವಾದ ಕರ್ಮಗಳು ಈಗಲೂ ಪ್ರಶಂಸಿತವಾಗುತ್ತಿವೆ. ನಿಮ್ಮ ಸಹಾಯವಿದ್ದರೆ ಮಾತ್ರ ಓಜಸ್ವಿಯು ಶತ್ರುಗಳನ್ನು ಜಯಿಸಬಲ್ಲನು ಸ್ತುತಿಗಳಿಂದ ಮರುತ್ತುಗಳನ್ನು ಸಮೀಪಿಸುವ ಸ್ತುತಿಕರ್ತನು ಮಾತ್ರ ಮರುತ್ತುಗಳ ಸಹಾಯದಿಂದಲೇ ಅನ್ನಕ್ಕೆ ಭಾಗಿಯಾಗುತ್ತಾನೆ.

## English Translation

You have bestowed, Maruts, many (benefits) on our forefathers, which praiseworthy (benefits) have been celebrated in former times. by the (favour of the) Maruts the fierce (warrior) is victorious in combats: by the (favour of the) Maruts the worshipper ever obtains food.

ಸಂಹಿತಾಪಾಠಃ

ಅಸ್ಮೇ ವೀರೋ ಮರುತಃ ಶುಷ್ಮ್ಯಸ್ತು ಜನಾನಾಂ ಯೋ ಅಸುರೋ ವಿ-
ಧರ್ತಾ ।
ಅಪೋ ಯೇನ ಸುಕ್ಷಿತಯೇ ತರೇಮಾಧ ಸ್ವಮೋಕೋ ಅಭಿ ವಃ ಸ್ಯಾಮ ॥

ಪದಪಾಠಃ

ಅಸ್ಮೇ ಇತಿ । ವೀರಃ । ಮರುತಃ । ಶುಷ್ಮೀ । ಅಸ್ತು । ಜನಾನಾಂ । ಯಃ । ಅಸುರಃ । ವಿऽಧರ್ತಾ ।

ಅಪಃ । ಯೇನ । ಸುऽಕ್ಷಿತಯೇ । ತರೇಮ । ಅಧ । ಸ್ವಂ । ಓಕಃ । ಅಭಿ । ವಃ । ಸ್ಯಾಮ ॥ ೨೪ ॥

ಸಾಯಣಭಾಷ್ಯಂ

ಹೇ ಮರುತಃ ಅಸ್ಮೇ ಅಸ್ಮಾಕಂ ವೀರಃ ಪುತ್ರಃ ಶುಷ್ಮ್ಯಸ್ತು । ಬಲವಾನ್ಭವತು । ಅಸುರಃ ಪ್ರ-ಜ್ಞಾವಾನ್ಯೋ ಜನಾನಾಂ ಶತ್ರೂಣಾಂ ವಿಧರ್ತಾ ವಿಧಾರಕಃ । ಯೇನ ಪುತ್ರೇಣ ವಯಂ ಸುಕ್ಷಿತಯೇ ಸುಷ್ಠು ನಿವಾಸಾಯಾಪ ಆಪ್ನುವತಃ ಶತ್ರೂಂಸ್ತರೇಮ ಹಿಂಸೇಮ । ಸ ಪುತ್ರೋ ಬಲವಾನಸ್ತ್ವಿತಿ ಪೂ-ರ್ವೇಣಾನ್ವಯಃ । ಅಧಾಪಿ ಚ ವೋ ಯುಷ್ಮದೀಯಾ ವಯಂ ಸ್ವಮೋಕ ಆತ್ಮೀಯಂ ಸ್ಥಾನಮಭಿ ಸ್ಯಾಮ । ಅತಿಷ್ಠೇಮ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ಅಸ್ಮೇ**—ನಮ್ಮ । **ಅಸುರಃ**—ಪ್ರಜ್ಞಾವಂತನಾದ । **ಯಃ**—ಯಾವ ನಮ್ಮ ಪುತ್ರನು । **ಜನಾನಾಂ**—ಶತ್ರುಜನರಿಗೆ । **ವಿಧರ್ತಾ**—ನಿರೋಧಕನಾಗಿರುವನೋ । **ಯೇನ**—ಯಾವ ಪುತ್ರನ ಸಹಾಯದಿಂದ । **ಸುಕ್ಷಿತಯೇ**—ಉತ್ತಮವಾದ ಗೃಹಲಾಭಕ್ಕಾಗಿ । **ಅಪಃ**—ವ್ಯಾಪಕನಾದ ಶತ್ರುವನ್ನು । **ತರೇಮ**—ನಾವು ಹಿಂಸಿಸಬಲ್ಲೆವೋ ಅಂತಹ । **ವೀರಃ**—ವೀರಪುತ್ರನು । **ಶುಷ್ಮೀ**—ಬಲಯುತನಾಗಿ । **ಅಸ್ತು**—ಆಗಲಿ. । **ಅಧ**—ಮತ್ತು । **ವಃ**—ನಿಮಗೆ ಸೇರಿದ ನಾವು । **ಸ್ವಂ ಓಕಃ**—ನಮ್ಮ ನಮ್ಮ ವಾಸಗೃಹವನ್ನು । **ಅಭಿ ಸ್ಯಾಮ**—ಸೇರಿಕೊಳ್ಳುವಂತಾಗಲಿ

ಭಾವಾರ್ಥ

ಎಲೈ ಮರುತ್ತುಗಳೇ, ನಮ್ಮ ವೀರಪುತ್ರನು ಬಲಯುತನಾಗಲಿ. ಪ್ರಜ್ಞಾವಂತನಾದ ಯಾವನು ಶತ್ರುಜನರಿಗೆ ನಿರೋಧಕನಾಗಿರುವನೋ, ಯಾವ ಪುತ್ರನ ಸಹಾಯದಿಂದ ನಾವು ಶತ್ರುವನ್ನು ನಾಶಮಾಡಿ ಉತ್ತಮವಾದ ಗೃಹವನ್ನು ಪಡೆಯಬಲ್ಲೆವೋ ಅಂತಹ ನಮ್ಮ ಪುತ್ರನ ಶಕ್ತಿಯನ್ನು ವೃದ್ಧಿಪಡಿಸಿರಿ ನಿಮ್ಮ ಆರಾಧಕರಾದ ನಾವು ನಮ್ಮ ನಮ್ಮ ವಾಸಗೃಹಗಳನ್ನು ಸೇರಿಕೊಳ್ಳುವಂತಾಗಲಿ

English Translation

May our male progeny, Maruts, be vigorous, one who is intelligent, the scatterer of (hostile) men, by whom we may cross the water (of enmity) to a secure dwelling · may we, your (servants), dwell in our own abode.

ಸಂಹಿತಾಪಾಠಃ

ತನ್ನ ಇಂದ್ರೋ ವರುಣೋ ಮಿತ್ರೋ ಅಗ್ನಿರಾಪ ಓಷಧೀರ್ವನಿನೋ ಜುಷಂತ ।
ಶರ್ಮನ್ಸ್ಯಾಮ ಮರುತಾಮುಪಸ್ಥೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ

ಪದಪಾಠಃ

ತತ್ । ನಃ । ಇಂದ್ರಃ । ವರುಣಃ । ಮಿತ್ರಃ । ಅಗ್ನಿಃ । ಆಪಃ । ಓಷಧೀಃ । ವನಿನಃ । ಜುಷಂತ ।

ಶರ್ಮನ್ । ಸ್ಯಾಮ । ಮರುತಾಂ । ಉಪಽಸ್ಥೇ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥೨೫॥

ಸಾಯಣಭಾಷ್ಯಂ

ಪೂರ್ವಂ ವ್ಯಾಖ್ಯಾತೇಯಂ । ಅಕ್ಷರಾರ್ಥಸ್ತು । ಇಂದ್ರಾದಯೋ ದೇವಾ ಅಸ್ಮದೀಯಂ ಸ್ತೋತ್ರಂ ಸೇವಂತಾಂ । ಮರುತಾಮುಪಸ್ಥಾನೇ ವರ್ತಮಾನಾ ವಯಂ ಸುಖೇ ಸ್ಯಾಮ । ಹೇ ಮರುತಃ ಯೂಯಂ ಸರ್ವದಾಸ್ಮಾನವಿನಾಶೈಃ ಪಾಲಯತ ॥

ಪ್ರತಿಪದಾರ್ಥ

ನಃ—ನಮ್ಮ । ತತ್—ಈ ಸ್ತೋತ್ರವನ್ನು । ಇಂದ್ರಃ—ಇಂದ್ರನೂ । ವರುಣಃ—ವರುಣನೂ । ಮಿತ್ರಃ—ಮಿತ್ರನೂ । ಅಗ್ನಿಃ—ಅಗ್ನಿಯೂ । ಆಪಃ—ಅಬ್ದೇವತೆಗಳೂ । ಓಷಧೀಃ—ಓಷಧಿಗಳೂ । ವನಿನಃ—ವೃಕ್ಷಗಳೂ । ಜುಷಂತ—ಸೇವಿಸಲಿ. । (ವಯಂ—ನಾವು) । ಮರುತಾಂ—ಮರುತ್ತುಗಳ । ಉಪಸ್ಥೇ—ಸಮೀಪದಲ್ಲಿ ಕುಳಿತವರಾಗಿ । ಶರ್ಮನ್—ಸುಖಕರವಾದ ಗೃಹದಲ್ಲಿ । ಸ್ಯಾಮ—ಇರುವಂತಾಗಲಿ. । (ಎಲೈ ದೇವತೆಗಳೇ,) ಯೂಯಂ—ನೀವು । ಸದಾ—ಯಾವಾಗಲೂ । ನಃ—ನಮ್ಮನ್ನು । ಸ್ವಸ್ತಿಭಿಃ—ಕಲ್ಯಾಣಗಳಿಂದ । ಪಾತ—ರಕ್ಷಿಸಿರಿ.

ಭಾವಾರ್ಥ

ನಮ್ಮ ಈ ಸ್ತೋತ್ರವನ್ನು ಇಂದ್ರನೂ, ವರುಣನೂ, ಮಿತ್ರನೂ, ಅಗ್ನಿಯೂ, ಅಬ್ದೇವತೆಗಳೂ, ಓಷಧಿಗಳೂ, ವೃಕ್ಷಗಳೂ ಸೇವಿಸಲಿ ನಾವು ಮರುತ್ತುಗಳ ಸಮೀಪವರ್ತಿಗಳಾಗಿ ಸುಖಕರವಾದ ಗೃಹದಲ್ಲಿರುವಂತಾಗಲಿ ಎಲೈ ದೇವತೆಗಳೇ, ನೀವು ಯಾವಾಗಲೂ ನಮ್ಮನ್ನು ಕಲ್ಯಾಣಗಳಿಂದ ರಕ್ಷಿಸಿರಿ.

## English Translation

May Indra, Varuna, Mitra, Agni, the waters, the plants, the trees, be pleased with us : may we raclıne in happiness upon the lap of the Maruts : and do you ever cherısh us with blessings.

———

# ಐವತ್ತೇಳನೆಯ ಸೂಕ್ತವು

ಸಾಯಣಭಾಷ್ಯಂ

**ಮಧ್ವೋ ವ ಇತಿ ಸಪ್ತರ್ಚಂ ದ್ವಿತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ಮರುದ್ದೇವತಾಕಂ । ಮಧ್ವಃ ಸಪ್ತೇತ್ಯನುಕ್ರಾಂತಂ ॥ ದಶರಾತ್ರೇ ಷಷ್ಠೇಽಹನ್ಯಾಗ್ನಿಮಾರುತ ಇದಂ ಮಾರುತನಿವಿದ್ಧಾನಂ । ಸೂತ್ರಿತಂ ಚ । ಮಧ್ವೋ ವೋ ನಾಮ ಸ ಪ್ರತ್ನಥೇತ್ಯಾಗ್ನಿಮಾರುತಂ । ಆ ೮-೮ । ಇತಿ ॥**

**ಅನುವಾದವು**--**ಮಧ್ವೋ ವಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಮರುತ್ತುಗಳು ದೇವತೆಯು, ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ **ಮಧ್ವಃ ಸಪ್ತ** ಎಂದು ಹೇಳಿರುವುದು ದಶರಾತ್ರವೆಂಬ ಯಾಗದ ಆರನೆಯ ದಿವಸ ಆಗ್ನಿಮಾರುತಶಸ್ತ್ರಗಳನ್ನು ಪಠಿಸುವಾಗ ಈ ಸೂಕ್ತವನ್ನು ನಿವಿದ್ಧಾನಸೂಕ್ತವನ್ನಾಗಿ ಸೇರಿಸಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಮಧ್ವೋ ವೋ ನಾಮ ಸ ಪ್ರತ್ನಥೇತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ (ಆ ೮ ೮) ವಿಸ್ತೃತವಾಗಿರುವುದು

## ಸೂಕ್ತ—೫೭

ಮಂಡಲ—೭ ॥ ಅನುವಾಕ—೪ ॥ ಸೂಕ್ತ —೫೭ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೨೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ವಸಿಷ್ಠಃ ॥
ದೇವತಾ— ಮರುತಃ ॥
ಛಂದಃ— ತ್ರಿಷ್ಟುಪ್ ॥

ಸಂಹಿತಾಪಾಠಃ

ಮಧ್ವೋ ವೋ ನಾಮ ಮಾರುತಂ ಯಜತ್ರಾಃ ಪ್ರ ಯಜ್ಞೇಷು ಶವಸಾ ಮದಂತಿ ।
ಯೇ ರೇಜಯಂತಿ ರೋದಸೀ ಚಿದುರ್ವೀ ಪಿನ್ವಂತ್ಯುತ್ಸಂ ಯದಯಾಸುರುಗ್ರಾಃ ॥ ೧ ॥

ಪದಪಾಠಃ

**ಮಧ್ವಃ । ವಃ । ನಾಮ । ಮಾರುತಂ । ಯಜತ್ರಾಃ । ಪ್ರ । ಯಜ್ಞೇಷು । ಶವಸಾ । ಮದಂತಿ । ಯೇ । ರೇಜಯಂತಿ । ರೋದಸೀ ಇತಿ । ಚಿತ್ । ಉರ್ವೀ ಇತಿ । ಪಿನ್ವಂತಿ । ಉತ್ಸಂ । ಯತ್ । ಅಯಾಸುಃ । ಉಗ್ರಾಃ ॥ ೧ ॥**

### ಸಾಯಣಭಾಷ್ಯಂ

ಹೇ ಯಜತ್ರಾ ಯಜನೀಯಾ ಮರುತಃ ವೋ ಯುಷ್ಮದೀಯಂ ಮಾರುತಂ ಮರುತ್ಸಂಬಂಧಿ ನಾಮ ನಾಮಧೇಯಂ ಮಧ್ವೋ ಮಧವೋ ಮಾದಯಿತಾರಃ ಸ್ತೋತಾರೋ ಯಜ್ಞೇಷು ಯಾಗೇಷು ಶವಸಾ ಬಲೇನ ಪ್ರ ಮದಂತಿ । ಪ್ರಕರ್ಷೇಣ ಸ್ತುವಂತಿ । ಉಚ್ಚೈಃ ಸ್ತುವಂತೀತ್ಯರ್ಥಃ । ಯೇ ಮರುತ ಉರ್ವೀ ವಿಸ್ತೀರ್ಣೇ ರೋದಸೀ ಚಿದ್ದ್ಯಾವಾಪೃಥಿವ್ಯಾವಪಿ ರೇಜಯಂತಿ ಕಂಪಯಂತಿ ಕಿಂಚೋತ್ಸಂ ಮೇಘಂ ಪಿನ್ವಂತಿ ವರ್ಷಯಂತಿ ಉಗ್ರಾ ಉದ್ಗೂರ್ಣಾ ಯದ್ಯೇ ಮರುತೋಽಯಾಸಃ ಯಾಂತಿ ಸರ್ವತ್ರ ಗಚ್ಛಂತಿ । ತೇಷಾಂ ಮರುತಾಂ ಯುಷ್ಮಾಕಂ ನಾಮ ಪ್ರ ಮದಂತೀತಿ ಪೂರ್ವೇಣಾನ್ವಯಃ ॥

### ಪ್ರತಿಪದಾರ್ಥ

**ಯಜತ್ರಾಃ**—ಪೂಜ್ಯರಾದ ಎಲೈ ಮರುತ್ತುಗಳೇ, । **ಯೇ**—ಯಾವ ನೀವು । **ಉರ್ವೀ**—ವಿಸ್ತೃತವಾದ । **ರೋದಸೀ ಚಿತ್**—ದ್ಯಾವಾಪೃಥಿವಿಗಳನ್ನೂ ಸಹ । **ರೇಜಯಂತಿ**—ಕಂಪಿಸುವಂತೆ ಮಾಡುವಿರೋ । **ಯತ್**—ಯಾವ ನೀವು । **ಉಗ್ರಾಃ**—ಅತ್ಯಧಿಕವಾದ ಬಲವುಳ್ಳವರಾಗಿ । **ಅಯಾಸಃ**—ಸರ್ವತ್ರ ಸಂಚರಿಸುವಿರೋ ಅಂತಹ । **ವಃ**—ನಿಮ್ಮ । **ಮಾರುತಂ**—ಮರುತ್ಸಂಬಂಧಿಯಾದ । **ನಾಮ**—ನಾಮಧೇಯವನ್ನು । **ಮಧ್ವಃ**—ನಿಮಗೆ ಹರ್ಷ ಜನಕರಾದ ಸ್ತುತಿಕರ್ತರು । **ಯಜ್ಞೇಷು**—ಯಾಗಗಲ್ಲಿ । **ಶವಸಾ**—ಶಕ್ತಿಯಿಂದ ಕೂಡಿ । **ಪ್ರ ಮದಂತಿ**—ಹರ್ಷ ಜನಕವಾಗುವಂತೆ ಸ್ತುತಿಸುತ್ತಾರೆ

### ಭಾವಾರ್ಥ

ಪೂಜಾರ್ಹರಾದ ಎಲೈ ಮರುತ್ತುಗಳೇ, ಯಾವ ನೀವು ವಿಸ್ತೃತವಾದ ದ್ಯಾವಾಪೃಥಿವಿಗಳನ್ನು ಕಂಪಿಸುವಂತೆ ಮಾಡುವಿರೋ ಮತ್ತು ಮೇಘವನ್ನು ವೃಷ್ಟಿಕಾರಕವಾಗುವಂತೆ ಮಾಡುವಿರೋ, ಯಾವ ನೀವು ಅತ್ಯಧಿಕವಾದ ಬಲವುಳ್ಳವರಾಗಿ ಸರ್ವತ್ರ ಸಂಚರಿಸುವಿರೋ ಅಂತಹ ನಿಮ್ಮ ಮರುತ್ಸಂಬಂಧಿಯಾದ ನಾಮಧೇಯವನ್ನು ನಿಮಗೆ ಹರ್ಷಕಾರಕರಾದ ಸ್ತುತಿಕರ್ತರು ಯಾಗಗಳಲ್ಲಿ ಶಕ್ತಿಯಿಂದ ಕೂಡಿ ಹರ್ಷಜನಕವಾಗುವಂತೆ ಸ್ತುತಿಸುತ್ತಾರೆ

### English Translation

Adorable (Maruts), the worshippers vigorously celebrate at sacrifices your appellation of company of the Maruts, they who cause the spacious heaven and earth to tremble, the clouds to rain, and move everywhere terrible.

### ಸಂಹಿತಾಪಾಠಃ

ನಿಚೇತಾರೋ ಹಿ ಮರುತೋ ಗೃಣಂತಂ ಪ್ರಣೇತಾರೋ ಯಜಮಾನಸ್ಯ ಮನ್ಮ ।

ಅಸ್ಮಾಕಮದ್ಯ ವಿದಥೇಷು ಬರ್ಹಿರಾ ವೀತಯೇ ಸದತ ಪಿಪ್ರಿಯಾಣಾಃ ॥೨॥

ಪದಪಾಠಃ

ನಿಽಚೇತಾರಃ । ಹಿ । ಮರುತಃ । ಗೃಣಂತಂ । ಪ್ರಽನೇತಾರಃ । ಯಜಮಾನಸ್ಯ । ಮನ್ಮ ।

ಅಸ್ಮಾಕಂ । ಅದ್ಯ । ವಿದಥೇಷು । ಬರ್ಹಿಃ । ಆ । ವೀತಯೇ । ಸದತ । ಪಿಪ್ರಿಯಾಣಾಃ ॥ ೨ ॥

ಸಾಯಣಭಾಷ್ಯಂ

ಯೇ ಮರುತೋ ಗೃಣಂತಂ ಸ್ತುವಂತಂ ಜನಂ ನಿಚೇತಾರೋ ಹಿ ಮೃಗಯಮಾಣಾ ಭವಂತಿ ಖಲು ಅಪಿ ಚ ಯಜಮಾನಸ್ಯ ಮನ್ಮಾಭಿಮತಂ ಕಾಮಂ ಪ್ರಣೇತಾರಶ್ಚ ಭವಂತಿ । ಅಪರೋಽರ್ಧರ್ಚಃ ಪ್ರತ್ಯಕ್ಷಕೃತಃ । ಹೇ ಮರುತಃ ಯೂಯಂ ಪಿಪ್ರಿಯಾಣಾಃ ಪ್ರೀಯಮಾಣಾಃ ಸಂತೋಽದ್ಯಾಸ್ಮಿನ್ನಿವಸೇಽಸ್ಮಾಕಂ ವಿದಥೇಷು ಯಜ್ಞೇಷು ವೀತಯೇ ಸೋಮಸ್ಯ ಭಕ್ಷಣಾಯ ಬರ್ಹಿರ್ಬರ್ಹಿಷಿ ಕುಶಮಯ ಆ ಸದತ । ಆಸೀದತ । ಉಪವಿಶತ ॥

ಪ್ರತಿಪದಾರ್ಥ

**ಮರುತಃ**—ಮರುತ್ತುಗಳು । **ಗೃಣಂತಂ**—ಸ್ತುತಿಸುವ ಜನವನ್ನು । **ನಿಚೇತಾರೋ ಹಿ**—ಹುಡುಕಿಕೊಂಡು ಹೋಗುತ್ತಾರೆ । **ಯಜಮಾನಸ್ಯ**—ಯಜ್ಞಕರ್ತನ । **ಮನ್ಮ**—ಇಷ್ಟಾರ್ಥವನ್ನು । **ಪ್ರಣೇತಾರಃ**— ನೆರವೇರಿಸುತ್ತಾರೆ. । (ಎಲೈ ಮರುತ್ತುಗಳೇ) **ಪಿಪ್ರಿಯಾಣಾಃ**—ಪ್ರೀತಿಯನ್ನು ಹೊಂದಿರುವ ನೀವು । **ಅದ್ಯ**—ಈ ಯಾಗ ದಿನದಲ್ಲಿ । **ಅಸ್ಮಾಕಂ**—ನಮ್ಮ । **ವಿದಥೇಷು**—ಯಜ್ಞಗಳಲ್ಲಿ । **ವೀತಯೇ**—ಸೋಮಪಾನಾರ್ಥವಾಗಿ । **ಬರ್ಹಿಃ**—ದರ್ಭಾಸನದ ಮೇಲೆ । **ಆ ಸದತ**—ಕುಳಿತುಕೊಳ್ಳಿರಿ

ಭಾವಾರ್ಥ

ಮರುತ್ತುಗಳು ತಮ್ಮ ಸ್ತುತಿಕರ್ತರನ್ನು ಹುಡುಕಿಕೊಂಡು ಹೋಗುತ್ತಾರೆ ಯಜ್ಞಕರ್ತನ ಇಷ್ಟಾರ್ಥವನ್ನು ನೆರವೇರಿಸುತ್ತಾರೆ. ಎಲೈ ಮರುತ್ತುಗಳೇ, ಪ್ರೀತಿಯನ್ನು ಪ್ರಕಟಿಸುವ ನೀವು ಈ ಯಾಗದಿನದಲ್ಲಿ ನಮ್ಮ ಯಜ್ಞಗಳಲ್ಲಿ ಸೋಮಪಾನಾರ್ಥವಾಗಿ ದರ್ಭಾಸನದ ಮೇಲೆ ಕುಳಿತುಕೊಳ್ಳಿರಿ

English Translation

The Maruts verily are the benefactors of him who praises them, the gratifiers of the wishes of the institutor of the solemnity . do you, being pleased, sit down to-day upon the grass at our ceremony, to partake (of the sacrificial food).

ಸಂಹಿತಾಪಾಠಃ

ನೈತಾವದನ್ಯೇ ಮರುತೋ ಯಥೇಮೇ ಭ್ರಾಜಂತೇ ರುಕ್ಮೈರಾಯುಧೈಸ್ತ-
ನೂಭಿಃ ।
ಆ ರೋದಸೀ ವಿಶ್ವಪಿಶಃ ಪಿಶಾನಾಃ ಸಮಾನಮಂಜ್ಯಂಜತೇ ಶುಭೇ ಕಂ ॥ ೩ ॥

ಪದಪಾಠಃ

ನ । ಏತಾವತ್ । ಅನ್ಯೇ । ಮರುತಃ । ಯಥಾ । ಇಮೇ । ಭ್ರಾಜಂತೇ । ರುಕ್ಮೈಃ । ಆಯುಧೈಃ ।
ತನೂಭಿಃ ।

ಆ । ರೋದಸೀ ಇತಿ । ವಿಶ್ವSಪಿಶಃ । ಪಿಶಾನಾಃ । ಸಮಾನಂ । ಅಂಜಿ । ಅಂಜತೇ । ಶುಭೇ । ಕಂ ॥ ೩

ಸಾಯಣಭಾಷ್ಯಂ

ಇಮ ಈದೃಶಾ ಮರುತೋ ಯಥಾ ಯತ್ಪರಿಮಾಣಂ ಧನಾದಿಕಂ ದದತಿ ಅನ್ಯೇ ಮರುದ್ವ್ಯತಿರಿಕ್ತಾ ದೇವಾ ಏತಾವದ್ಧನಾದಿಕಂ ನ ದದ್ಯುರಿತ್ಯರ್ಥಃ । ತೇ ಚ ರುಕ್ಮೈ ರೋಚಮಾನೈರಾಭರಣೈರಾಯುಧೈಃ ಸ್ವಕೀಯಾಸ್ತ್ರೈಸ್ತನೂಭಿರಾತ್ಮೀಯೈಃ ಕೇವಲೈರಂಗೈಶ್ಚ ಭ್ರಾಜಂತೇ । ಸರ್ವದಾ ಭಾಸಂತೇ । ಕಶ್ಚಿದೇಕವಾಕ್ಯತಾಮಾಹ । ಯಥೇಮೇ ಮರುತೋ ರುಕ್ಮಾದಿಭಿರ್ಭ್ರಾಜಂತೇ ನೈತಾವದೇತದ್ವ್ಯತಿರಿಕ್ತಾ ಭ್ರಾಜಂತ ಇತಿ । ಅಪಿ ಚ ರೋದಸೀ ದ್ಯಾವಾಪೃಥಿವ್ಯೌ ಪಿಶಾನಾಃ ಪ್ರಕಾಶಯಂತೋ ವಿಶ್ವಪಿಶೋ ವ್ಯಾಪ್ತದೀಪ್ತಯ ಏವಂಭೂತಾ ಮರುತಃ ಶುಭೇ ಶೋಭಾಯೈ ಸಮಾನಂ ಸದೃಶರೂಪಮಂಜ್ಯಾಭರಣಮಾಂಜತೇ । ಸ್ವಕೀಯಾವಯವೇಷ್ವಭಿವ್ಯಕ್ತೀಕುರ್ವಂತಿ । ಕಮಿತಿ ಪೂರಣಃ ॥

ಪ್ರತಿಪದಾರ್ಥ

**ಇಮೇ ಮರುತಃ**— ಈ ಮರುತ್ತುಗಳು । **ಯಥಾ**— ಯಾವ ಪ್ರಮಾಣದಲ್ಲಿ ಧನಾದಿಗಳನ್ನು ಕೊಡುವರೋ **ಏತಾವತ್**— ಅದೇ ಪ್ರಮಾಣದಲ್ಲಿ । **ಅನ್ಯೇ**— ಇತರ ದೇವತೆಗಳು । **ನ**— ಕೊಡುವುದಿಲ್ಲ. । (**ತೇ**— ಅವರು) । **ರುಕ್ಮೈಃ**— ಹೊಂಬಣ್ಣವುಳ್ಳವೂ । **ಆಯುಧೈಃ**— ಆಯುಧಗಳಿಂದ ಕೂಡಿದವೂ ಆದ । **ತನೂಭಿಃ**— ಶರೀರಗಳಿಂದ । **ಭ್ರಾಜಂತೇ**— ಪ್ರಕಾಶಿಸುತ್ತಾರೆ. । **ರೋದಸೀ**— ದ್ಯಾವಾಪೃಥಿವಿಗಳನ್ನು । **ಪಿಶಾನಾಃ**— ಪ್ರಕಾಶಿಸುವಂತೆ ಮಾಡುತ್ತಲೂ । **ವಿಶ್ವಪಿಶಃ**— ಸರ್ವತ್ರ ಹರಡಿದ ಕಾಂತಿಯುಳ್ಳವರೂ ಆದ ಮರುತ್ತುಗಳು । **ಶುಭೇ**— ತಮ್ಮ ದೇಹದ ಅಲಂಕಾರಕ್ಕಾಗಿ । **ಸಮಾನಂ**— ಒಂದೇ ರೂಪವುಳ್ಳ । **ಅಂಜಿ**— ಆಭರಣವನ್ನು । **ಆ ಅಂಜತೇ**— ಧರಿಸಿಕೊಂಡಿರುತ್ತಾರೆ

ಭಾವಾರ್ಥ

ಮರುತ್ತುಗಳು ಯಜಮಾನರಿಗೆ ಯಾವ ಪ್ರಮಾಣದಲ್ಲಿ ಧನಾದಿಗಳನ್ನು ಕೊಡುವರೋ ಅದೇ ಪ್ರಮಾಣದಲ್ಲಿ ಇತರ ದೇವತೆಗಳು ಕೊಡುವುದಿಲ್ಲ ಅವರು ಹೊಂಬಣ್ಣವುಳ್ಳವೂ ಆಯುಧಗಳಿಂದ ಕೂಡಿದವೂ ಆದ ಶರೀರಗಳಿಂದ ಪ್ರಕಾಶಿಸುತ್ತಾರೆ ಮತ್ತು ದ್ಯಾವಾಪೃಥಿವಿಗಳನ್ನು ಪ್ರಕಾಶಿಸುವಂತೆ ಮಾಡುತ್ತಲೂ, ಸರ್ವತ್ರ ಹರಡಿದ ಕಾಂತಿಯುಳ್ಳವರೂ ಆದ ಮರುತ್ತುಗಳು ತಮ್ಮ ದೇಹದ ಅಲಂಕಾರಕ್ಕಾಗಿ ಒಂದೇ ರೂಪವುಳ್ಳ ಆಭರಣವನ್ನು ಧರಿಸಿಕೊಂಡಿರುತ್ತಾರೆ.

## English Translation

No other (deities give) such (good things) as the Maruts, as they shine with brilliant (ornaments), weapons, and persons: illumining heaven and earth, wide radiating, they heighten their common lustre for (our) good,

ಸಂಹಿತಾಪಾಠಃ

ಋಧಕ್ಸಾ ವೋ ಮರುತೋ ದಿದ್ಯುದಸ್ತು ಯದ್ವ ಆಗಃ ಪುರುಷತಾ ಕರಾಮ

ಮಾ ವಸ್ತಸ್ಯಾಮಪಿ ಭೂಮಾ ಯಜತ್ರಾ ಅಸ್ಮೇ ವೋ ಅಸ್ತು ಸುಮತಿಶ್ಚ-

ನಿಷ್ಠಾ ॥ ೪ ॥

ಪದಪಾಠಃ

ಋಧಕ್ । ಸಾ । ವಃ । ಮರುತಃ । ದಿದ್ಯುತ್ । ಅಸ್ತು । ಯತ್ । ವಃ । ಆಗಃ । ಪುರುಷತಾ । ಕರಾಮ ।

ಮಾ । ವಃ । ತಸ್ಯಾಂ । ಅಪಿ । ಭೂಮ । ಯಜತ್ರಾಃ । ಅಸ್ಮೇ ಇತಿ । ವಃ । ಅಸ್ತು । ಸುಽಮತಿಃ ।

ಚನಿಷ್ಠಾ ॥ ೪ ॥

ಸಾಯಣಭಾಷ್ಯಂ

ಹೇ ಮರುತಃ ವೋ ಯುಷ್ಮದೀಯಾ ಸಾ ಪ್ರಸಿದ್ಧಾ ದಿದ್ಯುದ್ಧೇತಿರ್ಋಧಗಸ್ತು । ಅಸ್ಮತ್ತಃ ಪೃಥಗ್ಭವತು । ಯದ್ಯದ್ಯಪಿ ವಯಂ ವೋ ಯುಷ್ಮಾಕಮಾಗೋಽಪರಾಧಂ ಪುರುಷತಾ ಪುರುಷತಯಾ ಮನುಷ್ಯತ್ವೇನ ಕರಾಮ ಕರವಾಮ । ಮನುಷ್ಯಾಣಾಂ ಹಿ ಪ್ರಮಾದಃ ಸುಲಭ ಇತ್ಯರ್ಥಃ । ಹೇ ಯಜತ್ರಾ ಯಜನೀಯಾ ಮರುತಃ ವೋ ಯುಷ್ಮದೀಯಾಯಾಂ ತಸ್ಯಾಂ ದಿದ್ಯುತ್ಯಪೀಷದಪಿ ಮಾ ಭೂಮ । ಚನಿಷ್ಠಾನ್ನವತ್ತಮಾ । ಅತಿಶಯೇನಾನ್ನಪ್ರದೇತ್ಯರ್ಥಃ । ವೋ ಯುಷ್ಮದೀಯಾ ಸುಮತಿರನುಗ್ರಹಬುದ್ಧಿರಸ್ಮೇ ಅಸ್ಮಾಸ್ವಸ್ತು ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ವಃ** — ನಿಮಗೆ ಸೇರಿದುದೂ । **ಸಾ** — ಪ್ರಸಿದ್ಧವಾದುದೂ ಆದ । **ದಿದ್ಯುತ್**—ಆಯುಧವು । **ಋಧಕ್ ಅಸ್ತು**—ನಮ್ಮಿಂದ ದೂರವಾಗಿರಲಿ । **ಯಜತ್ರಾಃ**—ಯಜ್ಞಾರ್ಹರಾದ ಎಲೈ ಮರುತ್ತುಗಳೇ । **ಯತ್**—ಒಂದುವೇಳೆ । **ವಃ**—ನಿಮ್ಮ ವಿಷಯದಲ್ಲಿ । **ಆಗಃ**—ಪಾಪವನ್ನು । **ಪುರುಷತಾ**—ಮನುಷ್ಯಸ್ವಭಾವದಿಂದ ಒಂದುವೇಳೆ । **ಕರಾಮ**—ಮಾಡಿದ್ದೇ ಆದರೆ । **ವಃ**—ನಿಮ್ಮ । **ತಸ್ಯಾಂ**—ಆಯುಧಕ್ಕೆ । **ಅಪಿ**—ಕೊಂಚವೂ । **ಮಾ ಭೂಮ**—ವಶರಾಗುವಂತೆ ಮಾಡಬೇಡಿರಿ । **ಚನಿಷ್ಠಾ**—ಅತಿಶಯವಾದ ಅನ್ನಯುಕ್ತವಾದ । **ವಃ**—ನಿಮ್ಮ । **ಸುಮತಿಃ**—ಅನುಗ್ರಹಬುದ್ಧಿಯು । **ಅಸ್ಮೇ**—ನಮ್ಮ ಮೇಲೆ । **ಅಸ್ತು**—ಇರಲಿ

ಭಾವಾರ್ಥ

ಎಲೈ ಮರುತ್ತುಗಳೇ, ನಿಮಗೆ ಸೇರಿದುದೂ, ಪ್ರಸಿದ್ಧವಾದುದೂ ಆದ ಆಯುಧವು ನಮ್ಮಿಂದ ದೂರವಾಗಿರಲಿ. ಯಜ್ಞಾರ್ಹರಾದ ಎಲೈ ಮರುತ್ತುಗಳೇ, ಒಂದುವೇಳೆ ನಿಮ್ಮ ವಿಷಯದಲ್ಲಿ ಮನುಷ್ಯಸ್ವಭಾವದಿಂದ ಪಾಪವನ್ನು ಆಚರಿಸಿದ್ದೇ ಆದರೆ, ನಿಮ್ಮ ಆಯುಧಕ್ಕೆ ಕೊಂಚವೂ ವಶವಾಗುವಂತೆ ಮಾಡಬೇಡಿರಿ. ಅತಿಶಯವಾದ ಅನ್ನಯುಕ್ತವಾದ ನಿಮ್ಮ ಅನುಗ್ರಹಬುದ್ಧಿಯು ನಮ್ಮ ಮೇಲಿರಲಿ.

## English Translation

May that blazing (weapon) of yours, Maruts, be far from us, althongh, through human infirmities, we offer you offence let us not adorable Marute be exposed to your (shaft): may your favour, the source of abundance, ever be shown into us

ಸಂಹಿತಾಪಾಠಃ

ಕೃತೇ ಚಿದತ್ರ ಮರುತೋ ರಣಂತಾನವದ್ಯಾಸಃ ಶುಚಯಃ ಪಾವಕಾಃ ।
ಪ್ರ ಣೋಽವತ ಸುಮತಿಭಿರ್ಯಜತ್ರಾಃ ಪ್ರ ವಾಜೇಭಿಸ್ತಿರತ ಪುಷ್ಯಸೇ ನಃ ॥

ಪದಪಾಠಃ

ಕೃತೇ । ಚಿತ್ । ಅತ್ರ । ಮರುತಃ । ರಣಂತ । ಅನವದ್ಯಾಸಃ । ಶುಚಯಃ । ಪಾವಕಾಃ ।

ಪ್ರ । ನಃ । ಅವತ । ಸುಮತಿऽಭಿಃ । ಯಜತ್ರಾಃ । ಪ್ರ । ವಾಜೇಭಿಃ । ತಿರತ । ಪುಷ್ಯಸೇ । ನಃ ॥ ೫ ॥

ಸಾಯಣಭಾಷ್ಯಂ

ಅತ್ರಾಸ್ಮಿನ್ಕೃತೇ ಚಿದಸ್ಮದೀಯೇ ಯಜ್ಞಕರ್ಮಣ್ಯೇವ ಮರುತೋ ರಣಂತ । ರಮಂತಾಂ । ಕೀದೃಶಾ ಮರುತಃ । ಅನವದ್ಯಾಸೋಽನಿಂದಿತಾಃ ಶುಚಯೋ ದೀಪ್ತಿಯುಕ್ತಾಃ ಪಾವಕಾಃ ಶೋಧಕಾ ಏವಂಭೂತಾ ಇತಿ । ಕಿಂಚ ಹೇ ಮರುತೋ ಯಜತ್ರಾ ಯಜನೀಯಾಃ ಯೂಯಂ ನೋಽಸ್ಮಾನ್ ಸುಮತಿಭಿರನುಗ್ರಹಬುದ್ಧಿಭಿಃ ಸುಷ್ಟುತಿಭಿರ್ಹೇತುಭಿರ್ವಾ ಪ್ರಾವತ । ಪ್ರಕರ್ಷೇಣ ಪಾಲಯತ । ತಥಾ ನೋಽಸ್ಮಾನ್ವಾಜೇಭಿರ್ವಾಜೈರನ್ನೈಃ ಪುಷ್ಯಸೇ ಪೋಷಾರ್ಥಂ ಪ್ರ ತಿರತ । ಪ್ರವರ್ಧಯಂತ ॥

ಪ್ರತಿಪದಾರ್ಥ

**ಅನವದ್ಯಾಸಃ**—ದೋಷರಹಿತರೂ । **ಶುಚಯಃ**—ಕಾಂತಿಯುತರೂ । **ಪಾವಕಾಃ**—ಶುದ್ಧಿಕಾರಕರೂ ಆದ । **ಮರುತಃ**—ಮರುತ್ತುಗಳು । **ಅತ್ರ ಕೃತೇ ಚಿತ್**—ಈ ನಮ್ಮ ಯಾಗದಲ್ಲಿ ಮಾತ್ರ । **ರಣಂತ**—ಹರ್ಷವನ್ನು ಹೊಂದಲಿ । (ಎಲೈ ಮರುತ್ತುಗಳೇ) । **ಯಜತ್ರಾಃ**—ಪೂಜ್ಯರಾದ ನೀವು । **ನಃ**—ನಮ್ಮನ್ನು । **ಸುಮತಿಭಿಃ**—ಅನುಗ್ರಹಬುದ್ಧಿಗಳಿಂದ । **ಪ್ರ ಅವತ**—ಅತಿಶಯವಾಗಿ ರಕ್ಷಿಸಿರಿ. । **ನಃ**—ನಮ್ಮನ್ನು । **ವಾಜೇಭಿಃ**—ಅನ್ನಗಳಿಂದ **ಪುಷ್ಯಸೇ**—ಪುಷ್ಟಿಯುತವಾದ ಜೀವನಕ್ಕಾಗಿ । **ಪ್ರ ತಿರತ**—ಬೆಳೆಯುವಂತೆ ಮಾಡಿರಿ.

ಭಾವರ್ಥ

ದೋಷರಹಿತರೂ, ಕಾಂತಿಯುತರೂ, ಶುದ್ಧಿಕಾರಕರೂ ಆದ ಮರುತ್ತುಗಳು ಈ ನಮ್ಮ ಯಾಗದಲ್ಲಿ ಮಾತ್ರ ಹರ್ಷವನ್ನು ಹೊಂದಲಿ ಎಲೈ ಮರುತ್ತುಗಳೇ, ಪೂಜ್ಯರಾದ ನೀವು ನಮ್ಮನ್ನು ಅನುಗ್ರಹಬುದ್ಧಿಗಳಿಂದ ರಕ್ಷಿಸಿರಿ. ನಮ್ಮನ್ನು ಅನ್ನಗಳಿಂದ ಪುಷ್ಟಿಯುತವಾದ ಜೀವನಕ್ಕಾಗಿ ಬೆಳೆಯುವಂತೆ ಮಾಡಿರಿ.

## English Translation

May the Maruts, who are irreproachable, pure, and purifying delight in this our ceremony protect us, adorable Maruts, with favourable thoughts · be ever anxious to sustain us with food

ಸಂಹಿತಾಪಾಠಃ

ಉತ ಸ್ತುತಾಸೋ ಮರುತೋ ವ್ಯಂತು ವಿಶ್ವೇಭಿರ್ನಾಮಭಿರ್ನರೋ ಹವೀಂಷಿ

ದದಾತ ನೋ ಅಮೃತಸ್ಯ ಪ್ರಜಾಯೈ ಜಿಗೃತ ರಾಯಃ ಸೂನೃತಾ ಮಘಾನಿ॥

ಪದಪಾಠಃ

ಉತ । ಸ್ತುತಾಸಃ । ಮರುತಃ । ವ್ಯಂತು । ವಿಶ್ವೇಭಿಃ । ನಾಮಽಭಿಃ । ನರಃ । ಹವೀಂಷಿ ।

ದದಾತ । ನಃ । ಅಮೃತಸ್ಯ । ಪ್ರಽಜಾಯೈ । ಜಿಗೃತ । ರಾಯಃ । ಸೂನೃತಾ । ಮಘಾನಿ ॥ ೬ ॥

ಸಾಯಣಭಾಷ್ಯಂ

ಉತಾಪಿ ಚ ಸ್ತುತಾಸ ಏವಮಸ್ಮಾಭಿಃ ಸ್ತುತಾ ಮರುತೋ ಹವೀಂಷಿ ವ್ಯಂತು । ಭಕ್ಷಯಂತು ಕೀದೃಶಾಃ । ವಿಶ್ವೇಭಿರ್ವಿಶ್ವೈರ್ನಾಮಭಿರುದಕೈಃ ಸಹಿತಾ ನರೋ ನೇತಾರಃ । ಶೇಷಃ ಪ್ರತ್ಯಕ್ಷಸ್ತುತಿಃ । ಹೇ ಮರುತಃ ನೋಽಸ್ಮದೀಯಾಯೈ ಪ್ರಜಾಯೈ ಸಂತತಯೇಽಮೃತಸ್ಯಾಮೃತಮುದಕಂ ದದಾತ ದತ್ತ । ತಥಾ ಹವಿಷೋ ದಾತುರ್ಯಜಮಾನಸ್ಯ ಸೂನೃತಾ ಸೂನೃತಾನಿ ಸುಷ್ಠು ನೃತ್ಯಂತಿ ಶೋಭನಯೋಗ್ಯಾನಿ ಮಘಾನಿ ಧನಾನಿ ಜಿಗೃತ । ಉದ್ಗಿರತ । ಪ್ರಯಚ್ಛತೇತ್ಯರ್ಥಃ ॥

ಪ್ರತಿಪದಾರ್ಥ

**ವಿಶ್ವೇಭಿಃ**—ಸಮಸ್ತವಾದ । **ನಾಮಭಿಃ**—ಉದಕಗಳಿಂದ ಕೂಡಿದವರೂ । **ನರಃ**—ನೇತೃಗಳೂ । **ಉತ** ಮತ್ತು । **ಸ್ತುತಾಸಃ**—ನಮ್ಮಿಂದ ಪ್ರಶಂಸಿತರೂ ಆದ । **ಮರುತಃ**—ಮರುತ್ತುಗಳು । **ಹವೀಂಷಿ**—ನಮ್ಮ ಹವಿಸ್ಸುಗಳನ್ನು । **ವ್ಯಂತು**—ಭಕ್ಷಿಸಲಿ. । (ಎಲೈ ಮರುತ್ತುಗಳೇ) **ನಃ**—ನಮ್ಮ । **ಪ್ರಜಾಯೈ**—ಸಂತತಿಗೆ । **ಅಮೃತಸ್ಯ**—ಉದಕವನ್ನು । **ದದಾತ**—ಕೊಡಿರಿ । **ಸೂನೃತಾ**—ಮಂಗಳಪ್ರದವೂ ಪ್ರಶಸ್ಯವೂ ಆದ । **ಮಘಾನಿ**—ಧನಗಳನ್ನು । **ಜಿಗೃತ**—ಒದಗಿಸಿಕೊಡಿರಿ.

ಭಾವಾರ್ಥ

ಸಮಸ್ತವಾದ ಉದಕಗಳಿಂದ ಕೂಡಿದವರೂ ನೇತೃಗಳೂ ಮತ್ತು ನಮ್ಮಿಂದ ಪ್ರಶಂಸಿತರೂ ಆದ ಮರುತ್ತುಗಳು ನಮ್ಮ ಹವಿಸ್ಸನ್ನು ಭಕ್ಷಿಸಲಿ ಎಲೈ ಮರುತ್ತುಗಳೇ, ನಮ್ಮ ಸಂತತಿಗೆ ಉದಕವನ್ನು ಒದಗಿಸಿರಿ. ಮಂಗಳಪ್ರದವೂ ಪ್ರಶಸ್ಯವೂ ಆದ ಧನಗಳನ್ನು ನಮಗೆ ಕೊಡಿರಿ

## English Translation

May the glorified Maruts partake of the oblations, they who accompanied by the bending waters, are the leaders of rites . bestow water, Maruts, upon our progeny, return suitable opulence for (the donation of sacrificial) riches

ಸಂಹಿತಾಪಾಠಃ

ಆ ಸ್ತುತಾಸೋ ಮರುತೋ ವಿಶ್ವ ಊತೀ ಅಚ್ಛಾ ಸೂರೀನ್ತ್ಸರ್ವತಾತಾ ಜಿಗಾತ ।
ಯೇ ನಸ್ತ್ಮನಾ ಶತಿನೋ ವರ್ಧಯಂತಿ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೭ ॥

ಪದಪಾಠಃ

ಆ । ಸ್ತುತಾಸಃ । ಮರುತಃ । ವಿಶ್ವೇ । ಊತೀ । ಅಚ್ಛ । ಸೂರೀನ್ । ಸರ್ವಽತಾತಾ । ಜಿಗಾತ ।
ಯೇ । ನಃ । ತ್ಮನಾ । ಶತಿನಃ । ವರ್ಧಯಂತಿ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೭ ॥

ಸಾಯಣಭಾಷ್ಯಂ

ಹೇ ಮರುತಃ ಸ್ತುತಾಸ ಏವಮಸ್ಮಾಭಿಃ ಸ್ತುತಾ ವಿಶ್ವೇ ಸರ್ವೇ ಯೂಯಮೂತ್ಯಾ ರಕ್ಷಯಾ ಸಹಿತಾಃ ಸೂರೀನ್ ಸ್ತೋತೄನಚ್ಛಾಭಿಲಕ್ಷ್ಯ ಸರ್ವತಾತಾ ಸರ್ವತಾತೌ ಯಜ್ಞ ಆ ಜಿಗಾತ । ಆಗಚ್ಛತ । ಯೇ ಮರುತಸ್ತ್ಮನಾತ್ಮನೈವ ನೋಽಸ್ಮಾಞ್ಛತಿನಃ ಶತಸಂಖ್ಯಾಕಾನ್ವರ್ಧಯಂತಿ । ಯಥಾ ವಯಂ ಪುತ್ರ-ಪೌತ್ರಾದಿಭಿಃ ಶತಿನೋ ಭವೇಮ । ತಥಾ ವರ್ಧಯಂತೀತ್ಯರ್ಥಃ । ತೇ ಯೂಯಮಾ ಜಿಗಾತೇತಿ ಪೂರ್ವೇಣ ಸಂಬಂಧಃ । ಏವಂಭೂತಾ ಮರುತಃ ಯೂಯಂ ಸರ್ವದಾಸ್ಮಾನ್ಪಾಲಯತ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ಯೇ**—ಯಾವ ನೀವು । **ತ್ಮನಾ**—ಸ್ವಯಂಪ್ರೇರಿತರಾಗಿ । **ನಃ**—ನಮ್ಮನ್ನು । **ಶತಿನಃ**—ಅತ್ಯಧಿಕವಾಗಿ । **ವರ್ಧಯಂತಿ**—ವೃದ್ಧಿಗೊಳಿಸುವಿರೋ ಅಂತಹವರೂ । **ಸ್ತುತಾಸಃ**—ನಮ್ಮಿಂದ ಸ್ತುತಿಸಲ್ಪಟ್ಟವರೂ ಆದ । **ವಿಶ್ವೇ**—ನೀವೆಲ್ಲರೂ । **ಊತೀ**—ನಿಮ್ಮ ರಕ್ಷಣೆಗಳೊಡನೆ । **ಸೂರೀನ್ ಅಚ್ಛ**—ಸ್ತುತಿಕರ್ತರಾದ ನಮ್ಮ ಅಭಿಮುಖವಾಗಿ । **ಸರ್ವತಾತಾ**—ಈ ಯಜ್ಞದಲ್ಲಿ । **ಆ ಜಿಗಾತ**—ಬನ್ನಿರಿ. । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

ಭಾವಾರ್ಥ

ಎಲೈ ಮರುತ್ತುಗಳೇ, ಯಾವ ನೀವು ಸ್ವಯಂಪ್ರೇರಿತರಾಗಿ ನಮ್ಮನ್ನು ಅತ್ಯಧಿಕವಾಗಿ ವೃದ್ಧಿಗೊಳಿಸುವಿರೋ ಅಂತಹವರೂ ನಮ್ಮಿಂದ ಸ್ತುತಿಸಲ್ಪಟ್ಟವರೂ ಆದ ನೀವೆಲ್ಲರೂ ನಿಮ್ಮ ರಕ್ಷಣೆಗಳೊಡನೆ ಸ್ತುತಿಕರ್ತರಾದ ನಮಗೆ ಅಭಿಮುಖವಾಗಿ ಈ ಯಜ್ಞಕ್ಕೆ ಬನ್ನಿರಿ. ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Glorified Maruts, do you all come at the time of sacrifice to the presence of the worshippers along with your protections, for you are they who. of your own will, multiply our hudreds. do you ever cherish us with blessings.

---

## ಐವತ್ತೆಂಟನೆಯ ಸೂಕ್ತವು

ಸಾಯಣಭಾಷ್ಯಂ

ಪ್ರ ಸಾಕಮುಕ್ಷ ಇತಿ ಷಳೃಚಂ ತೃತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ಮರುದ್ದೇವತಾಕಂ । ಅನುಕ್ರಾಂತಂ ಚ । ಪ್ರ ಸಾಕಮುಕ್ಷೇ ಷಡಿತಿ ॥ ಗತೋ ವಿನಿಯೋಗಃ ॥

**ಅನುವಾದವು—ಪ್ರ ಸಾಕಮುಕ್ಷೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಮರುತ್ತುಗಳು ದೇವತೆಯು, ತ್ರಿಷ್ಟುಪ್ಛಂದಸ್ಸು ಅನುಕ್ರಮಣಿಕೆಯಲ್ಲಿ **ಪ್ರ ಸಾಕಮುಕ್ಷೇ ಷಟ್** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೫೮

ಮಂಡಲ—೭ ॥ ಅನುವಾಕ—೩ ॥ ಸೂಕ್ತ—೫೮ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೨೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ವಸಿಷ್ಠಃ ॥
ದೇವತಾ—ಮರುತಃ ॥
ಛಂದಃ—ತ್ರಿಷ್ಟುಪ್ ।

ಸಂಹಿತಾಪಾಠಃ

**ಪ್ರ ಸಾಕಮುಕ್ಷೇ ಅರ್ಚತಾ ಗಣಾಯ ಯೋ ದೈವ್ಯಸ್ಯ ಧಾಮ್ನಸ್ತುವಿಷ್ಮಾನ್ ।**
**ಉತ ಕ್ಷೋದಂತಿ ರೋದಸೀ ಮಹಿತ್ವಾ ನಕ್ಷಂತೇ ನಾಕಂ ನಿರ್ಋತೇರವಂಶಾತ್ ॥ ೧ ॥**

ಪದಪಾಠಃ

**ಪ್ರ । ಸಾಕಂಽಉಕ್ಷೇ । ಅರ್ಚತ । ಗಣಾಯ । ಯಃ । ದೈವ್ಯಸ್ಯ । ಧಾಮ್ನಃ । ತುವಿಷ್ಮಾನ್ ।**

**ಉತ । ಕ್ಷೋದಂತಿ । ರೋದಸೀ ಇತಿ । ಮಹಿಽತ್ವಾ । ನಕ್ಷಂತೇ । ನಾಕಂ । ನಿಃಽಋತೇಃ । ಅವಂಶಾತ್ ॥**

ಸಾಯಣಭಾಷ್ಯಂ

**ಹೇ ಸ್ತೋತಾರಃ ಯೂಯಂ ಸಾಕಮುಕ್ಷೇ ಸತತಂ ವರ್ಷಿತ್ರೇ ಗಣಾಯ ಮರುತ್ಸಮೂಹಾಯ ಪ್ರಾರ್ಚತ । ಸ್ತೋತ್ರಂ ಪ್ರೋಚ್ಚಾರಯತ । ಯೋ ಮರುದ್ಗಣೋ ದೈವ್ಯಸ್ಯ ದೇವಸಂಬಂಧಿನೋ ಧಾಮ್ನಃ ಸ್ವರ್ಗಾಖ್ಯಸ್ಯ ಸ್ಥಾನಸ್ಯ ತುವಿಷ್ಮಾನ್ ವೃದ್ಧಿಮಾನ್ಭವತಿ । ಸರ್ವೇಭ್ಯೋ ದೇವೇಭ್ಯಃ ಪ್ರವೃದ್ಧ ಇತ್ಯರ್ಥಃ । ತಸ್ಮೈ ಗಣಾಯೇತಿ ಪೂರ್ವೇಣ ಸಂಬಂಧಃ । ಉತಾಪಿ ಚ ಮರುತೋ ಮಹಿತ್ವಾ ಸ್ವಕೀಯೇನ ಮಹತ್ತ್ವೇನ ಸಹಿತಾ ರೋದಸೀ ದ್ಯಾವಾಪೃಥಿವ್ಯೌ ಕ್ಷೋದಂತಿ । ಭಂಜಂತಿ । ತಥಾ ನಿರ್ಋತೇರ್ಭೂಮೇರವಂಶಾದಂತರಿಕ್ಷಾಚ್ಚ ನಾಕಂ ಸ್ವರ್ಗಂ ನಕ್ಷಂತೇ । ವ್ಯಾಪ್ನುವಂತಿ ॥**

ಪ್ರತಿಪದಾರ್ಥ

(ಎಲೈ ಸ್ತುತಿಕರ್ತರೇ) **ಯಃ**—ಯಾವ ಮರುದ್ಗಣವು । **ದೈವ್ಯಸ್ಯ**—ದೇವನಿವಾಸವಾದ । **ಧಾಮ್ನಃ**—ಸ್ವರ್ಗಸ್ಥಾನದಲ್ಲೆಲ್ಲಾ । **ತುವಿಷ್ಮಾನ್**—ಅತ್ಯಂತ ಪ್ರಬಲವಾಗಿರುವುದೋ ಅಂತಹುದೂ । **ಸಾಕಮುಕ್ಷೇ**—ಅನುಸ್ಯೂತವಾಗಿ ಮಳೆಯನ್ನು ಸುರಿಸುವುದೂ ಆದ । **ಗಣಾಯ**—ಮರುದ್ಗಣವನ್ನುದ್ದೇಶಿಸಿ । **ಪ್ರಾರ್ಚತ**—ಸ್ತುತಿಯನ್ನ ಪಿಸಿರಿ । **ಉತ**—ಮತ್ತು । (**ಮರುತಃ**—ಮರುತ್ತುಗಳು) । **ಮಹಿತ್ವಾ**—ತಮ್ಮ ಮಾಹಾತ್ಮ್ಯದಿಂದ । **ರೋದಸೀ** ದ್ಯಾವಾಪೃಥಿವಿಗಳನ್ನೂ । **ಕ್ಷೋದಂತಿ**—ಕುಗ್ಗಿಸುತ್ತಾರೆ. । **ನಿರ್ಋತೇಃ**—ಭೂಮಿಯಿಂದ ಹಿಡಿದು । **ಅವಂಶಾತ್**—ಅಂತರಿಕ್ಷದ ಮೂಲಕ । **ನಾಕಂ**—ಸ್ವರ್ಗವನ್ನೆಲ್ಲಾ । **ನಕ್ಷಂತೇ**—ವ್ಯಾಪಿಸುತ್ತಾರೆ

ಭಾವಾರ್ಥ

ಎಲೈ ಸ್ತುತಿಕರ್ತರೇ, ಯಾವ ಮರುದ್ಗಣವು ದೇವನಿವಾಸವಾದ ಸ್ವರ್ಗಸ್ಥಾನದಲ್ಲೆಲ್ಲಾ ಅತ್ಯಂತ ಪ್ರಬಲವಾಗಿರುವುದೋ ಅಂತಹುದೂ ಅನುಸ್ಯೂತವಾಗಿ ಮಳೆಯನ್ನು ಸುರಿಸುವುದೂ ಆದ ಮರುದ್ಗಣವನ್ನು ಉದ್ದೇಶಿಸಿ ಸ್ತುತಿಯನ್ನರ್ಪಿಸಿರಿ ಮರುತ್ತುಗಳು ತಮ್ಮ ಮಾಹಾತ್ಮ್ಯದಿಂದ ದ್ಯಾವಾಪೃಥಿವಿಗಳನ್ನು ಕುಗ್ಗಿಸುತ್ತಾರೆ. ಭೂಮಿಯಿಂದ ಹಿಡಿದು ಅಂತರಿಕ್ಷದಮೂಲಕ ಸ್ವರ್ಗವನ್ನೆಲ್ಲಾ ವ್ಯಾಪಿಸುತ್ತಾರೆ.

English Translation

Offer worship to the company (of the Maruts), the associated dispensers of moisture, which is powerful over the celestial region the Maruts, by their greatness, oppress both heaven and earth : they spread from the earth and the firmament to heaven,

ಸಂಹಿತಾಪಾಠಃ

**ಜನೂಶ್ಚಿದ್ವೋ ಮರುತಸ್ತ್ವೇಷ್ಯೇಣ ಭೀಮಾಸಸ್ತುವಿಮನ್ಯವೋಽಯಾಸಃ ।**

**ಪ್ರ ಯೇ ಮಹೋಭಿರೋಜಸೋತ ಸಂತಿ ವಿಶ್ವೋ ವೋ ಯಾಮನ್ಭಯತೇ ಸ್ವರ್ದೃಕ್ ॥ ೨ ॥**

ಪದಪಾಠಃ

ಜನೂಃ । ಚಿತ್ । ವಃ । ಮರುತಃ । ತ್ವೇಷ್ಯೇಣ । ಭೀಮಾಸಃ । ತುವಿಽಮನ್ಯವಃ । ಅಯಾಸಃ ।

ಪ್ರ । ಯೇ । ಮಹಃಽಭಿಃ । ಓಜಸಾ । ಉತ । ಸಂತಿ । ವಿಶ್ವಃ । ವಃ । ಯಾಮನ್ । ಭಯತೇ । ಸ್ವಃಽ-ದೃಕ್ ॥ ೨ ॥

ಸಾಯಣಭಾಷ್ಯಂ

ಹೇ ಭೀಮಾಸೋ ಭೀಮಾಸ್ತುವಿಮನ್ಯವಃ ಪ್ರವೃದ್ಧಮತಯೋಽಯಾಸೋ ಗಂತಾರ ಇತಿ ತ್ರೀಣಿ ಸಂಬೋಧನಾನಿ । ಏವಂಭೂತಾ ಹೇ ಮರುತಃ ವೋ ಯುಷ್ಮಾಕಂ ಜನೂರ್ಜನ್ಮ ತ್ವೇಷ್ಯೇಣ ದೀಪ್ತೇನ ರುದ್ರೇಣ ಬಭೂವೇತಿ ಶೇಷಃ । ಉತಾಪಿ ಚ ಯೇ ಮರುತೋ ಮಹೋಭಿಸ್ತೇಜೋಭಿರೋಜಸಾ ಬಲೇನ ಚ ಪ್ರ ಸಂತಿ ಪ್ರಭವಂತಿ ತೇಷಾಂ ವೋ ಯುಷ್ಮಾಕಂ ಯಾಮನ್ ಯಾಮನಿ ಗಮನೇ ವಿಶ್ವಃ ಸ್ವರ್ದೃಕ್ ಸೂರ್ಯಸ್ಯ ದ್ರಷ್ಟಾ ಸರ್ವೋ ಜೀವಸಮೂಹಃ । ಯದ್ವಾ । ಸ್ವರಂತರಿಕ್ಷಂ । ತತ್ಪಶ್ಯತೀತಿ ವೃಕ್ಷಃ ಸ್ವರ್ದೃಕ್ । ಸರ್ವದೋತ್ತಿಷ್ಠನ್ನಿತ್ಯರ್ಥಃ । ಭಯತೇ । ಬಿಭೇತಿ ॥

ಪ್ರತಿಪದಾರ್ಥ

**ಭೀಮಾಸಃ**—ಭಯಂಕರರೂ । **ತುವಿಮನ್ಯವಃ**—ಅತ್ಯಧಿಕವಾದ ಮತಿಯುಳ್ಳವರೂ । **ಅಯಾಸಃ**—ಗಮನಶೀಲರೂ ಆದ । **ಮರುತಃ**—ಎಲೈ ಮರುತ್ತುಗಳೇ । **ವಃ**—ನಿಮ್ಮ । **ಜನೂಃ**—ಜನ್ಮವು । **ತ್ವೇಷ್ಯೇಣ**—ಪ್ರಭಾಯುತನಾದ ರುದ್ರನಿಂದ ಉಂಟಾಗಿದೆ । **ಉತ**—ಮತ್ತು । **ಯೇ**—ಯಾವ ನೀವು । **ಮಹೋಭಿಃ**—ನಿಮ್ಮ ತೇಜಸ್ಸುಗಳಿಂದಲೂ । **ಓಜಸಾ**—ಬಲದಿಂದಲೂ ಕೂಡಿ । **ಪ್ರ ಸಂತಿ**—ಪ್ರಭಾವಶಾಲಿಗಳಾಗಿರುವಿರೋ ಅಂತಹ । **ವಃ** —ನಿಮ್ಮ । **ಯಾಮನ್**—ಸಂಚಾರಕಾಲದಲ್ಲಿ । **ಸ್ವರ್ದೃಕ್**—ಅಂತರಿಕ್ಷವನ್ನು ನೋಡುತ್ತಿರುವ (ವೃಕ್ಷದಂತೆ) । **ವಿಶ್ವಃ**—ಸಮಸ್ತಜನವೂ । **ಭಯತೇ**—ಭಯಗೊಳ್ಳುತ್ತದೆ

ಭಾವಾರ್ಥ

ಭಯಂಕರರೂ, ಅತ್ಯಧಿಕವಾದ ಮತಿಯುಳ್ಳವರೂ, ಗಮನಶೀಲರೂ ಆದ ಎಲೈ ಮರುತ್ತುಗಳೇ, ನಿಮ್ಮ ಜನ್ಮವು ಪ್ರಭಾಯುತನಾದ ರುದ್ರನಿಂದ ಉಂಟಾಗಿದೆ. ಯಾವ ನೀವು ನಿಮ್ಮ ತೇಜಸ್ಸುಗಳಿಂದಲೂ ಬಲದಿಂದಲೂ ಕೂಡಿ ಪ್ರಭಾವಶಾಲಿಗಳಾಗಿರುವಿರೋ ಅಂತಹ ನಿಮ್ಮ ಸಂಚಾರಕಾಲದಲ್ಲಿ ಅಂತರಿಕ್ಷವನ್ನು ನೋಡುತ್ತಿರುವ ಸಮಸ್ತ ಜನವೂ (ಅಥವಾ ವೃಕ್ಷಗಳೂ) ಭಯಗೊಳ್ಳುತ್ತದೆ

English Translation

Formidable, high spirited, quick-moving Maruts, your birth is from the illustrious Rudra : every gazer on the sun is alarmed with the course of you who are pre-eminent in lusture and strength.

ಸಂಹಿತಾಪಾಠಃ

ಬೃಹದ್ವಯೋ ಮಘವದ್ಭ್ಯೋ ದಧಾತ ಜುಜೋಷನ್ನಿನ್ಮರುತಃ ಸುಷ್ಟುತಿಂ ನಃ

ಗತೋ ನಾಧ್ವಾ ವಿ ತಿರಾತಿ ಜಂತುಂ ಪ್ರ ಣಃ ಸ್ಪಾರ್ಹಾಭಿರೂತಿಭಿಸ್ತಿರೇತ ||

ಪದಪಾಠಃ

ಬೃಹತ್ | ವಯಃ | ಮಘವತ್ಽಭ್ಯಃ | ದಧಾತ | ಜುಜೋಷನ್ | ಇತ್ | ಮರುತಃ | ಸುಽಸ್ತುತಿಂ | ನಃ |

ಗತಃ | ನ | ಅಧ್ವಾ | ವಿ | ತಿರಾತಿ | ಜಂತುಂ | ಪ್ರ | ನಃ | ಸ್ಪಾರ್ಹಾಭಿಃ | ಊತಿಽಭಿಃ | ತಿರೇತ || ೩ ||

ಸಾಯಣಭಾಷ್ಯಂ

ಹೇ ಮರುತಃ ಯೂಯಂ ಮಘವದ್ಭ್ಯೋ ಹವಿರ್ಲಕ್ಷಣಾನ್ನವದ್ಭ್ಯೋಽಸ್ಮಭ್ಯಂ ಬೃಹನ್ಮಹದ್ವಯೋಽನ್ನಂ ದಧಾತ | ಪ್ರಯಚ್ಛತ | ನೋಽಸ್ಮದೀಯಾಂ ಸುಷ್ಟುತಿಂ ಶೋಭನಂ ಸ್ತೋತ್ರಂ ಜುಜೋಷನ್ನಿತ್ | ಸೇವಂತಾಮೇವ | ಗತೋ ಮರುದ್ಭಿಃ ಪ್ರಾಪ್ತೋಽಧ್ವಾ ಮಾರ್ಗೋ ಜಂತುಂ ಪ್ರಾಣಿನಂ ನ ವಿ ತಿರಾತಿ | ನಾಹಂತಿ | ಉದಕೇನಾಪ್ಯಾಯಯತ್ಯೇವ | ಯದ್ವಾ | ವಿತಿರತಿರ್ವರ್ಧನಾರ್ಥಃ | ನೇತಿ ಚಾರ್ಥೇ | ಮರುದ್ಭಿರ್ಗತೋ ಮಾರ್ಗಶ್ಚ ಜಂತುಂ ವರ್ಧಯತಿ | ತಥಾ ನೋಽಸ್ಮಾನ್ ಸ್ಪಾರ್ಹಾಭಿಃ ಸ್ಪೃಹಣೀಯಾಭಿರೂತಿಭೀ ರಕ್ಷಾಭಿಃ ಪ್ರ ತಿರೇತ | ಪ್ರವರ್ಧಯತೇ ||

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, | **ಮಘವದ್ಭ್ಯಃ**—ಹವಿಸ್ಸನ್ನು ಹೊಂದಿರುವ ನಮಗೆ | **ಬೃಹತ್**—ಅತ್ಯಧಿಕವಾದ | **ವಯಃ**—ಅನ್ನವನ್ನು | **ದಧಾತ**—ಕೊಡಿರಿ. | **ನಃ**—ನಮ್ಮ | **ಸುಷ್ಟುತಿಂ** — ಉತ್ತಮವಾದ ಸ್ತುತಿಯನ್ನು | **ಜುಜೋಷನ್ನಿತ್**— ಖಂಡಿತ ಸೇವಿಸಿರಿ | **ಗತಃ**—ಮರುತ್ತುಗಳು ಆಶ್ರಯಿಸಿರುವ | **ಅಧ್ವಾ**—ಮಾರ್ಗವು | **ಜಂತುಂ**—ಪ್ರಾಣಿಸಮೂಹವನ್ನು | **ನ ವಿ ತಿರಾತಿ**—ಹಿಂಸಿಸುವುದಿಲ್ಲ | (ಅಲ್ಲದೆ) **ನಃ**—ನಮ್ಮನ್ನು | **ಸ್ಪಾರ್ಹಾಭಿಃ**—ಅಪೇಕ್ಷಿತಗಳಾದ | **ಊತಿಭಿಃ**—ರಕ್ಷಣೆಗಳಿಂದ | **ಪ್ರ ತಿರೇತ**—ವೃದ್ಧಿಗೊಳಿಸುತ್ತವೆ.

ಭಾವಾರ್ಥ

ಎಲೈ ಮರುತ್ತುಗಳೇ, ಹವಿಸ್ಸನ್ನು ಅರ್ಪಿಸುವ ನಮಗೆ ಅತ್ಯಧಿಕವಾದ ಅನ್ನವನ್ನು ಕೊಡಿರಿ. ನಮ್ಮ ಉತ್ತಮವಾದ ಸ್ತುತಿಯನ್ನು ಖಂಡಿತ ಸೇವಿಸಿರಿ. ಮರುತ್ತುಗಳು ಆಶ್ರಯಿಸಿರುವ ಮಾರ್ಗವು ಪ್ರಾಣಿಸಮೂಹವನ್ನು ಹಿಂಸಿಸುವುದಿಲ್ಲ, ನಮ್ಮನ್ನು ಅಪೇಕ್ಷಿತಗಳಾದ ರಕ್ಷಣೆಗಳಿಂದ ವೃದ್ಧಿಗೊಳಿಸುತ್ತವೆ.

English Translation

Grant, Maruts, to us who are affluent (in sacrificial offering) abundant food : accept complacently our earnest praise : the path you follow is not hurtful to living beings : may it increase our (prosperity) by (your) desirable protections.

ಸಂಹಿತಾಪಾಠಃ

ಯುಷ್ಮೋತೋ ವಿಪ್ರೋ ಮರುತಃ ಶತಸ್ವೀ ಯುಷ್ಮೋತೋ ಅರ್ವಾ ಸಹುರಿಃ ಸಹಸ್ರೀ ।

ಯುಷ್ಮೋತಃ ಸಮ್ರಾಳುತ ಹಂತಿ ವೃತ್ರಂ ಪ್ರ ತದ್ವೋ ಅಸ್ತು ಧೂತಯೋ ದೇಷ್ಣಂ ॥ ೪ ॥

ಪದಪಾಠಃ

ಯುಷ್ಮಾಽಊತಃ । ವಿಪ್ರಃ । ಮರುತಃ । ಶತಸ್ವೀ । ಯುಷ್ಮಾಽಊತಃ । ಅರ್ವಾ । ಸಹುರಿಃ । ಸಹಸ್ರೀ ।

ಯುಷ್ಮಾಽಊತಃ । ಸ್ಽಂವ್ರಾಟ್ । ಉತ । ಹಂತಿ । ವೃತ್ರಂ । ಪ್ರ । ತತ್ । ವಃ । ಅಸ್ತು । ಧೂತಯಃ ।
ದೇಷ್ಣಂ ॥ ೪ ॥

ಸಾಯಣಭಾಷ್ಯಂ

ಹೇ ಮರುತಃ ಯುಷ್ಮೋತೋ ಯುಷ್ಮಾಭೀ ರಕ್ಷಿತೋ ವಿಪ್ರಃ ಸ್ತೋತಾ ಶತಸ್ವೀ ಶತಸಂಖ್ಯೋಪೇತಧನವಾನ್ಭವತಿ । ಯುಷ್ಮೋತೋ ಯುಷ್ಮಾಭೀ ರಕ್ಷಿತೋಽರ್ವಾಭಿಗಂತಾ ಸಹುರಿಃ ಶತ್ರೂಣಾಮಭಿಭವಿತಾ ಸ್ತೋತಾ ಸಹಸ್ರೀ ಸಹಸ್ರಧನವಾನ್ಭವತಿ । ಯುಷ್ಮೋತೋ ಯುಷ್ಮಾಭೀ ರಕ್ಷಿತಃ ಸಮ್ರಾಟ್ ಸಾಮ್ರಾಜ್ಯಯುಕ್ತೋ ಭವತಿ । ಉತಾಪಿ ಚ ವೃತ್ರಂ ಶತ್ರುಂ ಹಂತಿ । ಯುಷ್ಮದ್ರಕ್ಷಕೋ ಹಿನಸ್ತಿ । ಹೇ ಧೂತಯಃ ಕಂಪಯಿತಾರೋ ಮರುತಃ ವೋ ಯುಷ್ಮಾಭಿರ್ದತ್ತಂ ತತ್ಪ್ರಸಿದ್ಧಂ ದೇಷ್ಣಂ ಧನಂ ಪ್ರಾಸ್ತು । ಪ್ರಭೂತಂ ಭವತು ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ಯುಷ್ಮೋತಃ**—ನಿಮ್ಮಿಂದ ರಕ್ಷಿತನಾದ । **ವಿಪ್ರಃ**—ಸ್ತುತಿಕರ್ತನು । **ಶತಸ್ವೀ**—ಶತಸಂಖ್ಯಾಕವಾದ ಧನವಂತನಾಗಿ ಆಗುತ್ತಾನೆ. । **ಯುಷ್ಮೋತಃ**—ನಿಮ್ಮಿಂದ ರಕ್ಷಿತನಾದ । **ಅರ್ವಾ**—ನಿಮ್ಮ ಆರಾಧಕನು । **ಸಹುರಿಃ**—ಶತ್ರುಗಳನ್ನು ಸೋಲಿಸುವವನಾಗಿ ಆಗುತ್ತಾನೆ । **ಸಹಸ್ರೀ**—ಸಹಸ್ರಸಂಖ್ಯಾಕವಾದ ಧನವಂತನಾಗಿಯೂ ಆಗುತ್ತಾನೆ । **ಯುಷ್ಮೋತಃ**—ನಿಮ್ಮಿಂದ ರಕ್ಷಿತನು । **ಸಮ್ರಾಟ್**—ಸಾರ್ವಭೌಮನಾಗಿ ಆಗುತ್ತಾನೆ । **ಉತ**—ಮತ್ತು । **ವೃತ್ರಂ**—ಶತ್ರುವನ್ನು । **ಹಂತಿ**—ಕೊಲ್ಲುತ್ತಾನೆ । **ಧೂತಯಃ**—ಎಲ್ಲವನ್ನೂ ಕಂಪಿಸುವಂತೆ ಮಾಡುವ ಎಲೈ ಮರುತ್ತುಗಳೇ । **ವಃ**—ನಿಮ್ಮಿಂದ ದತ್ತವಾದುದೂ । **ತತ್**—ಪ್ರಸಿದ್ಧವಾದುದೂ ಆದ । **ದೇಷ್ಣಂ**—ಧನವು । **ಪ್ರ ಅಸ್ತು**—ಅಧಿಕವಾಗಿ ಬೆಳೆಯಲಿ.

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮಿಂದ ರಕ್ಷಿತನಾದ ಸ್ತುತಿಕರ್ತನು ಶತಸಂಖ್ಯಾಕವೂ ಸಹಸ್ರಸಂಖ್ಯಾಕವೂ ಆದ ಧನವಂತನಾಗುತ್ತಾನೆ. ನಿಮ್ಮ ರಕ್ಷಣೆಯ ಸಹಾಯದಿಂದ ನಿಮ್ಮ ಆರಾಧಕನು ಶತ್ರುಗಳನ್ನು ಸೋಲಿಸುತ್ತಾನೆ.

ಅಂತಹ ಯಜಮಾನನು ಸಾರ್ವಭೌಮನಾಗುತ್ತಾನೆ. ಸಕಲವನ್ನು ನಡಗಿಸುವ ಶಕ್ತಿಯುಳ್ಳ ಎಲೈ ಮರುತ್ತುಗಳೇ, ನಿಮ್ಮಿಂದ ದತ್ತವಾದ ಶ್ರೇಷ್ಠವಾದ ಧನವು ನಮ್ಮಲ್ಲಿ ಅಧಿಕವಾಗಿ ಬೆಳೆಯಲಿ.

## English Translation

The pious man protected, Maruts, by you, is the possessor of hundreds; the assailant, overcomer (of his foes), protected by you, is the possessor of thousands . protected by you, the Emperor slays his enemy may the wealth that is given, agitators, by you ever be abundant

### ಸಂಹಿತಾಪಾಠಃ

ತಾಁ ಆ ರುದ್ರಸ್ಯ ಮೀಳ್ಹುಷೋ ವಿವಾಸೇ ಕುವಿನ್ನಂಸಂತೇ ಮರುತಃ ಪುನರ್ನಃ

ಯತ್ಸಸ್ವರ್ತಾ ಜಿಹೀಳಿರೇ ಯದಾವಿರವ ತದೇನ ಈಮಹೇ ತುರಾಣಾಂ ||೫||

### ಪದಪಾಠಃ

ತಾನ್ | ಆ | ರುದ್ರಸ್ಯ | ಮೀಳ್ಹುಷಃ | ವಿವಾಸೇ | ಕುವಿತ್ | ನಂಸಂತೇ | ಮರುತಃ | ಪುನಃ | ನಃ |

ಯತ್ | ಸಸ್ವರ್ತಾ | ಜಿಹೀಳಿರೇ | ಯತ್ | ಆವಿಃ | ಅವ | ತತ್ | ಏನಃ | ಈಮಹೇ | ತುರಾಣಾಂ ||

### ಸಾಯಣಭಾಷ್ಯಂ

ಮೀಳ್ಹುಷಃ ಕಾಮಾನಾಂ ವರ್ಷಿತೂ ರುದ್ರಸ್ಯೇಶ್ವರಸ್ಯ ಪುತ್ರಾಂಸ್ತಾನ್ಮರುತ ಆ ವಿವಾಸೇ | ಅಹಂ ಹೋತಾ ಪರಿಚರಾಮಿ | ತೇ ಮರುತೋ ನೋಽಸ್ಮಭ್ಯಂ ಕುವಿದ್ಬಹುಕೃತ್ವಃ ಪುನರ್ಭೂಯೋ ನಂಸಂತೇ | ನಮಂತಾಂ | ಅಭಿಮುಖೀಭವಂತು | ಕುವಿಚ್ಛಬ್ದೇನೈವ ಪುನಃಶಬ್ದಾರ್ಥಸ್ಯ ಲಬ್ಧತ್ವಾತ್ಪುನಃ ಶಬ್ದಗ್ರಹಣಂ ಕಿಮರ್ಥಂ | ಆದರಾರ್ಥಂ | ಸಸ್ವರ್ತಾಂತರ್ಹಿತೇನಾಪ್ರಕಾಶೇನ ಯದ್ಯೇನೈನಸಾ ಜಿಹೀಳಿರೇ ಮರುತಃ ಕ್ರುಧ್ಯೇಯುಃ ಆವಿಃ ಪ್ರಕಾಶೇನ ಯದ್ಯೇನೈನಸಾ ಚ ಜಿಹೀಳಿರೇ ತುರಾಣಾಂ ಕ್ಷಿಪ್ರಾಣಾಂ ಮರುತಾಂ ಸಂಬಂಧಿ ತದುಭಯಮೇನೋಽಪರಾಧಮವೇಮಹೇ | ಸ್ತೋತ್ರೇಣ ವಯಮಪನಯಾಮಃ ||

### ಪ್ರತಿಪದಾರ್ಥ

ಮೀಳ್ಹುಷಃ— ಇಷ್ಟಾರ್ಥಪ್ರದನಾದ | ರುದ್ರಸ್ಯ—ರುದ್ರಪುತ್ರರಾದ | ತಾನ್— ಮರುತ್ತುಗಳನ್ನು | ಆ ವಿವಾಸೇ—ಆರಾಧಿಸಿ ಪೂಜಿಸುತ್ತೇನೆ. | ಮರುತಃ— ಅದೇ ಮರುತ್ತುಗಳು | ಪುನಃ ಕುವಿತ್—(ಪುನಃಪುನಃ) ಅನೇಕವೇಳೆ | ನಃ—ನಮ್ಮಕಡೆಗೆ | ನಂಸಂತೇ—ಬಗ್ಗುತ್ತಾ ಎದುರುಗೊಂಡು ಬರಲಿ. | ಸಸ್ವರ್ತಾ— ಹೊರಗಡೆ ಪ್ರಕಾಶವಾಗದ | ಯತ್—ಯಾವ ಪಾಪದಿಂದ | ಜಿಹೀಳಿರೇ—ಮರುತ್ತುಗಳು ಕೋಪಗೊಳ್ಳಬಹುದೋ | ಆವಿಃ —ಪ್ರಕಾಶಿತವಾದ | ಯತ್—ಯಾವ ಪಾಪದಿಂದ ಅವರು ಕೋಪಗೊಳ್ಳುವರೋ | ತುರಾಣಾಂ—ಶೀಘ್ರಗಾಮಿ

ಗಳಾದ ಆ ಮರುತ್ತುಗಳ ವಿಷಯದಲ್ಲಿ ಆಚರಿಸುವ | **ತತ್**— ಆ ಎರಡು ವಿಧವಾದ | ಏನಃ— ಪಾಪವನ್ನೂ | **ಅವ-ಈಮಹೇ**— ನಾವು ಪರಿಹರಿಸುತ್ತೇವೆ.

**ಭಾವಾರ್ಥ**

ಇಷ್ಟಾರ್ಥಪ್ರದನಾದ ರುದ್ರನ ಪುತ್ರರಾದ ಮರುತ್ತುಗಳನ್ನು ಆರಾಧಿಸಿ ಪೂಜಿಸುತ್ತೇನೆ. ಅದೇ ಮರುತ್ತುಗಳು ನಮ್ಮ ಕಡೆಗೆ ಅನುಗ್ರಹಿಸಿ ಅನೇಕವೇಳೆ ಬರಲಿ. ಹೊರಗಡೆ ಪ್ರಕಾಶವಾಗದಿರುವುದೂ, ಪ್ರಕಾಶಿತವಾಗುವುದೂ ಆದ ಯಾವ ಎರಡು ವಿಧವಾದ (ಅಂತರಂಗಬಹಿರಂಗಗಳೆಂಬ) ಪಾಪದಿಂದ ಮರುತ್ತುಗಳು ಅಗ್ರಹಗೊಳ್ಳುವರೋ ಅವರ ವಿಷಯದಲ್ಲಿ ಆಚರಿಸುವ ಆ ಎರಡು ವಿಧವಾದ ಪಾಪಗಳನ್ನು ನಾವು ಪರಿಹರಿಸುತ್ತೇವೆ

English Translation

I adore those sons of the showerer, Rudra may the Maruts, repeateadly invoked, again come to us . may we expiate (by praise) whatever we have committed secretly or openly against the swift moving Maruts, by which they are displeased.

**ವಿಶೇಷವಿಷಯಗಳು**

**ನಂಸಂತೇ**— ಈ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳುತ್ತಾ- **ಕುವಿನ್ನಂಸಂತೇ ಮರುತಃ ಪುನರ್ನಃ** (ನಿ ೪-೧೫) **ಪುನರ್ನೋ ನಮಂತೇ ಮರುತಃ** ಎಂದರೆ ಮರುದ್ದೇವತೆಗಳು ನಮಗಭಿಮುಖವಾಗಿ ಪುನಃಪುನಃ ಬಗ್ಗಿ ಬರುವರು **ನಂಸಂತೇ** ಎಂಬ ಶಬ್ದಕ್ಕೆ **ನಮಂತೇ**-ಬಗ್ಗುತ್ತಾರೆ ಎಂದು ಅರ್ಥವಿವರಣವಾಡಿದಾರೆ.

**ಸಂಹಿತಾಪಾಠಃ**

ಪ್ರ ಸಾ ವಾಚಿ ಸುಷ್ಟುತಿರ್ಮಘೋನಾಮಿದಂ ಸೂಕ್ತಂ ಮರುತೋ ಜುಷಂತ

ಆರಾಚ್ಚಿದ್ದ್ವೇಷೋ ವೃಷಣೋ ಯುಯೋತ ಯೂಯಂ ಪಾತ ಸ್ವಸ್ತಿಭಿಃ

ಸದಾ ನಃ ॥ ೬ ॥

**ಪದಪಾಠಃ**

ಪ್ರ | ಸಾ | ವಾಚಿ | ಸುऽಸ್ತುತಿಃ | ಮಘೋನಾಂ | ಇದಂ | ಸುऽಉಕ್ತಂ | ಮರುತಃ | ಜುಷಂತ |

ಆರಾತ್ | ಚಿತ್ | ದ್ವೇಷಃ | ವೃಷಣಃ | ಯುಯೋತ | ಯೂಯಂ | ಪಾತ | ಸ್ವಸ್ತಿऽಭಿಃ | ಸದಾ | ನಃ ॥

**ಸಾಯಣಭಾಷ್ಯಂ**

ಮಘೋನಾಂ ಧನವತಾಂ ಮರುತಾಂ ಸಂಬಂಧಿನೀ ಸುಷ್ಟುತಿರ್ಯಾ ಶೋಭನಾ ಸ್ತುತಿರಸ್ಮಿನ್ಸೂಕ್ತೇ ಕೃತಾ ಸಾ ಸ್ತುತಿರಸ್ಮಾಭಿಃ ಪ್ರ ವಾಚಿ | ಪ್ರೋಕ್ತಾಸೀತ್ | ಮರುತ ಇದಮಿದಾನೀಂ ಪ್ರಗ್ರಥಿತಂ ಸೂಕ್ತಂ ಜುಷಂತ | ಸೇವಂತಾಂ | ಹೇ ವೃಷಣಃ ಕಾಮಾನಾಂ ವರ್ಷಿತಾರಃ ಯೂಯಂ ದ್ವೇಷೋ ದ್ವೇಷಾಂಸಿ ಶತ್ರೂನಾರಾಚ್ಚಿದ್ದೂರಾದೇವ ಯುಯೋತ | ಅಸ್ಮತ್ತಃ ಪೃಥಕ್ಕುರುತ | ಯೂಯಂ ನೋऽಸ್ಮಾನ್ ಸ್ವಸ್ತಿಭಿಃ ಸರ್ವದಾ ರಕ್ಷತ ॥

ಪ್ರತಿಪದಾರ್ಥ

**ಮಘೋನಾಂ**—ಧನವಂತರಾದ ಮರುತ್ತುಗಳಿಗೋಸ್ಕರ | **ಸುಷ್ಟುತಿಃ**—ಯಾವ ಸ್ತುತಿಯು ನಿರ್ಮಿತವಾಗಿರುವುದೋ | **ಸಾ**—ಆ ಸ್ತುತಿಯು | **ಪ್ರ ವಾಚಿ**—ಪಠಿತವಾಗಿದೆ | **ಮರುತಃ**—ಮರುತ್ತುಗಳು | **ಇದಂ ಸೂಕ್ತಂ** ಈ ಸ್ತುತಿಯನ್ನು | **ಜುಷಂತ**—ಸೇವಿಸಲಿ. | **ವೃಷಣಃ**—ಇಷ್ಟಾರ್ಥಪ್ರದರಾದ ಎಲೈ ಮರುತ್ತುಗಳೇ, | **ದ್ವೇಷಃ**—ನಮ್ಮ ಶತ್ರುಗಳನ್ನು | **ಆರಾತ್ಚಿತ್**—ದೂರದೇಶದಿಂದಲೇ | **ಯುಯೋತ**—ಬೇರೆಮಾಡಿರಿ. | (ಎಲೈ ಮರುತ್ತುಗಳೇ) **ಯೂಯಂ**—ನೀವು | **ನಃ**— ನಮ್ಮನ್ನು | **ಸದಾ** — ಯಾವಾಗಲೂ | **ಸ್ವಸ್ತಿಭಿಃ** — ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ.

ಭಾವಾರ್ಥ

ಧನವಂತರಾದ ಮರುತ್ತುಗಳನ್ನುದ್ದೇಶಿಸಿ ಯಾವ ಸೂಕ್ತವು ನಿರ್ಮಿತವಾಗಿರುವುದೋ ಆ ಸೂಕ್ತವು ನಮ್ಮಿಂದ ಪಠಿತವಾಗಿದೆ. ಮರುತ್ತುಗಳು ಈ ಸೂಕ್ತವನ್ನು ಸೇವಿಸಲಿ ಇಷ್ಟಾರ್ಥಪ್ರದರಾದ ಎಲೈ ಮರುತ್ತುಗಳೇ, ನಮ್ಮ ಶತ್ರುಗಳನ್ನು ದೂರದೇಶದಿಂದಲೇ ಬೇರೆ ಮಾಡಿರಿ ಎಲೈ ಮರುತ್ತುಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

The pious praise of the opulent Maruts has been recited may the Maruts be gratified by this hymn remove far from us, showerers (of benefits), those who hate us and ever cherish us with blessings

---

# ಐವತ್ತೊಂಭತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಯಂ ತ್ರಾಯಧ್ವ ಇತಿ ದ್ವಾದಶರ್ಚಂ ಚತುರ್ಥಂ ಸೂಕ್ತಂ | ಅತ್ರೇಯಮನುಕ್ರಮಣಿಕಾ | ಯಂ ತ್ರಾಯಧ್ವೇ ದ್ವಾದಶ ತ್ರಿಪ್ರಗಾಥಾದಿ ನವಮ್ಯಾದ್ಯಾಸ್ತಿಸ್ರೋ ಗಾಯತ್ರ್ಯೋಽಂತ್ಯಾನುಷ್ಟುಬ್ರೌದ್ರೀ ಮೃತ್ಯುವಿಮೋಚನೀತಿ | ಆದ್ಯಾತೃತೀಯಾಪಂಚಮ್ಯೋ ಬೃಹತ್ಯೋ ದ್ವಿತೀಯಾಚತುರ್ಥೀಷಷ್ಠ್ಯಃ ಸತೋಬೃಹತ್ಯಃ ಸಪ್ತಮ್ಯಾಷ್ಟಮ್ಯಾವನುಕ್ತತ್ವಾತ್ತ್ರಿಷ್ಟುಭೌ ನವಮೀದಶಮ್ಯೇಕಾದಶ್ಯೋ ಗಾಯತ್ರ್ಯಃ | ದ್ವಾದಶ್ಯನುಷ್ಟುಪ್ ಸಾ ಚ ರುದ್ರದೇವತಾಕಾ | ಶಿಷ್ಟಾ ಮಾರುತ್ಯಃ || ಸೂಕ್ತವಿನಿಯೋಗೋ ಲೈಂಗಿಕಃ ||**

**ಅನುವಾದವು**—**ಯಂ ತ್ರಾಯಧ್ವೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇವರಲ್ಲಿ ಹನ್ನೆರಡು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ಯಂ ತ್ರಾಯಧ್ವೇ ದ್ವಾದಶ ತ್ರಿಪ್ರಗಾಥಾದಿ ನವಮ್ಯಾದ್ಯಾಸ್ತಿಸ್ರೋ ಗಾಯತ್ರ್ಯೋಽನ್ತ್ಯಾನುಷ್ಟುಬ್ರೌದ್ರೀ ಮೃತ್ಯುವಿಮೋಚನೀ** ಎಂದು ಹೇಳಿರುವುದು. ಈ ಸೂಕ್ತದ ಮೊದಲಿನ ಮತ್ತು ಐದನೆಯ ಋಕ್ಕುಗಳು ಬೃಹತೀಛಂದಸ್ಕವು. ಎರಡು, ನಾಲ್ಕು, ಆರನೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಏಳು ಮತ್ತು ಎಂಟನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು.

ಒಂಭತ್ತು, ಹತ್ತು ಮತ್ತು ಹನ್ನೊಂದನೆಯ ಋಕ್ಕುಗಳು ಗಾಯತ್ರೀಛಂದಸ್ಕವು. ಹನ್ನೆರಡನೆಯ ಋಕ್ಕು ಅನುಷ್ಟುಪ್ ಛಂದಸ್ಕವು ಮತ್ತು ರುದ್ರದೇವತಾಕವು. ಉಳಿದ ಋಕ್ಕುಗಳು ಮರುದ್ದೇವತಾಕವು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೫೯

ಮಂಡಲ—೭ ॥ ಅನುವಾಕ—೪ ॥ ಸೂಕ್ತ —೫೯ ॥
ಅಷ್ಟಕ—೫ ॥ ಅಧ್ಯಾಯ—೪ ॥ ವರ್ಗ—೨೯, ೩೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
ಋಷಿಃ—ವಸಿಷ್ಠಃ ॥
ದೇವತಾ— ೧–೧೧ ಮರುತಃ । ೧೨ ರುದ್ರಃ (ಮೃತ್ಯುವಿಮೋಚಿನೀ ಋಕ್) ॥
ಛಂದಃ— ೧, ೩, ೫, ಬೃಹತೀ । ೨, ೪, ೬, ಸತೋಬೃಹತೀ ।
೭, ೮, ತ್ರಿಷ್ಟುಪ್ । ೯–೧೧ ಗಾಯತ್ರೀ । ೧೨ ಅನುಷ್ಟುಪ್ ॥

ಸಂಹಿತಾಪಾಠಃ

ಯಂ ತ್ರಾಯಧ್ವ ಇದಮಿದಂ ದೇವಾಸೋ ಯಂ ಚ ನಯಥ ।
ತಸ್ಮಾ ಅಗ್ನೇ ವರುಣ ಮಿತ್ರಾರ್ಯಮನ್ಮರುತಃ ಶರ್ಮ ಯಚ್ಛತ ॥ ೧ ॥

ಪದಪಾಠಃ

ಯಂ । ತ್ರಾಯಧ್ವೇ । ಇದಂऽಇದಂ । ದೇವಾಸಃ । ಯಂ । ಚ । ನಯಥ ।
ತಸ್ಮೈ । ಅಗ್ನೇ । ವರುಣ । ಮಿತ್ರ । ಅರ್ಯಮನ್ । ಮರುತಃ । ಶರ್ಮ । ಯಚ್ಛತ ॥ ೧ ॥

ಸಾಯಣಭಾಷ್ಯಂ

ಹೇ ದೇವಾಸೋ ದೇವಾಃ ಇದಮಿದಮಿತೋ ಭಯಹೇತೋರ್ಯಂ ಸ್ತೋತಾರಂ ತ್ರಾಯಧ್ವೇ ಪಾಲಯಧ್ವೇ । ಯಂ ಚ ಸ್ತೋತಾರಂ ನಯಥ ಸನ್ಮಾರ್ಗಂ ಪ್ರಾಪಯಥ । ಹೇ ಅಗ್ನೇ ವರುಣ ಮಿತ್ರಾರ್ಯಮನ್ ಹೇ ಮರುತ ಏವಂಭೂತಾ ಹೇ ದೇವಾಃ ತಸ್ಮೈ ಸ್ತೋತ್ರೇ ಶರ್ಮ ಸುಖಂ ಯಚ್ಛತ । ದತ್ತ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ವರುಣ**—ಎಲೈ ವರುಣನೇ, । **ಮಿತ್ರ**—ಎಲೈ ಮಿತ್ರನೇ, । **ಅರ್ಯಮನ್**—ಎಲೈ ಅರ್ಯಮನೇ, । **ಮರುತಃ**—ಎಲೈ ಮರುತ್ತುಗಳೇ । **ದೇವಾಸಃ**—ಎಲೈ ಸಕಲ ದೇವತೆಗಳೇ, । **ಇದಮಿದಂ**—ಸಕಲ ಭಯಹೇತುಗಳಿಂದಲೂ । **ಯಂ**—ಯಾವ ಸ್ತುತಿಕರ್ತನನ್ನು । **ತ್ರಾಯಧ್ವೇ**—ರಕ್ಷಿಸುವಿರೋ । **ಯಂ ಚ**—ಯಾವನನ್ನು । **ನಯಥ**—ಸನ್ಮಾರ್ಗದಲ್ಲಿ ಒಯ್ಯುವಿರೋ । **ತಸ್ಮೈ**—ಅಂತಹ ಸ್ತುತಿಕರ್ತನಿಗೆ । **ಶರ್ಮ**—ಸುಖವನ್ನು । **ಯಚ್ಛತ**—ಒದಗಿಸಿಕೊಡಿರಿ.

ಭಾವಾರ್ಥ

ಎಲೈ ಅಗ್ನಿಯೇ, ಎಲೈ ವರುಣನೇ, ಎಲೈ ಅರ್ಯಮನೇ, ಎಲೈ ಮರುತ್ತುಗಳೇ, ಎಲೈ ಸಕಲ ದೇವತೆಗಳೇ, ಸಕಲ ಭಯಹೇತುಗಳಿಂದಲೂ ಯಾವ ಸ್ತುತಿಕರ್ತನನ್ನು ರಕ್ಷಿಸುವಿರೋ ಯಾವನನ್ನು ಸನ್ಮಾರ್ಗದಲ್ಲಿ ಒಯ್ಯುವಿರೋ ಅಂತಹ ಸ್ತುತಿಕರ್ತನಿಗೆ ಸುಖವನ್ನು ಒದಗಿಸಿಕೊಡಿರಿ

### English Translation

Agni, Varuna, Mitra, Maruts, grant happiness, gods, to him whom you preserve from (the perils of) this (world), whom you guide here (to the paths of virtue).

ಸಂಹಿತಾಪಾಠಃ

ಯುಷ್ಮಾಕಂ ದೇವಾ ಅವಸಾಹನಿ ಪ್ರಿಯ ಈಜಾನಸ್ತರತಿ ದ್ವಿಷಃ ।
ಪ್ರ ಸ ಕ್ಷಯಂ ತಿರತೇ ವಿ ಮಹೀರಿಷೋ ಯೋ ವೋ ವರಾಯ ದಾಶತಿ ॥೨॥

ಪದಪಾಠಃ

ಯುಷ್ಮಾಕಂ । ದೇವಾಃ । ಅವಸಾ । ಅಹನಿ । ಪ್ರಿಯೇ । ಈಜಾನಃ । ತರತಿ । ದ್ವಿಷಃ ।
ಪ್ರ । ಸಃ । ಕ್ಷಯಂ । ತಿರತೇ । ವಿ । ಮಹೀಃ । ಇಷಃ । ಯಃ । ವಃ । ವರಾಯ । ದಾಶತಿ ॥ ೨ ॥

ಸಾಯಣಭಾಷ್ಯಂ

ಹೇ ದೇವಾಃ ಯುಷ್ಮಾಕಂ ಯುಷ್ಮದೀಯೇನಾವಸಾ ರಕ್ಷಣೇನ ಪ್ರಿಯೇಽಹನಿ ಸರ್ವೇಷಾಂ ದೇವಾನಾಂ ಪ್ರಿಯಭೂತೇ ಸುತ್ಯಾಭಿಧಾನೇ ದಿವಸ ಈಜಾನ ಇಷ್ಟವಾಞ್ಜನೋ ದ್ವಿಷಃ ಶತ್ರೂಂಸ್ತರತಿ । ಆಕ್ರಾಮತಿ । ಸ ಯಜಮಾನಃ ಕ್ಷಯಂ ಸ್ವಕೀಯಂ ನಿವಾಸಂ ಪ್ರ ತಿರತೇ । ಪ್ರವರ್ಧಯತಿ । ಯೋ ಯಜಮಾನೋ ವೋ ಯುಷ್ಮಭ್ಯಂ ಮಹೀರ್ಮಹಾಂತೀಷೋ ಹವಿರ್ಲಕ್ಷಣಾನ್ಯನ್ನಾನಿ ವರಾಯ ನಿವಾರಣಾಯ ಯೂಯಂ ನಾನ್ಯತ್ರ ಗಚ್ಛತಾಸ್ಮದೀಯಾನ್ಯೇವ ಹವೀಂಷಿ ಸ್ವೀಕುರುತೇತಿ ನಿರೋಧನಂ ಕರ್ತುಂ ವಿ ದಾಶತಿ ವಿಶೇಷೇಣ ದದಾತಿ । ಅತ ಏವ ಸ ಸ್ವಕೀಯಂ ನಿವಾಸಂ ವರ್ಧಯತೀತ್ಯರ್ಥಃ ॥

ಪ್ರತಿಪದಾರ್ಥ

**ದೇವಾಃ**—ಎಲೈ ದೇವತೆಗಳೇ, । **ಯುಷ್ಮಾಕಂ**—ನಿಮ್ಮ । **ಅವಸಾ**—ರಕ್ಷಣೆಯಿಂದ ಕೂಡಿ । **ಪ್ರಿಯೇ ಅಹನಿ**—ನಿಮಗೆ ಪ್ರೀತಿಕರವಾದ ಯಜ್ಞದಿವಸಗಳಲ್ಲಿ । **ಈಜಾನಃ**—ನಿಮ್ಮನ್ನು ಪೂಜಿಸುವ ಯಜಮಾನನು । **ದ್ವಿಷಃ**—ಶತ್ರುಗಳನ್ನು । **ತರತಿ**—ಜಯಿಸುತ್ತಾನೆ. । **ಯಃ**—ಯಾವ ಯಜಮಾನನು । **ವಃ**—ನಿಮಗೆ । **ಮಹೀಃ**—ಅತ್ಯಧಿಕವಾದ । **ಇಷಃ**—ಹವಿಸ್ಸನ್ನು । **ವರಾಯ**—ನೀವು ಬೇರೊಬ್ಬ ಯಜಮಾನನಲ್ಲಿಗೆ ಹೋಗುವುದನ್ನು ತಪ್ಪಿಸಲು । **ವಿ ದಾಶತಿ**—ವಿಶೇಷರೀತಿಯಲ್ಲಿ ಅರ್ಪಿಸುವನೋ । **ಸಃ**—ಅದೇ ಯಜಮಾನನು । **ಕ್ಷಯಂ**—ತನ್ನ ನಿವಾಸಸ್ಥಾನವನ್ನು । **ಪ್ರ ತಿರತೇ**—ಬೆಳಸಿಕೊಳ್ಳುತ್ತಾನೆ.

ಭಾವಾರ್ಥ

ಎಲೈ ದೇವತೆಗಳೇ, ನಿಮ್ಮ ರಕ್ಷಣೆಯಿಂದ ಕೂಡಿ ನಿಮಗೆ ಪ್ರೀತಿಕರವಾದ ಯಜ್ಞದಿವಸಗಳಲ್ಲಿ ನಿಮ್ಮನ್ನು ಪೂಜಿಸುವ ಯಜಮಾನನು ಶತ್ರುಗಳನ್ನು ಜಯಿಸುತ್ತಾನೆ. ನೀವು ಬೇರೆ ಯಜಮಾನನಲ್ಲಿಗೆ ಹೋಗುವುದನ್ನು ತಪ್ಪಿಸಲು ಯಾರು ನಿಮಗೆ ಅತ್ಯಧಿಕವಾದ ಹವಿಸ್ಸನ್ನು ಅರ್ಪಿಸುವರೋ ಅದೇ ಯಜಮಾನನು ತನ್ನ ನಿವಾಸಸ್ಥಾನವನ್ನು ಬೆಳಸಿಕೊಳ್ಳುತ್ತಾನೆ.

## English Translation

Through your protection, gods, the man who worships on an auspicious day overcomes his adversaries he who offers abundant (sacrificial) food to you to detain you (at his rite) enlarges his habitation.

ಸಂಹಿತಾಪಾಠಃ

ನಹಿ ವಶ್ಚರಮಂ ಚನ ವಸಿಷ್ಠಃ ಪರಿಮಂಸತೇ ।
ಅಸ್ಮಾಕಮದ್ಯ ಮರುತಃ ಸುತೇ ಸಚಾ ವಿಶ್ವೇ ಪಿಬತ ಕಾಮಿನಃ ॥ ೩ ॥

ಪದಪಾಠಃ

ನಹಿ । ವಃ । ಚರಮಂ । ಚನ । ವಸಿಷ್ಠಃ । ಪರಿಽಮಂಸತೇ ।
ಅಸ್ಮಾಕಂ । ಅದ್ಯ । ಮರುತಃ । ಸುತೇ । ಸಚಾ । ವಿಶ್ವೇ । ಪಿಬತ । ಕಾಮಿನಃ ॥ ೩ ॥

ಸಾಯಣಭಾಷ್ಯಂ

ವಸಿಷ್ಠ ಋಷಿರ್ವೋ ಯುಷ್ಮಾಕಂ ಮಧ್ಯೇ ಚರಮಂ ಚನಾವರಮಪಿ ನಹಿ ಪರಿಮಂಸತೇ । ವರ್ಜಯಿತ್ವಾ ನ ಸ್ತೌತಿ । ಕಿಂತು ಸರ್ವಾನೇವ ಯುಷ್ಮಾನ್ ಸ್ತೌತೀತ್ಯರ್ಥಃ । ಅದ್ಯಾಸ್ಮಿನ್ನಿನೇಽಸ್ಮಾಕಮದೀಯೇ ಸುತೇ ಸೋಮೇಽಭಿಷುತೇ ಸತಿ ಹೇ ಮರುತಃ ಕಾಮಿನಃ ಸೋಮಂ ಕಾಮಯಮಾನಾ ವಿಶ್ವೇ ಯೂಯಂ ಸಚಾ ಸಂಗತ್ಯ ಪಿಬತ । ಪಾನಂ ಕುರುತ ॥

ಪ್ರತಿಪದಾರ್ಥ

**ಕಾಮಿನಃ**—ಸೋಮಾಪೇಕ್ಷಿಗಳಾದ । **ಮರುತಃ**—ಎಲೈ ಮರುತ್ತುಗಳೇ, । **ವಃ**—ನಿಮ್ಮುಗಳ ನಡುವೆ । **ಚರಮಂ ಚನ**—ಅತ್ಯಂತ ಕನಿಷ್ಠನನ್ನು ಸಹ । **ವಸಿಷ್ಠಃ**—ವಸಿಷ್ಠನು । **ನಹಿ ಪರಿಮಂಸತೇ**—ತಿರಸ್ಕರಿಸುವುದಿಲ್ಲ. **ಅದ್ಯ**—ಈ ಯಾಗದಿನದಲ್ಲಿ । **ಅಸ್ಮಾಕಂ**—ನಮ್ಮಿಂದ । **ಸುತೇ**—ಸೋಮವು ಹಿಂಡಲ್ಪಟ್ಟು ಅರ್ಪಿತವಾಗುವಾಗ । **ವಿಶ್ವೇ**—ನೀವೆಲ್ಲರೂ । **ಸಚಾ**—ಒಟ್ಟಿಗೆ ಸೇರಿ । **ಪಿಬತ**—ಸೋಮಪಾನವನ್ನು ಮಾಡಿರಿ

ಭಾವಾರ್ಥ

ಸೋಮಾಪೇಕ್ಷಿಗಳಾದ ಎಲೈ ಮರುತ್ತುಗಳೇ, ನಿಮ್ಮ ನಡುವೆ ಅತ್ಯಂತ ಕನಿಷ್ಠನನ್ನು ಸಹ ವಸಿಷ್ಠನು ತಿರಸ್ಕರಿಸುವುದಿಲ್ಲ. ಈ ಯಾಗದಿನದಲ್ಲಿ ನಮ್ಮಿಂದ ಸೋಮವು ಹಿಂಡಲ್ಪಟ್ಟು ಅರ್ಪಿತವಾಗುವಾಗ ನೀವೆಲ್ಲರೂ ಒಟ್ಟಿಗೆ ಸೇರಿ ಸೋಮಪಾನವನ್ನು ಮಾಡಿರಿ.

## English Translation

Vashistha overlooks not the very lowest amongst you. Maruts, who are desirous (of the libation), do you all drink together to-day of our effused Soma juices.

ಸಂಹಿತಾಪಾಠಃ

ನಹಿ ವ ಊತಿಃ ಪೃತನಾಸು ಮರ್ಧತಿ ಯಸ್ಮಾ ಅರಾಧ್ವಂ ನರಃ ।
ಅಭಿ ವ ಆವರ್ತ್ಸುಮತಿರ್ನವೀಯಸೀ ತೂಯಂ ಯಾತ ಪಿಪೀಷವಃ ॥ ೪ ॥

ಪದಪಾಠಃ

ನಹಿ । ವಃ । ಊತಿಃ । ಪೃತನಾಸು । ಮರ್ಧತಿ । ಯಸ್ಮೈ । ಅರಾಧ್ವಂ । ನರಃ ।
ಅಭಿ । ವಃ । ಆ । ಆವರ್ತ್ । ಸುऽಮತಿಃ । ನವೀಯಸೀ । ತೂಯಂ । ಯಾತ । ಪಿಪೀಷವಃ ॥ ೪ ॥

ಸಾಯಣಭಾಷ್ಯಂ

ಹೇ ಮರುತಃ ವೋ ಯುಷ್ಮದೀಯೋತೀ ರಕ್ಷಾ ಪೃತನಾಸು ಯುದ್ಧೇಷು ನಹಿ ಮರ್ಧತಿ । ನ ಖಲು ಹಿನಸ್ತಿ । ಶತ್ರುಭಿಃ ಕೃತಾಂ ಹಿಂಸಾಂ ನ ಸಹತ ಇತ್ಯರ್ಥಃ । ಹೇ ನರೋ ನೇತಾರಃ ಯೂಯಂ ಯಸ್ಮೈ ಜನಾಯಾರಾಧ್ವಂ ಕಾಮಾನದಧ್ವಂ ತಂ ಜನಂ ನ ಹಿನಸ್ತೀತಿ ಸಂಬಂಧಃ । ನವೀಯಸೀ ನವತರಾ ವೋ ಯುಷ್ಮದೀಯಾ ಸುಮತಿರನುಗ್ರಹಬುದ್ಧಿರಭ್ಯಾವರ್ತ । ಅಸ್ಮಾನಭ್ಯಾವರ್ತತಾಂ । ತಥಾ ಹೇ ಪಿಪೀಷವಃ ಸೋಮಪಾನಕಾಮಾಃ ಯೂಯಮಪಿ ತೂಯಂ ಕ್ಷಿಪ್ರಂ ಯಾತ । ಆಗಚ್ಛತ ॥

ಪ್ರತಿಪದಾರ್ಥ

ನರಃ—ನೇತೃಗಳಾದ ಎಲೈ ಮರುತ್ತುಗಳೇ, । **ಯಸ್ಮೈ**—ಯಾವ ಯಜಮಾನನಿಗೆ । **ಅರಾಧ್ವಂ**—ನೀವು ಇಷ್ಟಾರ್ಥಗಳನ್ನು ಕೊಡುವಿರೋ, ಅವನನ್ನು । **ವಃ**—ನಿಮ್ಮ । **ಊತಿಃ**—ರಕ್ಷಣೆಯು । **ಪೃತನಾಸು**—ಯುದ್ಧಗಳಲ್ಲಿ । **ನಹಿ ಮರ್ಧತಿ**—ಹಿಂಸಿಸುವುದಿಲ್ಲ । **ನವೀಯಸೀ**—ನೂತನವಾದ । **ವಃ**—ನಿಮ್ಮ । **ಸುಮತಿಃ**—ಅನುಗ್ರಹಬುದ್ಧಿಯು । **ಅಭ್ಯಾವರ್ತ**—ನಮ್ಮಲ್ಲಿಗೆ ತಿರುಗಲಿ. । **ಪಿಪೀಷವಃ**—ಸೋಮಪಾನವನ್ನಪೇಕ್ಷಿಸುವ ನೀವು **ತೂಯಂ**—ಕ್ಷಿಪ್ರವಾಗಿ । **ಯಾತ**—ನಮ್ಮಲ್ಲಿಗೆ ಬನ್ನಿರಿ.

ಭಾವಾರ್ಥ

ನೇತೃಗಳಾದ ಎಲೈ ಮರುತ್ತುಗಳೇ, ಯಾವ ಯಜಮಾನನಿಗೆ ನೀವು ಇಷ್ಟಾರ್ಥಗಳನ್ನು ಕೊಡುವಿರೋ, ಅವನನ್ನು ನಿಮ್ಮ ರಕ್ಷಣೆಯು ಯುದ್ಧಕಾಲಗಳಲ್ಲಿ ಹಿಂಸಿಸುವುದಿಲ್ಲ. ನಿಮ್ಮ ನೂತನವಾದ (ಪ್ರಶಸ್ಯವಾದ) ಅನುಗ್ರಹ ಬುದ್ಧಿಯು ನಮ್ಮ ಕಡೆಗೆ ತಿರುಗಲಿ. ಸೋಮಪಾನವನ್ನಪೇಕ್ಷಿಸುವ ನೀವೂ ಸಹ ನಮ್ಮಲ್ಲಿಗೆ ಬನ್ನಿರಿ.

## English Translation

Your protection, leaders (of rites), yields no detriment to him whom you defend in battles: may your latest favour return to us: come quickly, eager to drink the Soma.

ಸಂಹಿತಾಪಾಠಃ

ಓ ಷು ಘೃಷ್ವಿರಾಧಸೋ ಯಾತನಾಂಧಾಂಸಿ ಪೀತಯೇ ।
ಇಮಾ ವೋ ಹವ್ಯಾ ಮರುತೋ ರರೇ ಹಿ ಕಂ ಮೋ ಷ್ವ೧ ನ್ಯತ್ರ ಗಂತನ ॥

ಪದಪಾಠಃ

ಓ ಇತಿ । ಸು । ಘೃಷ್ವಿऽರಾಧಸಃ । ಯಾತನ । ಅಂಧಾಂಸಿ । ಪೀತಯೇ ।
ಇಮಾ । ವಃ । ಹವ್ಯಾ । ಮರುತಃ । ರರೇ । ಹಿ । ಕಂ । ಮೋ ಇತಿ । ಸು । ಅನ್ಯತ್ರ । ಗಂತನ ॥ ೫ ॥

ಸಾಯಣಭಾಷ್ಯಂ

ಹೇ ಘೃಷ್ವಿರಾಧಸಃ ಪರಸ್ಪರಘೃಷ್ಟಾನಿ ಸುಸಂಹತಾನಿ ರಾಧಾಂಸಿ ಯೇಷಾಂ ತೇ ಹೇ ಮರುತಃ ಯೂಯಮಂಧಾಂಸಿ ಸೋಮಲಕ್ಷಣಾನಿ ಹವೀಂಷಿ ಪೀತಯೇ ಭಕ್ಷಣಾರ್ಥಂ ಸು ಸುಷ್ಠು ಓ ಯಾತನ ಆಯಾತ । ಹಿ ಯಸ್ಮಾತ್ಕಾರಣಾತ್ ಹೇ ಮರುತಃ ವೋ ಯುಷ್ಮಭ್ಯಮಿಮಾನಿ ಹವ್ಯಾ ಹವ್ಯಾನಿ ಹವೀಂಷಿ ರರೇ ಅಹಂ ದದಾಮಿ ಅತಃ ಕಾರಣಾದ್ಯೂಯಮನ್ಯತ್ರ ಮೋ ಷು ಗಂತನ । ಮಾ ಗಚ್ಛತ ॥

ಪ್ರತಿಪದಾರ್ಥ

**ಘೃಷ್ವಿರಾಧಸಃ**— ಶೇಖರಿಸಲ್ಪಟ್ಟಿರುವ ಧನವುಳ್ಳ । **ಮರುತಃ**— ಎಲೈ ಮರುತ್ತುಗಳೇ, । **ಹಿ**— ಯಾವ ನಿಮಿತ್ತವಾಗಿ । **ವಃ**— ನಿಮ್ಮನ್ನುದ್ದೇಶಿಸಿ । **ಇಮಾ ಹವ್ಯಾ**— ಈ ಹವಿಸ್ಸುಗಳನ್ನು । **ರರೇ**— ನಾನು ಅರ್ಪಿಸುವೆನೋ ಆದುದರಿಂದಲೇ । **ಅಂಧಾಂಸಿ**— ಈ ಹವಿಸ್ಸುಗಳನ್ನು । **ಪೀತಯೇ**— ಸೇವಿಸಲು । **ಸು**— ಅತಿಶಯವಾಗಿ । **ಓ ಯಾತನ**— ಇಲ್ಲಿಗೆ ಬನ್ನಿರಿ । **ಅನ್ಯತ್ರ**— ಬೇರೆ ಕಡೆಗೆ । **ಮೋ ಷು ಗಂತನ**— ಖಂಡಿತ ಹೋಗಬೇಡಿರಿ.

ಭಾವಾರ್ಥ

ಧನವನ್ನು ಶೇಖರಿಸಿರುವ ಎಲೈ ಮರುತ್ತುಗಳೇ, ಯಾವ ನಿಮಿತ್ತವಾಗಿ ನಿಮ್ಮನ್ನುದ್ದೇಶಿಸಿ ಈ ಹವಿಸ್ಸುಗಳನ್ನು ನಾನು ಅರ್ಪಿಸುವೆನೋ, ಆ ನಿಮಿತ್ತವಾಗಿ ಈ ಅರ್ಪಿತವಾದ ಹವಿಸ್ಸುಗಳನ್ನು ಸೇವಿಸಲು ಇಲ್ಲಿಗೆ ಬನ್ನಿರಿ. ಬೇರೆ ಕಡೆಗೆ ಖಂಡಿತ ಹೋಗಬೇಡಿರಿ

English Translation

Do you whose riches are connected together come to partake of the (sacrificial) viands, for, Maruts, I offer to you these oblations, therefore go not away to any other (sacrifice).

ಸಂಹಿತಾಪಾಠಃ

ಆ ಚ ನೋ ಬರ್ಹಿಃ ಸದತಾವಿತಾ ಚ ನಃ ಸ್ಪಾರ್ಹಾಣಿ ದಾತವೇ ವಸು ।

ಅಸ್ರೇಧಂತೋ ಮರುತಃ ಸೋಮ್ಯೇ ಮಧೌ ಸ್ವಾಹೇಹ ಮಾದಯಾಧ್ವೈ ॥

ಪದಪಾಠಃ

ಆ । ಚ । ನಃ । ಬರ್ಹಿಃ । ಸದತ । ಅವಿತ । ಚ । ನಃ । ಸ್ಪಾರ್ಹಾಣಿ । ದಾತವೇ । ವಸು ।

ಅಸ್ರೇಧಂತಃ । ಮರುತಃ । ಸೋಮ್ಯೇ । ಮಧೌ । ಸ್ವಾಹಾ । ಇಹ । ಮಾದಯಾಧ್ವೈ ॥ ೬ ॥

ಸಾಯಣಭಾಷ್ಯಂ

ಹೇ ಮರುತಃ ಯೂಯಂ ನೋಽಸ್ಮದೀಯೇ ಬರ್ಹಿಃ ಕುಶಮಯೇ ಬರ್ಹಿಷ್ಯಾ ಸದತ ಚ । ಉಪವಿಶತ । ಸ್ಪಾರ್ಹಾಣಿ ಸ್ಪೃಹಣೀಯಾನಿ ವಸು ವಸೂನಿ ಧನಾನಿ ದಾತವೇಽಸ್ಮಭ್ಯಂ ದಾತುಂ ನೋಽಸ್ಮಾನವಿತ ಚ । ಆಗಚ್ಛತ ಚ । ಹೇ ಮರುತಃ ಅಸ್ರೇಧಂತೋಽಹಿಂಸಂತೋ ಯೂಯಮಿಹಾಸ್ಮಿನ್ಯಜ್ಞೇ ಮಧೌ ಮದಕರೇ ಸೋಮ್ಯೇ ಸೋಮಾತ್ಮಕೇ ಹವಿಷಿ ಸ್ವಾಹಾ ಸ್ವಾಹಾಕಾರೇಣ ಮಾದಯಾಧ್ವೈ । ಮಾದಯಧ್ವಂ । ಮಾದ್ಯತ ॥

ಪ್ರತಿಪದಾರ್ಥ

(ಎಲೈ ಮರುತ್ತುಗಳೇ,) **ನಃ**--ನಮ್ಮ । **ಬರ್ಹಿಃ**—ದರ್ಭಾಸನದಮೇಲೆ । **ಆ ಸದತ**—ಕುಳಿತುಕೊಳ್ಳಿರಿ । **ಸ್ಪಾರ್ಹಾಣಿ**—ಅತ್ಯಪೇಕ್ಷಿತಗಳಾದ । **ವಸು**—ಧನಗಳನ್ನು । **ದಾತವೇ**—ಕೊಡುವುದಕ್ಕೆ । **ನಃ**—ನಮ್ಮಲ್ಲಿಗೆ । **ಅವಿತ ಚ**—ಬನ್ನಿರಿ । **ಮರುತಃ**—ಎಲೈ ಮರುತ್ತುಗಳೇ, । **ಅಸ್ರೇಧಂತಃ**—ಅಹಿಂಸಕರಾದ ನೀವು । **ಇಹ**—ನಮ್ಮ ಈ ಯಜ್ಞದಲ್ಲಿ । **ಸ್ವಾಹಾ** — ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾಗುವ । **ಮಧೌ** — ಹರ್ಷಕಾರಕವಾದುದೂ । **ಸೋಮ್ಯೇ**—ಸೋಮಾತ್ಮಕವೂ ಆದ ಹವಿಸ್ಸಿನಲ್ಲಿ । **ಮಾದಯಾಧ್ವೈ**—ತೃಪ್ತಿಯನ್ನು ಅನುಭವಿಸಿರಿ.

ಭಾವಾರ್ಥ

ಎಲೈ ಮರುತ್ತುಗಳೇ, ನಮ್ಮ ದರ್ಭಾಸನದ ಮೇಲೆ ಕುಳಿತುಕೊಳ್ಳಿರಿ. ನಮಗೆ ಅತ್ಯಪೇಕ್ಷಿತಗಳಾದ ಧನಗಳನ್ನು ಕೊಡಲು ನಮ್ಮಲ್ಲಿಗೆ ಬನ್ನಿರಿ. ಎಲೈ ಮರುತ್ತುಗಳೇ, ಹಿಂಸಾರಹಿತರಾದ ನೀವು ನಮ್ಮ ಈ ಯಜ್ಞದಲ್ಲಿ ಹರ್ಷಕಾರಕವೂ, ಸೋಮಾತ್ಮಕವೂ ಆದ ಹವಿಸ್ಸಿನಲ್ಲಿ ಸ್ವಾಹಾಕಾರಪೂರ್ವಕವಾದ ತೃಪ್ತಿಯನ್ನು ಅನುಭವಿಸಿರಿ

English Translation

Sit down on our sacred grass: come to bestow upon us desirable riches: doing no harm, Maruts delight in the sweet Soma libation presented at this season.

ಸಂಹಿತಾಪಾಠಃ

ಸಸ್ವಶ್ಚಿದ್ಧಿ ತನ್ವಃಶುಂಭಮಾನಾ ಆ ಹಂಸಾಸೋ ನೀಲಪೃಷ್ಠಾ ಅಪಪ್ತನ್ ।

ವಿಶ್ವಂ ಶರ್ಧೋ ಅಭಿತೋ ಮಾ ನಿ ಷೇದ ನರೋ ನ ರಣ್ವಾಃ ಸವನೇ ಮದಂತಃ ॥ ೭ ॥

ಪದಪಾಠಃ

ಸಸ್ವರಿತಿ । ಚಿತ್ । ಹಿ । ತನ್ವಃ । ಶುಂಭಮಾನಾಃ । ಆ । ಹಂಸಾಸಃ । ನೀಲ5ಪೃಷ್ಠಾಃ । ಅಪಪ್ತನ್ । ವಿಶ್ವಂ । ಶರ್ಧಃ । ಅಭಿತಃ । ಮಾ । ನಿ । ಸೇದ । ನರಃ । ನ । ರಣ್ವಾಃ । ಸವನೇ । ಮದಂತಃ ॥ ೭ ॥

ಸಾಯಣಭಾಷ್ಯಂ

ಸಸ್ವರಂತರ್ಹಿತಾ ಮರುತಸ್ತನ್ವಃ ಸ್ವಕೀಯಾನ್ಯಂಗಾನಿ ಶುಂಭಮಾನಾ ಅಲಂಕರಣ್ಯೈಃ ಶೋಭಯಂತೋ ಮರುತೋ ನೀಲಪೃಷ್ಠಾ ಅಸಿತವರ್ಣಾ ಹಂಸಾಸೋ ಹಂಸಾ ಇವಾಪಪ್ತನ್ । ಆಪತಂತು । ಆಗಚ್ಛಂತು । ವಿಶ್ವಂ ಶರ್ಧೋ ವ್ಯಾಪ್ತೋ ಮರುದ್ಗಣೋ ಮಾ ಮಾಮಭಿತಃ ಸಮಂತಾನ್ನಿ ಷೇದ । ನಿಷೀದತು । ತತ್ರ ದೃಷ್ಟಾಂತಃ । ಸವನೇಽಸ್ಮದೀಯೇ ಯಜ್ಞೇ ಮದಂತೋ ಹೃಷ್ಯಂತೋ ರಣ್ವಾ ರಮಣೀಯಾ ನರೋ ನ ಮನುಷ್ಯಾ ಇವ ತದ್ವತ್ ॥

ಪ್ರತಿಪದಾರ್ಥ

**ಸಸ್ವಃ**—ಗೂಢವಾದ ಸ್ವರೂಪವುಳ್ಳ ಮರುತ್ತುಗಳು । **ತನ್ವಃ**—ತಮ್ಮ ಅಂಗಗಳನ್ನು । **ಶುಂಭಮಾನಾಃ**—ಅಲಂಕರಿಸಿಕೊಂಡು । **ನೀಲಪೃಷ್ಠಾಃ**—ನೀಲಿವಾದ ಬೆನ್ನುಳ್ಳ । **ಹಂಸಾಸಃ**—ಹಂಸಗಳಂತೆ । **ಆ ಅಪಪ್ತನ್**—ಇಳಿದು ಬರಲಿ । **ಸವನೇ**—ನಮ್ಮ ಯಜ್ಞದಲ್ಲಿ । **ಮದಂತಃ**—ಹರ್ಷವನ್ನು ಹೊಂದುವವರೂ । **ರಣ್ವಾಃ**—ಆಕರ್ಷಕವಾದ ರೂಪವುಳ್ಳವರೂ ಆದ । **ನರೋ ನ**—ಋತ್ವಿಗಾದಿಗಳಂತೆ । **ವಿಶ್ವಂ ಶರ್ಧಃ**—ಸಕಲ ಮರುದ್ಗಣವೂ । **ಮಾ ಅಭಿತಃ**—ನನ್ನ ಸುತ್ತಲೂ । **ನಿ ಷೇದ**—ಕುಳಿತುಕೊಳ್ಳಲಿ

ಭಾವಾರ್ಥ

ಹೊರಕ್ಕೆ ಪ್ರಕಾಶಿಸದೇ ಇರುವ ಸ್ವರೂಪವುಳ್ಳ ಮರುತ್ತುಗಳು ತಮ್ಮ ಅಂಗಗಳನ್ನು ಅಲಂಕರಿಸಿಕೊಂಡು ನೀಲವರ್ಣದ ಬೆನ್ನುಳ್ಳ ಹಂಸಗಳಂತೆ ಇಳಿದುಬರಲಿ ನಮ್ಮ ಯಜ್ಞದಲ್ಲಿ ಹರ್ಷವನ್ನು ಹೊಂದುವವರೂ, ಆಕರ್ಷಕವಾದ ರೂಪವುಳ್ಳವರೂ ಆದ ಋತ್ವಿಗಾದಿಗಳಂತೆ ಸಕಲ ಮರುದ್ಗಣವೂ ಸಹ ನನ್ನ ಸುತ್ತಲೂ ಕುಳಿತುಕೊಳ್ಳಲಿ

English Translation

May the Maruts yet unrevealed, decorating their persons, descend like black-backed swans . let the entire company gather round me like happy men rejoicing together at a solemn rite

ಸಂಹಿತಾಪಾಠಃ

ಯೋ ನೋ ಮರುತೋ ಅಭಿ ದುರ್ಹೃಣಾಯುಸ್ತಿರಶ್ಚಿತ್ತಾನಿ ವಸವೋ ಜಿಘಾಂಸತಿ ।

ದ್ರುಹಃ ಪಾಶಾನ್ಪ್ರತಿ ಸ ಮುಚೀಷ್ಟ ತಪಿಷ್ಠೇನ ಹನ್ಮನಾ ಹಂತನಾ ತಂ ||

ಪದಪಾಠಃ

ಯಃ | ನಃ | ಮರುತಃ | ಅಭಿ | ದುಃಽಹೃಣಾಯುಃ | ತಿರಃ | ಚಿತ್ತಾನಿ | ವಸವಃ | ಜಿಘಾಂಸತಿ |

ದ್ರುಹಃ | ಪಾಶಾನ್ | ಪ್ರತಿ | ಸಃ | ಮುಚೀಷ್ಟ | ತಪಿಷ್ಠೇನ | ಹನ್ಮನಾ | ಹಂತನ | ತಂ || ೮ ||

ಸಾಯಣಭಾಷ್ಯಂ

ಸಾಕಮೇಧೇಷು ಮರುದ್ಭ್ಯಃ ಸಾಂತಪನೇಭ್ಯ ಇತ್ಯಸ್ಯ ಯೋ ನೋ ಮರುತ ಇತಿ ಪೂರ್ವಾನುವಾಕ್ಯಾ ಸಾಂತಪನಾ ಇದಮಿತಿ ಯಾಜ್ಯಾ | ತಥಾ ಚ ಸೂತ್ರಿತಂ | ಸಾಂತಪನಾ ಇದಂ ಹವಿರ್ಯೋ ನೋ ಮರುತೋ ಅಭಿದುರ್ಹೃಣಾಯುಃ | ಆ ೨-೧೮ | ಇತಿ ||

ಹೇ ವಸವಃ ಪ್ರಶಸ್ಯಾ ಹೇ ಮರುತಃ ನೋಽಸ್ಮದೀಯಾನಿ ಚಿತ್ತಾನಿ ದುರ್ಹೃಣಾಯುರಶೋಭನಂ ಕ್ರುಧ್ಯಂಸ್ತಿರಃ ಸರ್ವೈಸ್ತಿರಸ್ಕೃತೋ ಯೋ ಜನೋಽಭಿ ಜಿಘಾಂಸತಿ ಅಭಿಮುಖ್ಯೇನ ಹಂತುಮಿಚ್ಛತಿ ಸ ಜನೋ ದ್ರುಹಃ ಪಾಪಾನಾಂ ದ್ರೋಗ್ಧುರ್ವರುಣಸ್ಯ ಪಾಶಾನಸ್ಮಾಸು ಪ್ರತಿ ಸ ಮುಚೀಷ್ಟ | ಬಧ್ನೀಯಾತ್| ಯೂಯಂ ತಂ ಜನಂ ತಪಿಷ್ಠೇನ ತಪ್ತೃತಮೇನ ಹನ್ಮನಾ ಹನನಸಾಧನೇನಾಯುಧೇನ ಹಂತನ | ಹತ | ಹಿಂಸ್ತ ||

ಪ್ರತಿಪದಾರ್ಥ

**ವಸವಃ**—ಪ್ರಶಸ್ಯರಾದ | **ಮರುತಃ**—ಎಲೈ ಮರುತ್ತುಗಳೇ, | **ನಃ**—ನಮ್ಮ | **ಚಿತ್ತಾನಿ**—ಮನಸ್ಸುಗಳನ್ನು | **ದುರ್ಹೃಣಾಯುಃ**—ಕ್ರೂರವಾಗಿ ನೋಯಿಸುವವನೂ | **ಯಃ**—ಯಾರು | **ಅಭಿ ಜಿಘಾಂಸತಿ**—ನಮ್ಮನ್ನು ಕೊಲ್ಲಲಿಚ್ಛಿಸುವನೋ | **ಸಃ**—ಅವನೂ | **ದ್ರುಹಃ**—ಪಾಪಿಗಳಿಗೆ ಹಿಂಸಕನಾದ ವರುಣನ | **ಪಾಶಾನ್**—ಪಾಶಗಳನ್ನು | **ಪ್ರತಿ ಸ ಮುಚೀಷ್ಟ**—ನಮ್ಮಮೇಲೆ ಪ್ರಯೋಗಿಸಬಹುದು. | **ತಂ**—ಅಂತಹ ಜನವನ್ನು | **ತಪಿಷ್ಠೇನ**—ದಹಿಸತಕ್ಕ | **ಹನ್ಮನಾ**—ಆಯುಧಗಳಿಂದ | **ಹಂತನ**—ಕೊಲ್ಲಿರಿ.

ಭಾವಾರ್ಥ

ಪ್ರಶಸ್ಯರಾದ ಎಲೈ ಮರುತ್ತುಗಳೇ, ನಮ್ಮ ಮನಸ್ಸುಗಳನ್ನು ಯಾರು ಕ್ರೂರವಾಗಿ ನೋಯಿಸುವರೋ, ಯಾರು ನಮ್ಮನ್ನು ಕೊಲ್ಲಲಿಚ್ಛಿಸುವರೋ ಅಂತಹ ಜನರು ಪಾಪಿಗಳಿಗೆ ಹಿಂಸಕನಾದ ವರುಣನ ಪಾಶಗಳನ್ನು ನಮ್ಮ ಮೇಲೆ ಪ್ರಯೋಗಿಸಬಹುದು. ಅಂತಹ ಜನರನ್ನು ನಿಮ್ಮ ದಹನಾತ್ಮಕವಾದ ಆಯುಧಗಳಿಂದ ಕೊಲ್ಲಿರಿ.

English Translation

The man, Maruts, who wounds our feelings, he who rebuked by all, yet seeks, Vasus, to kill us, he would bind us in the bonds of (Varuna), the avenger (of iniquity), such a man do you destroy with a consuming fatal weapon.

ವಿಶೇಷವಿಷಯಗಳು

**ಮರುದ್ಭ್ಯಃ ಸಾಂತಪನೇಭ್ಯಃ** ಎಂಬ ದೇವತೆಗಳನ್ನುದ್ದೇಶಿಸಿ ಮಾಡುವ ಸಾಕಮೇಧಹೋಮಗಳಲ್ಲಿ **ಯೋ ನೋ ಮರುತಃ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿಯೂ, **ಸಾಂತಪನಾ ಇದಂ** ಎಂಬ ಮುಂದಿನ ಋಕ್ಕನ್ನು (೯ ನೇ ಋಕ್ಕನ್ನು) ಯಾಜ್ಯಾಮಂತ್ರವನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಸಾಂತಪನಾ ಇದಂ ಹವಿರ್ಯೋ ನೋ ಮರುತೋ ಅಭಿ ದುರ್ಹೃಣಾಯುಃ** ಎಂಬ ಸೂತ್ರದಿಂದ (ಆ ೩ ೧೮) ವಿವೃತವಾಗಿರುವುದು.

ಸಂಹಿತಾಪಾಠಃ

ಸಾಂತಪನಾ ಇದಂ ಹವಿರ್ಮರುತಸ್ತಜ್ಜುಜುಷ್ಟನ ।

ಯುಷ್ಮಾಕೋತೀ ರಿಶಾದಸಃ ॥

ಪದಪಾಠಃ

ಸಾಂ꠶ತಪನಾಃ । ಇದಂ । ಹವಿಃ । ಮರುತಃ । ತತ್ । ಜುಜುಷ್ಟನ ।

ಯುಷ್ಮಾಕ । ಊತೀ । ರಿಶಾದಸಃ ॥ ೯ ॥

ಸಾಯಣಭಾಷ್ಯಂ

**ಸಾಂತಪನಾಃ** ಶತ್ರೂಣಾಂ ಸಂತಾಪಕಾ ಹೇ **ಮರುತಃ ಇದಂ** ಪ್ರತ್ಯಕ್ಷೇಣೋಪಲಭ್ಯಮಾನಂ **ಹವಿ**ರ್ಯುಷ್ಮಭ್ಯಂ ಕಲ್ಪಿತಮಿತಿ ಶೇಷಃ । ಹೇ **ರಿಶಾದಸೋ** ರಿಶತಾಂ ಹಿಂಸತಾಮಸಿತಾರೋ ರಿಶಾನಾಮತ್ತಾರೋ ವಾ ಯೂಯಂ **ಯುಷ್ಮಾಕ** ಯುಷ್ಮಾಕಮೂತ್ಯೋತ್ಯಾ ರಕ್ಷಯಾ **ತ**ತ್ತಾದೃಶಂ ಹವಿರ್ಜು**ಜುಷ್ಟನ** । ಸೇವಧ್ವಂ ॥

ಪ್ರತಿಪದಾರ್ಥ

**ಸಾಂತಪನಾಃ**—ಶತ್ರುಹಿಂಸಕರಾದ । **ಮರುತಃ**—ಎಲೈ ಮರುತ್ತುಗಳೇ, । **ಇದಂ ಹವಿಃ**—ಈ ಹವಿಸ್ಸು ನಿಮ್ಮನ್ನುದ್ದೇಶಿಸಿ ಅರ್ಪಿತವಾಗಿದೆ. । **ರಿಶಾದಸಃ**—ಶತ್ರುಗಳನ್ನು ನಾಶಮಾಡುವ ನೀವು । **ಯುಷ್ಮಾಕಂ**—ನಿಮ್ಮ **ಊತೀ**—ರಕ್ಷಣೆಗಳೊಡನೆ ಕೂಡಿ । **ತತ್**—ಆ ಹವಿಸ್ಸನ್ನು । **ಜುಜುಷ್ಟನ**—ಸೇವಿಸಿರಿ

ಭಾವಾರ್ಥ

ಶತ್ರುಹಿಂಸಕರಾದ ಎಲೈ ಮರುತ್ತುಗಳೇ, ಈ ಹವಿಸ್ಸು ನಿಮ್ಮನ್ನುದ್ದೇಶಿಸಿ ಅರ್ಪಿತವಾಗಿದೆ ಶತ್ರುಗಳನ್ನು ನಾಶಮಾಡುವ ನೀವು ನಿಮ್ಮ ರಕ್ಷಣೆಗಳೊಡನೆ ಕೂಡಿ ಅದನ್ನು ಸೇವಿಸಿರಿ

English Translation

Maruts, destroyers of foes, this oblation is designed for you · do you, who are the devourers of enemies, (coming) with your protections, graciously accept it.

ಸಂಹಿತಾಪಾಠಃ

ಗೃಹಮೇಧಾಸ ಆ ಗತ ಮರುತೋ ಮಾಪ ಭೂತನ ।

ಯುಷ್ಮಾಕೋತೀ ಸುದಾನವಃ ॥ ೧೦ ॥

ಪದಪಾಠಃ

ಗೃಹऽಮೇಧಾಸಃ । ಆ । ಗತ । ಮರುತಃ । ಮಾ । ಅಪ । ಭೂತನ ।

ಯುಷ್ಮಾಕ । ಊತೀ । ಸುऽದಾನವಃ ॥ ೧೦ ॥

ಸಾಯಣಭಾಷ್ಯಂ

ಗೃಹಮೇಧಾಸ ಇತಿ ಗೃಹಮೇಧೀಯಸ್ಯ ಹವಿಷೋऽನುವಾಕ್ಯಾ । ಸೂತ್ರಿತಂ ಚ । ಗೃಹಮೇಧಾಸ ಆ ಗತ ಪ್ರ ಬುಧ್ನ್ಯಾ ವ ಈರತೇ ಮಹಾಂಸಿ । ಆ ೨-೧೮ । ಇತಿ ॥

ಗೃಹಮೇಧಾಸೋ ಗೃಹೇ ಕ್ರಿಯಮಾಣೋ ಯಜ್ಞೋ ಯೇಷಾಂ ತೇ ಸುದಾನವಃ ಶೋಭನದಾನಾ ಹೇ ಮರುತಃ ಯೂಯಂ ಯುಷ್ಮಾಕ ಯುಷ್ಮಾಕಮೂತ್ಯಾ ರಕ್ಷಯಾ ಯುಕ್ತಾ ಆ ಗತ । ಅಸ್ಮದೀಯಂ ಯಜ್ಞಂ ಪ್ರತ್ಯಾಗಚ್ಛತ । ಹೇ ಮರುತಃ ಮಾಪ ಭೂತನ । ಅಪಗತಾ ಮಾ ಭವತ ॥ ಭೂ ಪ್ರಾಪ್ತಾವಿತಿ ಧಾತುಃ ॥

ಪ್ರತಿಪದಾರ್ಥ

**ಗೃಹಮೇಧಾಸಃ**—ಗೃಹದಲ್ಲಿ ಪೂಜೆಗೆ ಯೋಗ್ಯರೂ । **ಸುದಾನವಃ**—ಉತ್ತಮವಾದ ದಾನಿಗಳೂ ಆದ । **ಮರುತಃ**—ಎಲೈ ಮರುತ್ತುಗಳೇ, । **ಯುಷ್ಮಾಕಂ**—ನಿಮ್ಮ । **ಊತೀ**—ರಕ್ಷಣೆಗಳೊಡನೆ । **ಆ ಗತ**—ಬನ್ನಿರಿ. । **ಮಾಪ ಭೂತನ**—ನಮ್ಮನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಡಿರಿ.

ಭಾವಾರ್ಥ

ಗೃಹದ ಪೂಜೆಗೆ ಉತ್ತಮವಾದ ಪಾತ್ರರೂ, ಉತ್ತಮವಾದ ದಾನಿಗಳೂ ಆದ ಎಲೈ ಮರುತ್ತುಗಳೇ, ನಿಮ್ಮ ರಕ್ಷಣೆಗಳೊಡನೆ ಬನ್ನಿರಿ ನಮ್ಮನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಡಿರಿ.

English Translation

Objects of domestic worship, munificent Maruts, come with your protections go not away.

ವಿಶೇಷವಿಷಯಗಳು

ಗೃಹಮೇಧೀಯೇಷ್ಟಿಯಲ್ಲಿ **ಗೃಹಮೇಧಾಸಃ** ಎಂಬ ಈ ಋಕ್ಕನ್ನು ಹವಿಸ್ಸನ್ನು ಹೋಮಮಾಡುವಾಗ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಗೃಹಮೇಧಾಸ ಆಗತ ಪ್ರ ಬುಧ್ನ್ಯಾ ವ ಈರತೇ ಮಹಾಂಸಿ** ಎಂಬ ಸೂತ್ರದಿಂದ (ಆ. ೨-೧೮). ವಿವೃತವಾಗಿರುವುದು.

ಸಂಹಿತಾಪಾಠಃ

ಇಹೇಹ ವಃ ಸ್ವತವಸಃ ಕವಯಃ ಸೂರ್ಯತ್ವಚಃ ।
ಯಜ್ಞಂ ಮರುತ ಆ ವೃಣೇ ॥ ೧೧ ॥

ಪದಪಾಠಃ

ಇಹಽಇಹ । ವಃ । ಸ್ವಽತವಸಃ । ಕವಯಃ । ಸೂರ್ಯಽತ್ವಚಃ ।
ಯಜ್ಞಂ । ಮರುತಃ । ಆ । ವೃಣೇ ॥ ೧೧ ॥

ಸಾಯಣಭಾಷ್ಯಂ

ವೈಶ್ವದೇವೇ ಪರ್ವಣಿ ಮಾರುತಸ್ಯಾನುವಾಕ್ಯಾ ಇಹೇಹ ವಃ ಇತ್ಯೇಷಾ । ಸೂತ್ರಿತಂ ಚ । ಇಹೇಹ ವಃ ಸ್ವತವಸಃ ಪ್ರ ಚಿತ್ರಮರ್ಕಂ ಗೃಣತೇ ತುರಾಯ । ಆ ೨-೧೬ । ಇತಿ ॥

ಹೇ ಸ್ವತವಸಃ ಸ್ವಾಯತ್ತಬಲಾಃ ಸ್ವಯಂ ಪ್ರವೃದ್ಧಾ ವಾ ಹೇ ಕವಯಃ ಕ್ರಾಂತದರ್ಶಿನಃ ಸೂರ್ಯತ್ವಚಃ ಸೂರ್ಯವರ್ಣಾ ಏವಂಭೂತಾ ಹೇ ಮರುತಃ ಯೂಯಮಿಹೇಹೇತ್ಯೇವಾಸ್ಮದೀಯಂ ಯಜ್ಞಮಾ ವೃಣೇ । ಆಭಜಾಮಿ । ಕಲ್ಪಯಾಮಿ ॥

ಪ್ರತಿಪದಾರ್ಥ

**ಸ್ವತವಸಃ**—ಸ್ವಯಂ ಸಂಪಾದಿತವಾದ ಶಕ್ತಿಯುಳ್ಳವರೂ । **ಕವಯಃ**—ಮೇಧಾವಿಗಳೂ । **ಸೂರ್ಯತ್ವಚಃ**—ಸೂರ್ಯನಂತೆ ಪ್ರಭಾಯುತರೂ ಆದ । **ಮರುತಃ**—ಎಲೈ ಮರುತ್ತುಗಳೇ, । **ವಃ**—ನಿಮ್ಮನ್ನುದ್ದೇಶಿಸಿ ನೆರವೇರಿಸಿದ । **ಇಹೇಹ ಯಜ್ಞಂ**—ನಮ್ಮ ಈ ಯಜ್ಞಕ್ಕೆ ಮಾತ್ರ । **ಆ ವೃಣೇ**—ಪ್ರಾರ್ಥಿಸಿ ಕರೆಯುತ್ತೇನೆ

ಭಾವಾರ್ಥ

ಸ್ವಯಂ ಸಂಪಾದಿತವಾದ ಶಕ್ತಿಯುಳ್ಳವರೂ, ಮೇಧಾವಿಗಳೂ ಸೂರ್ಯನಂತೆ ಪ್ರಭಾಯುತರೂ ಆದ ಎಲೈ ಮರುತ್ತುಗಳೇ, ನಿಮ್ಮನ್ನುದ್ದೇಶಿಸಿ ನೆರವೇರಿಸಿದ ಈ ಯಜ್ಞಕ್ಕೆ ನಿಮ್ಮನ್ನು ಕರೆಯುತ್ತೇನೆ

English Translation

Maruts of independant strength, who are far-seeing, glorious as the sun, come hither, come hither, I invoke you to the sacrifice.

ವಿಶೇಷವಿಷಯಗಳು

ವೈಶ್ವದೇವಪರ್ವದಲ್ಲಿ **ಇಹೇಹ ವಃ** ಎಂಬ ಈ ಋಕ್ಕನ್ನು ಮರುದ್ದೇವತೆಗಳನ್ನುದ್ದೇಶಿಸಿ ಮಾಡುವ ಹೋಮದಲ್ಲಿ ಅನುವಾಕ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇಹೇಹ ವಃ ಸ್ವತವಸಃ ಪ್ರ ಚಿತ್ರಮರ್ಕಂ ಗೃಣತೇ ತುರಾಯ** ಎಂಬ ಸೂತ್ರದಿಂದ (ಆ ೨-೧೬) ವಿವೃತವಾಗಿರುವುದು

ಸಂಹಿತಾಪಾಠಃ

ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।

ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥ ೧೨ ॥

ಪದಪಾಠಃ

ತ್ರ್ಯಂಬಕಂ । ಯಜಾಮಹೇ । ಸುಗಂಧಿಂ । ಪುಷ್ಟಿವರ್ಧನಂ ।

ಉರ್ವಾರುಕಮಿವ । ಬಂಧನಾನ್ಮೃತ್ಯೋರ್ಮುಕ್ಷೀಯ । ಮಾಮೃತಾತ್ ॥ ೧೨ ॥

ಸಾಯಣಭಾಷ್ಯಂ

ಅತ್ರ ಶೌನಕಃ । ತ್ರಿರಾತ್ರಂ ನಿಯತೋಽಪೋಷ್ಯ ಶ್ರಪಯಿತ್ವಾಯಸಂ ಚರುಂ । ತೇನಾಹುತಿಶತಂ ಪೂರ್ಣಂ ಜುಹುಯಾಚ್ಛಂಸಿತವ್ರತಃ ॥ ಸಮುದ್ಧೃತ್ಯ ಮಹಾದೇವಂ ತ್ರ್ಯಂಬಕಂ ತ್ರ್ಯಂಬಕೇತ್ಯೃಚಾ । ಏತತ್ಪರ್ವಶತಂ ಕೃತ್ವಾ ಜೀವೇದ್ವರ್ಷಶತಂ ಸುಖೀ ॥ ಋಗ್ವಿ ೨ ೧೨ । (ತ್ರಯಾಣಾಂ ಬ್ರಹ್ಮವಿಷ್ಣುರುದ್ರಾಣಾಮಂಬಕಂ ಪಿತರಂ ಯಜಾಮಹ ಇತಿ ಶಿಷ್ಯಸಮಾಹಿತೋ ವಸಿಷ್ಠೋ ಬ್ರವೀತಿ । ಕಿಂವಿಶಿಷ್ಟಮಿತ್ಯತ ಆಹ । ಸುಗಂಧಿಂ ಪ್ರಸಾರಿತಪುಣ್ಯಕೀರ್ತಿಂ । ಪುನಃ ಕಿಂ ವಿಶಿಷ್ಟಂ । ಪುಷ್ಟಿವರ್ಧನಂ । ಜಗದ್ಬೀಜಂ ಉರುಶಕ್ತಿಮಿತ್ಯರ್ಥಃ । ಉಪಾಸಕಸ್ಯ ವರ್ಧನಂ । ಅಣಿಮಾದಿಶಕ್ತಿವರ್ಧನಂ । ಅತಸ್ತ್ವತ್ಪ್ರಸಾದಾದೇವ ಮೃತ್ಯೋರ್ಮರಣಾತ್ಸಂಸಾರಾದ್ವಾ ಮುಕ್ಷೀಯ । ಮೋಚಯ । ಯಥಾ ಬಂಧನಾದುರ್ವಾರುಕಂ ಕರ್ಕಟೀಫಲಂ ಮುಚ್ಯತೇ ತದ್ವನ್ಮರಣಾತ್ಸಂಸಾರಾದ್ವಾ ಮೋಚಯ । ಕಿಂ ಮರ್ಯಾದೀಕೃತ್ಯ । ಅಮೃತಾತ್ । ಸಾಯುಜ್ಯತಾಮೋಕ್ಷಪರ್ಯಂತಮಿತ್ಯರ್ಥಃ । ಅಥ ತೈತ್ತಿರೀಯಭಾಷ್ಯೇ । ತೈ. ಸಂ. ೧-೮-೬-೨ । ಶೋಭನಃ ಶರೀರಗಂಧಃ ಪುಣ್ಯಗಂಧೋ ವಾ ಯಸ್ಯಾಸೌ ಸುಗಂಧಿಃ । ಯಥಾವೃಕ್ಷಸ್ಯ ಸಂಪುಷ್ಪಿತಸ್ಯ ದೂರಾದ್ಗಂಧೋ ವಾತ್ಯೇವಂ ಪುಣ್ಯಸ್ಯ ಕರ್ಮಣೋ ದೂರಾದ್ಗಂಧೋ ವಾತೀತಿ ಶ್ರುತೇಃ । ಪುಷ್ಟಿಂ ಶರೀರಧನಾದಿವಿಷಯಾಂ ವರ್ಧಯತೀತಿ ಪುಷ್ಟಿವರ್ಧನಃ । ತಾದೃಶಂ ತ್ರ್ಯಂಬಕಂ ಯಜಾಮಹೇ । ಪೂಜಯಾಮಃ । ಲೋಕೇ ಯಥೋರ್ವಾರುಕಫಲಾನಿ ಬಂಧನಾದ್ವೃಂತಾತ್ಸ್ವಯಮೇವ ಮುಚ್ಯಂತೇ ತದ್ವದಹಂ ತ್ರ್ಯಂಬಕಪ್ರಸಾದೇನ ಮೃತ್ಯೋರ್ಮುಕ್ಷೀಯ । ಮೋಚನಯುಕ್ತೋ ಭೂಯಾಸಂ । ಅಮೃತಾಚ್ಚಿರಜೀವಿತಾತ್ಸ್ವರ್ಗಾದೇರ್ವಾ ಮಾ ಮುಕ್ಷೀಯ । ಚತುರ್ಥಪಾದಾರ್ಥೇ ಮಂತ್ರಸ್ಯ ತಾತ್ಪರ್ಯಾತಿಶಯಂ ದರ್ಶಯತಿ । ತ್ರ್ಯಂಬಕಂ ಯಜಾಮಹ ಇತ್ಯಾಹ ಮೃತ್ಯೋರ್ಮುಕ್ಷೀಯ ಮಾಮೃತಾದಿತಿ ವಾವೈತದಾಹೇತಿ ॥ )

ಪ್ರತಿಪದಾರ್ಥ

**ಸುಗಂಧಿಂ**—ಪುಣ್ಯಕರ್ಮರೂಪವಾದ ಸುಗಂಧವುಳ್ಳವನೂ । **ಪುಷ್ಟಿವರ್ಧನಂ**—ಜಗತ್ಪುಷ್ಟಿಯನ್ನು ಅಧಿಕಗೊಳಿಸುವವನೂ ಆದ । **ತ್ರ್ಯಂಬಕಂ**—ತ್ರಿಮೂರ್ತಿಗಳಿಗೂ ಪಿತೃವಾದ ಪರತತ್ತ್ವವನ್ನು । ( ಜಗದೀಶ್ವರನನ್ನು ) **ಯಜಾಮಹೇ**—ಪೂಜಿಸುತ್ತೇವೆ. । **ಬಂಧನಾತ್**—ತನ್ನ ತೊಟ್ಟಿನಿಂದ । **ಉರ್ವಾರುಕಮಿವ**—ಉರ್ವಾರುಕಫಲವು ಕಳಚಿ ಬಿದ್ದುಹೋಗುವಂತೆ । **ಮೃತ್ಯೋಃ**—ಮರಣಧರ್ಮವುಳ್ಳ ಸಂಸಾರದಿಂದ । **ಮುಕ್ಷೀಯ**—ನಾವು ಬಿಡುಗಡೆಯನ್ನು ಹೊಂದುವಂತೆ ಅವನು ಅನುಗ್ರಹಿಸಲಿ. । **ಮಾ ಅಮೃತಾತ್**—ಮುಕ್ತಿಯಿಂದ ನಾವು ದೂರವಾಗಿರುವಂತೆ ಆಗದಿರಲಿ.

### ಭಾವಾರ್ಥ

ಪುಣ್ಯಕರ್ಮರೂಪವಾದ ಸುಗಂಧವುಳ್ಳವನೂ, ಜಗತ್ಸೃಷ್ಟಿಯನ್ನು ಅಧಿಕಗೊಳಿಸುವವನೂ, ತ್ರಿಮೂರ್ತಿಗಳಿಗೂ ಪಿತೃವೂ ಆದ ಪರಮೇಶ್ವರನನ್ನು ನಾವು ಪೂಜಿಸುತ್ತೇವೆ ತನ್ನ ತೊಟ್ಟಿನಿಂದ ಉರ್ವಾರುಕಫಲವು ಕಳಚಿ ಬಿದ್ದುಹೋಗುವಂತೆ, ಮರಣಧರ್ಮವುಳ್ಳ ಸಂಸಾರದಿಂದ ನಾವು ಬಿಡುಗಡೆಯನ್ನು ಹೊಂದುವಂತಾಗಲಿ ಆದರೆ ಮುಕ್ತಿಯಿಂದ ನಾವು ದೂರವಿರದಂತೆ ಆಗಲಿ.

## English Translation

We worship Tryambaka, whose fame is fragrant, the augmenter of increase may I be liberated from death, and, like the Urvaruka from its stalk, but not to immortality [let us worship Tryambaka, whose fame is fragrant, the augmrnter of increase may I be liberated from death like the Urvaruka from its stalk, but not into immortality ]

### ವಿಶೇಷವಿಷಯಗಳು

ಈ ಋಕ್ಕಿನ ವಿಷಯದಲ್ಲಿ ಶೌನಕಮಹರ್ಷಿಯು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ ಈರೀತಿ ಹೇಳಿರುವರು—

**ತ್ರಿರಾತ್ರಂ ನಿಯತೋಽಪೋಷ್ಯ ಶ್ರಪಯೇತ್ಪಾಯಸಂ ಚರುಂ ।**
**ತೇನಾಹುತಿಶತಂ ಪೂರ್ಣಂ ಜುಹುಯಾಚ್ಛಂಸಿತವ್ರತಃ ॥**
**ಸಮುದ್ದಿಶ್ಯ ಮಹಾದೇವಂ ತ್ರ್ಯಂಬಕಂ ತ್ರ್ಯಂಬಕೇತ್ಯೃಚಾ ।**
**ಏತತ್ಪರ್ವಶತಂ ಕೃತ್ವಾ ಜೀವೇದ್ವರ್ಷಶತಂ ಸುಖೀ ॥**

(ಋಗ್ವಿಧಾನ ೨-೩೧೪, ೩೧೫)

ಮೂರು ರಾತ್ರಿಗಳು ಎಂದರೆ ಮೂರು ದಿನಗಳು ಪೂರ್ತಾ ಉಪವಾಸಮಾಡಿ ಮಾರನೆಯ ದಿವಸ ಪಾಯಸವನ್ನೂ ಚರು (ಅನ್ನ)ವನ್ನೂ ಪಕ್ವಮಾಡಿ ಆ ದ್ರವ್ಯಗಳಿಂದ ನೂರು ಹೋಮಗಳನ್ನು ವಿಧಿವತ್ತಾಗಿ ಮಾಡಬೇಕು. ಮಹಾದೇವನಾದ ತ್ರ್ಯಂಬಕದೇವತೆಯನ್ನು **ತ್ರ್ಯಂಬಕಂ ಯಜಾಮಹೇ** ಎಂಬ ಈ ಋಕ್ಕಿನಿಂದ ಮೇಲೆ ಹೇಳಿದಂತೆ ನೂರು ಪರ್ವಕಾಲಗಳಲ್ಲಿ ಹೋಮವನ್ನುಮಾಡಿದಲ್ಲಿ ಆ ಪುರುಷನು ನೂರು ವರ್ಷಗಳವರೆಗೆ ಸುಖವಾಗಿ ಜೀವಿಸಿರುವನು ಎಂದುಹೇಳಿದಾರೆ.

**ತ್ರ್ಯಂಬಕಂ—ತ್ರಯಾಣಾಂ ಬ್ರಹ್ಮವಿಷ್ಣುರುದ್ರಾಣಾಮಂಬಕಂ ಪಿತರಂ ।** ತ್ರ್ಯಂಬಕನೆಂದರೆ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಿಗೂ ತಂದೆ ಅಥವಾ ಪಾಲಕನಾದ ಸರ್ವೇಶ್ವರನೆಂದರ್ಥವು.

**ಸುಗಂಧಿಂ—ಪ್ರಸಾರಿತಪುಣ್ಯಕೀರ್ತಿಂ ।** ಈ ದೇವನ ಕೀರ್ತಿಯು ಸರ್ವತ್ರ ಹರಡಿರುವುದು.

**ಪುಷ್ಟಿವರ್ಧನಂ—** ಜಗತ್ತಿಗೆ ಬೀಜಸ್ವರೂಪನು ಮತ್ತು ಈ ದೇವನ ಶಕ್ತಿಯು ಅಪರಿಮಿತವಾದುದು ಅಥವಾ ತನ್ನನ್ನು ಉಪಾಸನೆಮಾಡುವವನನ್ನು ಧನಧಾನ್ಯಾದಿಗಳಿಂದ ಅಭಿವೃದ್ಧಿಯನ್ನೈದುವಂತೆ ಮಾಡುವವನು ಅಥವಾ ಅಣಿಮಾದಿಶಕ್ತಿಗಳ ವರ್ಧಕನು.

**ಉರ್ವಾರುಕಮಿವ ಬಂಧನಾತ್—** ಉರ್ವಾರುಕಫಲವು ಹಣ್ಣಾದಾಗ ಯಾವರೀತಿ ತೊಟ್ಟಿನಿಂದ ಬೇಗನೆ ಬಿಡಲ್ಪಡುವುದೋ ಎಂದರೆ ಕಳಚಿಬೀಳುವುದೋ ಅದರಂತೆ ಸಂಸಾರಬಂಧನದಿಂದ ನನ್ನನ್ನು ಮುಕ್ತನನ್ನಾಗಿ ಮಾಡು

ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿಯೂ (ತೈ ಸಂ. ೧ ೮-೬-೨) ಈ ಮಂತ್ರವು ಪಠಿತವಾಗಿರುವುದರಿಂದ ಅಲ್ಲಿ ಈ ಮಂತ್ರದ ಅರ್ಥವಿವರಣೆಯು ಈರೀತಿ ಇರುವುದು—

**ಸುಗಂಧಿಂ—ಶೋಭನಃ ಶರೀರಗಂಧಃ ಪುಣ್ಯಗಂಧೋ ವಾ ಯಸ್ಯಾಸೌ ಸುಗಂಧಿಃ । ಯಥಾ ವೃಕ್ಷಸ್ಯ ಸಂಪುಷ್ಪಿತಸ್ಯ ದೂರಾದ್ಗಂಧೋ ವಾತ್ಯೇವಂ ಪುಣ್ಯಸ್ಯ ಕರ್ಮಣೋ ದೂರಾದ್ಗಂಧೋ ವಾತಿ (ತೈ. ಆ. ೧೦-೯) ಇತಿ ಶ್ರುತೇಃ ॥** ಉತ್ತಮವಾದ ಶರೀರಗಂಧ ಎಂದರೆ ವಾಸನೆಯುಳ್ಳವನು ಘಮಘಮಿಸುತ್ತಿರುವ ಸುವಾಸನೆಯಿಂದ ಕೂಡಿದವನು ಅಥವಾ ಚೆನ್ನಾಗಿ ಹೂವುಗಳನ್ನು ಬಿಟ್ಟಿರುವ ವೃಕ್ಷವು ತನ್ನ ಹೂವುಗಳ ಗಂಧವನ್ನು ಎಂದರೆ ವಾಸನೆಯನ್ನು ವಾಯುವಿನಮೂಲಕ ಬಹುದೂರ ಬೀರುವಂತೆ ಉತ್ತಮಕೆಲಸಗಳನ್ನು ಮಾಡಿದ ಪುರುಷನ ಕೀರ್ತಿಯು ಬಹುದೂರ ವ್ಯಾಪಿಸುವುದು. ಆದ್ದರಿಂದ ಜಗನ್ನಿಯಾಮಕನೂ, ಸೃಷ್ಟಿಕರ್ತನೂ ಆದ ಸರ್ವೇಶ್ವರನ ಕೀರ್ತಿಯು ಅಥವಾ ಶಕ್ತಿಸಾಮರ್ಥ್ಯಗಳು ಎಲ್ಲೆಲ್ಲಿಯೂ ಹರಡಿ ಪ್ರಸಿದ್ಧವಾಗಿವೆ ಎಂದಭಿಪ್ರಾಯವು.

**ಪುಷ್ಟಿವರ್ಧನಂ—ಪುಷ್ಟಿಂ ಶರೀರಧನಾದಿವಿಷಯಾಂ ವರ್ಧಯತೀತಿ ಪುಷ್ಟಿವರ್ಧನಃ । ಈದೃಶಂ ತ್ರ್ಯಂಬಕಂ ಯಜಾಮಹೇ ಪೂಜಯಾಮಃ ।** ಶರೀರಕ್ಕೆ ಬೇಕಾದ ಆಹಾರಾದಿಪುಷ್ಟಿಯನ್ನೂ ಧನಸಂಪತ್ತನ್ನೂ ವೃದ್ಧಿಪಡಿಸುವವನಾದ್ದರಿಂದ ಈ ದೇವನಿಗೆ ಪುಷ್ಟಿವರ್ಧನನೆಂದು ವಿಶೇಷಣವಿದೆ ಇಂತಹ ಗುಣವಿಶಿಷ್ಟವಾದ ತ್ರ್ಯಂಬಕನಾಮಕ ಸರ್ವೇಶ್ವರನನ್ನು ಪೂಜಿಸೋಣ

**ಲೋಕೇ ಯಥೋರ್ವಾರುಕಫಲಾನಿ ಬಂಧನಾದ್ವೃಂತಾತ್ ಸ್ವಯಮೇವ ಮುಚ್ಯಂತೇ ತದ್ವದಹಂ ತ್ರ್ಯಂಬಕಪ್ರಸಾದೇನ ಮೃತ್ಯೋರ್ಮುಕ್ಷೀಯ ಮೋಚನಯುಕ್ತೋ ಭೂಯಾಸಂ । ಅಮೃತಾಚ್ಚಿರಜೀವಿತಾತ್ ಸ್ವರ್ಗಾದೇರ್ಮಾ ಮುಕ್ಷೀಯ ।** ಲೋಕವ್ಯವಹಾರದಲ್ಲಿ ನಾವು—ಉರ್ವಾರುಕಫಲವು ಹಣ್ಣಾದೊಡನೆಯೇ ತಾನಾಗಿ ತೊಟ್ಟಿನಿಂದ ಕಳಚಿ ಬಿದ್ದುಹೋಗುವುದನ್ನು ನೋಡುತ್ತಿರುವೆವು ಅದರಂತೆ ನಮ್ಮ ಸಂಸಾರಬಂಧವು ಬಿಡುಗಡೆಯಾಗಿ ಮೃತ್ಯುವಿನಿಂದ ಪಾರಾಗಿ ಬಹುಕಾಲ ಸ್ವರ್ಗಾದಿಗಳಲ್ಲಿ ಇರುವಂತಾಗಲಿ ಮತ್ತು ಅಲ್ಲಿಂದ ನಾವು ಬಿಟ್ಟು ಹೋಗದಂತಾಗಲಿ ಎಂದು ಹೇಳಿ, ಇದನ್ನು ಸಮರ್ಥಿಸುವ—**ತ್ರ್ಯಂಬಕಂ ಯಜಾಮಹ ಇತ್ಯಾಹ । ಮೃತ್ಯೋರ್ಮುಕ್ಷೀಯ ಮಾಮೃತಾದಿತಿ ವಾವೈತದಾಹ ।** (ತೈ ಬ್ರಾ (೧-೬-೧೦ ೫) ಎಂಬ ಬ್ರಾಹ್ಮಣವಾಕ್ಯಗಳನ್ನು ಉದಾಹರಿಸಿರುವರು.

**ವೇದಾರ್ಥಸ್ಯ ಪ್ರಕಾಶೇನ ತಮೋಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲ ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪಂಚಮಾಷ್ಟಕೇ ಚತುರ್ಥೋಽಧ್ಯಾಯಃ**

॥ ಓಂ ತತ್ಸತ್ ॥

ಇಲ್ಲಿಗೆ ಸಾಯಣಭಾಷ್ಯಸಹಿತವೂ ಕರ್ಣಾಟಕಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯ ಐದನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.



॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥
ವ್ಯಾಖ್ಯಾಯ ನಿಗಮಾಭಿಜ್ಞಃ ಪಂಚಮಸ್ಯ ಚತುರ್ಥಕಂ ।
ಅಧ್ಯಾಯಂ ಸಾಯಣಾಚಾರ್ಯಃ ಪಂಚಮಂ ವ್ಯಾಕರೋತ್ಯಥ ॥

## ಸಾಯಣಭಾಷ್ಯ ಸಹಿತಾ

# ಋಗ್ವೇದ ಸಂಹಿತಾ

**(ಕರ್ಣಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)**

## ॥ ಪಂಚಮಾಷ್ಟಕೇ ಪಂಚಮೋಽಧ್ಯಾಯಃ ॥

### ಐದನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು

### ॥ ಸಪ್ತಮ ಮಂಡಲಂ ॥

## ಏಳನೆಯ ಮಂಡಲದ ಸೂಕ್ತಗಳು

### ಅರವತ್ತನೆಯ ಸೂಕ್ತವು

**ಪೀಠಿಕೆ**

## ಸೂರ್ಯದೇವತೆಯ ವಿಷಯ

ಈ ಸೂಕ್ತದಲ್ಲಿಯೂ ಇದರ ಮುಂದಿನ ಆರು ಸೂಕ್ತಗಳಲ್ಲಿಯೂ ಪ್ರಾರಂಭದಲ್ಲಿ ಸೂರ್ಯನ ಸ್ತುತಿಯೂ ಅನಂತರ ಮಿತ್ರಾವರುಣರ ಸ್ತುತಿಯೂ ಇರುವುದು ಆದ್ದರಿಂದ ಸೂರ್ಯನ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಿ ಅನಂತರ ಮಿತ್ರಾವರುಣರ ವಿಷಯವನ್ನು ವಿಮರ್ಶೆ ಮಾಡುವೆವು

ಋಗ್ವೇದದಲ್ಲಿಯೂ ಯಜುರ್ವೇದದಲ್ಲಿಯೂ ಅನೇಕಕಡೆ ಹಗಲಿಗೆ ಮಿತ್ರನು ಅಧಿಪತಿಯೆಂದೂ, ರಾತ್ರಿಗೆ ವರುಣನು ಅಧಿಪತಿಯೆಂದೂ ಹೇಳಿದೆ. **ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ** ॥ ಇತ್ಯಾದಿ ಅನೇಕ ಶ್ರುತಿ ವಾಕ್ಯೋದಾಹರಣೆಗಳನ್ನು ಕೊಡಬಹುದು. ಆದರೆ ಸೂರ್ಯನಿಗೂ ಮಿತ್ರಾವರುಣರಿಗೂ ಏನು ಸಂಬಂಧ ಎಂದರೆ

ನಮ್ಮ ಕಣ್ಣುಗಳಿಗೆ ಕಾಣಿಸುತ್ತಿರುವ ಈ ಸೂರ್ಯನು ಮಿತ್ರನ ಮತ್ತು ವರುಣನ ಕಣ್ಣುಗಳಂತಿರುವವನು ಎಂದು ಹೇಳಿದೆ.—**ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ** (ಋ. ಸಂ. ೧-೧೧೫ ೧) **ಚಕ್ಷುರ್ಮಿತ್ರಸ್ಯ ವರುಣಸ್ಯ** (ಋ ಸಂ ೭-೬೩ ೧) **ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ** (ಋ ಸಂ ೧೦-೩೭-೧) ಇತ್ಯಾದ್ಯನೇಕ ಋಕ್ಕುಗಳಲ್ಲಿ ಸೂರ್ಯನು ಮಿತ್ರ ಮತ್ತು ವರುಣರ ಚಕ್ಷುಸ್ಸೆಂದು ಪ್ರಸಿದ್ಧನಾಗಿದ್ದಾನೆ.

ಸೂರ್ಯನು ದ್ಯುಲೋಕದ ಪುತ್ರನು (**ದಿವಸ್ಪುತ್ರಾಯ ಸೂರ್ಯಾಯ ಶಂಸತ.** ೧೦-೩೭-೧) ಕೆಲವೆಡೆ ಸೂರ್ಯನು ಅದಿತಿಯ ಪುತ್ರನೆಂದೂ ಪರಿಗಣಿತನಾಗಿದಾನೆ. (**ಸೂರ್ಯಮಾದಿತೇಯಂ** ೧೦-೮೮-೧) ಸೂರ್ಯನು ರಥದ ಮೇಲೆ ಕುಳಿತಿರುತ್ತಾನೆ ಅವನ ರಥವನ್ನು ಒಂದು ಅಥವಾ ಅನೇಕ ಕುದುರೆಗಳು ಎಳೆಯುತ್ತವೆ. ಸಾಧಾರಣ ವಾಗಿ ಏಳು ಕುದುರೆಗಳು ಅವನ ರಥವನ್ನು ವಹಿಸುತ್ತವೆ. (**ಸಪ್ತಾಶ್ವಾ ಹರಿತಃ ಸೂರ್ಯಸ್ಯ** ೧ ೧೧೫ ೩, ೪) ಸೂರ್ಯನು ಜಗತ್ತಿಗೆಲ್ಲಾ ಆತ್ಮನು ಎಂದರೆ ಪ್ರಾಣಿಗಳ ಶರೀರದಲ್ಲಿ ಅಂತರಾತ್ಮನಾಗಿ ಅವರುಗಳ ಚಲನವಲನಗಳನ್ನು ನಿಯಮಿಸುತ್ತಾನೆ. ಜಡವಸ್ತುಗಳ ಚಲನವಲನಕ್ಕು ಸೂರ್ಯನೇ ಕಾರಣವು (**ಸೂರ್ಯ ಆತ್ಮಾ ಜಗತಸ್ತಸ್ಥು-ಷಶ್ಚ** ೧-೧೧೫-೧) ಸೂರ್ಯನ ಶಕ್ತಿಯಿಂದ ಪ್ರಚೋದಿತರಾಗಿ ಜನರು ತಮ್ಮ ತಮ್ಮ ಕೆಲಸಕಾರ್ಯಗಳನ್ನು ಮಾಡಲು ಸಮರ್ಥರಾಗುತ್ತಾರೆ (**ನೂನಂ ಜನಾಃ ಸೂರ್ಯೇಣ ಪ್ರಸೂತಾ ಅಯನ್ನರ್ಥಾಂಸಿ ಕೃಣವನ್ನಪಾಂಸಿ** ೭-೬೩-೪) ಅವನು ಬಹುದೂರದವರಿಗೂ ಎಲ್ಲವನ್ನು ನೋಡಬಲ್ಲನು, ಮನುಷ್ಯರು ಮಾಡುವ ಒಳ್ಳೆಯ ಮತ್ತು ಕೆಟ್ಟ ಕೆಲಸಗಳೆಲ್ಲವನ್ನೂ ನೋಡುತ್ತಾನೆ. (೧-೫೦-೨, ೭; ೭-೬೧-೧ ; ೭-೬೩-೧,೪ ಇತ್ಯಾದಿ)

ಯಾಸ್ಕರು ಸೂರ್ಯಶಬ್ದಾರ್ಥವನ್ನು ವಿವರಿಸುತ್ತಾ—

**ಸೂರ್ಯಃ ಸರ್ತೇರ್ವಾ, ಸುವತೇರ್ವಾ, ಸ್ವೀರ್ಯತೇರ್ವಾ ॥**

(ನಿ. ೧೨-೧೪)

ಎಂದು ಹೇಳಿದಾರೆ ಎಂದರೆ ಸೂರ್ಯಶಬ್ದವು ಸೃ—ಸಂಚರಿಸು ಎಂಬ ಧಾತುವಿನಿಂದಾಗಲಿ, ಷೂಙ್—ಉತ್ಪತ್ತಿ ಮಾಡು ಎಂಬ ಧಾತುವಿನಿಂದಾಗಲಿ, ಪ್ರೇರಿಸು ಎಂಬರ್ಥವುಳ್ಳ ಸು + ಈರಯತಿ ಎಂಬ ಧಾತುವಿನಿಂದಾಗಲಿ ನಿಷ್ಪನ್ನ ವಾಗಬಹುದು ಎಂದು ಹೇಳಿದಾರೆ ಸೂರ್ಯನು ಪ್ರಾತಃಕಾಲದಲ್ಲಿ ಪೂರ್ವದಿಕ್ಕಿನಲ್ಲಿ ಉದಯಿಸಿ ಅಂತರಿಕ್ಷದಲ್ಲಿ ಎಡ ಬಿಡದೆ ಸಂಚರಿಸುತ್ತಾ ಸಾಯಂಕಾಲದ ಹೊತ್ತಿಗೆ ಪಶ್ಚಿಮದಿಕ್ಕನ್ನು ಸೇರಿ ಅಸ್ತನಾಗುವನು. ಆದ್ದರಿಂದ ಸೂರ್ಯನ ಸಂಚಾರವು ಅವಿಚ್ಛಿನ್ನವಾಗಿರುವುದು ಮತ್ತು ಸೂರ್ಯನ ಶಕ್ತಿಯಿಂದಲೇ ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿಗಳೂ, ಸಸ್ಯಾದಿಗಳೂ ಉತ್ಪತ್ತಿಯಾಗುವವು. ಸೂರ್ಯನ ಕಿರಣಗಳಿಂದ ತಪ್ತವಾದ ವಾಯುವು ತನ್ನ ಚಲನವಲನಗಳಿಂದ ಪ್ರಪಂಚದಲ್ಲಿ ನಾನಾವಿಧ ವ್ಯತ್ಯಾಸಗಳಿಗೆ ಕಾರಣವಾಗಿರುವುದು. ಸೂರ್ಯನ ಕಿರಣಗಳ ಶಾಖದಿಂದಲೇ ಸಮುದ್ರಾದಿ ಜಲಾಶಯಗಳ ನೀರು ಆವಿಯಾಗಿ ಅಂತರಿಕ್ಷದಲ್ಲಿ ಮೇಘರೂಪದಿಂದ ವೃಷ್ಟಿಯನ್ನು ಸುರಿಸಿ ಸಸ್ಯಾದಿಗಳ ಉತ್ಪತ್ತಿಗೆ ಕಾರಣವಾಗಿರುವುದು. ಸಸ್ಯಾದಿಗಳಿಂದ ಪ್ರಾಣಿಗಳೂ ಮನುಷ್ಯರೂ ಉತ್ಪನ್ನರಾಗುವರು. (**ಅದ್ಭ್ಯ ಓಷಧಯಃ। ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ ॥** ತೈ ಉ ೨-೧-೧) ಜಡವಸ್ತುಗಳ ಚಲನವಲನಗಳೂ ಕೂಡ ಸೂರ್ಯನ ಶಾಖದಿಂದಲೇ ಉಂಟಾಗುವವು. ಹೇಗೆಂದರೆ—**ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ** ಎಂಬಲ್ಲಿ ಹೇಳಿರು ವಂತೆ, ಕಾಂತಿಸಮೂಹವಾಗಿರುವ ಸೂರ್ಯನು ಮಂಡಲಮಧ್ಯದಲ್ಲಿ ಇರುವವನಾದರೂ ಎಲ್ಲವನ್ನೂ ತನ್ನ ಶಾಖದಿಂದ ವ್ಯಾಪಿಸಿರುವ ಕಾರಣ ಎಲ್ಲಕ್ಕೂ ಅಂತರ್ಯಾಮಿಯಾಗಿ ಆಯಾಯ ಕಾಲಕ್ಕನುಗುಣವಾಗಿ ಮಾಡುವಂತೆ ಪ್ರೇರಿಸುವ ವನಾಗಿರುವನು. ಆದ್ದರಿಂದ ಚಲಿಸುವ (ಪ್ರಾಣಿಗಳೇ ಮೊದಲಾದ) ಸ್ಥಿರವಾದ (ಜಡವಸ್ತುಗಳ) ವಸ್ತುಗಳ ಕಾರ್ಯ

ವರ್ಗದ ಉತ್ಪತ್ತಿಗೆ ಕಾರಣನಾಗಿರುವನು. ಸೂರ್ಯನು ಉದಯವನ್ನು ಹೊಂದಿದಕೂಡಲೇ ಮೃತರಂತೆ ನಿಶ್ಚೇಷ್ಟಿತರಾಗಿ ಯಾವ ಕಾರ್ಯವನ್ನೂ ಮಾಡಲು ಜ್ಞಾನವೂ ಶಕ್ತಿಯೂ ಇಲ್ಲದಿರುವ ಪ್ರಾಣಿಗಳನ್ನು ಉತ್ತೇಜನಗೊಳಿಸಿ ಅವರು ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವೃತ್ತರಾಗುವಂತೆ ಮಾಡುವ ಸಾಮರ್ಥ್ಯವು ಸೂರ್ಯನೊಬ್ಬನಿಗೆಮಾತ್ರ ಇರುವುದು.

**ಯೋಽಸೌ ತಪನ್ನುದೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ । .. .....**
**ಅಸೌ ಯೋಽಸ್ತಮೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯಾಸ್ತಮೇತಿ । ....**
**ಅಸೌ ಯ ಆಪೂರ್ಯತಿ । ಸ ಸರ್ವೇಷಾಂ ಭೂತಾನಾಂ ಪ್ರಾಣೈರಾಪೂರ್ಯತಿ ।**
(ತೈ ಆ ೧ ೧೪-೧)

ಎಂಬ ಶ್ರುತಿವಾಕ್ಯಗಳಲ್ಲಿ ಹೇಳಿರುವಂತೆ-ಸೂರ್ಯನು ಅಸ್ತಂಗತನಾಗುವಾಗ ಸಮಸ್ತ ಜೀವರಾಶಿಗಳ ಪ್ರಾಣಗಳನ್ನು ಎಂದರೆ ಚಲನವಲನಾದಿಶಕ್ತಿಯನ್ನೂ ಜ್ಞಾನಶಕ್ತಿಯನ್ನೂ ತನ್ನ ಜೊತೆಯಲ್ಲಿಯೇ ತೆಗೆದುಕೊಂಡು ಹೋಗುವನು ಆದ್ದರಿಂದ ರಾತ್ರಿಕಾಲದಲ್ಲಿ ಪ್ರಾಣಿಗಳು ಯಾವ ಕಾರ್ಯವನ್ನು ಮಾಡಲು ಸಮರ್ಥರಾಗದೆ ನಿದ್ರಾವಶರಾಗುವರು. ಪುನಃ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುವಾಗ ಆ ಸಮಸ್ತ ಪ್ರಾಣಿಗಳ ಪ್ರಾಣಗಳನ್ನು ಎಂದರೆ ಕಾರ್ಯಗಳನ್ನು ಮಾಡುವ ಶಕ್ತಿಗಳನ್ನೂ ಜ್ಞಾನಶಕ್ತಿಯನ್ನೂ ತನ್ನ ಜತೆಯಲ್ಲಿಯೇ ತೆಗೆದುಕೊಂಡುಬಂದು ಉದಯಿಸುವನು. ಆಗ ಆ ಪ್ರಾಣಿಗಳನ್ನು ತನ್ನ ಉತ್ಸಾಹರೂಪವಾದ ಶಕ್ತಿಯಿಂದ ತುಂಬುವನು ಎಂದು ಹೇಳಿದೆ ಸೂರ್ಯನು ಲೋಕವೆಲ್ಲಕ್ಕೂ ಜ್ಞಾನವನ್ನೂ ಕ್ರಿಯಾಶಕ್ತಿಯನ್ನೂ ಕೊಟ್ಟು ತನ್ನ ಉದಯಾಸ್ತಗಳಿಂದ ಚೇತನಾಚೇತನವುಳ್ಳದ್ದನ್ನಾಗಿ ಮಾಡುವುದರಿಂದ ಸೂರ್ಯನು ಸ್ಥಾವರಜಂಗಮವಾದ ಸಮಸ್ತ ವಸ್ತುಜಾತಗಳಿಗೂ ಆತ್ಮನೂ ಜೀವಾತ್ಮನೂ ಆಗಿರುವನೆಂದು ಸೂರ್ಯನ ಮಹತ್ತ್ವವನ್ನು ಇಲ್ಲಿ ವರ್ಣಿಸಿದೆ.

ಇದಲ್ಲದೆ ಈಗಿನ ವಿಜ್ಞಾನಶಾಸ್ತ್ರಪ್ರಕಾರವಾಗಿಯೂ (Sceintific view) ಸೂರ್ಯನೇ ಈ ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳ ಚಲನವಲನಗಳಿಗೂ ಕಾರಣನು. ಸೂರ್ಯನಿಂದಲೇ ನಾವು ಎಲ್ಲಾ ವಿಧವಾದ ಶಕ್ತಿಯನ್ನೂ (energy) ಪಡೆಯುತ್ತೇವೆ ಪ್ರಾಣಿವರ್ಗದಲ್ಲಿ ನಡೆಯುತ್ತಿರುವ ಚಲನವಲನಾದಿಗಳಿಗೂ, ಅಂತರಿಕ್ಷದಲ್ಲಿ ನಡೆಯುವ ವಾಯುವಿನ ಚಲನ, ಮೇಘಗಳ ಉತ್ಪತ್ತಿ, ವೃಷ್ಟಿವರ್ಷಣ ಮೊದಲಾದ ಕಾರ್ಯಗಳಿಗೂ, ಭೂಮಿಯಲ್ಲಿ ಎಡಬಿಡದೆ ನಡೆಯುತ್ತಿರುವ ಸಸ್ಯೋತ್ಪತ್ತಿ, ನದಿಗಳ ಪ್ರವಾಹರೂಪವಾದ ಚಲನ ಮೊದಲಾದ ಎಲ್ಲಾ ವಿಧವಾದ ಕಾರ್ಯಗಳಿಗೂ ಸೂರ್ಯನೇ ಅಥವಾ ಸೂರ್ಯನ ಕಿರಣಗಳೇ ಕಾರಣವು. ಸೂರ್ಯನ ಪ್ರಕಾಶವಿಲ್ಲದಿದ್ದರೆ ಈ ಪ್ರಪಂಚದಲ್ಲಿ ಗಾಢವಾದ ಅಂಧಕಾರವು ಆವರಿಸುವುದಲ್ಲದೆ ಒಂದು ಹುಲ್ಲುಕಡ್ಡಿಯ ಚಲನವೂ ಸಹ ನಡೆಯಲಾರದು ಆದುದರಿಂದ **ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ** ಎಂಬ ವಾಕ್ಯಕ್ಕೆ-The sun is the source of all the energies so for as this world (earth) is concerned ಎಂಬ ಅಭಿಪ್ರಾಯವನ್ನು ಹೇಳುವುದು ಯುಕ್ತವಾಗಿರುವುದು

ಪುರಾಣಾದಿಗಳಲ್ಲಿ ಸೂರ್ಯನನ್ನು ಆದಿತ್ಯ, ಪೂಷಾ, ಮಿತ್ರ, ಸವಿತೃ ಮೊದಲಾದ ಶಬ್ದಗಳಿಂದ ಕರೆಯಲಾಗಿದೆ. ಆದರೆ ವೇದಗಳಲ್ಲಿ ಅದರಲ್ಲಿಯೂ ಋಗ್ವೇದದಲ್ಲಿ ಸೂರ್ಯನ ವೈಶಿಷ್ಟ್ಯವೇ ಬೇರೆ, ಆದಿತ್ಯನ ವೈಶಿಷ್ಟ್ಯವೇ ಬೇರೆ. ಪೂಷಾ, ಮಿತ್ರ, ಸವಿತೃ ಇತ್ಯಾದಿ ದೇವತೆಗಳ ವೈಶಿಷ್ಟ್ಯವೇ ಬೇರೆಯಾಗಿರುವುದು ಸೂರ್ಯನ ಗುಣಗಳು ಮಿತ್ರ ಮೊದಲಾದ ದ್ವಾದಶಾದಿತ್ಯರಲ್ಲಿ ಕಂಡುಬರುವುದಾದರೂ, ಯಜ್ಞಯಾಗಾದಿಗಳಲ್ಲಿ ಸೂರ್ಯನನ್ನು ಸ್ತುತಿಸುವ ಕಡೆ ಆದಿತ್ಯನನ್ನು ಸ್ತುತಿಸಲಾಗುವುದಿಲ್ಲ ಇವರೆಲ್ಲರೂ ಬೇರೆ ಬೇರೆ ದೇವತೆಗಳೆಂದೇ ಪರಿಗಣನೆ ಅಷ್ಟೇ ಅಲ್ಲ. ವೇದ

ಗಳಲ್ಲಿ ಒಬ್ಬನೇ ದೇವತೆಯು ಅವನ ವೈಯಕ್ತಿಕವಾದ ಗುಣವಿಶಿಷ್ಟನಾಗಿರುವಾಗ ಆ ಗುಣಸಹಿತವಾದ ದೇವತೆಯೇ ಬೇರೆಯೊಂದು ಭಾವಿಸಲ್ಪಟ್ಟಿರುವುದು. ಹೇಗೆಂದರೆ- ಇಂದ್ರನು ಮರುತ್ವಾನಿಂದ್ರಃ ಮಹಾನಿಂದ್ರಃ ಎಂದು ಕರೆಯಲ್ಪಟ್ಟಾಗ ಇಂದ್ರನೇ ಬೇರೆ, ಮರುತ್ವಾನಿಂದ್ರ (ಮರುದ್ದೇವತೆಗಳೊಡನಿರುವ ಇಂದ್ರನು) ನೇ ಬೇರೆ, ಮಹಾನಿಂದ್ರ (ಮಹತ್ಸ್ವರೂಪವುಳ್ಳ ಇಂದ್ರನೇ) ಬೇರೆ ಎಂದು ಪರಿಗಣಿಸಿ ಆಯಾಸಂದರ್ಭಕ್ಕನುಸಾರವಾಗಿ ಅವರುಗಳನ್ನು ಆರಾಧಿಸಲಾಗಿರುವುದು. ಅದರಂತೆ ಅಗ್ನಿಃ ಅಗ್ನಿಃಪಾವಕಃ ಇತ್ಯಾದಿ ಪ್ರಭೇದಗಳೂ ಇತರ ದೇವತೆಗಳಲ್ಲಿಯೂ ಕಂಡುಬರುವುದು-

ಋಗ್ವೇದದಲ್ಲಿ ಸೂರ್ಯನನ್ನು ಸ್ತುತಿಸುವ ಋಕ್ಕುಗಳು ಈರೀತಿ ಇವೆ ಅವು ಯಾವವೆಂದರೆ—

| | | | | |
|---|---|---|---|---|
| ಋ. ಸಂ. | ೧—೫೦ | ನೇ ಸೂಕ್ತದಲ್ಲಿ | ೧ ರಿಂದ ೧೩ ವರೆಗಿನ | ೧೩ ಋಕ್ಕುಗಳು |
| ,, | ೧—೧೧೫ | ,, | ೧ ,, ೬ ,, | ೬ ,, |
| ,, | ೪— ೪೦ | ,, | ೫ ನೇ ಋಕ್ಕು | ೧ ,, |
| ,, | ೫— ೪೦ | ,, | ೫ ,, | ೧ ,, |
| ,, | ೭— ೬೦ | ,, | ೧ ,, | ೧ ,, |
| ,, | ೭— ೬೨ | ,, | ೧ ರಿಂದ ೩ ,, | ೩ ,, |
| ,, | ೭— ೬೩ | ,, | ೧ ರಿಂದ ೪ ೧/೨ ,, | ೪ ೧/೨ ,, |
| ,, | ೭— ೬೬ | ,, | ೧೪ ರಿಂದ ೧೬ ,, | ೩ ,, |
| ,, | ೮—೧೦೧ | ,, | ೧೧ ರಿಂದ ೧೨ ,, | ೨ ,, |
| ,, | ೧೦— ೩೭ | ,, | ೧ ರಿಂದ ೧೨ ,, | ೧೨ ,, |
| ,, | ೧೦—೧೫೮ | ,, | ೧ ರಿಂದ ೫ ,, | ೫ ,, |
| ,, | ೧೦—೧೭೦ | ,, | ೧ ರಿಂದ ೪ ,, | ೪ ,, |
| ,, | ೧೦—೧೮೯ | ,, | ೧ ರಿಂದ ೩ ,, | ೩ ,, |

ಈ ಋಕ್ಕುಗಳು ಮಾತ್ರ ಸೂರ್ಯನ ಪರವಾಗಿವೆ. ಸೂರ್ಯನ ಪರವಾದ ಋಕ್ಕುಗಳು ಋಗ್ವೇದದಲ್ಲಿ ಬೇರೆ ಯಾವುದೂ ಇಲ್ಲ

## ಋಗ್ವೇದದಲ್ಲಿ ಸೂರ್ಯನ ವಿಷಯವಾದ ಋಕ್ಕಗಳಲ್ಲಿರುವ ವಿವರಣೆಯು.

ಋಗ್ವೇದದಲ್ಲಿ ಸೂರ್ಯನನ್ನು ಸ್ತುತಿಸುವ ಸೂಕ್ತಗಳು ೫ ಪೂರ್ತಾ ಸೂಕ್ತಗಳೂ ಇತರ ಸೂಕ್ತಗಳಲ್ಲಿ ಕೆಲವು ಋಕ್ಕುಗಳೂ ಒಟ್ಟು ೬೦ ವರೆ ಋಕ್ಕುಗಳು ಇರುವವು. ಸೂರ್ಯನಂತೆ ಇಂದ್ರಿಯಗೋಚರವಾದ ದೇವತೆ ಬೇರೆ ಯಾವುದೂ ಇಲ್ಲ. ಆಕಾಶದಲ್ಲಿರುವ ಸೂರ್ಯನ ಬೆಳಕೇ ಅಗ್ನಿಯ ಮುಖ (ಋ. ಸಂ. ೧೦-೭-೩) ಸೂರ್ಯನ ನೇತ್ರವು ಅನೇಕಕಡೆ ಉಕ್ತವಾಗಿದೆ (೫-೪೦-೮ ಇತ್ಯಾದಿ) ಆದರೆ ಅವನೇ ಮಿತ್ರ ವರುಣ ಮತ್ತು ಅಗ್ನಿಯ ಚಕ್ಷುಸ್ಸು (೧-೧೧೫-೧) ಸೂರ್ಯನಿಗೂ ನೇತ್ರೇಂದ್ರಿಯಕ್ಕೂ ನಿಕಟಸಂಬಂಧವಿದೆ. ಮೃತನಾದ ಮನುಷ್ಯನ ನೇತ್ರೇಂದ್ರಿಯವು ಸೂರ್ಯನಲ್ಲಿ ಅಂತರ್ಗತವಾಗುತ್ತದೆ ಎಂದು ಹೇಳಿದೆ (೧೦-೧೬-೩, ೧೦-೯೦-೩, ೧೦-೧೫೮-೩, ೪) ಸೂರ್ಯನು ನೇತ್ರೇಂದ್ರಿಯಗಳಿಗೆಲ್ಲಾ ಒಡೆಯನು (ಅ. ವೇ. ೫-೨೪-೯). ಪ್ರಾಣಿಗಳೆಲ್ಲರಿಗೂ ಕಣ್ಣಾಗಿ ಆಕಾಶ, ಭೂಮಿ, ನೀರು

ಇವುಗಳಿಗೆಲ್ಲಾ ಆಚೆ ನೋಡುತ್ತಾನೆ (ಅ ವೇ. ೧೩-೧೪ ೫). ಅವನು ದೂರದರ್ಶಿ, ಎಂದರೆ ಬಹುದೂರ ನೋಡ ಬಲ್ಲನು (೭-೩೫-೮, ೧೦-೩೭-೧) ಸರ್ವದರ್ಶಿ (೧-೫೦-೨). ಎಲ್ಲ ಪ್ರಪಂಚದ ಗೂಢಚಾರಿ (೪ ೧೩-೩) ಸ್ಥಾವರ ಜಂಗಮಾತ್ಮಕವಾದ ಪ್ರಪಂಚವನ್ನೂ, ಮಾನವರು ಮಾಡುವ ಒಳ್ಳೆಯ ಮತ್ತು ಕೆಟ್ಟಕೆಲಸಗಳನ್ನೂ ನೋಡುತ್ತಾನೆ (೧-೫೦-೭, ೬-೫೧-೨, ೭ ೬೦ ೨, ೭-೬೧-೧, ೭-೬೩-೧, ೪) ಸೂರ್ಯನ ಉದಯದಿಂದ ಜಾಗೃತರಾಗಿ ಜನರು ತಮ್ಮ ಕೆಲಸಕಾರ್ಯಗಳಲ್ಲಿ ಪ್ರವೃತ್ತರಾಗುತ್ತಾರೆ (೭-೬೩-೪) ಅವನು ಮನುಷ್ಯರೆಲ್ಲರನ್ನೂ ಎಚ್ಚರಗೊಳಿಸುತ್ತಾ ಉದಯಿಸುತ್ತಾನೆ (೭-೬೩-೨,೩) ಚರಾಚರವಸ್ತುಗಳಿಗೆಲ್ಲಾ ಅವನೇ ಆತ್ಮ, ಅವನೇ ರಕ್ಷಕ (ಋ.ಸಂ ೧-೧೧೫-೧, ೭-೬೦-೨) ಅವನ ರಥಕ್ಕೆ ಒಂದೇ ಕುದುರೆ(೭-೬೩-೨) ಅಥವಾ ಏಳು ಕುದುರೆಗಳಿವೆ (೫-೪೫ ೯) ಅಥವಾ ಏಳುಹೆಣ್ಣು ಕುದುರೆಗಳಿವೆ. (ಹರಿತಃ) (೧-೫೦ ೮, ೯, ೭ ೬೦-೩) ಅಥವಾ ಏಳು ಶೀಘ್ರಗಾಮಿಗಳಾದ ಕುದುರೆಗಳಿವೆ (೪-೧೩ ೩)

ವರುಣನು ಸೂರ್ಯನಿಗೋಸ್ಕರ ಅವನು ಸಂಚರಿಸಬೇಕಾದ ಮಾರ್ಗವನ್ನು ಸಿದ್ಧಪಡಿಸುತ್ತಾನೆ (೧-೨೪ ೮; ೭ ೮೭-೧) ಅಥವಾ ಮಿತ್ರ, ವರುಣ ಮತ್ತು ಅರ್ಯಮರು ಮೂವರೂ ಸಿದ್ಧಪಡಿಸುತ್ತಾರೆ (೭-೬೦-೪) ಪೂಷಣನು ಅವನ ದೂತನು (೬-೫೮-೩) ಸೂರ್ಯನು ಉಷೋದೇವತೆಯ ಮಡಿಲಿನಿಂದ ಪ್ರಕಾಶಿಸುತ್ತಾ ಏರಿಹೋಗುತ್ತಾನೆ. (೭ ೬೩-೩) ಕೆಲವುಕಡೆ ಉಷೋದೇವತೆಯನ್ನು ಸೂರ್ಯನ ಪತ್ನಿಯೆಂದು ಹೇಳಿದೆ (೭-೭೫-೫)

ಸೂರ್ಯನು ಅದಿತಿಯ ಮಗನಾದುದರಿಂದ ಅವನಿಗೆ ಆದಿತ್ಯ ಅಥವಾ ಅದಿತೇಯ ಎಂಬ ಹೆಸರು ಬಂದಿದೆ (೧-೫೦-೧೨, ೧ ೧೯೧-೯, ೮ ೯೦-೧೧, ೧೦-೮೮-೧೧) ಆದರೆ ಇವನೂ ಆದಿತ್ಯರೂ ಭಿನ್ನರು (೮ ೩೫ ೧೩, ೧೫). ದ್ಯುದೇವತೆಯು ಅವನ ಜನಕನು (೧೦ ೩೭ ೧) ಅವನು ದೇವತೆಗಳಿಂದ ಜನಿಸಿದವನು ಸಾಗರದಲ್ಲಿ ಅಡಗಿದ್ದ ಅವನನ್ನು ದೇವತೆಗಳು ಮೇಲಕ್ಕೆ ಎತ್ತಿದರು (೧೦-೭೨ ೭) ಅಗ್ನಿಯ ರೂಪಾಂತರವಾಗಿ ದೇವತೆಗಳು ಅವನನ್ನು ಆಕಾಶ ದಲ್ಲಿ ಸ್ಥಾಪಿಸಿದರು (೧೦-೮೮-೧೧) ಅವನು ವಿರಾಟ್ಸ್ವರೂಪದ ಪುರುಷನ ನೇತ್ರದಿಂದ ಉದ್ಭವಿಸಿದನು (೧೦-೯೦ ೧೩)

ನಾನಾದೇವತೆಗಳು ಪ್ರತ್ಯೇಕಪ್ರತ್ಯೇಕವಾಗಿ ಸೂರ್ಯನ ಉತ್ಪತ್ತಿಗೆ ಕಾರಣರೆಂದು ಹೇಳಿದೆ ಇಂದ್ರನು ಅವನನ್ನು ಜನಿಸುವಂತೆ ಮಾಡಿ (೨-೧೨-೪) ಆಕಾಶದಲ್ಲಿ ಸ್ಥಾಪಿಸಿ ಅಲ್ಲಿ ಪ್ರಕಾಶಿಸುವಂತೆ ಮಾಡಿದನು (೩-೪೪-೨, ೮-೭೮-೭) ಇಂದ್ರಾವಿಷ್ಣುಗಳು ಅವನ ಜನಕರು (೮-೯೯-೪) ಬೆಳಕಿನಿಂದೊಡಗೂಡಿದ ಸೂರ್ಯನನ್ನು ಇಂದ್ರಾ ಸೋಮರು ಬೆಳೆಸಿದರು (೬-೭೨-೨) ಮಿತ್ರಾವರುಣರು ಅವನನ್ನು ಆಕಾಶದಲ್ಲಿ ಸ್ಥಾಪಿಸಿದರು (೭-೮೨-೩). ಸೂರ್ಯ ನಲ್ಲಿ ಪ್ರಕಾಶವು ಸೋಮನಿಂದ ಸ್ಥಾಪಿತವಾಯಿತು (೬-೪೪-೨೩; ೯-೯೭-೪೧). ಸೋಮನಿಂದಲೇ ಸೂರ್ಯನು ಜನಿಸಿದನು (೯-೯೬-೫; ೯ ೧೧೦-೫) ಸೋಮದೇವತೆಯೇ ಸೂರ್ಯನನ್ನು ಪ್ರಕಾಶಿಸುವಂತೆ ಮಾಡಿದನು (೯ ೬೩-೭) ಅಥವಾ ಆಕಾಶದಲ್ಲಿ ಇರುವಂತೆ ಮಾಡಿದನು (೯-೧೦೭-೭) ಸೂರ್ಯನ ಕಾಂತಿಯನ್ನು ಬಹಳಮೇಲೆ ಸ್ಥಾಪಿಸಿದ್ದೂ (೧೦-೩-೨) ಆಕಾಶಕ್ಕೆ ಏರುವಂತೆ ಮಾಡಿದುದೂ (೧೦-೧೫೬-೪) ಅಗ್ನಿಯೇ ಸೃಷ್ಟಿಕರ್ತನಾದ ಧಾತೃವೇ ಸೂರ್ಯ ಚಂದ್ರರಿಬ್ಬರನ್ನೂ ರೂಪುಗೊಳಿಸಿದನು (೧೦-೧೯೦-೩) ಅಂಗಿರಸರ ಯಜ್ಞಕರ್ಮಗಳಿಂದ ಸೂರ್ಯನು ಆಕಾಶವನ್ನು ಏರಲು ಸಾಧ್ಯವಾಯಿತು (೧೦-೬೨-೩). ಸೂರ್ಯನ ಜನ್ಮಸಂಬಂಧವಾದ ಈ ಋಕ್ಕುಗಳಲ್ಲೆಲ್ಲಾ ಕಾಂತಿಯುಕ್ತವಾದ ಸೂರ್ಯಮಂಡಲವೇ ಸೂಚಿತವಾದಂತಿದೆ.

ಅನೇಕ ವಾಕ್ಯಗಳಲ್ಲಿ ಸೂರ್ಯನು ಅಂತರಿಕ್ಷದಲ್ಲಿ ಹಾರಾಡುತ್ತಿರುವ ಒಂದು ಪಕ್ಷಿ (೧೦-೧೭೭-೧,೨) ಯೆಂದು ಭಾವಿಸಲ್ಪಟ್ಟಿದಾನೆ. ಅವನು ಪುಷ್ಟವಾದ ಒಂದು ಪಕ್ಷಿ (೫-೪೭-೩) ಸೂರ್ಯನು ಹಾರುತ್ತಾನೆ. (೧-೧೯೧-೯) ಅವನನ್ನು ಹಾರುತ್ತಿರುವ ಗಿಡುಗನಿಗೆ ಹೋಲಿಸಿದೆ (೭-೬೩-೫) ಒಂದುಕಡೆ ಗಿಡುಗನೆಂದೇ ಕರೆದಿದೆ. (೫-೪೫-೯)

ಇನ್ನೊಂದು ಕಡೆ ಅವನು ವೃಷಭ ಮತ್ತು ಪಕ್ಷಿಎಂತಲೂ (೫-೪೭-೩) ಬಣ್ಣಬಣ್ಣದ ಚುಕ್ಕೆಗಳುಳ್ಳ ವೃಷಭ ಎಂತಲೂ ಪಕ್ಷಿ ಎಂತಲೂ (೧೦ ೧೮೯ ೧, ೫ ೪೭-೩) ಕರೆಯಲ್ಪಟ್ಟಿದಾನೆ ಉಷೋದೇವಿಯು ತಂದ ಶ್ವೇತವರ್ಣದ ಮತ್ತು ಉಜ್ವಲವಾದ ಅಶ್ವವೆಂದೂ ಒಂದುಕಡೆ ಕರೆದಿದೆ (೭-೭೭-೩)ಸೂರ್ಯನ ಸಪ್ತಾಶ್ವಗಳೇ ಅವನ ರಶ್ಮಿಗಳು (೮-೬೧ ೧೬) ಏಕೆಂದರೆ ಈ ರಶ್ಮಿಗಳು ಅವನನ್ನು ಒಯ್ದು ತರುತ್ತವೆ

ಒಂದೊಂದುಸಲ ಸೂರ್ಯನನ್ನು ಜಡಪದಾರ್ಥಕ್ಕೆ ಹೋಲಿಸಿರುವುದು ಕಂಡುಬರುವುದು. ಅವನು ಆಕಾಶ ದಲ್ಲಿರುವ ಒಂದು ರತ್ನ (೭-೬೩ ೪; ೭-೫೧ ೧) ಆಕಾಶಮಧ್ಯದಲ್ಲಿ ಕೆತ್ತಿರುವ ನಾನಾವರ್ಣದ ಶಿಲೆ (೫-೪೭ ೩ ,ಶ ಬ್ರಾ ೬-೧ ೨-೩) ಅವನು ಒಂದು ಹೊಳೆಯುತ್ತಿರುವ ಆಯುಧ. ಅದನ್ನು ಮಿತ್ರಾವರುಣರು ಮಳೆ ಮೋಡಗಳಿಂದ ಮರೆ ಮಾಡುತ್ತಾರೆ (೫-೬೩-೪) ಅವನು ಮಿತ್ರಾವರುಣರ ಪವಿ ಎಂಬ ಆಯುಧ (೫-೬೨-೨) ಅವರಿಬ್ಬರಿಂದ ಆಕಾಶದಲ್ಲಿ ಸ್ಥಾಪಿತವಾದ ರಥ (೫-೬೩ ೭) ಸೂರ್ಯನೇ ಒಂದು ಚಕ್ರ (೧-೧೭೫-೫ ; ೪-೩೦-೪) ಸೂರ್ಯನ ರಥಚಕ್ರದ ವಿಷಯವು (೪-೨೮-೨ , ೫-೨೯ ೧೦) ಅನೇಕಕಡೆ ಉಕ್ತವಾಗಿದೆ

ಸೂರ್ಯನು ಪ್ರಕಾಶಿಸುವುದು ಪ್ರಪಂಚಕ್ಕೋಸ್ಕರ ( ೭-೬೩ ೧), ಮನುಷ್ಯರು ಮತ್ತು ದೇವತೆಗಳಿಗೋಸ್ಕರ (೧-೫೦-೫) ಅವನು ತನ್ನ ಕಾಂತಿಯಿಂದ ಕತ್ತಲನ್ನು ಒಡಿಸುತ್ತಾನೆ (೧೦-೩೭-೪) ಚರ್ಮದಂತೆ ತಮಸ್ಸನ್ನು ಸುರುಳಿ ಸುತ್ತುತ್ತಾನೆ (೭ ೬೩-೧) ಚರ್ಮವೊಂದನ್ನು ಎಸೆಯುವಂತೆ ಅವನ ಕಾಂತಿಯು ತಮಸ್ಸನ್ನು ನೀರಿನೊಳಕ್ಕೆ ಎಸೆಯುತ್ತದೆ (೪ ೧೩-೪) ಅವನು ಅಂಧಕಾರಕ್ಕೆ ಸಂಬಂಧಿಸಿದ ವ್ಯಕ್ತಿಗಳನ್ನು ಮಾಟಗಾತಿಯರನ್ನೂ ಜಯಿಸುತ್ತಾನೆ. (೧-೧೯೧ ೮, ೯ , ೭-೧೦೪ ೨೪) ಸೂರ್ಯನ ಪ್ರಚಂಡವಾದ ತಾಪದ ವಿಷಯವನ್ನು ಎರಡುಕಡೆ ಹೇಳಿದೆ (೭-೭೪-೧೯ ; ೯-೧೦೭-೨೦) ಋುಗ್ವೇದದಲ್ಲಿ ಸೂರ್ಯನು ಕ್ರೂರದೇವತೆಯಲ್ಲ. ಈ ಅಂಶವು ಅಥರ್ವವೇದ ಮತ್ತು ಬ್ರಾಹ್ಮಣಗಳಲ್ಲಿ ಸ್ಪಷ್ಟವಾಗಿ ಹೇಳಿದೆ.

ಸೂರ್ಯನು ಜೀವಿತದ ಅವಧಿಯನ್ನು ಹೆಚ್ಚಿಸುತ್ತಾನೆ (೮-೪೮-೭) ರೋಗರುಜಿನಗಳನ್ನೂ ಕೆಟ್ಟ ಕನಸುಗಳನ್ನೂ ನಿವಾರಿಸುತ್ತಾನೆ (೧೦ ೩೭-೪) ಸೂರ್ಯೋದಯದ ದರ್ಶನವೆಂದರೆ ಹೆಚ್ಚುಕಾಲ ಬದುಕುವುದು ಎಂದರ್ಥ. (೪-೨೫-೪ , ೬-೫೨ ೫) ಎಲ್ಲಾ ಪ್ರಾಣಿಗಳೂ ಸೂರ್ಯನನ್ನಾಶ್ರಯಿಸಿವೆ. (೧-೧೬೪-೧೪) ಮತ್ತು ಆಕಾಶವೂ ಅವನನ್ನೇ ಆಶ್ರಯಿಸಿದೆ (೧೦ ೮-೫-೧) ಅವನಿಗೆ ವಿಶ್ವಕರ್ಮನೆಂದು ಹೆಸರು. (೧೦-೧೭೦-೪) ಅವನ ಮಹತ್ತ್ವದಿಂದ ಅವನು ದೇವತೆಗಳ ಪುರೋಹಿತನಾಗಿದಾನೆ (೮-೯೦-೧೨) ಉದಯಕಾಲದಲ್ಲಿ ಮಿತ್ರಾವರುಣರು ಇತರ ದೇವತೆಗಳಿಗೆ ತಾವು ಪಾಪರಹಿತರೆಂದು ಹೇಳಬೇಕೆಂದು ಪುನುಷ್ಯರು ಸೂರ್ಯನನ್ನು ಪ್ರಾರ್ಥಿಸುತ್ತಾರೆ. (೭-೬೦-೧ ; ೭ ೬೨-೨) ಒಂದು ಸಲ ಇಂದ್ರನು ಸೂರ್ಯನನ್ನು ಪರಾಭವಗೊಳಿಸಿ ಅವನ ರಥಚಕ್ರವನ್ನು ಅಪಹರಿಸಿದನು. (೧-೧೭೫-೪, ೪-೩೦-೪) ಎಂದಿದೆ.

## ಮಿತ್ರಾವರುಣರ ವಿಮರ್ಶೆ

ಮಿತ್ರಾವರುಣರು ಪ್ರತ್ಯೇಕದೇವತೆಗಳೆಂದು ಭಾವಿಸಲ್ಪಟ್ಟಿದ್ದರೂ ಅವರಿಬ್ಬರನ್ನೂ ಸಂಸ್ತವಿಕವಾಗಿ (ಒಟ್ಟಿಗೆ) ಸ್ತುತಿಸಿರುವ ಮಂತ್ರಗಳೇ ಹೆಚ್ಚಾಗಿವೆ. ಇವರು ಸೂರ್ಯನ ಅನೇಕ ರೂಪಗಳಾದ ದ್ವಾದಶಾದಿತ್ಯರಲ್ಲಿ ಈ ಹೆಸರಿನ ಅಂಶದೇವತೆಗಳೆಂದು ಕೆಲವು ಕಡೆಯೂ ಮತ್ತೆ ಬೇರೆಕಡೆ ಈ ದೇವತೆಗಳು ಅಗ್ನಿಯ ಬೇರೆ ರೂಪಗಳೆಂದೂ ವರ್ಣಿತರಾಗಿದಾರೆ.

**ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ ।**
(ಋ ಸಂ ೫ ೩ ೧)

ಎಂಬ ಋಕ್ಕಿನಲ್ಲಿ ಅಗ್ನಿಯು ಉತ್ಪನ್ನನಾದಾಗ ಅವನಿಗೆ ವರುಣನೆಂದೂ, ಚೆನ್ನಾಗಿ ಹೊತ್ತಿಸಲ್ಪಟ್ಟು ಧಗಧಗನೆ ಉರಿಯುತ್ತಿರುವಾಗ ಅವನಿಗೆ ಮಿತ್ರನೆಂದೂ ಹೆಸರುಗಳಿವೆಯೆಂದು ಇಲ್ಲಿ ಹೇಳಿದೆ. ಇದಲ್ಲದೆ ತೈತ್ತಿರೀಯಬ್ರಾಹ್ಮಣದಲ್ಲಿ—

**ಮಿತ್ರೋಽಸಿ ವರುಣೋಽಸೀತ್ಯಾಹ । ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ । ಅಹೋರಾತ್ರಾಭ್ಯಾಮೇವೈನಮುಪಾವಹತಿ ।**
(ತೈ ಬ್ರಾ. ೧-೭ ೧೦ ೧)

ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಹೇಳಿದೆ ಆದ್ದರಿಂದ ಈ ದೇವತೆಗಳು ಕೆಲವುಕಡೆ ಸೂರ್ಯನ ಅಂಶದೇವತೆಗಳೆಂದೂ, ಕೆಲವುಕಡೆ ಅಗ್ನಿಯ ಬೇರೆಬೇರೆ ಹೆಸರುಗಳೆಂದೂ ಹೇಳಿರುವುದನ್ನು ಗಮನಿಸಬೇಕು

**ಮಿತ್ರಃ** — ಪುರಾಣಾದಿಗಳಲ್ಲಿ ಮಿತ್ರನು ದ್ವಾದಶಾದಿತ್ಯರಲ್ಲಿ ಒಬ್ಬನು. ಋಗ್ವೇದದಲ್ಲಿ ಮಿತ್ರನು ಸೂರ್ಯನ ಬೇರೊಂದು ಹೆಸರಾದರೂ ಮಿತ್ರನಿಗೆ ಸ್ಪಷ್ಟವಾದ ವೈಶಿಷ್ಟ್ಯವಿದೆ ಎಂದರೆ ವೈಯಕ್ತಿಕಪ್ರಾಧಾನ್ಯವಿದೆ ಋಗ್ವೇದದಲ್ಲಿ ಮಿತ್ರ, ವರುಣ ಎಂಬುವರು ಅದಿತಿಯ ಪುತ್ರರೆಂದು ಹೇಳಿದೆ ಆದ್ದರಿಂದ ಇವರನ್ನು ಆದಿತ್ಯರೆಂದು ಅನೇಕಕಡೆ ಕರೆದಿದೆ ಈ ಆದಿತ್ಯರು ಎಂದರೆ ಅದಿತಿಪುತ್ರರು ಆರುಮಂದಿಯೆಂದು—

**ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।**
**ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥**
(ಋ ಸಂ ೨-೨೭ ೧)

ಎಂದರೆ, ಮಿತ್ರ, ಅರ್ಯಮಾ, ಭಗ, ವರುಣ, ದಕ್ಷ, ಅಂಶ ಎಂದು ಆರುಜನರ ಹೆಸರನ್ನು ಮಾತ್ರ ಇಲ್ಲಿ ಹೇಳಿದೆ

**ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷ ನ ಇಂದ್ರಾಯೇಂದೋ ಪರಿ ಸ್ರವ ॥**
(ಋ ಸಂ ೯-೧೧೪-೩)

ಎಂಬ ಋಕ್ಕಿನಲ್ಲಿ ಅದಿತಿಪುತ್ರರು ಏಳುಜನರೆಂದಿದೆ

**ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವ೧ ಸ್ಪರಿ ।**
**ದೇವಾँ ಉಪಪ್ರೈತ್ಸಪ್ತಭಿಃ ಪರಾ ಮಾರ್ತಾಂಡಮಾಸ್ಯತ್ ॥**
**ಸಪ್ತಭಿಃ ಪುತ್ರೈರದಿತಿರುಪ ಪ್ರೈತ್ಪೂರ್ವ್ಯಂ ಯುಗಂ ।**
**ಪ್ರಜಾಯೈ ಮೃತ್ಯವೇ ತ್ವತ್ಪುನರ್ಮಾರ್ತಾಂಡಮಾಭರತ್ ॥**
(ಋ ಸಂ. ೧೦-೭೨ ೮,೯)

ಎಂಬ ಋಕ್ಕುಗಳಲ್ಲಿ ಅದಿತಿಗೆ ಮೊದಲು ಏಳು, ಅನಂತರ ಮಾರ್ತಾಂಡನೆಂದು ಒಬ್ಬನು, ಒಟ್ಟು ಎಂಟುಮಂದಿ ಪುತ್ರರಿದ್ದರೆಂದು ಹೇಳಿದೆ ಇದಲ್ಲದೆ ತೈತ್ತಿರೀಯಾರಣ್ಯಕದಲ್ಲಿ—

**ಅಷ್ಟೌ ಪುತ್ರಾಸೋ ಅದಿತೇಃ । ಯೇ ಜಾತಾಸ್ತನ್ವಃ ಪರಿ । ದೇವಾँ ಉಪಪ್ರೈತ್ಸಪ್ತಭಿಃ । ಪರಾಮಾರ್ತಾಂಡಮಾಸ್ಯತ್ । ಸಪ್ತಭಿಃ ಪುತ್ರೈರದಿತಿಃ । ಉಪಪ್ರೈತ್ಪೂರ್ವ್ಯಂ ಯುಗಂ । ಪ್ರಜಾಯೈ ಮೃತ್ಯವೇ ತತ್ । ಪರಾ ಮಾರ್ತಾಂಡಮಾಭರದಿತಿ । ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಗ್ಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್ಶ್ಚೇತ್ಯೇತೇ ॥**
(ತೈ. ಆ. ೧-೧೩-೩)

ಎಂಬಲ್ಲಿ ಅದಿತಿಗೆ ಇದ್ದ ಎಂಟುಮಂದಿ ಪುತ್ರರ ಹೆಸರನ್ನೂ ಹೇಳಿದೆ ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬುವರೇ ಆ ಎಂಟು ಜನರು ಎಂದಿದೆ ಇದೇ ವಿಷಯವು ತೈತ್ತಿರೀಯಬ್ರಾಹ್ಮಣದಲ್ಲಿ

**ಅದಿತಿಃ ಪುತ್ರಕಾಮಾ । ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮುಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಧತ್ತ । ತಸ್ಯೈ ಧಾತಾ ಚಾರ್ಯಮಾ ಚಾಜಾಯೇತಾಂ । ಸಾ ದ್ವಿತೀಯಮುಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಂ । ಸಾ ತೃತೀಯಮುಪಚತ್ । ತಸ್ಯಾ ಉಚ್ಛೇಷಣಮದದುಃ । ತತ್ಪ್ರಾಶ್ನಾತ್ । ಸಾ ರೇತೋಧತ್ತ । ತಸ್ಯಾ ಅಗ್ಂಶಶ್ಚ ಭಗಶ್ಚಾಜಾಯೇತಾಂ । ಸಾ ಚತುರ್ಥಮುಪಚತ್ । ತಸ್ಯಾ ಉಚ್ಛೇಷಣಮದದುಃ। ತತ್ಪ್ರಾಶ್ನಾತ್ । ಸಾ ರೇತೋಧತ್ತ । ತಸ್ಯಾ ಇಂದ್ರಶ್ಚ ವಿವಸ್ವಾಗ್‌ಶ್ಚಾಜಾಯೇತಾಂ ॥**

(ತೈ. ಬ್ರಾ ೧-೧-೯-೧,೨,೩)

ಎಂದು ಉಕ್ತವಾಗಿದೆ. ಅದಿತಿಯು ಎಂಟುಮಂದಿ ಪುತ್ರರನ್ನು ಪಡೆದ ವಿಷಯವು ಇಲ್ಲಿ ಸ್ಪಷ್ಟವಾಗಿ ವಿವರಿಸಿದೆ ಈ ಎಂಟು ಮಂದಿಯಲ್ಲಿ ಮಿತ್ರ, ವರುಣ, ಅರ್ಯಮಾ ಎಂಬ ಮೂರು ಮಂದಿಯೇ ಋಗ್ವೇದದಲ್ಲಿ ವಿಶೇಷವಾಗಿ ಪ್ರಸಿದ್ಧರಾದವರು. ಋ ಸಂ ೨ ೨೭ ನೇ ಸೂಕ್ತದಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರ ಲೋಕೋಪಕಾರವಾದ ಸಾಹಸಕೃತ್ಯತಳ ವಿಸ್ತಾರವಾದ ವರ್ಣನೆ ಇದೆ. ಮಿತ್ರಶಬ್ದದ ನಿರ್ವಚನವನ್ನು ಯಾಸ್ಕರು ತಮ್ಮ ನಿರುಕ್ತದಲ್ಲಿ ಈರೀತಿ ತಿಳಿಸಿದಾರೆ—

**ಮಿತ್ರಃ ಪ್ರಮೀತೇಸ್ತ್ರಾಯತೇ ಸಂಮಿನ್ವಾನೋ ದ್ರವತೀತಿ ವಾ । ಮೇದಯತೇರ್ವಾ ॥**

(ನಿ ೧೦-೨೧)

ಮಿತ್ರಶಬ್ದಕ್ಕೆ ಅರ್ಥವೇನು, ಎಂದರೆ—**ಮಿತ್ರಃ ಕಸ್ಮಾತ್ । ಸ ಹಿ ಪ್ರಮೀತೇಃ ತ್ರಾಯತೇ । ಪ್ರಮೀತಿಃ ಮರಣಂ । ತತಃ ಸರ್ವಲೋಕಂ ತ್ರಾಯತೇ ವರ್ಷದ್ವಾರೇಣ** ॥ ಪ್ರಮೀತಿ ಎಂದರೆ ಮರಣವು. ಲೋಕದಲ್ಲಿ ಜನರಿಗೆ ವೃಷ್ಟಿಯನ್ನುಂಟುಮಾಡಿ ಆ ಮೂಲಕ ಅನ್ನಾದ್ಯಾಹಾರಗಳನ್ನು ಒದಗಿಸಿ, ಹಸಿವಿನಿಂದ ಉಂಟಾಗಬಹುದಾದ ಮರಣಭಯವನ್ನು ತಪ್ಪಿಸಿ ರಕ್ಷಿಸುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು. **ಸಮಂತತೋ ಮಿನ್ವಾನಃ ಉದಕೇನ ದ್ರವತಿ ಅಂತರಿಕ್ಷಲೋಕೇ** । ಈ ದೇವತೆಯು ಉದಕಕ್ಕೆ ಅಧಿಪತಿಯಾಗಿ ಅಂತರಿಕ್ಷದಲ್ಲಿದ್ದುಕೊಂಡು ಮೇಘಗಳ ಮೂಲಕ ಸುತ್ತಲೂ ಎಂದರೆ ಸಮಸ್ತಪ್ರದೇಶವನ್ನೂ ಅಂಟಿಕೊಳ್ಳುವಂತೆ ಎಂದರೆ ಒಂದಾಗಿ ಸೇರಿಕೊಳ್ಳುವಂತೆ ಮಾಡುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು ಎಂದು ಮೂರುವಿಧವಾದ ನಿಷ್ಪತ್ತಿಯನ್ನು ಹೇಳಿ ಅದನ್ನು ಸಮರ್ಥಿಸುವುದಕ್ಕಾಗಿ—

**ಮಿತ್ರೋ ಜನಾನ್ ಯಾತಯಾತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।**
**ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥**

(ಋ. ಸಂ. ೩-೫೯-೧)

ಎಂಬ ಋಕ್ಕನ್ನು ಉದಾಹರಣೆಗಾಗಿ ಕೊಟ್ಟಿರುವರು. ಈ ಋಕ್ಕಿನಲ್ಲಿ ಮಿತ್ರನು ಕೃಷ್ಯಾದಿಕರ್ಮಗಳಿಗೆ ಸಹಾಯಕನಾಗಿ ವೃಷ್ಟ್ಯಾದಿಗಳನ್ನು ಸುರಿಸಿ ಜನರಿಗೆ ಅನ್ನಾದ್ಯಾಹಾರಗಳನ್ನು ಒದಗಿಸುತ್ತಾ ಭೂಲೋಕದ ಜನರನ್ನೂ ಸ್ವರ್ಗನಿವಾಸಿಗಳನ್ನೂ ಧರಿಸಿ ಪೋಷಿಸುವವನು. ಎಲೈ ಮನುಷ್ಯರೇ, ಇಂತಹ ಮಿತ್ರದೇವನಿಗೆ ಘೃತಮಿಶ್ರಿತವಾದ ಹವಿರಾದಿಗಳನ್ನು

ಅರ್ಪಿಸಿ ಎಂದು ಮಿತ್ರನ ಅಸಾಧಾರಣಗುಣಗಳನ್ನೂ ಲೋಕೋಪಕಾರವನ್ನೂ ಒಹುಚೆನ್ನಾಗಿ ವರ್ಣಿಸಿದೆ ಋಗ್ವೇದದಲ್ಲಿ ಮಿತ್ರನ ಪರವಾಗಿ ಇರುವ ಸೂಕ್ತವೆಂದರೆ ೯ ಋಕ್ಕುಗಳುಳ್ಳ ಮೂರನೇ ಮಂಡಲದ ೫೯ನೇ ಸೂಕ್ತಮಾತ್ರ. ಇತರ ಕಡೆ ಮಿತ್ರನು ವರುಣಮೊದಲಾದ ಇತರ ದೇವತೆಗಳ ಜೊತೆಯಲ್ಲಿ ಸ್ತುತನಾಗಿದಾನೆ.

ಮಿತ್ರ ಮತ್ತು ವರುಣರ ಸಾಹಚರ್ಯವು ಬಹಳ ಹೆಚ್ಚಾಗಿರುವುದರಿಂದ ಮಿತ್ರನೊಬ್ಬನೇ ದೇವತೆಯಾಗಿರುವ ಸೂಕ್ತವು ಋಗ್ವೇದದಲ್ಲಿ ಹಿಂದೆ ಹೇಳಿದಂತೆ ಒಂದು ಮಾತ್ರವಿರುವುದು (ಋ ಸಂ. ೩-೫೯) ಅಲ್ಲಿಯೂ ಈ ದೇವತೆಯ ಸ್ತುತಿಭಾಗವು ಅಸ್ಪಷ್ಟ. ಆದರೆ ಮೊದಲನೆಯ ಋಕ್ಕಿನಲ್ಲಿಮಾತ್ರ ಮಿತ್ರನ ವೈಶಿಷ್ಟ್ಯವು ಚೆನ್ನಾಗಿ ವಿವರಿಸಲ್ಪಟ್ಟಿದೆ ಅದೇ ಸೂಕ್ತದ ಐದನೆಯ ಋಕ್ಕಿನಲ್ಲಿ–

**ಮಹಾಁ ಆದಿತ್ಯೋ ನಮಸೋಪಸದ್ಯೋ ಯಾತಯಜ್ಜನೋ ಗೃಣತೇ ಸುಶೇವಃ ।**

(ಋ ಸಂ ೩-೫೯-೫)

ಈ ಮಿತ್ರನನ್ನು ಮನುಷ್ಯರನ್ನೆಲ್ಲಾ ಒಟ್ಟಾಗಿ ಸೇರಿಸುವ ಮಹನೀಯನಾದ ಆದಿತ್ಯನೆಂದು ಕರೆದಿದೆ ಈ ಅರ್ಥವಿರುವ **ಯಾತಯಜ್ಜನಃ** ಎಂಬ ಶಬ್ದವು

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ ।**

(ಋ ಸಂ. ೫ ೭೨-೨)

ಎಂಬ ಋಕ್ಕಿನಲ್ಲಿ ಮಿತ್ರಾವರುಣರಿಬ್ಬರ ಪರವಾಗಿಯೂ

**ಮಿತ್ರಸ್ತನ್ನೋ ವರುಣೋ ಯಾತಯಜ್ಜನೋಽರ್ಯಮಾ ಯಾತಯಜ್ಜನಃ ।**

(ಋ ಸಂ. ೧-೧೩೬-೩)

ಎಂಬ ಋಕ್ಕಿನಲ್ಲಿ ಮಿತ್ರ ವರುಣ ಅರ್ಯಮಾ ಎಂದು ಮೂರುಮಂದಿಯ ಪರವಾಗಿಯೂ ಪ್ರಯುಕ್ತವಾಗಿದೆ. ಮೇಲೆ ಹೇಳಿದ ಋ. ಸಂ ೩-೫೯ನೆಯ ಸೂಕ್ತದಪ್ರಕಾರ ಮಿತ್ರನು ಸ್ವರ್ಗ ಮತ್ತು ಭೂಮಿಗಳಿಗೆ ಆಧಾರನಾಗಿದಾನೆ. ಮನುಷ್ಯರು ಐದು ಪಂಗಡಗಳು (ಪಂಚಜನಾಃ) ಅವನಿಗೆ ವಿಧೇಯರಾಗಿದಾರೆ ಇತರ ದೇವತೆಗಳಿಗೆಲ್ಲಾ ಅವನು ಜೀವನಾಧಾರನಾಗಿದಾನೆ ಎಂದು ಮಿತ್ರನ ಗುಣವರ್ಣನೆ ಇದೆ. ಋ ಸಂ ೫ ೮೧-೪ರಲ್ಲಿ ಸವಿತೃ ಮತ್ತು ಮಿತ್ರನು ಇಬ್ಬರೂ ಒಂದೇ ವ್ಯಕ್ತಿಯೆಂದೂ ವಾಜಸನೇಯ ಸಂಹಿತೆಯಲ್ಲಿ (ವಾ ಸಂ. ೪-೩) ಮಿತ್ರನ ನಿಯಮಗಳನ್ನನುಸರಿಸಿಯೇ ವಿಷ್ಣುವು ಮೂರು ಹೆಜ್ಜೆಗಳನ್ನಿಟ್ಟನೆಂದೂ, ಋ ಸಂ. ೫-೩-೧ರಲ್ಲಿ ಅಗ್ನಿಯು ಉತ್ಪನ್ನನಾದಾಗ ವರುಣನು, ದೀಪ್ತನಾದಾಗ ಮಿತ್ರನು ಎಂದೂ,

**ಮಿತ್ರೋ ಅಗ್ನಿರ್ಭವತಿ ಯತ್ಸಮಿದ್ಧೋ ಮಿತ್ರೋ ಹೋತಾ ವರುಣೋ ಜಾತವೇದಾಃ ।**
**ಮಿತ್ರೋ ಅಧ್ವರ್ಯುರಿಷಿರೋ ದಮೂನಾ ಮಿತ್ರಃ ಸಿಂಧೂನಾಮುತ ಪರ್ವತಾನಾಂ ॥**

(ಋ. ಸಂ. ೩-೫-೪)

ಎಂಬಲ್ಲಿ ಚೆನ್ನಾಗಿ ಪ್ರಜ್ವಲಿತವಾದ ಅಗ್ನಿಯೇ ಮಿತ್ರನೆಂದೂ, ಈ ಮಿತ್ರನೇ ಯಜ್ಞದಲ್ಲಿ ಹೋತೃವೂ, ಅಧ್ವರ್ಯುವೂ, ವರುಣನೂ, ಜಾತವೇದಸ್ಸೆಂಬ ಅಗ್ನಿಯೂ ಆಗಿರುವನೆಂದೂ, ಇವನು ನದಿಗಳಿಗೂ ಪರ್ವತಗಳಿಗೂ ಸ್ನೇಹಿತ (ಹಿತಕಾರಿ) ನೆಂದೂ ಮಿತ್ರನ ಗುಣಗಳ ವರ್ಣನೆ ಇದೆ.

ಮಿತ್ರಶಬ್ದವು ಸೂರ್ಯನಿಗೆ ಪರ್ಯಾಯಪದವಾಗಿರುವುದೆಂದು ಸಾಯಣರ ಮತ ಮಿ ಮತ್ತು ತ್ರಾ ಎರಡು ಧಾತುಗಳೂ ಸೇರಿ ಮಿತ್ರಶಬ್ದವು ನಿಷ್ಪನ್ನವಾಗಿದೆಯೆಂದು ಈ ಶಬ್ದದ ಅವಯವಾರ್ಥವನ್ನು ಬಿಡಿಸಿ ತೋರಿಸಿದ್ದಾರೆ **ಪ್ರಕರ್ಷೇಣ ಸರ್ವೈರ್ಮೀಯತೇ ಜ್ಞಾಯತೇ ತಥಾ ಸರ್ವಾನ್ ವೃಷ್ಟಿಪ್ರದಾನೇನ ತ್ರಾಯತ ಇತಿ ವಾ**

**ಮಿತ್ರಃ** ಸೂರ್ಯಃ | ಎಲ್ಲರಿಂದಲೂ ಪೂರ್ಣವಾಗಿ ತಿಳಿಯಲ್ಪಡುತ್ತಾನೆ ಮತ್ತು ಎಲ್ಲರನ್ನೂ ರಕ್ಷಿಸುತ್ತಾನೆ. ಈ ಎರಡು ಗುಣಗಳೂ ಇರುವುದರಿಂದ ಸೂರ್ಯನು ಮಿತ್ರಶಬ್ದವಾಚ್ಯನಾಗುತ್ತಾನೆ. ಮಿತ್ರನೆಂಬ ಶಬ್ದಕ್ಕೆ ಸ್ನೇಹಿತ, ಹಿತಕಾರಿ ಎಂಬರ್ಥವು ಕೆಲವುಕಡೆ ಕಂಡುಬರುವುದು ಉದಾಹರಣೆಗೆ—

**ಮಿತ್ರಂ ದೇವಾ ಅಬ್ರುವನ್ತ್ಸೋಮಗ್ಂ ರಾಜಾನಗ್ಂ ಹನಾಮೇತಿ ಸೋಽಬ್ರವೀನ್ನಾ-ಹಗ್ಂ ಸರ್ವಸ್ಯ ವಾ ಅಹಂ ಮಿತ್ರಮಸ್ಮೀತಿ |**

(ತೈ ಸಂ. ೬-೪-೮-೧)

ಒಂದುಸಮಯದಲ್ಲಿ ಸೋಮರಸವನ್ನು ಹಿಂಡುವ ಸಂದರ್ಭದಲ್ಲಿ ದೇವತೆಗಳು ಮಿತ್ರನನ್ನುಕುರಿತು ಇಂತೆಂದರು— ಎಲೈ ಮಿತ್ರನೇ, ನಾವು ಸೋಮರಾಜನನ್ನು (ಸೋಮಲತೆಯನ್ನು) ಸಂಹಾರಮಾಡೋಣ (ಜಜ್ಜಿ ಸೋಮರಸವನ್ನು ಹಿಂದೋಣ ಎಂದು ಹೇಳಲು ಅದಕ್ಕೆ ಮಿತ್ರನು— ಎಲ್ಲಾದರೂ ಉಂಟೇ, ನಾನು ಎಲ್ಲರಿಗೂ ಸ್ನೇಹಿತನಾಗಿರುವುದರಿಂದಲೇ ನನಗೆ ಮಿತ್ರನೆಂಬ ಹೆಸರು ಬಂದಿದೆ. ಆದ್ದರಿಂದ ಈ ಕಾರ್ಯದಲ್ಲಿ ನಾನು ನಿಮ್ಮೊಡನೆ ಸೇರುವುದಿಲ್ಲ ಎಂದನು ಇತ್ಯಾದಿ ವಿಷಯಗಳು ಮಿತ್ರನ ಗುಣಗಳನ್ನು ವರ್ಣಿಸುವುವಾಗಿವೆ

**ವರುಣಃ—ವರುಣೋ ವೃಣೋತೀತಿ ಸತಃ** (ನಿ ೧೦-೩) ಮೇಘಸಮೂಹದಿಂದ ಆವೃತನಾದ್ದರಿಂದ ಈ ದೇವತೆಗೆ ವರುಣನೆಂದು ಹೆಸರು ಎಂದು ಯಾಸ್ಕರ ನಿರ್ವಚನವಿದೆ.

ವರುಣನು ಅತಿಶ್ರೇಷ್ಠನಾದ ದೇವತೆ, ಸಾಮರ್ಥ್ಯಾದಿಗಳಲ್ಲಿ ಇಂದ್ರನಿಗೆ ಸಮಾನನು. ವರುಣದೇವತಾಕ ವಾದ ಮಂತ್ರಗಳ ಸಂಖ್ಯೆ ಬಹಳ ಕಡಿಮೆ ವರುಣದೇವತಾಕವಾದ ಸೂಕ್ತಗಳು ಋಗ್ವೇದದಲ್ಲ ಹನ್ನೆರಡಿವೆ ಆದರ ಮಿತ್ರಾವರುಣರನ್ನು ಒಟ್ಟಾಗಿ ಸ್ತುತಿಸಿರುವ ಸೂಕ್ತಗಳು ಇಪ್ಪತ್ತನಾಲ್ಕು ಇವೆ.

ವರುಣನಿಗೆ ಮಾನುಷದೇಹ, ಮಾನುಷವ್ಯಾಪಾರಗಳುಂಟು. ಆದರೆ ಭೌತಿಕ ಶರೀರ ಮತ್ತು ವ್ಯಾಪಾರ ಗಳಿಗಿಂತ ಹೆಚ್ಚಾಗಿ ಅವನ ನೈತಿಕವ್ಯಾಪಾರಾದಿಗಳ ಮತ್ತು ಕಾರ್ಯಗಳ ವರ್ಣನೆಯೇ ಹೆಚ್ಚಾಗಿ ಸೂಚಿತವಾಗಿದೆ ಅವನಿಗೆ ಮುಖ, ಕಣ್ಣು, ತೋಳುಗಳು, ಕೈಗಳು ಮತ್ತು ಪಾದಗಳಿವೆ, ರಥ ನಡೆಯಿಸುತ್ತಾನೆ, ಕುಳಿತುಕೊಳ್ಳುತ್ತಾನೆ. ತಿನ್ನುತ್ತಾನೆ, ಪಾನಮಾಡುತ್ತಾನೆ ಇತ್ಯಾದಿ ಅವನ ಶರೀರವ್ಯಾಪಾರಗಳ ವಿವರಣೆ ಇದೆ ಅಗ್ನಿ, ಮಿತ್ರ, ಮತ್ತು ವರುಣರಿಗೆ ಸೂರ್ಯನೇ ನೇತ್ರನೆಂದು—

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ |**

(ಋ. ಸಂ. ೧-೧೧೫-೧)

**ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾ ಏತಿ ಪ್ರಿಯಂ ವರುಣಯೋರದಬ್ಧಂ |**

(ಋ ಸಂ. ೬-೫೧-೧)

**ಉದ್ವಾಂ ಚಕ್ಷುರ್ವರುಣ ಸುಪ್ರತೀಕಂ ದೇವಯೋರೇತಿ ಸೂರ್ಯಸ್ತತನ್ವಾನ್ |**

(ಋ. ಸಂ. ೭-೬೧-೧)

**ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಶ್ಚರ್ಮೇವ ಯಃ ಸಮವಿವ್ಯಕ್ ತಮಾಂಸಿ |**

(ಋ. ಸಂ. ೭-೬೩-೩)

**ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ |**

(ಋ. ಸಂ. ೧೦-೩೭-೧)

ಎಂಬ ಋಕ್ಕುಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಸೂರ್ಯನು ಇವನಿಗೆ ನೇತ್ರಪ್ರಾಯನೆಂಬ ವಿಷಯವು ಮಿತ್ರಾವರುಣದೇವತಾಕವಾದ ಸೂಕ್ತಗಳ ಮೊದಲನೆಯ ಋಕ್ಕಿನಲ್ಲಿಯೇ ಇರುವುದರಿಂದ ಮಿತ್ರಾವರುಣರ ಪ್ರಸ್ತಾಪ ಬಂದಾಗಲೆಲ್ಲಾ ಮೊದಲು ಗೋಚರವಾಗುವುದೇ ಈ ಅಂಶವೆಂದು ತೋರುತ್ತದೆ. ಮತ್ತು ಋ ಸಂ ೭-೬೬-೧೦ನೆಯ ಋಕ್ಕಿನಲ್ಲಿ ಅರ್ಯಮಾ, ಮಿತ್ರ ವರುಣರು ಸೂರ್ಯನೇತ್ರರೆಂದು ಹೇಳಿದೆ ವರುಣನು ದೂರದೃಷ್ಟಿಯುಳ್ಳವನು (**ಉರುಚಕ್ಷಸಂ**) ಎಂದು (ಋ ಸಂ. ೧-೨೫-೫ ; ೧-೨೫-೧೬) ಮೊದಲಾದ ಋಕ್ಕುಗಳಲ್ಲಿ ಹೇಳಿದೆ.

**ಆ ನೋ ಬರ್ಹೀ ರಿಶಾದಸೋ ವರುಣೋ ಮಿತ್ರೋ ಅರ್ಯಮಾ ।**
**ಸೀದಂತು ಮನುಷೋ ಯಥಾ ॥**

(ಋ ಸಂ ೧-೨೬-೪)

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ ।**
**ನಿ ಬರ್ಹಿಷಿ ಸದತಂ ಸೋಮಪೀತಯೇ ॥**

(ಋ ಸಂ ೫-೭೨-೨)

ಇತ್ಯಾದಿ ಋಕ್ಕುಗಳಲ್ಲಿ ಸೋಮಪಾನಕ್ಕಾಗಿ ಮಿತ್ರ ವರುಣ ಅರ್ಯಮರನ್ನು ಯಜ್ಞವೇದಿಯಲ್ಲಿ ಹಾಸಿರುವ ದರ್ಭೆಯ ಮೇಲೆ ಬಂದು ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಲಾಗಿದೆ

**ಯದೀ ಸಖಾಯಾ ಸಖ್ಯಾಯ ಸೋಮೈಃ ಸುತೇಭಿಃ ಸುಪ್ರಯಸಾ ಮಾದಯೈತೇ ।**

(ಋ. ಸಂ. ೪-೪೯-೩)

ಇತ್ಯಾದಿ ಋಕ್ಕುಗಳಲ್ಲಿ ವರುಣನು ಇಂದ್ರಾದಿದೇವತೆಗಳೊಡನೆ ಸೋಮಪಾನಮಾಡುತ್ತಾನೆಂದು ಹೇಳಿದೆ

**ಬಿಭ್ರದ್ದ್ರಾಪಿಂ ಹಿರಣ್ಯಯಂ ವರುಣೋ ವಸ್ತ ನಿರ್ಣಿಜಂ ।**
**ಪರಿ ಸ್ಪಶೋ ನಿ ಷೇದಿರೇ ॥** (ಋ ಸಂ. ೧-೨೫-೧೩)

ಎಂಬ ಋಕ್ಕಿನಲ್ಲಿ ವರುಣನು ಸುವರ್ಣಮಯವಾದ ಮೇಲುಹೊದಿಕೆ ಅಥವಾ ನಿಲುವಂಗಿಯನ್ನೂ (ಕವಚವನ್ನು) ಮತ್ತು ಹೊಳೆಯುವ ಉಡುಪನ್ನೂ ಧರಿಸುತ್ತಾನೆಂಬ ವರ್ಣನೆ ಇದೆ ವರುಣನ ರಥವು ಸುವರ್ಣಮಯವಾದುದು, ಮತ್ತು ಸೂರ್ಯನಂತೆ ಕಾಂತಿಯುಕ್ತವಾದದ್ದು ಮತ್ತು ಅದರಲ್ಲಿ ಅಶ್ವಪ್ರಚೋದಕವಾದ ಚಾವಟಿಗಳಿವೆ ಮಿತ್ರಾವರುಣರು ಆಕಾಶದಲ್ಲಿ ಬಹಳ ಎತ್ತರವಾದ ಪ್ರದೇಶದಲ್ಲಿ ರಥಾರೋಹಣಮಾಡುತ್ತಾರೆ. (ಋ ಸಂ. ೫ ೬೩ ೧) ಇತ್ಯಾದಿ ವರ್ಣನೆಗಳಿವೆ

ಮಿತ್ರಾವರುಣರ ವಾಸಗೃಹವು ಸುವರ್ಣಮಯವಾದುದು ಮತ್ತು ಅದು ಮೇಲುಲೋಕದಲ್ಲಿದೆ. ವರುಣನು ಅಲ್ಲಿರುವ ತನ್ನ ಪ್ರಾಸಾದದಲ್ಲಿ ಕುಳಿತು—

**ನಿ ಷಸಾದ ಧೃತವ್ರತೋ ವರುಣಃ ಪಸ್ತ್ಯಾ೩ಸ್ವಾ ।**
**ಸಾಮ್ರಾಜ್ಯಾಯ ಸುಕ್ರತುಃ ॥**
**ಅತೋ ವಿಶ್ವಾನ್ಯದ್ಭುತಾ ಚಿಕಿತ್ವಾँ ಅಭಿ ಪಶ್ಯತಿ ।**
**ಕೃತಾನಿ ಯಾ ಚ ಕರ್ತ್ವಾ ॥**

(ಋ. ಸಂ. ೧ ೨೫-೧೦,೧೧)

ಪ್ರಪಂಚದಲ್ಲಿ ನಡೆಯುವುದನ್ನೆಲ್ಲಾ ನೋಡುತ್ತಾನೆ. ಮಿತ್ರಾವರುಣರ ವಾಸಸ್ಥಾನವು ಬಹಳ ದೊಡ್ಡದು, ಬಹಳ ಎತ್ತರವಾದುದು, ಸಹಸ್ರಸ್ತಂಭಗಳುಳ್ಳದ್ದಾಗಿ ದೃಢವಾಗಿದೆ. ಮತ್ತು ಅವರ ಮನೆಗೆ ಸಹಸ್ರದ್ವಾರಗಳಿವೆ. (ಋ. ಸಂ. ೭-೮೮-

೫). ಸರ್ವದರ್ಶಿಯಾದ ಸೂರ್ಯನು ತನ್ನ ವಾಸಸ್ಥಾನದಿಂದ ಹೊರಟು ಮಿತ್ರಾವರುಣರ ಮನೆಗೆ ಮನುಷ್ಯರ ಕೆಲಸಗಳನ್ನು ತಿಳಿಸಲು ಹೋಗುತ್ತಾನೆ, ಮತ್ತು ಅವರ ಪ್ರಿಯವಾದ ಮನೆಯನ್ನು ಪ್ರವೇಶಿಸುತ್ತಾನೆ ಇತ್ಯಾದಿ ವರ್ಣನೆಗಳೂ ಇವೆ. ವರುಣನು ಒಂಟಿಯಾಗಿ ಅಥವಾ ಮಿತ್ರಸಹಿತನಾಗಿ ಇತರ ದೇವತೆಗಳಂತೆ ಅನೇಕಕಡೆ ರಾಜನೆಂಬ ರಬ್ದದಿಂದ ಕರೆಯಲ್ಪಟ್ಟಿದಾನೆ

**ಅಬುಧ್ನೇ ರಾಜಾ ವರುಣೋ ವನಸ್ಯೋರ್ಧ್ವಂ ಸ್ತೂಪಂ ದದತೇ ಪೂತದಕ್ಷಃ ।**
(ಋ. ಸಂ. ೧-೨೪-೭)

**ತ್ವಂ ವಿಶ್ವೇಷಾಂ ವರುಣಾಸಿ ರಾಜಾ ಯೇ ಚ ದೇವಾ ಅಸುರ ಯೇ ಚ ಮರ್ತಾಃ ।**
(ಋ ಸಂ. ೨-೨೭-೧೦)

**ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯುನತ್ತಿ ಭೂಮ ।**
(ಋ ಸಂ ೫-೮೫-೩)

ಇತ್ಯಾದಿ ಯಕ್ಕುಗಳಲ್ಲಿ ವರುಣನು ಮನುಷ್ಯರಿಗೆ ಮಾತ್ರವೇ ಅಲ್ಲ, ದೇವತೆಗಳಿಗೂ ಸಕಲ ಲೋಕಗಳಿಗೂ ರಾಜನೆಂದು ಹೇಳಿದೆ. ವರುಣನಲ್ಲದೇ ಇಂದ್ರ, ಯಮ, ಸೋಮ ಮೊದಲಾದ ದೇವತೆಗಳಿಗೂ ರಾಜನೆಂಬ ಗೌರವಸೂಚಕವಾದ ಹೆಸರಿದೆ

ಇಂದ್ರನ ಸಂಬಂಧವಾದ ಕಥೆಗಳು ಅನೇಕವಿವೆ ಆದರೆ ವರುಣನ ವಿಷಯದಲ್ಲಿ ಇದಕ್ಕೆ ತೀರಾವಿರುದ್ಧವಾಗಿದೆ. ಒಂದಾದರೂ ಕಥೆಗಳಿಲ್ಲ ವರುಣನು ಭೌತಿಕ ಮತ್ತು ನೈತಿಕವಿಧಿಗಳ ನಿಯಾಮಕನೆಂದು **(ವರುಣಸ್ಯ ವ್ರತಾನಿ)** ಬಹಳವಾಗಿ ಹೊಗಳಿದೆ. ಮಿತ್ರಾವರುಣರ ದೈವಶಕ್ತಿಯನ್ನು ಮಾಯಾ ಎಂಬ ಪದದಿಂದ ವರ್ಣಿಸಿದೆ. ಇದು ದೇವತೆಗಳಿಗೆ ಅನ್ವಯಿಸುವಾಗ ಒಳ್ಳೆಯದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿ ಎಂತಲೂ ಅರ್ಥ. ಒಳ್ಳೆಯ ಅರ್ಥದಲ್ಲಿ ಮಿತ್ರಾವರುಣರಿಗೆ ಈ ಪದವು ಸಲ್ಲುತ್ತದೆ. ಕೆಟ್ಟ ಅರ್ಥದಲ್ಲಿ ರಾಕ್ಷಸರಿಗೆ ಅನ್ವಯಿಸುತ್ತದೆ ಅಸುರಶಬ್ದಾರ್ಥದಂತೆ ಮಾಯಾಶಬ್ದಕ್ಕೂ ಎರಡರ್ಥಗಳಲ್ಲಿಯೂ ಪ್ರಯೋಗವಿದೆ ತನ್ನಲ್ಲಿ ನಿಗೂಢವಾದ ಈ ಮಾಯಾಶಕ್ತಿಯಿಂದ ವರುಣನು ವಾಯುಮಂಡಲದಲ್ಲಿ ನಿಂತು ಅಳತೆಕಡ್ಡಿಯಿಂದ ಅಳೆಯುವಂತೆ ಸೂರ್ಯನಿಂದ ಭೂಮಿಯನ್ನು ಅಳೆಯುತ್ತಾನೆ. ಸೂರ್ಯನು ಅಂತರಿಕ್ಷವನ್ನು ದಾಟುವಂತೆ ಮಾಡಿ ಅವನನ್ನು ಮಳೆಮೋಡಗಳಿಂದ ಮುಸಕಾಗುವಂತೆ ಮಾಡುತ್ತಾನೆ. ಆಗ ಮಧುಮಿಶ್ರಿತವಾದ (ಸಿಹಿಯಾದ) ಹನಿಗಳು ಉದುರುತ್ತವೆ (ಋ. ಸಂ ೫-೬೩-೪) ಆಕಾಶವು ಮಳೆಗರೆಯುವಂತೆ ಮಾಡುತ್ತಾನೆ ಆದ್ದರಿಂದ ಈ ಮಾಯಾ ಎಂಬ ಪದವು ಋ ಸಂ ೬-೪೮-೪, ೭-೨೮-೪, ೧೦೯೯-೧೦, ೧೦-೧೪೭-೫ ಮೊದಲಾದ ಋಕ್ಕುಗಳಲ್ಲೆಲ್ಲಾ ದೇವತೆಗಳಲ್ಲಿ ಮುಖ್ಯವಾಗಿ ವರುಣನಿಗೇ ಅನ್ವಯಿಸಿ ಹೇಳಿದೆ

ಪ್ರಕೃತಿನಿಯಮಗಳನ್ನು ವಿಧಿಸುವವನು ವರುಣನು. ಅವನೇ ಭೂಮಿ ಮತ್ತು ಸ್ವರ್ಗಗಳನ್ನು ಸ್ಥಾಪಿಸಿದನು. ಮತ್ತು,

**ಆಸೀದದ್ವಿಶ್ವಾ ಭುವನಾನಿ ಸಮ್ರಾಡ್ವಿಶ್ವೇತ್ತಾನಿ ವರುಣಸ್ಯ ವ್ರತಾನಿ ।**
(ಋ. ಸಂ. ೮-೪೨-೧)

ಎಂಬ ಋಕ್ಕಿನಲ್ಲಿ, ವರುಣನು ಸಮಸ್ತಲೋಕಗಳಲ್ಲಿಯೂ ವಾಸಮಾಡುವನೆಂದೂ, ಅವನ ನಿಯಮಾದಿಗಳು ಅಲ್ಲೆಲ್ಲಾ ಆಚರಿಸಲ್ಪಡುವುವೆಂದೂ,

**ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿನ್ತಿಸ್ರೋ ಭೂಮೀರುಪರಾಃ ಷಡ್ವಿಧಾನಾಃ ।**
(ಋ. ಸಂ. ೭-೮೭-೫)

ಎಂಬಲ್ಲಿ ಮೂರು ಊರ್ಧ್ವಲೋಕಗಳೂ, ಮೂರು ಭೂ (ಅಧೋ) ಲೋಕಗಳೂ ಅವನ ವಶದಲ್ಲಿವೆಯೆಂದು ಹೇಳಿದೆ. ವರುಣ ಮತ್ತು ಮಿತ್ರರು ಪ್ರಪಂಚವೆಲ್ಲವನ್ನೂ ಆಳುತ್ತಾರೆ (ಋ. ಸಂ. ೫-೬೩-೭). ಅವರೇ ಸಮಸ್ತ ಜಗತ್ತಿಗೂ ರಕ್ಷಕರು (ಋ. ೨-೨೭-೪). ವರುಣನು ಸ್ವರ್ಗ, ಭೂಮಿ, ಆಕಾಶಗಳಿಗೆ ಆಧಾರಭೂತನಾಗಿದ್ದಾನೆ (ಋ ಸಂ. ೫-೬೯-೧, ೪). ಅವನು ಉದಕದಲ್ಲಿ ಅಗ್ನಿಯನ್ನೂ, ಆಕಾಶದಲ್ಲಿ ಸೂರ್ಯನನ್ನೂ, ಕಲ್ಲಿನಮೇಲೆ ಸೋಮನನ್ನೂ ಇಟ್ಟಿದ್ದಾನೆ. ಸೂರ್ಯನಿಗೋಸ್ಕರ ಅಗಲವಾದ ದಾರಿಯನ್ನು ಮಾಡಿದ್ದಾನೆ. ವರುಣ, ಮಿತ್ರ ಮತ್ತು ಅರ್ಯಮರು ಸೂರ್ಯನಿಗೋಸ್ಕರ ದಾರಿಯನ್ನು ಬಿಡಿಸುತ್ತಾರೆ (ಋ. ಸಂ. ೩-೬೦-೪) ಇತ್ಯಾದ್ಯನೇಕ ಋಕ್ಕುಗಳಲ್ಲಿ ವರುಣನ ಅಧಿಕಾರದ ವರ್ಣನೆ ಇದೆ

ತೈತ್ತಿರೀಯಸಂಹಿತೆಯಲ್ಲಿ (ತೈ ಸಂ. ೬-೪-೮-೩) ಮಿತ್ರೋಽಹರಜನಯದ್ವರುಣೋ ರಾತ್ರಿಂ—ಎಂದರೆ ಮಿತ್ರನು ಹಗಲನ್ನೂ ವರುಣನು ರಾತ್ರಿಯನ್ನೂ ಸೃಷ್ಟಿಮಾಡಿದರೆಂದಿದೆ ಆದ್ದರಿಂದ— **ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ ।** ಎಂದರೆ ಮಿತ್ರನು ಹಗಲಿಗೆ ಅಧಿಪತಿಯೆಂದೂ ವರುಣರು ರಾತ್ರಿಗೆ ಅಧಿಪತಿಯೆಂದೂ ಅನೇಕಕಡೆಗಳಲ್ಲಿ ಹೇಳಿದೆ ಒಂದು ಸ್ಥಳದಲ್ಲಿ (ತೈ. ಸಂ. ೨-೧-೭-೪) ವರುಣನು ಋತುಗಳನ್ನು ವಿಭಜಿಸಿದನೆಂದು ಹೇಳಿದೆ.

**ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ ।**
**ವೇದಾ ಯ ಉಪಜಾಯತೇ ॥**

(ಋ ಸಂ. ೧-೨೫-೮)

ಎಂಬಲ್ಲಿ ವರುಣನಿಗೆ ಹನ್ನೆರಡು ಮಾಸಗಳೂ ತಿಳಿದಿವೆಯೆಂದೂ,

**ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।**
**ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ॥**

(ಋ. ಸಂ. ೭-೬೬-೧೧)

ಎಂಬ ಋಕ್ಕಿನಲ್ಲಿ ಮಿತ್ರ ವರುಣ ಅರ್ಯಮರು, ಶರತ್ಕಾಲ, ತಿಂಗಳು, ಹಗಲು ಮತ್ತು ರಾತ್ರಿಗಳನ್ನು ವಿಂಗಡಿಸಿದರು ಎಂದೂ ಹೇಳಿದೆ.

ಉದಕವನ್ನು ಕ್ರಮಪಡಿಸುವವನೂ ವರುಣನೇ ಎಂದು ಅನೇಕಕಡೆಗಳಲ್ಲಿ ಹೇಳಿದೆ. ನದಿಗಳು ಹರಿಯುವಂತೆ ಮಾಡಿದವನೂ ಅವನೇ. ಅವನ ಆಜ್ಞೆಯಂತೆಯೇ ಅವು ಯಾವಾಗಲೂ ಪ್ರವಹಿಸುತ್ತಿರುತ್ತವೆ (ಋ. ಸಂ ೨-೨೮-೪) ನದಿಗಳು ವೇಗವಾಗಿ ಹರಿಯುತ್ತಾ ಸಮುದ್ರದೊಳಕ್ಕೆ ನೀರನ್ನು ತಂದು ಸುರಿಯುತ್ತಿದ್ದರೂ ಅದನ್ನು ತುಂಬದಿರುವುದು ಅವನ ಗೂಢವಾದ ಶಕ್ತಿಯುಂಟಾಗಲೇ (ಋ. ಸಂ ೫-೮೫-೬). ವರುಣ ಮತ್ತು ಮಿತ್ರರು ನದಿಗಳಿಗೆ ಒಡೆಯರು. ವರುಣನು ಸಾಗರಗಳಿಗೆ ಒಡೆಯನೆಂಬುದು ಸಿದ್ಧವಾದ ಅಂಶವಾದರೂ ಋಗ್ವೇದದಲ್ಲಿ ಈ ವಿಷಯವನ್ನು ತಿಳಿಸಿರುವುದು ಅಪರೂಪ. ಪ್ರಾಯಶಃ ಇದು ಅಮುಖ್ಯವೆಂದೇ ಇದನ್ನು ಬಿಟ್ಟಿರಬಹುದು. ಪುರಾಣಾದಿಗಳಲ್ಲಿ ವರುಣನು ಜಲಾಧಿಪತಿಯೆಂದು ಪ್ರಸಿದ್ಧನಾಗಿದ್ದಾನೆ. ಮತ್ತು ವರುಣನು ಅಷ್ಟದಿಕ್ಪಾಲಕರಲ್ಲಿ ಒಬ್ಬನಾಗಿ ಪಶ್ಚಿಮದಿಕ್ಕಿಗೆ ಅಧಿಪತಿಯೆಂದು ಪುರಾಣಾದಿಗಳಲ್ಲಿ ಹೇಳಿರುವ ವಿಷಯ ಋಗ್ವೇದದಲ್ಲಿ ಅದಕ್ಕೆ ಯಾವ ಸಮರ್ಥನೆಯೂ ಇಲ್ಲ. ಸಾಧಾರಣವಾಗಿ ವರುಣನಿಗೆ ಸಂಬಂಧವಿರುವುದೆಲ್ಲಾ ವಾಯುಮಂಡಲದಲ್ಲಿರುವ ನೀರಿನೊಡನೆಯೇ ವೃಷ್ಟಿಗಾಗಿ ಪ್ರಾರ್ಥಿಸಲ್ಪಡುವ ದೇವತೆಗಳಲ್ಲಿ ವರುಣ ಮತ್ತು ಮಿತ್ರರೇ ಮುಖ್ಯರಾದವರು. ಪರ್ವತಗಳೆಲ್ಲಾ ಮೋಡಗಳಿಂದ ಆವೃತವಾಗಿರುವಾಗ ಋತಮೇಲಾದ ಬಾನಿಯಿಂದ (ಮೋಡದಿಂದ) ಸ್ವರ್ಗ, ಭೂಮಿ ಮತ್ತು ಆಕಾಶಗಳಿಗೆ ನೀರೆರೆದು ಭೂಮಿಯನ್ನೆಲ್ಲಾ

ವರುಣನು ನೆನೆಯುವಂತೆ ಮಾಡುವನು ಎಂದು ಋ ಸಂ. ೫-೮೫-೩,೪ನೆಯ ಋಕ್ಕುಗಳಲ್ಲಿ ಹೇಳಿದೆ. ಒಂದು ಇಡೀ ಸೂಕ್ತವೇ (ಋ. ಸಂ. ೫-೬೩ನೇ ಸೂಕ್ತ) ಅವರ ಮಳೆಗರೆಯುವ ಶಕ್ತಿಯನ್ನು ಪ್ರಶಂಸಿಸಿದೆ. ತೈತ್ತಿರೀಯಸಂಹಿತೆಯಲ್ಲಿ (ತೈ. ಸಂ. ೫-೫-೪-೧) **ಆಪೋ ವರುಣಸ್ಯ ಪತ್ನಯ ಆಸನ್**—ಉದಕಗಳು ವರುಣನ ಪತ್ನಿಯರೆಂದೂ (ತೈ ಸಂ. ೬-೪-೩-೨) **ಮಿತ್ರಾವರುಣೌ ವಾ ಅಪಾಂ ನೇತಾರೌ**-ಮಿತ್ರಾವರುಣರು ನೀರಿಗೆ ನಾಯಕರು ಎಂದೂ ಹೇಳಿದೆ.

ವರುಣನ ಶಾಸನಗಳು ಚೆನ್ನಾಗಿ ಸ್ಥಾಪಿತವಾಗಿದೆಯೆಂದು ಪದೇಪದೇ ಹೇಳಲ್ಪಟ್ಟಿದೆ. ಈ ಕಾರಣದಿಂದಲೇ ಅವನಿಗೆ ಧೃತವ್ರತ ಎಂದು ಹೆಸರು. ಮಿತ್ರಾವರುಣರಿಬ್ಬರಿಗೂ ಈ ವಿಶೇಷಣವಿದೆ.

**ಪರಿ ಧಾಮಾನಿ ಮರ್ಮೃಶದ್ವರುಣಸ್ಯ ಪುರೋ ಗಯೇ ವಿಶ್ವೇದೇವಾ ಅನು ವ್ರತಂ ನಭಂತಾಮನ್ಯಕೇ ಸಮೇ ||**

(ಋ ಸಂ. ೮ ೪೧-೭)

**ನ ವಾಂ ದೇವಾ ಅಮೃತಾ ಆ ಮಿನಂತಿ ವ್ರತಾನಿ ಮಿತ್ರಾವರುಣಾ ಧ್ರುವಾಣಿ ||**

(ಋ. ಸಂ. ೫-೬೯-೪)

ಇತ್ಯಾದಿ ಋಕ್ಕುಗಳಲ್ಲಿ ದೇವತೆಗಳೂ ಸಹ ಮಿತ್ರಾವರುಣಾರ್ಯಮರ ಆಜ್ಞೆಗಳನ್ನು ಪಾಲಿಸುತ್ತಾರೆಂದೂ, ಅನಾದಿದೇವತೆಗಳೂ ಕೂಡ ಅವರ ಧೃತವ್ರತಗಳನ್ನು ಮೀರಲಾರರೆಂದೂ ಹೇಳಿದೆ. ಮಿತ್ರಾವರುಣರು ನಿಯಮ (ಋತ) ಮತ್ತು ಬೆಳಕಿಗೆ ನಿಯಾಮಕರು ಈ ಶಾಸನಗಳ ಬಲದಿಂದಲೇ ಅವರು ನಿಯಮಗಳನ್ನು ಬೆಂಬಲಕೊಡಲು ಸಾಧ್ಯವಾಗಿದೆ. ಈ ಗುಣವು ವಿಶೇಷವಾಗಿ ಇವರಿಬ್ಬರಲ್ಲಿ, ಒಂದೊಂದು ವೇಳೆ ಆದಿತ್ಯರಲ್ಲಿ, ಅಥವಾ ಇತರ ಸಾಧಾರಣದೇವತೆಗಳಲ್ಲಿಯೂ ಕಂಡುಬರುತ್ತದೆ. ಅವರು ಸತ್ಯ (ಋತ) ಮತ್ತು ನ್ಯಾಯವನ್ನು ಅಭಿವೃದ್ಧಿಗೊಳಿಸುವವರು ಅಥವಾ ಅವುಗಳ ರಕ್ಷಕರು (**ಋತಸ್ಯ ಗೋಪಾಃ**) ಅಥವಾ ನಿಯಮಗಳನ್ನು ಪಾಲಿಸುವಂತೆ ಮಾಡುವವರು ಎಂಬ ವಿಶೇಷಣವು ಮಿತ್ರಾವರುಣರಿಗೆ ಅನೇಕವೇಳೆ ಪ್ರಯೋಗಿಸಿರುವುದು ಕಂಡುಬರುತ್ತದೆ.

ವರುಣನ ಶಕ್ತಿಯು ಅಗಾಧವಾದುದು. ಹಾರುವ ಪಕ್ಷಿಗಳಾಗಲಿ, ಹರಿಯುವ ನದಿಗಳಾಗಲಿ, ಅವನ ರಾಜ್ಯದ ಗಡಿಯ ಮೇರೆಯನ್ನು ಸೇರಲಾರವು, ಅವನ ಶಕ್ತಿಯನ್ನು ಮೀರಲಾರವು, ಅವನ ಕೋಪವನ್ನು ತಡೆಯಲಾರವು. ಮಿತ್ರಾವರುಣರ ಸೀಮೆಯ ಎಲ್ಲೆಕಟ್ಟನ್ನು ಆಕಾಶ ಮತ್ತು ನದಿಗಳು ಕೂಡ ತಲಪಿಲ್ಲ. ಸಮಸ್ತವೂ ವರುಣನಲ್ಲಿಯೇ ಅಡಗಿವೆ ಎಲ್ಲಾ ಪ್ರಾಣಿಗಳ ವಸತಿಗಳೂ, ಮೂರು ಸ್ವರ್ಗಗಳೂ ಮೂರು ಭೂಲೋಕಗಳೂ ಅವನಲ್ಲಿಯೇ ಸ್ಥಾಪಿತವಾಗಿವೆ. ವರುಣನು ಸರ್ವಜ್ಞನು. ಆಕಾಶದಲ್ಲಿ ಪಕ್ಷಿಗಳ ಹಾರಾಟ, ಸಮುದ್ರದಲ್ಲಿ ನಾವೆಗಳ ಸಂಚಾರ, ದೂರಗಾಮಿಯಾದ ವಾಯುವಿನ ಗತಿ ಇವೆಲ್ಲವೂ ಅವನಿಗೆ ತಿಳಿದಿದೆ. ಹಿಂದೆ ಕಳೆದುಹೋದ ಅಥವಾ ಮುಂದೆ ಬರುವ ಎಲ್ಲಾ ಸಂಗತಿಗಳನ್ನೂ ಅವನು ನೋಡುತ್ತಾನೆ ಮನುಷ್ಯರ ಸತ್ಯಾಸತ್ಯಕರ್ಮಗಳ ಸಾಕ್ಷಿಯಾಗಿದ್ದಾನೆ ಪ್ರತಿಯೊಬ್ಬ ಮನುಷ್ಯನು ಮಾಡುವ ಕಾರ್ಯಗಳು, ಯೋಚನೆಗಳು, ಉಪಾಯಗಳು ಎಲ್ಲವೂ ವರುಣನಿಗೆ ತಿಳಿಯುತ್ತವೆ. ಸ್ವರ್ಗ ಮತ್ತು ಭೂಲೋಕಗಳಲ್ಲಿ ಮತ್ತು ಅವುಗಳಿಂದಾಚೆ ಇರುವುದೆಲ್ಲವನ್ನೂ ಅವನು ಗ್ರಹಿಸಬಲ್ಲನು. ಆಕಾಶದಾಚೆ ಎಷ್ಟೋದೂರ ಓಡಿಹೋದರೂ ಯಾರೂ ವರುಣನ ದೃಷ್ಟಿಪಥವನ್ನು ಬಿಟ್ಟುಹೋಗಲಾಗುವುದಿಲ್ಲ.

ನೀತಿನಿಯಾಮಕನಾದುದರಿಂದ ವರುಣನಿಗೆ ಪಾಪವೆಂದರೆ ಬಹಳ ಕೋಪ ಬರುತ್ತದೆ. ಅವನ ನಿಯಮಗಳನ್ನುಲ್ಲಂಘಿಸಿದರೂ ಕೋಪ. ಇವೆರಡಕ್ಕೂ ಅವನು ಬಹಳ ಕ್ರೂರಶಿಕ್ಷೆಯನ್ನು ವಿಧಿಸುತ್ತಾನೆ. ಪಾಪಿಗಳನ್ನು ಬಂಧಿ

ಸುವ ವರುಣನ ಪಾಶವು ಋ. ಸಂ. ೧-೨೪-೧೫ , ೧-೨೫ ೧೧ , ೬-೭೪ ೪ , ೧೦-೮೫-೨೪ ಮೊದಲಾದ ಋಕ್ಕುಗಳಲ್ಲಿ ಉಕ್ತವಾಗಿದೆ. ಆ ಪಾಶವು ಅನೃತವಾದಿಯನ್ನು ಬಂಧಿಸುತ್ತದೆ, ಸತ್ಯವಾದಿಯನ್ನು ಬಿಟ್ಟುಬಿಡುತ್ತದೆ.

**ಯುವೋ ರಾಷ್ಟ್ರಂ ಬೃಹದಿನ್ವತಿ ದ್ಯೌರ್ಯೌ ಸೇತೃಭಿರರಜ್ಜುಭಿಃ ಸಿನೀಥಃ |**
**ಪರಿ ನೋ ಹೇಳೋ ವರುಣಸ್ಯ ವೃಜ್ಯಾ ಉರುಂ ನ ಇಂದ್ರಃ ಕೃಣವದು ಲೋಕಂ ||**

(ಋ ಸಂ ೭-೮೪-೨)

ಎಂಬ ಋಕ್ಕಿನಲ್ಲಿ ಇಂದ್ರನೊಡನಿರುವ ವರುಣನು ಹಗ್ಗವಿಲ್ಲದ ಬಂಧನಗಳಿಂದ ಕಟ್ಟುತ್ತಾನೆ ಎಂದು ಹೇಳಿದೆ ಈ ಪಾಶವೆಂಬ ಶಬ್ದವು ಋಗ್ವೇದದಲ್ಲಿ ಅಗ್ನಿದೇವತಾಕವಾದ ಮಂತ್ರಗಳಲ್ಲಿ ಒಂದುಕಡೆ ಮಾತ್ರ ಬಂದಿದೆ ಅದೂ, ಅವನ ಭಕ್ತರನ್ನು ಬಂಧಿಸಿರುವ ಪಾಶವನ್ನು ಬಿಡಿಸು ಎಂದು ಪ್ರಾರ್ಥಿಸುವ ಸಂದರ್ಭದಲ್ಲಿ ಆದ್ದರಿಂದ ಈ ಪಾಶಬಂಧನ, ಪಾಶವಿಮೋಚನ ಎಂಬ ಕಾರ್ಯಗಳು ವರುಣನಿಗೆ ಮಾತ್ರ ಸಂಬಂಧಿಸಿದ್ದೆಂದು ಹೇಳಬಹುದು ಮಿತ್ರಸಹಿತನಾದ ವರುಣನು ಅನೃತವನ್ನು ಓಡಿಸುವವನು, ದ್ವೇಷಿಸುವವನು ಮತ್ತು ಶಿಕ್ಷಿಸುವವನು. ಮಿತ್ರಾವರುಣರು ತಮ್ಮನ್ನು ಸ್ತುತಿಸದವರ ವಿಷಯದಲ್ಲಿಯೂ, ತಾತ್ಸಾರದಿಂದಿರುವವರನ್ನೂ ಶಿಕ್ಷಿಸುತ್ತಾರೆ ಆದರೆ ವರುಣನು ಪಶ್ಚಾತ್ತಾಪಪಡುವವರನ್ನು ಮನ್ನಿಸುತ್ತಾನೆ, ಪಾಶದಿಂದ ಬಿಚ್ಚುತಾನೆ. ಮತ್ತು ಪಾಪಪರಿಹಾರಮಾಡುತ್ತಾನೆ ಸ್ವತಃ ಮಾಡಿದ ಪಾಪದಿಂದ ಮಾತ್ರವಲ್ಲ, ಅವನ ಪೂರ್ವಿಕರು ಮಾಡಿದ ಪಾಪದಿಂದಲೂ ಮನುಷ್ಯನನ್ನು ಬಿಡುಗಡೆಮಾಡುತ್ತಾನೆ ತನ್ನಿಂದ ವಿಧಿಸಲ್ಪಟ್ಟ ನಿಯಮಗಳನ್ನೇ ಪ್ರತಿನಿತ್ಯವೂ ಉಲ್ಲಂಘಿಸಿ ಅನಂತರ ಪಶ್ಚಾತ್ತಾಪಪಡುವವರನ್ನು ರಕ್ಷಿಸುತ್ತಾನೆ ಮತ್ತು ತನ್ನ ಆಜ್ಞೆಗಳನ್ನು ವಿಸ್ಮೃತಿಯಿಂದ ಉಲ್ಲಂಘಿಸಿದವರಲ್ಲಿ ಕನಿಕರವನ್ನು ತೋರುತ್ತಾನೆ ವರುಣನಲ್ಲಿ ನೂರಾರು, ಸಾವಿರಾರು ಔಷಧಗಳಿವೆ. ಅವನು ಮೃತ್ಯುವನ್ನು ದೂರ ಓಡಿಸುತ್ತಾನೆ, ಮತ್ತು ಪಾಪವನ್ನು ಪರಿಹಾರಮಾಡುತ್ತಾನೆ. ಅವನು ಪ್ರಾಣಾಪಹಾರ ಮಾಡಬಲ್ಲನು, ಜೀವದಾನವನ್ನೂ ಮಾಡಬಲ್ಲನು. ಇತ್ಯಾದಿಯಾಗಿ ವರುಣನ ಗುಣವರ್ಣನೆಯು ಅನೇಕ ಋಕ್ಕುಗಳಲ್ಲಿವೆ.

---

## ಅರವತ್ತನೆಯ ಸೂಕ್ತವು

ಸಾಯಣಭಾಷ್ಯಂ

**ತತ್ರ ಯದದ್ಯ ಸೂರ್ಯೇತಿ ದ್ವಾದಶರ್ಚಂ ಪಂಚಮಂ ಸೂಕ್ತಂ । ಅತ್ರಾನುಕ್ರಮಣಿಕಾ । ಯದದ್ಯ ಮೈತ್ರಾವರುಣಂ ತು ವೈ ಸೌರ್ಯಾದ್ಯೇತಿ । ಮಂಡಲದ್ರಷ್ಟಾ ವಸಿಷ್ಠ ಋಷಿಃ । ಅನುಕ್ತತ್ವಾತ್ತ್ರಿಷ್ಟುಪ್ ಛಂದಃ । ತು ವಾ ಇತ್ಯುಕ್ತತ್ವಾದೇತದಾದೀನಿ ಸಪ್ತ ಸೂಕ್ತಾನಿ ಮಿತ್ರಾವರುಣದೇವತ್ಯಾನಿ । ಆದ್ಯಾ ಸೂರ್ಯದೇವತ್ಯಾ ॥ ವಿನಿಯೋಗೋ ಲೈಂಗಿಕಃ ॥**

**ಅನುವಾದವು— ಯದದ್ಯ ಸೂರ್ಯ** ಎಂಬ ಈ ಸೂಕ್ತವು ಏಳನೆಯ ಮಂಡಲದ ನಾಲ್ಕನೆಯ ಅನುವಾಕವಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವುವು ಅನುಕ್ರಮಣಿಕೆಯಲ್ಲಿ **ಯದದ್ಯ ಮೈತ್ರಾವರುಣಂ ತು ವೈ ಸೌರ್ಯಾದ್ಯಾ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಈ ಮಂಡಲದ್ರಷ್ಟೃವಾದ ವಸಿಷ್ಠನೇ ಋಷಿಯು ಇಲ್ಲಿಂದ ಮುಂದಿನ ಏಳು ಸೂಕ್ತಗಳಲ್ಲಿ ಮೊದಲಿನ ಕೆಲವು ಋಕ್ಕುಗಳು ಸೂರ್ಯದೇವತಾಕವಾಗಿಯೂ ಬಳಿಕ ಉಳಿದ ಋಕ್ಕುಗಳು ಮಿತ್ರಾವರುಣದೇವತಾಕವಾಗಿಯೂ ಇರುವುವು. ತ್ರಿಷ್ಟುಪ್ ಛಂದಸ್ಸು. ವಿನಿಯೋಗವು ಲೈಂಗಿಕವು.

# ಸೂಕ್ತ—೬೦

ಮಂಡಲ—೭ || ಅನುವಾಕ—೪ || ಸೂಕ್ತ—೬೦ ||
ಅಷ್ಟಕ—೫ || ಅಧ್ಯಾಯ—೫ || ವರ್ಗ—೧, ೨ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ||
ಋಷಿಃ—ವಸಿಷ್ಠಃ ||
ದೇವತಾ— ೧ ಸೂರ್ಯಃ । ೨–೧೨. ಮಿತ್ರಾವರುಣೌ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

ಯದದ್ಯ ಸೂರ್ಯ ಬ್ರವೋಽನಾಗಾ ಉದ್ಯನ್ಮಿತ್ರಾಯ ವರುಣಾಯ ಸತ್ಯಂ ।
ವಯಂ ದೇವತ್ರಾದಿತೇ ಸ್ಯಾಮ ತವ ಪ್ರಿಯಾಸೋ ಅರ್ಯಮನ್ಗೃಣಂತಃ ||

ಪದಪಾಠಃ

ಯತ್ । ಅದ್ಯ । ಸೂರ್ಯ । ಬ್ರವಃ । ಅನಾಗಾಃ । ಉತ್ಽಯನ್ । ಮಿತ್ರಾಯ । ವರುಣಾಯ । ಸತ್ಯಂ ।

ವಯಂ । ದೇವಽತ್ರಾ । ಅದಿತೇ । ಸ್ಯಾಮ । ತವ । ಪ್ರಿಯಾಸಃ । ಅರ್ಯಮನ್ । ಗೃಣಂತಃ || ೧ ||

ಸಾಯಣಭಾಷ್ಯಂ

ಹೇ ಸೂರ್ಯ ಸರ್ವಸ್ಯ ಪ್ರೇರಕೈತನ್ನಾಮಕ ದೇವ ಉದ್ಯನ್ನುದಯಂಸ್ತ್ವಂ ಯದ್ಯದ್ಯದ್ಯಸ್ಮಿನ್ನನುಷ್ಠಾನಕಾಲೇಽಸ್ಮಾನ್ಪ್ರವಃ ಬ್ರೂಯಾಃ । ಕಿಮಿತಿ । ಅನಾಗಾ ಅನಾಗಸ ಇತಿ । ಏತೇಽಪಾಪಾ ಇತಿ ಯದಿ ದೇವೇಷು ಮಧ್ಯೇ ಬ್ರೂಯಾಸ್ತರ್ಹಿ ವಯಂ ಹೇ ಅದಿತೇ ಅದೀನ ದೇವ ದೇವತ್ರಾ ದೇವೇಷು ದೇವಾನಾಂ ಮಧ್ಯೇ ಮಿತ್ರಾಯ ವರುಣಾಯ ಚ ಸತ್ಯಮವಿತಥಂ ಸ್ಯಾಮ । ಅನಾಗಸೋ ಭವೇಮ । ಕಿಂಚ ಹೇ ಅರ್ಯಮನ್ ದಾತಸ್ತ್ವಾಂ ಗೃಣಂತಃ ಸ್ತುವಂತಸ್ತವ ಪ್ರಿಯಾಸಃ ಪ್ರಿಯಾಃ ಸ್ಯಾಮ । ತ್ವತ್ಪ್ರೇಮವಿಷಯಾ ಭವೇಮ । ಯದ್ವಾ । ಉತ್ತರಾರ್ಧ ಏಕಂ ವಾಕ್ಯಂ । ಹೇ ಅದಿತೇ ಹೇ ಅರ್ಯಮನ್ನುಕ್ತಲಕ್ಷಣ ದೇವ ವಯಂ ದೇವೇಷು ಮಧ್ಯೇ ತ್ವಾಂ ಗೃಣಂತಸ್ತವೈವ ಪ್ರಿಯಾಃ ಸ್ಯಾಮ । ಯದಿ ಮಾಂ ದೇವೇಷ್ವಪಾಪಂ ಬ್ರೂಯಾಸ್ತರ್ಹಿ ತ್ವೈರಯಮಪಪರಾಧೀತ್ಯನುಗೃಹೀತಸ್ತ್ವಾಂ ಸ್ತುತ್ವಾ ತವ ಪ್ರಿಯೋ ಭವೇಯಮಿತ್ಯರ್ಥಃ ||

ಪ್ರತಿಪದಾರ್ಥ

ಅದಿತೇ—ಪೂರ್ಣಾತ್ಮನಾದ । ಸೂರ್ಯ—ಎಲೈ ಸೂರ್ಯನೇ, । ಉದ್ಯನ್—ಉದಯವನ್ನು ಹೊಂದುವ ನೀನು । ಅದ್ಯ—ಈ ಯಾಗಕಾಲದಲ್ಲಿ । ಅನಾಗಾಃ—(ಈ ಯಜಮಾನರು) ಪಾಪರಹಿತರು ಎಂಬುದಾಗಿ । ಮಿತ್ರಾಯ—ಮಿತ್ರನಿಗೂ । ವರುಣಾಯ—ವರುಣನಿಗೂ । ಬ್ರವಃ—ಹೇಳಿದ್ದೇ ಆದರೆ ।(ತರ್ಹಿ—ಆಗ) ವಯಂ—ನಾವು । ದೇವತ್ರಾ—ದೇವತೆಗಳ ಸನ್ನಿಧಿಯಲ್ಲಿ । ಸತ್ಯಂ—ಸತ್ಯಾತ್ಮಕವಾದ ವ್ಯವಹಾರವುಳ್ಳವರಾಗಿ । ಸ್ಯಾಮ—ಪರಿಗಣಿತರಾಗುತ್ತೇವೆ. । ಅರ್ಯಮನ್—ಎಲೈ ಅರ್ಯಮದೇವನೇ, । ಗೃಣಂತಃ—ನಿನ್ನನ್ನು ಸ್ತುತಿಸುವ ನಾವು । ತವ—ನಿನಗೆ । ಪ್ರಿಯಾಸಃ—ಪ್ರೀತಿಪಾತ್ರರಾಗಿರುವಂತೆ ಆಗಲಿ.

### ಭಾವಾರ್ಥ

ಪೂರ್ಣಾತ್ಮನಾದ ಎಲೈ ಸೂರ್ಯನೇ, ಉದಯವನ್ನು ಹೊಂದುವ ನೀನು ಈ ಯಾಗಕಾಲದಲ್ಲಿ "ಈ ಯಜಮಾನರು ಪಾಪರಹಿತರು" ಎಂಬುದಾಗಿ ಮಿತ್ರನಿಗೂ ವರುಣನಿಗೂ ತಿಳಿಸಿದ್ದೇ ಆದರೆ, ಆಗ ನಾವು ದೇವತೆಗಳ ಸನ್ನಿಧಿಯಲ್ಲಿ ಸತ್ಯಾತ್ಮಕವಾದ ವ್ಯವಹಾರವುಳ್ಳವರಾಗಿ ಪರಿಗಣಿತರಾಗುತ್ತೇವೆ. ಎಲೈ ಆರ್ಯಮನೇ, ನಿನ್ನನ್ನು ಸ್ತುತಿಸುವ ನಾವು ನಿನಗೆ ಪ್ರೀತಿಪಾತ್ರರಾಗಿರುವಂತೆ ಆಗಲಿ

### English Translation

Surya, when rising to-day, declare the truth to Mitra and Varuna, that we are void of sin : may we, Aditi, be (approved of) among the gods ; praising you, Aryaman, may we be dear to you.

### ಸಂಹಿತಾಪಾಠಃ

ಏಷ ಸ್ಯ ಮಿತ್ರಾವರುಣಾ ನೃಚಕ್ಷಾ ಉಭೇ ಉದೇತಿ ಸೂರ್ಯೋ ಅಭಿ ಜ್ಮನ್ ।
ವಿಶ್ವಸ್ಯ ಸ್ಥಾತುರ್ಜಗತಶ್ಚ ಗೋಪಾ ಋಜು ಮರ್ತೇಷು ವೃಜಿನಾ ಚ ಪಶ್ಯನ್॥

### ಪದಪಾಠಃ

ಏಷಃ । ಸ್ಯಃ । ಮಿತ್ರಾವರುಣಾ । ನೃಽಚಕ್ಷಾಃ । ಉಭೇ ಇತಿ । ಉತ್ । ಏತಿ ।ಸೂರ್ಯಃ । ಅಭಿ । ಜ್ಮನ್
ವಿಶ್ವಸ್ಯ । ಸ್ಥಾತುಃ । ಜಗತಃ । ಚ । ಗೋಪಾಃ । ಋಜು । ಮರ್ತೇಷು । ವೃಜಿನಾ । ಚ । ಪಶ್ಯನ್ ॥ ೨ ॥

### ಸಾಯಣಭಾಷ್ಯಂ

ಹೇ ಮಿತ್ರಾವರುಣಾ ಏಷ ಪುರತೋ ದೃಶ್ಯಮಾನಃ ಸ್ಯ ಸ ಸರ್ವೈಃ ಸ್ತುತ್ಯತ್ವೇನ ಪ್ರಸಿದ್ಧೋ ನೃಚಕ್ಷಾ ನೃಣಾಂ ಮನುಷ್ಯಾಣಾಂ ದ್ರಷ್ಟಾ ಸೂರ್ಯ ಉಭೇ ದ್ಯಾವಾಪೃಥಿವ್ಯಾವಭ್ಯಭಿಲಕ್ಷ್ಯೋದೇತಿ ಜ್ಮನ್ನಂತರಿಕ್ಷೇ ಗಚ್ಛನ್ । ಸ ವಿಶೇಷ್ಯತೇ । ವಿಶ್ವಸ್ಯ ಸರ್ವಸ್ಯ ಸ್ಥಾತುಃ ಸ್ಥಾವರಸ್ಯ ಜಗತೋ ಜಂಗಮಸ್ಯ ಚ ಗೋಪಾ ಗೋಪಾಯಿತಾ । ಕಿಂ ಕುರ್ವನ್ । ಮರ್ತೇಷು ಮನುಷ್ಯೇಷು ಸ್ಥಿತಾನ್ಯೃಜೂನಿ ಸುಕೃತಾನಿ ವೃಜಿನಾನಿ ಪಾಪಾನಿ ಚ ಪಶ್ಯನ್ ॥

### ಪ್ರತಿಪದಾರ್ಥ

**ಮಿತ್ರಾವರುಣಾ**—ಎಲೈ ಮಿತ್ರಾವರುಣರೇ. । **ಸ್ಥಾತುಃ**— ಸ್ಥಾವರಾತ್ಮಕವೂ । **ಜಗತಃ**—ಜಂಗಮಾತ್ಮಕವೂ ಆದ । **ವಿಶ್ವಸ್ಯ ಚ**—ಸಕಲ ಜಗತ್ತಿಗೂ । **ಗೋಪಾಃ**—ರಕ್ಷಕನೂ । **ಏಷಃ**—ಮುಂಭಾಗದಲ್ಲಿ ಗೋಚರಿಸುವವನೂ । **ಸ್ಯಃ**—ಪ್ರಸಿದ್ಧನೂ । **ನೃಚಕ್ಷಾಃ**—ಮಾನವರ ವ್ಯವಹಾರಗಳನ್ನೆಲ್ಲಾ ನೋಡತಕ್ಕವನೂ ಆದ । **ಸೂರ್ಯಃ**—ಸೂರ್ಯನು । **ಮರ್ತೇಷು**— ಮಾನವರಲ್ಲಿರುವ । **ಋಜು**—ಸತ್ಯಜೀವನವನ್ನೂ । **ವೃಜಿನಾ ಚ**—ಅಸತ್ಯಜೀವನವನ್ನೂ । **ಪಶ್ಯನ್**—ನೋಡುತ್ತಲೂ । **ಜ್ಮನ್**—ಅಂತರಿಕ್ಷದಲ್ಲಿ ಸಂಚರಿಸುತ್ತಲೂ । **ಉಭೇ ಅಭಿ**—ದ್ಯಾವಾಪೃಥಿವಿಗಳಿಗೆ ಅಭಿಮುಖನಾಗಿ ।**ಉದೇತಿ**— ಉದಯಿಸುತ್ತಾನೆ.

ಭಾವಾರ್ಥ

ಎಲೈ ಮಿತ್ರಾವರುಣರೇ, ಸ್ಥಾವರಾತ್ಮಕವೂ, ಜಂಗಮಾತ್ಮಕವೂ ಆದ ಸಕಲ ಜಗತ್ತಿಗೂ ರಕ್ಷಕನೂ, ಜಗತ್ತಿಗೆಲ್ಲಾ ಗೋಚರಿಸುವವನೂ, ಮಾನವರ ವ್ಯವಹಾರಗಳನ್ನೆಲ್ಲಾ ನೋಡತಕ್ಕವನೂ ಆದ ಸೂರ್ಯನು ಮಾನವರಲ್ಲಿರುವ ಸತ್ಯಜೀವನವನ್ನೂ, ಅಸತ್ಯಜೀವನವನ್ನೂ ನೋಡುತ್ತಲೂ ಅಂತರಿಕ್ಷದಲ್ಲಿ ಸಂಚರಿಸುತ್ತಲೂ ದ್ಯಾವಾಪೃಥಿವಿಗಳಿಗೆ ಅಭಿಮುಖನಾಗಿ ಉದಯಿಸುತ್ತಾನೆ.

English Translation

This Surya, the beholder of man, rises, Mitra and Varuna, upon both (heaven and earth), moving (in the sky): he who is the preserver of all that is stationary or meveable, witnessing the upright acts or the sins of mortals.

ಸಂಹಿತಾಪಾಠಃ

ಅಯುಕ್ತ ಸಪ್ತ ಹರಿತಃ ಸಧಸ್ಥಾದ್ಯಾ ಈಂ ವಹಂತಿ ಸೂರ್ಯಂ ಘೃತಾಚೀಃ
ಧಾಮಾನಿ ಮಿತ್ರಾವರುಣಾ ಯುವಾಕುಃ ಸಂ ಯೋ ಯೂಥೇವ ಜನಿಮಾನಿ ಚಷ್ಟೇ ॥ ೩ ॥

ಪದಪಾಠಃ

ಅಯುಕ್ತ । ಸಪ್ತ । ಹರಿತಃ । ಸಧಽಸ್ಥಾತ್ । ಯಾಃ । ಈಂ । ವಹಂತಿ । ಸೂರ್ಯಂ । ಘೃತಾಚೀಃ ।
ಧಾಮಾನಿ । ಮಿತ್ರಾವರುಣಾ । ಯುವಾಕುಃ । ಸಂ । ಯಃ । ಯೂಥಾಽಇವ । ಜನಿಮಾನಿ । ಚಷ್ಟೇ ॥ ೩ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣಾ ಮಿತ್ರಾವರುಣೌ ಯುವಯೋರಾಗಮನಾಯ ಸಧಸ್ಥಾತ್ಸಹಸ್ಥಾನಾದಂತರಿಕ್ಷಾದಂತರಿಕ್ಷೇ ಸಪ್ತ ಸರ್ಪಣಸ್ವಭಾವಾನೇತತ್ಸಂಖ್ಯಾಕಾನ್ವಾ ಹರಿತೋ ಹರಿದ್ವರ್ಣಾನಶ್ವಾನಯುಕ್ತ । ಯುಕ್ತವಾನ್ರಥೇ । ಹರಿತ ಆದಿತ್ಯಸ್ಯೇತಿ ಹಿ ನಿರುಕ್ತಂ । ಯಾ ಹರಿತ ಈಮೇನಂ ಸೂರ್ಯಂ ದೇವಂ ಘೃತಾಚೀರ್ಘೃತಾಂಚನಾ ಉದಕವತ್ಯಃ । ಉದಕಪ್ರದಾ ಇತ್ಯರ್ಥಃ । ತಾದೃಶ್ಯಃ ಸತ್ಯೋ ವಹಂತಿ ತಾ ಅಯುಕ್ತ । ಅಥೋದಿತಃ ಸನ್ಧಾಮಾನಿ ಸ್ಥಾನಾನಿ ಲೋಕಾಞ್ಜನಿಮಾನಿ ಜನ್ಮಾನಿ । ಜನ್ಮಭಾಜಃ ಪ್ರಾಣಿನ ಇತ್ಯರ್ಥಃ । ತಾಂಶ್ಚ ಯುವಾಕುರ್ಯುವಾಂ ಕಾಮಯಮಾನೋ ಯೋ ದೇವಃ ಸಂಚಷ್ಟೇ ಸಮ್ಯಕ್ ಪಶ್ಯತಿ ಯೂಥೇವ ಗೋಯೂಥಾನೀವ ಯೂಥಪಾಃ । ಸ ಯಥಾ ಸರ್ವಂ ಯೂಥಂ ತದವಾಂತರಗೋವ್ಯಕ್ತಿಂ ಚ ಸಮ್ಯಕ್ ಪಶ್ಯತಿ ತದ್ವಲ್ಲೋಕಾನ್ಪ್ರಾಣಿನಶ್ಚ ಪಶ್ಯತಿ ॥

ಪ್ರತಿಪದಾರ್ಥ

ಮಿತ್ರಾವರುಣಾ—ಎಲೈ ಮಿತ್ರಾವರುಣರೇ, । ಯಾಃ—ಯಾವ ಅಶ್ವಗಳು । ಘೃತಾಚೀ—ಉದಕಭರಿತಗಳಾಗಿ । ಈಂ ಸೂರ್ಯಂ—ಈ ಸೂರ್ಯದೇವನನ್ನು । ವಹಂತಿ—ವಹಿಸುತ್ತವೆಯೋ ಅಂತಹ । ಸಪ್ತ—ಸಪ್ತ

ಸಂಖ್ಯಾಕವೂ | **ಹರಿತಃ**—ಪಚ್ಚೆವರ್ಣವುಳ್ಳವೂ ಆದ ಅಶ್ವಗಳನ್ನು | **ಸಧಸ್ಥಾತ್**—ನಿಮಗೆಲ್ಲಾ ಸಮಾನಸ್ಥಾನವಾದ ಅಂತರಿಕ್ಷದಲ್ಲಿ | **ಅಯುಕ್ತ**—ಸೂರ್ಯನು ತನ್ನ ರಥಕ್ಕೆ ಯೋಜಿಸಿದ್ದಾನೆ. | **ಯುವಾಕುಃ**—ನಿಮ್ಮ ಸಂಗವನ್ನಪೇಕ್ಷಿಸುವ | **ಯಃ**—ಯಾವ ಅದೇ ಸೂರ್ಯನು | **ಯೂಥೇವ**—ಗೋಪಾಲಕನು ತನ್ನ ಗೋಸಮೂಹಗಳನ್ನೆಲ್ಲಾ ವೀಕ್ಷಿಸುವಂತೆ | **ಧಾಮಾನಿ**--ಸಕಲ ಲೋಕಗಳನ್ನೂ | **ಜನಿಮಾನಿ**—ಸಕಲ ಪ್ರಾಣಿಗಳನ್ನೂ | **ಸಂ ಚಷ್ಟೇ**—ಸೂಕ್ಷ್ಮವಾಗಿ ನೋಡುತ್ತಾನೆ.

ಭಾವಾರ್ಥ

ಎಲೈ ಮಿತ್ರಾವರುಣರೇ, ಯಾವ ಅಶ್ವಗಳು ಉದಕಭರಿತಗಳಾಗಿ ಈ ಸೂರ್ಯದೇವನನ್ನು ವಹಿಸುತ್ತವೆಯೋ ಅಂತಹ ಸಪ್ತಸಂಖ್ಯಾಕವೂ ಪಚ್ಚೆವರ್ಣವುಳ್ಳವೂ ಆದ ಅಶ್ವಗಳನ್ನು ನಿಮಗೆಲ್ಲ ಸಮಾನಸ್ಥಾನವಾದ ಅಂತರಿಕ್ಷದಲ್ಲಿ ಸೂರ್ಯನು ತನ್ನ ರಥಕ್ಕೆ ಯೋಜಿಸಿದ್ದಾನೆ ನಿಮ್ಮ ಸಂಗವನ್ನಪೇಕ್ಷಿಸುವ ಯಾವ ಅದೇ ಸೂರ್ಯನು, ಗೋಪಾಲಕನು ತನ್ನ ಗೋಸಮೂಹಗಳನ್ನೆಲ್ಲ ವೀಕ್ಷಿಸುವಂತೆ ಸಕಲ ಲೋಕಗಳನ್ನೂ ಸಕಲ ಪ್ರಾಣಿಗಳನ್ನೂ ಸೂಕ್ಷ್ಮವಾಗಿ ನೋಡುತ್ತಾನೆ

English Translation

He has harnessed his seven bay steeds Mitra and Varuna, (to come from your common dwelling-place, (the firmament). the horses that, shedding water convey that Surya who, friendly to you both, (contemplates all) regions, and looks carefully upon living creatures as (a herdsman) upon the herd.

ಸಂಹಿತಾಪಾಠಃ

ಉದ್ವಾಂ ಪೃಕ್ಷಾಸೋ ಮಧುಮಂತೋ ಅಸ್ಥುರಾ ಸೂರ್ಯೋ ಅರುಹಚ್ಛುಕ್ರಮರ್ಣಃ ।
ಯಸ್ಮಾ ಆದಿತ್ಯಾ ಅಧ್ವನೋ ರದಂತಿ ಮಿತ್ರೋ ಅರ್ಯಮಾ ವರುಣಃ ಸಜೋಷಾಃ ॥ ೪ ॥

ಪದಪಾಠಃ

ಉತ್ | ವಾಂ | ಪೃಕ್ಷಾಸಃ | ಮಧುऽಮಂತಃ | ಅಸ್ಥುಃ | ಆ | ಸೂರ್ಯಃ | ಅರುಹತ್ | ಶುಕ್ರಂ | ಅರ್ಣಃ
ಯಸ್ಮೈ | ಆದಿತ್ಯಾಃ | ಅಧ್ವನಃ | ರದಂತಿ | ಮಿತ್ರಃ | ಅರ್ಯಮಾ | ವರುಣಃ | ಸऽಜೋಷಾಃ ॥ ೪ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ವಾಂ ಯುವಯೋರರ್ಥಾಯ ಪೃಕ್ಷಾಸೋऽನ್ನಾನಿ ಚರುಪುರೋಡಾಶಾದೀನಿ ಮಧುಮಂತೋ ಮಾಧುರ್ಯೋಪೇತಾನಿ ತತ್ಸಾಧನಾನ್ಯೋಷಧ್ಯಾದೀನಿ ವೋದಸ್ಥುಃ | ಸಂಪಾದಿ-

ಶಾಸ್ಯಾಸನ್ । ಸೂರ್ಯಶ್ಚ ಶುಕ್ರಂ ದೀಪ್ತಮರ್ಣೋಽರ್ಣವಮಂತರಿಕ್ಷಮಾರುಹತ್ । ಆರೋಹತಿ । ಯಸ್ಮೈ ಸೂರ್ಯಾಯ ತದ್ಗಮನಾರ್ಥಮಾದಿತ್ಯಾ ಅದಿತೇಃ ಪುತ್ರಾ ದೇವಾ ಅಧ್ವನೋ ಮಾರ್ಗಾನ್ರದಂತಿ ವಿಲಿಖಂತಿ ಸಾಧಯಂತಿ । ಕೇ ತೇ । ಮಿತ್ರೋಽರ್ಯಮಾ ವರುಣಶ್ಚೈತೇ ತ್ರಯೋಽಪಿ ದೇವಾಃ ಸಜೋಷಸಃ ಸಮಾನಪ್ರೀತಯಃ ಸಂತಃ । ಸ ದೇವ ಆರುಹದಿತಿ ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) **ವಾಂ**—ನಿಮ್ಮನ್ನುದ್ದೇಶಿಸಿ । **ಪೃಕ್ಷಾಸಃ**—ಚರುಪುರೋಡಾಶಾದ್ಯನ್ನಗಳು । **ಮಧುಮಂತಃ**—ಮಾಧುರ್ಯದಿಂದ ಕೂಡಿ । **ಉದಸ್ಥುಃ**—ಸಂಪಾದಿತವಾಗಿವೆ. । **ಯಸ್ಮೈ**—ಯಾವ ಸೂರ್ಯನಿಗಾಗಿ । **ಸಜೋಷಾಃ**—ಸಮಾನಪ್ರೀತಿಯುಳ್ಳವರೂ । **ಆದಿತ್ಯಾಃ**—ಅದಿತಿಪುತ್ರರೂ ಆದ । **ಮಿತ್ರಃ**—ಮಿತ್ರನೂ। **ಅರ್ಯಮಾ**—ಅರ್ಯಮನೂ । **ವರುಣಃ**—ವರುಣನೂ । **ಅಧ್ವನಃ**—ಮಾರ್ಗಗಳನ್ನು । **ರದಂತಿ**—ಬಿಡಿಸಿ ಸಿದ್ಧಪಡಿಸುವರೋ । **ಸೂರ್ಯಃ**—ಆ ಸೂರ್ಯನು । **ಶುಕ್ರಂ**—ಪ್ರಕಾಶಮಾನವಾದ । **ಅರ್ಣಃ**—ಅಂತರಿಕ್ಷವನ್ನು । **ಆರುಹತ್**—ಹತ್ತಿದ್ದಾನೆ.

ಭಾವಾರ್ಥ

ಎಲೈ ಮಿತ್ರಾವರುಣರೇ, ನಿಮ್ಮನ್ನುದ್ದೇಶಿಸಿ ಮಾಧುರ್ಯದಿಂದ ಕೂಡಿದ ಚರುಪುರೋಡಾಶಾದ್ಯನ್ನಗಳು ಸಂಪಾದಿತವಾಗಿವೆ. ಯಾವ ಸೂರ್ಯನಿಗಾಗಿ ಅದಿತಿಪುತ್ರರೂ ಸಮಾನಪ್ರೀತಿಯುಳ್ಳವರೂ ಆದ ಮಿತ್ರ, ಅರ್ಯಮ, ಮತ್ತು ವರುಣರು ಮಾರ್ಗಗಳನ್ನು ಬಿಡಿಸಿ ಸಿದ್ಧಪಡಿಸುವರೋ ಆ ಸೂರ್ಯನು ಪ್ರಕಾಶಮಾನವಾದ ಅಂತರಿಕ್ಷವನ್ನು ಹತ್ತಿದ್ದಾನೆ.

English Translation.

For you (Mitra and Varuna), the sweet-flavoured viands have been prepared : the sun has ascended the shining firmament, for whom the Adityas and the consentient Mitra, Varuna, Aryaman make ready the paths.

ಸಂಹಿತಾಪಾಠಃ

ಇಮೇ ಚೇತಾರೋ ಅನೃತಸ್ಯ ಭೂರೇರ್ಮಿತ್ರೋ ಅರ್ಯಮಾ ವರುಣೋ ಹಿ ಸಂತಿ ।

ಇಮ ಋತಸ್ಯ ವಾವೃಧುರ್ದುರೋಣೇ ಶಗ್ಮಾಸಃ ಪುತ್ರಾ ಅದಿತೇರದಬ್ಧಾಃ ॥

ಪದಪಾಠಃ

ಇಮೇ । ಚೇತಾರಃ । ಅನೃತಸ್ಯ । ಭೂರೇಃ । ಮಿತ್ರಃ । ಅರ್ಯಮಾ । ವರುಣಃ । ಹಿ । ಸಂತಿ ।

ಇಮೇ । ಋತಸ್ಯ । ವವೃಧುಃ । ದುರೋಣೇ । ಶಗ್ಮಾಸಃ । ಪುತ್ರಾಃ । ಅದಿತೇಃ । ಅದಬ್ಧಾಃ ॥ ೫ ॥

ಸಾಯಣಭಾಷ್ಯಂ

ಇಮೇ ಮಿತ್ರೋಽರ್ಯಮಾ ವರುಣಶ್ಚ ತ್ರಯೋಽಪ್ಯನೃತಸ್ಯ ಪಾಪಸ್ಯ ಭೂರೇಃ ಪ್ರಭೂತಸ್ಯ ಚೇತಾರೋ ಹಂತಾರಃ ಸಂತಿ । ಭವಂತಿ ಹಿ । ಇಮೇ ಮಿತ್ರಾದಯ ಋತಸ್ಯ ಯಜ್ಞಸ್ಯ ದುರೋಣೇ ಗೃಹೇ ವವೃಧುಃ । ವರ್ಧಂತೇ ಹವಿಷಾ ಸ್ತುತ್ಯಾ ಚ । ಕೀದೃಶಾಸ್ತೇ । ಶಗ್ಮಾಸಃ ಸುಖಕರಾ ಅದಿತೇಃ ಪುತ್ರಾ ಅದಬ್ಧಾಃ ಅಹಿಂಸಿತಾಃ ॥

ಪ್ರತಿಪದಾರ್ಥ

**ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ವರುಣಃ**—ವರುಣನೂ । **ಇಮೇ**—ಈಮೂರು ದೇವತೆಗಳೂ । **ಭೂರೇಃ**—ಅಧಿಕವಾದ । **ಅನೃತಸ್ಯ**—ಪಾಪಕ್ಕೆ । **ಚೇತಾರಃ**—ನಾಶಕರಾಗಿ । **ಸಂತಿ ಹಿ**—ಆಗುತ್ತಾರೆ । **ಶಗ್ಮಾಸಃ**—ಸುಖಕಾರಕರೂ । **ಅದಿತೇಃ ಪುತ್ರಾಃ**—ಅದಿತಿಪುತ್ರರೂ । **ಅದಬ್ಧಾಃ**—ಅಹಿಂಸಿತರೂ ಆದ । **ಇಮೇ**—ಈ ದೇವತೆಗಳು । **ಋತಸ್ಯ**—ಯಜ್ಞದ । **ದುರೋಣೇ**—ಗೃಹದಲ್ಲಿ । **ವವೃಧುಃ** — (ಹವಿಸ್ಸಿನಿಂದ) ಪುಷ್ಟಿಗೊಳ್ಳುತ್ತಾರೆ

ಭಾವಾರ್ಥ

ಮಿತ್ರನೂ, ಅರ್ಯಮನೂ, ವರುಣನೂ ಈ ಮೂರು ದೇವತೆಗಳೂ ಅಧಿಕವಾದ ಪಾಪವನ್ನು ನಾಶಮಾಡುವವರಾಗಿದ್ದಾರೆ ಸುಖಕಾರಕರೂ, ಅದಿತಿಪುತ್ರರೂ, ಅಹಿಂಸಿತರೂ ಆದ ಈ ದೇವತೆಗಳು ಯಜ್ಞಗೃಹದಲ್ಲಿ ಹವಿಸ್ಸಿನಿಂದ ಪುಷ್ಟಿಗೊಳ್ಳುತ್ತಾರೆ.

English Translation

These (deities), Mitra, Aryaman, Varuna are the detecters of much untruth these unconquered sons of Aditi, dispensers of happiness, are magnified in the hall of sacrifice.

ಸಂಹಿತಾಪಾಠಃ

ಇಮೇ ಮಿತ್ರೋ ವರುಣೋ ದೂಳಭಾಸೋಽಚೇತಸಂ ಚಿಚ್ಚಿತಯಂತಿ ದಕ್ಷೈಃ

ಅಪಿ ಕ್ರತುಂ ಸುಚೇತಸಂ ವತಂತಸ್ತಿರಶ್ಚಿದಂಹಃ ಸುಪಥಾ ನಯಂತಿ ॥ ೬ ॥

ಪದಪಾಠಃ

ಇಮೇ । ಮಿತ್ರಃ । ವರುಣಃ । ದುಃಽದಭಾಸಃ । ಅಚೇತಸಂ । ಚಿತ್ । ಚಿತಯಂತಿ । ದಕ್ಷೈಃ ।

ಅಪಿ । ಕ್ರತುಂ । ಸುಽಚೇತಸಂ । ವತಂತಃ । ತಿರಃ । ಚಿತ್ । ಅಂಹಃ । ಸುಽಪಥಾ । ನಯಂತಿ ॥ ೬ ॥

ಸಾಯಣಭಾಷ್ಯಂ

ಇಮ ಆದಿತ್ಯಾ ಮಿತ್ರೋ ವರುಣಶ್ಚ । ಏತದ್ದ್ವಯಮರ್ಯಮ್ಣೋಽಪ್ಯುಪಲಕ್ಷಣಂ । ಏತೇ ದೂಳಭಾಸೋ ದುರ್ದಭಾ ಅನಭಿಭಾವ್ಯಾ ಅಚೇತಸಂ ಚಿದಪ್ರಜ್ಞಾನಮನುಷ್ಠಾನವಿಷಯಜ್ಞಾನರಹಿತಮಪಿ

ದಕ್ಷೈಃ ಸಾಮರ್ಥ್ಯೈಶ್ಚಿತಯಂತಿ । ಅಪಿ ಸುಚೇತಸಂ ಪ್ರಕೃಷ್ಟಜ್ಞಾನವಂತಂ ಪುರುಷಂ ಕ್ರತುಂ ಕರ್ತಾರಂ ಕರ್ಮಾನುಷ್ಠಾನವಂತಂ ವತಂತೋ ಗಚ್ಛಂತೋಽಂಹೋ ದುಷ್ಕೃತಂ ತಿರಶ್ಚಿತ್ತಿರೋ ನಯಂತೋಽಸ್ಮಾನ್ಸುಪಥಾ ಶೋಭನೇನ ಮಾರ್ಗೇಣ ನಯಂತಿ । ಪ್ರಾಪಯಂತ್ಯಭಿಮತಂ ಯಜ್ಞಂ ಸ್ವರ್ಗಾದಿಕಂ ವಾ ॥

ಪ್ರತಿಪದಾರ್ಥ

**ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ (ಮತ್ತು ಅರ್ಯಮನೂ) । **ಇಮೇ**—ಈ ಮೂರು ದೇವತೆಗಳೂ । **ದೂಳಭಾಸಃ**—ಅಪ್ರತಿಹತವಾದ ಶಕ್ತಿಯುಳ್ಳವರಾಗಿ । **ಅಚೇತಸಂ ಚಿತ್**—ಕರ್ಮಾನುಷ್ಠಾನಜ್ಞಾನರಹಿತನನ್ನೂ ಸಹ । **ದಕ್ಷೈಃ**—ತಮ್ಮ ಸಾಮರ್ಥ್ಯಗಳಿಂದ । **ಚಿತಯಂತಿ**—ಎಚ್ಚರಗೊಳಿಸುತ್ತಾರೆ । **ಅಪಿ**—ಮತ್ತು **ಸುಚೇತಸಂ**—ಉತ್ತಮವಾದ ಕರ್ಮಜ್ಞಾನವುಳ್ಳವನೂ । **ಕ್ರತುಂ**—ಕರ್ಮವನ್ನು ಆಚರಿಸುವವನೂ ಆದ ಪುರುಷನಲ್ಲಿಗೆ । **ವತಂತಃ**—ಹೋಗಿ । **ಅಂಹಃ**—ಅವನ ಪಾಪವನ್ನು । **ತಿರಶ್ಚಿತ್**—ನಾಶಪಡಿಸುತ್ತಾ । **ಸುಪಥಾ**—(ಅವನನ್ನು) ಉತ್ತಮವಾದ ಮಾರ್ಗದಿಂದ । **ನಯಂತಿ**—ಒಯ್ಯುತ್ತಾರೆ

ಭಾವಾರ್ಥ

ಅದಿತಿಪುತ್ರರಾದ ಮಿತ್ರ, ಅರ್ಯಮ, ಮತ್ತು ವರುಣ ಈ ಮೂರು ದೇವತೆಗಳೂ ಅಪ್ರತಿಹತವಾದ ಶಕ್ತಿಯುಳ್ಳವರಾಗಿ ಕರ್ಮಾನುಷ್ಠಾನವನ್ನು ಅರಿಯದ ಅಜ್ಞಾನಿಗಳನ್ನು ಸಹ ತಮ್ಮ ಸಾಮರ್ಥ್ಯಗಳಿಂದ ಎಚ್ಚರಗೊಳಿಸುತ್ತಾರೆ ಮತ್ತು ಉತ್ತಮವಾದ ಕರ್ಮಜ್ಞಾನವುಳ್ಳವನೂ, ಕರ್ಮವನ್ನು ಆಚರಿಸುವವನೂ ಆದ ಪುರುಷನನ್ನು ಸಮೀಪಿಸಿ ಅವನ ಪಾಪವನ್ನು ನಾಶಪಡಿಸುತ್ತ ಅವನನ್ನು ಉತ್ತಮವಾದ ಮಾರ್ಗದಿಂದ ಒಯ್ಯುತ್ತಾರೆ

English Translation

These, the unsubdued Mitra, Varuna, and Aryaman, animate with energies the unconscious (sleepers) repairing to the intelligent performer (of pious acts), they lead (him), by safe paths (to heaven), removing all iniquity.

ಸಂಹಿತಾಪಾಠಃ

ಇಮೇ ದಿವೋ ಅನಿಮಿಷಾ ಪೃಥಿವ್ಯಾಶ್ಚಿಕಿತ್ವಾಂಸೋ ಅಚೇತಸಂ ನಯಂತಿ ।
ಪ್ರವ್ರಾಜೇ ಚಿನ್ನದ್ಯೋ ಗಾಧಮಸ್ತಿ ಪಾರಂ ನೋ ಅಸ್ಯ ವಿಷ್ಪಿತಸ್ಯ ಪರ್ಷನ್ ॥

ಪದಪಾಠಃ

ಇಮೇ । ದಿವಃ । ಅನಿಽಮಿಷಾ । ಪೃಥಿವ್ಯಾಃ । ಚಿಕಿತ್ವಾಂಸಃ । ಅಚೇತಸಂ । ನಯಂತಿ ।
ಪ್ರಽವ್ರಾಜೇ । ಚಿತ್ । ನದ್ಯಃ । ಗಾಧಂ । ಅಸ್ತಿ । ಪಾರಂ । ನಃ । ಅಸ್ಯ । ವಿಷ್ಪಿತಸ್ಯ । ಪರ್ಷನ್ ॥ ೭ ॥

ಸಾಯಣಭಾಷ್ಯಂ

**ಇಮೇ ಮಿತ್ರಾದಯೋ ದಿವೋ ದ್ಯುಲೋಕಸ್ಯ ಪೃಥಿವ್ಯಾಶ್ಚ ಸಂಬಂಧಿನೋಽನಿಮಿಷಾನಿಮಿಷೇಣ ಸರ್ವದಾ ಚಿಕಿತ್ವಾಂಸೋ ಜಾನಂತಃ । ಕಂ । ಅಚೇತಸಮಜ್ಞಾನಂ । ನಯಂತಿ । ಪ್ರಾಪಯಂತಿ ಕರ್ಮಾಣಿ । ಪ್ರವ್ರಾಜೇ ಚಿತ್ ಪ್ರವಣೇಽತ್ಯಂತನಿಮ್ನೇಽಪಿ ದೇಶೇ ನದ್ಯೋ ನದ್ಯಾ ಗಾಧಮಸ್ತಿ । ಭವತಿ ಯುಷ್ಮತ್ಪ್ರಸಾದಾದಿತ್ಯರ್ಥಃ । ತೇ ಮಹಾಂತೋ ನೋಽಸ್ಮಾಕಮಸ್ಯ ವಿಷ್ಪಿತಸ್ಯ ವ್ಯಾಪ್ತಸ್ಯ ಕರ್ಮಣಃ ಪಾರಂ ಪರ್ಷನ್ । ಪಾರಯಂತು । ನಯಂತು ॥**

ಪ್ರತಿಪದಾರ್ಥ

**ಇಮೇ**—ಮಿತ್ರ, ವರುಣ ಮತ್ತು ಅರ್ಯಮದೇವತೆಗಳು । **ದಿವಃ**—ದ್ಯುಲೋಕಕ್ಕೆ ಸಂಬಂಧಿಸಿದುದೂ । **ಪೃಥಿವ್ಯಾಃ**—ಪೃಥಿವಿಗೆ ಸಂಬಂಧಿಸಿದುದೂ ಆದ । **ಅಚೇತಸಂ**- ಅಜ್ಞಾನವನ್ನು । **ಅನಿಮಿಷಾ**—ಎವೆಯಿಕ್ಕದ ದೃಷ್ಟಿಯಿಂದ । **ಚಿಕಿತ್ವಾಂಸಃ**—ಅರಿಯುತ್ತ । **ನಯಂತಿ**—ಕರ್ಮಮಾರ್ಗಕ್ಕೆ ಒಯ್ಯುತ್ತಾರೆ । **ನದ್ಯಃ**—ನದಿಯ । **ಪ್ರವ್ರಾಜೇ ಚಿತ್**—ಅತ್ಯಂತ ಆಳವಾದ ಪ್ರದೇಶದಲ್ಲಿಯೂ ಸಹ । **ಗಾಧಂ ಅಸ್ತಿ**—(ಈ ದೇವತೆಗಳ ಮಾಹಾತ್ಮ್ಯದಿಂದ) ತಳವು ಸಿಕ್ಕುತ್ತದೆ । (ಮಹಾತ್ಮರಾದ ಈ ದೇವತೆಗಳು) **ನಃ**—ನಮ್ಮ । **ವಿಷ್ಪಿತಸ್ಯ**—ವ್ಯಾಪಕವಾದ । **ಅಸ್ಯ**—ಈ ಕರ್ಮದ । **ಪಾರಂ**—ದಡಕ್ಕೆ । **ಪರ್ಷನ್**—ಒಯ್ಯಲಿ.

ಭಾವಾರ್ಥ

ಮಿತ್ರ, ವರುಣ ಮತ್ತು ಅರ್ಯಮದೇವತೆಗಳು, ದ್ಯುಲೋಕಕ್ಕೆ ಸಂಬಂಧಿಸಿದುದೂ, ಪೃಥಿವಿಗೆ ಸಂಬಂಧಿಸಿದುದೂ ಆದ ಅಜ್ಞಾನವನ್ನು ಎವೆಯಿಕ್ಕದ ದೃಷ್ಟಿಯಿಂದ ಅರಿಯುತ್ತ ಎಲ್ಲರನ್ನು ಕರ್ಮಮಾರ್ಗಕ್ಕೆ ಒಯ್ಯುತ್ತಾರೆ ಈ ದೇವತೆಗಳ ಮಾಹಾತ್ಮ್ಯದಿಂದ ನದಿಯ ಅತ್ಯಂತ ಆಳವಾದ ಪ್ರದೇಶದಲ್ಲಿಯೂ ಸಹ ತಳವು ಸಿಕ್ಕುತ್ತದೆ. ಮಹಾತ್ಮರಾದ ಈ ದೇವತೆಗಳು ವಿಸ್ತೃತವಾದ ಈ ಕರ್ಮವನ್ನು ನಿರ್ವಿಘ್ನವಾಗಿ ನೆರವೇರುವಂತೆ ಮಾಡಲಿ (ಅತ್ಯಂತ ವ್ಯಾಪಕವಾದುದೂ ಕರ್ಮರೂಪವಾದುದೂ ಆದ ಈ ನದಿಯನ್ನು ದಾಟಿಸಲಿ)

English Translation

(Beholding) with unclosing eyes, and cognizant (of the things) of heaven and earth, they conduct the ignorant man (to duty) in the lowest depth of the river, (through them), there is a bottom may they lead us to the opposite shore of the vast expanse.

ಸಂಹಿತಾಪಾಠಃ

**ಯದ್ಗೋಪಾವದದಿತಿಃ ಶರ್ಮ ಭದ್ರಂ ಮಿತ್ರೋ ಯಚ್ಛಂತಿ ವರುಣಃ ಸುದಾಸೇ ।**

**ತಸ್ಮಿನ್ನಾ ತೋಕಂ ತನಯಂ ದಧಾನಾ ಮಾ ಕರ್ಮ ದೇವಹೇಳನಂ ತುರಾಸಃ ॥**

ಪದಪಾಠಃ

ಯತ್ । ಗೋಪಾವತ್ । ಅದಿತಿಃ । ಶರ್ಮ । ಭದ್ರಂ । ಮಿತ್ರಃ । ಯಚ್ಛಂತಿ । ವರುಣಃ । ಸುಽದಾಸೇ ।

ತಸ್ಮಿನ್ । ಆ । ತೋಕಂ । ತನಯಂ । ದಧಾನಾಃ । ಮಾ । ಕರ್ಮ । ದೇವಽಹೇಳನಂ । ತುರಾಸಃ ॥ ೮ ॥

ಸಾಯಣಭಾಷ್ಯಂ

ಯಚ್ಛರ್ಮ ಸುಖಂ ಗೃಹಂ ವಾ ಗೋಪಾವದ್ರಕ್ಷಣೋಪೇತಂ ಭದ್ರಂ ಸ್ತುತ್ಯಮದಿತಿರದೀನೋಽರ್ಯಮಾದಿತಿರ್ವಾ ಮಿತ್ರೋ ವರುಣಶ್ಚೈತೇ ತ್ರಯೋ ದೇವಾಃ ಸುದಾಸೇ ಸುದಾನಾಯ ಮಹ್ಯಂ ಯಚ್ಛಂತಿ ಪ್ರಯಚ್ಛಂತಿ ತಸ್ಮಿಞ್ಛರ್ಮಣಿ ತೋಕಂ ಪುತ್ರಂ ತನಯಂ ತತ್ಪುತ್ರಾದಿಕಂ । ಅಥವಾ ತನಯಶಬ್ದೋಽಪತ್ಯಸಾಮಾನ್ಯವಚನಃ । ತೋಕಂ ಬಲವಂತಂ ಪುತ್ರಮಾ ಸರ್ವತೋ ದಧಾನಾ ಧಾರಯಂತೋ ವಯಂ ಹೇ ತುರಾಸೋ ಗಮನಾಯ ತ್ವರಮಾಣಾಃ ದೇವಹೇಳನಂ ದೇವಾನಾಂ ಮಿತ್ರಾದೀನಾಂ ಕೋಪನಂ ಮಾ ಕರ್ಮ । ಮಾ ಕಾರ್ಷ್ಮ ॥

ಪ್ರತಿಪದಾರ್ಥ

**ಅದಿತಿಃ**—ಪೂರ್ಣರೂಪನಾದ ಅರ್ಯಮನೂ | **ಮಿತ್ರಃ**—ಮಿತ್ರನೂ | **ವರುಣಃ**—ವರುಣನೂ (ಈ ಮೂರು ದೇವತೆಗಳೂ) | **ಸುದಾಸೇ**—ಉತ್ತಮವಾದ ಹವಿಸ್ಸರ್ಪಿಸುವ ನನಗೆ | **ಗೋಪಾವತ್**—ರಕ್ಷಣೆಯಿಂದ ಕೂಡಿದುದೂ **ಭದ್ರಂ**—ಮಂಗಳಕರವಾದುದೂ ಆದ | **ಯತ್ ಶರ್ಮ**—ಯಾವ ಗೃಹವನ್ನು | **ಯಚ್ಛಂತಿ**—ಕೊಡುವರೋ | **ತಸ್ಮಿನ್**—ಆ ಗೃಹದಲ್ಲಿ | **ತೋಕಂ**—ಪುತ್ರರನ್ನು | **ತನಯಂ**—ಪೌತ್ರರನ್ನೂ | **ಆ ದಧಾನಾಃ**—ಸರ್ವತ್ರ ಹೊಂದಿರುವ ನಾನು (ಮತ್ತು ನಮ್ಮವರು) | **ತುರಾಸಃ**—ಆತುರವುಳ್ಳವರಾಗಿ | **ದೇವಹೇಳನಂ**—ದೇವತೆಗಳ ಕೋಪವನ್ನು ಪ್ರಚೋದಿಸುವ ಕಾರ್ಯವನ್ನು | **ಮಾ ಕರ್ಮ**—ಮಾಡದಿರುವಂತಾಗಲಿ.

ಭಾವಾರ್ಥ

ಪೂರ್ಣರೂಪನಾದ ಅರ್ಯಮನೂ, ಮಿತ್ರನೂ, ವರುಣನೂ ಈ ಮೂರು ದೇವತೆಗಳೂ ಉತ್ತಮವಾದ ಹವಿಸ್ಸನ್ನರ್ಪಿಸುವ ನನಗೆ ರಕ್ಷಣೆಯಿಂದ ಕೂಡಿದುದೂ, ಮಂಗಳಕರವಾದುದೂ ಆದ ಯಾವ ಗೃಹವನ್ನು ಕೊಡುವರೋ ಆ ಗೃಹದಲ್ಲಿ ಪುತ್ರರನ್ನು ಪೌತ್ರರನ್ನೂ ಸರ್ವತ್ರ ಪಡೆದು ನಾನೂ ಮತ್ತು ನಮ್ಮವರೂ, ಆತುರಸ್ವಭಾವವುಳ್ಳವರಾಗಿ ದೇವತೆಗಳಿಗೆ ಕೋಪವನ್ನುಂಟುಮಾಡುವ ಯಾವ ಕರ್ಮಗಳನ್ನೂ ಆಚರಿಸದಂತೆ ಆಗಲಿ.

## English Translation

Including our sons and grandsons in that preserving and auspicious felicity which Aditi, Mitra and Varuna confer upon the liberal donor (of the oblation), may we never, acting precipitately, incur the displeasure of the deities.

ಸಂಹಿತಾಪಾಠಃ

ಅವ ವೇದಿಂ ಹೋತ್ರಾಭಿರ್ಯಜೇತ ರಿಪಃ ಕಾಶ್ಚಿದ್ವರುಣಧ್ರುತಃ ಸಃ ।
ಪರಿ ದ್ವೇಷೋಭಿರರ್ಯಮಾ ವೃಣಕ್ತೂರುಂ ಸುದಾಸೇ ವೃಷಣಾ ಉ ಲೋಕಂ

ಪದಪಾಠಃ

ಅವ । ವೇದಿಂ । ಹೋತ್ರಾಭಿಃ । ಯಜೇತ । ರಿಪಃ । ಕಾಃ । ಚಿತ್ । ವರುಣಽಧ್ರುತಃ । ಸಃ ।
ಪರಿ । ದ್ವೇಷಃಽಭಿಃ । ಅರ್ಯಮಾ । ವೃಣಕ್ತು । ಉರುಂ । ಸುಽದಾಸೇ । ವೃಷಣೌ । ಊಂ ಇತಿ । ಲೋಕಂ

ಸಾಯಣಭಾಷ್ಯಂ

ಹೇ ಮಿತ್ರಾದಯಃ ಸೋಽಸ್ಮದ್ದ್ವೇಷೀ ವೇದಿಂ ಯಾಗಸಾಧನಂ ಹೋತ್ರಾಭಿಃ । ವಾಙ್ನಾಮೈತತ್ । ವಾಗ್ರೂಪಾಭಿಃ ಸ್ತುತಿಭಿಃ ಸಾರ್ಧಮವ ಯಜೇತ । ವೇದ್ಯಾಂ ಕರ್ಮಾಣಿ ಕುರ್ವನ್ದೇವಾನ್ನ ಸ್ತುಯಾದಿತ್ಯರ್ಥಃ । ಅವಪೂರ್ವೋ ಯಜತಿಸ್ತ್ಯಾಗಾರ್ಥಃ । ಸ ಕಿಂ ಪ್ರಾಪ್ನುಯಾದಿತಿ ತತ್ರಾಹ । ವರುಣಧೃತೋ ವರುಣೇನ ತ್ವಯಾ ಹಿಂಸಿತಃ ಸ ಕಾಶ್ಚಿದ್ರಿಪೋ ಹಿಂಸಾಃ ಪ್ರಾಪ್ನುಯಾದಿತಿ ಶೇಷಃ । ಅಸ್ಮಾಂಸ್ತ್ವರ್ಯಮಾ ದೇವೋ ದ್ವೇಷೋಭಿರ್ದ್ವೇಷ್ಟೃಭೀ ರಕ್ಷಃಪ್ರಭೃತಿಭಿಃ ಪರಿ ವೃಣಕ್ತು । ವರ್ಜಯತು । ಉರುಂ ವಿಸ್ತೀರ್ಣಂ ಲೋಕಂ ಸ್ಥಾನಂ ಸುದಾಸೇ ಶೋಭನದಾನಾಯ ಮಹ್ಯಂ ಪ್ರಯಚ್ಛತಂ ಹೇ ವೃಷಣಾ ವರ್ಷಕೌ ಕಾಮಾನಾಂ ಮಿತ್ರಾವರುಣೌ ॥

ಪ್ರತಿಪದಾರ್ಥ

(ಎಲೈ ಮಿತ್ರಾದಿದೇವತೆಗಳೇ) **ಸಃ**—ನಮ್ಮ ಶತ್ರುವು । **ಹೋತ್ರಾಭಿಃ**— (ತನ್ನ ಅಪರಿತವಾದ) ಸ್ತುತಿಗಳಿಂದ **ವೇದಿಂ**—ಯಜ್ಞವೇದಿಯನ್ನು । **ಅವ ಯಜೇತ**—ಕಳೆದುಕೊಳ್ಳಲಿ । **ವರುಣಧ್ರುತಃ**—ವರುಣನಿಂದ ಪೀಡಿತನಾದ ಅವನು । **ಕಾಶ್ಚಿತ್**—ಕೆಲವು । **ರಿಪಃ**—ಹಿಂಸೆಗಳನ್ನೂ ಹೊಂದಲಿ । **ಅರ್ಯಮಾ** — ಅರ್ಯಮದೇವನು । **ದ್ವೇಷೋಭಿಃ**—ನಮ್ಮ ಶತ್ರುಗಳಿಂದ । **ಪರಿ ವೃಣಕ್ತು**—ನಮ್ಮನ್ನು ಬೇರೆಮಾಡಲಿ. । **ವೃಷಣಾ**—ಕಾಮವರ್ಷಕರಾದ ಎಲೈ ಮಿತ್ರಾವರುಣರೇ, । **ಸುದಾಸೇ**—ಹವಿಷ್ಪ್ರದನಾದ ನನಗೆ । **ಉರುಂ**—ವಿಸ್ತೃತವಾದ । **ಲೋಕಂ**—ಸ್ಥಾನವನ್ನು ಕೊಡಿರಿ.

ಭಾವಾರ್ಥ

ಎಲೈ ಮಿತ್ರಾದಿದೇವತೆಗಳೇ, ನಮ್ಮ ಶತ್ರುವು ಸ್ತುತಿಗಳನ್ನು ಪಠಿಸದೆ ತನ್ನ ಯಜ್ಞವೇದಿಯನ್ನು ಕಳೆದುಕೊಳ್ಳಲಿ. ವರುಣನಿಂದ ಪೀಡಿತನಾದ ಅವನು ಅನೇಕ ಹಿಂಸೆಗೂ ಪಾತ್ರನಾಗಲಿ ಅರ್ಯಮದೇವನು ನಮ್ಮನ್ನು ನಮ್ಮ ಶತ್ರುಗಳಿಂದ ಬೇರೆ ಮಾಡಲಿ. ಕಾಮವರ್ಷಕರಾದ ಎಲೈ ಮಿತ್ರಾವರುಣರೇ, ಹವಿಷ್ಪ್ರದನಾದ ನನಗೆ ವಿಸ್ತೃತವಾದ ಸ್ಥಾನವನ್ನು ಒದಗಿಸಿರಿ.

## English Translation

Let my adversary desecrate the altai by (ill-expressed) praises repell-ed by Varuna, may he (undergo) various sufferings may Aiyaman defend us from those who hate us confer, showerers (of benefits) a vast region upon the liberal donor (of oblations).

ಸಂಹಿತಾಪಾಠಃ

ಸಸ್ವಶ್ಚಿದ್ಧಿ ಸಮೃತಿಸ್ತ್ವೇಷ್ಯೇಷಾಮಪೀಚ್ಯೇನ ಸಹಸಾ ಸಹಂತೇ ।
ಯುಷ್ಮದ್ಭಿಯಾ ವೃಷಣೋ ರೇಜಮಾನಾ ದಕ್ಷಸ್ಯ ಚಿನ್ಮಹಿನಾ ಮೃಳತಾ ನಃ ॥

ಪದಪಾಠಃ

ಸಸ್ವರಿತಿ । ಚಿತ್ । ಹಿ । ಸಂಽಋತಿಃ । ತ್ವೇಷೀ । ಏಷಾಂ । ಅಪೀಚ್ಯೇನ । ಸಹಸಾ । ಸಹಂತೇ ।
ಯುಷ್ಮತ್ । ಭಿಯಾ । ವೃಷಣಃ । ರೇಜಮಾನಾಃ । ದಕ್ಷಸ್ಯ । ಚಿತ್ । ಮಹಿನಾ । ಮೃಳತ । ನಃ ॥ ೧೦ ॥

ಸಾಯಣಭಾಷ್ಯಂ

ಏಷಾಂ ಮಿತ್ರಾದೀನಾಂ ಸಮೃತಿಃ ಸಂಗತಿಃ ಸಂಹತಿರ್ವಾ ಸಸ್ವರಂತರ್ಹಿತಾ ನಿಗೂಢಾ ತ್ವೇಷೀ ದೀಪ್ತಾ ಚ ಭವತಿ । ತಾದೃಶಾ ಏತೇಽಪೀಚ್ಯೇನ । ಏತದಪ್ಯಂತರ್ಹಿತನಾಮ । ನಿಗೂಢೇನ ಸಹಸಾ ಬಲೇನ ಸಹಂತೇ । ಅಭಿಭವಂತ್ಯಸ್ಮದ್ದ್ವೇಷ್ಟ್ರೂನ್ । ಕಿಂ ಚ ಹೇ ವೃಷಣೋಽಭಿಮತವರ್ಷಕಾ ಮಿತ್ರಾದಯಃ ಯುಷ್ಮದ್ಯುಷ್ಮತ್ತೋ ಭಿಯಾ ಭೀತ್ಯಾ ರೇಜಮಾನಾಃ ಕಂಪಮಾನಾ ಭವಂತಿ ವಿರೋಧಿನಃ । ಯಸ್ಮಾದೇವಂ ತಸ್ಮಾದ್ದಕ್ಷಸ್ಯ ಯುಷ್ಮಾಕಂ ಬಲಸ್ಯ ಮಹಿನಾ ಮಹಿಮ್ನಾ ಮಹತ್ತ್ವೇನ ನೋಽಸ್ಮಭ್ಯಂ ಮೃಳತ । ಉಪದಯಾಂ ಕುರುತ ॥

ಪ್ರತಿಪದಾರ್ಥ

**ಏಷಾಂ**— ಈ ಮಿತ್ರಾದಿ ಮೂರು ದೇವತೆಗಳ । **ಸಮೃತಿಃ**— ಸಾಹಚರ್ಯವು । **ಸಸ್ವಃ**— ಅನಿರ್ವಚನೀಯವಾದ । **ತ್ವೇಷೀ**— ಕಾಂತಿಯುಳ್ಳದ್ದಾಗಿರುತ್ತದೆ । **ಅಪೀಚ್ಯೇನ**— ನಿಗೂಢವಾದ । **ಸಹಸಾ**— ಬಲದಿಂದ । **ಸಹಂತೇ**— ನಮ್ಮ ಶತ್ರುಗಳನ್ನು ಸೋಲಿಸುತ್ತಾರೆ । **ವೃಷಣಃ**— ಕಾಮವರ್ಷಕರಾದ ಎಲೈ ಮಿತ್ರಾದಿಗಳೇ, । **ಯುಷ್ಮತ್**— ನಿಮ್ಮ । **ಭಿಯಾ**— ಭೀತಿಯಿಂದ । **ರೇಜಮಾನಾಃ**— ನಮ್ಮ ಶತ್ರುಗಳು ನಡುಗುತ್ತಾರೆ । **ದಕ್ಷಸ್ಯ**— ನಿಮ್ಮ ಶಕ್ತಿಯ । **ಮಹಿನಾ**— ಮಾಹಾತ್ಮ್ಯದಿಂದ । **ನಃ**— ನಮಗೆ । **ಮೃಳತ**— ಸುಖವನ್ನುಂಟುಮಾಡಿರಿ.

ಭಾವಾರ್ಥ

ಮಿತ್ರಾದಿ ಮೂರು ದೇವತೆಗಳ ಸಾಹಚರ್ಯವು ಅನಿರ್ವಚನೀಯವಾದ ಕಾಂತಿಯುಕ್ತವಾಗಿರುತ್ತದೆ. ಇವರು ತಮ್ಮ ನಿಗೂಢವಾದ ಶಕ್ತಿಯಿಂದ ನಮ್ಮ ಶತ್ರುಗಳನ್ನೆಲ್ಲಾ ಸೋಲಿಸುತ್ತಾರೆ. ಕಾಮವರ್ಷಕರಾದ ಎಲೈ ಮಿತ್ರಾದಿ

ಗಳೇ, ನಿಮ್ಮ ಭೀತಿಯಿಂದ ನಮ್ಮ ಶತ್ರುಗಳು ನಡುಗುತ್ತಾರೆ. ನಿಮ್ಮ ಶಕ್ತಿಯ ಮಾಹಾತ್ಮ್ಯದಿಂದ ನಮಗೆ ಸುಖವನ್ನುಂಟುಮಾಡಿರಿ

English Translation

The association of these (three deities) is of mysterious lustre by their secret strength they overcome (all enemies) . showerers (of benefits), through fear (of you our opponents) are trembling have mercy upon us in the mightiness of your strength

ಸಂಹಿತಾಪಾಠಃ

ಯೋ ಬ್ರಹ್ಮಣೇ ಸುಮತಿಮಾಯಜಾತೇ ವಾಜಸ್ಯ ಸಾತೌ ಪರಮಸ್ಯ ರಾಯಃ।
ಸೀಕ್ಷಂತ ಮನ್ಯುಂ ಮಘವಾನೋ ಅರ್ಯ ಉರು ಕ್ಷಯಾಯ ಚಕ್ರಿರೇ
ಸುಧಾತು ॥ ೧೧ ॥

ಪದಪಾಠಃ

ಯಃ । ಬ್ರಹ್ಮಣೇ । ಸುऽಮತಿಂ । ಆऽಯಜಾತೇ । ವಾಜಸ್ಯ । ಸಾತೌ । ಪರಮಸ್ಯ । ರಾಯಃ ।
ಸೀಕ್ಷಂತ । ಮನ್ಯುಂ । ಮಘऽವಾನಃ । ಅರ್ಯಃ । ಉರು । ಕ್ಷಯಾಯ । ಚಕ್ರಿರೇ । ಸುऽಧಾತು ॥೧೧॥

ಸಾಯಣಭಾಷ್ಯಂ

ಯೋ ಯಜಮಾನೋ ಬ್ರಹ್ಮಣೇ ಪರಿವೃಢಸ್ಯ ಕರ್ಮಣೇ ಯುಷ್ಮತ್ಸ್ತೋತ್ರರೂಪಾಯ ಸುಮತಿಂ ಶೋಭನಾಂ ಬುದ್ಧಿಮಾಯಜಾತೇ ಆಯಜತೇ । ಯಜತಿರತ್ರ ದಾನೇ । ದದಾತಿ ಕರೋತಿ । ಕಿಮರ್ಥಂ । ವಾಜಸ್ಯಾನ್ನಸ್ಯ ಸಾತೌ ದಾನೇ ನಿಮಿತ್ತೇ ಪರಮಸ್ಯೋತ್ಕೃಷ್ಟಸ್ಯ ರಾಯೋ ಧನಸ್ಯ ಚ ಸಾತೌ । ತಸ್ಯಾರ್ಥಃ । ಈರಯತಿ ಸ್ತುತೀಃ ಪ್ರೇರಯತೀತ್ಯರಿಃ ಸ್ತೋತಾ । ಮನ್ಯುಂ ಸ್ತೋತ್ರಂ ಮಘವಾನೋ ದಾನವಂತೋऽರ್ಯವಾದಯಃ ಸೀಕ್ಷಂತ । ಸಚಂತೇ । ಸೇವಿತ್ವಾ ಚ ತಸ್ಯೋರು ಕ್ಷಯಾಯ ವಿಸ್ತೀರ್ಣನಿವಾಸಾಯ ಸುಧಾತು ಸುಧಾಮ ಶೋಭನಸ್ಥಾನಂ ಚಕ್ರಿರೇ । ಕುರ್ವತೇ ॥

ಪ್ರತಿಪದಾರ್ಥ

**ವಾಜಸ್ಯ**—ಅನ್ನದ । **ಸಾತೌ**—ಲಾಭಾರ್ಥವಾಗಿಯೂ । **ಪರಮಸ್ಯ**—ಉತ್ಕೃಷ್ಟವಾದ । **ರಾಯಃ**—ಧನದ ನಿಮಿತ್ತವಾಗಿಯೂ । **ಯಃ**—ಯಾವ ಯಜಮಾನನು । **ಬ್ರಹ್ಮಣೇ**—ಮಿತ್ರಾದಿಗಳನ್ನುದ್ದೇಶಿಸಿದ ಸ್ತುತಿಗಾಗಿ । **ಸುಮತಿಂ**—ತನ್ನ ಉತ್ತಮವಾದ ಬುದ್ಧಿಯನ್ನು । **ಆ ಯಜಾತೇ**—ಅರ್ಪಿಸುವನೋ । **ಅರ್ಯಃ**—ಅಂತಹ ಸ್ತುತಿಕರ್ತನ । **ಮನ್ಯುಂ**—ಸ್ತೋತ್ರವನ್ನು । **ಮಘವಾನಃ**—ಧನವಂತರಾದ ಅರ್ಯಮಾದಿಗಳು । **ಸೀಕ್ಷಂತ**—ಒಟ್ಟಿಗೆ ಸೇವಿಸುತ್ತಾರೆ. । **ಉರುಕ್ಷಯಾಯ**—ಅವನು ವಾಸಮಾಡಲು ವಿಶಾಲವಾಗಿರುವ । **ಸುಧಾತು**—ಉತ್ತಮವಾದ ಸ್ಥಾನವನ್ನು । **ಚಕ್ರಿರೇ**—ನಿರ್ಮಿಸುತ್ತಾರೆ.

ಭಾವಾರ್ಥ

ಅನ್ನಲಾಭಾರ್ಥವಾಗಿಯೂ, ಉತ್ಕೃಷ್ಟವಾದ ಧನದ ನಿಮಿತ್ತವಾಗಿಯೂ ಯಾವ ಯಜಮಾನನು ಅರ್ಯಮಾದಿಗಳನ್ನುದ್ದೇಶಿಸಿದ ಸ್ತುತಿನಿರ್ಮಾಣಕ್ಕಾಗಿ ತನ್ನ ಉತ್ತಮವಾದ ಬುದ್ಧಿಯನ್ನು ಅರ್ಪಿಸುವನೋ ಅಂತಹ ಸ್ತುತಿಕರ್ತನ ಸ್ತೋತ್ರವನ್ನು ಧನವಂತರಾದ ಅರ್ಯಮಾದಿಗಳು ಒಟ್ಟಿಗೆ ಸೇವಿಸುತ್ತಾರೆ ಅವನು ವಿಶಾಲವಾಗಿ ವಾಸಮಾಡಲು ಉತ್ತಮವಾದ ಸ್ಥಾನವನ್ನು ನಿರ್ಮಿಸುತ್ತಾರೆ.

English Translation

These munificent (deities) conjointly accept the praise of the worshipper, and bestow a spacious mansion for a dwelling upon him who, for the sake of food and excellent riches, devotes his mind to your glorification.

ಸಂಹಿತಾಪಾಠಃ

ಇಯಂ ದೇವ ಪುರೋಹಿತಿರ್ಯುವಭ್ಯಾಂ ಯಜ್ಞೇಷು ಮಿತ್ರಾವರುಣಾವಕಾರಿ ।
ವಿಶ್ವಾನಿ ದುರ್ಗಾ ಪಿಪೃತಂ ತಿರೋ ನೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೧೨ ॥

ಪದಪಾಠಃ

ಇಯಂ । ದೇವಾ । ಪುರಃऽಹಿತಿಃ । ಯುವಽಭ್ಯಾಂ । ಯಜ್ಞೇಷು । ಮಿತ್ರಾವರುಣೌ । ಅಕಾರಿ ।
ವಿಶ್ವಾನಿ । ದುಃऽಗಾ । ಪಿಪೃತಂ । ತಿರಃ । ನಃ । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥ ೧೨ ॥

ಸಾಯಣಭಾಷ್ಯಂ

ಅನಯಾ ಸ್ತುತಿಮುಪಸಂಹರತಿ । ಹೇ ದೇವಾ ದೇವೌ ಮಿತ್ರಾವರುಣೌ ಯುವಾಭ್ಯಾಂ ಯುವಾಭ್ಯಾಂ ಯಜ್ಞೇಷ್ವಿಯಂ ಪುರೋಹಿತಿಃ ಪುರಸ್ಕ್ರಿಯಾ ಪೂಜಾ ಸ್ತುತಿಲಕ್ಷಣಾಕಾರಿ । ಕೃತಾಭೂತ್ । ತಾಂ ಸೇವಿತ್ವಾ ವಿಶ್ವಾನಿ ಸರ್ವಾಣಿ ದುರ್ಗಾ ದುಃಖೇನ ಗಂತವ್ಯಾನ್ಯಾಪದಸ್ತಿರಃ । ತಿರಸ್ಕುರುತಂ । ತಥಾ ಕೃತ್ವಾ ನೋऽಸ್ಮಾನ್ ಪಿಪೃತಂ ಪಾರಯತಂ । ಶಿಷ್ಟೋ ಗತಃ ॥

ಪ್ರತಿಪದಾರ್ಥ

ದೇವಾ—ದೇವತಾತ್ಮರಾದ । ಮಿತ್ರಾವರುಣೌ—ಎಲೈ ಮಿತ್ರಾವರುಣರೇ, । ಯುವಾಭ್ಯಾಂ—ನಿಮ್ಮನ್ನುದ್ದೇಶಿಸಿ । ಇಯಂ ಪುರೋಹಿತಃ—ನಿಮ್ಮ ಮುಂದೆ ಅರ್ಪಿಸುವ ಈ ಸ್ತುತಿರೂಪವಾದ ಪೂಜೆಯು । ಯಜ್ಞೇಷು—ಯಜ್ಞಗಳಲ್ಲಿ । ಅಕಾರಿ—ಸಂಪಾದಿತವಾಗಿದೆ. (ಇದನ್ನು ಸೇವಿಸುತ್ತ) । ವಿಶ್ವಾನಿ—ಸಮಸ್ತವಾದ । ದುರ್ಗಾ—

ಆಪತ್ತುಗಳನ್ನು । **ತಿರಃ**— ನಾಶಮಾಡಿರಿ । **ನಃ**— ನಮ್ಮನ್ನು । **ಪಿಪೃತಂ**— ಕಷ್ಟದಿಂದ ದಾಟಿಸಿರಿ । **ಯೂಯಂ**— ನೀವು । **ನಃ**— ನಮ್ಮನ್ನು । **ಸದಾ**— ಯಾವಾಗಲೂ । **ಸ್ವಸ್ತಿಭಿಃ**— ಕಲ್ಯಾಣಗಳಿಂದ । **ಪಾತ**— ರಕ್ಷಿಸಿರಿ

**ಭಾವಾರ್ಥ**

ದೇವತಾತ್ಮರಾದ ಎಲೈ ಮಿತ್ರಾವರುಣರೇ, ನಿಮ್ಮನ್ನುದ್ದೇಶಿಸಿ ನಿಮ್ಮ ಮುಂದೆ ಅರ್ಪಿಸುವ ಈ ಸ್ತುತಿರೂಪ ಪೂಜೆಯು ಯಜ್ಞಗಳಲ್ಲಿ ಸಂಪಾದಿತವಾಗಿದೆ ನೀವು ಇದನ್ನು ಸೇವಿಸುತ್ತ ಸಮಸ್ತವಾದ ಆಪತ್ತುಗಳನ್ನು ನಾಶಮಾಡಿರಿ. ನಮ್ಮನ್ನು ಕಷ್ಟದಿಂದ ದಾಟಿಸಿರಿ ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

English Translation

Excellent Mitra and Varuna, to you this adoration at sacrifices is addressed remove from us all difficulties, and ever cherish us with blessings

---

## ಅರವತ್ತೊಂದನೆಯ ಸೂಕ್ತವು

**ಸಾಯಣಭಾಷ್ಯಂ**

**ಉದ್ವಾಂ ಚಕ್ಷುರಿತಿ ಸಪ್ತರ್ಚಂ ಷಷ್ಠಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ಮೈತ್ರಾವರುಣಂ । ಉದ್ವಾಂ ಸಪ್ತೇತ್ಯನುಕ್ರಮಣಿಕಾ ॥ ವಿನಿಯೋಗೋ ಲೈಂಗಿಕಃ ॥**

**ಅನುವಾದವು— ಉದ್ವಾಂ ಚಕ್ಷುಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು ಇದರಲ್ಲಿ ಏಳು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಮಿತ್ರಾವರುಣರು ದೇವತೆಯು, ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ— **ಉದ್ವಾಂ ಸಪ್ತ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು

### ಸೂಕ್ತ—೬೧

ಮಂಡಲ—೭ ॥ ಅನುವಾಕ—೪ ॥ ಸೂಕ್ತ—೬೧ ॥
ಅಷ್ಟಕ—೫ ॥ ಅಧ್ಯಾಯ—೫ ॥ ವರ್ಗ—೩ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ವಸಿಷ್ಠಃ ॥
ದೇವತಾ—ಮಿತ್ರಾವರುಣೌ ॥
ಛಂದಃ—ತ್ರಿಷ್ಟುಪ್ ॥

**ಸಂಹಿತಾಪಾಠಃ**

**ಉದ್ವಾಂ ಚಕ್ಷುರ್ವರುಣ ಸುಪ್ರತೀಕಂ ದೇವಯೋರೇತಿ ಸೂರ್ಯಸ್ತತನ್ವಾನ್।**
**ಅಭಿ ಯೋ ವಿಶ್ವಾ ಭುವನಾನಿ ಚಷ್ಟೇ ಸ ಮನ್ಯುಂ ಮರ್ತ್ಯೇಷ್ವಾ ಚಿಕೇತ ॥**

ಪದಪಾಠಃ

**ಉತ್ । ವಾಂ । ಚಕ್ಷುಃ । ವರುಣಾ । ಸುಽಪ್ರತೀಕಂ । ದೇವಯೋಃ । ಏತಿ । ಸೂರ್ಯಃ । ತತನ್ವಾನ್ ।**

**ಅಭಿ । ಯಃ । ವಿಶ್ವಾ । ಭುವನಾನಿ । ಚಷ್ಟೇ । ಸಃ । ಮನ್ಯುಂ । ಮರ್ತ್ಯೇಷು । ಆ । ಚಿಕೇತ ॥ ೧ ॥**

ಸಾಯಣಭಾಷ್ಯಂ

**ಹೇ ವರುಣಾ ಮಿತ್ರಾವರುಣೌ ದೇವಯೋರ್ದ್ಯೋತಮಾನಯೋರ್ವಾಂ ಯುವಯೋಶ್ಚಕ್ಷುಃ ಪ್ರಕಾಶಕಂ ತೇಜಃ ಸುಪ್ರತೀಕಂ ಶೋಭನರೂಪಮೇವಂ ರೂಪಃ ಸೂರ್ಯಸ್ತತನ್ವಾಂಸ್ತೇಜೋ ವಿಸ್ತಾರಯನ್ನುದೇತಿ । ಉದ್ಗಚ್ಛತಿ । ಅಥೋದಿತೋ ಯೋ ದೇವೋ ವಿಶ್ವಾ ಸರ್ವಾಣಿ ಭುವನಾನಿ ಭೂತಜಾತಾನ್ಯಭಿ ಚಷ್ಟೇ ಅಭಿಪಶ್ಯತಿ ಸ ದೇವೋ ಮರ್ತ್ಯೇಷು ಪ್ರವೃತ್ತಂ ಮನ್ಯುಂ ಸ್ತೋತ್ರಂ ಕರ್ಮ ವಾ ಚಿಕೇತ । ಆಜಾನಾತಿ ॥**

ಪ್ರತಿಪದಾರ್ಥ

**ವರುಣಾ**—ಎಲೈ ಮಿತ್ರಾವರುಣರೇ, । **ದೇವಯೋಃ**—ದೇವತಾತ್ಮರಾದ । **ವಾಂ**—ನಿಮ್ಮ । **ಚಕ್ಷುಃ**—ತೇಜೋರೂಪನೂ । **ಸುಪ್ರತೀಕಂ**—ಆಕರ್ಷಕವಾದ ಸ್ವರೂಪವುಳ್ಳವನೂ ಆದ । **ಸೂರ್ಯಃ** — ಸೂರ್ಯನು । **ತತನ್ವಾನ್**—ತನ್ನ ತೇಜಸ್ಸನ್ನು ವಿಸ್ತರಿಸುತ್ತ ಉದಯಿಸುತ್ತಾನೆ । **ಯಃ**—ಯಾವ ಸೂರ್ಯದೇವನು । **ವಿಶ್ವಾ**—ಸಮಸ್ತವಾದ । **ಭುವನಾನಿ**—ಭೂತಜಾತಗಳನ್ನೂ । **ಅಭಿ ಚಷ್ಟೇ**—ಸಾಕ್ಷಾತ್ತಾಗಿ ನೋಡುವನೋ । **ಸಃ**—ಆದೇದೇವನು **ಮರ್ತ್ಯೇಷು**—ಮಾನವರಲ್ಲಿ ಪಠಿತವಾದ । **ಮನ್ಯುಂ**—ಸ್ತೋತ್ರವನ್ನು । **ಆ ಚಿಕೇತ**—ಅರಿಯುತ್ತಾನೆ

ಭಾವಾರ್ಥ

ಎಲೈ ಮಿತ್ರಾವರುಣರೇ, ದೇವತಾತ್ಮರಾದ ನಿಮ್ಮ ತೇಜೋರೂಪನೂ ಆಕರ್ಷಕವಾದ ಸ್ವರೂಪವುಳ್ಳವನೂ ಆದ ಸೂರ್ಯನು ತನ್ನ ತೇಜಸ್ಸನ್ನು ವಿಸ್ತರಿಸುತ್ತ ಉದಯಿಸುತ್ತಾನೆ. ಯಾವ ಸೂರ್ಯದೇವನು ಸಮಸ್ತವಾದ ಭೂತಜಾತಗಳನ್ನು ಸಾಕ್ಷಾತ್ತಾಗಿ ನೋಡುವನೋ ಅದೇ ದೇವನು ಮಾನವರಲ್ಲಿ ಪಠಿತವಾದ ಸ್ತುತಿಯನ್ನು ಅರಿಯುತ್ತಾನೆ

## English Translation

Spreading around the beautiful light, Mitra and Varuna, of you two divinities, Surya rises . he who beholds all existing beings apprehends the acts of mortals.

ಸಂಹಿತಾಪಾಠಃ

**ಪ್ರ ವಾಂ ಸ ಮಿತ್ರಾವರುಣಾವೃತಾವಾ ವಿಪ್ರೋ ಮನ್ಮಾನಿ ದೀರ್ಘಶ್ರುದಿ-**

**ಯರ್ತಿ ।**

ಯಸ್ಯ ಬ್ರಹ್ಮಾಣಿ ಸುಕ್ರತೂ ಅವಾಥ ಆ ಯತ್ಕ್ರತ್ವಾ ನ ಶರದಃ ಪೃಣೈಥೇ ॥

ಪದಪಾಠಃ

ಪ್ರ । ವಾಂ । ಸಃ । ಮಿತ್ರಾವರುಣೌ । ಋತಽವಾ । ವಿಪ್ರಃ । ಮನ್ಮಾನಿ । ದೀರ್ಘಽಶ್ರುತ್ । ಇಯರ್ತಿ । ಯಸ್ಯ । ಬ್ರಹ್ಮಾಣಿ । ಸುಕ್ರತೂ ಇತಿ ಸುಽಕ್ರತೂ । ಅವಾಥಃ । ಆ । ಯತ್ । ಕ್ರತ್ವಾ । ನ । ಶರದಃ । ಪೃಣೈಥೇ ಇತಿ ॥ ೨ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ವಾಂ ಯುವಯೋರ್ಮನ್ಮಾನಿ ಮನನೀಯಾನಿ ಸ್ತೋತ್ರಾಣಿ ಸ ಪ್ರಸಿದ್ಧೋ ವಿಪ್ರೋ ಮೇಧಾವ್ಯೃತಾವಾ ಯಜ್ಞವಾನ್ ದೀರ್ಘಶ್ರುಚ್ಚಿರಕಾಲಂ ಶ್ರೋತಾ ಏವಮುಕ್ತಲಕ್ಷಣೋ ವಸಿಷ್ಠ ಇಯರ್ತಿ । ಪ್ರೇರಯತಿ । ಯಸ್ಯರ್ಷೇರ್ಬ್ರಹ್ಮಾಣಿ ಪರಿವೃಢಾನಿ ಸ್ತೋತ್ರಾಣಿ ಹೇ ಸುಕ್ರತೂ ಶೋಭನಕರ್ಮಾಣೌ ಅವಾಥಃ ರಕ್ಷಥಃ । ಯತ್ಕರ್ಮ ಶರದೋ ಬಹೂನ್ ಸಂವತ್ಸರಾನಾ ಪೃಣೈಥೇ ಅಪೂರಯೇಥೇ ಸ ಉದಿಯರ್ತಿ ॥

ಪ್ರತಿಪದಾರ್ಥ

**ಸುಕ್ರತೂ**—ಉತ್ತಮವಾದ ಕರ್ಮವುಳ್ಳ । **ಮಿತ್ರಾವರುಣೌ**—ಎಲೈ ಮಿತ್ರಾವರುಣರೇ, । **ಯಸ್ಯ**—ಯಾವ ವಸಿಷ್ಠನ । **ಬ್ರಹ್ಮಾಣಿ**—ಸ್ತೋತ್ರಗಳನ್ನು । **ಅವಾಥಃ**—ರಕ್ಷಿಸುವಿರೋ । **ಯತ್ ಕ್ರತ್ವಾ**—ಯಾವ ಕರ್ಮವನ್ನು । **ಶರದಃ**—ಅನೇಕ ಸಂವತ್ಸರಗಳ ಕಾಲ । **ಆ ಪೃಣೈಥೇ**—ಪ್ರತಿಫಲದಿಂದ ತುಂಬಿಸಿರೋ ಅಂತಹ । **ಸಃ**—ಪ್ರಸಿದ್ಧನೂ । **ವಿಪ್ರಃ**—ಮೇಧಾವಿಯೂ । **ಋತಾವಾ**—ಯಜ್ಞಕರ್ತನೂ । **ದೀರ್ಘಶ್ರುತ್**—ಅನೇಕ ಕಾಲಗಳಿಂದ ಸ್ತುತಿಯನ್ನು ಸಾಕ್ಷಾತ್ಕರಿಸುವವನೂ ಆದ ವಸಿಷ್ಠನು । **ವಾಂ**—ನಿಮ್ಮನ್ನುದ್ದೇಶಿಸಿದ । **ಮನ್ಮಾನಿ**—ಸ್ತೋತ್ರಗಳನ್ನು । **ಪ್ರ ಇಯರ್ತಿ**—ಪ್ರೇರಿಸುತ್ತಾ ಪಠಿಸುತ್ತಾನೆ

ಭಾವಾರ್ಥ

ಉತ್ತಮವಾದ ಕರ್ಮಗಳುಳ್ಳ ಎಲೈ ಮಿತ್ರಾವರುಣರೇ, ಯಾವ ವಸಿಷ್ಠನ ಸ್ತೋತ್ರಗಳನ್ನು ನೀವು ರಕ್ಷಿಸುವಿರೋ, ಯಾರ ಕರ್ಮಗಳನ್ನು ಆದರಿಸಿ ಅನೇಕ ಸಂವತ್ಸರಗಳ ಕಾಲ ಅವಕ್ಕೆ ಪ್ರತಿಫಲಗಳನ್ನು ತುಂಬಿಕೊಡುವಿರೋ ಅಂತಹ ಪ್ರಸಿದ್ಧನೂ ಮೇಧಾವಿಯೂ ಯಜ್ಞಕರ್ತನೂ ಅನೇಕ ಕಾಲಗಳಿಂದ ಸ್ತುತಿಯನ್ನು ಸಾಕ್ಷಾತ್ಕರಿಸುವವನೂ ಆದ ವಸಿಷ್ಠನು ನಿಮ್ಮನ್ನುದ್ದೇಶಿಸಿದ ಸ್ತುತಿಗಳನ್ನು ನಿರ್ಮಿಸಿ ಪಠಿಸುತ್ತಾನೆ.

## English Translation

The sage the solemnizer of sacrifice, the ancient hearer (of holy prayer), earnestly repeats, Mitra and Varuna, your praises: he whose prayers, doers of good deeds, you favour, whose acts (of worship) you recompense not for years.

ವಿಶೇಷವಿಷಯಗಳು

"ನ ಶರದಃ" ಎನ್ನುವಾಗ ಭಾಷ್ಯದಲ್ಲಿ "ನ" ಎಂಬುದರ ಪ್ರಯೋಗದ ತಾತ್ಪರ್ಯವೇನು ಎಂಬುದನ್ನು ತಿಳಿಸಿಲ್ಲ. ಭಾಷಾಂತರದಲ್ಲಿ ಅದಕ್ಕೆ ನಿಷೇಧಾರ್ಥವನ್ನು ಸೂಚಿಸಿದೆ ಆದರೆ ಅದೇ ಭಾಷಾಂತರಕಾರನು (Wilson) ತನ್ನ Notesನಲ್ಲಿ ಅಧಿಕವಾದ ವಿವರಣೆಯನ್ನು ತಿಳಿಸಿದ್ದಾನೆ. Sayana passes by ನ which may be conjunction 'and' as well as the negative 'not'. In either case the sense is obscure, it may mean that the merit of the worship is so great that it cannot be adequately rewarded except after a long time

ಸಂಹಿತಾಪಾಠಃ

ಪ್ರೋರೋರ್ಮಿತ್ರಾವರುಣಾ ಪೃಥಿವ್ಯಾಃ ಪ್ರ ದಿವ ಋಷ್ವಾದ್ಬೃಹತಃ ಸುದಾನೂ ।
ಸ್ಪಶೋ ದಧಾಥೇ ಓಷಧೀಷು ವಿಕ್ಷ್ವೃಧಗ್ಯತೋ ಅನಿಮಿಷಂ ರಕ್ಷಮಾಣಾ ॥

ಪದಪಾಠಃ

ಪ್ರ । ಉರೋಃ । ಮಿತ್ರಾವರುಣಾ । ಪೃಥಿವ್ಯಾಃ । ಪ್ರ । ದಿವಃ । ಋಷ್ವಾತ್ । ಬೃಹತಃ । ಸುದಾನೂ ಇತಿ ಸುऽದಾನೂ ।
ಸ್ಪಶಃ । ದಧಾಥೇ ಇತಿ । ಓಷಧೀಷು । ವಿಕ್ಷು । ಋಧಕ್ । ಯತಃ । ಅನಿऽಮಿಷಂ । ರಕ್ಷಮಾಣಾ ॥ ೩ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣಾ ಮಿತ್ರಾವರುಣೌ ಯುವಾಮುರೋರ್ವಿಸ್ತೀರ್ಣಾಯಾಃ ಪೃಥಿವ್ಯಾ ಅಪಿ ಪ್ರ । ಪ್ರರಿರಿಚಾಥೇ । ಅಸ್ಯೇದೇವ ಪ್ರ ರಿರಿಚೇ । ಋ ೧-೬೧-೯ । ಇತ್ಯಾದಿಷು ಪ್ರಶಬ್ದಸ್ಯ ರಿರಿಚ ಇತ್ಯನೇನ ಸಹ ಸಂಬಂಧದರ್ಶನಾದತ್ರಾಪ್ಯುಚಿತಕ್ರಿಯಾಧ್ಯಾಹಾರೇಣ ರಿರಿಚ ಇತಿ ಯೋಜ್ಯಂ । ತಥರ್ಷ್ವಾದ್ಗುಣೈರ್ಮಹತೋ ಬೃಹತಃ ಸ್ವರೂಪತೋಽತಿಮಹತೋ ದಿವೋ ದ್ಯುಲೋಕಾದಪಿ ಪ್ರ ರಿರಿಚಾಥೇ ಹೇ ಸುದಾನೂ ಶೋಭನದಾನೌ । ಕಿಂಚೌಷಧೀಷು ವಿಕ್ಷು ಪ್ರಜಾಸು ನಿಮಿತ್ತಭೂತಾಸು ಪ್ರಜಾಸು ಚೇತಿ ವಾ ಸ್ಪಶೋ ರೂಪಂ ದಧಾಥೇ । ಧಾರಯೇಥೇ । ಕಿಂ ಕುರ್ವಂತೌ । ಋಧಗ್ಯತ ಋಧಕ್ಸತ್ಯೇನ ಯತೋ ವಿವೇಕಾತ್ ಸತ್ಯೇನ ಗಚ್ಛತೋ ಜನಾನನಿಮಿಷಮವ್ಯವಧಾನೇನ ಸರ್ವದಾ ರಕ್ಷಮಾಣಾ ಪಾಲಯಂತೌ ॥

ಪ್ರತಿಪದಾರ್ಥ

**ಮಿತ್ರಾವರುಣಾ**—ಎಲೈ ಮಿತ್ರಾವರುಣರೇ, ನೀವು । **ಉರೋಃ**—ವಿಸ್ತೃತವಾದ । **ಪೃಥಿವ್ಯಾಃ**—ಪೃಥಿವಿಗಿಂತಲೂ ಅಧಿಕವಾಗಿ । **ಪ್ರ**—ಮೀರಿ ಬೆಳೆದಿದ್ದೀರಿ. । **ಸುದಾನೂ**—ಉತ್ತಮವಾದ ದಾನವಂತರಾದ ಎಲೈ ಮಿತ್ರಾವರುಣರೇ, । **ಋಷ್ವಾತ್**—ಅಧಿಕವಾದ ಗುಣಗಳುಳ್ಳದ್ದೂ । **ಬೃಹತಃ**—ಮಹತ್ಸ್ವರೂಪವುಳ್ಳದ್ದೂ ಆದ । **ದಿವಃ**—

ದ್ಯುಲೋಕಕ್ಕಿಂತಲೂ ಅಧಿಕವಾಗಿ | **ಪ್ರ**—ಅದನ್ನು ಮೀರಿ ಬೆಳೆದಿದ್ದೀರಿ | **ಋಧಕ್ ಯತಃ** — ಸತ್ಯಮಾರ್ಗದಲ್ಲಿ ವ್ಯವಹರಿಸುವ ಜನರನ್ನು | **ಅನಿಮಿಷಂ**—ಸರ್ವದಾ | **ರಕ್ಷಮಾಣಾ**—ರಕ್ಷಿಸುವವರಾಗಿ | **ಓಷಧೀಷು**—ಓಷಧಿಗಳಲ್ಲಿಯೂ | **ವಿಕ್ಷು**—ಪ್ರಜೆಗಳಲ್ಲಿಯೂ | **ಸ್ಪಶಃ**—ಸುಂದರವಾದ ರೂಪವನ್ನು | **ದಧಾಥೇ**—ತುಂಬಿದ್ದೀರಿ

ಭಾವಾರ್ಥ

ಎಲೈ ಮಿತ್ರಾವರುಣರೇ, ನೀವು ವಿಸ್ತೃತವಾದ ಪೃಥ್ವಿಗಿಂತಲೂ ಅಧಿಕವಾಗಿ ಮೀರಿ ಬೆಳೆದಿದ್ದೀರಿ ಉತ್ತಮ ದಾನವಂತರಾದ ಎಲೈ ಮಿತ್ರಾವರುಣರೇ, ಅಧಿಕವಾದ ಗುಣಭರಿತವಾದುದೂ, ಮಹತ್ಸ್ವರೂಪವುಳ್ಳದ್ದೂ ಆದ ದ್ಯುಲೋಕಕ್ಕಿಂತಲೂ ಅಧಿಕವಾಗಿ ಅದನ್ನು ಮೀರಿ ಬೆಳೆದಿದ್ದೀರಿ ಸತ್ಯಮಾರ್ಗದಲ್ಲಿ ವ್ಯವಹರಿಸುವ ಜನರನ್ನು ಸರ್ವದಾ ರಕ್ಷಿಸುವವರಾಗಿ ಓಷಧಿಗಳಲ್ಲಿಯೂ ಪ್ರಜೆಗಳಲ್ಲಿಯೂ ಸುಂದರವಾದ ರೂಪವನ್ನು ತುಂಬಿದ್ದೀರಿ

English Translation

You are vaster, Mitra and Varuna, than the ample earth, vaster, bounteous donors, than the glorious and expansive heaven you maintain beauty in plants and in people, deligent observers of truth, and vigilantly protecting (us)

ವಿಶೇಷವಿಷಯಗಳು

**ಪ್ರ—ಪ್ರ ರಿರಿಚಾಥೇ** | ಈ ಋಕ್ಕಿನಲ್ಲಿ **ಪ್ರ** ಎಂಬ ಉಪಸರ್ಗದ ಜತೆಗೆ ಯಾವ ಕ್ರಿಯಾಪದವೂ ಇಲ್ಲದ್ದರಿಂದ **ರಿರಿಚಾಥೇ** ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು, ಹಿಂದೆ ಇದೇ ಸಂದರ್ಭದಲ್ಲಿರುವ ಋ. ಸಂ ೧-೬೧-೯ ನೇ ಋಕ್ಕಿನಲ್ಲಿ **ಅಸ್ಯೇದೇವ ಪ್ರ ರಿರಿಚೇ** ಪ್ರ ಎಂಬ ಉಪಸರ್ಗದ ಜತೆಯಲ್ಲಿ **ರಿರಿಚೇ** ಎಂಬ ಕ್ರಿಯಾಪದದ ಪ್ರಯೋಗವಿರುವುದರಿಂದಲೂ, ಸಾಧಾರಣವಾಗಿ ಪ್ರ ಎಂಬ ಶಬ್ದದ ಜತೆಯಲ್ಲಿ ರಿರಿಚೇ ಎಂಬ ಶಬ್ದದ ಪ್ರಯೋಗವಿರುವುದು ಕಂಡುಬರುವುದರಿಂದಲೂ ಇಲ್ಲಿಯೂ ಆ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳುವುದು ಯುಕ್ತವಾಗಿದೆಯೆಂದೂ ಭಾಷ್ಯಕಾರರು ವಿವರಿಸಿ ಅದರಂತೆ ಅರ್ಥವಿವರಣೆ ಮಾಡಿದಾರೆ

ಸಂಹಿತಾಪಾಠಃ

ಶಂಸಾ ಮಿತ್ರಸ್ಯ ವರುಣಸ್ಯ ಧಾಮ ಶುಷ್ಮೋ ರೋದಸೀ ಬದ್ಬಧೇ ಮಹಿತ್ವಾ

ಅಯನ್ಮಾಸಾ ಅಯಜ್ವನಾಮವೀರಾಃ ಪ್ರ ಯಜ್ಞಮನ್ಮಾ ವೃಜನಂ ತಿರಾತೇ॥

ಪದಪಾಠಃ

ಶಂಸ | ಮಿತ್ರಸ್ಯ | ವರುಣಸ್ಯ | ಧಾಮ | ಶುಷ್ಮಃ | ರೋದಸೀ ಇತಿ | ಬದ್ಬಧೇ | ಮಹಿಽತ್ವಾ |

ಅಯನ್ | ಮಾಸಾಃ | ಅಯಜ್ವನಾಂ | ಅವೀರಾಃ | ಪ್ರ | ಯಜ್ಞಽಮನ್ಮಾ | ವೃಜನಂ | ತಿರಾತೇ ‖ ೪ ‖

ಸಾಯಣಭಾಷ್ಯಂ

ಹೇ ಋಷೇ ಮಿತ್ರಸ್ಯ ವರುಣಸ್ಯ ಚ ಧಾಮ ತೇಜಃಸ್ಥಾನಂ ಶಂಸ। ಸ್ತುಹಿ । ಯಯೋರ್ದೇವಯೋಃ ಶುಷ್ಮೋ ಬಲಂ ರೋದಸೀ ದ್ಯಾವಾಪೃಥಿವ್ಯೌ ಸಹ ವರ್ತಮಾನೇ ಮಹಿತ್ವಾ ಸ್ವಮಹತ್ತ್ವೇನ ಬದ್ಬಧೇ ಬಧ್ನಾತಿ ಪೃಥಕ್ಸ್ಥಾಪಯತಿ ಇಯಂ ಪೃಥಿವೀಯಂ ದ್ಯೌರಿತಿ ಪೃಥಕ್ಕರೋತಿ। ದ್ಯಾವಾಪೃಥಿವೀ ಸಹಾಸ್ತಾಮಿತಿ ಶ್ರುತೇಃ। ಅಯಜ್ವನಾಮನನುಷ್ಠಾತೄಣಾಂ ಮಾಸಾಃ ಕಾಲಾವಯವಾ ಅವೀರಾ ಅಪುತ್ರಾ ಏವಾಯನ್। ಯಂತು। ಗಚ್ಛಂತು। ತದ್ವಿಪರೀತೋ ಯಜ್ಞಮನ್ಮಾ ಯಜ್ಞಾರ್ಥಂ ಮತಿಮಾನ್ಯಜ್ವಾ ವೃಜನಂ ಬಲಂ ಪ್ರ ತಿರಾತೇ। ಪ್ರವರ್ಧಯತು। ಪ್ರಪೂರ್ವಸ್ತಿರತಿರ್ವರ್ಧನಾರ್ಥಃ ॥

ಪ್ರತಿಪದಾರ್ಥ

**ಶುಷ್ಮಃ**—ಯಾವ ಮಿತ್ರಾವರುಣರ ಬಲವು । **ರೋದಸೀ**—ಒಟ್ಟಿಗಿದ್ದ ದ್ಯಾವಾಪೃಥಿವಿಗಳನ್ನು । **ಮಹಿತ್ವಾ**—ತನ್ನ ಮಹತ್ವದಿಂದ । **ಬದ್ಬಧೇ**—ಬೇರೆ ಮಾಡಿ ಇರಿಸಿತೋ ಅಂತಹ । **ಮಿತ್ರಸ್ಯ**—ಮಿತ್ರನ । **ವರುಣಸ್ಯ**—ವರುಣನ । **ಧಾಮ**—ತೇಜೋಯುತವಾದ ಸ್ಥಾನವನ್ನು । **ಶಂಸ**—ಪ್ರಶಂಸಿಸು. । **ಅಯಜ್ವನಾಂ**—ಯಾಗಾನುಷ್ಠಾನರಹಿತರಾದವರ । **ಮಾಸಾಃ**—ಕಾಲಗಳು । **ಅವೀರಾಃ**—ಪುತ್ರಾದಿರಹಿತವಾಗಿ । **ಅಯನ್**—ಕಳೆಯಲಿ । **ಯಜ್ಞಮನ್ಮಾ**—ಯಾಗಾನುಷ್ಠಾನಬುದ್ಧಿಯುಳ್ಳವನು । **ವೃಜನಂ**—ತನ್ನ ಬಲವನ್ನು । **ಪ್ರ ತಿರಾತೇ**—ಬೆಳೆಸಿಕೊಳ್ಳಲಿ

ಭಾವಾರ್ಥ

ಯಾವ ಮಿತ್ರಾವರುಣರ ಬಲವು ಮೊದಲು ಒಟ್ಟಿಗಿದ್ದ ದ್ಯಾವಾಪೃಥಿವಿಗಳನ್ನು ತನ್ನ ಮಹತ್ತ್ವದಿಂದ ಬೇರೆ ಮಾಡಿ ಇರಿಸಿತೋ ಅಂತಹ ಮಿತ್ರಾವರುಣರ ತೇಜೋಯುತವಾದ ಸ್ಥಾನವನ್ನು ಪ್ರಶಂಸಿಸು ಯಾಗಾನುಷ್ಠಾನರಹಿತರಿಗೆ ಪುತ್ರಾದಿಸಂಪತ್ತುಗಳಿಲ್ಲದೇ ಅವರ ಆಯಸ್ಸು ಕಳೆಯಲಿ. ಯಜ್ಞಕರ್ತನೂ ಕರ್ಮಬುದ್ಧಿಯುಳ್ಳವನೂ ತನ್ನ ಶಕ್ತಿಯನ್ನು ವೃದ್ಧಿಮಾಡಿಕೊಳ್ಳಲಿ.

English Translation

Praise the splendour of Mitra and Varuna, whose strength, by its mightiness, keeps heaven and earth asunder may the days of those who offer not worship pass without male descendants. may he who delights in sacrifice increase in prosperity

ವಿಶೇಷವಿಷಯಗಳು

**ರೋದಸೀ**—ಪೂರ್ವದಲ್ಲಿ ದ್ಯಾವಾಪೃಥಿವಿಗಳು ಎಂದರೆ ಭೂಮಿಯೂ ಸ್ವರ್ಗವೂ ಒಟ್ಟಿಗೆ ಸೇರಿಕೊಂಡಿದ್ದವು. ಅವುಗಳನ್ನು ಮಿತ್ರಾವರುಣರು ತಮ್ಮ ಮಾಹಾತ್ಮ್ಯೆಯಿಂದ ಬೇರೆಬೇರೆ ಮಾಡಿ ಮಧ್ಯಭಾಗದಲ್ಲಿ ಅಂತರಿಕ್ಷವನ್ನು ಸ್ಥಾಪಿಸಿದರು ಎಂಬ ಪೂರ್ವೇತಿಹಾಸವಿದೆ. ಇದನ್ನು **ದ್ಯಾವಾಪೃಥಿವೀ ಸಹಾಸ್ತಾಂ** (ತೈ ಬ್ರಾ. ೧-೧-೩-೨) ಎಂಬ ಶ್ರುತಿವಾಕ್ಯವು ಸಮರ್ಥಿಸುವುದು ಎಂದು ಹೇಳಿದಾರೆ.

ಸಂಹಿತಾಪಾಠಃ

ಅಮೂರಾ ವಿಶ್ವಾ ವೃಷಣಾವಿಮಾ ವಾಂ ನ ಯಾಸು ಚಿತ್ರಂ ದದೃಶೇ ನ ಯಕ್ಷಂ

ದ್ರುಹಃ ಸಚಂತೇ ಅನೃತಾ ಜನಾನಾಂ ನ ವಾಂ ನಿಣ್ಯಾನ್ಯಚಿತೇ ಅಭೂವನ್ ॥

ಪದಪಾಠಃ

ಅಮೂರಾ । ವಿಶ್ವಾ । ವೃಷಣೌ । ಇಮಾಃ । ವಾಂ । ನ । ಯಾಸು । ಚಿತ್ರಂ । ದದೃಶೇ । ನ । ಯಕ್ಷಂ ।

ದ್ರುಹಃ । ಸಚಂತೇ । ಅನೃತಾ । ಜನಾನಾಂ । ನ । ವಾಂ । ನಿಣ್ಯಾನಿ । ಅಚಿತೇ । ಅಭೂವನ್ ॥ ೫ ॥

ಸಾಯಣಭಾಷ್ಯಂ

ಹೇ ಅಮೂರಾಮೂಢೌ ಹೇ ವಿಶ್ವಾ ವ್ಯಾಪ್ತೌ ಹೇ ವೃಷಣೌ ವರ್ಷಿತಾರೌ ವಾಂ ಯುವಾಭ್ಯಾಮಿಮಾ ಇಮಾನಿ ಸ್ತುತಿವಚಾಂಸಿ ಕ್ರಿಯಂತೇ । ಯಾಸು ಸ್ತುತಿಷು ಚಿತ್ರಮಾಶ್ಚರ್ಯಂ ನ ದದೃಶೇ ನ ದೃಶ್ಯತೇ ನ ಯಕ್ಷಂ ನ ಪೂಜಾ ದೃಶ್ಯತೇ । ಯುವಾಭ್ಯಾಂ ಮಹಿಮ್ನೋಽಪಿ ಮಹತ್ತ್ವಾತ್ ಪ್ರಯತ್ನೇನ ಕ್ರಿಯಮಾಣಮಪಿ ಸ್ತೋತ್ರಂ ನ ಚಮತ್ಕರೋತೀತ್ಯರ್ಥಃ । ಜನಾನಾಮನೃತಾಸ್ತುತ್ಯವಿಷಯಾಣಿ ಸ್ತೋತ್ರಾಣಿ ದ್ರುಹೋ ದೋಗ್ಧಾರಃ ಸಚಂತೇ । ಸೇವಂತೇ । ನ ಮಹಾಂತಃ । ವಾಂ ಯುವಾಭ್ಯಾಂ ಕ್ರಿಯಮಾಣಾನಿ ನಿಣ್ಯಾನ್ಯಂತರ್ಹಿತಾನಿ ರಹಸ್ಯಾನ್ಯಪಿ ಸ್ತೋತ್ರಾಣ್ಯಚಿತೇಽಜ್ಞಾನಾಯ ನಾಭೂವನ್ । ನ ಭವಂತಿ॥

ಪ್ರತಿಪದಾರ್ಥ

**ಅಮೂರಾ**—ವಿವೇಕಿಗಳೂ । **ವಿಶ್ವಾ**—ವ್ಯಾಪಕರೂ । **ವೃಷಣೌ** — ಇಷ್ಟಾರ್ಥಪ್ರದರೂ ಆದ ಎಲೈ ಮಿತ್ರಾವರುಣರೇ, । **ಯಾಸು**—ಯಾವ ಸ್ತುತಿಗಳಲ್ಲಿ । **ಚಿತ್ರಂ**—ಯಾವ ಚಮತ್ಕಾರಗಳೂ । **ನ ದದೃಶೇ**—ಕಾಣುವುದಿಲ್ಲವೋ । **ನ ಯಕ್ಷಂ**—ಯಾವ ಪೂಜಾಸಾಮಗ್ರಿಯೂ ಇರುವುದಿಲ್ಲವೋ ಅಂತಹ । **ಇಮಾಃ**—ಈ ಸ್ತುತಿವಾಕ್ಯಗಳು । **ವಾಂ**—ನಿಮ್ಮನ್ನುದ್ದೇಶಿಸಿ ಅರ್ಪಿತವಾಗಿವೆ । **ಜನಾನಾಂ**—ಅಪ್ರಾಮಾಣಿಕರಾದ ಜನರ । **ಅನೃತಾ**—ಅಸದ್ವಾಕ್ಯಗಳು । **ದ್ರುಹಃ**—ದ್ರೋಹಾತ್ಮಕಗಳಾಗಿ । **ಸಚಂತೇ**—ಸೇವಿಸಲ್ಪಡುತ್ತವೆ । **ವಾಂ**—ನಿಮ್ಮನ್ನುದ್ದೇಶಿಸಿದ **ನಿಣ್ಯಾಣಿ**—ಸ್ತುತಿವಾಕ್ಯಗಳು ರಹಸ್ಯವಾಗಿದ್ದರೂ ಸಹ । **ಅಚಿತೇ**—ನಿಮ್ಮಿಂದ ಸೇವಿಸಲ್ಪಡದೇ । **ನ ಅಭೂವನ್**—ಇರುವುದಿಲ್ಲ

ಭಾವಾರ್ಥ

ವಿವೇಕಿಗಳೂ, ವ್ಯಾಪಕರೂ, ಇಷ್ಟಾರ್ಥಪ್ರದರೂ ಆದ ಎಲೈ ಮಿತ್ರಾವರುಣರೇ, ಯಾವ ಅಸಜ್ಜನರ ಸ್ತುತಿವಾಕ್ಯಗಳಲ್ಲಿ ಚಮತ್ಕಾರಗಳಾಗಲಿ ಅಥವಾ ಪೂಜಾಸಾಮಗ್ರಿಯಾಗಲಿ ಇರುವುದಿಲ್ಲವೋ ಅಂತಹ ದುರ್ವಾಕ್ಯಗಳು ನಿಮಗೆ ಅರ್ಪಿತವಾಗುತ್ತದೆ ಇಂತಹ ಅಪ್ರಾಮಾಣಿಕವೂ, ದ್ರೋಹಾತ್ಮಕವೂ ಆದ ವಾಕ್ಯಗಳು ನಿಮ್ಮನ್ನು ಕ್ರೋಧಗೊಳಿಸುತ್ತವೆ. ಆದರೆ ಪ್ರಾಮಾಣಿಕರಾದ ನಮ್ಮಿಂದ ಅರ್ಪಿತವಾಗುವ ಸ್ತುತಿಗಳು ರಹಸ್ಯವಾಗಿದ್ದರೂ ಸಹ ಅವು ನಿಮ್ಮ ಗಮನಕ್ಕೆ ಬಿದ್ದೇ ಬೀಳುತ್ತವೆ ನೀವು ಅವನ್ನು ಖಂಡಿತ ಸೇವಿಸುತ್ತೀರಿ

English Translation

Unperplexed, all-pervading showerers (of benefits), these (praises) are for you, in which nothing surprising, no adoration (worthy of you), is

beheld . the insincere commendations of men serve as offences eulogies of you, although offered in secret, are not unappreciated.

ಸಂಹಿತಾಪಾಠಃ

ಸಮು ವಾಂ ಯಜ್ಞಂ ಮಹಯಂ ನಮೋಭಿರ್ಹುವೇ ವಾಂ ಮಿತ್ರಾವರುಣಾ ಸಬಾಧಃ ।
ಪ್ರ ವಾಂ ಮನ್ಮಾನ್ಯೃಚಸೇ ನವಾನಿ ಕೃತಾನಿ ಬ್ರಹ್ಮ ಜುಜುಷನ್ನಿಮಾನಿ ॥೬॥

ಪದಪಾಠಃ

ಸಂ । ಊಂ ಇತಿ । ವಾಂ । ಯಜ್ಞಂ । ಮಹಯಂ । ನಮಃಽಭಿಃ । ಹುವೇ । ವಾಂ । ಮಿತ್ರಾವರುಣಾ । ಸಽಬಾಧಃ ।
ಪ್ರ । ವಾಂ । ಮನ್ಮಾನಿ । ಋಚಸೇ । ನವಾನಿ । ಕೃತಾನಿ । ಬ್ರಹ್ಮ । ಜುಜುಷನ್ । ಇಮಾನಿ ॥ ೬ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ವಾಂ ಯುವಯೋರ್ಯಜ್ಞಂ ನಮೋಭಿರ್ನಮಸ್ಕಾರೈಃ ಸ್ತುತಿಭಿಃ ಸಮು ಮಹಯಂ । ಸಂಪೂಜಯಾಮ್ಯಹಂ । ತದರ್ಥಂ ಹೇ ಮಿತ್ರಾವರುಣಾ ಮಿತ್ರಾವರುಣೌ ವಾಂ ಸಬಾಧೋ ಬಾಧಾಯುಕ್ತೋಽಹಂ ಹುವೇ । ಆಹ್ವಯಾಮಿ ಬಾಧಾಪರಿಹಾರಾಯ । ವಾಂ ಯುವಾಮೃಚಸೇ ಸೇವಿತುಂ ನವಾನಿ ನೂತನಾನಿ ಸ್ತುತ್ಯಾನಿ ವಾ ಮನ್ಮಾನಿ ಸ್ತೋತ್ರಾಣಿ ಪ್ರ ಭವಂತ್ವಿತ್ಯಧ್ಯಾಹಾರಃ । ಕೃತಾನಿ ಮಯಾ ಸಮೂಹೀಕೃತಾನೀಮಾನೀದಾನೀಂ ಕ್ರಿಯಮಾಣಾನಿ ಬ್ರಹ್ಮ ಪರಿವೃಢಾನಿ ಸ್ತೋತ್ರಾಣಿ ಯುವಾಂ ಜುಜುಷನ್ । ಪ್ರೀಣಯಂತು ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ,) **ವಾಂ**—ನಿಮ್ಮನ್ನುದ್ದೇಶಿಸಿ । **ನಮೋಭಿಃ** — ನಮಸ್ಕಾರಗಳಿಂದ ಕೂಡಿದ । **ಯಜ್ಞಂ**—ಯಜ್ಞವನ್ನು । **ಸಮು ಮಹಯಂ**—ಪೂಜಾರೂಪದಲ್ಲಿ ಅರ್ಪಿಸುತ್ತೇನೆ । **ಮಿತ್ರಾವರುಣಾ**—ಎಲೈ ಮಿತ್ರಾವರುಣರೇ, । **ಸಬಾಧಃ**—ಹಿಂಸೆಯಿಂದ ಆವೃತನಾದ ನಾನು । **ವಾಂ**—ನಿಮ್ಮನ್ನು । **ಹುವೇ**—ಕರೆಯುತ್ತೇನೆ. । **ವಾಂ**—ನಿಮ್ಮನ್ನು । **ಋಚಸೇ**—ಸೇವಿಸಲು । **ನವಾನಿ**—ನೂತನಗಳಾದ । **ಮನ್ಮಾನಿ**—ಸ್ತೋತ್ರಗಳು । **ಪ್ರ (ಭವಂತಿ)**—ನಿರ್ಮಿತವಾಗುತ್ತವೆ. । **ಕೃತಾನಿ**—ನನ್ನಿಂದ ನಿರ್ಮಿತಗಳಾದ । **ಇಮಾನಿ ಬ್ರಹ್ಮ**—ಈ ಸ್ತೋತ್ರಗಳು । **ಜುಜುಷನ್**—ನಿಮ್ಮನ್ನು ಹರ್ಷಗೊಳಿಸಲಿ.

ಭಾವಾರ್ಥ

ಎಲೈ ಮಿತ್ರಾವರುಣರೇ, ನಿಮ್ಮನ್ನುದ್ದೇಶಿಸಿ ನಮಸ್ಕಾರಗಳಿಂದ ಕೂಡಿದ ಯಜ್ಞವನ್ನು ಪೂಜಾರೂಪದಲ್ಲಿ ಅರ್ಪಿಸುತ್ತೇನೆ. ಎಲೈ ಮಿತ್ರಾವರುಣರೇ, ಹಿಂಸೆಯಿಂದ ಆವೃತನಾದ ನಾನು ನಿಮ್ಮನ್ನು ಕರೆಯುತ್ತೇನೆ. ನಿಮ್ಮನ್ನು

ಸೇವಿಸಲು ನೂತನಗಳಾದ ಸ್ತೋತ್ರಗಳು ನಿರ್ಮಿತವಾಗುತ್ತವೆ  ನಮ್ಮಿಂದ ರಚಿತವಾದ ಈ ಸ್ತೋತ್ರಗಳು ನಿಮ್ಮನ್ನು ಹರ್ಷಗೊಳಿಸಲಿ

English Translation

I offer sacrifice to you two with praises, I invoke you, Mitra and Varuna, when in trouble  may the present hymns be capable of gratifying you  may these (my) prayers be acceptable to you both

ಸಂಹಿತಾಪಾಠಃ

ಇಯಂ ದೇವ ಪುರೋಹಿತಿರ್ಯುವಭ್ಯಾಂ ಯಜ್ಞೇಷು ಮಿತ್ರಾವರುಣಾವ-
ಕಾರಿ ।
ವಿಶ್ವಾನಿ ದುರ್ಗಾ ಪಿಪೃತಂ ತಿರೋ ನೋ ಯೂಯಂ ಪಾತ ಸ್ವಸ್ತಿಭಿಃ ಸದಾ
ನಃ ॥ ೭ ॥

ಪದಪಾಠಃ

ಇಯಂ । ದೇವಾ । ಪುರಃಽಹಿತಿಃ । ಯುವಽಭ್ಯಾಂ । ಯಜ್ಞೇಷು । ಮಿತ್ರಾವರುಣೌ । ಅಕಾರಿ ।

ವಿಶ್ವಾನಿ । ದುಃಽಗಾ । ಪಿಪೃತಂ । ತಿರಃ । ನಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೭ ॥

ಸಾಯಣಭಾಷ್ಯಂ

**ಅನಯಾ ಸ್ತುತಿಮುಪಸಂಹರತಿ । ಹೇ ದೇವಾ ದೇವೌ ಮಿತ್ರಾವರುಣೌ ಯುವಭ್ಯಾಂ ಯುವಾ-ಭ್ಯಾಂ ಯಜ್ಞೇಷ್ವಿಯಂ ಪುರೋಹಿತಿಃ ಪುರಸ್ಕ್ರಿಯಾ ಪೂಜಾ ಸ್ತುತಿಲಕ್ಷಣಾಕಾರಿ । ಕೃತಾಭೂತ್ । ತಾಂ ಸೇವಿತ್ವಾ ವಿಶ್ವಾನಿ ಸರ್ವಾಣಿ ದುರ್ಗಾ ದುಃಖೇನ ಗಂತವ್ಯಾನ್ಯಾಪದಸ್ತಿರಃ । ತಿರಸ್ಕುರುತಂ । ತಥಾ ಕೃತ್ವಾ ನೋಽಸ್ಮಾನ್ ಪಿಪೃತಂ ಪಾರಯತಂ । ಶಿಷ್ಟೋ ಗತಃ ॥**

ಪ್ರತಿಪದಾರ್ಥ

**ದೇವಾ**—ದೇವತಾತ್ಮರಾದ । **ಮಿತ್ರಾವರುಣಾ**—ಎಲೈ ಮಿತ್ರಾವರುಣರೇ, । **ಯುವಾಭ್ಯಾಂ**—ನಿಮ್ಮನ್ನುದ್ದೇಶಿಸಿ । **ಇಯಂ ಪುರೋಹಿತಿಃ**—ನಿಮ್ಮ ಮುಂದೆ ಅರ್ಪಿಸುವ ಈ ಸ್ತುತಿರೂಪವಾದ ಪೂಜೆಯು । **ಯಜ್ಞೇಷು**—ಯಜ್ಞಗಳಲ್ಲಿ । **ಅಕಾರಿ**—ಸಂಪಾದಿತವಾಗಿದೆ । (ಇದನ್ನು ಸೇವಿಸುತ್ತ) **ವಿಶ್ವಾನಿ**—ಸಮಸ್ತವಾದ । **ದುರ್ಗಾ**—ಆಪತ್ತುಗಳನ್ನೂ । **ತಿರಃ**—ನಾಶಮಾಡಿರಿ. । **ನಃ**—ನಮ್ಮನ್ನು । **ಪಿಪೃತಂ**—ಕಷ್ಟದಿಂದ ದಾಟಿಸಿರಿ. । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

### ಭಾವಾರ್ಥ

ದೇವತಾತ್ಮರಾದ ಎಲೈ ಮಿತ್ರಾವರುಣರೇ, ನಿಮ್ಮನ್ನುದ್ದೇಶಿಸಿ ನಿಮ್ಮ ಮುಂದೆ ಅರ್ಪಿಸುವ ಸ್ತುತಿರೂಪವಾದ ಪೂಜೆಯು ಯಜ್ಞಗಳಲ್ಲಿ ಸಂಪಾದಿತವಾಗಿದೆ ಇದನ್ನು ಸೇವಿಸುತ್ತ ಸಮಸ್ತವಾದ ಆಪತ್ತುಗಳನ್ನು ನಾಶಮಾಡಿರಿ. ನಮ್ಮನ್ನು ಕಷ್ಟದಿಂದ ದಾಟಿಸಿರಿ ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

### English Translation

To you, divine Mitra and Varna, to you this adoration at sacrifice is addressed: remove from us all difficulties, and ever cherish us with blessings

---

## ಅರವತ್ತೆರಡನೆಯ ಸೂಕ್ತವು

### ಸಾಯಣಭಾಷ್ಯಂ

**ಉತ್ಸೂರ್ಯ ಇತಿ ಷಳೃಚಂ ಸಪ್ತಮಂ ಸೂಕ್ತಂ । ಅತ್ರಾನುಕ್ರಮಣಿಕಾ । ಉತ್ಸೂರ್ಯಃ ಷಳಾದ್ಯಾಸ್ತಿಸ್ರಃ ಸೌರ್ಯ ಇತಿ । ವಸಿಷ್ಠ ಋಷಿಃ । ತ್ರಿಷ್ಟುಪ್ ಛಂದಃ । ಆದ್ಯಾಸ್ತಿಸ್ರಃ ಸೂರ್ಯದೇವತ್ಯಾಃ ಶಿಷ್ಟಾ ಮಿತ್ರಾವರುಣದೇವತ್ಯಾಃ ॥ ಸೂಕ್ತವಿನಿಯೋಗೋ ಲೈಂಗಿಕಃ ॥**

**ಅನುವಾದವು—ಉತ್ಸೂರ್ಯಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ಉತ್ಸೂರ್ಯಃ ಷಳಾದ್ಯಾಸ್ತಿಸ್ರಃ ಸೌರ್ಯಃ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ತ್ರಿಷ್ಟುಪ್‌ಛಂದಸ್ಸು, ಈ ಸೂಕ್ತದ ಮೊದಲಿನ ಮೂರು ಋಕ್ಕುಗಳಿಗೆ ಸೂರ್ಯನು ದೇವತೆಯು, ಉಳಿದ ಋಕ್ಕುಗಳಿಗೆ ಮಿತ್ರಾವರುಣರು ದೇವತೆಯು. ಸೂಕ್ತವಿನಿಯೋಗವು ಲೈಂಗಿಕವು.

### ಸೂಕ್ತ—೬೨

ಮಂಡಲ—೭ ॥ ಅನುವಾಕ—೪ ॥ ಸೂಕ್ತ—೬೨ ॥
ಅಷ್ಟಕ—೫ ॥ ಅಧ್ಯಾಯ—೫ ॥ ವರ್ಗ—೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ವಸಿಷ್ಠಃ ॥
ದೇವತಾ—೧—೩ ಸೂರ್ಯಃ । ೪—೬ ಮಿತ್ರಾವರುಣೌ ॥
ಛಂದಃ—ತ್ರಿಷ್ಟುಪ್ ।

### ಸಂಹಿತಾಪಾಠಃ

**ಉತ್ಸೂರ್ಯೋ ಬೃಹದರ್ಚೀಂಷ್ಯಶ್ರೇತ್ಪುರು ವಿಶ್ವಾ ಜನಿಮ ಮಾನುಷಾಣಾಂ।**
**ಸಮೋ ದಿವಾ ದದೃಶೇ ರೋಚಮಾನಃ ಕ್ರತ್ವಾ ಕೃತಃ ಸುಕೃತಃ ಕರ್ತೃಭಿ-**
**ರ್ಭೂತ್ ॥ ೧ ॥**

ಪದಪಾಠಃ

ಉತ್ | ಸೂರ್ಯಃ | ಬೃಹತ್ | ಅರ್ಚೀಂಷಿ | ಅಶ್ರೇತ್ | ಪುರು | ವಿಶ್ವಾ | ಜನಿಮ | ಮಾನುಷಾಣಾಂ |

ಸಮಃ | ದಿವಾ | ದದೃಶೇ | ರೋಚಮಾನಃ | ಕ್ರತ್ವಾ | ಕೃತಃ | ಸುಽಕೃತಃ | ಕರ್ತೃಽಭಿಃ | ಭೂತ್ ||೧||

ಸಾಯಣಭಾಷ್ಯಂ

ಸೂರ್ಯಃ ಸರ್ವಸ್ಯ ಪ್ರೇರಕೋ ದೇವೋ ಬೃಹದತ್ಯಧಿಕಂ ಪುರು ಪುರೂಣಿ ಬಹೂನ್ಯರ್ಚೀಂಷಿ ತೇಜಾಂಸ್ಯುದಶ್ರೇತ್ | ಊರ್ಧ್ವಂ ಶ್ರಯತಿ | ಕಿಂ ಪ್ರತಿ | ಮಾನುಷಾಣಾಂ ಮನುಷ್ಯಾಣಾಂ ವಿಶ್ವಾ ಸರ್ವಾಣಿ ಜನಿಮ ಜನಿಮಾನಿ ಜನಾನ್ | ಜನಶಬ್ದಃ ಸಂಘವಚನಃ | ತಾನ್ಪ್ರತ್ಯುದಶ್ರೇತ್ | ಸ ದೇವೋ ದಿವಾಹನಿ ರೋಚಮಾನಃ ಸನ್ ಸಮೋ ದದೃಶೇ | ಏಕರೂಪಃ ಪ್ರತಿನಿಯತಃ ಸನ್ದೃಶ್ಯತೇ | ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತೀತಿ ಹಿ ಶ್ರುತಿಃ | ಸ ದೇವಃ ಕ್ರತ್ವಾ ಸರ್ವಸ್ಯ ಕರ್ತಾ ಕೃತಃ ಸಂಪಾದಿತಃ ಪ್ರಜಾಪತಿನಾ ಕರ್ತೃಭಿಃ ಸ್ತುತಿಕರ್ತೃಭಿಃ ಸುಕೃತಃ ಸ್ತುತ್ಯಾ ತೀಕ್ಷ್ಣೀಕೃತೋ ಭೂತ್ | ಭವತಿ ||

ಪ್ರತಿಪದಾರ್ಥ

**ಸೂರ್ಯಃ**—ಸರ್ವಪ್ರೇರಕನಾದ ಸೂರ್ಯನು | **ಬೃಹತ್**—ಪ್ರಭೂತವಾದುದೂ | **ಪುರು**—ಅನೇಕವಿಧವಾದುದೂ ಆದ | **ಅರ್ಚೀಂಷಿ**—ತನ್ನ ತೇಜಸ್ಸುಗಳನ್ನು | **ಉದಶ್ರೇತ್**—ಊರ್ಧ್ವಮುಖವಾಗಿ ಹರಡುತ್ತಾನೆ. | **ಮಾನುಷಾಣಾಂ**—ಮಾನವರ | **ವಿಶ್ವಾ**—ಸಮಸ್ತವಾದ | **ಜನಿಮ**—ಸಂಘಗಳ ಮೇಲೂ ತನ್ನ ತೇಜಸ್ಸುಗಳನ್ನು ಹರಡುತ್ತಾನೆ | **ದಿವಾ**—ಅಹಸ್ಸುಗಳಲ್ಲಿ | **ರೋಚಮಾನಃ**—ಪ್ರಕಾಶಿಸುತ್ತ | **ಸಮಃ**—ಎಲ್ಲರಿಂದಲೂ ಒಂದೇ ವಿಧವಾಗಿ | **ದದೃಶೇ**—ಕಾಣಲ್ಪಡುತ್ತಾನೆ | **ಕ್ರತ್ವಾ**—ಸಕಲವನ್ನು ನಿರ್ಮಿಸುವವನೂ | **ಕೃತಃ**—ತಾನೇ ಪ್ರಜಾಪತಿಯಿಂದ ನಿರ್ಮಿತನೂ ಆದ ಸೂರ್ಯನು | **ಕರ್ತೃಭಿಃ**—ಸ್ತುತಿಕರ್ತರಿಂದ | **ಸುಕೃತಃ**—ಉತ್ತಮವಾಗಿ ಸಂಸ್ಕರಿಸಲ್ಪಟ್ಟವನಾಗಿ | **ಭೂತ್**—ಆಗುತ್ತಾನೆ.

ಭಾವಾರ್ಥ

ಸರ್ವಪ್ರೇರಕನಾದ ಸೂರ್ಯನು ಪ್ರಭೂತವಾದುದೂ, ಅನೇಕವಿಧವಾದುದೂ ಆದ ತನ್ನ ತೇಜಸ್ಸುಗಳನ್ನು ಊರ್ಧ್ವಮುಖವಾಗಿ ಹರಡುತ್ತಾನೆ ಮಾನವರ ಸಮಸ್ತ ಸಂಘಗಳ ಮೇಲೂ ತನ್ನ ತೇಜಸ್ಸುಗಳನ್ನು ಹರಡುತ್ತಾನೆ. ಅಹಸ್ಸುಗಳಲ್ಲಿ ಪ್ರಕಾಶಿಸುತ್ತ ಎಲ್ಲರಿಂದಲೂ ಒಂದೇ ವಿಧವಾಗಿ ಕಾಣಲ್ಪಡುತ್ತಾನೆ ಸಕಲವನ್ನು ನಿರ್ಮಿಸುವವನೂ ತಾನೇ ಪ್ರಜಾಪತಿಯಿಂದ ನಿರ್ಮಿತನೂ ಆದ ಸೂರ್ಯನು ಸ್ತುತಿಕರ್ತರಿಂದ ಉತ್ತಮವಾಗಿ ಸಂಸ್ಕರಿಸಲ್ಪಟ್ಟವನಾಗಿ ಆಗುತ್ತಾನೆ

## English Translation

Sury aspreads his vast and numerous rays over all the crowds of men, shining bright by day, he is beheld (by all) the same, the creator, the created, he is glorified by his worshippers.

ಸಂಹಿತಾಪಾಠಃ

ಸ ಸೂರ್ಯ ಪ್ರತಿ ಪುರೋ ನ ಉದ್ಗಾ ಏಭಿಃ ಸ್ತೋಮೇಭಿರೇತಶೇಭಿರೇವೈಃ ।
ಪ್ರ ನೋ ಮಿತ್ರಾಯ ವರುಣಾಯ ವೋಚೋಽನಾಗಸೋ ಅರ್ಯಮ್ಣೇ
ಅಗ್ನಯೇ ಚ ॥ ೨ ॥

ಪದಪಾಠಃ

ಸಃ । ಸೂರ್ಯ । ಪ್ರತಿ । ಪುರಃ । ನಃ । ಉತ್ । ಗಾಃ । ಏಭಿಃ । ಸ್ತೋಮೇಭಿಃ । ಏತಶೇಭಿಃ । ಏವೈಃ ।
ಪ್ರ । ನಃ । ಮಿತ್ರಾಯ । ವರುಣಾಯ । ವೋಚಃ । ಅನಾಗಸಃ । ಅರ್ಯಮ್ಣೇ । ಅಗ್ನಯೇ । ಚ ॥ ೨ ॥

ಸಾಯಣಭಾಷ್ಯಂ

ಹೇ ಸೂರ್ಯ ಸ ಪ್ರಸಿದ್ಧಸ್ತ್ವಂ ನೋಽಸ್ಮಾನ್ಪ್ರತಿ ಪುರಃ ಪುರಸ್ತಾದುದ್ಗಾಃ । ಉದ್ಗಚ್ಛ । ಕೈಃ ಸಾಧನೈಃ । ಏಭಿಃ ಸ್ತೋಮೇಭಿಃ ಸ್ತೋಮೈಃ ಸ್ತುತ್ಯೈರೇತಶೇಭಿರೇತವರ್ಣೈಃ ॥ ಸ್ವಾರ್ಥಿಕಃ ಶಕಾರಃ ಯಾ ಜರಂತಾ ಯುವಶಾ ತಾ । ಋ ೧ ೧೬೧-೭ । ಪುರುಷಃ ಕೃಷ್ಣಶವಾಸ್ಯುತ್ತರತಃ । ಐ. ಬ್ರಾ ೫ ೧೪ । ಇತ್ಯಾದಿವತ್ ॥ ತಾದೃಶೈರೇವೈರ್ಗಮನಶೀಲೈರಶ್ವೈರುದ್ಗಾಃ । ಅಥ ತಥಾ ಕೃತ್ವಾಸ್ಮಾಭಿಃ ಸ್ತುತಃ ಸನ್ನೋಽಸ್ಮಾನನಾಗಸೋಽಪಾಪಾನ್ಪ್ರ ವೋಚಃ । ಕೇಭ್ಯಃ । ಮಿತ್ರಾಯ ವರುಣಾಯಾರ್ಯಮ್ಣೇಽಗ್ನಯೇ ಚ । ಅತ್ರ ಸೌರ್ಯ ಇತರೇಷಾಂ ಮಿತ್ರಾದೀನಾಂ ಸಂಕೀರ್ತನಂ ತೇಷಾಮಪಿ ನಿಪಾತಭಾಕ್ತ್ವಾದವಿರುದ್ಧಂ । ಏವಂ ಪೂರ್ವತ್ರೋತ್ತರತ್ರ ಚ ಮೈತ್ರಾವರುಣೇಽರ್ಯಮಾದೀನಾಂ ಸಂಕೀರ್ತನಮಪಿ ನ ವಿರುಧ್ಯತೇ ॥

ಪ್ರತಿಪದಾರ್ಥ

**ಸೂರ್ಯ**—ಎಲೈ ಸೂರ್ಯನೇ । **ಸಃ**—ಪ್ರಸಿದ್ಧನಾದ ನೀನು । **ಸ್ತೋಮೇಭಿಃ**—ಪ್ರಶಸ್ಯವಾದುದೂ । **ಏತಶೇಭಿಃ**—ಪ್ರಭಾಯುತವಾದವೂ ಆದ । **ಏಭಿಃ ಏವೈಃ**—ಈ ಅಶ್ವಗಳೊಡಗೂಡಿ । **ನಃ ಪ್ರತಿ**—ನಮಗಭಿಮುಖನಾಗಿ । **ಪುರಃ**—ನಮ್ಮ ಮುಂಭಾಗದಲ್ಲಿ । **ಉದ್ಗಾಃ**—ಉದಯಿಸಿ ಬಾ । **ಮಿತ್ರಾಯ**—ಮಿತ್ರನಲ್ಲಿಯೂ । **ವರುಣಾಯ**—ವರುಣನಲ್ಲಿಯೂ । **ಅರ್ಯಮ್ಣೇ**—ಅರ್ಯಮನಲ್ಲಿಯೂ । **ಅಗ್ನಯೇ ಚ**—ಅಗ್ನಿಯ ಮುಂದೆಯೂ । **ನಃ**—ನಮ್ಮನ್ನು । **ಅನಾಗಸಃ**—ಪಾಪರಹಿತರೆಂಬುದಾಗಿ । **ಪ್ರ ವೋಚಃ**—ಪ್ರಕಟಿಸಿ ಹೇಳು.

ಭಾವಾರ್ಥ

ಎಲೈ ಸೂರ್ಯದೇವನೇ, ಪ್ರಸಿದ್ಧನಾದ ನೀನು ಪ್ರಶಸ್ಯವಾದವೂ, ಪ್ರಭಾಯುತವಾದವೂ ಆದ ನಿನ್ನ ಅಶ್ವಗಳೊಡಗೂಡಿ ನಮಗಭಿಮುಖನಾಗಿ ನಮ್ಮ ಮುಂಭಾಗದಲ್ಲಿ ಉದಯಿಸಿ ಬಾ. ಮಿತ್ರನಲ್ಲಿಯೂ, ಅರ್ಯಮ ಮತ್ತು ಅಗ್ನಿಯ ಮುಂದೆಯೂ ನಮ್ಮನ್ನು ಪಾಪರಹಿತರೆಂದು ಪ್ರಕಟಿಸಿ ತಿಳಿಸು.

## English Translation

Rise up before us, Surya, with your glorious white horses declare us free from sin to Mitra, Varuna, Aryaman and Agni

ಸಂಹಿತಾಪಾಠಃ

ವಿ ನಃ ಸಹಸ್ರಂ ಶುರುಧೋ ರದಂತ್ವೃತಾವಾನೋ ವರುಣೋ ಮಿತ್ರೋ ಅಗ್ನಿಃ ಯಚ್ಛಂತು ಚಂದ್ರಾ ಉಪಮಂ ನೋ ಅರ್ಕಮಾ [illegible] ನಃ ಪೂಪುರಂತು ಸ್ತವಾನಾಃ ॥ ೩ ॥

ಪದಪಾಠಃ

ವಿ । ನಃ । ಸಹಸ್ರಂ । ಶುರುಧಃ । ರದಂತು । ಋತಾವಾನಃ [illegible] । ಯಚ್ಛಂತು । ಚಂದ್ರಾಃ । ಉಪಮಂ । ನಃ । ಅರ್ಕಂ । [illegible] ಪೂಪುರಂತು । ಸ್ತವಾನಾಃ ॥ ೩ ॥

ಸಾಯಣಭಾಷ್ಯ

ನೋಽಸ್ಮಭ್ಯಂ ಶುರುಧಃ ಶುಚೋರ್ದುಃಖಸ್ಯ ಪ್ರತಿ[illegible] [illegible] ಮಿತ್ರೋ ವರು- ಣಾದಯಃ ಸಹಸ್ರಂ ಸಹಸ್ರಸಂಖ್ಯಾಕಂ ಧನಂ ವಿರದಂತು [illegible] । [illegible] ಪ್ಸಣಾಃ ಸಹಸ್ರಸಂಖ್ಯಾಕಾ ಓಷಧೀ ರದಂತು । ಕಿಂ ಚ [illegible] ಆಹ್ಲಾದಕಾರಿಣೋಽಸ್ಮಭ್ಯಮು ಪಮಂ ಸ್ತುತ್ಯಮರ್ಕಮರ್ಚನೀಯಂ ಯಚ್ಛಂತು । ಕಿಂಚ [illegible] ಅಸ್ಮಾಭಿಃ ಸ್ತೂಯಮಾನಾ ನೋಽಸ್ಮಾಕಂ ಕಾಮುಮುಪೇಕ್ಷಿತಂ ಪೂಪುರಂತು । ಪೂರಯಂತ್ವ । ಹೇ ಸೂರ್ಯ ತ್ವಯಾನುಜ್ಞಾತಾ ಇತಿ ಸೂರ್ಯಸ್ಯ ಸ್ತುತಿಃ ॥

ಪ್ರತಿಪದಾರ್ಥ

**ಶುರುಧಃ**—ದುಃಖನಾಶಕರೂ । **ಋತಾವಾನಃ**—[illegible] **ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅಗ್ನಿಃ**—ಅಗ್ನಿಯೂ । **ನಃ**—ನಮಗೆ । **ಸಹಸ್ರಂ**—[illegible] ವಾದ ಧನವನ್ನು । **ವಿ ರದಂತು**—ನಮಗೆ ಕೊಡಲಿ । **ಚಂದ್ರಾಃ**—ಆಹ್ಲಾದಕಾರಕರಾದ [illegible] । **ಉಪಮಂ**—ಅಸಾಧಾರಣವೂ । **ಅರ್ಕಂ**—ಪೂಜ್ಯವೂ ಆದ ಅನ್ನವನ್ನು । **ನಃ ಯಚ್ಛಂತು**—[illegible] । **ಸ್ತವಾನಾಃ**—ನಮ್ಮಿಂದ ಸ್ತುತಿಸಲ್ಪಡುವ ಈ ದೇವತೆಗಳು । **ನಃ**—ನಮ್ಮ । **ಕಾಮಂ**—ಇಷ್ಟಾರ್ಥವನ್ನು । **ಆ ಪೂಪುರಂತು**—ತುಂಬಿ ಕೊಡಲಿ

ಭಾವಾರ್ಥ

ದುಃಖನಾಶಕರೂ, ಸತ್ಯಪಾಲಕರೂ ಆದ ವರುಣನೂ ಮಿತ್ರನೂ ಅಗ್ನಿಯೂ ನಮಗೆ ಸಹಸ್ರಸಂಖ್ಯಾಕವಾದ ಧನವನ್ನು ಕೊಡಲಿ. ಆಹ್ಲಾದಕಾರಕರಾದ ಈ ದೇವತೆಗಳು ಅಸಾಧಾರಣವೂ ಪೂಜ್ಯವೂ ಆದ ಅನ್ನವನ್ನು ನಮಗೆ ಕೊಡಲಿ. ನಮ್ಮಿಂದ ಸ್ತುತಿಸಲ್ಪಡುವ ಈ ದೇವತೆಗಳು ನಮ್ಮ ಇಷ್ಟಾರ್ಥಗಳನ್ನು ತುಂಬಿಕೊಡಲಿ.

## English Translation

May Varuna, Mitra, and Agni, the alleviators of pain, the observers of truth, bestow upon us thousands (of riches) : may they, the givers of delight, grant us excellent (food) . glorified by us. may they fulfil our desires

ಸಂಹಿತಾಪಾಠಃ

ದ್ಯಾವಾಭೂಮಿೀ ಅದಿತೇ ತ್ರಾಸೀಥಾಂ ನೋ ಯೇ ವಾಂ ಜಜ್ಞುಃ ಸುಜನಿ-
ಮಾನ ಋಷ್ವೇ ।
ಮಾ ಹೇಳೇ ಭೂಮ ವರುಣಸ್ಯ ವಾಯೋರ್ಮಾ ಮಿತ್ರಸ್ಯ ಪ್ರಿಯತಮಸ್ಯ
ನೃಣಾಂ ॥ ೪ ॥

ಪದಪಾಠಃ

ದ್ಯಾವಾಭೂಮಿೀ ಇತಿ । ಅದಿತೇ । ತ್ರಾಸೀಥಾಂ । ನಃ । ಯೇ । ವಾಂ । ಜಜ್ಞುಃ । ಸುऽಜನಿಮಾನಃ ।
ಋಷ್ವೇ ಇತಿ ।
ಮಾ । ಹೇಳೇ । ಭೂಮ । ವರುಣಸ್ಯ । ವಾಯೋಃ । ಮಾ । ಮಿತ್ರಸ್ಯ । ಪ್ರಿಯऽತಮಸ್ಯ । ನೃಣಾಂ ॥ ೪ ॥

ಸಾಯಣಭಾಷ್ಯಂ

ಹೇ ದ್ಯಾವಾಭೂಮೀ ದ್ಯಾವಾಪೃಥಿವ್ಯೌ ಹೇ ಅದಿತೇऽಖಂಡನೀಯೇ । ಏತದ್ದ್ಯಾವಾಭೂಮ್ಯೋರೇಕೈಕವಚನೇನ ಸಂಬೋಧನಂ । ಹೇ ಋಷ್ವೇ । ಮಹನ್ನಾಮೈತತ್ । ಹೇ ಮಹತ್ಯೌ ನೋऽಸ್ಮಾಂಸ್ತ್ರಾಸೀಥಾಂ । ರಕ್ಷತಂ । ಯೇ ವಯಂ ಸುಜನಿಮಾನಃ ಶೋಭನಜನ್ಮಾನೋ ವಾಂ ಯುವಾಂ ಜಜ್ಞುಃ ಜ್ಞಾತವಂತಃ ಸ್ಮ । ಕಿಂ ಚ ವಯಂ ವರುಣಸ್ಯ ಹೇಳೇ ಕ್ರೋಧೇ ಮಾ ಭೂಮ । ತಥಾ ವಾಯೋರ್ಮಾ ಭೂಮ । ತಥಾ ನೃಣಾಂ ಸ್ತುತಿನೇತೄಣಾಂ ಮನುಷ್ಯಾಣಾಂ ಪ್ರಿಯತಮಸ್ಯ ಮಿತ್ರಸ್ಯ ಹೇಳೇ ಮಾ ಭೂಮ ॥

ಪ್ರತಿಪದಾರ್ಥ

**ಅದಿತೇ**—ಪೂರ್ಣವಾದ ಸ್ವರೂಪವುಳ್ಳವರೂ । **ಋಷ್ವೇ**—ಮಾಹಾತ್ಮ್ಯವುಳ್ಳವರೂ ಆದ । **ದ್ಯಾವಾಭೂಮೀ**—ಎಲೈ ದ್ಯಾವಾಪೃಥಿವಿಗಳೇ, । **ಯೇ**—ಯಾವ ನಾವು । **ಸುಜನಿಮಾನಃ**—ಉತ್ತಮವಾದ ಜನ್ಮಗಳುಳ್ಳವರಾಗಿ । **ವಾಂ**—ನಿಮ್ಮ ಮಹತ್ತ್ವವನ್ನು । **ಜಜ್ಞುಃ**—ಅರಿತಿದ್ದೇವೆಯೋ ಅಂತಹ । **ನಃ**—ನಮ್ಮನ್ನು । **ತ್ರಾಸೀಥಾಂ**—ರಕ್ಷಿಸಿರಿ. । (**ವಯಂ**—ನಾವು) । **ವರುಣಸ್ಯ**—ವರುಣನ । **ಹೇಳೇ**—ಕ್ರೋಧಕ್ಕೆ । **ಮಾ ಭೂಮ**—ವಶರಾಗದಂತೆ ಮಾಡಿರಿ. । **ವಾಯೋಃ**—ವಾಯುವಿನ ಕೋಪಕ್ಕೂ ಪಾತ್ರರನ್ನಾಗಿ ಮಾಡಬೇಡಿರಿ. । **ನೃಣಾಂ**—ಮಾನವರಿಗೆ। **ಪ್ರಿಯತಮಸ್ಯ**—ಅತಿಯಾಗಿ ಒಳ್ಳೆಯದನ್ನು ಮಾಡುವ । **ಮಿತ್ರಸ್ಯ**—ಮಿತ್ರನ ಕೋಪಕ್ಕೂ । **ಮಾ**—ನಾವು ವಶರಾಗುವಂತೆ ಆಗದಿರಲಿ.

ಭಾವಾರ್ಥ

ಖಂಡಾತ್ಮಕವಲ್ಲದ ಪೂರ್ಣವಾದ ಸ್ವರೂಪವುಳ್ಳವರೂ, ಮಾಹಾತ್ಮ್ಯವುಳ್ಳವರೂ ಆದ ಎಲೈ ದ್ಯಾವಾಪೃಥಿವಿಗಳೇ, ಯಾವ ನಾವು ಉತ್ತಮವಾದ ಜನ್ಮವುಳ್ಳವರಾಗಿ ನಿಮ್ಮ ಮಹತ್ವವನ್ನು ಅರಿತಿದ್ದೇವೆಯೋ ಅಂತಹ ನಮ್ಮನ್ನು ರಕ್ಷಿಸಿರಿ. ನಾವು ವರುಣನ ಕ್ರೋಧಕ್ಕೆ ವಶವಾಗುವಂತೆ ಆಗದಿರಲಿ. ವಾಯುವಿನ ಕೋಪಕ್ಕೂ ಮಾನವರಿಗೆ ಹಿತಕಾರಿಯಾದ ಮಿತ್ರನ ಕೋಪಕ್ಕೂ ಪಾತ್ರರಾಗುವಂತೆ ಆಗದಿರಲಿ

English Translation

Indivisible and mighty heaven and earth protect us who, of fortunate birth, have knowledge of you both let us not incur the displeasure of Varuna, or of Vayu, or of Mitra, the best beloved of men

ಸಂಹಿತಾಪಾಠಃ

ಪ್ರ ಬಾಹವಾ ಸಿಸೃತಂ ಜೀವಸೇ ನ ಆ ನೋ ಗವ್ಯೂತಿಮುಕ್ಷತಂ ಘೃತೇನ ।
ಆ ನೋ ಜನೇ ಶ್ರವಯತಂ ಯುವಾನಾ ಶ್ರುತಂ ಮೇ ಮಿತ್ರಾವರುಣಾ ಹವೇಮಾ ॥ ೫ ॥

ಪದಪಾಠಃ

ಪ್ರ । ಬಾಹವಾ । ಸಿಸೃತಂ । ಜೀವಸೇ । ನಃ । ಆ । ನಃ । ಗವ್ಯೂತಿಂ । ಉಕ್ಷತಂ । ಘೃತೇನ ।
ಆ । ನಃ । ಜನೇ । ಶ್ರವಯತಂ । ಯುವಾನಾ । ಶ್ರುತಂ । ಮೇ । ಮಿತ್ರಾವರುಣಾ । ಹವಾ । ಇಮಾ । ೫।

ಸಾಯಣಭಾಷ್ಯಂ

ಪ್ರ ಬಾಹವೇತಿ ಪಂಚಮೀ ಮೈತ್ರಾವರುಣೇ ಪಶೌ ಪಶುಪುರೋಡಾಶಸ್ಯ ಯಾಜ್ಯಾ । ಸೂತ್ರಿತಂ ಚ । ಪ್ರ ಬಾಹವಾ ಸಿಸೃತಂ ಜೀವಸೇ ನೋ ಯದ್ವಂಹಿಷ್ಠಂ ನಾತಿವಿಧೇ ಸುದಾನೂ । ಆ. ೩-೮ । ಇತಿ ।

ಹೇ ಮಿತ್ರಾವರುಣಾ ಮಿತ್ರಾವರುಣೌ ದೇವೌ ಬಾಹವಾ ಯುವಾಭ್ಯಾಂ ಬಾಹೂ ಪ್ರ ಸಿಸೃತಂ ಪ್ರಸಾರಯತಂ ಹವಿಃಸ್ವೀಕಾರಾಯ ಧನಪ್ರದಾನಾಯ ವಾ । ಕಿಮರ್ಥಮಿತಿ । ನೋ ಜೀವಸೇಽಸ್ಮಾಕಂ ಜೀವನಾಯ । ಕಿಂಚ ನೋಽಸ್ಮಾಕಂ ಗವ್ಯೂತಿಂ । ಗಾವೋ ಯಂತಿ ಗಚ್ಛಂತ್ಯತ್ರೇತಿ ಗವ್ಯೂತಿರ್ಗೋಮಾರ್ಗಭೂಮಿಃ । ತಾಂ ತೃಣಾದಿಪ್ರರೋಹಾಯ ಘೃತೇನೋದಕೇನಾ ಸಮಂತಾದುಕ್ಷತಂ । ಸಿಂಚತಂ ಕಿಂಚ ನೋಽಸ್ಮಾಞ್ಜನೇಽಸ್ಮತ್ಸಮಾನೇ ಮನುಷ್ಯಸಮೂಹೇ ವಾ ನೋಽಸ್ಮಾಞ್ಛ್ರವಯತಂ । ವಿಶ್ರುತ ಕುರುತಂ । ಹೇ ಯುವಾನಾ ನಿತ್ಯಯೌವನೌ ಸರ್ವತ್ರ ವ್ಯಾಪ್ತೌ ವಾ ಯುವಾಂ ಮೇ ಮಮೇಮಾ ಹವಾಹ್ವಾನಾನಿ ಶ್ರುತಂ । ಶೃಣುತಂ ॥

ಪ್ರತಿಪದಾರ್ಥ

**ಮಿತ್ರಾವರುಣಾ**— ಎಲೈ ಮಿತ್ರಾವರುಣರೇ, | **ನಃ**— ನಮ್ಮ | **ಜೀವಸೇ**— ಉತ್ತಮವಾದ ಜೀವನಕ್ಕಾಗಿ | **ಬಾಹವಾ**— ನಿಮ್ಮ ಎರಡು ಬಾಹುಗಳನ್ನು ದೀರ್ಘವಾಗಿ ಹರಡಿರಿ. | **ನಃ**— ನಮ್ಮ | **ಗವ್ಯೂತಿಂ**— ಗೋವುಗಳು ಸಂಚರಿಸುವ ಭೂಮಿಯನ್ನು | **ಘೃತೇನ**— ಉದಕದಿಂದ | **ಆ ಉಕ್ಷತಂ**— ಸರ್ವತ್ರ ತೋಯಿಸಿರಿ | **ನಃ**— ನಮ್ಮನ್ನು **ಜನೇ**— ಉತ್ತಮಜನರ ಮುಂದೆ | **ಆ ಶ್ರವಯತಂ**— ಪ್ರಖ್ಯಾತರನ್ನಾಗಿ ಮಾಡಿರಿ | **ಯುವಾನಾ**— ನಿತ್ಯತರುಣರಾದ ನೀವು | **ಮೇ**— ನನ್ನ | **ಇಮಾ ಹವಾ** — ಈ ಆಹ್ವಾನವನ್ನು | **ಶ್ರುತಂ**— ಕೇಳಿರಿ

ಭಾವಾರ್ಥ

ಎಲೈ ಮಿತ್ರಾವರುಣರೇ, ನಮ್ಮ ಉತ್ತಮವಾದ ಜೀವನಕ್ಕಾಗಿ ನಿಮ್ಮ ಎರಡು ಬಾಹುಗಳನ್ನು ದೀರ್ಘವಾಗಿ ಹರಡಿರಿ ನಮ್ಮ ಗೋವುಗಳು ಸಂಚರಿಸುವ ಭೂಮಿಯನ್ನು ಉದಕದಿಂದ ಸರ್ವತ್ರ ತೋಯಿಸಿ ನಮ್ಮನ್ನು ಉತ್ತಮವಾದ ಜನರ ಮುಂದೆ ಪ್ರಖ್ಯಾತರಾಗುವಂತೆ ಮಾಡಿರಿ ನಿತ್ಯತರುಣರಾದ ನೀವು ನನ್ನ ಈ ಆಹ್ವಾನವನ್ನು ಕೇಳಿರಿ

English Translation

Stretch forth your arms for the prolongation of our existence, bedew with water the pastures of our cattle, render us honoured amongst men, ever youthful Mitra and Varuna, hear these my invocations

ವಿಶೇಷವಿಷಯಗಳು

ಮಿತ್ರಾವರುಣರನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ಪುರೋಡಾಶ ಹೋಮಮಾಡುವಾಗ **ಪ್ರ ಬಾಹವಾ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪ್ರ ಬಾಹವಾ ಸಿಸೃತಂ ಜೀವಸೇ ನೋ ಯದ್ಬಂಹಿಷ್ಠಂ ನಾತಿವಿಧೇ ಸುದಾನೂ** ಎಂಬ ಸೂತ್ರದಿಂದ (ಆ ೩ ೮) ವಿವೃತವಾಗಿರುವುದು.

ಸಂಹಿತಾಪಾಠಃ

ನೂ ಮಿತ್ರೋ ವರುಣೋ ಅರ್ಯಮಾ ನಸ್ತ್ಮನೇ ತೋಕಾಯ ವರಿವೋ ದಧಂತು ।
ಸುಗಾ ನೋ ವಿಶ್ವಾ ಸುಪಥಾನಿ ಸಂತು ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೬ ॥

ಪದಪಾಠಃ

ನು । ಮಿತ್ರಃ । ವರುಣಃ । ಅರ್ಯಮಾ । ನಃ । ತ್ಮನೇ । ತೋಕಾಯ । ವರಿವಃ । ದಧಂತು ।
ಸುऽಗಾ । ನಃ । ವಿಶ್ವಾ । ಸುऽಪಥಾನಿ । ಸಂತು । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥ ೬ ॥

ಸಾಯಣಭಾಷ್ಯಂ

**ಮಿತ್ರೋ ವರುಣೋಽರ್ಯಮಾ ಚೈತೇ ತ್ರಯೋ ದೇವಾ ನ್ವದ್ಯ ನೋಽಸ್ಮಾಕಂ ತ್ಮನ ಆತ್ಮನ ಆತ್ಮಹಿತಾಯ ತೋಕಾಯ ಪುತ್ರಾಯ ಚ ವರಿವೋ ಧನಂ ದಧಂತು । ಪ್ರಯಚ್ಛಂತು । ನೋಽಸ್ಮಾಕಂ ವಿಶ್ವಾ ಸರ್ವಾಣಿ ಗಂತವ್ಯಾನಿ ಸುಗಾ ಸುಗಮನಾನಿ ಸುಪಥಾನಿ ಚ ಸಂತು । ಭವಂತು । ಶಿಷ್ಟಂ ಗತಂ ॥**

ಪ್ರತಿಪದಾರ್ಥ

**ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅರ್ಯಮಾ**—ಅರ್ಯಮನೂ । **ನು**—ಈಗ । **ನಃ**-ನಮಗೆ । **ತ್ಮನೇ**—ಸ್ವಂತಕ್ಕೂ । **ತೋಕಾಯ**—ನಮ್ಮ ಪುತ್ರರಿಗೂ । **ವರಿವಃ**—ಧನವನ್ನು । **ದಧಂತು**—ಕೊಡಲಿ **ನಃ**—ನಮ್ಮ । **ವಿಶ್ವಾ**—ಸಮಸ್ತವಾದ । **ಸುಗಾ**—ಉತ್ತಮವಾದ ಮಾರ್ಗಗಳು । **ಸುಪಥಾನಿ**—ಉತ್ತಮವಾದ ಸಂಚಾರಕ್ಕೆ ಯೋಗ್ಯವಾದವಾಗಿ । **ಸಂತು**—ಆಗಿರಲಿ. । (ಎಲೈ ದೇವತೆಗಳೇ) **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

ಭಾವಾರ್ಥ

ಮಿತ್ರನೂ, ವರುಣನೂ, ಅರ್ಯಮನೂ, ಈಗ ನಮ್ಮ ಸ್ವತಃ ಉಪಯೋಗಕ್ಕೂ ನಮ್ಮ ಪುತ್ರಾದಿಗಳಿಗೂ ಧನವನ್ನು ಕೊಡಲಿ ನಮ್ಮ ಸಮಸ್ತವಾದ ಉತ್ತಮಮಾರ್ಗಗಳೂ ಶ್ರೇಷ್ಠವಾದ ಸಂಚಾರಕ್ಕೆ ಯೋಗ್ಯವಾದವಾಗಿ ಆಗಲಿ ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

English Translation

May Mitra, Varuna, Aryaman grant afflunce to us and to our prosterity · may all paths be easy of access unto us and do you ever cherish us with blessings

---

## ಅರವತ್ತಮೂರನೆಯ ಸೂಕ್ತವು

ಸಾಯಣಭಾಷ್ಯಂ

**ಉದ್ವೇತೀತಿ ಷಡೃಚಮಷ್ಟಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ । ಆದ್ಯಾಶ್ಚತಸ್ರಃ ಪಂಚಮ್ಯಾಃ ಪೂರ್ವಾರ್ಧಶ್ಚ ಸೂರ್ಯದೇವತ್ಯಾ ಅವಶಿಷ್ಟಾಸ್ತ್ರಯೋಽರ್ಧರ್ಚಾ ಮಿತ್ರಾವರುಣದೇವತ್ಯಾಃ । ತಥಾ ಚಾನುಕ್ರಾಂತಂ । ಉದ್ವೇತೀತಿ ಚಾರ್ಧಪಂಚಮಾ ಇತಿ ॥ ವಿನಿಯೋಗೋ ಲೈಂಗಿಕಃ ॥**

**ಅನುವಾದವು—ಉದ್ವೇತಿ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ತ್ರಿಷ್ಟುಪ್‌ಛಂದಸ್ಸು ಈ ಸೂಕ್ತದಲ್ಲಿ ಮೊದಲಿನ ನಾಲ್ಕು ಋಕ್ಕುಗಳೂ ಐದನೆಯ ಋಕ್ಕಿನಲ್ಲಿ ಪೂರ್ವಾರ್ಧವೂ ಸೂರ್ಯದೇವತಾಕವು ಉಳಿದ ಮೂರು ಅರ್ಧ ಋಕ್ಕುಗಳು ಎಂದರೆ ಒಂದೂವರೆ ಋಕ್ಕು ಮಿತ್ರಾವರುಣದೇವತಾಕವು ಅನುಕ್ರಮಣಿಕೆಯಲ್ಲಿ— **ಉದ್ವೇತೀತಿ ಚಾರ್ಧಪಂಚಮ್ಯಾಃ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು

## ಸೂಕ್ತ—೬೩

ಮಂಡಲ—೭ || ಅನುವಾಕ—೪ || ಸೂಕ್ತ—೬೩ ||
ಅಷ್ಟಕ—೫ || ಅಧ್ಯಾಯ—೫ || ವರ್ಗ—೫ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ||
ಋಷಿಃ—ವಸಿಷ್ಠಃ ||
ದೇವತಾ—೧ ೪, ೫ ರಲ್ಲಿ ಪೂರ್ವಾರ್ಧ. ಸೂರ್ಯಃ | ೫ ರಲ್ಲಿ ಉತ್ತರಾರ್ಧ, ೬ ಮಿತ್ರಾವರುಣೌ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

**ಉದ್ವೇತಿ ಸುಭಗೋ ವಿಶ್ವಚಕ್ಷಾಃ ಸಾಧಾರಣಃ ಸೂರ್ಯೋ ಮಾನುಷಾಣಾಂ |**
**ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಶ್ಚರ್ಮೇವ ಯಃ ಸಮವಿವ್ಯಕ್ತಮಾಂಸಿ ||೧||**

ಪದಪಾಠಃ

**ಉತ್ | ಊಂ ಇತಿ | ಏತಿ | ಸುಽಭಗಃ | ವಿಶ್ವಽಚಕ್ಷಾಃ | ಸಾಧಾರಣಃ | ಸೂರ್ಯಃ | ಮಾನುಷಾಣಾಂ |**
**ಚಕ್ಷುಃ | ಮಿತ್ರಸ್ಯ | ವರುಣಸ್ಯ | ದೇವಃ | ಚರ್ಮಽಇವ | ಯಃ | ಸಂಽಅವಿವ್ಯಕ್ | ತಮಾಂಸಿ || ೧ ||**

ಸಾಯಣಭಾಷ್ಯಂ

ಉದ್ವೇತಿ ಉದ್ಗಚ್ಛತ್ಯಯಂ ಸೂರ್ಯಃ ಸುಭಗಃ ಶೋಭನಭಾಗ್ಯಃ ಸುಷ್ಠು ಭಜನೀಯೋ ವಾ ವಿಶ್ವಚಕ್ಷಾಃ ಸರ್ವಸ್ಯ ದ್ರಷ್ಟಾ ಮಾನುಷಾಣಾಂ ಸರ್ವೇಷಾಂ ಮನುಷ್ಯಾಣಾಂ ಸಾಧಾರಣಃ | ಸಾಧಾರಣತ್ವಪ್ರತಿಪಾದಕಶ್ರುತಿಃ ಪೂರ್ವಮುದಾಹೃತಾ | ಮಿತ್ರಸ್ಯ ವರುಣಸ್ಯ ಚ ಚಕ್ಷುಃ ಪ್ರಕಾಶಕೋ ದೇವೋ ದ್ಯೋತಮಾನಃ | ಯೋ ದೇವಶ್ಚರ್ಮೇವ ಚರ್ಮಣೀವ ತಮಾಂಸಿ ಸಮವಿವ್ಯಕ್ ಸಹ ವಿಚತಿ ಸಂವೇಷ್ಟಯತಿ ಸ ಮಹಾನುಭಾವೋ ದೇವ ಉದ್ವೇತಿ ||

ಪ್ರತಿಪದಾರ್ಥ

**ಯಃ**—ಯಾರು | **ಚರ್ಮೇವ**—ಚರ್ಮದಂತೆ ಹರಡಿರುವ | **ತಮಾಂಸಿ**—ಕಗ್ಗತ್ತಲೆಯನ್ನು | **ಸಮವಿವ್ಯಕ್**—ಪೂರ್ಣವಾಗಿ ಚದುರಿಸುವನೋ ಅಂತಹವನೂ | **ಮಿತ್ರಸ್ಯ**—ಮಿತ್ರನಿಗೂ | **ವರುಣಸ್ಯ**—ವರುಣನಿಗೂ | **ಚಕ್ಷುಃ**—ಕಣ್ಣಿನಂತಿರುವವನೂ | **ದೇವಃ**—ದೇವತಾತ್ಮನೂ | **ಮಾನುಷಾಣಾಂ**—ಸಕಲಮಾನವರಿಗೂ | **ಸಾಧಾರಣಃ**—ಸಮಾನವಾಗಿ ಕಾಣಿಸಿಕೊಳ್ಳುವವನೂ | **ವಿಶ್ವಚಕ್ಷಾಃ**—ಸಕಲವನ್ನು ನೋಡಬಲ್ಲವನೂ | **ಸುಭಗಾಃ**—ಕಲ್ಯಾಣಾತ್ಮಕನೂ ಆದ | **ಸೂರ್ಯಃ**—ಸೂರ್ಯನು | **ಉದ್ವೇತಿ**—ಉದಯಿಸುತ್ತಾನೆ.

ಭಾವಾರ್ಥ

ಚರ್ಮದಂತೆ ಹರಡಿರುವ ಕಗ್ಗತ್ತಲೆಯನ್ನು ಪೂರ್ಣವಾಗಿ ಚದುರಿಸುವವನೂ, ಮಿತ್ರನಿಗೂ ವರುಣನಿಗೂ ಕಣ್ಣಿನಂತಿರುವವನೂ ದೇವತಾತ್ಮನೂ, ಸಕಲ ಮಾನವರಿಗೂ ಸಮಾನವಾಗಿ ಕಾಣಿಸಿಕೊಳ್ಳುವವನೂ, ಸಕಲವನ್ನು ನೋಡಬಲ್ಲವನೂ, ಕಲ್ಯಾಣಾತ್ಮಕನೂ ಆದ ಸೂರ್ಯನು ಉದಯಿಸುತ್ತಾನೆ.

## English Translation

The auspicious Surya rises, the eye of all, the common (parent) of men the divine eye of Mitra and of Varuna, who breaks through the glooms as through (investing) skin

### ಸಂಹಿತಾಪಾಠಃ

ಉದ್ವೇತಿ ಪ್ರಸವೀತಾ ಜನಾನಾಂ ಮಹಾನ್ಕೇತುರರ್ಣವಃ ಸೂರ್ಯಸ್ಯ ।
ಸಮಾನಂ ಚಕ್ರಂ ಪರ್ಯಾವಿವೃತ್ಸನ್ಯದೇತಶೋ ವಹತಿ ಧೂರ್ಷು ಯುಕ್ತಃ ॥

### ಪದಪಾಠಃ

ಉತ್ । ಊಂ ಇತಿ । ಏತಿ । ಪ್ರಽಸವಿತಾ । ಜನಾನಾಂ । ಮಹಾನ್ । ಕೇತುಃ । ಅರ್ಣವಃ । ಸೂರ್ಯಸ್ಯ ।
ಸಮಾನಂ । ಚಕ್ರಂ । ಪರಿಽಆವಿವೃತ್ಸನ್ । ಯತ್ । ಏತಶಃ । ವಹತಿ । ಧೂಃಽಸು । ಯುಕ್ತಃ ॥ ೨ ॥

### ಸಾಯಣಭಾಷ್ಯಂ

ಅಯಂ ಸೂರ್ಯಸ್ಯ ಸೂರ್ಯಃ ॥ ವಿಭಕ್ತಿವ್ಯತ್ಯಯಃ ॥ ಉದ್ವೇತಿ । ಉದ್ಗಚ್ಛತಿ । ಚೇದ್ವ್ಯಶೋಽಯಂ । ಜನಾನಾಂ ಸರ್ವೇಷಾಂ ಪ್ರಸವಿತಾ ಸರ್ವೇಷು ಕರ್ಮಸ್ವನುಜ್ಞಾತಾ ಮಹಾನ್ ಪೂಜ್ಯಃ ಕೇತುಃ ಸರ್ವಸ್ಯ ಪ್ರಜ್ಞಾಪಕೋಽರ್ಣವ ಉದಕಪ್ರದಃ । ಕಿಂ ಕುರ್ವನ್ನುದೇತೀತಿ ಉಚ್ಯತೇ । ಸಮಾನಂ ಸರ್ವೇಷಾಮೇಕರೂಪಮೇಕಮೇವ ಚಕ್ರಂ ರಥಾಂಗಂ ಚರಣಶೀಲಂ ರಥಂ ವಾ ಪರ್ಯಾವಿವೃತ್ಸನ್ ಪರ್ಯಾವರ್ತಯಿತುಮಿಚ್ಛನ್ । ಯದ್ರಥಚಕ್ರಂ ಧೂರ್ಷು ರಥಸ್ಯ ಯುಕ್ತ ಏತಶ ಏತಶವರ್ಣೋ ಹರಿತವರ್ಣೋಽಶ್ವೋ ವಹತಿ । [illegible]

### ಪ್ರತಿಪದಾರ್ಥ

ಯತ್—ಯಾವ ರಥಚಕ್ರವನ್ನು । ಧೂರ್ಷು—ರಥದ ನೊಗಕ್ಕೆ । ಯುಕ್ತಃ—ಯೋಜಿತವಾದುದೂ । ಏತಶಃ—ಹಚ್ಚಿವರ್ಣದ್ದೂ ಆದ ಅಶ್ವವು । ವಹತಿ—ವಹಿಸುವುದೋ ಆ । ಸಮಾನಂ—ಸಕಲ ವಿಶ್ವಕ್ಕೂ ಒಂದೇ ಆದ । ಚಕ್ರಂ—ರಥಚಕ್ರವನ್ನು । ಪರ್ಯಾವಿವೃತ್ಸನ್—ತಿರುಗಿಸಲಿಚ್ಛಿಸುತ್ತ । ಮಹಾನ್—ಪೂಜ್ಯನೂ । ಕೇತುಃ—ಪ್ರಜ್ಞಾಪಕನೂ । ಅರ್ಣವಃ—ಉದಕಪ್ರದನೂ । ಜನಾನಾಂ—ಸಕಲ ಮಾನವರಿಗೂ । ಪ್ರಸವಿತಾ—ಕರ್ಮಪ್ರೇರಕನೂ ಆದ । ಸೂರ್ಯಸ್ಯ—ಸೂರ್ಯನು । ಉದ್ವೇತಿ—ಉದಯಿಸುತ್ತಾನೆ

### ಭಾವಾರ್ಥ

ರಥದ ನೊಗಕ್ಕೆ ಯೋಜಿತವಾದುದೂ, ಹಚ್ಚಿವರ್ಣದ್ದೂ ಆದ ಅಶ್ವವು ಯಾವ ರಥಚಕ್ರವನ್ನು ವಹಿಸುವುದೋ, ಸಕಲ ವಿಶ್ವಕ್ಕೂ ಒಂದೇ ಆದ ಆ ರಥಚಕ್ರವನ್ನು ಉರುಳಿಸುತ್ತ ಪೂಜ್ಯನೂ, ಪ್ರಜ್ಞಾಪಕನೂ, ಉದಕಪ್ರದನೂ, ಸಕಲ ಮಾನವರಿಗೂ ಕರ್ಮಪ್ರೇರಕನೂ ಆದ ಸೂರ್ಯನು ಉದಯಿಸುತ್ತಾನೆ

## English Translation

The animator of men arises, the great rain-shedding banner of Surya rolling on the universal wheel, which the white steeds yoked to his car drag along

ಸಂಹಿತಾಪಾಠಃ

ವಿಭ್ರಾಜಮಾನ ಉಷಸಾಮುಪಸ್ಥಾದ್ರೇಭೈರುದೇತ್ಯನುಮದ್ಯಮಾನಃ ।
ಏಷ ಮೇ ದೇವಃ ಸವಿತಾ ಚಚ್ಛಂದ ಯಃ ಸಮಾನಂ ನ ಪ್ರಮಿನಾತಿ ಧಾಮ ||

ಪದಪಾಠಃ

ವಿऽಭ್ರಾಜಮಾನಃ । ಉಷಸಾಂ । ಉಪऽಸ್ಥಾತ್ । ರೇಭೈಃ । ಉತ್ । ಏತಿ । ಅನುऽಮದ್ಯಮಾನಃ ।
ಏಷಃ । ಮೇ । ದೇವಃ । ಸವಿತಾ । ಚಚ್ಛಂದ । ಯಃ । ಸಮಾನಂ । ನ । ಪ್ರऽಮಿನಾತಿ । ಧಾಮ ॥ ೩ ॥

ಸಾಯಣಭಾಷ್ಯಂ

ಅಯಂ ಸೂರ್ಯೋ ವಿಭ್ರಾಜಮಾನೋ ವಿಶೇಷೇಣ ದೀಪ್ಯಮಾನ ಉಷಸಾಮುಪಸ್ಥಾದುಪಸ್ಥೇ ಮಧ್ಯೇ ರೇಭೈಃ ಸ್ತೋತೃಭಿರನುಮದ್ಯಮಾನಃ ಸನ್ನುದೇತಿ । ಕಿಂಚೈಷ ದೇವೋ ದ್ಯೋತಮಾನಃ ಸವಿತಾ ಮೇ ಮಹ್ಯಂ ಚಚ್ಛಂದ । ಉಪಚ್ಛಂದಯತಿ ಕಾಮಾನ್ । ಏಷ ಇತ್ಯುಕ್ತಂ ಕ ಇತಿ । ಯೋ ದೇವಃ ಸಮಾನಂ ಸರ್ವೇಷಾಂ ಪ್ರಾಣಿನಾಮೇಕರೂಪಂ ಧಾಮ ಸ್ವೀಯಂ ತೇಜಃಸ್ಥಾನಂ ನ ಪ್ರಮಿನಾತಿ ನ ಹಿನಸ್ತಿ ನ ಸಂಕೋಚಯತಿ ಸ ದೇವ ಉದೇತೀತಿ ॥

ಪ್ರತಿಪದಾರ್ಥ

**ಯಃ**—ಯಾವ ದೇವನು । **ಸಮಾನಂ**—ಸಕಲ ಲೋಕಕ್ಕೂ ಒಂದೇ ವಿಧವಾದ । **ಧಾಮ**—ತನ್ನ ತೇಜಸ್ಸನ್ನು । **ನ ಪ್ರಮಿನಾತಿ**—ಸಂಕೋಚಪಡಿಸುವುದಿಲ್ಲವೋ ಅಂತಹ । **ವಿಭ್ರಾಜಮಾನಃ**—ವಿಶೇಷ ರೀತಿಯಲ್ಲಿ ಪ್ರಕಾಶಿಸುವವನೂ । **ರೇಭೈಃ**—ಸ್ತುತಿಕರ್ತರಿಂದ । **ಅನುಮದ್ಯಮಾನಃ**—ತೃಪ್ತಿಗೊಳಿಸಲ್ಪಟ್ಟವನೂ ಆದ ಸೂರ್ಯನು । **ಉಷಸಾಂ**—ಉಷಸ್ಸುಗಳ । **ಉಪಸ್ಥಾತ್**—ಮಧ್ಯಪ್ರದೇಶದಿಂದ । **ಉದೇತಿ**—ಉದಯಿಸಿ ಬರುತ್ತಾನೆ. । **ದೇವಃ**—ದೇವತಾತ್ಮನಾದ । **ಏಷಃ ಸವಿತಾ**—ಈ ಸವಿತೃವು । **ಮೇ**—ನನಗೆ । **ಚಚ್ಛಂದ**—ಇಷ್ಟಾರ್ಥಗಳನ್ನು ತುಂಬಿ ಕೊಡುತ್ತಾನೆ

ಭಾವಾರ್ಥ

ಯಾವ ದೇವನು ಸಕಲ ಲೋಕಕ್ಕೂ ಒಂದೇ ವಿಧವಾದ ತನ್ನ ತೇಜಸ್ಸನ್ನು ಸಂಕೋಚಪಡಿಸುವುದಿಲ್ಲವೋ ಅಂತಹ ವಿಶೇಷರೀತಿಯಲ್ಲಿ ಪ್ರಕಾಶಿಸುವವನೂ, ಸ್ತುತಿಕರ್ತರಿಂದ ತೃಪ್ತಿಗೊಳಿಸಲ್ಪಟ್ಟವನೂ ಆದ ಸೂರ್ಯನು ಉಷಸ್ಸುಗಳ ಮಧ್ಯಪ್ರದೇಶದಿಂದ ಉದಯಿಸಿ ಬರುತ್ತಾನೆ. ದೇವತಾತ್ಮನಾದ ಈ ಸವಿತೃವು ನನ್ನ ಇಷ್ಟಾರ್ಥಗಳನ್ನು ತುಂಬಿಕೊಡುತ್ತಾನೆ.

## English Translation

Delighted by the praises (of his worshippers), the radiant sun rises from the lap of the dawns · that divine sun gratifies my desires, who limits not the lustre that is common (to all).

**ಸಂಹಿತಾಪಾಠಃ**

ದಿವೋ ರುಕ್ಮ ಉರುಚಕ್ಷಾ ಉದೇತಿ ದೂರೇಅರ್ಥಸ್ತರಣಿರ್ಭ್ರಾಜಮಾನಃ ।
ನೂನಂ ಜನಾಃ ಸೂರ್ಯೇಣ ಪ್ರಸೂತಾ ಅಯನ್ನರ್ಥಾನಿ ಕೃಣವನ್ನಪಾಂಸಿ॥

**ಪದಪಾಠಃ**

ದಿವಃ । ರುಕ್ಮಃ । ಉರುऽಚಕ್ಷಾಃ । ಉತ್ । ಏತಿ । ದೂರೇऽಅರ್ಥಃ । ತರಣಿಃ । ಭ್ರಾಜಮಾನಃ ।
ನೂನಂ । ಜನಾಃ । ಸೂರ್ಯೇಣ । ಪ್ರऽಸೂತಾಃ । ಅಯನ್ । ಅರ್ಥಾನಿ । ಕೃಣವನ್ । ಅಪಾಂಸಿ ॥ ೪ ॥

**ಸಾಯಣಭಾಷ್ಯಂ**

ಅಯಂ ಸೂರ್ಯೋ ರುಕ್ಮೋ ರೋಚಮಾನ ಉರುಚಕ್ಷಾಃ ಪ್ರಭೂತತೇಜಾಶ್ಚ ಸನ್ದಿವೋऽಂತರಿಕ್ಷಾದುದೇತಿ । ಯದ್ವಾ । ದಿವೋऽಂತರಿಕ್ಷಸ್ಯ ರುಕ್ಮ ಆಭರಣಸ್ಥಾನೀಯಃ । ಕೀದೃಶೋऽಯಂ । ದೂರೇಅರ್ಥೋ ದೂರೇಗಂತಾ ॥ ಅರ್ಥೋऽರ್ತೇಃ ॥ ದೂರೇ ಪ್ರಾರ್ಥ್ಯಮಾನೋ ವಾ । ತರಣಿಸ್ತಾರಕೋ ಭ್ರಾಜಮಾನೋ ದೀಪ್ಯಮಾನಃ ಸನ್ನುದೇತಿ । ನೂನಂ ನಿಶ್ಚಯಂ ಜನಾಃ ಸರ್ವೇ ಪ್ರಾಣಿನಃ ಸೂರ್ಯೇಣ ಪ್ರೇರಕೇಣ ದೇವೇನ ಪ್ರಸೂತಾ ಅನುಜ್ಞಾತಾಃ ಪ್ರೇರಿತಾಃ ಸಂತೋऽರ್ಥಾನಿ ಗಂತವ್ಯಾನ್ಯನುಷ್ಠೇಯಾನ್ಯಪಾಂಸಿ ಕರ್ಮಾಣಿ ಕೃಣವನ್ । ಕುರ್ವಂತಿ ॥

**ಪ್ರತಿಪದಾರ್ಥ**

**ದೂರೇ ಅರ್ಥಃ**—ಬಹುದೂರ ಸಂಚರಿಸುವವನೂ । **ತರಣಿಃ**—ಅಂತರಿಕ್ಷವನ್ನು ದಾಟುವವನೂ । **ಭ್ರಾಜಮಾನಃ**—ಪ್ರಕಾಶಮಾನನೂ । **ರುಕ್ಮಃ**—ಹೊಂಬಣ್ಣವುಳ್ಳವನೂ । **ಉರುಚಕ್ಷಾಃ**—ಅತ್ಯಧಿಕವಾದ ತೇಜಸ್ಸುಳ್ಳವನೂ ಆದ ಸೂರ್ಯನು । **ದಿವಃ**—ಅಂತರಿಕ್ಷದಿಂದ । **ಉದೇತಿ**—ಉದಯಿಸುತ್ತಾನೆ । **ನೂನಂ**—ನಿಶ್ಚಯವಾಗಿಯೂ । **ಜನಾಃ**—ಸಕಲ ಪ್ರಾಣಿಗಳೂ । **ಸೂರ್ಯೇಣ**—ಸೂರ್ಯನಿಂದ । **ಪ್ರಸೂತಾಃ**—ಪ್ರೇರಿತರಾಗಿಯೂ **ಅಯನ್**—ಕರ್ತವ್ಯಾಭಿಮುಖರಾಗಿಯೂ । **ಅರ್ಥಾನಿ**—ತಮ್ಮ ಅನುಷ್ಠೇಯವಾದ । **ಅಪಾಂಸಿ**—ಕರ್ಮಗಳನ್ನು । **ಕೃಣವನ್**—ಮಾಡುತ್ತಾರೆ.

**ಭಾವಾರ್ಥ**

ಬಹುದೂರ ಸಂಚರಿಸುವವನೂ, ಅಂತರಿಕ್ಷವನ್ನು ದಾಟುವವನೂ, ಪ್ರಕಾಶಮಾನನೂ, ಹೊಂಬಣ್ಣವುಳ್ಳವನೂ, ಅತ್ಯಧಿಕವಾದ ತೇಜಸ್ಸುಳ್ಳವನೂ ಆದ ಸೂರ್ಯನು ಅಂತರಿಕ್ಷದಿಂದ ಉದಯಿಸುತ್ತಾನೆ ಸಕಲ ಪ್ರಾಣಿಗಳೂ

ಸೂರ್ಯನಿಂದ ಪ್ರೇರಿತರಾಗಿಯೂ, ಕರ್ತವ್ಯಾಭಿಮುಖರಾಗಿಯೂ, ತಮ್ಮ ಅನುಷ್ಠೇಯವಾದ ಕರ್ಮಗಳನ್ನು ಮಾಡುತ್ತಾರೆ ಎಂದರೆ, ಸೂರ್ಯನಿಂದ ಪ್ರೇರಿತರಾದ ಸಕಲರೂ ತಮ್ಮ ಕರ್ತವ್ಯಾಭಿಮುಖರಾಗಿ ತಮ್ಮ ಕರ್ಮಗಳನ್ನು ಮಾಡುತ್ತಾರೆ

## English Translation

The bright and glorious sun rises from the firmament far going, traversing (the heavens), diffusing light verily all beings animated by Surya proceed and execute their assigned labours

### ಸಂಹಿತಾಪಾಠಃ

ಯತ್ರಾ ಚಕ್ರುರಮೃತಾ ಗಾತುಮಸ್ಮೈ ಶ್ಯೇನೋ ನ ದೀಯನ್ನನ್ವೇತಿ ಪಾಥಃ ।
ಪ್ರತಿ ವಾಂ ಸೂರ ಉದಿತೇ ವಿಧೇಮ ನಮೋಭಿರ್ಮಿತ್ರಾವರುಣೋತ ಹವ್ಯೈಃ ॥

### ಪದಪಾಠಃ

ಯತ್ರ । ಚಕ್ರುಃ । ಅಮೃತಾಃ । ಗಾತುಂ । ಅಸ್ಮೈ । ಶ್ಯೇನಃ । ನ । ದೀಯನ್ । ಅನು । ಏತಿ । ಪಾಥಃ ।
ಪ್ರತಿ । ವಾಂ । ಸೂರೇ । ಉತ್ऽಇತೇ । ವಿಧೇಮ । ನಮಃऽಭಿಃ । ಮಿತ್ರಾವರುಣಾ । ಉತ । ಹವ್ಯೈಃ ॥

### ಸಾಯಣಭಾಷ್ಯಂ

ಯತ್ರ ಯಸ್ಮಿನ್ನಂತರಿಕ್ಷೇಽಮೃತಾ ಅಮರಣಧರ್ಮಾಣಃ ಪೂರ್ವೇ ದೇವಾ ಅಸ್ಮೈ ಸೂರ್ಯಾಯ ಗಾತುಂ ಮಾರ್ಗಂ ಚಕ್ರುಃ ಅಕುರ್ವನ್ ತತ್ಪಾಥೋಽಂತರಿಕ್ಷಮನ್ವೇತಿ । ಅನುಗಚ್ಛತಿ । ಕಿಮಿವ । ದೀಯನ್ ಗಚ್ಛನ್ ಶ್ಯೇನೋ ನ ಶಂಸನೀಯಗಮನೋ ಗೃಧ್ರ ಇವ । ಅಯಮರ್ಥಃ ಸೌರ್ಯ ಇತ್ಯುಕ್ತಂ । ಹೇ ಮಿತ್ರಾವರುಣಾ ಮಿತ್ರಾವರುಣೌ ವಾಂ ಯುವಾಂ ಸೂರೇ ಸೂರ್ಯೇ ಉದಿತೇ ಸತಿ ಪ್ರಾತಃಸವನೇ ನಮೋಭಿರ್ನಮಸ್ಕಾರೈಃ ಸ್ತುತಿಭಿರುತಾಪಿ ಚ ಹವ್ಯೈರ್ಹವಿರ್ಭಿಶ್ಚ ಪ್ರತಿ ವಿಧೇಮ । ಪರಿಚರೇಮ ॥

### ಪ್ರತಿಪದಾರ್ಥ

**ಯತ್ರ**—ಯಾವ ಅಂತರಿಕ್ಷದಲ್ಲಿ । **ಅಮೃತಾಃ**—ಮರಣಧರ್ಮರಹಿತರಾದ ದೇವತೆಗಳು । **ಅಸ್ಮೈ**—ಈ ಸೂರ್ಯನಿಗೆ । **ಗಾತುಂ**—ಸಂಚರಿಸುವ ಮಾರ್ಗವನ್ನು । **ಚಕ್ರುಃ**—ನಿರ್ಮಿಸಿದರೋ । **ಪಾಥಃ**—ಆ ಅಂತರಿಕ್ಷ ಮಾರ್ಗದಲ್ಲಿ । **ದೀಯನ್**—ವೇಗವಾಗಿ ಸಂಚರಿಸುವ । **ಶ್ಯೇನೋ ನ**—ಶ್ಯೇನಪಕ್ಷಿಯಂತೆ । **ಅನ್ವೇತಿ**—ಸೂರ್ಯನು ಸಂಚರಿಸುತ್ತಾನೆ. । **ಮಿತ್ರಾವರುಣಾ**—ಎಲೈ ಮಿತ್ರಾವರುಣರೇ, । **ವಾಂ**—ನಿಮ್ಮನ್ನು । **ಸೂರೇ ಉದಿತೇ**—ಸೂರ್ಯನು ಉದಯಿಸಿದಾಗ (ಪ್ರಾತಃಸವನಕಾಲದಲ್ಲಿ) । **ನಮೋಭಿಃ**—ನಮಸ್ಕಾರಪೂರ್ವಕವಾಗಿಯೂ । **ಉತ**—ಮತ್ತು । **ಹವ್ಯೈಃ**—ಹವಿಸ್ಸುಗಳಿಂದ ಕೂಡಿಯೂ । **ಪ್ರತಿ ವಿಧೇಮ**—ಉಪಚರಿಸುತ್ತೇವೆ

### ಭಾವಾರ್ಥ

ಯಾವ ಅಂತರಿಕ್ಷದಲ್ಲಿ ಮರಣಧರ್ಮರಹಿತರಾದ ದೇವತೆಗಳು ಈ ಸೂರ್ಯನಿಗೆ ಸಂಚರಿಸುವ ಮಾರ್ಗವನ್ನು ನಿರ್ಮಿಸಿದರೋ ಅದೇ ಅಂತರಿಕ್ಷದಲ್ಲಿ ಸೂರ್ಯನು ವೇಗವಾಗಿ ಸಂಚರಿಸುವ ಶ್ಯೇನಪಕ್ಷಿಯಂತೆ ಸಂಚರಿಸುತ್ತಾನೆ. ಎಲೈ ಮಿತ್ರಾವರುಣರೇ, ಸೂರ್ಯನ ಉದಯವಾದೊಡನೆಯೇ (ಪ್ರಾತಃಸವನಕಾಲದಲ್ಲಿ) ನಿಮ್ಮನ್ನು ನಮಸ್ಕಾರ ಪೂರ್ವಕವಾಗಿಯೂ, ಹವಿಸ್ಸುಗಳಿಂದ ಕೂಡಿಯೂ ಉಪಚರಿಸುತ್ತೇವೆ.

### English Translation

He travels the path which the immortals have prepared for his course darting along like a hawk we worship you, Mitra and Varuna, when the sun has risen, with praises and oblations.

### ವಿಶೇಷವಿಷಯಗಳು

**ಪಾಥಃ** :—ಯಾಸ್ಕರು ಈ ಋಕ್ಕಿನಲ್ಲಿರುವ **ಪಾಥಃ** ಎಂಬ ಶಬ್ದಕ್ಕೆ **ಪಾಥೋಽನ್ತರಿಕ್ಷಂ ಪಥಾ ವ್ಯಾಖ್ಯಾತಂ । ಶ್ಯೇನೋ ನ ದೀಯನ್ನನ್ವೇತಿ ಪಾಥಃ ಇತ್ಯಪಿ ನಿಗಮೋ ಭವತಿ** (ನಿ. ೬-೭) ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ **ಪಾಥಃ** ಎಂಬ ಶಬ್ದಕ್ಕೆ ಮಾರ್ಗವು ಎಂದರ್ಥವಿದ್ದರೂ ಇಲ್ಲಿ ಸೂರ್ಯನು ಸಂಚರಿಸುವ ಮಾರ್ಗವಾದ ಅಂತರಿಕ್ಷವು ಎಂದು ವಿವರಿಸಿದ್ದಾರೆ ಮತ್ತು **ಪಂಥಾಃ** ಎಂಬ ಶಬ್ದವು-**ಪಂಥಾಃ ಪತತೇರ್ವಾ ಪದ್ಯತೇರ್ವಾ ಪಂಥತೇರ್ವಾ** (ನಿ ೨-೨೮) ಎಂದೂ ಹೇಳಿರುವರು ಎಂದರೆ **ಪಂಥಾಃ** ಎಂಬ ಶಬ್ದವು ಕೆಳಕ್ಕೆ ಬೀಳು ಎಂಬರ್ಥವಿರುವ **ಪತ್** ಧಾತುವಿನಿಂದಾಗಲಿ, ಹೋಗು ಎಂಬರ್ಥವಿರುವ **ಪದ್** ಧಾತುವಿನಿಂದಾಗಲಿ, ಚಲಿಸು ಎಂಬರ್ಥವಿರುವ **ಪಂಥ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದೆಂದು ತಿಳಿಸಿದ್ದಾರೆ ಈ ಮೂರು ಧಾತುಗಳೂ ಗತ್ಯರ್ಥವನ್ನು ಸೂಚಿಸುವುವು

### ಸಂಹಿತಾಪಾಠಃ

ನೂ ಮಿತ್ರೋ ವರುಣೋ ಅರ್ಯಮಾ ನಸ್ತ್ಮನೇ ತೋಕಾಯ ವರಿವೋ ದಧಂತು ।
ಸುಗಾ ನೋ ವಿಶ್ವಾ ಸುಪಥಾನಿ ಸಂತು ಯೂಯಂ ಪಾತ ಸ್ವಸ್ತಿಭಿಃ ಸದಾ ನಃ

### ಪದಪಾಠಃ

ನು । ಮಿತ್ರಃ । ವರುಣಃ । ಅರ್ಯಮಾ । ನಃ । ತ್ಮನೇ । ತೋಕಾಯ । ವರಿವಃ । ದಧಂತು ।

ಸುऽಗಾ । ನಃ । ವಿಶ್ವಾ । ಸುऽಪಥಾನಿ । ಸಂತು । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥ ೬ ॥

### ಸಾಯಣಭಾಷ್ಯಂ

**ಮಿತ್ರೋ ವರುಣೋಽರ್ಯಮಾ ಚೈತೇ ತ್ರಯೋ ದೇವಾ ನ್ವದ್ಯ ನೋಽಸ್ಮಾಕಂ ತ್ಮನ ಆತ್ಮನ ಆತ್ಮಹಿತಾಯ ತೋಕಾಯ ಪುತ್ರಾಯ ಚ ವರಿವೋ ಧನಂ ದಧಂತು । ಪ್ರಯಚ್ಛಂತು । ನೋಽಸ್ಮಾಕಂ ವಿಶ್ವಾ ಸರ್ವಾಣಿ ಗಂತವ್ಯಾನಿ ಸುಗಾ ಸುಗಮನಾನಿ ಸುಪಥಾನಿ ಚ ಸಂತು । ಭವಂತು । ಶಿಷ್ಟಂ ಗತಂ ॥**

### ಪ್ರತಿಪದಾರ್ಥ

**ಮಿತ್ರಃ**—ಮಿತ್ರನೂ, | **ವರುಣಃ**—ವರುಣನೂ, | **ಅರ್ಯಮಾ**—ಅರ್ಯಮನೂ | **ನು**—ಈಗ | **ನಃ**—ನಮಗೆ | **ತ್ಮನೇ**—ಸ್ವಂತಕ್ಕೂ | **ತೋಕಾಯ**—ನಮ್ಮ ಪುತ್ರರಿಗೂ | **ವರಿವಃ**—ಧನವನ್ನು | **ದಧಂತು**—ಕೊಡಲಿ **ನಃ**—ನಮಗೆ | **ವಿಶ್ವಾ**—ಸಮಸ್ತವಾದ | **ಸುಗಾ**—ಸಂಚಾರಮಾರ್ಗಗಳೂ | **ಸುಪಥಾನಿ**—ಉತ್ತಮವಾದ ಸಂಚಾರಕ್ಕೆ ಯೋಗ್ಯವಾಗಿ | **ಸಂತು**—ಆಗಲಿ | (ಎಲೈ ದೇವತೆಗಳೇ) **ಯೂಯಂ**—ನೀವು | **ಸದಾ**—ಯಾವಾಗಲೂ **ನಃ**—ನಮ್ಮನ್ನು | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ.

### ಭಾವಾರ್ಥ

ಮಿತ್ರನೂ, ವರುಣನೂ, ಅರ್ಯಮನೂ ಈಗ ನಮ್ಮ ಸ್ವಂತಕ್ಕೂ ನಮ್ಮ ಪುತ್ರರಿಗೂ ಧನವನ್ನು ಕೊಡಲಿ ನಮ್ಮ ಮಾರ್ಗವನ್ನೆಲ್ಲಾ ಉತ್ತಮವಾದ ಸಂಚಾರಕ್ಕೆ ಯೋಗ್ಯವಾದವನ್ನಾಗಿ ಮಾಡಲಿ ಎಲೈ ದೇವತೆಗಳೇ, ನೀವು ಯಾವಾಗಲೂ ನಮ್ಮನ್ನು ಕಲ್ಯಾಣಗಳಿಂದ ರಕ್ಷಿಸಿರಿ.

### English Translation

May Mitra, Varuna, Aryaman grant affluence to us and to our posterity may all paths be easy of access to us, and do you ever cherish us with blessings

———

## ಅರವತ್ತನಾಲ್ಕನೆಯ ಸೂಕವು

**ದಿವಿ ಕ್ಷಯಂತೇತಿ ಪಂಚರ್ಚಂ ನವಮಂ ಸೂಕ್ತಂ ವಸಿಷ್ಠಸ್ಯಾರ್ಷಂ ಮೈತ್ರಾವರುಣಂ । ದಿವಿ ಪಂಚೇತ್ಯನುಕ್ರಮಣಿಕಾ ॥ ತೃತೀಯೇ ಛಂದೋಮೇ ಪ್ರಉಗಶಸ್ತ್ರ ಆದ್ಯಸ್ತೃಚೋ ಮೈತ್ರಾವರುಣಸ್ಯ । ಸೂತ್ರಿತಂ ಚ । ದಿವಿ ಕ್ಷಯಂತಾ ರಜಸಃ ಪೃಥಿವ್ಯಾಮಾ ವಿಶ್ವವಾರಾಶ್ವಿನಾ ಗತಂ ನಃ । ಆ ೮-೧೧ । ಇತಿ ॥**

**ಅನುವಾದವು—ದಿವಿ ಕ್ಷಯಂತಾ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಒಂಭತ್ತನೆಯ **ಸೂಕ್ತವು** ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಮಿತ್ರಾವರುಣರು ದೇವತೆಯು; ತ್ರಿಷ್ಟುಪ್‌ಛಂದಸ್ಸು ಅನುಕ್ರಮಣಿಕೆಯಲ್ಲಿ— **ದಿವಿ ಪಂಚ** ಎಂದು ಹೇಳಿರುವುದು ತೃತೀಯಛಂದೋಮದಲ್ಲಿ ಪ್ರಉಗಶಸ್ತ್ರಮಂತ್ರಪಠನಮಾಡುವಾಗ ಮಿತ್ರಾವರುಣದೇವತೆಗಳನ್ನುದ್ದೇಶಿಸಿ ಈ ಸೂಕ್ತದ ಮೊದಲಿನ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ದಿವಿ ಕ್ಷಯಂತಾ ರಜಸಃ ಪೃಥಿವ್ಯಾಮಾ ವಿಶ್ವವಾರಾಶ್ವಿನಾ ಗತಂ ನಃ** ಎಂಬ ಸೂತ್ರದಿಂದ (ಆ. ೮-೧೧) **ವಿವೃತವಾಗಿರುವುದು.**

## ಸೂಕ್ತ—೬೪

ಮಂಡಲ—೭ || ಅನುವಾಕ—೪ || ಸೂಕ್ತ—೬೪ ||
ಅಷ್ಟಕ—೫ || ಅಧ್ಯಾಯ—೫ || ವರ್ಗ—೬ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ||
ಋಷಿಃ—ವಸಿಷ್ಠಃ ||
ದೇವತಾ—ಮಿತ್ರಾವರುಣೌ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

ದಿವಿ ಕ್ಷಯಂತಾ ರಜಸಃ ಪೃಥಿವ್ಯಾಂ ಪ್ರ ವಾಂ ಘೃತಸ್ಯ ನಿರ್ಣಿಜೋ ದದೀ-
ರನ್ ।
ಹವ್ಯಂ ನೋ ಮಿತ್ರೋ ಅರ್ಯಮಾ ಸುಜಾತೋ ರಾಜಾ ಸುಕ್ಷತ್ರೋ ವ-
ರುಣೋ ಜುಷಂತ || ೧ ||

ಪದಪಾಠಃ

ದಿವಿ । ಕ್ಷಯಂತಾ । ರಜಸಃ । ಪೃಥಿವ್ಯಾಂ । ಪ್ರ । ವಾಂ । ಘೃತಸ್ಯ । ನಿಃನಿಜಃ । ದದೀರನ್ ||
ಹವ್ಯಂ । ನಃ । ಮಿತ್ರಃ । ಅರ್ಯಮಾ । ಸುಽಜಾತಃ । ರಾಜಾ । ಸುಽಕ್ಷತ್ರಃ । ವರುಣಃ । ಜುಷಂತ || ೧ ||

ಸಾಯಣಭಾಷ್ಯಂ

ದಿವಿ ದ್ಯುಲೋಕೇಽಂತರಿಕ್ಷೇ ಪೃಥಿವ್ಯಾಂ ಚ ವರ್ತಮಾನಸ್ಯ ರಜಸ ಉದಕಸ್ಯ ಕ್ಷಯಂತಾ । ಕ್ಷಯತಿರೈಶ್ವರ್ಯಕರ್ಮಾ । ಸ್ವಾಮಿನೌ ಭವಥಃ । ಹೇ ಮಿತ್ರಾವರುಣೌ ವಾಂ ಯುವಾಭ್ಯಾಂ ಪ್ರೇರಿತಾ ಮೇಘಾ ಘೃತಸ್ಯ ನಿರ್ಣಿಜ ಉದಕಸ್ಯ ರೂಪಾಣಿ ದದೀರನ್ । ದದತೇ । ಪ್ರಯಚ್ಛಂತಿ । ಅಥವಾ ವಾಂ ಯುವಾಭ್ಯಾಂ ಘೃತಸ್ಯ ನಿರ್ಣಿಜೋ ರೂಪಾಣಿ । ಘೃತಾನೀತ್ಯರ್ಥಃ । ತಾನಿ ದದೀರನ್ । ದೀಯಂತೇ। ನೋಽಸ್ಮಾಕಂ ಸಂಬಂಧಿ ಹವ್ಯಂ ಮಿತ್ರಃ ಸುಜಾತಃ ಸುಷ್ಠು ಪ್ರಾದುರ್ಭೂತೋಽರ್ಯಮಾ ರಾಜಾ ಸರ್ವಸ್ಯ ಸ್ವಾಮೀ ಸುಕ್ಷತ್ರಃ ಶೋಭನಬಲೋ ವರುಣಶ್ಚೈತೇ ಜುಷಂತ । ಸೇವಂತಾಂ ||

ಪ್ರತಿಪದಾರ್ಥ

ದಿವಿ—ಅಂತರಿಕ್ಷದಲ್ಲಿಯೂ । ಪೃಥಿವ್ಯಾಂ—ಭೂಮಿಯಲ್ಲಿಯೂ ಇರುವ । ರಜಸಃ—ಉದಕಕ್ಕೆ । ಕ್ಷಯಂತಾ—ಒಡೆಯರಾದ ಎಲೈ ಮಿತ್ರಾವರುಣರೇ । ವಾಂ—ನಿಮ್ಮಿಂದ ಪ್ರೇರಿತವಾದ ಮೇಘಗಳು । ಘೃತಸ್ಯ ನಿರ್ಣಿಜಃ—ಉದಕದ ಧಾರೆಗಳನ್ನು ಅಥವಾ ವೃಷ್ಟಿಯನ್ನು । ದದೀರನ್—ಕೊಡುತ್ತವೆ (ಸುರಿಸುತ್ತವೆ) । [ಅಥವಾ ವಾಂ—ನಿಮಗಾಗಿ । ಘೃತಸ್ಯ ನಿರ್ಣಿಜಃ—ಆಜ್ಯರೂಪದ ಹವಿಸ್ಸುಗಳು । ದದೀರನ್—ಅರ್ಪಿತವಾಗುತ್ತವೆ ] ನಃ—ನಮ್ಮ ಎಂದರೆ ನಾವು ಅರ್ಪಿಸುವ । ಹವ್ಯಂ—ಈ ಹವಿಸ್ಸನ್ನು । ಮಿತ್ರಃ—ಮಿತ್ರನೂ । ಸುಜಾತಃ—ಶ್ರೇಷ್ಠ

ವಾಗಿ ಜನಿಸಿದ | **ಅರ್ಯಮಾ**—ಅರ್ಯಮನೂ | **ರಾಜಾ**—ಸರ್ವರಿಗೂ ಪ್ರಭುವಾದವನೂ | **ಸುಕ್ಷತ್ರಃ**—ಉತ್ತಮ ವಾದ ಬಲವುಳ್ಳವನೂ ಆದ | **ವರುಣಃ**—ವರುಣನೂ, ಈ ಮೂವರೂ | **ಜುಷಂತ**—ಸೇವಿಸಲಿ.

**ಭಾವಾರ್ಥ**

ಭೂಮ್ಯಂತರಿಕ್ಷಗಳಲ್ಲಿರುವ ಸಮಸ್ತ ಉದಕಗಳಿಗೂ ಒಡೆಯರಾದ ಎಲೈ ಮಿತ್ರಾವರುಣರೇ, ಮೇಘಗಳು ನಿಮ್ಮಿಂದ ಪ್ರೇರಿತವಾಗಿಯೇ ವೃಷ್ಟಿಯನ್ನು ಭೂಮಿಯಮೇಲೆ ಸುರಿಸುತ್ತವೆ. (ಅಥವಾ ಹವಿಸ್ಸಿನ ರೂಪದಿಂದಿರುವ ಘೃತವು ನಿಮಗೆ ಅರ್ಪಿಸಲ್ಪಡುತ್ತದ) ಈಗ ನಾವು ಅರ್ಪಿಸುವ ಹವಿಸ್ಸನ್ನು ಮಿತ್ರನೂ ಉತ್ತಮಜನವುಳ್ಳ ಅರ್ಯಮನೂ, ಸಕಲರಿಗೂ ಪ್ರಭುವೂ ಉತ್ತಮ ಬಲಶಾಲಿಯೂ ಆದ ವರುಣನೂ ಈ ಮೂವರೂ ಸೇವಿಸಲಿ

English Translation

Ruling over the waters that are in heaven and earth, impelled by you (the clouds) assume the form of rain may the auspiciously manifested Mitra, the rayal Aryaman, the powerful Varuna accept our oblation

**ಸಂಹಿತಾಪಾಠಃ**

ಆ ರಾಜಾನಾ ಮಹ ಋತಸ್ಯ ಗೋಪಾ ಸಿಂಧುಪತೀ ಕ್ಷತ್ರಿಯಾ ಯಾತಮ-
ರ್ವಾಕ್ |
ಇಳಾಂ ನೋ ಮಿತ್ರಾವರುಣೋತ ವೃಷ್ಟಿಮವ ದಿವ ಇನ್ವತಂ ಜೀರದಾನೂ ||

**ಪದಪಾಠಃ**

**ಆ | ರಾಜಾನಾ | ಮಹಃ | ಋತಸ್ಯ | ಗೋಪಾ | ಸಿಂಧುಪತೀ ಇತಿ ಸಿಂಧುऽಪತೀ | ಕ್ಷತ್ರಿಯಾ | ಯಾತಂ | ಅರ್ವಾಕ್ |**
**ಇಳಾಂ | ನಃ | ಮಿತ್ರಾವರುಣಾ | ಉತ | ವೃಷ್ಟಿಂ | ಅವ | ದಿವಃ | ಇನ್ವತಂ | ಜೀರದಾನೂ ಇತಿ ಜೀರऽದಾನೂ || ೨ ||**

**ಸಾಯಣಭಾಷ್ಯಂ**

**ಹೇ ರಾಜಾನಾ ಸರ್ವಸ್ಯ ಸ್ವಾಮಿನೌ ಹೇ ಮಹೋ ಮಹತ ಋತಸ್ಯೋದಕಸ್ಯ ಯಜ್ಞಸ್ಯ ಗೋಪಾ ಗೋಪಾಯಿತಾರೌ || ಸುಬಾಮಂತ್ರಿತೇ ಪರಾಂಗವತ್ಸ್ವರ ಇತಿ ಪರಾಂಗವದ್ಭಾವಾತ್ ಷಷ್ಠ್ಯಾ-ಮಂತ್ರಿತಸಮುದಾಯಸ್ಯ ನಿಘಾತತ್ವಂ || ಹೇ ಸಿಂಧುಪತೀ ನದ್ಯಾಃ ಪಾಲಯಿತಾರೌ ಹೇ ಕ್ಷತ್ರಿಯಾ ಬಲ-ವಂತೌ ಯುವಾಮರ್ವಾಗಸ್ಮದಭಿಮುಖಮಾ ಯಾತಂ | ಆಗಚ್ಛತಂ | ಕಿಂ ಚ ಹೇ ಮಿತ್ರಾವರುಣಾ ಮಿತ್ರಾವರುಣೌ ಹೇ ಜೀರದಾನೂ ಕ್ಷಿಪ್ರದಾನೌ ಯುವಾಂ ನೋऽಸ್ಮಭ್ಯಮಿಳಾಮನ್ನಮುತಾಪಿ ಚ ಪುಷ್ಟಿಂ ಚ ತತ್ಸಾಧಿಕಾಂ ವೃಷ್ಟಿಂ ಚ ದಿವೋऽಂತರಿಕ್ಷಾದವಾವಸ್ತಾದಿನ್ವತಂ | ಪ್ರೇರಯತಂ ||**

ಪ್ರತಿಪದಾರ್ಥ

**ರಾಜಾನಾ**—ಸರ್ವರಿಗೂ ಪ್ರಭುವಾದವರೂ | **ಮಹಃ**—ಮಹತ್ಸ್ವರೂಪವುಳ್ಳವರೂ | **ಋತಸ್ಯ**—ಉದಕಕ್ಕೆ ಅಥವಾ ಯಜ್ಞಕ್ಕೆ | **ಗೋಪಾ**—ರಕ್ಷಕರಾದವರೂ | **ಸಿಂಧುಪತೀ**—ನದಿಗಳ ಪಾಲಕರೂ | **ಕ್ಷತ್ರಿಯಾ**—ಶಕ್ತಿಯುಳ್ಳವರೂ ಆದ ಎಲೈ ಮಿತ್ರಾವರುಣರೇ ನೀವು | **ಅರ್ವಾಕ್**—ನಮಗೆ ಅಭಿಮುಖರಾಗಿ | **ಆ ಯಾತಂ**—ಬನ್ನಿರಿ. | **ಮಿತ್ರಾವರುಣಾ**—ಎಲೈ ಮಿತ್ರಾವರುಣರೇ | **ಜೀರದಾನೂ**—ಬೇಗನೆ ಇಷ್ಟಾರ್ಥಗಳನ್ನು ಕೊಡುವವರಾದ ನೀವು | **ನಃ**—ನಮಗೆ | **ಇಳಾಂ**—ಅನ್ನವನ್ನೂ | **ಉತ**—ಮತ್ತು | **ಪುಷ್ಟಿಂ**—ಪುಷ್ಟಿಪ್ರದವಾದ ವೃಷ್ಟಿಯನ್ನೂ | **ದಿವಃ**—ಅಂತರಿಕ್ಷದಿಂದ | **ಅವ**—ಅಧೋಮುಖವಾಗಿ | **ಇನ್ವತಂ**—ಬೀಳುವಂತೆ ಪ್ರೇರಿಸಿರಿ

ಭಾವಾರ್ಥ

ಸರ್ವರಿಗೂ ಪ್ರಭುವಾದವರೂ, ಮಹನೀಯರೂ, ಉದಕಕ್ಕೆ ಅಥವಾ ಯಜ್ಞಕ್ಕೆ ರಕ್ಷಕರೂ, ನದಿಗಳ ಪಾಲಕರೂ ಶಕ್ತಿಯುತರೂ ಆದ ಎಲೈ ಮಿತ್ರಾವರುಣರೇ, ನೀವು ನಮಗಭಿಮುಖವಾಗಿ ಬನ್ನಿರಿ ಎಲೈ ಮಿತ್ರಾವರುಣರೇ, ಬೇಗನೆ ನಮ್ಮ ಇಷ್ಟಾರ್ಥಗಳನ್ನು ಸಲ್ಲಿಸುವ ನೀವು ನಮಗೆ ಅನ್ನವನ್ನೂ, ಪುಷ್ಟಿಪ್ರದವಾದ ವೃಷ್ಟಿಯನ್ನೂ ಅಂತರಿಕ್ಷದಿಂದ ಅಧೋಮುಖವಾಗಿ ಬೀಳುವಂತೆ ಪ್ರೇರಿಸಿರಿ.

English Translation

Soverigns, mighty preservers of water, powerful lords of rivers, come to our presence send down to us, munificent Mitra and Varuna, from the firmament, sustenance and rain.

ಸಂಹಿತಾಪಾಠಃ

ಮಿತ್ರಸ್ತನ್ನೋ ವರುಣೋ ದೇವೋ ಅರ್ಯಃ ಪ್ರ ಸಾಧಿಷ್ಠೇಭಿಃ ಪಥಿಭಿರ್ನ-
ಯಂತು |
ಬ್ರವದ್ಯಥಾ ನ ಆದರಿಃ ಸುದಾಸ ಇಷಾ ಮದೇಮ ಸಹ ದೇವಗೋಪಾಃ||೩ ||

ಪದಪಾಠಃ

ಮಿತ್ರಃ | ತತ್ | ನಃ | ವರುಣಃ | ದೇವಃ | ಅರ್ಯಃ | ಪ್ರ | ಸಾಧಿಷ್ಠೇಭಿಃ | ಪಥಿऽಭಿಃ | ನಯಂತು |
ಬ್ರವತ್ | ಯಥಾ | ನಃ | ಆತ್ | ಅರಿಃ | ಸುऽದಾಸೇ | ಇಷಾ | ಮದೇಮ | ಸಹ | ದೇವऽಗೋಪಾಃ||

ಸಾಯಣಭಾಷ್ಯಂ

ಮಿತ್ರೋ ವರುಣೋ ದೇವೋऽರ್ಯೋऽರ್ಯಮಾ ಚೈತೇ ತ್ರಯೋऽಪಿ ನೋऽಸ್ಮಾಂಸ್ತತ್ತದಾ ಯದಾಸ್ಮಾಕಮಪೇಕ್ಷಿತಂ ತದಾ ಸಾಧಿಷ್ಠೇಭಿಃ ಸಾಧಕತಮೈಃ ಪಥಿಭಿರ್ಮಾರ್ಗೈರ್ನಯಂತು | ಪ್ರಾಪ-

ಯಂತು । ಕಿಂಚ ನೋಽಸ್ಮಾನ್ ಸುದಾಸೇ ಶೋಭನದಾನಾಯ ಜನಾಯಾರಿರರ್ಯಮಾ ಯಥಾ ಬ್ರವತ್ ಅಸಾವನುಕಂಪ್ಯ ಇತಿ ಬ್ರೂಯಾತ್ ತಥಾ ಕುರ್ವಂತು । ಅರ್ಯಮ್ಣಃ ಪುನರಭಿಧಾನಮಾದರಾರ್ಥಂ । ದೇವಗೋಪಾ ದೇವಾ ಯೂಯಂ ಗೋಪಾಯಿತಾರೋ ಯೇಷಾಮಸ್ಮಾಕಂ ತೇ ವಯಮಿಷಾ ಯುಷ್ಮಾಭಿರ್ದಾತನ್ಯೇನಾನ್ನೇನ ಸಹ ಪುತ್ರಾದಿಸಹಿತಾ ಮದೇಮ । ಹೃಷ್ಯೇಮ

ಪ್ರತಿಪದಾರ್ಥ

**ಮಿತ್ರಃ**—ಮಿತ್ರನೂ, । **ವರುಣಃ**—ವರುಣನೂ, । **ಅರ್ಯಮಾ**—ಅರ್ಯಮನೂ ಈ ಮೂವರೂ । **ನಃ**—ನಮ್ಮನ್ನು । **ತತ್**—ನಾವು ಅಪೇಕ್ಷಿಸಿದಾಗ । **ಸಾಧಿಷ್ಠೇಭಿಃ**—ಸಾಧನಭೂತವಾದ । **ಪಥಿಭಿಃ**—ಮಾರ್ಗಗಳಿಂದ । **ನಯಂತು**—ನಿರ್ದಿಷ್ಟಸ್ಥಾನಕ್ಕೆ ಒಯ್ಯಲಿ. (ಮತ್ತು) । **ನಃ**—ನಮ್ಮನ್ನು ಎಂದರೆ ನಮ್ಮ ವಿಷಯವನ್ನು । **ಸುದಾಸೇ**—ಉತ್ತಮದಾನಿಗಳಾದ ಸಜ್ಜನರಿಗೆ । **ಅರಿಃ**—ಅರ್ಯಮನು । **ಯಥಾ ಬ್ರವತ್**—ಅರಿಕೆಮಾಡಲಿ. । **ದೇವಗೋಪಾಃ**—ದೇವತೆಗಳಾದ ನಿಮ್ಮಿಂದ ರಕ್ಷಿತರಾದ ನಾವು । **ಇಷಾ**—ನೀವು ನಮಗೆ ಕೊಡುವ ಅನ್ನದಿಂದ । **ಸಹ**—ಪುತ್ರಾದಿಗಳಿಂದ ಸಹಿತರಾಗಿ । **ಮದೇಮ**—ಸಂತೋಷದಿಂದ ಇರುವಂತಾಗಲಿ.

ಭಾವಾರ್ಥ

ಮಿತ್ರ, ವರುಣ, ಅರ್ಯಮಾ ಎಂಬ ಈ ಮೂವರು ದೇವತೆಗಳೂ ಸೇರಿ ನಾವು ಅಪೇಕ್ಷಿಸಿದಾಗ ಯೋಗ್ಯವಾದ ಮಾರ್ಗಗಳಿಂದ ನಮ್ಮನ್ನು ನಿರ್ದಿಷ್ಟಸ್ಥಾನಕ್ಕೆ ಒಯ್ಯಲಿ. ನಾವು ಉತ್ತಮವಾದ ಅನುಗ್ರಹಕ್ಕೆ ಪಾತ್ರರೆಂಬ ವಿಷಯವನ್ನು ಸಜ್ಜನರಿಗೆ ಅರ್ಯಮನು ತಿಳಿಸಲಿ ದೇವತೆಗಳಾದ ನಿಮ್ಮಿಂದ ಸಂರಕ್ಷಿತರಾದ ನಾವು, ನೀವು ಕೊಡುವ ಅನ್ನಾದ್ಯಾಹಾರಗಳಿಂದ ಪುತ್ರಾದಿಸಹಿತರಾಗಿ ಸಂತೋಷದಿಂದಿರುವಂತಾಗಲಿ.

English Translation

May Mitra, Varuna, the divnie Aryaman, conduct us by the most practicable paths, then, (when we desiae their guidance), accordingly as Aryaman promises to the liberal donor (of oblations), may we, enjoying the protection of the gods, rejoice in abundance, together with posterity.

ಸಂಹಿತಾಪಾಠಃ

ಯೋ ವಾಂ ಗರ್ತಂ ಮನಸಾ ತಕ್ಷದೇತಮೂರ್ಧ್ವಾಂ ಧೀತಿಂ ಕೃಣವದ್ಧಾರಯಚ್ಚ ।
ಉಕ್ಷೇಥಾಂ ಮಿತ್ರಾವರುಣಾ ಘೃತೇನ ತಾ ರಾಜಾನಾ ಸುಕ್ಷಿತೀಸ್ತರ್ಪಯೇಥಾಂ ॥ ೪ ॥

ಪದಪಾಠಃ

ಯಃ । ವಾಂ । ಗರ್ತಂ । ಮನಸಾ । ತಕ್ಷತ್ । ಏತಂ । ಊರ್ಧ್ವಾಂ । ಧೀತಿಂ । ಕೃಣವತ್ । ಧಾರಯತ್ । ಚ ।

ಉಕ್ಷೇಥಾಂ । ಮಿತ್ರಾವರುಣಾ । ಘೃತೇನ । ತಾ । ರಾಜಾನಾ । ಸುಽಕ್ಷಿತೀಃ । ತರ್ಪಯೇಥಾಂ ॥ ೪ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ಯೋ ವಾಂ ಯುವಯೋರೇತಂ ಗರ್ತಂ ರಥಂ ಮನಸಾ ತಕ್ಷತ್ ಸ್ತೋತ್ರೇಣ ಸಂಕಲ್ಪಯೇತ್ ತಥಾ ಕೃತ್ವೋರ್ಧ್ವಾಮುನ್ನತಾಂ ಧೀತಿಂ ಕರ್ಮ ಸ್ತುತಿರೂಪಂ ಕೃಣವತ್ ಕುರ್ಯಾತ್ ಉಚ್ಚೈಃ ಸ್ತುಯಾತ್ ಏವಂ ಕೃತ್ವಾ ಧಾರಯಚ್ಚ ಯಾಗೇ ಧಾರಯೇತ್ ಹೇ ರಾಜಾನಾ ಸ್ವಾಮಿನೌ ಮಿತ್ರಾವರುಣಾ ಮಿತ್ರಾವರುಣೌ ತಾ ತೌ ಯುವಾಂ ಜನಂ ಘೃತೇನೋದಕೇನೋಕ್ಷೇಥಾಂ ಸಿಂಚತಂ । ತಸ್ಮೈ ಸುಕ್ಷಿತೀಃ ಶೋಭನನಿವಾಸಾಃ ಪ್ರಜಾಃ ತರ್ಪಯೇಥಾಂ । ಯಥಾ ಸುಕ್ಷಿತಯೋ ಭವಂತಿ ತಥಾ ತರ್ಪಯೇಥಾಮಿತಿ ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) **ಯಃ**— ಯಾವ ಪುರುಷನು । **ವಾಂ**— ನಿಮ್ಮ । **ಏತಂ ಗರ್ತಂ**— ಈ ರಥವನ್ನು **ಮನಸಾ**— ಮನಸ್ಸಿನಿಂದ ಎಂದರೆ ಸ್ತೋತ್ರದಿಂದ । **ತಕ್ಷತ್**— ಸ್ತುತಿಸಿ ಪ್ರಶಂಸಿಸುವನೋ (ಮತ್ತು) । **ಊರ್ಧ್ವಾಂ**— ಉನ್ನತವಾದ ಎಂದರೆ ಶ್ರೇಷ್ಠವಾದ । **ಧೀತಿಂ**— ಸ್ತುತಿರೂಪವಾದ ಕರ್ಮವನ್ನು **ಕೃಣವತ್**— ಉಚ್ಚಧ್ವನಿಯಿಂದ ನಿರ್ಮಿಸಿ (ಸ್ತುತಿಸಿ) । **ಧಾರಯಚ್ಚ**— ಯಜ್ಞದಲ್ಲಿ ಅರ್ಪಿಸುವನೋ ಆ ಪುರುಷನನ್ನು । **ರಾಜಾನಾ**— ಸರ್ವರಿಗೂ ಸ್ವಾಮಿಗಳಾದ । **ಮಿತ್ರಾವರುಣಾ**— ಎಲೈ ಮಿತ್ರಾವರುಣರೇ । **ತಾ**— ಆ ನೀವು । **ಘೃತೇನ**— ವೃಷ್ಟಿರೂಪವಾದ ಉದಕದಿಂದ । **ಉಕ್ಷೇಥಾಂ**— ಸೇಕಿಸಿರಿ (ಅವನಿಗೆ) । **ಸುಕ್ಷಿತೀಃ**— ಉತ್ತಮವಾದ ವಾಸಸ್ಥಾನಗಳನ್ನು ಕೊಟ್ಟು । **ತರ್ಪಯೇಥಾಂ**— ತೃಪ್ತಿಯನ್ನುಂಟುಮಾಡಿರಿ

ಭಾವಾರ್ಥ

ಎಲೈ ಮಿತ್ರಾವರುಣರೇ, ಯಾವ ಪುರುಷನು ನಿಮ್ಮ ರಥವನ್ನು ತನ್ನ ಮನಸ್ಸಿನಲ್ಲಿಯೇ ಸ್ತುತಿಸಿ ಪ್ರಶಂಸಿಸುವನೋ ಮತ್ತು ಯಜ್ಞದಲ್ಲಿ ಆ ಸ್ತುತಿಯನ್ನು ಉಚ್ಚಧ್ವನಿಯಿಂದ ಪಠಿಸಿ ಅರ್ಪಿಸುವನೋ ಅಂತಹ ಪುರುಷನನ್ನು ಎಲೈ ಸರ್ವರಿಗೂ ಪ್ರಭುಗಳಾದ ಮಿತ್ರಾವರುಣರೇ, ವೃಷ್ಟ್ಯುದಕಗಳಿಂದ ಸೇಕಿಸಿರಿ ಎಂದರೆ ಅವನಿಗಾಗಿ ವೃಷ್ಟಿಯನ್ನು ಸುರಿಸಿರಿ ಮತ್ತು ಅವನಿಗೆ ಉತ್ತಮವಾದ ನಿವಾಸಸ್ಥಾನಗಳನ್ನು ಕೊಟ್ಟು ಸಂತೋಷಪಡಿಸಿರಿ

## English Translation

Mitra and Varuna, bedew with water him who fabricates your chariot in his mind, offering high praise, and confirming it (by sacrifice): render, sovereign (deities), the people well affected towards him.

ಸಂಹಿತಾಪಾಠಃ

ಏಷ ಸ್ತೋಮೋ ವರುಣ ಮಿತ್ರ ತುಭ್ಯಂ ಸೋಮಃ ಶುಕ್ರೋ ನ ವಾಯ-
ವೇಽಯಾಮಿ ।
ಅವಿಷ್ಟಂ ಧಿಯೋ ಜಿಗೃತಂ ಪುರಂಧೀರ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ

ಪದಪಾಠಃ

ಏಷಃ । ಸ್ತೋಮಃ । ವರುಣ । ಮಿತ್ರ । ತುಭ್ಯಂ । ಸೋಮಃ । ಶುಕ್ರಃ । ನ । ವಾಯವೇ । ಅಯಾಮಿ ।

ಅವಿಷ್ಟಂ । ಧಿಯಃ । ಜಿಗೃತಂ । ಪುರಂಽಧೀಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೫ ॥

ಸಾಯಣಭಾಷ್ಯಂ

ಅನಯಾ ಸ್ತುತಿಮುಪಸಂಹರತಿ । ಹೇ ವರುಣ ಹೇ ಮಿತ್ರ ತುಭ್ಯಂ ಯುವಯೋರ್ವಾಯವೇ ವಾಯುರ್ಗಂತಾದಿತ್ಯಃ । ಸ ಏವಾರ್ಯಮಾ । ತಸ್ಮೈ ಚೈಷ ಸ್ತೋಮಃ ಸ್ತವೋಽಯಾಮಿ । ಅಕಾರಿ । ಕಿಮಿವ । ಶುಕ್ರೋ ದೀಪ್ತಃ ಸೋಮೋ ನ ಯುಷ್ಮಭ್ಯಂ ಪ್ರೀತಿಕರಃ ಸೋಮೋ ಯಥಾ ದೀಯತೇ ತದ್ವತ್ । ಧಿಯಃ ಕರ್ಮಾಣ್ಯಸ್ಮದೀಯಾನ್ಯವಿಷ್ಟಂ । ರಕ್ಷತಂ । ಪುರಂಧೀಃ ಸ್ತುತೀರ್ಜಿಗೃತಂ । ಪ್ರಬುಧ್ಯತಂ । ಅನ್ಯದ್ಗತಂ ॥

ಪ್ರತಿಪದಾರ್ಥ

**ವರುಣ**—ಎಲೈ ವರುಣನೇ, । **ಮಿತ್ರ**—ಎಲೈ ಮಿತ್ರನೇ, । **ತುಭ್ಯಂ**—ನಿಮಗೋಸ್ಕರ ಎಂದರೆ ನಿಮ್ಮನ್ನುದ್ದೇಶಿಸಿಯೂ । **ವಾಯವೇ**—ಸಂಚಾರಶೀಲನಾದ ಅರ್ಯಮನನ್ನುದ್ದೇಶಿಸಿಯೂ । **ಶುಕ್ರಃ**—ಶುಭ್ರವಾದ । **ಸೋಮಃ ನ**—ಸೋಮರಸದಂತೆ ನಿಮಗೆ ಹಿತಕರವಾದ । **ಏಷಃ ಸ್ತೋಮಃ**—ಈ ಸ್ತುತಿಯು । **ಅಯಾಮಿ**—ನಿರ್ಮಿತವಾಗಿದೆ. । **ಧಿಯಃ**—ನಾವು ಮಾಡುತ್ತಿರುವ ಯಜ್ಞಾದಿಗಳನ್ನು । **ಅವಿಷ್ಟಂ**—(ವಿಘ್ನಗಳಿಲ್ಲದಂತೆ) ರಕ್ಷಿಸಿರಿ **ಪುರಂಧೀಃ**—ನಮ್ಮ ಸ್ತುತಿಗಳನ್ನು । **ಜಿಗೃತಂ**—(ಕೇಳಿ) ತಿಳಿಯಿರಿ. ಎಲೈ ಮಿತ್ರಾವರುಣಾದಿದೇವತೆಗಳೇ । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

ಭಾವಾರ್ಥ

ಎಲೈ ಮಿತ್ರಾವರುಣರೇ, ಎಲೈ ಅರ್ಯಮನೇ, ನಿಮ್ಮನ್ನುದ್ದೇಶಿಸಿ ಶುಭ್ರವಾದ ಸೋಮರಸದಂತೆ ನಿಮಗೆ ಹಿತಕರವಾದ ಈ ಸ್ತುತಿಯು ನಿರ್ಮಿತವಾಗಿದೆ. ಈಗ ನಾವು ಮಾಡುತ್ತಿರುವ ಯಜ್ಞಾದಿಕರ್ಮಗಳನ್ನು ವಿಘ್ನರಹಿತವನ್ನಾಗಿ ಮಾಡಿ ರಕ್ಷಿಸಿರಿ. ಮತ್ತು ನಮ್ಮ ಸ್ತುತಿಯನ್ನು ಕೇಳಿ ತಿಳಿಯಿರಿ. ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Varuna and Mitra, this praise, pure as the Soma libation, has been offered to you, and also Aryaman, (to you)· protect our rites be awake to our praises . and do you ever cherish us with blessings.

---

# ಅರವತ್ತೈದನೆಯ ಸೂಕ್ತವು

ಸಾಯಣಭಾಷ್ಯಂ

ಪ್ರತಿ ವಾಂ ಸೂರ ಇತಿ ಪಂಚರ್ಚಂ ದಶಮಂ ಸೂಕ್ತಂ ವಸಿಷ್ಠಸ್ಯಾರ್ಷಂ ಮೈತ್ರಾವರುಣಂ। ಪ್ರತಿ ವಾಮಿತ್ಯನುಕ್ರಾಂತಂ ॥ ದ್ವಿತೀಯೇ ಛಂದೋಮೇ ಪ್ರಉಗಶಸ್ತ್ರೇಽಸ್ಯೇಷ ತೃಚಃ । ಸೂತ್ರಿತಂ ಚ। ಪ್ರತಿ ವಾಂ ಸೂರ ಇತಿ ಉದಿತೇ ಸೂಕ್ತೈರ್ಧೇನುಃ ಪ್ರತ್ನಸ್ಯ । ಆ ೮ ೧೦ । ಇತಿ ॥

ಅನುವಾದವು—ಪ್ರತಿ ವಾಂ ಸೂರೇ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು ಇವರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಮಿತ್ರಾವರುಣರು ದೇವತೆಯು ಅನುಕ್ರಮಣಿಕೆಯಲ್ಲಿ-ಪ್ರತಿ ವಾಂ ಎಂದು ಹೇಳಿರುವುದು ದ್ವಿತೀಯಛಂದೋಮದಲ್ಲಿ ಪ್ರಉಗಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಪ್ರತಿ ವಾಂ ಎಂದು ಮೊದಲಾಗುವ ಮೊದಲಿನ ಮೂರು ಋಕ್ಕುಗಳ ವಿನಿಯೋಗವಿರುವುದಕ್ಕೆ ಆಶ್ವಲಾಯನಶ್ರೌತಸೂತ್ರದ-ಪ್ರತಿ ವಾಂ ಸೂರ ಉದಿತೇ ಸೂಕ್ತೈರ್ಧೇನುಃ ಪ್ರತ್ನಸ್ಯ ಎಂಬ ಸೂತ್ರದಿಂದ (ಆ ೮-೧೦) ವಿವೃತವಾಗಿರುವುದು.

## ಸೂಕ್ತ—೬೫

ಮಂಡಲ—೭ ॥ ಅನುವಾಕ—೪ ॥ ಸೂಕ್ತ—೬೫ ॥
ಅಷ್ಟಕ—೫ ॥ ಅಧ್ಯಾಯ—೫ ॥ ವರ್ಗ—೭ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಸಿಷ್ಠಃ ॥
ದೇವತಾ—ಮಿತ್ರಾವರುಣೌ ॥
ಛಂದಃ—ತ್ರಿಷ್ಟುಪ್ ।

ಸಂಹಿತಾಪಾಠಃ

ಪ್ರತಿ ವಾಂ ಸೂರ ಉದಿತೇ ಸೂಕ್ತೈರ್ಮಿತ್ರಂ ಹುವೇ ವರುಣಂ ಪೂತದಕ್ಷಂ।
ಯಯೋರಸುರ್ಯ೧ಮಕ್ಷಿತಂ ಜ್ಯೇಷ್ಠಂ ವಿಶ್ವಸ್ಯ ಯಾಮನ್ನಾಚಿತಾ ಜಿಗತ್ನು

ಪದಪಾಠಃ

ಪ್ರತಿ । ವಾಂ । ಸೂರೇ । ಉತ್ಽಇತೇ । ಸುಽಉಕ್ತೈಃ । ಮಿತ್ರಂ । ಹುವೇ । ವರುಣಂ । ಪೂತಽದಕ್ಷಂ।
ಯಯೋಃ । ಅಸುರ್ಯಂ । ಅಕ್ಷಿತಂ । ಜ್ಯೇಷ್ಠಂ । ವಿಶ್ವಸ್ಯ । ಯಾಮನ್ । ಆಽಚಿತಾ । ಜಿಗತ್ನು ।

ಸಾಯಣಭಾಷ್ಯಂ

**ಸೂರೇ ಸೂರ್ಯೇ ಉದಿತೇ ಪ್ರಾತಃಸವನೇ ಮಿತ್ರಂ ಪೂತದಕ್ಷಂ ಶುದ್ಧಬಲಂ ವರುಣಂ ವಾಂ ಸೂಕ್ತೈರ್ಹುವೇ । ಆಹ್ವಯೇ । ಯಯೋರ್ಮಿತ್ರಾವರುಣಯೋರಕ್ಷಿತಮಕ್ಷೀಣಮತ ಏವ ಜ್ಯೇಷ್ಠಮಸುರ್ಯಂ ಬಲಮಾಚಿತಾಚಿತ ಉಪಚಿತೇ ಶೂರಸಂಘೈರುಪೇತೇ ಯಾಮನ್ ಯಾಮನಿ ಸಂಗ್ರಾಮೇ ವಿಶ್ವಸ್ಯ ಶತ್ರುಸಂಘಸ್ಯ ಜಿಗತ್ನು ಜೇತೃ ಭವತಿ ॥**

ಪ್ರತಿಪದಾರ್ಥ

**ಸೂರೇ**—ಸೂರ್ಯನು । **ಉದಿತೇ**—ಉದಯಿಸಲು ಪ್ರಾತಸ್ಸವನದಲ್ಲಿ । **ಮಿತ್ರಂ**—ಮಿತ್ರನನ್ನೂ । **ಪೂತ ದಕ್ಷಂ**—ಶುದ್ಧಬಲವುಳ್ಳ । **ವರುಣಂ**—ವರುಣನನ್ನೂ । **ವಾಂ**—ಈ ನಿಮ್ಮಿಬ್ಬರನ್ನೂ । **ಸೂಕ್ತೈಃ**—ಸ್ತುತಿವಾಕ್ಯಗಳಿಂದ । **ಹುವೇ**—ಪ್ರಾರ್ಥಿಸಿ ಕರೆಯುತ್ತೇನೆ. । **ಯಯೋಃ**—(ಯಾವ) ಆ ಮಿತ್ರಾವರುಣರ । **ಅಕ್ಷಿತಂ**—ನಾಶರಹಿತವಾದುದೂ । **ಜ್ಯೇಷ್ಠಂ**—ಶ್ರೇಷ್ಠವಾದುದೂ ಆದ । **ಅಸೂರ್ಯಂ**—ಬಲವು । **ಆಚಿತಾ**—ಶತ್ರುಶೂರರು ಯುದ್ಧಾರ್ಥವಾಗಿ ಒಟ್ಟಾಗಿ ಸೇರಿರುವ । **ಯಾಮನ್**—ಯುದ್ಧದಲ್ಲಿ । **ವಿಶ್ವಸ್ಯ**—ಸಮಸ್ತಶತ್ರುಸಮೂಹವನ್ನು । **ಜಿಗತ್ನು**—ಜಯಿಸುವುದಾಗಿರುವುದು.

ಭಾವಾರ್ಥ

**ಯಾವ ಮಿತ್ರಾವರುಣರ ನಾಶರಹಿತವಾದುದೂ ಶ್ರೇಷ್ಠವಾದುದೂ ಆದ ಬಲವು ಯುದ್ಧದಲ್ಲಿ ಒಟ್ಟಾಗಿ ಸೇರಿರುವ ಶತ್ರುಸಮೂಹವನ್ನು ಜಯಿಸಲು ಸಮರ್ಥವಾಗಿರುವುದೋ ಅಂತಹ ಮಿತ್ರನನ್ನೂ, ಶುದ್ಧಬಲವುಳ್ಳ ವರುಣನನ್ನೂ ನಿಮ್ಮಿಬ್ಬರನ್ನೂ ಸೂರ್ಯನು ಉದಯಿಸಿದ ಕೂಡಲೇ ಪ್ರಾತಸ್ಸವನಕಾಲದಲ್ಲಿ ಸ್ತುತಿವಾಕ್ಯಗಳಿಂದ ಪ್ರಾರ್ಥಿಸಿ ಕರೆಯುತ್ತೇನೆ.**

English Translation

When the sun has risen, I invoke Mitra and you, Varuna, of pure vigour, whose imperishable and superior might is trimphant in the crowded conflict over all enemies.

ಸಂಹಿತಾಪಾಠಃ

ತಾ ಹಿ ದೇವಾನಾಮಸುರಾ ತಾವರ್ಯಾ ತಾ ನಃ ಕ್ಷಿತೀಃ ಕರತಮೂರ್ಜಯಂತೀಃ ।
ಅಶ್ಯಾಮ ಮಿತ್ರಾವರುಣಾ ವಯಂ ವಾಂ ದ್ಯಾವಾ ಚ ಯತ್ರ ಪೀಪಯನ್ನಹಾ ಚ ॥ ೨ ॥

ಪದಪಾಠಃ

ತಾ । ಹಿ । ದೇವಾನಾಂ । ಅಸುರಾ । ತೌ । ಅರ್ಯಾ । ತಾ । ನಃ । ಕ್ಷಿತೀಃ । ಕರತಂ । ಊರ್ಜಯಂತೀಃ ।
ಅಶ್ಯಾಮ । ಮಿತ್ರಾವರುಣಾ । ವಯಂ । ವಾಂ । ದ್ಯಾವಾ । ಚ । ಯತ್ರ । ಪೀಪಯನ್ । ಅಹಾ । ಚ ॥೨॥

ಸಾಯಣಭಾಷ್ಯಂ

ತಾ ಹಿ ತೌ ಖಲು ದೇವೌ ದೇವಾನಾಂ ಮಧ್ಯೇಽಸುರಾ ಬಲವಂತೌ । ಅರ್ಯಾಅರ್ಯೌ ತೌ ಸರ್ವಸ್ಯೇಶ್ವರೌ । ತಾ ತೌ ನೋಽಸ್ಮಾಕಂ ಕ್ಷಿತೀಃ ಪುತ್ರಾದಿರೂಪಾಃ ಪ್ರಜಾ ಊರ್ಜಯಂತೀಃ ಪ್ರವೃದ್ಧಾಃ ಕರತಂ । ಕುರುತಂ । ಹೇ ಮಿತ್ರಾವರುಣಾ ಮಿತ್ರಾವರುಣೌ ವಯಂ ವಾಂ ಯುವಾಮಶ್ಯಾಮ । ವ್ಯಾಪ್ನುಯಾಮ । ಯತ್ರ ಯಸ್ಯಾಂ ಯುವಯೋರ್ವ್ಯಾಪ್ತೌ ದ್ಯಾವಾ ದ್ಯಾವಾಪೃಥಿವ್ಯೌ । ಸರ್ವದಾ ತಯೋಃ ಸಹಭಾವಾದಯಮರ್ಥೋ ಲಭ್ಯತೇ । ಅಹಾ ಚ । ಏತದ್ರಾತ್ರೇರುಪಲಕ್ಷಣಂ । ಅಹೋರಾತ್ರಾಣಿ ಚ ಪೀಪಯನ್ ಅಸ್ಮಾನ್ ಪ್ಯಾಯಯೇಯುಃ ॥

ಪ್ರತಿಪದಾರ್ಥ

**ತಾ ಹಿ**—ಆ ಮಿತ್ರಾವರುಣರೇ । **ದೇವಾನಾಂ**—ದೇವತೆಗಳ ಮಧ್ಯದಲ್ಲಿ । **ಅಸುರಾ**—ಶಕ್ತಿವಂತರಾಗಿದ್ದಾರೆ । **ಅರ್ಯಾ ತೌ**—ಸರ್ವರಿಗೂ ಒಡೆಯರಾದ । **ತಾ**—ಆ ಮಿತ್ರಾವರುಣರು । **ನಃ**—ನಮ್ಮ । **ಕ್ಷಿತೀಃ**—ಪುತ್ರಾದಿಪ್ರಜೆಗಳನ್ನು । **ಊರ್ಜಯಂತೀಃ**—ಪ್ರವೃದ್ಧರಾಗುವಂತೆ । **ಕರತಂ**—ಮಾಡಲಿ । **ಮಿತ್ರಾವರುಣಾ**—ಎಲೈ ಮಿತ್ರಾವರುಣರೇ । **ವಯಂ**—ನಾವು । **ವಾಂ**—ನಿಮ್ಮಿಬ್ಬರನ್ನೂ । **ಅಶ್ಯಾಮ**—ಹೊಂದುವಂತಾಗಲಿ । **ಯತ್ರ ದ್ಯಾವಾ**—ನೀವು ವ್ಯಾಪಿಸಿರುವ (ಯಾವ) ದ್ಯಾವಾಪೃಥಿವಿಗಳು । **ಅಹಾ ಚ**—ಹಗಲು ರಾತ್ರಿಗಳೂ ಸಹ **ಪೀಪಯನ್**—ನಮ್ಮನ್ನು ತೃಪ್ತರನ್ನಾಗಿ ಮಾಡಲಿ.

ಭಾವಾರ್ಥ

ಆ ಮಿತ್ರಾವರುಣರೆಂಬ ದೇವತೆಗಳೇ ಸಮಸ್ತ ದೇವತೆಗಳ ಮಧ್ಯದಲ್ಲಿಯೂ ಶಕ್ತಿಸಾಮರ್ಥ್ಯಗಳುಳ್ಳವರಾಗಿದ್ದಾರೆ ಸರ್ವರಿಗೂ ಒಡೆಯರಾದ ಆ ಮಿತ್ರಾವರುಣರು ನಮ್ಮ ಪುತ್ರಾದಿಸಂತತಿಗಳನ್ನು ಪ್ರವರ್ಧಮಾನರಾಗುವಂತೆ ಮಾಡಲಿ. ಎಲೈ ಮಿತ್ರಾವರುಣರೇ, ನಾವು ನಿಮ್ಮಿಬ್ಬರ ಸಮೀಪವರ್ತಿಗಳಾಗಿರಲಿ ನೀವು ವ್ಯಾಪಿಸಿರುವ ಈ ದ್ಯಾವಾಪೃಥಿವಿಗಳೂ ಅಹೋರಾತ್ರಿಗಳೂ ಸಹ ನಮಗೆ ತೃಪ್ತಿಯನ್ನುಂಟುಮಾಡಲಿ

## English Translation

They verily are mighty among the gods . they are rulers they bestow upon us a numerous posterity: may we obtain you, Mitra and Varuna, whether on earth or in heaven, and wherever the (passing) days may preserve us

ಸಂಹಿತಾಪಾಠಃ

ತಾ ಭೂರಿಪಾಶಾವನೃತಸ್ಯ ಸೇತೂ ದುರತ್ಯೇತೂ ರಿಪವೇ ಮರ್ತ್ಯಾಯ ।
ಋತಸ್ಯ ಮಿತ್ರಾವರುಣಾ ಪಥಾ ವಾಮಪೋ ನ ನಾವಾ ದುರಿತಾ ತರೇಮ ॥

ಪದಪಾಠಃ

ತಾ । ಭೂರಿಽಪಾಶೌ । ಅನೃತಸ್ಯ । ಸೇತೂ ಇತಿ । ದುರತ್ಯೇತೂ ಇತಿ ದುಃಽಅತ್ಯೇತೂ । ರಿಪವೇ । ಮರ್ತ್ಯಾಯ ।

ಋತಸ್ಯ । ಮಿತ್ರಾವರುಣಾ । ಪಥಾ । ವಾಂ । ಅಪಃ । ನ । ನಾವಾ । ದುಃಽಇತಾ । ತರೇಮ ॥ ೩ ॥

ಸಾಯಣಭಾಷ್ಯಂ

ತಾ ತೌ ಮಿತ್ರಾವರುಣೌ ಭೂರಿಪಾಶೌ ಪ್ರಭೂತಬಂಧನಸಾಧನಪಾಶೋಪೇತಾವನೃತಸ್ಯ ಯಾಗರಹಿತಸ್ಯ ಸೇತೂ ಸೇತುವದ್ಬಂಧಕೌ ರಿಪವೇ ಮರ್ತ್ಯಾಯ ವೈರಿಜನಾಯ ದುರತ್ಯೇತೂ ದುರತಿಕ್ರಮೌ ಭವತಃ । ಹೇ ಮಿತ್ರಾವರುಣಾ ತಾದೃಶೌ ಮಿತ್ರಾವರುಣೌ ವಾಂ ಯುವಯೋರೃತಸ್ಯ ಯಜ್ಞಸ್ಯ ಯುವಯೋರರ್ಥಾಯಾನುಷ್ಠೀಯಮಾನಸ್ಯ ಯಾಗಸ್ಯ ಪಥಾ ಮಾರ್ಗೇಣ ದುರಿತಾ ದುಃಖಾನಿ ತರೇಮ ನಾವಾಪೋ ನ ಪ್ರಭೂತಾನ್ಯುದಕಾನೀವ ॥

ಪ್ರತಿಪದಾರ್ಥ

**ತೌ**—ಆ ಮಿತ್ರಾವರುಣರು । **ಭೂರಿಪಾಶೌ**—ಬಂಧನಸಾಧನವಾದ ಪಾಶವುಳ್ಳವರು । **ಅನೃತಸ್ಯ**—ಯಜ್ಞಯಾಗಾದಿಗಳನ್ನು ಮಾಡದಿರುವವರಿಗೆ । **ಸೇತೂ** — ಸೇತುವೆಯಂತೆ ಬಂಧನವನ್ನುಂಟುಮಾಡುವವರು । **ರಿಪವೇ**—ಶತ್ರುವಾದ । **ಮರ್ತ್ಯಾಯ**—ಮಾನವನಿಂದ । **ದುರತ್ಯೇತೂ**—ಸಮೀಪಿಸಲ್ಪಡಲು ಸಾಧ್ಯವಿಲ್ಲದವರು । **ಮಿತ್ರಾವರುಣಾ**—ಈ ವಿಧಗುಣವಿಶಿಷ್ಟರಾದ ಎಲೈ ಮಿತ್ರಾವರುಣರೇ । **ವಾಂ**—ನಿಮ್ಮ । **ಋತಸ್ಯ** — ಧನಾಪೇಕ್ಷೆಯಿಂದ ನಾವು ಮಾಡುವ ಯಜ್ಞದ । **ಪಥಾ**—ಮಾರ್ಗದಿಂದ । **ನಾವಾ**—ದೋಣಿಯಿಂದ । **ಅಪೋ ನ**—(ಆಳವಾದ) ನೀರನ್ನು ದಾಟುವಂತೆ । **ದುರಿತಾ**—ದುಃಖಗಳನ್ನು । **ತರೇಮ**—ನಾವು ದಾಟುವಂತಾಗಲಿ.

ಭಾವಾರ್ಥ

ಆ ಮಿತ್ರಾವರುಣರ ಪಾಶಗಳು ಯಜ್ಞಾದಿಗಳನ್ನು ಮಾಡದಿರುವವರನ್ನು ಸೇತುವೆಯಂತೆ ಬಂಧನದಿಂದ ಕಟ್ಟುವ ಸಾಮರ್ಥ್ಯವುಳ್ಳದ್ದಾಗಿರುವುವು. ನಿಮ್ಮನ್ನು ಯಾವ ಶತ್ರುಜನವೂ ಸಮೀಪಿಸಲು ಸಾಧ್ಯವಿಲ್ಲ. ಇಂತಹ ಗುಣಗಳಿಂದ ಸಹಿತರಾದ ಎಲೈಮಿತ್ರಾವರುಣರೇ, ಧನಾಪೇಕ್ಷೆಯಿಂದ ನಾವು ಮಾಡುವ ಯಜ್ಞದ ಈ ನಿಮ್ಮ ಮಾರ್ಗದರ್ಶನದಿಂದ ಆಳವಾದ ನೀರನ್ನು ದೋಣಿಯಿಂದ ದಾಟುವಂತೆ ದುಃಖಗಳನ್ನು ನಾವು ದಾಟುವಂತಾಗಲಿ.

English Translation

Holders are you of many fetters, barriers against the irreligious, invincible by hostile mortals : may we cross over all the danger, Mitra and Varuna, by the path of sacrifice, to you, as (we cross over) water by a boat.

ಸಂಹಿತಾಪಾಠಃ

ಆ ನೋ ಮಿತ್ರಾವರುಣಾ ಹವ್ಯಜುಷ್ಟಿಂ ಘೃತೈರ್ಗವ್ಯೂತಿಮುಕ್ಷತಮಿಳಾಭಿಃ ।

ಪ್ರತಿ ವಾಮತ್ರ ವರಮಾ ಜನಾಯ ಪೃಣೀತಮುದ್ನೋ ದಿವ್ಯಸ್ಯ ಚಾರೋಃ ॥

ಪದಪಾಠಃ

ಆ । ನಃ । ಮಿತ್ರಾವರುಣಾ । ಹವ್ಯಽಜುಷ್ಟಿಂ । ಘೃತೈಃ । ಗವ್ಯೂತಿಂ । ಉಕ್ಷತಂ । ಇಳಾಭಿಃ ।

ಪ್ರತಿ । ವಾಂ । ಅತ್ರ । ವರಂ । ಆ । ಜನಾಯ । ಪೃಣೀತಂ । ಉದ್ನಃ । ದಿವ್ಯಸ್ಯ । ಚಾರೋಃ ॥ ೪ ॥

ಸಾಯಣಭಾಷ್ಯಂ

ಮೈತ್ರಾವರುಣೇ ಪಶಾವಾ ನೋ ಮಿತ್ರಾವರುಣೇತ್ಯೇಷಾ ಚತುರ್ಥ್ಯನುವಾಕ್ಯಾ । ಸೂತ್ರಿತಂ ಚ । ಆ ನೋ ಮಿತ್ರಾವರುಣಾ ಹವ್ಯಜುಷ್ಟಿಂ ಯುವಂ ವಸ್ತ್ರಾಣಿ ಪೀವಸಾ ವಸಾಥೇ । ಆ. ೩ ೮ । ಇತಿ ॥

ಹೇ ಮಿತ್ರಾವರುಣಾ ಮಿತ್ರಾವರುಣೌ ನೋಽಸ್ಮಾಕಂ ಹವ್ಯಜುಷ್ಟಿಂ ಹವಿಃಸೇವನವಂತಂ ಯಜ್ಞಮಾ ಗಚ್ಛತಮಿತಿ ಶೇಷಃ । ಆಗತ್ಯ ಚೇಳಾಭಿರನ್ನೈಃ ಸಹ ಘೃತೈರುದಕೈರ್ಗವ್ಯೂತಿಮಸ್ಮದೀಯಾಂ ಭೂಮಿಮುಕ್ಷತಂ । ಸಿಂಚತಂ । ವಾಂ ಯುವಾಂ ಪ್ರತ್ಯತ್ರಾಸ್ಮಿಁಲ್ಲೋಕೇ ವರಮುತ್ಕೃಷ್ಟಂ ಹವಿಃ ಸ್ತೋತ್ರಂ ವಾ ಕ ಆ ಯಚ್ಛೇದಿತಿ ಶೇಷಃ । ಅತಃ ಕೇವಲಂ ಕೃಪಯೈವ ದಿವ್ಯಸ್ಯ ದಿವಿ ಭವಸ್ಯ ಚಾರೋಶ್ಚರಣೀಯಸ್ಯೋದ್ನ ಉದಕಸ್ಯ ॥ ಕರ್ಮಣಿ ಷಷ್ಠೀ ॥ ಉಕ್ತಲಕ್ಷಣಮುದಕಂ ಪೃಣೀತಂ । ಪ್ರಯಚ್ಛತಂ॥

ಪ್ರತಿಪದಾರ್ಥ

**ಮಿತ್ರಾವರುಣಾ**—ಎಲೈ ಮಿತ್ರಾವರುಣರೇ, । **ನಃ**—ನಮ್ಮ । **ಹವ್ಯಜುಷ್ಟಿಂ**—ಹವಿಸ್ಸೇವನರೂಪವಾದ ಯಜ್ಞಕ್ಕೆ । **ಆ (ಗಚ್ಛತಂ)**—ದಯಮಾಡಿಸಿರಿ (ಅನಂತರ) । **ಇಳಾಭಿಃ**—ಅನ್ನಗಳಿಂದಲೂ । **ಘೃತೈಃ**—ಉದಕಗಳಿಂದಲೂ । **ಗವ್ಯೂತಿಂ**—ನಾವು ವಾಸಿಸುತ್ತಿರುವ ಈ ಪ್ರದೇಶವನ್ನು । **ಉಕ್ಷತಂ**—ನೇಚಿಸಿರಿ । **ವಾಂ ಪ್ರತಿ**—ನಿಮ್ಮನ್ನುದ್ದೇಶಿಸಿ । **ಅತ್ರ**—ಈ ಲೋಕದಲ್ಲಿ । **ವರಂ**—ಉತ್ಕೃಷ್ಟವಾದ ಹವಿಸ್ಸನ್ನು ಅಥವಾ ಸ್ತೋತ್ರವನ್ನು । **ಆ**-ಯಾವನು ತಾನೇ ಅರ್ಪಿಸಬಲ್ಲನು ? (ಆದ್ದರಿಂದ) । **ದಿವ್ಯಸ್ಯ**—ಅಂತರಿಕ್ಷದಲ್ಲಿ ಮೇಘರೂಪದಿಂದಿರುವ । **ಚಾರೋಃ**—ಉತ್ತಮವಾದ । **ಉದ್ನಃ**—ವೃಷ್ಟ್ಯುದಕವನ್ನು । **ಜನಾಯ**—ಜನರಿಗಾಗಿ । **ಪೃಣೀತಂ**—ಒದಗಿಸಿಕೊಡಿ.

ಭಾವಾರ್ಥ

ಎಲೈ ಮಿತ್ರಾವರುಣರೇ, ನಿಮಗಾಗಿ ಹವಿಸ್ಸನ್ನು ಅರ್ಪಿಸುತ್ತಿರುವ ಈ ಯಜ್ಞಕ್ಕೆ ದಯಮಾಡಿ ಅನಂತರ ಅನ್ನಾದ್ಯಾಹಾರಗಳಿಂದಲೂ, ವೃಷ್ಟ್ಯುದಕಗಳಿಂದಲೂ ನಾವು ವಾಸಿಸುತ್ತಿರುವ ಈ ಭೂಪ್ರದೇಶವನ್ನು ನೆನೆಸಿ ತೃಪ್ತಿಪಡಿಸಿ. ನಿಮ್ಮನ್ನುದ್ದೇಶಿಸಿ ಯಾವ ಪುರುಷನುತಾನೇ ಉತ್ಕೃಷ್ಟವಾದ ಹವಿಸ್ಸನ್ನು ಅಥವಾ ಸ್ತೋತ್ರವನ್ನು ಅರ್ಪಿಸಲು ಸಮರ್ಥನು ? (ಆದ್ದರಿಂದ ನೀವು ಅನುಗ್ರಹಾತ್ಮಕಬುದ್ಧಿಯಿಂದ) ಅಂತರಿಕ್ಷದಲ್ಲಿರುವ ಉತ್ತಮವಾದ ಉದಕವನ್ನು ವೃಷ್ಟಿರೂಪದಲ್ಲಿ ಜನರಿಗೆ ಒದಗಿಸಿಕೊಡಿ

English Translation

Come, Mitra and Varuna, to our offered oblation sprinkle our place of sacrifice with water and viands (who) in this world (may) present to you

excellant (donations) that you may (thereby be induced to) gratify
ind with celestial and beautiful water.

ವಿಶೇಷವಿಷಯಗಳು

ಮಿತ್ರಾವರುಣರನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ **ಆ ನೋ ಮಿತ್ರಾವರುಣಾ** ಎಂಬ ಈ ಋಕ್ಕನ್ನು
ಯ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಆ ನೋ ಮಿತ್ರಾವರುಣಾ**
**ುಷ್ಟಿಂ ಯುವಂ ವಸ್ತ್ರಾಣಿ ಪೀವಸಾ ವಸಾಥೇ** ಎಂಬ ಸೂತ್ರದಿಂದ (೮ ೩ ೮) ವಿಸ್ತೃತವಾಗಿರುವುದು

ಸಂಹಿತಾಪಾಠಃ

ಏಷ ಸ್ತೋಮೋ ವರುಣ ಮಿತ್ರ ತುಭ್ಯಂ ಸೋಮಃ ಶುಕ್ರೋ ನ ವಾಯ-
ವೇಽಯಾಮಿ ।
ಅವಿಷ್ಟಂ ಧಿಯೋ ಜಿಗೃತಂ ಪುರಂಧೀರ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ

ಪದಪಾಠಃ

। ಸ್ತೋಮಃ । ವರುಣ । ಮಿತ್ರ । ತುಭ್ಯಂ । ಸೋಮಃ । ಶುಕ್ರಃ । ನ । ವಾಯವೇ । ಅಯಾಮಿ

ಷ್ಟಂ । ಧಿಯಃ । ಜಿಗೃತಂ । ಪುರಂಽಧೀಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೫ ॥

ಸಾಯಣಭಾಷ್ಯಂ

**ಅನಯಾ ಸ್ತುತಿಮುಪಸಂಹರತಿ । ಹೇ ವರುಣ ಹೇ ಮಿತ್ರ ತುಭ್ಯಂ ಯುವಯೋರ್ವಾಯವೇ ।**
**ುರ್ಗಂತಾದಿತ್ಯಃ । ಸ ಏವಾರ್ಯಮಾ । ತಸ್ಮೈ ಚೈಷ ಸ್ತೋಮಃ ಸ್ತವೋಽಯಾಮಿ । ಅಕಾರಿ ।**
**ವ । ಶುಕ್ರೋ ದೀಪ್ತಃ ಸೋಮೋ ನ ಯುಷ್ಮಭ್ಯಂ ಪ್ರೀತಿಕರಃ ಸೋಮೋ ಯಥಾ ದೀಯತೇ**
**ೕ । ಧಿಯಃ ಕರ್ಮಾಣ್ಯಸ್ಮದೀಯಾನ್ಯವಿಷ್ಟಂ । ರಕ್ಷತಂ । ಪುರಂಧೀಃ ಸ್ತುತೀರ್ಜಿಗೃತಂ । ಪ್ರಬು-**
**। ಅನ್ಯದ್ಗತಂ ॥**

ಪ್ರತಿಪದಾರ್ಥ

ವರುಣ—ಎಲೈ ವರುಣನೇ, । **ಮಿತ್ರ**—ಎಲೈ ಮಿತ್ರನೇ, । **ತುಭ್ಯಂ**—ನಿಮಗೋಸ್ಕರ ಎಂದರೆ ನಿಮ್ಮ
ದ್ದೇಶಿಸಿಯೂ । **ವಾಯವೇ**—ಸಂಚಾರಶೀಲನಾದ ಅರ್ಯಮನನ್ನುದ್ದೇಶಿಸಿಯೂ । **ಶುಕ್ರಃ**—ಶುಭ್ರವಾದ ।
**ಮಃ ನ**—ಸೋಮರಸದಂತೆ ನಿಮಗೆ ಹಿತಕರವಾದ । **ಏಷಃ ಸ್ತೋಮಃ**—ಈ ಸ್ತುತಿಯು । **ಅಯಾಮಿ**—
-ತವಾಗಿದೆ. । **ಧಿಯಃ**—ನಾವು ಮಾಡುತ್ತಿರುವ ಯಜ್ಞಾದಿಗಳನ್ನು । **ಅವಿಷ್ಟಂ**—(ವಿಘ್ನಗಳಿಲ್ಲದಂತೆ) ರಕ್ಷಿಸಿರಿ
**ಧೀಃ**—ನಮ್ಮ ಸ್ತುತಿಗಳನ್ನು । **ಜಿಗೃತಂ**—(ಕೇಳಿ) ತಿಳಿಯಿರಿ. ಎಲೈ ಮಿತ್ರಾವರುಣಾದಿದೇವತೆಗಳೇ ।
**ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—
ರಿ.

ಭಾವಾರ್ಥ

ಎಲೈ ಮಿತ್ರಾವರುಣರೇ, ಎಲೈ ಅರ್ಯಮನೇ, ನಿಮ್ಮನ್ನುದ್ದೇಶಿಸಿ ಶುಭ್ರವಾದ ಸೋಮರಸದಂತೆ ನಿಮಗೆ ಹಿತಕರವಾದ ಈ ಸ್ತುತಿಯು ನಿರ್ಮಿತವಾಗಿದೆ ಈಗ ನಾವು ಮಾಡುತ್ತಿರುವ ಯಜ್ಞಾದಿಕರ್ಮಗಳನ್ನು ವಿಘ್ನರಹಿತವನ್ನಾಗಿ ಮಾಡಿ ರಕ್ಷಿಸಿರಿ ಮತ್ತು ನಮ್ಮ ಸ್ತುತಿಯನ್ನು ಕೇಳಿ ತಿಳಿಯಿರಿ ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

English Translation

Varuna and Mitra, this praise, pure as the Soma libation, has been offered to you, and also Aryaman, (to you) protect our rites be awake to our praises and do you ever cherish us with blessings

---

## ಅರವತ್ತಾರನೆಯ ಸೂಕ್ತವು

ಸಾಯಣಭಾಷ್ಯಂ

ಪ್ರ ಮಿತ್ರಯೋರಿತ್ಯೇಕೋನವಿಂಶತ್ಯೃಚಮೇಕಾದಶಂ ಸೂಕ್ತಂ ವಸಿಷ್ಠಸ್ಯಾರ್ಷಂ । ಅತ್ರೇಯಮನುಕ್ರಮಣಿಕಾ । ಪ್ರ ಮಿತ್ರಯೋರೇಕೋನಾ ಗಾಯತ್ರಂ ದಶಮ್ಯಾದ್ಯಾಸ್ತ್ರಯಃ ಪ್ರಗಾಥಾಃ ಪುರಉಷ್ಣಿಕ್ ಚತುರ್ಥ್ಯಾದ್ಯಾ ದಶಾದಿತ್ಯಾಸ್ತಿಸ್ರಃ ಸೌರ್ಯ ಇತಿ । ದಶಮೀ ಬೃಹತ್ಯೇಕಾದಶೀ ಸತೋಬೃಹತೀ ದ್ವಾದಶೀ ಬೃಹತೀ ತ್ರಯೋದಶೀ ಸತೋಬೃಹತೀ ಚತುರ್ದಶೀ ಬೃಹತೀ ಪಂಚದಶೀ ಸತೋಬೃಹತೀ ಷೋಡಶೀ ಪುರಉಷ್ಣಿಕ್ ಶಿಷ್ಟಾ ಗಾಯತ್ರ್ಯಃ । ಚತುರ್ಥ್ಯಾದ್ಯಾಸ್ತ್ರಯೋದಶ್ಯಂತಾ ಆದಿತ್ಯದೇವತಾಶ್ಚತುರ್ದಶ್ಯಾಸ್ತಿಸ್ರಃ ಸೂರ್ಯದೇವತ್ಯಾಃ । ಆದ್ಯಂತ್ಯೌ ತೃಚೌ ಪೂರ್ವವನ್ಮೈತ್ರಾವರುಣೌ ॥ ಅಗ್ನಿಷ್ಟೋಮೇ ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರ ಆಪಿತೋ ನವರ್ಚಃ ಶಸ್ಯಾಃ । ಪ್ರ ಮಿತ್ರಯೋರ್ವರುಣಯೋರಿತಿ ನವ । ಆ ೫-೧೦ । ಇತಿ ಸೂತ್ರಿತತ್ವಾತ್ ॥ ಪೃಷ್ಠ್ಯಾಭಿಪ್ಲವಷಡಹಯೋಃ ಸ್ತೋಮವೃದ್ಧಿನಿಮಿತ್ತಮಾವಾಪಾರ್ಥಾ ಆದ್ಯಾ ಷಡೃಚಃ । ಸೂತ್ರಿತಂ ಚ । ಪ್ರ ಮಿತ್ರಯೋರ್ವರುಣಯೋರಿತಿ ಷಟ್ । ಆ ೭ ೫ । ಇತಿ ॥

**ಅನುವಾದವು—ಪ್ರ ಮಿತ್ರಯೋಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು ಇದರಲ್ಲಿ ಹತ್ತೊಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಅನುಕ್ರಮಣಿಕೆಯಲ್ಲಿ **ಪ್ರ ಮಿತ್ರಯೋರೇಕೋನಾ ಗಾಯತ್ರಂ ದಶಮ್ಯಾದ್ಯಾಸ್ತ್ರಯಃ ಪ್ರಗಾಥಾಃ ಪುರಉಷ್ಣಿಕ್ ಚತುರ್ಥ್ಯಾದ್ಯಾ ದಶಾದಿತ್ಯಾಸ್ತಿಸ್ರಃ ಸೌರ್ಯಃ** ಎಂದು ಹೇಳಿರುವುದು. ಈ ಸೂಕ್ತದ ಹತ್ತನೆಯ ಋಕ್ಕು ಬೃಹತೀ ಛಂದಸ್ಕವು, ಹನ್ನೊಂದನೆಯದು ಸತೋಬೃಹತೀಛಂದಸ್ಕವು, ಹನ್ನೆರಡನೆಯದು ಬೃಹತೀ, ಹದಿಮೂರನೆಯದು ಸತೋಬೃಹತೀ, ಹದಿನಾಲ್ಕನೆಯದು ಬೃಹತೀ, ಹದಿನೈದನೆಯದು ಸತೋಬೃಹತೀ, ಹದಿನಾರನೆಯದು ಪುರಉಷ್ಣಿಕ್ ಛಂದಸ್ಕವು, ಉಳಿದ ಋಕ್ಕುಗಳು ಗಾಯತ್ರೀಛಂದಸ್ಕವು ನಾಲ್ಕನೆಯ ಋಕ್ಕಿನಿಂದ ಹದಿಮೂರನೆಯ ಋಕ್ಕಿನವರೆಗಿನ (೪-೧೩) ಋಕ್ಕುಗಳಿಗೆ ಆದಿತ್ಯರು ದೇವತೆಯು, ಹದಿನಾಲ್ಕರಿಂದ ಮುಂದಿನ ಮೂರು ಋಕ್ಕುಗಳಿಗೆ (೧೪-೧೬)

ಸೂರ್ಯನು ದೇವತೆಯು, ಈ ಸೂಕ್ತದ ಮೊದಲನೆಯ ಮತ್ತು ಕೊನೆಯ ಋಕ್ಕುಗಳಿಗೆ ಹಿಂದಿನಂತೆ ಮಿತ್ರಾವರುಣರು ದೇವತೆಗಳು ಅಗ್ನಿಷ್ಟೋಮಯಾಗದ ಮಾಧ್ಯಂದಿನಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಮೊದಲಿನ ಒಂಭತ್ತು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ ಸೂತ್ರದ-**ಪ್ರ ಮಿತ್ರಯೋರ್ವರುಣಯೋರಿತಿ ನವ** ಎಂಬ ಸೂತ್ರದಿಂದ (ಆ ೫-೧೦) ವಿವೃತವಾಗಿರುವುದು. ಪೃಷ್ಠ್ಯ ಮತ್ತು ಅಭಿಪ್ಲವಷಡಹಯಾಗಗಳಲ್ಲಿಯೂ ಸ್ತೋಮವೃದ್ಧಿನಿಮಿತ್ತವಾಗಿ ಆವಾಪಾರ್ಥವಾಗಿ ಪಠಿಸುವ ಮಂತ್ರಗಳಿಗಾಗಿ ಈ ಸೂಕ್ತದ ಮೊದಲಿನ ಆರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಪ್ರ ಮಿತ್ರಯೋರ್ವರುಣಯೋರಿತಿ ಷಟ್** ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು.

## ಸೂಕ್ತ—೬೬

ಮಂಡಲ—೭ || ಅನುವಾಕ—೪ || ಸೂಕ್ತ—೬೬ ||
ಅಷ್ಟಕ—೫ || ಅಧ್ಯಾಯ—೫ || ವರ್ಗ—೮, ೯, ೧೦, ೧೧ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೯ ||
ಋಷಿಃ—ವಸಿಷ್ಠಃ ||
ದೇವತಾ—೧-೩, ೧೭-೧೯ ಮಿತ್ರಾವರುಣೌ | ೪-೧೩ ಆದಿತ್ಯಾಃ | ೧೪-೧೬ ಸೂರ್ಯಃ ||
ಛಂದಃ—೧-೯, ೧೭-೧೯ ಗಾಯತ್ರೀ | ೧೦, ೧೨, ೧೪ ಬೃಹತೀ | ೧೧, ೧೩, ೧೫ ಸತೋಬೃಹತೀ | ೧೬ ಪುರಉಷ್ಣಿಕ್ ||

ಸಂಹಿತಾಪಾಠಃ

ಪ್ರ ಮಿತ್ರಯೋರ್ವರುಣಯೋಃ ಸ್ತೋಮೋ ನ ಏತು ಶೂಷ್ಯಃ ।
ನಮಸ್ವಾನ್ತುವಿಜಾತಯೋಃ ॥ ೧ ॥

ಪದಪಾಠಃ

ಪ್ರ । ಮಿತ್ರಯೋಃ । ವರುಣಯೋಃ । ಸ್ತೋಮಃ । ನಃ । ಏತು । ಶೂಷ್ಯಃ ।
ನಮಸ್ವಾನ್ । ತುವಿಽಜಾತಯೋಃ ॥ ೧ ॥

ಸಾಯಣಭಾಷ್ಯಂ

ಮಿತ್ರಯೋರ್ವರುಣಯೋಃ । ಮಿತ್ರಾವರುಣಯೋರಿತ್ಯರ್ಥಃ । ಉಭಯತ್ರ ಪ್ರತಿಯೋಗಾಪೇಕ್ಷಯಾ ದ್ವಿವಚನತ್ವಂ । ತುವಿಜಾತಯೋರ್ಬಹುಪ್ರಾದುರ್ಭಾವಯೋರ್ದೇವಯೋರ್ನೋಽಸ್ಮದೀಯಃ ಶೂಷ್ಯಃ ಸುಖಕರೋ ನಮಸ್ವಾನನ್ನವಾನ್ ಹವಿರ್ಭಿರ್ಯುಕ್ತಃ ಸ್ತೋಮಃ ಸ್ತೋತ್ರಂ ಪ್ರೈತು । ಗಚ್ಛತು । ಅಹೋರಾತ್ರಂ ವೈ ಮಿತ್ರಾವರುಣಾವಿತಿ ಶ್ರುತಿಃ । ಅನಯೋರಹೋರಾತ್ರಾಪೇಕ್ಷತ್ವಾತ್ತಯೋಃ ಪುನಃಪುನರಾಗಮನಾದನಯೋಸ್ತುವಿಜಾತತ್ವಂ । ಅಥವಾ ಬಹೂನಾಮುಪಕಾರಾಯಾನಯೋಃ ಪ್ರಾದುರ್ಭಾವಾತ್ತುವಿಜಾತತ್ವಂ ॥

### ಪ್ರತಿಪದಾರ್ಥ

**ತುವಿಜಾತಯೋಃ**—ಬಹುಜನ್ಮವುಳ್ಳ | **ಮಿತ್ರಯೋಃ ವರುಣಯೋಃ**—ಮಿತ್ರಾವರುಣರನ್ನು ಉದ್ದೇಶಿಸಿ ಅರ್ಪಿಸುವ | **ನಃ**—ನಮ್ಮ | **ಶೂಷ್ಯಃ**—ಸುಖಕರವಾದುದೂ | **ನಮಸ್ವಾನ್**—ಹವಿಸ್ಸಿನಿಂದ ಯುಕ್ತವಾದುದೂ ಆದ | **ಸ್ತೋಮಃ**—ಈ ಸ್ತೋತ್ರವು | **ಪ್ರ ಏತು**—ಅವರ ಸಮೀಪಕ್ಕೆ ಹೋಗಿ ಸೇರಲಿ.

### ಭಾವಾರ್ಥ

ಅನೇಕ ಜನ್ಮಗಳನ್ನು ಹೊಂದುವ ಮಿತ್ರಾವರುಣರನ್ನುದ್ದೇಶಿಸಿ ನಾವು ಅರ್ಪಿಸುವ ಸುಖಕರವಾದುದೂ, ಹವಿಸ್ಸಿನಿಂದ ಯುಕ್ತವಾದುದೂ ಆದ ಈ ಸ್ತೋತ್ರವು ಅವರ ಬಳಿಗೆ ಹೋಗಿ ಸೇರಲಿ.

### English Translation

May this our propitiatory praise, accompanied by oblations, proceed to you, Mitra and Varuna, of reiterated manifestations

### ವಿಶೇಷವಿಷಯಗಳು

**ತುವಿಜಾತಯೋಃ**—**ತುವಿ** ಎಂದರೆ ಬಹು, **ಜಾತ** ಎಂದರೆ ಜನ್ಮ. ಅನೇಕ ಜನ್ಮಗಳು ಎಂದರೆ ಏನು? **ಅಹೋರಾತ್ರೇ ವೈ ಮಿತ್ರಾವರುಣೌ** (ತೈ ಸಂ ೨-೪-೧೦-೧), **ಮೈತ್ರಂ ವಾ ಅಹಃ** | **ವಾರುಣೀ ರಾತ್ರಿಃ** ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಮಿತ್ರನು ಹಗಲಿಗ ಅಧಿಪತಿಯೆಂದೂ ವರುಣನು ರಾತ್ರಿಗೆ ಅಧಿಪತಿಯೆಂದೂ ಹೇಳಿದೆ. ಹಗಲುರಾತ್ರಿಗಳು ಒಂದಾಗುತ್ತಲೊಂದು ಪರಿವರ್ತನಕ್ರಮದಿಂದ ಪ್ರವರ್ತನವೂ ಪ್ರಾಪ್ತವಾಗುವುದರಿಂದ ಅವುಗಳಿಗೆ ಅಭಿಮಾನಿದೇವತೆಗಳಾದ ಮಿತ್ರಾವರುಣರಿಗೆ ಅನೇಕ ಜನ್ಮಗಳುಂಟೆಂದು ಋಷಿಯು ತನ್ನ ಅಭಿಪ್ರಾಯವನ್ನು ಪ್ರಕಾರಾಂತರವಾಗಿ ಸೂಚಿಸಿದಾನೆ

**ಮಿತ್ರಯೋಃ ವರುಣಯೋಃ**—**ಮಿತ್ರಾವರುಣಯೋರಿತ್ಯರ್ಥಃ** | **ಉಭಯತ್ರ ಪ್ರತಿಯೋಗ್ಯಪೇಕ್ಷಯಾ ದ್ವಿವಚನತ್ವಂ** | ಇಲ್ಲಿ ಮಿತ್ರ ಮತ್ತು ವರುಣ ಎಂಬ ಎರಡು ಪ್ರತ್ಯೇಕ ಶಬ್ದಗಳಿದ್ದು ಉಭಯ ದೇವತೆಗಳನ್ನೂ ನಿರ್ದೇಶಿಸಿರುವುದರಿಂದಲೂ ಛಂದಸ್ಸಿನ ಅನುಕೂಲಕ್ಕಾಗಿಯೂ ಪ್ರತಿಶಬ್ದಕ್ಕೂ ದ್ವಿವಚನವನ್ನು ಉಪಯೋಗಿಸಲಾಗಿದೆ ಇದೇ ವಿಧವಾದ ಪ್ರಯೋಗವು—

**ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾ ಏತಿ ಪ್ರಿಯಂ ವರುಣಯೋರದಬ್ಧಂ |**

( ಋ ಸಂ ೬-೫೧-೧)

ಎಂಬ ಋಕ್ಕಿನಲ್ಲಿಯೂ ಕಂಡುಬರುವುದು ಇಲ್ಲಿಯೂ **ಮಿತ್ರಯೋಃ ವರುಣಯೋಃ** ಎಂಬ ದ್ವಿವಚನಾಂತ ಪ್ರತ್ಯೇಕ ಶಬ್ದಗಳನ್ನು ಮಿತ್ರಾವರುಣಯೋಃ ಎಂಬ ಶಬ್ದಕ್ಕೆ ಬದಲಾಗಿ ಉಪಯೋಗಿಸಲಾಗಿದೆ. ಇದಲ್ಲದೆ ಅನೇಕ ಸಂದರ್ಭಗಳಲ್ಲಿ ಮಿತ್ರಾವರುಣರಿಬ್ಬರನ್ನೂ ಸೂಚಿಸುವುದಕ್ಕೆ ಮಿತ್ರ ಅಥವಾ ವರುಣ ಎಂಬ ಒಂದೇ ಶಬ್ದದ ದ್ವಿವಚವನ್ನು ಉಪಯೋಗಿಸುವುದೂ ರೂಢಿಯಾಗಿದೆ—

**ಆ ಯದ್ವಾಮೀಯಚಕ್ಷಸಾ ಮಿತ್ರ ವಯಂ ಚ ಸೂರಯಃ |**

(ಋ. ಸಂ. ೫-೬೬-೬)

ಎಂಬ ಋಕ್ಕಿನಲ್ಲಿ ಮಿತ್ರಾ ಎಂಬ ದ್ವಿವಚನಾಂತಶಬ್ದವು (ಸಂಹಿತಾಪಾಠದಲ್ಲಿ ಮಿತ್ರ ಎಂದು ಹ್ರಸ್ವವಿದೆ) ಮಿತ್ರಾವರುಣರಿಬ್ಬರನ್ನು ಸೂಚಿಸುವುದಕ್ಕಾಗಿ ಉಪಯೋಗಿಸಲಾಗಿದೆ.

**ಅಧಾರಯತಂ ಪೃಥಿವೀಮುತ ದ್ಯಾಂ ಮಿತ್ರರಾಜಾನಾ ವರುಣಾ ಮಹೋಭಿಃ ||**

(ಋ. ಸಂ. ೫-೬೨-೩)

ಎಂಬ ಋಕ್ಕಿನಲ್ಲಿ ದ್ವಿವಚನಾಂತಶಬ್ದವಾದ ವರುಣಾ ಎಂಬ ಪದವು ಮಿತ್ರಾವರುಣರಿಬ್ಬರನ್ನು ಸೂಚಿಸುವುದಕ್ಕಾಗಿ ಉಪಯೋಗಿಸಲಾಗಿದೆ. ಇದರಂತೆ ಇನ್ನೂ ಅನೇಕ ಉದಾಹರಣೆಗಳಿವೆ.

ಸಂಹಿತಾಪಾಠಃ

ಯಾ ಧಾರಯಂತ ದೇವಾಃ ಸುದಕ್ಷಾ ದಕ್ಷಪಿತರಾ ।

ಅಸುರ್ಯಾಯ ಪ್ರಮಹಸಾ || ೨ ||

ಪದಪಾಠಃ

ಯಾ । ಧಾರಯಂತ । ದೇವಾಃ । ಸುऽದಕ್ಷಾ । ದಕ್ಷऽಪಿತರಾ ।

ಅಸುರ್ಯಾಯ । ಪ್ರऽಮಹಸಾ || ೨ ||

ಸಾಯಣಭಾಷ್ಯಂ

**ಯಾ** ಯೌ ಯುವಾಂ **ಧಾರಯಂತ** । ಕೇ । **ದೇವಾ** ಅದಿಕರ್ತಾರೋऽಸುರ್ಯಾಯ ಬಲಕರಣಾಯ । ಕೀದೃಶೌ ಯುವಾಂ । **ಸುದಕ್ಷಾ** ಶೋಭನಬಲೌ **ದಕ್ಷಪಿತರಾ** ಬಲಸ್ಯ ಪಾಲಕೌ ಸ್ವಾಮಿನೌ ವಾ। ಬಲಪ್ರದಾವಿತ್ಯರ್ಥಃ । **ಪ್ರಮಹಸಾ** ಪ್ರಕೃಷ್ಟತೇಜಸ್ಕೌ । ತೌ ಸಾಧಯತಮಿತ್ಯುತ್ತರತ್ರಾನ್ವಯಃ ||

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) **ಸುದಕ್ಷಾ**—ಉತ್ತಮಬಲವುಳ್ಳವರೂ । **ದಕ್ಷಪಿತರಾ**—ಶಕ್ತಿಸಾಮರ್ಥ್ಯಗಳಿಗೆ ಒಡೆಯರೂ ಎಂದರೆ ಮಾನವರಿಗೆ ಬಲಪ್ರದರೂ । **ಪ್ರಮಹಸಾ**—ಅತ್ಯಂತ ತೇಜಸ್ವಿಗಳೂ ಆದ । **ಯಾ**—ಯಾವ ನಿಮ್ಮನ್ನು । **ದೇವಾಃ**—ದೇವತೆಗಳು । **ಅಸುರ್ಯಾಯ**—ಎಲ್ಲರಿಗೂ ಬಲವನ್ನುಂಟುಮಾಡುವುದಕ್ಕಾಗಿ । **ಧಾರಯಂತ**—ಸ್ಥಾಪಿಸಿದರೋ [ಅಂತಹ ನೀವು ನಮ್ಮ ಯಾಗಾದಿಕರ್ಮಗಳನ್ನು ಫಲಪ್ರದವಾಗುವಂತೆ ಮಾಡಿರಿ ]

ಭಾವಾರ್ಥ

ಎಲೈ ಮಿತ್ರಾವರುಣರೇ, ಉತ್ತಮವಾದ ಬಲವುಳ್ಳವರೂ ಶಕ್ತಿಸಾಮರ್ಥ್ಯಗಳಿಗೆ ಒಡೆಯರೂ ಅತ್ಯಂತ ತೇಜಸ್ವಿಗಳೂ ಆದ ಯಾವ ನಿಮ್ಮನ್ನು ಹಿಂದಿನ ದೇವತೆಗಳು ಎಲ್ಲರಿಗೂ ಬಲವನ್ನುಂಟುಮಾಡಲು ಸ್ಥಾಪಿಸಿದರೋ ಅಂತಹ ನೀವು ನಮ್ಮ ಯಾಗಾದಿಕರ್ಮಗಳನ್ನು ಫಲಪ್ರದವಾಗುವಂತೆ ಮಾಡಿರಿ.

English Translation

You whom the gods uphold for their invigoration, both mighty, masters of strength and of diffusive radiance

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಹೇಳಿರುವ ವಿಷಯಗಳು ಮುಂದಿನ ಋಕ್ಕಿನ ಅರ್ಥದೊಡನೆ ಸೇರಿ ಅನ್ವಯವಾಗಬೇಕು ಈ ಋಕ್ಕಿನಲ್ಲಿ ಮಿತ್ರಾವರುಣರ ಗುಣವರ್ಣನೆ ಮಾತ್ರವಿರುವುದು ಮುಖ್ಯವಾದ ಕ್ರಿಯಾಪದವು ಮುಂದಿನ ಋಕ್ಕಿನಲ್ಲಿರುವುದು

ಸಂಹಿತಾಪಾಠಃ

ತಾ ನಃ ಸ್ತಿಪಾ ತನೂಪಾ ವರುಣ ಜರಿತೄಣಾಂ ।
ಮಿತ್ರ ಸಾಧಯತಂ ಧಿಯಃ ॥ ೩ ॥

ಪದಪಾಠಃ

ತಾ । ನಃ । ಸ್ತಿಽಪಾ । ತನೂಽಪಾ । ವರುಣ । ಜರಿತೄಣಾಂ ।
ಮಿತ್ರ । ಸಾಧಯತಂ । ಧಿಯಃ ॥ ॥

ಸಾಯಣಭಾಷ್ಯಂ

ತಾ ತೌ ಸ್ತಿಪಾ । ಸ್ತ್ಯಾಯಂತೇ ಇತಿ ಸ್ತಯೋ ಗೃಹಾಃ । ತಾನ್ಪಾತ ಇತಿ ಸ್ತಿಪೌ । ತನೂಪಾ ತನ್ವಃ ಪಾತಾರೌ ಹೇ ವರುಣ ಹೇ ಮಿತ್ರ ಉಕ್ತಲಕ್ಷಣೌ ಯುವಾಂ ಜರಿತೄಣಾಂ ನೋಽಸ್ಮಾಕಂ ಧಿಯಃ ಕರ್ಮಾಣಿ ಸ್ತುತಿರೂಪಾಣಿ ಸಾಧಯತಂ । ಸಫಲವಂತಿ ಕುರುತಂ ॥

ಪ್ರತಿಪದಾರ್ಥ

ತಾ—ಆ ಇಂತಹ ಎಂದರೆ ಹಿಂದಿನ ಋಕ್ಕಿನಲ್ಲಿ ಹೇಳಿದ ಗುಣವಿಶಿಷ್ಟರಾದವರೂ । ಸ್ತಿಪಾ—ಗೃಹಗಳಿಗೆ ರಕ್ಷಕರಾದವರೂ । ತನೂಪಾ—ನಮ್ಮ ಶರೀರಾದಿಗಳನ್ನು (ಅಪಾಯ ಕ್ಕೀಡಾಗದಂತೆ) ರಕ್ಷಿಸುವವರೂ ಆದ । ವರುಣ, ಮಿತ್ರ—ಎಲೈ ಮಿತ್ರಾವರುಣರೇ, ನೀವು । ಜರಿತೄಣಾಂ—ನಿಮ್ಮನ್ನು ಸ್ತುತಿಸುತ್ತಿರುವ । ನಃ—ನಮ್ಮ । ಧಿಯಃ—ಯಜ್ಞಾದಿಕರ್ಮಗಳನ್ನು ಅಥವಾ ಸ್ತೋತ್ರಗಳನ್ನು । ಸಾಧಯತಂ—ಫಲಪ್ರದವಾಗುವಂತೆ ಮಾಡಿರಿ

ಭಾವಾರ್ಥ

ಪೂರ್ವೋಕ್ತಗುಣವಿಶಿಷ್ಟರಾದವರೂ, ಗೃಹಗಳಿಗೂ, ಶರೀರಾದಿಗಳಿಗೂ, ರಕ್ಷಕರಾದವರೂ ಆದ ಎಲೈ ಮಿತ್ರನೇ ಎಲೈ ವರುಣನೇ, ನೀವು ನಿಮ್ಮನ್ನು ಸ್ತುತಿಸುತ್ತಿರುವ ನಮ್ಮ ಸ್ತುತಿರೂಪವಾದ ಈ ಯಜ್ಞಕರ್ಮವನ್ನು ಫಲಪ್ರದವಾಗುವಂತೆ ಮಾಡಿರಿ

English Translation

Protectors of our dwellings, protectors of our persons, Mitra and Varuna, perfect the rites of your adorers

ವಿಶೇಷವಿಷಯಗಳು

**ಸ್ತಿಪಾ— ಸ್ತ್ಯಾಯಂತೆ ಇತಿ ಸ್ತ್ಯಯೋ ಗೃಹಾಃ । ತಾನ್ ಪಾತಿ ಇತಿ ಸ್ತಿಪೌ** । ವಾಸಿಸಲು ಅನುಕೂಲ ವಾಗಿರುವಂತೆ ವಿಸ್ತಾರವಾಗಿರುವುದರಿಂದ **ಸ್ತ್ಯಯಃ** ಎಂದರೆ ಗೃಹಗಳು. ಅವುಗಳಿಗೆ ಪಾಲಕರಾದ್ದರಿಂದ **ಸ್ತಿಪಾ** ಎಂಬ ವಿಶೇಷಣದಿಂದ ಮಿತ್ರಾವರುಣರನ್ನು ವರ್ಣಿಸಿದೆ

ಸಂಹಿತಾಪಾಠಃ

ಯದದ್ಯ ಸೂರ ಉದಿತೇಽನಾಗಾ ಮಿತ್ರೋ ಅರ್ಯಮಾ ।
ಸುವಾತಿ ಸವಿತಾ ಭಗಃ ॥ ೪ ॥

ಪದಪಾಠಃ

ಯತ್ । ಅದ್ಯ । ಸೂರೇ । ಉತ್ऽಇತೇ । ಅನಾಗಾಃ । ಮಿತ್ರಃ । ಅರ್ಯಮಾ ।
ಸುವಾತಿ । ಸವಿತಾ । ಭಗಃ ॥ ೪ ॥

ಸಾಯಣಭಾಷ್ಯಂ

ಯದ್ಧನಮಸ್ಮಾಕಮಪೇಕ್ಷಿತಂ ತದದ್ಯಾಸ್ಮಿನ್ನ್ಯಾಲೇ ಸೂರ ಉದಿತೇ ಸತಿ ಪ್ರಾತಃಸವನೇಽನಾಗಾಃ ಪಾಪಹಂತಾ ಮಿತ್ರೋಽರ್ಯಮಾ ಸವಿತಾ ಭಗಶ್ಚೈತೇ ಪ್ರತ್ಯೇಕಂ ಸುವಾತಿ । ಪ್ರೇರಯೇತ್ । ಅಥವಾ । ಅನಾಗಾ ಮಿತ್ರೋಽರ್ಯಮಾ ದಾತಾ ಭವತು । ತದೀಪ್ಸಿತಂ ಧನಂ ಭಗೋ ಭಜನೀಯಃ ಸವಿತಾ ಸುವಾತಿ । ಪ್ರೇರಯತು ॥

ಪ್ರತಿಪದಾರ್ಥ

**ಯತ್**—ನಾವು ಅಪೇಕ್ಷಿಸುವ ಯಾವ ಧನವಿದೆಯೋ ಅದನ್ನು । **ಅದ್ಯ**—ಈಗ ಎಂದರೆ ಈ ದಿವಸ । **ಸೂರೇ**—ಸೂರ್ಯನು । **ಉದಿತೇ**—ಉದಯಿಸುತ್ತಿರುವಾಗ ಪ್ರಾತಸ್ಸವನಕಾಲದಲ್ಲಿ । **ಅನಾಗಾಃ**—ಪಾಪಗಳನ್ನು ಪರಿಹರಿಸತಕ್ಕ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ಸವಿತಾ**—ಸವಿತೃದೇವನೂ । **ಭಗಃ**—ಭಗನೆಂಬ ದೇವನೂ ಸಹ । **ಸುವಾತಿ**—ನಮಗೆ ಲಭಿಸುವಂತೆ ಪ್ರೇರಿಸಲಿ ಎಂದರೆ ಕೊಡಲಿ.

ಭಾವಾರ್ಥ

ನಾವು ಅಪೇಕ್ಷಿಸುವ ಧನವನ್ನು ಈ ದಿವಸ ಸೂರ್ಯನು ಉದಯಿಸಿರುವಾದ ಪ್ರಾತಃಸವನಕಾಲದಲ್ಲಿ ಪಾಪ ಪರಿಹಾರಕರಾದ, ಮಿತ್ರ, ಅರ್ಯಮಾ, ಸವಿತೃ, ಭಗ ಎಂಬ ದೇವತೆಗಳು ನಮಗೆ ಲಭಿಸುವಂತೆ ಪ್ರೇರಿಸಲಿ ಎಂದರೆ ನಾವು ಅಪೇಕ್ಷಿಸುವ ಧನವನ್ನು ನಮಗೆ ಆ ದೇವತೆಗಳು ಕೊಡಲಿ.

English Translation

May Mitra, the distroyer of sin, Aryaman, Savitri, Bhaga, bestow (upon us), to-day at sunrice (what we pray for).

ಸಂಹಿತಾಪಾಠಃ

ಸುಪ್ರಾವೀರಸ್ತು ಸ ಕ್ಷಯಃ ಪ್ರ ನು ಯಾಮನ್ತ್ಸುದಾನವಃ ।

ಯೇ ನೋ ಅಂಹೋಽತಿಪಿಪ್ರತಿ ॥ ೫ ॥

ಪದಪಾಠಃ

ಸುಪ್ರಽಅವೀಃ । ಅಸ್ತು । ಸಃ । ಕ್ಷಯಃ । ಪ್ರ । ನು । ಯಾಮನ್ । ಸುಽದಾನವಃ ।

ಯೇ । ನಃ । ಅಂಹಃ । ಅತಿಽಪಿಪ್ರತಿ । ೫ ॥

ಸಾಯಣಭಾಷ್ಯಂ

ಸಃ ಕ್ಷಯಃ ಸ ನಿವಾಸಃ ಸುಪ್ರಾವೀರಸ್ತು । ಸುಷ್ಠು ಪ್ರಕರ್ಷೇಣ ರಕ್ಷಿತಾಸ್ತು । ಪ್ರಶಬ್ದ ಆದರಾರ್ಥಃ । ಪ್ರಕರ್ಷೇಣ ನು ಕ್ಷಿಪ್ರಂ ಭವತ್ವಿತಿ ಶೇಷಃ । ಕರೋತೀತಿ ಉಚ್ಯತೇ । ಹೇ ಸುದಾನವಃ ಸುದಾನಾಃ ಯುಷ್ಮಾಕಂ ಯಾಮನ್ ಯಾಮನಿ ಗಮನೇ ಸತಿ । ಸ್ವಗೃಹಾನಾಂ ಗಮನೇ । ಯೇ ಯೂಯಮಾಗತ್ಯ ನೋಽಸ್ಮಾಕಮಂಹಃ ಪಾಪಮತಿಪಿಪ್ರತಿ ಅತಿಪಾರಯಥ ತೇಷಾಂ ಗಮನ ಇತಿ ॥

ಪದಾರ್ಥ

ಯೇ—ಯಾವ ನೀವು (ಎಂದು) । ನಃ— ನಮ್ಮ । ಅಂಹಃ—ಪಾಪವನ್ನು । ಅತಿಪಿಪ್ರತಿ—ಪರಿಹರಿಸಿ ನಮ್ಮನ್ನು ಉತ್ತೀರ್ಣರನ್ನಾಗಿ ಮಾಡುತೀರೋ ಅಂತಹ । ಸುದಾನವಃ—ಇಷ್ಟಾರ್ಥಗಳನ್ನು ಅತಿಶಯವಾಗಿ ಕೊಡುವ ಎಲೈ ಮಿತ್ರಾವರುಣಾರ್ಯಮರೇ (ನಿಮ್ಮ) । ಯಾಮನ್— ಗಮನಾನಂತರ । ಸಃ ಕ್ಷಯಃ—ಪ್ರಸಿದ್ಧವಾದ ನಮ್ಮ ನಿವಾಸಸ್ಥಾನವು । ನು— ಬೇಗನೆ । ಸುಪ್ರಾವೀಃ ಅಸ್ತು— ಸುರಕ್ಷಿತವಾದುದಾಗಲಿ

ಭಾವಾರ್ಥ

ಎಲೈ ಮಿತ್ರಾವರುಣಾರ್ಯಮರೇ, ನಮ್ಮ ಪಾಪಗಳನ್ನು ಪರಿಹರಿಸಿ ನಮ್ಮನ್ನು ದಾಟಿಸುವ ನೀವು ನಮ್ಮಲ್ಲಿಗೆ ಒಂದು ಹೋದನಂತರ ನಾವು ವಾಸಮಾಡುವ ಗೃಹವು ಯಾವ ಭಯವೂ ಇಲ್ಲದ ಸುರಕ್ಷಿತವಾಗುವುದು

English Translation

May this our dwelling be well protected, liberal deities, on your departure, you who purify us from sin

ಸಂಹಿತಾಪಾಠಃ

ಉತ ಸ್ವರಾಜೋ ಅದಿತಿರದಬ್ಧಸ್ಯ ವ್ರತಸ್ಯ ಯೇ ।

ಮಹೋ ರಾಜಾನ ಈಶತೇ ॥ ೬ ॥

ಪದಪಾಠಃ

ಉತ । ಸ್ವಽರಾಜಃ । ಅದಿತಿಃ । ಅದಬ್ಧಸ್ಯ । ವ್ರತಸ್ಯ । ಯೇ ।

ಮಹಃ । ರಾಜಾನಃ । ಈಶತೇ ॥ ೬ ॥

ಸಾಯಣಭಾಷ್ಯಂ

**ಉತಾಪಿ ಚ ಯೇ ಮಿತ್ರಾದಯಸ್ತ್ರಯಃ ಸ್ವರಾಜಃ ಸರ್ವಸ್ಯ ಸ್ವಾಮಿನೋಽದಿತಿಸ್ತೇಷಾಂ ಮಾತಾ ಚ ಸಂತಿ ಅದಬ್ಧಸ್ಯಾಹಿಂಸಿತಸ್ಯ ಮಹೋ ಮಹತೋ ವ್ರತಸ್ಯಾಸ್ಯ ಕರ್ಮಣೋ ರಾಜಾನಃ ಸ್ವಾಮಿನಃ ತ ಈಶತೇ । ಸಮರ್ಥಾ ಭವಂತಿ । ಅಭಿಮತಂ ದಾತುಮಿತಿ ಶೇಷಃ । ಅಥವೈವಂ ಯೋಜ್ಯಂ । ಯೇ ಮಿತ್ರಾದಯೋಽದಿತಿಶ್ಚಾದಬ್ಧಸ್ಯ ವ್ರತಸ್ಯ ಸ್ವರಾಜ ಈಶ್ವರಾಃ ತೇ ಮಹೋ ಮಹತೋಽಸ್ಮದಭಿಮತಧನಸ್ಯ ರಾಜಾನಃ ಸ್ವಾಮಿನಃ ಸಂತ ಈಶತೇಽಸ್ಮಭ್ಯಂ ತದ್ದಾತುಂ ॥**

ಪ್ರತಿಪದಾರ್ಥ

**ಉತ**—ಮತ್ತು । **ಯೇ**—ಯಾವ ಮಿತ್ರಾವರುಣಾರ್ಯಮರು । **ಸ್ವರಾಜಃ**—ಸರ್ವರಿಗೂ ಸ್ವಾಮಿಗಳಾಗಿರುವರೋ ಅವರೂ । **ಅದಿತಿಃ**—ಅವರ ಮಾತೆಯಾದ ಅದಿತಿದೇವಿಯೂ ಸಹ । **ಅದಬ್ಧಸ್ಯ**—ಅಹಿಂಸಿತ (ನಿರ್ವಿಘ್ನ) ವಾದುದೂ । **ಮಹಃ**—ಮಹತ್ತಾದುದೂ ಆದ । **ವ್ರತಸ್ಯ**—ಈ ಯಜ್ಞಕರ್ಮಕ್ಕೆ । **ರಾಜಾನಃ**—ಪ್ರಭುಗಳಾಗಿ । **ಈಶತೇ**—ನಮ್ಮ ಅಭಿಮತವನ್ನು ಕೊಡುವವರಾಗಿದ್ದಾರೆ.

ಭಾವಾರ್ಥ

ಸರ್ವರಿಗೂ ಪ್ರಭುಗಳಾದ ಮಿತ್ರಾವರುಣಾರ್ಯಮರೂ, ಅವರ ಮಾತೆಯಾದ ಅದಿತಿದೇವಿಯೂ ಸಹ ನಿರ್ವಿಘ್ನವಾಗಿ ನೆರವೇರುವುದೂ ಮಹತ್ತಾದುದೂ ಆದ ಈ ನಮ್ಮ ಯಜ್ಞಕ್ಕೆ ಒಡೆಯರಾಗಿ ನಮ್ಮ ಇಷ್ಟಾರ್ಥಗಳನ್ನು ಕೊಡುತ್ತಾರೆ

English Translation

And who are sovereign over all, and, with Aditi, preside over this unobstructed and great ceremony

ಸಂಹಿತಾಪಾಠಃ

ಪ್ರತಿ ವಾಂ ಸೂರ ಉದಿತೇ ಮಿತ್ರಂ ಗೃಣೀಷೇ ವರುಣಂ ।

ಅರ್ಯಮಣಂ ರಿಶಾದಸಂ ॥ ೭ ॥

ಪದಪಾಠಃ

ಪ್ರತಿ । ವಾಂ । ಸೂರೇ । ಉತ್ಽಇತೇ । ಮಿತ್ರಂ । ಗೃಣೀಷೇ । ವರುಣಂ ।

ಅರ್ಯಮಣಂ । ರಿಶಾದಸಂ ॥ ೭ ॥

ಸಾಯಣಭಾಷ್ಯಂ

ಪ್ರತಿ ವಾಮಿತ್ಯೇಷ ತೃಚಶ್ಚಾತುರ್ವಿಂಶಿಕೇಽಹನಿ ಪ್ರಾತಃಸವನೇ ಮೈತ್ರಾವರುಣಸ್ಯ ಪರ್ಯಾಸಾರ್ಥಃ । ಸೂತ್ರಿತಂ ಚ । ಪ್ರತಿ ವಾಂ ಸೂರ ಉದಿತೇ ವ್ಯಂತರಿಕ್ಷಮತಿರತ್ । ಆ. ೭.೨ । ಇತಿ ॥

ಹೇ ಮಿತ್ರಾವರುಣೌ ಮಿತ್ರಂ ತ್ವಾಂ ವರುಣಂ ಚ ಯುವಾಂ ರಿಶಾದಸಂ ಶತ್ರೂಣಾಮತ್ತಾರಮರ್ಯಮಣಂ ಚ ಪ್ರತಿ ಪ್ರತ್ಯೇಕಂ ಗೃಣೀಷೇ । ಸ್ತುವೇ । ಕದೇತಿ ಉಚ್ಯತೇ । ಸೂರೇ ಸೂರ್ಯೇ ದೇವ ಉದಿತೇ ಸತಿ । ಪ್ರಾತರಿತ್ಯರ್ಥಃ ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) **ಸೂರೇ**—ಸೂರ್ಯನು । **ಉದಿತೇ**—ಉದಯಿಸುವಾಗ ಎಂದರೆ ಪ್ರಾತಃಕಾಲದಲ್ಲಿ । **ಮಿತ್ರಂ**—ಮಿತ್ರನನ್ನು । **ವರುಣಂ**—ವರುಣನನ್ನೂ । **ವಾಂ**—ನಿಮ್ಮಿಬ್ಬರನ್ನು । **ರಿಶಾದಸಂ**—ಶತ್ರುನಾಶಕನಾದ । **ಅರ್ಯಮಣಂ**—ಅರ್ಯಮದೇವನನ್ನೂ । **ಪ್ರತಿ**—ಉದ್ದೇಶಿಸಿ । **ಗೃಣೀಷೇ**—ಸ್ತುತಿಸುತ್ತೇನೆ.

ಭಾವಾರ್ಥ

ಎಲೈ ಮಿತ್ರಾವರುಣರೇ, ಸೂರ್ಯನು ಉದಯಿಸುತ್ತಿರುವಾಗ ಈದಿನ ಪ್ರಾತಃಕಾಲದಲ್ಲಿ ಮಿತ್ರ, ವರುಣ, ಶತ್ರುಹಿಂಸಕನಾದ ಅರ್ಯಮ ಎಂಬ ನಿಮ್ಮನ್ನುದ್ದೇಶಿಸಿ ಪ್ರತ್ಯೇಕವಾಗಿ ಸ್ತೋತ್ರಮಾಡುತ್ತೇನೆ

English Translation

I glorify you, Mitra and Varuna, and Aryaman, the consumer of enemies when the sun has risen.

ವಿಶೇಷವಿಷಯಗಳು

ಯಾಗದ ಚಾತುರ್ವಿಂಶಿಕವೆಂಬ ದಿನದ ಪ್ರಾತಃಸವನಕಾಲದಲ್ಲಿ **ಪ್ರತಿ ವಾಂ** ಎಂದು ಮೊದಲಾಗುವ **ಈ** ತೃಚವನ್ನು (ಮೂರು ಋಕ್ಕುಗಳನ್ನು) ಮೈತ್ರಾವರುಣನೆಂಬ ಋತ್ವಿಜನು ಪರ್ಯಾಸಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪ್ರತಿ ವಾಂ ಸೂರ ಉದಿತೇ ವ್ಯಂತರಿಕ್ಷಮತಿರತ್** ಎಂಬ ಸೂತ್ರದಿಂದ (ಆ ೭-೨) ವಿವೃತವಾಗಿರುವುದು

ಸಂಹಿತಾಪಾಠಃ

ರಾಯಾ ಹಿರಣ್ಯಯಾ ಮತಿರಿಯಮವೃಕಾಯ ಶವಸೇ ।
ಇಯಂ ವಿಪ್ರಾ ಮೇಧಸಾತಯೇ ॥ ೮ ॥

ಪದಪಾಠಃ

ರಾಯಾ । ಹಿರಣ್ಯಽಯಾ । ಮತಿಃ । ಇಯಂ । ಅವೃಕಾಯ । ಶವಸೇ ।
ಇಯಂ । ವಿಪ್ರಾ । ಮೇಧಽಸಾತಯೇ ॥ ೮ ॥

ಸಾಯಣಭಾಷ್ಯಂ

**ಹಿರಣ್ಯಯಾ ಹಿತರಮಣೀಯೇನ ರಾಯಾ ಧನೇನ ಸಹಿತಾಯಾವೃಕಾಯಾಹಿಂಸ್ಯಾಯ ಶವಸೇಽಸ್ಮಾಕಂ ಬಲಾಯೇಯಮಿದಾನೀಂ ಕ್ರಿಯಮಾಣಾ ಮತಿಃ ಸ್ತುತಿರ್ಭವತ್ವಿತಿ ಶೇಷಃ ॥ ಹಿರಣ್ಯಯೇತ್ಯತ್ರ ಸುಪಾಂ ಸುಲುಗಿತಿ ತೃತೀಯೈಕವಚನಸ್ಯ ಯಾಜಾದೇಶಃ ॥ ಕಿಂಚ ಹೇ ವಿಪ್ರಾಃ ಪ್ರಾಜ್ಞಾಃ ಇಯಂ ನೋ ಚ ಸ್ತುತಿರ್ಮೇಧಸಾತಯೇ ಯಜ್ಞಲಾಭಾಯ ಚ ಭವತು ॥**

ಪ್ರತಿಪದಾರ್ಥ

**ಹಿರಣ್ಯಯಾ**—ಹಿತಕರವೂ ರಮಣೀಯವೂ ಆದ | **ರಾಯಾ**—ಧನದಿಂದ | **ಅವೃಕಾಯ**—ಹಿಂಸಾರಹಿತವಾದ | **ಶವಸೇ**—ನಮ್ಮ ಬಲಾಭಿವೃದ್ಧಿಗಾಗಿ | **ಇಯಂ**—ಈಗ ನಾವು ಮಾಡುತ್ತಿರುವ | **ಮತಿಃ**—ಸ್ತುತಿಯು ಸಾಧನವಾಗಲಿ | **ವಿಪ್ರಾಃ**—ಮೇಧಾವಿಗಳಾದ ಎಲ್ಲೈ ದೇವತೆಗಳೇ | **ಇಯಂ**—ಈ ನಮ್ಮ ಸ್ತುತಿಯು | **ಮೇಧಸಾತಯೇ**—ಯಜ್ಞಲಾಭಾರ್ಥವಾಗಿಯೂ ಆಗಲಿ

ಭಾವಾರ್ಥ

ಎಲ್ಲೈ ಮೇಧಾವಿಗಳಾದ ದೇವತೆಗಳೇ, ಈಗ ನಾವು ನಿಮ್ಮನ್ನುದ್ದೇಶಿಸಿ ಮಾಡುತ್ತಿರುವ ಸ್ತೋತ್ರವು ನಮಗೆ ಧನಪ್ರಾಪ್ತಿಗೂ, ಬಲಕ್ಕೂ, ಯಜ್ಞಲಾಭಾರ್ಥವಾಗಿಯೂ ಸಾಧನವಾಗಲಿ.

English Translation

May this praise (be effective) for unimpeached strength, along with golden treasure may it (be effective), sages, for the fulfilment of (the objects of) the sacrifice

ಸಂಹಿತಾಪಾಠಃ

ತೇ ಸ್ಯಾಮ ದೇವ ವರುಣ ತೇ ಮಿತ್ರ ಸೂರಿಭಿಃ ಸಹ ।
ಇಷಂ ಸ್ವಶ್ಚ ಧೀಮಹಿ ॥ ೯ ॥

ಪದಪಾಠಃ

ತೇ । ಸ್ಯಾಮ । ದೇವ । ವರುಣ । ತೇ । ಮಿತ್ರ । ಸೂರಿಽಭಿಃ । ಸಹ ।
ಇಷಂ । ಸ್ವ೧ ರಿತಿ ಸ್ವಃ । ಚ । ಧೀಮಹಿ ॥ ೯ ॥

ಸಾಯಣಭಾಷ್ಯಂ

**ಹೇ ದೇವ ವರುಣ ತೇ ವಯಂ ತವ ಸ್ತೋತಾರಃ ಸ್ಯಾಮ । ಸಮೃದ್ಧಾ ಭವೇಮ । ನ ಕೇವಲಂ ವಯಮೇವ ಯಜಮಾನಾಃ ಕಿಂತು ಸೂರಿಭಿಃ ಸ್ತೋತೃಭಿರ್ಋತ್ವಿಗ್ಭಿಃ ಸಹ । ತಥಾ ಹೇ ಮಿತ್ರ ದೇವ ತೇ ವಯಂ ಸೂರಿಭಿಃ ಸಹ ಸ್ಯಾಮ । ಭವೇಮ । ಕಿಂಚೇಷಮನ್ನಂ ಸ್ವರುದಕಂ ಚ ಧೀಮಹಿ । ಧಾರಯಾಮಹೇ ॥**

ಪ್ರತಿಪದಾರ್ಥ

**ದೇವ**—ಪ್ರಕಾಶಮಾನನಾದ | **ವರುಣ**—ಎಲೈ ವರುಣನೇ, | **ಮಿತ್ರ**—ಎಲೈ ಮಿತ್ರನೇ, | **ತೇ**—ನಿನ್ನನ್ನು ಸ್ತುತಿಸುತ್ತಿರುವ ನಾವು | **ಸೂರಿಭಿಃ**—ಸ್ತೋತ್ರಮಾಡುವ ಋತ್ವಿಗ್ಜನರಿಂದ | **ಸಹ**—ಸಹಿತರಾಗಿ | **ಸ್ಯಾಮ**—ಸಮೃದ್ಧರಾಗಿರುವಂತಾಗಲಿ | **ತೇ**—ನಾವು | **ಇಷಂ**—ಅನ್ನವನ್ನು | **ಸ್ವಃ**—ಉದಕವನ್ನು | **ಧೀಮಹಿ**—ಯಾಚಿಸಿ ಪ್ರಾರ್ಥಿಸುತ್ತೇವೆ

ಭಾವಾರ್ಥ

ಪ್ರಕಾಶಮಾನನಾದ ಎಲೈ ವರುಣನೇ, ಎಲೈ ಮಿತ್ರನೇ, ಸ್ತೋತ್ರಮಾಡುವ ಋತ್ವಿಗ್ಜನರಿಂದ ಸಹಿತರಾಗಿ ಸಮೃದ್ಧರಾಗಿರುವಂತಾಗಲಿ ನಿಮ್ಮನ್ನು ಸ್ತುತಿಸುತ್ತಿರುವ ನಾವು ಅನ್ನಾದ್ಯಾಹಾರಗಳನ್ನೂ, ವೃಷ್ಟಿರೂಪವಾದ ಉದಕವನ್ನೂ ಕೊಡಬೇಕೆಂದು ನಿಮ್ಮನ್ನು ಯಾಚಿಸಿ ಪ್ರಾರ್ಥಿಸುತ್ತೇವೆ

English Translation

May we be yours, divine Varuna may we, along with pious worshippers, be, Mitra, yours may we obtain food and water

ಸಂಹಿತಾಪಾಠಃ

ಬಹವಃ ಸೂರಚಕ್ಷಸೋಽಗ್ನಿಜಿಹ್ವಾ ಋತಾವೃಧಃ ।

ತ್ರೀಣಿ ಯೇ ಯೇಮುರ್ವಿದಥಾನಿ ಧೀತಿಭಿರ್ವಿಶ್ವಾನಿ ಪರಿಭೂತಿಭಿಃ ॥

ಪದಪಾಠಃ

ಬಹವಃ । ಸೂರಽಚಕ್ಷಸಃ । ಅಗ್ನಿಽಜಿಹ್ವಾಃ । ಋತಽವೃಧಃ ।

ತ್ರೀಣಿ । ಯೇ । ಯೇಮುಃ । ವಿದಥಾನಿ । ಧೀತಿಽಭಿಃ । ವಿಶ್ವಾನಿ । ಪರಿಭೂತಿಽಭಿಃ ॥ ೧೦ ॥

ಸಾಯಣಭಾಷ್ಯಂ

**ಆಶ್ವಿನಶಸ್ತ್ರೇ ಬಹವಃ ಸೂರಚಕ್ಷಸ ಇತಿ ಪ್ರಗಾಥಃ । ಸೂತ್ರಿತಂ ಚ । ಬಹವಃ ಸೂರಚಕ್ಷಸ ಇತಿ ಪ್ರಗಾಥಾಃ । ಆ ೬-೫ । ಇತಿ ॥ ದಶರಾತ್ರೇ ಪಂಚಮೇಽಹನಿ ಪ್ರಉಗಶಸ್ತ್ರೇಽಪ್ಯಯಂ ಪ್ರಗಾಥಃ । ಸೂತ್ರಿತಂ ಚ । ಬಹವಃ ಸೂರಚಕ್ಷಸ ಇಮಾ ಉ ವಾಂ ದಿವಿಷ್ಟಯಃ । ಆ ೭-೧೨ । ಇತಿ ॥**

**ಬಹವೋ ಮಹಾಂತಃ ಸೂರಚಕ್ಷಸಃ ಸೂರ್ಯಸದೃಶಪ್ರಕಾಶಾಃ । ಸೂರಃ ಪ್ರಕಾಶಕೋ ಯೇಷಾಮಿತಿ ವಾ । ಅಗ್ನಿಜಿಹ್ವಾಃ । ಅಗ್ನಿರೇವ ಜಿಹ್ವಾದನಸಾಧನೋ ಯೇಷಾಂ ತಾದೃಶಾಃ । ಋತಾವೃಧೋ ಯಜ್ಞಸ್ಯ ವರ್ಧಯಿತಾರೋ ಮಿತ್ರಾದಯಃ । ಕಿಂಚ ಯೇ ತ್ರೀಣಿ ವಿಶ್ವಾನಿ ವ್ಯಾಪ್ತಾನಿ ವಿದಥಾನಿ ಕ್ಷಿತ್ಯಾದಿಸ್ಥಾನಾನಿ ಕ್ಷಿತ್ಯಾದೀನಿ ಪರಿಭೂತಿಭಿಃ ಪರಿಭಾವುಕೈರ್ಧೀತಿಭಿಃ ಕರ್ಮಭಿರ್ಯೇಮುಃ ಪ್ರಯಚ್ಛಂತಿ ತೇ**

**ಕ್ಷತ್ರಮಾಶತೇತ್ಯುತ್ತರತ್ರ ಸಂಬಂಧನೀಯಂ । ಅಥವಾತ್ರೈವ ಯೇ ತ್ರೀಣಿ ಸ್ಥಾನಾನಿ ಪ್ರಯಚ್ಛಂತಿ ತೇ ಬಹುತ್ವಾದಿಗುಣೋಪೇತಾ ಆಗಚ್ಛಂತ್ವಿತ್ಯಧ್ಯಾಹಾರ್ಯಂ ॥**

ಪ್ರತಿಪದಾರ್ಥ

**ಬಹವಃ** — ಮಹತ್ಸ್ವರೂಪವುಳ್ಳವರೂ । **ಸೂರಚಕ್ಷಸಃ** -- ಸೂರ್ಯನಿಗೆ ಸಮನಾದ ಕಾಂತಿಯಿಂದ ಬೆಳಗುವವರೂ ಅಥವಾ ಸೂರ್ಯನಿಂದ ಪ್ರಕಾಶಿತರಾದವರೂ । **ಅಗ್ನಿಜಿಹ್ವಾಃ** — ಯಜ್ಞಾದಿಗಳಲ್ಲಿ ಹವಿರಾದಿಗಳನ್ನು ಸ್ವೀಕರಿಸಲು ಅಗ್ನಿಯನ್ನೇ ತಮಗೆ ಜಿಹ್ವೆ ಎಂದರೆ ಸಾಧನವಾಗಿ ಉಳ್ಳವರೂ । **ಋತಾವೃಧಃ**—ಯಜ್ಞವನ್ನು ನಿರ್ವಿಘ್ನವಾಗಿ ನೆರವೇರುವಂತೆ ವೃದ್ಧಿಪಡಿಸುವವರೂ ಆದ । **ಯೇ**—ಯಾವ ಮಿತ್ರಾವರುಣಾದಿಗಳಿರುವರೋ ಅವರು । **ವಿಶ್ವಾನಿ**—ಸಮಸ್ತವನ್ನು ವ್ಯಾಪಿಸಿರುವ । **ತ್ರೀಣಿ ವಿದಥಾನಿ**—ಕ್ಷಿತ್ಯಾದಿ ಮೂರು ಸ್ಥಾನಗಳನ್ನು । **ಪರಿಭೂತಿಭಿಃ**—ನಿಮ್ಮ ಪ್ರಭಾವಯುಕ್ತವಾದ । **ಧೀತಿಭಿಃ**—ಕರ್ಮಗಳಿಂದ । **ಯೇಮುಃ**—ಕೊಡುವರೋ ಆ ಮಿತ್ರಾವರುಣಾದಿಗಳು ಇಲ್ಲಿಗೆ ಬರಲಿ

ಭಾವಾರ್ಥ

ಮಹನೀಯರೂ ಸೂರ್ಯಸದೃಶವಾದ ಕಾಂತಿಯಿಂದ ಬೆಳಗುವವರೂ ಅಥವಾ ಸೂರ್ಯನಿಗೆ ಕಾಂತಿಯನ್ನುಂಟುಮಾಡಿ ಬೆಳಗುವಂತೆ ಮಾಡುವವರೂ ಯಜ್ಞಾದಿಗಳಲ್ಲಿ ಅಗ್ನಿಯ ಮುಖದಿಂದ ಹವಿಸ್ಸನ್ನು ... ಹವಿರಾದಿಗಳನ್ನು ಸ್ವೀಕರಿಸುವವರೂ, ಯಜ್ಞವರ್ಧಕರೂ ತಮ್ಮ ಪ್ರಭಾವಯುತವಾದ ಕರ್ಮಗಳಿಂದ ಸಮಸ್ತವನ್ನೂ ವ್ಯಾಪಿಸಿರುವ ಕ್ಷಿತ್ಯಾದಿ ಮೂರು ಸ್ಥಾನಗಳನ್ನು ಕೊಡುವವರೂ ಆದ ಯಾವ ಮಿತ್ರಾವರುಣಾದಿದೇವತೆಗಳಿರುವರೋ ಅವರು ಈ ಯಜ್ಞಭೂಮಿಗೆ ದಯಮಾಡಿಸಲಿ

## English Translation

Manifold, radiant as the sun, Agni-tongued augmenters of sacrifice, you who have limited the three universal sacrifices with comprehensive rites

ವಿಶೇಷವಿಷಯಗಳು

ಆಶ್ವಿನಶಸ್ತ್ರಮಂತ್ರಗಳಲ್ಲಿ **ಬಹವಃ ಸೂರಚಕ್ಷಸಃ** ಎಂಬ ಈ ಋಕ್ಕನ್ನು ಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಬಹವಃ ಸೂರಚಕ್ಷಸಃ** ಇತಿ ಪ್ರಗಾಥಾಃ ಎಂಬ ಸೂತ್ರದಿಂದ (ಅ ೬-೫) ವಿವೃತವಾಗಿರುವುದು ಮತ್ತು ದಶರಾತ್ರವೆಂಬ ಯಾಗದ ಐದನೆಯ ದಿನದ ಪ್ರಉಗಶಸ್ತ್ರಮಂತ್ರಪಠನ ಮಾಡುವಾಗಲೂ ಈ ಋಕ್ಕನ್ನು ಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಬಹವಃ ಸೂರಚಕ್ಷಸ ಇಮಾ ಉ ವಾಂ ದಿವಿಷ್ಟಯಃ** ಎಂಬ ಸೂತ್ರದಿಂದ (ಅ ೭-೧೨) ವಿವೃತವಾಗಿರುವುದು.

ಸಂಹಿತಾಪಾಠಃ

**ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।**

**ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ॥೧೧॥**

ಪದಪಾಠಃ

ವಿ । ಯೇ । ದಧುಃ । ಶರದಂ । ಮಾಸಂ । ಆತ್ । ಅಹಃ । ಯಜ್ಞಂ । ಅಕ್ತುಂ । ಚ । ಆತ್ । ಋಚಂ ।

ಅನಾಪ್ಯಂ । ವರುಣಃ । ಮಿತ್ರಃ । ಅರ್ಯಮಾ । ಕ್ಷತ್ರಂ । ರಾಜಾನಃ । ಆಶತ ॥ ೧೧ ॥

ಸಾಯಣಭಾಷ್ಯಂ

ಯೇ ಮಿತ್ರಾದಯಃ ಶರದಂ ಸಂವತ್ಸರಂ ವಿ ದಧುಃ ಅಕುರ್ವನ್ ಅದನಂತರಮೇವ ಮಾಸಮನಂತರಮಹರನಂತರಮಹಃಸಾಧ್ಯಂ ಯಜ್ಞಂ ಆದನಂತರಮಕ್ತುಂ ರಾತ್ರಿಂ ಚ ಋಚಂ ಮಂತ್ರಾಂಶ್ಚ । ಯದ್ವಾ । ಸರ್ವತ್ರಾದಿತ್ಯಯಮಪೀತ್ಯರ್ಥೇ ವರ್ತತೇ । ತಥಾ ಸತಿ ಕ್ರಮೋಽವಿವಕ್ಷಿತಃ । ತೇ ವರುಣೋ ಮಿತ್ರೋಽರ್ಯಮಾ ಚ ತ್ರಯೋಽನಾಪ್ಯಮನ್ಯೈರಪ್ರಾಪ್ತಂ ಕ್ಷತ್ರಂ ಬಲಂ ರಾಜಾನೋ ರಾಜಮಾನಾ ಆಶತ । ವ್ಯಾಪ್ತವಂತಃ ॥

ಪ್ರತಿಪದಾರ್ಥ

**ಯೇ**—ಯಾವ ಮಿತ್ರಾದಿದೇವತೆಗಳು । **ಶರದಂ**—ಸಂವತ್ಸರವೆಂಬ ಕಾಲಪರಿಮಿತಿಯನ್ನೂ । **ಆತ್**—ಮತ್ತು (ಅಥವಾ ಅನಂತರ ) । **ಮಾಸಂ**—ಮಾಸವನ್ನೂ (ತಿಂಗಳನ್ನೂ) ಎಂದರೆ ಮಾಸಪರಿಮಿತಿಯನ್ನೂ । **ಅಹಃ**-ದಿನವನ್ನೂ । **ಯಜ್ಞಂ**—ಯಜ್ಞಕರ್ಮವನ್ನೂ । **ಅಕ್ತುಂ**—ರಾತ್ರಿಕಾಲವನ್ನೂ । **ಋಚಂ**—ಮಂತ್ರಗಳನ್ನೂ । **ವಿದಧುಃ**—ನಿರ್ಮಿಸಿದರೋ ಎಂದರೆ ಸೃಷ್ಟಿಸಿದರೋ ಅಂತಹ । **ರಾಜಾನಃ**—ಪ್ರಕಾಶಮಾನರಾದ ಅಥವಾ ಸರ್ವರಿಗೂ ಪ್ರಭುಗಳಾದ । **ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೆಂಬ ದೇವನೂ ಈ ಮೂವರೂ । **ಅನಾಪ್ಯಂ**—ಇತರರಿಂದ ಹೊಂದಲು ಸಾಧ್ಯವಿಲ್ಲದಿರುವ । **ಕ್ಷತ್ರಂ**—ಶಕ್ತಿಸಾಮರ್ಥ್ಯಗಳನ್ನು । **ಆಶತ**—ಪಡೆದಿದ್ದಾರೆ.

ಭಾವಾರ್ಥ

ಈ ಮಿತ್ರಾದಿದೇವತೆಗಳು ಸಂವತ್ಸರ, ಮಾಸ, ಹಗಲು, ರಾತ್ರೆ ಎಂಬ ಕಾಲಪರಿಮಿತಿಗಳನ್ನು ಯಜ್ಞಕರ್ಮ, ಅವುಗಳಿಗೆ ಆವಶ್ಯಕವಾದ ಮಂತ್ರಗಳು ಇವುಗಳನ್ನೆಲ್ಲಾ ನಿರ್ಮಿಸಿದಾರೆ ಪ್ರಕಾಶಮಾನರಾದ ಮಿತ್ರ, ವರುಣ, ಅರ್ಯಮಾ ಎಂಬ ಈ ಮೂರು ಮಂದಿ ದೇವತೆಗಳೂ ಇತರರಿಂದ ಹೊಂದಲು ಸಾಧ್ಯವಿಲ್ಲದ ಶಕ್ತಿಸಾಮರ್ಥ್ಯಗಳನ್ನು ಪಡೆದಿದ್ದಾರೆ.

English Translation

Who have established the year, and then the month and the day, the sacrifice, the night, and the holy text, they the royal deities, Varuna, Mitra Aryaman, enjoy unrivalled might.

ಸಂಹಿತಾಪಾಠಃ

ತದ್ವೋ ಅದ್ಯ ಮನಾಮಹೇ ಸೂಕ್ತೈಃ ಸೂರ ಉದಿತೇ ।
ಯದೋಹತೇ ವರುಣೋ ಮಿತ್ರ ಅರ್ಯಮಾ ಯೂಯಮೃತಸ್ಯ ರಥ್ಯಃ ॥

ಪದಪಾಠಃ

ತತ್ । ವಃ । ಅದ್ಯ । ಮನಾಮಹೇ । ಸುಽಉಕ್ತೈಃ । ಸೂರೇ । ಉತ್ಽಇತೇ ।

ಯತ್ । ಓಹತೇ । ವರುಣಃ । ಮಿತ್ರಃ । ಅರ್ಯಮಾ । ಯೂಯಂ । ಋತಸ್ಯ । ರಥ್ಯಃ ॥ ೧೨ ॥

ಸಾಯಣಭಾಷ್ಯಂ

ತತ್ಪ್ರಸಿದ್ಧಮದ್ಯಾಸ್ಮಿನ್ಯಾಗಕಾಲೇ ವೋ ಯುಷ್ಮಾನ್ಮನಾಮಹೇ । ಯಾಚಾಮಹೇ । ಕೈಃ ಸಾಧನೈಃ । ಸೂಕ್ತೈಃ । ಕಸ್ಮಿನ್ಕಾಲೇ । ಸೂರ ಉದಿತೇ । ಪ್ರಾತಃಕಾಲ ಇತ್ಯರ್ಥಃ । ಯದ್ಧನಂ ಹೇ ಋತಸ್ಯೋದಕಸ್ಯ ರಥ್ಯೋ ನೇತಾರಃ ಯೂಯಂ ವರುಣಾದಯ ಓಹತೇ । ಯೂಯಮಿತ್ಯನೇನ ಸಾಮಾನಾಧಿಕರಣ್ಯಾದೋಹತ ಇತ್ಯತ್ರ ಪುರುಷವ್ಯತ್ಯಯಃ । ಓಹಧ್ವ ಇತ್ಯರ್ಥಃ । ತದ್ಧನಂ ಮನಾಮಹ ಇತಿ ॥

ಪ್ರತಿಪದಾರ್ಥ

**ಋತಸ್ಯ**—ಉದಕದ । **ರಥ್ಯಃ**—ನೇತೃಗಳಾದ ಎಲೈ ಮಿತ್ರಾದಿಗಳೇ । **ಯೂಯಂ**—ನೀವು । **ಸೂರೇ ಉದಿತೇ**—ಸೂರ್ಯನು ಉದಯಿಸುತ್ತಿರುವಾಗ ಎಂದರೆ ಪ್ರಾತಃಕಾಲದಲ್ಲಿ । **ಯತ್**—ಯಾವ ಧನವನ್ನು । **ಓಹತೇ**—ಸ್ತೋತೃಜನರಿಗಾಗಿ ವಹಿಸುತ್ತೀರೋ । **ತತ್**—ಪ್ರಸಿದ್ಧವಾದ ಅಂತಹ ಧನವನ್ನು (ನಮಗೆ ಕೊಡಬೇಕೆಂದು) **ವಃ**—ನಿಮ್ಮನ್ನು । **ಅದ್ಯ**—ಈ ಯಾಗಕಾಲದಲ್ಲಿ । **ಸೂಕ್ತೈಃ**—ಸ್ತೋತ್ರಾದಿಗಳಿಂದ । **ಮನಾಮಹೇ**—ಯಾಚಿಸುತ್ತೇವೆ.

ಭಾವಾರ್ಥ

ಜನರಿಗೆ ವೃಷ್ಟ್ಯುದಕಗಳನ್ನು ಒದಗಿಸಿಕೊಡುವ ಎಲೈ ಮಿತ್ರಾದಿದೇವತೆಗಳೇ, ಸೂರ್ಯನು ಉದಯಿಸುತ್ತಿರುವಾಗ ನೀವು ಭಕ್ತರಿಗೆ ಕೊಡುವ ಯಾವ ಧನವನ್ನು ಒಯ್ಯುತ್ತಿದ್ದೀರೋ ಅಂತಹ ಧನವನ್ನು ನಮಗೆ ಕೊಡಬೇಕೆಂದು ಈ ಯಾಗಕಾಲದಲ್ಲಿ ಸ್ತೋತ್ರಗಳಿಂದ ನಿಮ್ಮನ್ನು ಸ್ತುತಿಸಿ ಯಾಚಿಸುತ್ತೇವೆ.

English Translation

Therefore to-day at sunrise we solicit you with hymns for (wealth) Varuna, Mitra, Aryaman, bearers of water, you convey.

ಸಂಹಿತಾಪಾಠಃ

ಋತಾವಾನ ಋತಜಾತಾ ಋತಾವೃಧೋ ಘೋರಾಸೋ ಅನೃತದ್ವಿಷಃ ।
ತೇಷಾಂ ವಃ ಸುಮ್ನೇ ಸುಚ್ಛರ್ದಿಷ್ಟಮೇ ನರಃ ಸ್ಯಾಮ ಯೇ ಚ ಸೂರಯಃ ॥

ಪದಪಾಠಃ

ಋತಽವಾನಃ । ಋತಽಜಾತಾಃ । ಋತಽವೃಧಃ । ಘೋರಾಸಃ । ಅನೃತಽದ್ವಿಷಃ ।

ತೇಷಾಂ । ವಃ । ಸುಮ್ನೇ । ಸುಚ್ಛರ್ದಿಃಽತಮೇ । ನರಃ । ಸ್ಯಾಮ । ಯೇ । ಚ । ಸೂರಯಃ ॥ ೧೩ ॥

ಸಾಯಣಭಾಷ್ಯಂ

ಯೇ ಯೂಯಮೃತಾವಾನ ಋತವಂತೋ ಯಜ್ಞವಂತ ಉದಕವಂತೋ ವಾ ಋತಜಾತಾಃ | ಉಕ್ತ ಋತಶಬ್ದಾರ್ಥಃ | ತದರ್ಥಮುತ್ಪನ್ನಾಃ | ಅಥವಾ | ಋತಾತ್ಪ್ರಜಾಪತೇಃ ಸಕಾಶಾದುತ್ಪನ್ನಾಃ | ಋತಾವೃಧ ಉಕ್ತಾರ್ಥಸ್ಯರ್ತಸ್ಯ ವರ್ಧಯಿತಾರೋ ಘೋರಾಸೋ ಘೋರಾ ಅನೃತದ್ವಿಷೋಽಯಜ್ಞ್ಯ-ದ್ವೇಷ್ಟಾರಃ ತೇಷಾಂ ವೋ ಯುಷ್ಮಾಕಂ ಸುಚ್ಛರ್ದಿಷ್ಟಮೇ ಸುಖತಮೇ ಸುಮ್ನೇ ಧನೇಽತ್ಯಂತರಮ-ಣೀಯಗೃಹಯುಕ್ತೇ ಸುಖೇ ವಾ ಯೇ ವಯಂ ಯೇ ಚಾನ್ಯೇ ಸೂರಯಃ ಸ್ತೋತಾರಃ ತೇ ಸರ್ವೇ ಸ್ಯಾಮ | ಭವೇಮ ||

ಪ್ರತಿಪದಾರ್ಥ

(ಎಲೈ ಮಿತ್ರಾದಿದೇವತೆಗಳೇ, ನೀವು) **ಋತಾವಾನಃ**— ಯಜ್ಞನಿರ್ವಾಹಕರು ಅಥವಾ ಉದಕಪ್ರದರು | **ಋತಜಾತಾಃ**— ಯಜ್ಞಾರ್ಥವಾಗಿ ಅಥವಾ ಉದಕಪ್ರದಾನಕ್ಕಾಗಿ ಉತ್ಪನ್ನರಾದವರು | **ಋತವೃಧಃ**— ಯಜ್ಞವನ್ನು ಅಥವಾ ಉದಕವನ್ನು ವೃದ್ಧಿಪಡಿಸುವವರು | **ಘೋರಾಸಃ**— ಶತ್ರುಗಳ ವಿಷಯದಲ್ಲಿ ಕ್ರೂರವಾಗಿ ವರ್ತಿಸತಕ್ಕವರು | **ಅನೃತದ್ವಿಷಃ**— ಸುಳ್ಳಾಡುವವರನ್ನು ಕಂಡರಾಗದವರು ಅಥವಾ ಯಜ್ಞಮಾಡದಿರುವವರನ್ನು ದ್ವೇಷಿಸುವವರು | **ತೇಷಾಂ ವಃ**— ಇಂತಹ ಗುಣವಿಶಿಷ್ಟರಾದ ನಿಮ್ಮ | **ಸುಚ್ಛರ್ದಿಷ್ಟಮೇ**— ಸುಖಕರವಾದ | **ಸುಮ್ನೇ**— ಧನದಾನವಿಷಯದಲ್ಲಿ | **ನರಃ**— ಯಜಮಾನರಾದ ನಾವೂ | **ಯೇ ಚ ಸೂರಯಃ**— ಸ್ತೋತ್ರಮಾಡುವ ಇತರ ಜನರೂ ಸಹ | **ಸ್ಯಾಮ**— ನಿಮ್ಮ ಅನುಗ್ರಹಕ್ಕೆ ಪಾತ್ರರಾಗಿರೋಣ

ಭಾವಾರ್ಥ

ಎಲೈ ಮಿತ್ರಾವರುಣಾದಿದೇವತೆಗಳೇ, ನೀವು ಯಜ್ಞನಿರ್ವಾಹಕರು ಅಥವಾ ವೃಷ್ಟಿರೂಪವಾದ ಉದಕವನ್ನು ಜನರಿಗೆ ಒದಗಿಸಿಕೊಡುವವರು, ಯಜ್ಞಾರ್ಥವಾಗಿ ಅಥವಾ ಉದಕಾರ್ಥವಾಗಿಯೇ ಉತ್ಪನ್ನರಾದವರು, ಯಜ್ಞವನ್ನು ಅಥವಾ ಉದಕವನ್ನು ವೃದ್ಧಿಯಾಗುವಂತೆ ಮಾಡುವವರು ಶತ್ರುಗಳ ವಿಷಯದಲ್ಲಿ ಕ್ರೂರಸ್ವಭಾವವುಳ್ಳವರು, ಅನೃತವಾದಿಗಳನ್ನು ಅಥವಾ ಯಜ್ಞಮಾಡದಿರುವವರನ್ನು ದ್ವೇಷಿಸುವವರು, ಇಂತಹ ನಿಮ್ಮ ಸುಖಕರವಾದ ಧನದಾನದ ವಿಷಯದಲ್ಲಿ ಯಜಮಾನರಾದ ನಾವೂ ನಿಮ್ಮನ್ನು ಸ್ತೋತ್ರಮಾಡುವ ಇತರರೂ ನಿಮ್ಮ ಅನುಗ್ರಹಕ್ಕೆ ಪಾತ್ರರಾಗುವಂತಾಗಲಿ

English Translation

Acceptors of rites, generated for rites, augmenters of rites, fierce enemies of the neglector of rites, may we, as well as those men who are your adorers, be in (the enjoyment of) the highest felicity, all confirmed by you

ಸಂಹಿತಾಪಾಠಃ

ಉದು ತ್ಯದ್ದರ್ಶತಂ ವಪುರ್ದಿವ ಏತಿ ಪ್ರತಿಹ್ವರೇ |

ಯದೀಮಾಶುರ್ವಹತಿ ದೇವ ಏತಶೋ ವಿಶ್ವಸ್ಮೈ ಚಕ್ಷಸೇ ಅರಂ || ೧೪ ||

ಪದಪಾಠಃ

ಉತ್ । ಊಂ ಇತಿ । ತ್ಯತ್ । ದರ್ಶತಂ । ವಪುಃ । ದಿವಃ । ಏತಿ । ಪ್ರತಿಽಹ್ವರೇ ।

ಯತ್ । ಈಂ । ಆಶುಃ । ವಹತಿ । ದೇವಃ । ಏತಶಃ । ವಿಶ್ವಸ್ಮೈ । ಚಕ್ಷಸೇ । ಅರಂ ॥ ೧೪ ॥

ಸಾಯಣಭಾಷ್ಯಂ

ಸೋಮಾತಿರೇಕೇ ಮಾಧ್ಯಂದಿನಸವನೇ ನೈಮಿತ್ತಿಕೇ ಶಸ್ತ್ರ ಉದು ತ್ಯದಿತ್ಯಯಂ ಪ್ರಗಾಥೋಽನುರೂಪಃ । ಸೂತ್ರಿತಂ ಚ । ಬ್ರಹ್ಮಾಹಾ ಅಪಿ ಸೂರ್ಯೋದು ತ್ಯದ್ದರ್ಶತಂ ವಪುರಿತಿ ಪ್ರಗಾಥೌ ಸ್ತೋತ್ರಿಯಾನುರೂಪೌ । ಆ. ೬ ೭ । ಇತಿ ॥ ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇಽಯಮೇವ ವೈಕಲ್ಪಿಕಃ ಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ಉದು ತ್ಯದ್ದರ್ಶತಂ ವಪುರುದು ತ್ಯೇ ಮಧುಮತ್ತಮಾಃ । ಆ. ೭ ೪ । ಇತಿ ॥

ತ್ಯತ್ತದ್ದರ್ಶತಂ ದರ್ಶನೀಯಂ ವಪುರ್ಮಂಡಲಂ ದಿವೋಽಂತರಿಕ್ಷಸ್ಯ ಪ್ರತಿಹ್ವರೇ ಸಮೀಪೇ ಉದ್ವೇತಿ । ಉದೇತಿ । ಉ ಇತಿ ಪೂರಣಃ । ಯದೀಂ ಯದೇತನ್ಮಂಡಲಮಾಶುಃ ಶೀಘ್ರಗಾಮ್ಯೇತಶ ಏತವರ್ಣೋಽಶ್ವೋ ವಹತಿ ಧಾರಯತಿ । ಕಿಮರ್ಥಂ । ವಿಶ್ವಸ್ಮೈ ಸರ್ವಸ್ಮಾ ಅರಂ ಚಕ್ಷಸೇ ಸಮ್ಯಕ್ಸರ್ವಲೋಕದರ್ಶನಾಯ ॥

ಪ್ರತಿಪದಾರ್ಥ

**ತ್ಯತ್**—ಪ್ರಸಿದ್ಧವಾದುದೂ । **ದರ್ಶತಂ**—ಎಲ್ಲರಿಗೂ ಕಾಣಿಸುತ್ತಿರುವುದೂ ಅಥವಾ ರಮಣೀಯವಾದುದೂ ಆದ । **ವಪುಃ**—ಸೂರ್ಯಮಂಡಲವು । **ದಿವಃ**—ಅಂತರಿಕ್ಷದ । **ಪ್ರತಿಹ್ವರೇ**—ಸಮೀಪದಲ್ಲಿ ಎಂದರೆ ಅಂಚಿನಲ್ಲಿ । **ಉದು ಏತಿ**—ಉದಯಿಸುತ್ತದೆ । **ಯದೀಂ**—ಇಂತಹ ಯಾವ ಸೂರ್ಯಮಂಡಲವಿರುವುದೋ ಅದನ್ನು । **ಆಶುಃ** ವೇಗವಾಗಿ ಸಂಚರಿಸುವ । **ಏತಶಃ**—ಸೂರ್ಯನ ಅಶ್ವವು । **ವಿಶ್ವಸ್ಮೈ ಅರಂ ಚಕ್ಷಸೇ**—ಸಮಸ್ತಜನರೂ ಚೆನ್ನಾಗಿ ನೋಡುವುದಕ್ಕಾಗಿ । **ವಹತಿ**—ವಹಿಸುತ್ತದೆ (ಒಯ್ಯುತ್ತದೆ)

ಭಾವಾರ್ಥ

ಪ್ರಸಿದ್ಧವಾದುದೂ, ಎಲ್ಲರಿಗೂ ಕಾಣಿಸುತ್ತಿರುವುದೂ ಆದ ಸೂರ್ಯಮಂಡಲವು ಅಂತರಿಕ್ಷದ ಅಂಚಿನಲ್ಲಿ ಈಗತಾನೇ ಉದಯಿಸುತ್ತಿದೆ. ಇಂತಹ ಈ ಸೂರ್ಯಮಂಡಲವನ್ನು ಸಮಸ್ತಜನರೂ ಚೆನ್ನಾಗಿ ನೋಡಲೆಂದು ಶೀಘ್ರಗಾಮಿಯಾದ ಸೂರ್ಯನ ಅಶ್ವವು ಅಂತರಿಕ್ಷಮಾರ್ಗದಲ್ಲಿ ವಹಿಸುತ್ತದೆ.

## English Translation

That beautiful orb (of the sun) rises on the near margin of the sky as the swift, divine, white-coloured (steed) bears it along for the beholding of all men.

ವಿಶೇಷವಿಷಯಗಳು

ಮಾಧ್ಯಂದಿನಸವನಕಾಲದಲ್ಲಿ ಸೋಮಾತಿರೇಕವಾದಾಗ ನೈಮಿತ್ತಿಕಶಸ್ತ್ರಮಂತ್ರಗಳನ್ನು ಪಠಿಸುವಾಗ **ಉದು ತ್ಯತ್** ಎಂಬ ಈ ಋಕ್ಕನ್ನು ಅನುರೂಪ ಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-

**ಬಣ್ಮಹಾಁ ಅಸಿ ಸೂರ್ಯೋದುತ್ಯದ್ದರ್ಶತಂ ವಪುರಿತಿ ಪ್ರಗಾಥೌ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ. ೬. ೭) ವಿವೃತವಾಗಿರುವುದು. ಮತ್ತು ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಈ ಋಕ್ಕನ್ನೇ ವೈಕಲ್ಪಿಕಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- **ಉದು ತ್ಯದ್ದರ್ಶತಂ ವಪುರುದು ತ್ಯೇ ಮಧುಮತ್ತಮಾಃ** ಎಂಬ ಸೂತ್ರದಿಂದ (ಆ ೭-೪) ವಿವೃತವಾಗಿರುವುದು.

ಸಂಹಿತಾಪಾಠಃ

ಶೀರ್ಷ್ಣಃಶೀರ್ಷ್ಣೋ ಜಗತಸ್ತಸ್ಥುಷಸ್ಪತಿಂ ಸಮಯಾ ವಿಶ್ವಮಾ ರಜಃ ।
ಸಪ್ತ ಸ್ವಸಾರಃ ಸುವಿತಾಯ ಸೂರ್ಯಂ ವಹಂತಿ ಹರಿತೋ ರಥೇ ॥ ೧೫ ॥

ಪದಪಾಠಃ

ಶೀರ್ಷ್ಣಃऽಶೀರ್ಷ್ಣಃ । ಜಗತಃ । ತಸ್ಥುಷಃ । ಪತಿಂ । ಸಮಯಾ । ವಿಶ್ವಂ । ಆ । ರಜಃ ।
ಸಪ್ತ । ಸ್ವಸಾರಃ । ಸುವಿತಾಯ । ಸೂರ್ಯಂ । ವಹಂತಿ । ಹರಿತಃ । ರಥೇ ॥ ೧೫ ॥

ಸಾಯಣಭಾಷ್ಯಂ

**ಶೀರ್ಷ್ಣಃ ಶೀರ್ಷ್ಣಃ ಸರ್ವಸ್ಯಾಪಿ ಶಿರಸಃ । ತೃತೀಯಾರ್ಥೇ ಪಂಚಮೀ । ಸ್ವಸ್ವಶಿರಸೇತ್ಯರ್ಥಃ । ಸೂರ್ಯಂ ವಹಂತೀತ್ಯನೇನ ಸಂಬಂಧ್ಯತೇ । ಅಥವಾ ಶಿರಃಶಬ್ದೇನ ತದ್ವಾನ್ಪದಾರ್ಥೋ ಲಕ್ಷ್ಯತೇ । ವೀಪ್ಸಯಾ ತಸ್ಯ ಕಾರ್ತ್ಸ್ನ್ಯಮುಚ್ಯತೇ । ಸರ್ವಸ್ಯ ಶ್ರೇಷ್ಠಮಿತ್ಯರ್ಥಃ । ಜಗತೋ ಜಂಗಮಸ್ಯ ತಸ್ಥುಷಃ ಸ್ಥಾವರಸ್ಯ ಪತಿಂ ಸ್ವಾಮಿನಂ ರಥೇ ವರ್ತಮಾನಂ ಸೂರ್ಯಂ ಸುವಿತಾಯ ಕಲ್ಯಾಣಾಯ ವಿಶ್ವಂ ರಜಃ ಸಮಯಾ ಸರ್ವಲೋಕಸ್ಯ ಸಮೀಪೇ ॥ ಅಭಿತಃ ಪರಿತಃ ಸಮಯೇತ್ಯಾದಿನಾ । ಮ ೨-೩-೨-೧ । ಸಮಯಾಶಬ್ದಯೋಗಾತ್ ದ್ವಿತೀಯಾ ॥ ಸಪ್ತ ಸಪ್ತಸಂಖ್ಯಾಕಾಃ ಸ್ವಸಾರೋಽನ್ಯನಿರಪೇಕ್ಷೇಣ ಸ್ವಯಮೇವ ಸರಂತ್ಯೋ ಹರಿತೋ ಹರಿತವರ್ಣಾ ಅಶ್ವಾ ವಹಂತಿ ॥**

ಪ್ರತಿಪದಾರ್ಥ

**ಶೀರ್ಷ್ಣಶ್ಶೀರ್ಷ್ಣಃ**—ಶಿರಸ್ಸಿನಂತೆ ಅತ್ಯಂತ ಶ್ರೇಷ್ಠವಾದ । **ಜಗತಃ ತಸ್ಥುಷಃ**—ಸ್ಥಾವರಜಂಗಮಾತ್ಮಕವಾದ ಸಮಸ್ತಜಗತ್ತಿಗೂ । **ಪತಿಂ**— ಒಡೆಯನಾದವನೂ । **ರಥೇ**—ರಥದಲ್ಲಿ ಕುಳಿತಿರುವವನೂ ಆದ । **ಸೂರ್ಯಂ**—ಸೂರ್ಯನನ್ನು । **ಸುವಿತಾಯ**—ಲೋಕಕಲ್ಯಾಣಕ್ಕಾಗಿ । **ವಿಶ್ವಂ ರಜಃ**—ಸಮಸ್ತಲೋಕಗಳ । **ಸಮಯಾ**—ಸಮೀಪದಲ್ಲಿ । **ಸ್ವಸಾರಃ**—ಸ್ವತಃಸಂಚರಿಸುವ ಶಕ್ತಿಯುಳ್ಳ । **ಸಪ್ತ ಹರಿತಃ**— ಹರಿತವರ್ಣವುಳ್ಳ ಸೂರ್ಯನ ಏಳು ಕುದುರೆಗಳು । **ವಹಂತಿ**—ವಹಿಸುತ್ತವೆ

ಭಾವಾರ್ಥ

ಚರಾಚರಾತ್ಮಕವಾದ ಸಮಸ್ತ ಜಗತ್ತಿಗೂ ಒಡೆಯನಾದವನೂ, ರಥದಲ್ಲಿ ಕುಳಿತಿರುವವನೂ ಆದ ಸೂರ್ಯನನ್ನು, ಸ್ವತಃ (ಇತರರ ಪ್ರೇರಣೆ ಇಲ್ಲದೆ) ಸಂಚರಿಸುವ ಹರಿದ್ವರ್ಣವುಳ್ಳ ಸೂರ್ಯನ ಏಳು ಕುದುರೆಗಳು ಲೋಕಕಲ್ಯಾಣಾರ್ಥವಾಗಿ ಭೂಮ್ಯಾಕಾಶಗಳ ಸಮೀಪದಲ್ಲಿಯೇ ಎಂದರೆ ಎಲ್ಲರಿಗೂ ಕಾಣಿಸುವಂತೆಯೇ ಒಯ್ಯುತ್ತವೆ.

## English Translation

The seven gliding steeds convey the sun, the lord of every individual moving of stationary thing, traversing the whole world in his chariot for the good (of all).

ಸಂಹಿತಾಪಾಠಃ

ತಚ್ಚಕ್ಷುರ್ದೇವಹಿತಂ ಶುಕ್ರಮುಚ್ಚರತ್ ।
ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಂ ॥ ೧೬ ॥

ಪದಪಾಠಃ

ತತ್ । ಚಕ್ಷುಃ । ದೇವಽಹಿತಂ । ಶುಕ್ರಂ । ಉತ್ಽಚರತ್ ।
ಪಶ್ಯೇಮ । ಶರದಃ । ಶತಂ । ಜೀವೇಮ । ಶರದಃ । ಶತಂ ॥ ೧೬ ॥

ಸಾಯಣಭಾಷ್ಯಂ

**ತತ್ಪ್ರಸಿದ್ಧಂ ಚಕ್ಷುಃ ಸರ್ವಸ್ಯ ಪ್ರಕಾಶಕಂ ದೇವಹಿತಂ ದೇವಾನಾಂ ಹಿತಂ । ತೇಷಾಂ ಹವಿಃಸ್ವೀಕಾರಸ್ಯೈತದಧೀನತ್ವಾತ್ । ಅಥವಾ ದೇವೇನ ಹಿತಂ । ಶುಕ್ರಂ ನಿರ್ಮಲಂ ಸೂರ್ಯಮಂಡಲಮುಚ್ಚರತ್ । ಉದ್ಗಚ್ಛತಿ । ತಚ್ಛರದಃ ಶತಂ ಶತಸಂವತ್ಸರಂ ಪಶ್ಯೇಮ । ಜೀವೇಮ ಶರದಃ ಶತಂ । ಪುನಃ ಶ್ರುತಿರಾದರಾರ್ಥಾ ॥**

ಪ್ರತಿಪದಾರ್ಥ

**ತತ್**—ಪ್ರಸಿದ್ಧವಾದುದೂ । **ಚಕ್ಷುಃ**—ಸಮಸ್ತವಿಶ್ವಕ್ಕೂ ಕಣ್ಣಿನಂತಿರುವುದೂ ಅಥವಾ ಪ್ರಕಾಶವನ್ನು ಬೀರುವುದೂ । **ದೇವಹಿತಂ**—ದೇವತೆಗಳಿಗೆ ಹಿತಕರವಾದುದೂ ಅಥವಾ ದೇವತೆಗಳಿಂದ ಲೋಕಕಲ್ಯಾಣಾರ್ಥವಾಗಿ ಅಂತರಿಕ್ಷದಲ್ಲಿ ಸ್ಥಾಪಿತವಾದುದೂ । **ಶುಕ್ರಂ**—ನಿರ್ಮಲವಾದುದೂ (ಶುಭ್ರವಾದುದೂ) ಆದ ಸೂರ್ಯಮಂಡಲವು । **ಉಚ್ಚರತ್**—ಉದಯಿಸಿ ಸಂಚರಿಸುತ್ತದೆ (ಅಥವಾ ಅಂತರಿಕ್ಷದ ಮೇಲ್ಭಾಗದಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸುತ್ತದೆ) । **ತತ್**—ಅಂತಹ ಸೂರ್ಯಮಂಡಲವನ್ನು । **ಶರದಃ ಶತಂ**—ನೂರು ವರ್ಷಗಳವರೆಗೂ । **ಪಶ್ಯೇಮ**—ನಾವು ನೋಡುವಂತಾಗಲಿ । **ಶರದಃ ಶತಂ**—ನೂರು ವರ್ಷಗಳವರೆಗೂ । **ಜೀವೇಮ**—ನಾವು ಜೀವಿಸಿರುವಂತಾಗಲಿ

ಭಾವಾರ್ಥ

ಸಮಸ್ತಪ್ರಪಂಚಕ್ಕೂ ಕಣ್ಣಿನಂತಿರುವುದೂ ಅಥವಾ ಪ್ರಕಾಶವನ್ನು ಬೀರುತ್ತಿರುವುದೂ ದೇವತೆಗಳಿಗೆ ಹಿತಕರವಾದುದೂ ಅಥವಾ ದೇವತೆಗಳಿಂದ ಲೋಕಹಿತಾರ್ಥವಾಗಿ ಅಂತರಿಕ್ಷದಲ್ಲಿ ಸ್ಥಾಪಿತವಾದುದೂ ಶುಭ್ರವಾಗಿ ಬೆಳಗುತ್ತಿವುದೂ ಆದ ಸೂರ್ಯಮಂಡಲವು ಉದಯಾನಂತರ ಅಂತರಿಕ್ಷದಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸುತ್ತದೆ. ಇಂತಹ ಸೂರ್ಯಮಂಡಲವನ್ನು ನಾವು ನೂರು ವರ್ಷಗಳವರೆಗೂ ಜೀವಿಸಿದ್ದು ನೋಡುತ್ತಿರುವಂತಾಗಲಿ ಎಂದರೆ ನಾವು ಬಹುಕಾಲ ಜೀವಿಸಿರುವಂತಾಗಲಿ.

## English Translation

That pure eye (of the universe), beneficial to the gods, rises . may we behold it for a hundred years . may we live a hundred years.

ಸಂಹಿತಾಪಾಠಃ

ಕಾವ್ಯೇಭಿರದಾಭ್ಯಾ ಯಾತಂ ವರುಣ ದ್ಯುಮತ್ ।

ಮಿತ್ರಶ್ಚ ಸೋಮಪೀತಯೇ ॥ ೧೭ ॥

ಪದಪಾಠಃ

ಕಾವ್ಯೇಭಿಃ । ಅದಾಭ್ಯಾ । ಆ । ಯಾತಂ । ವರುಣ । ದ್ಯುಽಮತ್ ।

ಮಿತ್ರಃ । ಚ । ಸೋಮಽಪೀತಯೇ ॥ ೧೭ ॥

ಸಾಯಣಭಾಷ್ಯಂ

ಪೃಷ್ಠ್ಯಾಭಿಪ್ಲವಷಡಹಯೋಃ ಸ್ತೋಮನಿಮಿತ್ತ ಆವಾಪೇ ಕಾವ್ಯೇಭಿರದಾಭ್ಯೇತಿ ತೃಚಃ । ಕಾವ್ಯೇಭಿರದಾಭ್ಯೇತಿ ತಿಸ್ರಃ । ಆ ೭-೫ । ಇತಿ ಹಿ ಸೂತ್ರಿತಂ ॥

ಹೇ ಅದಾಭ್ಯಾದಂಭನೀಯೌ ಹೇ ವರುಣ ತ್ವಂ ಮಿತ್ರಶ್ಚ ದ್ಯುಮದ್ದ್ಯುತಿಮಂತೌ ಯುವಾಂ ಕಾವ್ಯೇಭಿರಸ್ಮತ್ಕೃತೈಃ ಸ್ತೋತ್ರೈರಾ ಯಾತಂ । ಕಿಮರ್ಥಂ । ಸೋಮಪೀತಯೇ ಸೋಮಪಾನಾಯ ॥

ಪ್ರತಿಪದಾರ್ಥ

**ಅದಾಭ್ಯಾ**—ಶತ್ರುಗಳಿಂದ ಹಿಂಸಿಸಲ್ಪಡಲು ಸಾಧ್ಯವಿಲ್ಲದ । **ವರುಣ**—ಎಲೈ ವರುಣನೇ ನೀನೂ । **ಮಿತ್ರಃ ಚ**—ಮಿತ್ರನೂ । **ದ್ಯುಮತ್**—ಪ್ರಕಾಶಯುಕ್ತರಾದ ನೀವಿಬ್ಬರೂ । **ಕಾವ್ಯೇಭಿಃ**—ನಾವು ಮಾಡುವ ಸ್ತೋತ್ರಗಳಿಂದ ಪ್ರಶಂಸಿತರಾಗಿ । **ಸೋಮಪೀತಯೇ**—ಸೋಮಪಾನಾರ್ಥವಾಗಿ । **ಆ ಯಾತಂ**—ಬನ್ನಿರಿ

ಭಾವಾರ್ಥ

ಶತ್ರುಬಾಧಾರಹಿತರಾದ ಎಲೈ ಮಿತ್ರಾವರುಣರೇ, ಪ್ರಕಾಶಯುಕ್ತರಾದ ನೀವು ನಮ್ಮ ಸ್ತೋತ್ರಾದಿಗಳಿಂದ ಪ್ರಶಂಸಿತರಾಗಿ ಸೋಮಪಾನಾರ್ಥವಾಗಿ ಇಲ್ಲಿಗೆ ದಯಮಾಡಿಸಿರಿ.

## English Translation

Unconquerable, resplendect Varuna and Mitra, (induced) by our praises, come to drink the soma juice.

ವಿಶೇಷವಿಷಯಗಳು

ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳಲ್ಲಿ ಸ್ತೋಮಗಳ ಆವಾಪಾರ್ಥವಾಗಿ **ಕಾವ್ಯೇಭಿರದಾಭ್ಯಾ** ಎಂದು ಪ್ರಾರಂಭವಾಗುವ ಈ ತೃಚವನ್ನು ಎಂದರೆ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ **ಕಾವ್ಯೇಭಿರದಾಭ್ಯೇತಿ ತಿಸ್ರಃ** ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು

ಸಂಹಿತಾಪಾಠಃ

ದಿವೋ ಧಾಮಭಿರ್ವರುಣ ಮಿತ್ರಶ್ಚಾ ಯಾತಮದ್ರುಹಾ ।

ಪಿಬತಂ ಸೋಮಮಾತುಜೀ ॥ ೧೮ ॥

ಪದಪಾಠಃ

**ದಿವಃ । ಧಾಮಽಭಿಃ । ವರುಣ । ಮಿತ್ರಃ । ಚ । ಆ । ಯಾತಂ । ಅದ್ರುಹಾ ।**

**ಪಿಬತಂ । ಸೋಮಂ । ಆತುಜೀ ಇತ್ಯಾಽತುಜೀ ॥ ೧೮ ॥**

ಸಾಯಣಭಾಷ್ಯಂ

**ಹೇ ವರುಣ ತ್ವಂ ಮಿತ್ರಶ್ಚಾದ್ರುಹಾದ್ರೋಗ್ಧಾರೌ ಯುವಾಂ ದಿವೋ ದ್ಯುಲೋಕಸಂಬಂಧಿಭ್ಯೋ ಧಾಮಭಿರ್ಧಾಮಭ್ಯ ಸ್ಥಾನೇಭ್ಯಃ । ಪಂಚಮ್ಯರ್ಥೇ ತೃತೀಯಾ । ಅಥವಾ ಧಾಮಭಿಸ್ತೇಜೋಭಿರ್ವಿಭೂತಿಭಿಃ ಸಾರ್ಧಮಾ ಯಾತಂ । ಅಸ್ಮದ್ಯಜ್ಞಮಾಗಚ್ಛತಂ । ಆಗತ್ಯ ಚಾತುಜೀ ಶತ್ರೂಣಾಂ ಸರ್ವತೋ ಹಿಂಸಕಾವಾದಾತಾರೌ ವಾ ಧನಾನಾಂ ಏವಂ ರೂಪೌ ಸಂತೌ ಸೋಮಂ ಪಿಬತಂ ॥ ತುಜಿ ಪಿಜಿ ಹಿಂಸಾಬಲಾದಾನನಿಕೇತನೇಷು । ಅತ್ರ ಹಿಂಸಾಯಾಮಾದಾನೇ ವಾ ವರ್ತತೇ ।**

ಪ್ರತಿಪದಾರ್ಥ

**ವರುಣ**—ಎಲೈ ವರುಣನೇ, ನೀನೂ । **ಮಿತ್ರಶ್ಚ**—ಮಿತ್ರನೂ । **ಅದ್ರುಹಾ**—ಯಾರಿಗೂ ಕೇಡನ್ನು ಬಯಸದಿರುವ ನೀವಿಬ್ಬರೂ । **ದಿವಃ ಧಾಮಭಿಃ**—ಸ್ವರ್ಗಲೋಕದ ಸ್ಥಾನಗಳಿಂದ ಅಥವಾ ಪ್ರಕಾಶಯುಕ್ತರಾಗಿ । **ಆ ಯಾತಂ**—(ನಮ್ಮ ಯಜ್ಞಾಭಿಮುಖವಾಗಿ) ದಯಮಾಡಿಸಿ (ಅನಂತರ) । **ಆತುಜೀ**—ಎಲ್ಲಕಡೆಯಲ್ಲಿಯೂ ಶತ್ರುಗಳನ್ನು ಹಿಂಸಿಸುವ ಅಥವಾ ಧನಾದಿಗಳನ್ನು ಸ್ತೋತೃಜನರಿಗೆ ಕೊಡುವ ನೀವು । **ಸೋಮಂ**—ಸೋಮರಸವನ್ನು । **ಪಿಬತಂ**—ಪಾನಮಾಡಿರಿ.

ಭಾವಾರ್ಥ

ಯಾರಿಗೂ ದ್ರೋಹವನ್ನು ಮಾಡದಿರುವ ಎಲೈ ಮಿತ್ರಾವರುಣರೇ, ನೀವಿಬ್ಬರೂ ಸ್ವರ್ಗಲೋಕದ ನಿಮ್ಮ ಸ್ಥಾನಗಳಿಂದ ಹೊರಟು ಪ್ರಕಾಶದಿಂದ ಬೆಳಗುತ್ತಾ ನಮ್ಮ ಯಜ್ಞಾಭಿಮುಖವಾಗಿ ದಯಮಾಡಿ. ಅನಂತರ ಶತ್ರು ಹಿಂಸಕರಾದ ಅಥವಾ ಧನಪ್ರದರಾದ ನೀವು ನಮ್ಮ ಯಜ್ಞದಲ್ಲಿ ಸೋಮರಸವನ್ನು ಪಾನಮಾಡಿರಿ.

## English Translation

Gentle Mitra and Varuna, destroyers of foes, come from heaven with your glories, and drink the Soma juice.

### ಸಂಹಿತಾಪಾಠಃ

ಆ ಯಾತಂ ಮಿತ್ರಾವರುಣಾ ಜುಷಾಣಾವಾಹುತಿಂ ನರಾ ।

ಪಾತಂ ಸೋಮಮೃತಾವೃಧಾ ॥ ೧೯ ॥

### ಪದಪಾಠಃ

ಆ । ಯಾತಂ । ಮಿತ್ರಾವರುಣಾ । ಜುಷಾಣೌ । ಆऽಹುತಿಂ । ನರಾ ।

ಪಾತಂ । ಸೋಮಂ । ಋತऽವೃಧಾ ॥ ೧೯ ॥

### ಸಾಯಣಭಾಷ್ಯಂ

ಹೇ ಮಿತ್ರಾವರುಣಾ ಮಿತ್ರಾವರುಣೌ ಹೇ ನರಾ ಯಾಗನೇತಾರೌ ಆಹುತಿಂ ಸೋಮಲಕ್ಷಣಾಂ ಜುಷಾಣೌ ಪ್ರಿಯಮಾಣೌ ಸಂತಾವಾ ಯಾತಂ । ಆಗಚ್ಛತಂ ಯಜ್ಞಂ । ಆಗತ್ಯ ಚ ಹೇ ಋತಾವೃಧಾ ಯಜ್ಞಸ್ಯ ವರ್ಧಕೌ ಯುವಾಂ ಸೋಮಂ ಪಾತಂ । ಪಿಬತಂ ॥

### ಪ್ರತಿಪದಾರ್ಥ

**ನರಾ**—ಯಜ್ಞನೇತೃಗಳಾದ । **ಮಿತ್ರಾವರುಣಾ**—ಎಲೈ ಮಿತ್ರಾವರುಣರೇ । **ಆಹುತಿಂ**—ಸೋಮಲಕ್ಷಣವಾದ ಆಹುತಿಯನ್ನು । **ಜುಷಾಣಾ**—ಪ್ರೀತಿಪಡುವವರಾಗಿ (ಅಥವಾ ಸೇವಿಸುವುದಕ್ಕಾಗಿ) । **ಆ ಯಾತಂ**—ನಮ್ಮ ಯಜ್ಞಭೂಮಿಗೆ ಬನ್ನಿರಿ. (ಅನಂತರ) । **ಋತಾವೃಧಾ**—ಯಜ್ಞವರ್ಧಕರಾದ ನೀವು । **ಸೋಮಂ**—ಸೋಮರಸವನ್ನು । **ಪಾತಂ**—ಪಾನಮಾಡಿರಿ.

### ಭಾವಾರ್ಥ

ಯಜ್ಞನಿರ್ವಾಹಕರಾದ ಎಲೈ ಮಿತ್ರಾವರುಣರೇ, ಯಜ್ಞಾಹುತಿರೂಪವಾದ ಸೋಮದಲ್ಲಿ ಆಸಕ್ತಿಯುಳ್ಳ ನೀವು ಅದನ್ನು ಸೇವಿಸುವುದಕ್ಕಾಗಿ ನಮ್ಮ ಯಜ್ಞಭೂಮಿಗೆ ಬನ್ನಿರಿ. ಬಂದನಂತರ ಯಜ್ಞವರ್ಧಕರಾದ ನೀವು ನಮ್ಮ ಯಜ್ಞದಲ್ಲಿ ಸೋಮಪಾನವನ್ನು ಮಾಡಿರಿ.

## English Translation.

Come, Mitra and Varuna, leaders of rites, propitiated by the oblation, and drink the Soma, augmenters of the sacred rite.

---

# ಅರವತ್ತೇಳನೆಯ ಸೂಕ್ತವು

## ಪೀಠಿಕೆ.

ಈ ಸೂಕ್ತದಲ್ಲಿಯೂ ಮುಂದಿನ ಏಳು ಸೂಕ್ತದಲ್ಲಿಯೂ ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ ಅಶ್ವಿನೀ ದೇವತೆಗಳ ವಿಷಯವನ್ನು ನಾವು ಹಿಂದೆ ಅನೇಕಾವರ್ತಿ ವಿವರಿಸಿದ್ದೇವೆ. ಈಗ ಇಲ್ಲಿ ಅವರ ಸೂಕ್ಷ್ಮಪರಿಚಯವನ್ನೂ, ಅವರು ತಮ್ಮನ್ನು ಸ್ತುತಿಸಿದವರಿಗೆ ಮಾಡಿದ ಸಹಾಯದ ವಿವರವನ್ನೂ ಮಾತ್ರ ಸೂಕ್ಷ್ಮವಾಗಿ ಹೇಳುತ್ತೇವೆ

ಅಶ್ವಿನೀದೇವತೆಗಳು ಇಬ್ಬರು ಅವರಲ್ಲಿ ಒಬ್ಬನಿಗೆ ದಸ್ರ ಎಂತಲೂ ಇನ್ನೊಬ್ಬನಿಗೆ ನಾಸತ್ಯ ಎಂತಲೂ ಹೆಸರಿರುವುದಾದರೂ ಇಬ್ಬರನ್ನೂ ಅನೇಕ ವೇಳೆ ದಸ್ರಾ ಅಥವಾ ನಾಸತ್ಯಾ ಎಂಬ ದ್ವಿವಚನಾಂತಶಬ್ದದಿಂದಲೇ ಕರೆಯ ಲಾಗಿದೆ

## ಅಶ್ವಿನೀದೇವತೆಗಳ ಉತ್ಪತ್ತಿ

ಯಾಸ್ಕರು ತಮ್ಮ ನಿರುಕ್ತದಲ್ಲಿ ಅಶ್ವಿನೀದೇವತೆಗಳ ವಿಷಯವಾಗಿ ಈ ರೀತಿ ಹೇಳಿದಾರೆ. ಈ ಅಶ್ವಿನೀ ದೇವತೆಗಳ ವಿಷಯದಲ್ಲಿ ಇವರು ಯಾರು ಎಂಬ ವಿಚಾರದಲ್ಲಿ ಆ ಕಾಲದಲ್ಲಿಯೂ ಮತಭೇದವಿದ್ದಂತೆ ಕಾಣುತ್ತದೆ

**ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಅಶ್ವೈರಶ್ವಿನಾ-ವಿತ್ಯೌರ್ಣವಾಭಃ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಸಾವಿತ್ಯೇಕೇ । ರಾಜಾನೌ ಪುಣ್ಯಕೃತಾವಿತ್ಯೇಕೇ ।**

(ನಿ ೧೨-೧)

ಈ ದೇವತೆಗಳಲ್ಲಿ ಒಬ್ಬನು ಉದಕದಿಂದಲೂ ಇನ್ನೊಬ್ಬನು ಪ್ರಕಾಶದಿಂದಲೂ ಸರ್ವತ್ರ ವ್ಯಾಪಿಸಿರುವುದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು ಎಂದು ಒಂದು ಮತ ಅಶ್ವಗಳಿಂದ ಯುಕ್ತರಾದುದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು ಎಂದು ಔರ್ಣವಾಭರೆಂಬುವರ ಮತ ಕೆಲವರ ಅಭಿಪ್ರಾಯದಂತೆ ಇವರು ದ್ಯಾವಾಪೃಥಿವಿಗಳು. ಮತ್ತೆ ಕೆಲವರು ಇವರನ್ನು ಅಹೋರಾತ್ರಿಗಳೆಂದು ಹೇಳುವರು ಮತ್ತೆ ಕೆಲವರ ಅಭಿಪ್ರಾಯದಂತೆ ಇವರೇ ಸೂರ್ಯ ಚಂದ್ರರು. ಐತಿಹಾಸಕಾರರ ಮತದಂತೆ ಪುಣ್ಯಕರ್ತರಾದ ಇಬ್ಬರು ರಾಜರುಗಳು ಈ ಪದವಿಯನ್ನು ಪಡೆದು ಅಶ್ವಿನೀ ದೇವತೆಗಳೆಂದು ಪ್ರಸಿದ್ಧರಾಗಿದಾರೆ. ಹೀಗೆ ಯಾಸ್ಕರು ಮತಭೇದಗಳನ್ನು ತಿಳಿಸಿ ಋ ಸಂ. ೧-೧೮೧ ಳ ಮತ್ತು ಅನಿರ್ದಿಷ್ಟವಾದ ಇನ್ನೊಂದು ಮಂತ್ರವನ್ನೂ ಉದಾಹರಿಸಿ ಈ ವಿಷಯದಲ್ಲಿರುವ ಸಂಶಯವನ್ನು ವ್ಯಕ್ತಪಡಿಸಿರುವರು.

**ವಸಾತಿಷು ಸ್ಮ ಚರಥೋಽಸಿತೌ ಪೇತ್ವಾವಿವ ।**
**ಕದೇದಮಶ್ವಿನಾ ಯುವಮಭಿ ದೇವಾ ಅಗಚ್ಛತಂ ॥**

ಎಂಬ ಮಂತ್ರದಲ್ಲಿ ಹೇಳಿರುವಂತೆ ಇವರಲ್ಲಿ ಒಬ್ಬನು ವಸಾತಿಪುತ್ರನು, ಎಂದರೆ ರಾತ್ರಿಪುತ್ರನು, ಇನ್ನೊಬ್ಬನು ಉಷಃ ಪುತ್ರನು ಎಂದಾಗುತ್ತದೆ. ಋಕ್ಸಂಹಿತಾವಾಕ್ಯಗಳಲ್ಲಿರುವ ವಿವರಣೆಗಳಿಂದ ಅಶ್ವಿನೀದೇವತೆಗಳ ಸ್ವರೂಪವನ್ನು ನಿಷ್ಕರ್ಷಿಸುವುದಾದರೆ ಕೆಳಗೆ ಉದಾಹರಿಸಿರುವ ಋಕ್ಕುಗಳ ಆಧಾರಗಳನ್ನು ವಿಮರ್ಶಿಸಬಹುದು.

**ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।**
**ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥**

**ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।**
**ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥**
(ಋ. ಸಂ ೧೦-೧೭-೧, ೨)

ತ್ವಷ್ಟೃವು ತನ್ನ ಮಗಳ ವಿವಾಹಕಾಲದಲ್ಲಿ ಸ್ವಯಂವರವನ್ನು ಏರ್ಪಡಿಸಿ ಸಕಲ ಪ್ರಪಂಚದ ಜನರನ್ನೂ ಅಲ್ಲಿ ಒಟ್ಟಾಗಿ ಸೇರುವಂತೆ ಮಾಡಿದನು ಯಮನ ಮಾತೆಯೂ ವಿವಸ್ವಂತನ ಪತ್ನಿಯೂ ಆದ ಸರಣ್ಯೂದೇವಿಯು ವಿವಾಹವಾದ ನಂತರ ಅದೃಶ್ಯಳಾದಳು ಎಂದರೆ ಅಮರ್ತ್ಯರಾದ ದೇವತೆಗಳು ಈ ಸರಣ್ಯೂದೇವಿಯು ಮರ್ತ್ಯನಾದ ವಿವಸ್ವಂತನನ್ನು ವಿವಾಹವಾದ್ದರಿಂದ ಅದು ಅನುಚಿತವೆಂದು ಭಾವಿಸಿ ಅವಳನ್ನು ಯಾರಿಗೂ ಕಾಣದಂತೆ ಮರೆಸಿ ಇಟ್ಟರು ಆಗ ಅವರು ಅವಳನ್ನು ಸವರ್ಣಳನ್ನಾಗಿ ಮಾಡಿ ವಿವಸ್ವಂತನಿಗೆ ಕೊಟ್ಟರು ಅನಂತರ ಅವಳು ಅಶ್ವಿನೀದೇವತೆಗಳನ್ನು ಹಡೆದಳು ಮತ್ತು ಪುತ್ರರಾದ ಅವರನ್ನು ಬಿಟ್ಟು ಹೋದಳು ಎಂದು ಈ ಋಕ್ಕುಗಳ ಅಭಿಪ್ರಾಯವು ಮತ್ತು

**ಯಮಾ ಚಿದತ್ರ ಯಮಸೂರಸೂತ ಜಿಹ್ವಾಯಾ ಅಗ್ರಂ ಪತದಾ ಹ್ಯಸ್ಥಾತ್ ।**
**ವಪೂಂಷಿ ಜಾತಾ ಮಿಥುನಾ ಸಚೇತೇ ತಮೋಹನಾ ತಪುಷೋ ಬುಧ್ನ ಏತಾ ॥**
(ಋ ಸಂ ೩-೩೯ ೩)

ಎಂಬ ಋಕ್ಕಿನಲ್ಲಿ ಅಶ್ವಿನೀದೇವತೆಗಳ ಮಾತೆಯು ಯಮಳರನ್ನು (ಅವಳಿ ಮಕ್ಕಳನ್ನು) ಹಡೆದಳು ಆ ಯಮಳರಿಬ್ಬರೂ ಸಹ ಸಶರೀರಿಗಳಾಗಿ ತಮಸ್ಸನ್ನು ನಾಶಮಾಡಿದರು ಎಂದು ಹೇಳಿದೆ ಅಂದರೆ ಸಾಯಣರು ತಮ್ಮ ಭಾಷ್ಯದಲ್ಲಿ **ಯಮಸೂಃ** ಎಂಬ ಪದಕ್ಕೆ **ಉಷೋಽಭಿಮಾನಿನೀ ದೇವತಾ ಅತ್ರ ಉಷಃಕಾಲೇ ಅಸೂತ** ಎಂದು ಅಶ್ವಿನೀದೇವತೆಗಳ ಮಾತೆಯು ಉಷೋದೇವತೆಯು ಎಂದು ಹೇಳಿರುವುದು ಸರ್ವಸಮ್ಮತವೆಂದು ಅನೇಕರು ಒಪ್ಪುತ್ತಾರೆ ಅಲ್ಲದೆ ತ್ವಷ್ಟೃವು ತನ್ನ ಮಗಳಾದ ಸರಣ್ಯೂದೇವಿಯನ್ನು ವಿವಸ್ವಂತನಿಗೆ ಮದುವೆಮಾಡಿಕೊಟ್ಟುದೂ ಅವರಿಂದ ಅಶ್ವಿನೀದೇವತೆಗಳು ಉತ್ಪನ್ನವಾದುದೂ ಬೃಹದ್ದೇವತೆಯಲ್ಲಿ ಈರೀತಿ ಹೇಳಿದೆ—

**ಅಭವನ್ಮಿಥುನಂ ತ್ವಷ್ಟುಃ ಸರಣ್ಯೂಸ್ತ್ರಿಶಿರಾಃ ಸಹ ।**
**ಸ ವೈ ಸರಣ್ಯೂಂ ಪ್ರಾಯಚ್ಛತ್ಸ್ವಯಮೇವ ವಿವಸ್ವತೇ ॥**
**ತತಃ ಸರಣ್ಯ್ವಾಂ ಜಜ್ಞಾತೇ ಯಮಯಮ್ಯೌ ವಿವಸ್ವತಃ ।**
**ತೌ ಚಾಪ್ಯುಭೌ ಯಮಾವೇವ ಜ್ಯಾಯಾಂಸ್ತಾಭ್ಯಾಂ ತು ವೈ ಯಮಃ ॥**
**ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯೂಃ ಸದೃಶೀಂ ಸ್ತ್ರಿಯಂ ।**
**ನಿಕ್ಷಿಪ್ಯ ಮಿಥುನಂ ತಸ್ಯಾಂ ಅಶ್ವಾ ಭೂತ್ವಾಪಚಕ್ರಮೇ ॥**
**ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ ।**
**ರಾಜರ್ಷಿರಭವತ್ಸೋಽಪಿ ವಿವಸ್ವಾನಿವ ತೇಜಸಾ ॥**
**ಸ ವಿಜ್ಞಾಯ ತ್ವಪಕ್ರಾಂತಾಂ ಸರಣ್ಯೂಮಶ್ವರೂಪಿಣೀಂ ।**
**ತ್ವಾಷ್ಟ್ರೀಂ ಪ್ರತಿ ಜಗಾಮಾಶು ವಾಜೀ ಭೂತ್ವಾ ಸಲಕ್ಷಣಃ ॥**
**ಸರಣ್ಯೂಶ್ಚ ವಿವಸ್ವಂತಂ ವಿದಿತ್ವಾ ಹಯರೂಪಿಣಂ ।**
**ಮೈಥುನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ**
**ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ ।**

**ಉಷಾಚಿಘ್ರಚ್ಚ ಸಾ ತ್ವಷ್ಟ್ರಾ ತಚ್ಛುಕ್ರಂ ಗರ್ಭಕಾಮ್ಯಯಾ ॥**
**ಆಘ್ರಾತಮಾತ್ರಾಚ್ಛುಕ್ರಾತ್ತು ಕುಮಾರೌ ಸಂಬಭೂವತುಃ ।**
**ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಿತಿ ॥**
**ಇತಿಹಾಸಮಿಮಂ ಯಾಸ್ಕಃ ಸರಣ್ಯೂದೇವತೇ ದ್ವ್ಯೃಚೇ ।**
**ವಿವಸ್ವತಶ್ಚ ತ್ವಷ್ಟುಶ್ಚ ತ್ವಷ್ಟೇತಿ ಸಹ ಮನ್ಯತೇ ॥**

(ಬೃ ದೇ ೬-೧೬೨ ರಿಂದ ೭-೬)

ತ್ವಷ್ಟೃವಿಗೆ ಸರಣ್ಯೂ ಎಂಬ ಕನ್ಯೆಯೂ ತ್ರಿಶಿರಸ್ಸೆಂಬ ಪುತ್ರನೂ ಇದ್ದರು ಅವನು ತನ್ನ ಮಗಳಾದ ಸರಣ್ಯೂವನ್ನು ವಿವಸ್ವಂತನಿಗೆ ವಿವಾಹ ಮಾಡಿಕೊಟ್ಟನು ಅನಂತರ ವಿವಸ್ವಂತನಿಗೆ ಪತ್ನಿಯಾದ ಸರಣ್ಯೂವಿನಲ್ಲಿ ಯಮ ಮತ್ತು ಯಮೀ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಇವರಿಬ್ಬರೂ ಒಂದಿಗೆ ಹುಟ್ಟಿದ ಅವಳಿಮಕ್ಕಳು. ಅವರಲ್ಲಿ ಯಮನೇ ಹಿರಿಯವನು ಒಂದುದಿನ ಪತಿಯಾದ ವಿವಸ್ವಂತನು ಇಲ್ಲದಿರುವ ವೇಳೆಯಲ್ಲಿ ಸರಣ್ಯೂವು ತನ್ನನ್ನೇ ಹೋಲುವ ಮತ್ತೊರ್ವ ಸ್ತ್ರೀಯನ್ನು ನಿರ್ಮಿಸಿ ತನ್ನ ಅವಳಿಮಕ್ಕಳನ್ನು ಅವಳ ವಶಕ್ಕೆ ಒಪ್ಪಿಸಿ ತಾನು ಅಶ್ವರೂಪವನ್ನು ಧರಿಸಿ ಆ ಸ್ಥಾನವನ್ನು ಬಿಟ್ಟು ವಿವಸ್ವಂತನಿಗೆ ತಿಳಿಯದಂತೆ ಬೇರೆ ಜಾಗಕ್ಕೆ ಹೋಗಿ ಅದೃಶ್ಯಳಾಗಿದ್ದಳು ಆದರೆ ವಿವಸ್ವಂತನಿಗ ಇದರ ಅರಿವು ಇಲ್ಲದೆ ಸರಣ್ಯೂವಿಗೆ ಪ್ರತಿನಿಧಿಯಾಗಿದ್ದ ಆ ಸ್ತ್ರೀವ್ಯಕ್ತಿಯೊಂದಿಗೆ ಸೇರಿದನು ಅದರ ಫಲವಾಗಿ ಮನುವಿನ ಉತ್ಪತ್ತಿಯಾಯಿತು- ಮನುವೂ ಸಹ ತಂದೆಯಂತೆಯೇ ತೇಜಸ್ವಿಯಾಗಿ ರಾಜರ್ಷಿಯಾದನು ಇವನ ಕೀರ್ತಿಯು ಸಕಲಲೋಕಗಳಲ್ಲಿಯೂ ಹರಡಿತು. ಕೆಲವುಕಾಲದಮೇಲೆ ವಿವಸ್ವಂತನಿಗೆ ನಿಜವಾದ ಅರಿವುಂಟಾಯಿತು ಸರಣ್ಯೂವು ಅಶ್ವರೂಪದಲ್ಲಿ ಹೊರಟುಹೋಗಿದ್ದಾಳೆಂದು ತಿಳಿದನಂತರ ತಾನೂ ಸಹ ಪುರುಷಾಶ್ವರೂಪವನ್ನು ಹೊಂದಿ ತ್ವಷ್ಟೃವಿನ ಪುತ್ರಿಯು ಹೋದ ಸ್ಥಳಕ್ಕೆ ಅವಳನ್ನು ಹಿಂಬಾಲಿಸಿ ಹೊರಟು ಅವಳನ್ನು ಸೇರಲು ಪ್ರಯತ್ನಿಸಿದನು ತನ್ನನ್ನು ಹಿಂಬಾಲಿಸಿ ವಿವಸ್ವಂತನೂ ಅಶ್ವರೂಪನಾಗಿ ಬಂದುದನ್ನು ತಿಳಿದ ಸರಣ್ಯೂವು ಅವನೊಂದಿಗೆ ಸಂಭೋಗಸುಖವನ್ನಿಚ್ಛಿಸಿದಳು. ಆಗ ವಿವಸ್ವಂತನು ಅವಳ ಇಚ್ಛೆಯನ್ನು ನೆರವೇರಿಸಿದನು. ಅವರ ಪರಸ್ಪರವಾದ ಉತ್ಸಾಹಕಾಲದಲ್ಲಿ ವಿವಸ್ವಂತನ ವೀರ್ಯವು ನೆಲದಮೇಲೆ ಬಿದ್ದಿತು ಆಗ ಸರಣ್ಯೂವು ಗರ್ಭಧಾರಣೇಚ್ಛೆಯಿಂದ ಅದನ್ನು ಆಘ್ರಾಣಿಸಿದಳು ಆ ಶುಕ್ರವನ್ನು (ರೇತಸ್ಸನ್ನು) ಮೂಸಿ ನೋಡಿದೊಡನೆಯೇ ಅವಳಿಗೆ ಗರ್ಭೋತ್ಪತ್ತಿಯುಂಟಾಗಿ ಅದರಿಂದ ನಾಸತ್ಯ, ದಸ್ರ ಎಂಬ ಇಬ್ಬರು ಯುವಕರು ಉತ್ಪನ್ನರಾದರು. ಅನಂತರ ಅವರು ಅಶ್ವಿನೀ ದೇವತೆಗಳು ಎಂಬ ಹೆಸರಿನಿಂದ ಕರೆಯಲ್ಪಟ್ಟು ಇವರ ಮಹಿಮೆಯು ಲೋಕಗಳಲ್ಲೆಲ್ಲಾ ಹರಡಿತು ಎಂದಿದೆ

## ಅಶ್ವಿನೀದೇವತೆಗಳ ರಥವರ್ಣನೆ ಇತ್ಯಾದಿ

ಅಶ್ವಿನೀದೇವತೆಗಳ ರಥವು ಸುವರ್ಣಮಯವಾದುದು. ಮತ್ತು ಅದರ ಚಕ್ರ ಅಚ್ಚು ಮೊದಲಾದ ಭಾಗಗಳೆಲ್ಲವೂ ಚಿನ್ನದಿಂದಲೇ ಮಾಡಲ್ಪಟ್ಟಿರುವುದು (ಋ ಸಂ. ೪-೪೪-೪, ೧-೧೮೦ ೧, ೮-೫-೨೯, ೮-೨೨೮ ಇತ್ಯಾದಿ). ಅದು ಒಂದು ವಿಲಕ್ಷಣವಾದ ರಥ. ಅದಕ್ಕೆ ಮೂರು ಚಕ್ರಗಳು, ಮೂರು ನೇಮಿಗಳು ಮತ್ತು ಬೇರೆ ಕೆಲವು ಭಾಗಗಳೂ ಮೂರು ಮೂರು ಇರುವುವು. ಅದು ಮನೋವೇಗವುಳ್ಳದ್ದು ಮೂರು ಚಕ್ರದ ರಥವೆಂದರೆ ಅವರೊಬ್ಬರದೇ. ಇನ್ನಾರಿಗೂ ಆ ವಿಧವಾದ ರಥವಿಲ್ಲ.

**ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।**
**ಕ್ವೈಕಂ ಚಕ್ರಂ ವಾಮಾಸೀತ್ ಕ್ವ ದೇಷ್ಟ್ರಾಯ ತಸ್ಥಥುಃ ॥**

(ಋ. ಸಂ. ೧೦-೮೫-೧೫)

ಎಂಬಲ್ಲಿ ಸೂರ್ಯಾದೇವಿಯ ವಿವಾಹಕ್ಕೆ ಹೋದಾಗ ಅವರ ರಥದ ಒಂದು ಚಕ್ರವು ಹಾಳಾಗಿ ಹೋಯಿತೆಂದು ಹೇಳಿದೆ

ಈ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿ ಒಂದು ಇತಿಹಾಸವಿದೆ--

**ಪ್ರಜಾಪತಿಃ ಸವಿತುಃ ದುಹಿತರಂ ಸೂರ್ಯಾಂ ಸೋಮಾಯ ರಾಜ್ಞೇ ಪ್ರಾಯಚ್ಛತ್ । ಯೇ ತ್ವನ್ಯೇ ದೇವಾಃ ತಾಂ ವರಯಿತುಮಾಗಚ್ಛನ್ । ತೇಭ್ಯೋ ವಿವಾಹಾದನಂತರಮೃಕ್ಸಹಸ್ರಮದದಾತ್ । ಯದೇತದಾಶ್ವಿನಂ ನಾಮ ತಸ್ಮಿನ್ದೇವಾ ವಿವಾದಮಕುರ್ವನ್ । ಮಮೇದಮಸ್ತು ಮಮೇದಮಸ್ತ್ವಿತಿ । ತೇಽಬ್ರುವನ್ । ಆಜಿಂ ಧಾವಾಮ । ಯೋ ನೋ ಜೇಷ್ಯತಿ ತಸ್ಯೇದಂ ಭವಿಷ್ಯತೀತಿ । ತೇಽಗ್ನೇರ್ಗೃಹಪತೇರಧ್ಯಾದಿತ್ಯಂ ಕಾಷ್ಠಾಂ ಕೃತ್ವಾಽಭಿಧಾವನ್ । ಕಾಷ್ಠಾ ಆಜ್ಯಂತ ಉಚ್ಯತೇ । ಅಶ್ವತರೀರಥೇನಾಗ್ನಿರಾಜಿಮಧಾವತ್ । ಗೋಭಿರುಣ್ಯೈರುಷಾಃ । ಹರಿರಥೇನೇಂದ್ರಃ । ಗರ್ದಭರಥೇನಾಶ್ವಿನಾ । ತತ್ರಾಶ್ವಿನಾವಜಯತಾಂ ॥**

ಬ್ರಹ್ಮನು ಸವಿತೃದೇವನ ಸೂರ್ಯಾ ಎಂಬ ಹೆಸರುಳ್ಳ ಮಗಳನ್ನು ರಾಜನಾದ ಸೋಮನಿಗೆ ವಿವಾಹಮಾಡಿಕೊಟ್ಟನು. ಆಗ ಇತರ ದೇವತೆಗಳು ಅವಳನ್ನು ವರಿಸುವುದಕ್ಕಾಗಿ ಬಂದರು ವಿವಾಹವಾದನಂತರ ಅವನು ಅವರಿಗೆ ಒಂದುಸಾವಿರ ಋಕ್ಕುಗಳನ್ನು ಕೊಟ್ಟನು ಈ ಋಕ್ಕುಗಳಿಗೆ ಆಶ್ವಿನಋಕ್ಕುಗಳೆಂಬ ಹೆಸರು ಪ್ರಸಿದ್ಧವಾಯಿತು **ಈ ಋಕ್ಕು**ಗಳನ್ನು ಅಲ್ಲಿಗೆ ಬಂದಿದ್ದ ದೇವತೆಗಳು ನನಗೆ ಬೇಕು, ತನಗೆ ಬೇಕು ಎಂದು ಪರಸ್ಪರ ವಿವಾದಮಾಡಿದರು ಅನಂತರ ಅವರು ಒಂದು ಸ್ಪರ್ಧೆಯನ್ನು ಏರ್ಪಡಿಸಿ ಅದರಲ್ಲಿ ಗೆದ್ದವರು ಈ ಋಕ್ಕುಗಳನ್ನು ಪಡೆಯಬಹುದೆಂದು ತಮ್ಮಲ್ಲಿಯೇ ನಿರ್ಣಯಮಾಡಿಕೊಂಡರು ಅನಂತರ ಅವರು ಗೃಹಪತಿಯಾದ ಅಗ್ನಿಯ ಬಳಿಯಿಂದ ಆದಿತ್ಯನವರೆಗೆ ಹೋಗುವುದೇ ಸ್ಪರ್ಧೆಯೆಂದೂ ಅದರಲ್ಲಿ ಯಾರು ಮೊದಲು ಹೋಗಿ ಸೇರುವರೋ ಅವರೇ ಗೆದ್ದವರೆಂದು ನಿಶ್ಚಯಿಸಲಾಗುವುದೆಂದು ನಿಶ್ಚಯಿಸಿದರು ಆಗ ಅಗ್ನಿಯು ಹೇಸರಕತ್ತೆಯನ್ನು ಕಟ್ಟಿದ ರಥದಿಂದ ಓಡಲು ಸಿದ್ಧನಾದನು ಉಷೋದೇವಿಯು ಕೆಂಪುಬಣ್ಣದ ಗೋವುಗಳನ್ನು ಕಟ್ಟಿದ ರಥದಲ್ಲಿ ಕುಳಿತು ಬಂದಳು ಇಂದ್ರ ತನ್ನ ಹರೀ ಎಂಬ ಕುದುರೆಗಳನ್ನು ಕಟ್ಟಿದ ರಥವನ್ನು ಹತ್ತಿ ಅಲ್ಲಿಗೆ ಬಂದರು ಅಶ್ವಿನೀದೇವತೆಗಳು ರಾಸಭಾ ಎಂಬ ಕತ್ತೆಗಳನ್ನು ಕಟ್ಟಿದ ತಮ್ಮ ರಥವನ್ನು ಹತ್ತಿ ಅಲ್ಲಿಗೆ ಬಂದರು. ಅನಂತರ ಅವರಲ್ಲರೂ ತಮ್ಮ ತಮ್ಮ ವಾಹನಗಳನ್ನೇರಿ ನಿರ್ದಿಷ್ಟಸ್ಥಳವನ್ನು ಸೇರುವುದಕ್ಕಾಗಿ ಓಡುವಾಗ ಅಶ್ವಿನೀದೇವತೆಗಳಿಗೆ ಜಯವು ಲಭಿಸಿತು ಪಣವಾದ ಒಂದುಸಾವಿರ ಋಕ್ಕುಗಳು ಅವರಿಗೇ ದೊರೆತವು ಆದ್ದರಿಂದಲೇ ಆ ಋಕ್ಕುಗಳಿಗೆ ಆಶ್ವಿನಋಕ್ಕುಗಳೆಂಬ ಹೆಸರು ಪ್ರಸಿದ್ಧವಾಯಿತು ಎಂಬ ಇತಿಹಾಸದಲ್ಲಿ ಅಶ್ವಿನೀದೇವತೆಗಳ ರಥದ ಶ್ರೇಷ್ಠತೆಯು ಉಕ್ತವಾಗಿದೆ. **ಅಶ್ವಿನಾ** ಎಂಬ ಪದಕ್ಕೆ ಅಶ್ವ (ಕುದುರೆ)ವುಳ್ಳವರು ಎಂದರ್ಥವಾದರೂ ಅವರು ಅಶ್ವಾರೋಹಿಗಳಾದುದರಿಂದ ಆ ಹೆಸರು ಅವರಿಗೆ ಬಂದಿದೆ ಎಂದು ಎಲ್ಲಿಯೂ ಹೇಳಿಲ್ಲ. ಅವರ ರಥವನ್ನು ಎಳೆಯುವ ಅಶ್ವಗಳು (ಋ. ಸಂ. ೧ ೧೧೭-೨) ಪಕ್ಷಿಗಳು (೬ ೬೩-೬) ಹಂಸಗಳು (೪-೪೫-೪) ಗರುಡಪಕ್ಷಿಗಳು (೧ ೧೧೮-೪) ಶ್ಯೇನರೂಪವಾದ ಅಶ್ವಗಳು (೮ ೫-೭) ಎಂದು ಹೇಳಿದೆ. ಆದರೆ ಅವರ ಮುಖ್ಯವಾಹನವು ಯಾಸ್ಕರು ಹೇಳಿರುವಂತೆ ರಾಸಭಾವಶ್ವಿನೋಃ (ನಿ ೨-೨೮) ಅಶ್ವಿನೀದೇವತೆಗಳ ವಾಹನಗಳು ಕತ್ತೆಗಳು ಎಂದು

**ಕದಾ ಯೋಗೋ ವಾಜಿನೋ ರಾಸಭಸ್ಯ ಯೇನ ಯಜ್ಞಂ ನಾಸತ್ಯೋಪಯಾಥಃ**

(ಋ. ಸಂ. ೧-೩೪-೯)

ತದ್ರಾಸಭೋ ನಾಸತ್ಯಾ ಸಹಸ್ರಮಾಜಾ ಯಮಸ್ಯ ಪ್ರಧನೇ ಜಿಗಾಯ ||

(ಋ. ಸಂ. ೧ ೧೧೬-೨)

ಇತ್ಯಾದಿ ಋಕ್ಕುಗಳಲ್ಲಿ ರಾಸಭವೇ (ಕತ್ತೆಯೇ) ಅಶ್ವಿನಿದೇವತೆಗಳ ವಾಹನವೆಂದು ಸ್ಪಷ್ಟವಾಗಿ ಹೇಳಿದೆ.

ಅವರನ್ನು ಯಾವಾಗಲೂ ಯಜ್ಞಮಾಡುವವರು ಪ್ರಾತಃಕಾಲಗಳಲ್ಲಿಯೇ ಆಹ್ವಾನಮಾಡುತ್ತಾರೆ ಸೂರ್ಯಪುತ್ರಿಯೊಡನೆ ಇವರಿಗೆ ಸಂಬಂಧವಿದೆ ಸೂರ್ಯೆಯೇ ಅವರನ್ನು ವರಿಸಿದಳು (ಋ. ಸಂ. ೭-೬೯-೪) ಅವರಿಬ್ಬರೂ ಅವಳ ಪತಿಯರು (೪-೪೩-೬) ಸೂರ್ಯೆಯು ಅವರ ರಥವನ್ನು ಏರಿದಳು (ಋ. ಸಂ ೫ ೭೩-೫, ೮-೮-೧೦) ಸೂರ್ಯನ ಪುತ್ರಿಯು ಅವರ ರಥವನ್ನು ಏರುತ್ತಾಳೆ (ಋ ಸಂ ೧-೩೪-೫, ೧-೧೧೬-೧೭, ೧-೧೧೮-೫, ೬-೬೩-೫) ಅವರು ಸೂರ್ಯೆಯನ್ನು ತಮ್ಮವಳೆಂದು ಭಾವಿಸುತ್ತಾರೆ (೭-೬೮ ३) ಮತ್ತು ಅವಳು ರಥದಲ್ಲಿ ಅವರ ಜತೆಯಲ್ಲಿ ಹೋಗುತ್ತಾಳೆ (೮-೨೯-೮) ಇತ್ಯಾದಿ ವರ್ಣನೆಗಳಿವೆ

## ಅಶ್ವಿನೀದೇವತೆಗಳು ಮಾಡಿದ ಸಹಾಯಗಳು

ಅವರು ಜನರಿಗೆ ಕಷ್ಟದಲ್ಲಿ ನೆರವಾಗುತ್ತಾರೆ ಎಂಬುದಕ್ಕೆ ಅನೇಕ ಆಖ್ಯಾಯಿಕೆಗಳಿವೆ ಇವುಗಳನ್ನು ಆಯಾ ಸಂದರ್ಭದಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ ಆದರೆ, ಅವುಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ಇಲ್ಲಿ ವಿವರಿಸಿದೇವೆ—

ಜುಜುರುಷೋ ನಾಸತ್ಯೋತ ವವ್ರಿಂ ಪ್ರಾಮುಂಚತಂ ದ್ರಾಪಿಮಿವ ಚ್ಯವಾನಾತ್ ।
ಪ್ರಾತಿರತಂ ಜಹಿತಸ್ಯಾಯುರ್ದಸ್ರಾದಿತ್ಪತಿಮಕೃಣುತಂ ಕನೀನಾಂ ||

(ಋ. ಸಂ ೧-೧೧೬-೧೦)

ಚ್ಯವನನೆಂಬ ಋಷಿಯು ಬಹಳ ವೃದ್ಧನಾಗಿ ದೇಹವು ಶಿಥಿಲವಾಗಿ ಶಕ್ತಿಯಿಲ್ಲದಿರುವಾಗ ಅವನ ಜನರು ಅವನನ್ನು ತ್ಯಜಿಸಿದರು. ಈ ಋಷಿಯು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು ಇವನ ಶಿಥಿಲವಾದ ದೇಹವನ್ನು ಕಳೆದು ಯುವಕನನ್ನಾಗಿ ಮಾಡಿ ಇವನ ಪತ್ನಿಗೆ ಪ್ರಿಯನನ್ನಾಗಿ ಮಾಡಿದರು ಮತ್ತು ಅವನ ಆಯುಸ್ಸನ್ನು ಹೆಚ್ಚಿಸಿದರು ಎಂದಿದೆ. ಇವಲ್ಲದೆ—

ಯುವಂ ಚ್ಯವನಮಶ್ವಿನಾ ಜರಂತಂ ಪುನರ್ಯುವಾನಂ ಚಕ್ರಥುಃ ಶಚೀಭಿಃ ।

(ಋ ಸಂ. ೧-೧೧೭ ೧೩)

ನಿಷ್ಟೌಗ್ರ್ಯಂ ಪಾರಯಥಃ ಸಮುದ್ರಾತ್ಪುನಶ್ಚ್ಯವಾನಂ ಚಕ್ರಥುರ್ಯುವಾನಂ ।

(ಋ. ಸಂ ೧-೧೧೮-೬)

ಪ್ರ ಚ್ಯವಾನಾಜ್ಜುಜುರುಷೋ ವವ್ರಿಮತ್ಕಂ ನ ಮುಂಚಥಃ ।
ಯುವಾ ಯದೀ ಕೃಥಃ ಪುನರಾ ಕಾಮಮೃಣ್ವೇ ವಧ್ವಃ ||

(ಋ ಸಂ. ೫-೭೪-೫)

ಉತ ತ್ಯದ್ವಾಂ ಜುರತೇ ಅಶ್ವಿನಾ ಭೂಚ್ಚ್ಯವಾನಾಯ ಪ್ರತೀತ್ಯಂ ಹವಿರ್ದೇ ।

(ಋ. ಸಂ ೭-೬೮ ೬)

ಯುವಂ ಚ್ಯವಾನಂ ಜರಸೋಽಮುಮುಕ್ತಂ ನಿ ಪೇದವ ಊಹಥುರಾಶುಮಶ್ವಂ ।

(ಋ. ಸಂ ೭ ೭೧-೫)

**ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ ।**

(ಋ ಸಂ ೧೦-೩೯-೪)

ಈ ಋಕ್ಕುಗಳಲ್ಲಿಯೂ ವೃದ್ಧನಾದ ಚ್ಯವನಋಷಿಯನ್ನು ಯುವಕನನ್ನಾಗಿ ಮಾಡಿದ ವಿಷಯದ ವರ್ಣನೆ ಇದೆ ಶತಪಥಬ್ರಾಹ್ಮಣದಲ್ಲಿಯೂ ಈ ವಿಷಯಕವಾದ ವಿಸ್ತಾರವಾದ ಇತಿಹಾಸವಿದೆ ಅದರಂತೆಯೇ.

**ಯುವಂ ವಿಪ್ರಸ್ಯ ಜರಣಾಮುಪೇಯುಷಃ ಪುನಃ ಕಲೇರಕೃಣುತಂ ಯುವದ್ವಯಃ ।**

(ಋ ಸಂ ೧೦ ೩೯ ೮)

ಎಂಬ ಋಕ್ಕಿನಲ್ಲಿ ಕಲಿ ಎಂಬುವನ ಮುಪ್ಪನ್ನು ಹೋಗಲಾಡಿಸಿ ಅವನನ್ನು ಯುವಕನನ್ನಾಗಿ ಮಾಡಿದ ವಿಷಯದ ಪ್ರಸ್ತಾಪವಿದೆ

**ಯಾಭಿರ್ವಮ್ರಂ ವಿಪಿಪಾನಮುಪಸ್ತುತಂ ಕಲಿಂ ಯಾಭಿರ್ವಿತ್ತಜಾನಿಂ ದುವಸ್ಯಥಃ ॥**

(ಋ. ಸಂ ೧-೧೧೨-೧೫)

ಎಂಬಲ್ಲಿ ಮೇಲೆ ಹೇಳಿದ ಕಲಿ ಎಂಬುವನು ಪತ್ನಿಯನ್ನು ಪರಿಗ್ರಹಿಸಿ ಮುದುಕನಾದಾಗ ಅವನಿಗೆ ತಮ್ಮ ಸೇವನ್ನು ನೀಡಿ ಅನೇಕ ಸಹಾಯಗಳನ್ನು ಮಾಡಿದರೆಂದು ಹೇಳಿದೆ.

ಮತ್ತು ಅವರು ವಿಮದನ ಪತ್ನಿಯರಾದ ಯುವತಿಯರಿಗೋಸ್ಕರ ಒಂದು ರಥವನ್ನೂ (೧-೧೧೨-೧೯) ಅಥವಾ ಅವನಿಗೆ ಓರ್ವ ಪತ್ನಿಯನ್ನೂ (೧-೧೧೬-೧) ಅನುಗ್ರಹಿಸಿದರು ಅವಳು ಪುರುಮಿತ್ರನ ಪುತ್ರಿಯಾಗಿದ್ದಳೆಂದು ತೋರುತ್ತದೆ ( ಋ ಸಂ ೧ ೧೧೭ ೨೦ , ೧೦-೩೯ ೭) ಮತ್ತು ಅವಳ ಹೆಸರು ಕಮದ್ಯು (೧೦ ೬೫-೧೨)

ಕೃಷ್ಣ ಎಂಬುವನ ಮಗನಾದ ವಿಶ್ವಕನಿಗೆ ಕಳೆದುಹೋಗಿದ್ದ ಅವನ ಮಗನನ್ನು ತಂದು ಒಪ್ಪಿಸಿದರು (ಋ. ಸಂ. ೧-೧೧೬-೨೩, ೧೦-೬೫-೧೨) ಮತ್ತು ಋ. ಸಂ ೮-೮೬ ೧-೩,೫ನೆಯ ಋಕ್ಕುಗಳಲ್ಲಿ ವಿಶ್ವಕ ಮತ್ತು ವಿಷ್ಣಾಪುಗಳ ಹೆಸರುಗಳು ಸೂಚಿತವಾಗಿವೆ

ಭುಜ್ಯುವಿನ ಕಥೆಯು ಪದೇಪದೇ ಹೇಳಲ್ಪಟ್ಟಿದೆ ಭುಜ್ಯುವು ತುಗ್ರ ಎಂಬ ರಾಜನ ಪುತ್ರನು ಇವನು ಸಮುದ್ರಯಾನಮಾಡುತ್ತಿರುವಾಗ ಮುಳುಗಿಹೋಗುತ್ತಿರಲು ಅಲೆಗಳ ಮಧ್ಯದಲ್ಲಿ ಭುಜ್ಯುವು ಒಂದು ಮರದ ತುಂಡನ್ನು ಹಿಡಿದುಕೊಂಡು ತೇಲಾಡುತ್ತಿದ್ದನು ಆಗ ಅವನು ಅಶ್ವಿನೀದೇವತೆಗಳನ್ನು ಸ್ಮರಿಸಿದನು ಆಳವೇ ತಿಳಿಯದ ಮಹಾಸಾಗರದಲ್ಲಿ ನೂರು ಹುಟ್ಟುಗಳಿಂದ ಕೂಡಿದ ನೌಕೆಯಲ್ಲಿ ಅವನನ್ನು ಕೂರಿಸಿಕೊಂಡು ಅಶ್ವಿನೀದೇವತೆಗಳು ಅವನ ಮನೆಗೆ ಕರೆದುಕೊಂಡು ಹೋದರು ಆಕಾಶದಲ್ಲಿ ಹಾರುವಂತೆ ತೋರುತ್ತಿದ್ದ, ಒಡಕುಗಳಿಲ್ಲದ ಹಡಗಿನಲ್ಲಿ ಅಥವಾ ರೆಕ್ಕೆಗಳುಳ್ಳ ನಾಲ್ಕು ದೋಣಿಗಳಲ್ಲಿ, ಅಥವಾ ನೂರು ಪಾದಗಳು ಮತ್ತು ಆರು ಕುದುರೆಗಳುಳ್ಳ ಹಾರುವ ಮೂರು ರಥಗಳಲ್ಲಿ ಅಥವಾ ಮನೋವೇಗವುಳ್ಳ ತಮ್ಮ ರಥದಲ್ಲಿ ವೇಗಶಾಲಿಗಳಾಗಿ ಹಾರಿಹೋಗುವ ತಮ್ಮ ಅಶ್ವಗಳ ಸಹಾಯದಿಂದ ಭುಜ್ಯುವನ್ನು ಕುಳ್ಳಿರಿಸಿಕೊಂಡು ಒಂದು ಅವನ ಮನೆಗೆ ಸೇರಿಸಿದರು. (೧-೧೧೬-೩,೪,೫, ೧-೧೧೭-೧೪,೧೫, ೧-೧೮೨-೫,೬,೭, ೭-೬೮-೭; ೧ ೧೧೨ ೬,೨೦, ೧ ೧೧೮-೬, ೧ ೧೧೯-೪, ೧ ೧೫೮-೩, ೬-೬೨-೬; ೭-೬೯-೭ ೮-೫-೨೨, ೧೦-೩೯-೪, ೧೦ ೪೦-೭, ೧೦-೬೫ ೧೨, ೧೦ ೧೪೩-೫)

ಯುದ್ಧದಲ್ಲಿ **ವಿಶ್ಪಲಾ** ಎಂಬ ಸ್ತ್ರೀಯ ಕಾಲು ಕತ್ತರಿಸಿಹೋಗಲು ಅವಳು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದಾಗ ಅವರು ಬಂದು ಅವಳಿಗೆ ಕಬ್ಬಿಣದ ಕಾಲನ್ನು ಒದಗಿಸಿಕೊಟ್ಟು ಕಾಪಾಡಿದರೆಂದು ಋ. ಸಂ ೧-೧೧೨-೧೦, ೧-೧೧೬ ೧೫; ೧ ೧೧೭-೧೧, ೧-೧೧೮-೮, ೧೦ ೩೯-೮ ಎಂಬ ಋಕ್ಕುಗಳಲ್ಲಿ ಹೇಳಿದೆ.

ಅಶ್ವಿನೀದೇವತೆಗಳ ವಾಹನವಾದ ರಾಸಭವು **ತೋಳನ** ರೂಪದಲ್ಲಿದ್ದಾಗ **ಋಜ್ರಾಶ್ವ** ಎಂಬುವನು ತಾನು ಕಾಯುತ್ತಿದ್ದ ಕುರಿಗಳ ಮಂದೆಯಲ್ಲಿ ಒಂದುನೂರು ಕುರಿಗಳನ್ನು ಕತ್ತರಿಸಿ ಆ ತೋಳಕ್ಕೆ ಆಹಾರವಾಗಿ ಕೊಟ್ಟನು. ಅವರಿಂದ ಅವನ ತಂದೆಗೆ ಕೋಪಬಂದು ಋಜ್ರಾಶ್ವನ ಕಣ್ಣನ್ನು ಕೀಳಿಸಿ ಕುರುಡನನ್ನಾಗಿ ಮಾಡಿದನು. ಆಗ ತೋಳವು ಅಶ್ವಿನೀದೇವತೆಗಳನ್ನು ಸ್ತುತಿಸಿತು. ಅವರು ತುಷ್ಟರಾಗಿ ಋಜ್ರಾಶ್ವನಿಗೆ ಕಣ್ಣನ್ನು ಕೊಟ್ಟರು. (ಋ. ಸಂ. ೧-೧೧೬-೧೬ , ೧-೧೧೭-೧೭,೧೮) ಋ. ಸಂ. ೧-೧೦೦ ೧೭ನೆಯ ಋಕ್ಕಿನಲ್ಲಿ ಋಜ್ರಾಶ್ವನೆಂಬುವನು ಇಂದ್ರನನ್ನು ಸ್ತೋತ್ರ ಮಾಡಿದ ವಿಷಯವಿದೆ.

**ಪಾರಾವೃಜ**ನೆಂಬುವನು ಕುರುಡನೂ ಕುಂಟನೂ ಆಗಿದ್ದನು ಮತ್ತು ಅವನು ಜಾತಿಯಲ್ಲಿ ಸೇರಿಸಲ್ಪಟ್ಟಿರಲಿಲ್ಲ. ಅವನಿಗೆ ಅಶ್ವಿನೀದೇವತೆಗಳು ನೋಡುವ ದೃಷ್ಟಿಯನ್ನೂ, ನಡೆಯುವ ಶಕ್ತಿಯನ್ನೂ ಕೊಟ್ಟರು ಎಂದರೆ ಕಣ್ಣುಗಳನ್ನೂ ಕಾಲುಗಳನ್ನೂ ಕೊಟ್ಟು ಅನುಗ್ರಹಿಸಿದರು (ಋ. ಸಂ. ೧-೧೧೨-೮) ಪಾರಾವೃಜನೆಂಬುವನ ಹೆಸರು ಇಂದ್ರನ ವಿಷಯದಲ್ಲಿ ಪ್ರಸ್ತಾಪಬಂದಾಗ ಋ ಸಂ. ೨-೧೩-೧೨, ೨ ೧೫-೭ ಎಂಬ ಋಕ್ಕುಗಳಲ್ಲಿ ಸೂಚಿತವಾಗಿರುವುದು.

**ರೇಭ**ನೆಂಬ ಋಷಿಯನ್ನು ದುಷ್ಟರು ಕೈಕಾಲು ಕಟ್ಟಿಹಾಕಿ ಒಂದು ಪಾಳುಭಾವಿಯಲ್ಲಿ ಹಾಕಿದ್ದರು ಒಂಭತ್ತು ಹಗಲು ಹತ್ತು ರಾತ್ರಿಗಳ ಪರ್ಯಂತರ ಅವನು ಅಲ್ಲಿಯೇ ಬಿದ್ದಿದ್ದು ಸಾಯುವ ಸ್ಥಿತಿಯಲ್ಲಿದ್ದನು. ಅವನನ್ನು ಅಶ್ವಿನೀದೇವತೆಗಳು ಸೋಮರಸವನ್ನು ಸೌಟನಿಂದ ಎತ್ತುವಂತೆ ಭಾವಿಯಿಂದ ಮೇಲಕ್ಕೆತ್ತಿ ಜೀವದಾನ ಮಾಡಿದರು (ಋ. ಸಂ ೧-೧೧೨-೫ , ೧-೧೧೬-೨೪ , ೧-೧೧೭ ೧೨ , ೧-೧೧೭-೪ , ೧-೧೧೮-೬ , ೧ ೧೧೯ ೬ , ೧೦-೩೯-೯)

**ವಂದನ** ಎಂಬುವನೂ ಇದೇರೀತಿ ದುಷ್ಟರಿಂದ ಅಪಹರಿಸಲ್ಪಟ್ಟು ಕತ್ತಲೆಯಪ್ರದೇಶದಲ್ಲಿ (ಹಳ್ಳದಲ್ಲಿ) ಹಾಕಿದ್ದಾಗ ಅವನನ್ನು ಅಶ್ವಿನೀದೇವತೆಗಳು ಅಪಾಯದಿಂದ ಪಾರುಮಾಡಿ ಅವನನ್ನು ಬೆಳಕಿಗೆ ತಂದರು. (ಋ ಸಂ. ೧-೧೧೨-೫ , ೧-೧೧೬ ೧೧ , ೧-೧೧೭-೫ , ೧-೧೧೮-೬ , ೧೦-೩೯-೮ , ೧-೧೧೯-೬,೭)

ಪಜ್ರವಂಶೀಯನಾದ **ಕಕ್ಷೀವಂತ**ನಿಗೆ ಯಥೇಚ್ಛವಾಗಿ ವರಗಳನ್ನು ಕೊಟ್ಟು ನೂರಾರು ಜಾಡಿತುಂಬ ಮದ್ಯ ಅಥವಾ ಮಧುವನ್ನು ಜರಡಿಯಿಂದ ಸುರಿಯುವಂತೆ ಕುದುರೆಯ ಕಾಲು ಗೊರಸಿನಿಂದ ಸುರಿಸಿದರು (ಋ ಸಂ. ೧-೧೧೬ -೭ , ೧-೧೧೭-೬)

**ಅತ್ರಿ** ಎಂಬ ಋಷಿಯು ದ್ವೇಷಾಸೂಯೆಯಿಂದ ಅಂಧಕಾರಾವೃತವಾದ, ಮತ್ತು ಬೆಂಕಿಯಿಂದ ಉರಿಯುತ್ತಿರುವ ದೊಡ್ಡ ಕಮರಿಯಲ್ಲಿ ಹಾಕಲ್ಪಟ್ಟು ತೊಂದರೆಪಡುತ್ತಿರುವಾಗ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರುಬಂದು ಬೆಂಕಿಯನ್ನು ಹಿಮದಿಂದ ಶಮನಮಾಡಿ ಆಹಾರಾದಿಗಳನ್ನು ಕೊಟ್ಟು ಸಂತೈಸಿ ಅವನನ್ನು ಆ ಅವಸ್ಥೆಯಿಂದ ಪಾರು ಮಾಡಿದರು (ಋ. ಸಂ. ೧-೧೧೨-೭ ; ೧-೧೧೬-೮ , ೧-೧೧೭-೩ , ೧-೧೧೮-೭ , ೧-೧೧೯-೬ , ೫-೭೮-೪, ೫, ೬ , ೭-೭೧ ೫ : ೮-೬೨- ೩, ೭, ೮, ೯ , ೧೦-೩೯-೯) ಋ. ಸಂ. ೧೦-೮೦-೩ನೆಯ ಋಕ್ಕಿನಲ್ಲಿ ಅತ್ರಿಯನ್ನು ಅಗ್ನಿಯು ರಕ್ಷಿಸಿದನೆಂದು ಸೂಚಿತವಾಗಿದೆ.

**ವಧ್ರಿಮತೀ** ಎಂಬುವಳು ತನಗೆ ಮಕ್ಕಳಿಲ್ಲದೆ ಬಂಜೆಯಾಗಿದ್ದುದರಿಂದ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಅವಳಿಗೆ ಹಿರಣ್ಯಹಸ್ತನೆಂಬ ಓರ್ವ ಪುತ್ರನನ್ನು ಅನುಗ್ರಹಿಸಿದರು. (ಋ. ಸಂ. ೧-೧೧೬-೧೩ , ೧-೧೧೭-೨೪ , ೬-೬೨-೭, ೧೦-೩೯-೭)

**ಘೋಷಾ** ಎಂಬ ಸ್ತ್ರೀಯು ಮದುವೆಯಾಗದೆ ತನ್ನ ತಂದೆಯ ಮನೆಯಲ್ಲಿಯೇ ಇದ್ದುದರಿಂದ ಅವಳ ಪ್ರಾರ್ಥನೆಯಂತೆ ಅಶ್ವಿನೀದೇವತೆಗಳು ಅವಳಿಗೆ ಯೋಗ್ಯನಾದ ಪತಿಯನ್ನು ಅನುಗ್ರಹಿಸಿದರು. (ಋ ಸಂ. ೧-೧೧೭-೭ ೧೦-೩೯-೩,೬, ೧೦ ೪-೫). ಋ. ಸಂ. ೧-೧೧೭ ೭ನೇ ಋಕ್ಕಿನ ಭಾಷ್ಯದಲ್ಲಿ ಈ ಘೋಷಾ ಎಂಬ ಸ್ತ್ರೀಯು ಕುಷ್ಠರೋಗದಿಂದ ನರಳುತ್ತಿದ್ದಳೆಂದೂ ಆ ರೋಗವನ್ನು ಅಶ್ವಿನೀದೇವತೆಗಳು ವಾಸಿಮಾಡಿದರೆಂದೂ ಸಾಯಣರು ಹೇಳಿದ್ದಾರೆ ೧೦ನೆಯ ಮಂಡಲದಲ್ಲಿ ಈ ಘೋಷಾ ಎಂಬ ಸ್ತ್ರೀಯಿಂದ ದೃಷ್ಟವಾದ ಎರಡು ಸೂಕ್ತಗಳಿವೆ (೩೯,೪೦ ಸೂಕ್ತಗಳು)

**ಶಯು** ಎಂಬುವನ ಹಸುವು ಮುದಿಯಾಗಿ ಕರುವನ್ನು ಹಾಕದಿರುವಾಗ ಅಶ್ವಿನೀದೇವತೆಗಳು ಅದಕ್ಕೆ ಹಾಲುಕೊಡುವ ಶಕ್ತಿಯನ್ನುಂಟುಮಾಡಿದರು (ಋ. ಸಂ ೧-೧೧೬-೨೨, ೧-೧೧೭-೨೦, ೧ ೧೧೮-೮, ೧-೧೧೯-೬, ೧-೩೯-೧೩)

**ಪೇದು** ವೆಂಬ ರಾಜನಿಗೆ ಅಶ್ವಿನೀದೇವತೆಗಳು ಇಂದ್ರನಂತೆ ಅತಿಬಲಶಾಲಿಯಾದ ಒಂದು ಬಿಳೀಕುದುರೆಯನ್ನು ಕೊಟ್ಟರೆಂದೂ, ಅದರಿಂದ ಅವನು ತನ್ನ ಶತ್ರುಗಳನ್ನು ಗೆದ್ದು ಬಹಳವಾದ ವಸ್ತುವಾಹನಾದಿಗಳನ್ನು ಪಡೆದನೆಂದೂ ಹೇಳಿದೆ (ಋ ಸಂ ೧ ೧೧೬-೬, ೧-೧೧೭-೯, ೧-೧೧೮-೯, ೧-೧೧೯ ೧೦, ೭-೭೧-೫, ೧೦-೩೯-೧೦)

ಇದಲ್ಲದೆ ಒಂದನೇ ಮಂಡಲದ ೩,೧೧೬,೧೧೭,೧೧೮,೧೧೯ನೆಯ ಸೂಕ್ತಗಳಲ್ಲಿ ಹೇಳಿರುವಂತೆ ಈ ಅಶ್ವಿನೀದೇವತೆಗಳು ಅನೇಕ ಮನುಷ್ಯರಿಗೆ ಸಹಾಯವನ್ನು ಮಾಡಿರುವುದಲ್ಲದೆ ಪಶುಪ... ...ಗೂ ಉಪಕಾರ ಮಾಡಿರುವರೆಂದು ಹೇಳಿದೆ ಈ ಸಂದರ್ಭದಲ್ಲಿ—ಒಂದು ತೋಳವು ಒಂದು ಗುಬ್ಬಚ್ಚಿಯನ್ನು ಕಚ್ಚಿಕೊಂಡು ಹೋಗುತ್ತಿರುವಾಗ ಆ ಗುಬ್ಬಚ್ಚಿಯ ಪ್ರಾರ್ಥನೆಯಂತೆ ಅದನ್ನು ಆ ತೋಳನ ಬಾಯಿಂದ ಬಿಡಿಸಿ ಕಾಪಾಡಿದರೆಂದು ಋ ಸಂ ೧-೧೧೬ ೧೪, ೧-೧೧೭-೧೬, ೧-೧೧೮-೮, ೧೦-೩೯-೧೩ ಎಂಬ ಋಕ್ಕುಗಳಲ್ಲಿ ಹೇಳಿದೆ ಈ ವಿಷಯಗಳಲ್ಲದೆ ಅಶ್ವಿನೀದೇವತೆಗಳ ಸಂಬಂಧವಾದ ಇನ್ನೂ ಅನೇಕ ವಿಷಯಗಳಿರುವವು ಅವುಗಳನ್ನು ಆಯಾ ಸಂದರ್ಭಗಳಲ್ಲಿ ವಿವರಿಸಲಾಗುವುದು

### ಸಾಯಣಭಾಷ್ಯಂ

**ಪ್ರತಿ ವಾಂ ರಥಮಿತಿ ದಶರ್ಚಂ ದ್ವಾದಶಂ ಸೂಕ್ತಂ । ಪ್ರತಿ ವಾಂ ದಶಾಶ್ವಿನಂ ತು ತದಿತ್ಯನುಕ್ರಮಣಿಕಾ । ಋಷಿರ್ವಸಿಷ್ಠಃ । ಛಂದಸ್ತ್ರಿಷ್ಟುಪ್ । ತುಹ್ಯಾದಿಪರಿಭಾಷಯೈತದಾದೀನ್ಯಷ್ಟ ಸೂಕ್ತಾನ್ಯಶ್ವಿದೇವತ್ಯಾನಿ । ಪ್ರಾತರನುವಾಕ ಆಶ್ವಿನೇ ಕ್ರತೌ ತ್ರೈಷ್ಟುಭೇ ಛಂದಸ್ಯೇತದಾದಿಸೂಕ್ತಸಪ್ತಕಂ ದ್ವಿತೀಯವರ್ಜಂ ಶಂಸ್ಯಂ । ತಥಾ ಚ ಸೂತ್ರಂ । ಪ್ರತಿ ವಾಂ ರಥಮಿತಿ ಸಪ್ತಾನಾಂ ದ್ವಿತೀಯಮುದ್ಧರೇತ್ । ಆ-೪-೧೫ ॥ ಇತಿ ॥**

**ಅನುವಾದವು—ಪ್ರತಿ ವಾಂ ರಥಂ**—ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ **ಪ್ರತಿ ವಾಂ ದಶಾಶ್ವಿನಂ ತು** ... ಹೇಳಿರುವುದು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ತ್ರಿಷ್ಟುಪ್‌ಛಂದಸ್ಸು. ಈ ಸೂಕ್ತದಿಂದ ಮುಂದಿನ ಎಂಟು ಸೂಕ್ತಗಳಿಗೆ ಅಶ್ವಿನೀದೇವತೆಗಳೇ ದೇವತೆಯು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತು ಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದಿಂದ ಮುಂದಿನ ಏಳುಸೂಕ್ತಗಳ—ಎರಡನೆಯ ಸೂಕ್ತವನ್ನು ಬಿಟ್ಟು-ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಪ್ರತಿ ವಾಂ ರಥಮಿತಿ ಸಪ್ತಾನಾಂ ದ್ವಿತೀಯಮುದ್ಧರೇತ್** ಎಂಬ ಸೂತ್ರದಿಂದ (ಆ ೪-೧೫) ವಿವೃತವಾಗಿರುವುದು.

## ಸೂಕ್ತ—೬೭

ಮಂಡಲ—೭ ॥ ಅನುವಾಕ—೪ ॥ ಸೂಕ್ತ—೬೭ ॥
ಅಷ್ಟಕ—೫ ॥ ಅಧ್ಯಾಯ—೫ ॥ ವರ್ಗ—೧೨, ೧೩ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
ಋಷಿಃ—ವಸಿಷ್ಠಃ ॥
ದೇವತಾ—ಅಶ್ವಿನೌ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರತಿ ವಾಂ ರಥಂ ನೃಪತೀ ಜರಧ್ಯೈ ಹವಿಷ್ಮತಾ ಮನಸಾ ಯಜ್ಞಿಯೇನ ।
ಯೋ ವಾಂ ದೂತೋ ನ ಧಿಷ್ಣ್ಯಾವಜೀಗರಚ್ಛಾ ಸೂನುರ್ನ ಪಿತರಾ ವಿವಕ್ಮಿ ।

ಪದಪಾಠಃ

ಪ್ರತಿ । ವಾಂ । ರಥಂ । ನೃಪತೀ ಇತಿ ನೃಽಪತೀ । ಜರಧ್ಯೈ । ಹವಿಷ್ಮತಾ । ಮನಸಾ । ಯಜ್ಞಿಯೇನ ।
ಯಃ । ವಾಂ । ದೂತಃ । ನ । ಧಿಷ್ಣ್ಯೌ । ಅಜೀಗಃ । ಅಚ್ಛ । ಸೂನುಃ । ನ । ಪಿತರಾ । ವಿವಕ್ಮಿ ॥ ೧ ॥

ಸಾಯಣಭಾಷ್ಯಂ

ಹೇ ನೃಪತೀ ನೃಣಾಮೃತ್ವಿಗ್ಯಜಮಾನಾನಾಂ ಸ್ವಾಮಿನಾವಶ್ವಿನೌ ವಾಂ ಯುವಯೋಃ ರಥಂ ಜರಧ್ಯೈ । ಜರಾ ಸ್ತುತಿಃ । ಸ್ತೋತುಂ ಪ್ರತಿ ಗಚ್ಛಾಮೀತಿ ಶೇಷಃ । ಕೇನ ಸಾಧನೇನೇತಿ ತದುಚ್ಯತೇ । ಹವಿಷ್ಮತಾ ಹವಿರ್ಯುಕ್ತೇನ ಯಜ್ಞಿಯೇನ ಯಜ್ಞಾರ್ಹೇಣ ಮನಸಾ ಸ್ತೋತ್ರೇಣ । ಯೋ ರಥೋ ವಾಂ ಹೇ ಧಿಷ್ಣ್ಯೌ ಧಿಷಣಾರ್ಹೌ । ಧಿಷಣಾ ಸ್ತುತಿಃ । ವಾಂ ಯುವಾಂ ದೂತೋ ನ ದೂತ ಇವಾಜೀಗಃ ಜಾಗರಯತಿ ಪ್ರಬೋಧಯತಿ ಅಸ್ಮಾನ್ಪ್ರತಿ ಗಂತುಂ ತಂ ರಥಮಚ್ಛಾ ವಿವಕ್ಮಿ । ಅವಚ್ಮಿ । ಪ್ರಬೋಧನೇ ದೃಷ್ಟಾಂತಃ । ಸೂನುರ್ನ ಪಿತರಾ ಪುತ್ರೋ ಮಾತಾಪಿತರಾವಿವ । ಅಥವಾತ್ರ ಯೋ ರಥೋ ಯುವಾಮಜೀಗಃ ತೇನ ರಥೇನ ಗಂತುಂ ಬುಧ್ಯಮಾನೌ ಯುವಾಮಚ್ಛಾ ವಿವಕ್ಮೀತಿ ವಾ ಯೋಜ್ಯಂ ॥

ಪ್ರತಿಪದಾರ್ಥ

**ನೃಪತೀ**—ಋತ್ವಿಗ್ಯಜಮಾನಾದಿ ಮಾನವರಿಗೆ ಸ್ವಾಮಿಗಳಾದ ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ । **ರಥಂ**—ರಥವನ್ನು । **ಯಜ್ಞಿಯೇನ**—ಯಜ್ಞಾರ್ಹವಾದುದೂ । **ಹವಿಷ್ಮತಾ**—ಹವಿಸ್ಸಿನಿಂದ ಯುಕ್ತವಾದುದೂ ಆದ। **ಮನಸಾ**—ಸ್ತೋತ್ರದಿಂದ। **ಜರಧ್ಯೈ**—ಸ್ತುತಿಸುವುದಕ್ಕಾಗಿ । **ಪ್ರತಿ**—ಸಮೀಪಿಸುತ್ತೇನೆ । **ಧಿಷ್ಣ್ಯೌ**—ನಮ್ಮ ಸ್ತುತಿಗೆ ಪಾತ್ರರಾದ ಎಲೈ ಅಶ್ವಿನೀದೇವತೆಗಳೇ। **ಯಃ**—ಯಾವ ನಿಮ್ಮ ರಥವು । **ಸೂನುಃ**—ಪುತ್ರನು। **ಪಿತರಾ**—ತನ್ನ ತಂದೆತಾಯಿಗಳನ್ನು ಆದರದಿಂದ ಎಬ್ಬಿಸುವಂತೆ । **ವಾಂ**—ನಿಮ್ಮನ್ನು। **ದೂತೋ ನ**—ದೂತನಂತೆ । **ಅಜೀಗಃ**—ಎಬ್ಬಿಸುವುದೋ। (**ತಂ**—ಅಂತಹ ನಿಮ್ಮ ರಥವನ್ನು) **ಅಚ್ಛಾ ವಿವಕ್ಮಿ**—ಸ್ತುತಿಸುತ್ತೇನೆ.

### ಭಾವಾರ್ಥ

ಋತ್ವಿಗ್ಯಜಮಾನರಾದಿಯಾಗಿ ಸಕಲ ಮಾನವರಿಗೂ ಪ್ರಭುಗಳಾದ ಎಲೈ ಅಶ್ವಿನೀದೇವತೆಗಳೇ, ನಾನು ಹವಿಸ್ಸನ್ನು ಸಿದ್ಧಪಡಿಸಿಕೊಂಡು ಯಜ್ಞಾದಿ ಕರ್ಮಗಳಲ್ಲಿ ಪಠಿಸಲುಯೋಗ್ಯವಾದ ಸ್ತೋತ್ರದಿಂದ ನಿಮ್ಮ ರಥವನ್ನು ಸ್ತುತಿಸುವುದಕ್ಕಾಗಿ ಸಮೀಪಿಸುತ್ತೇನೆ ನಮ್ಮ ಸ್ತುತಿಗೆ ಪಾತ್ರರಾದ ಎಲೈ ಅಶ್ವಿನೀದೇವತೆಗಳೇ ಪುತ್ರನು ತನ್ನ ತಂದೆ ತಾಯಿಗಳನ್ನು ಆದರದಿಂದ ಎಬ್ಬಿಸುವಂತೆ ಯಾವ ನಿಮ್ಮ ರಥವು ನಿಮ್ಮನ್ನು ದೂತನಂತೆ ಎಬ್ಬಿಸುವುದೋ ಅಂತಹ ರಥವನ್ನು ನಾನು ಸ್ತುತಿಸುತ್ತೇನೆ.

### English Translation

Lords of men, (I approach) to adore your chariot with devout praise and oblation, I address it as if it were a messenger to awaken you, adorable deities, as a son (addresses) his parents.

### ಸಂಹಿತಾಪಾಠಃ

ಅಶೋಚ್ಯಗ್ನಿಃ ಸಮಿಧಾನೋ ಅಸ್ಮೇ ಉಪೋ ಅದೃಶ್ರನ್ತಮಸಶ್ಚಿದಂತಾಃ ।
ಅಚೇತಿ ಕೇತುರುಷಸಃ ಪುರಸ್ತಾಚ್ಛ್ರಿಯೇ ದಿವೋ ದುಹಿತುರ್ಜಾಯ-
ಮಾನಃ ॥ ೨ ॥

### ಪದಪಾಠಃ

ಅಶೋಚಿ । ಅಗ್ನಿಃ । ಸಂಽಇಧಾನಃ । ಅಸ್ಮೇ ಇತಿ । ಉಪೋ ಇತಿ । ಅದೃಶ್ರನ್ । ತಮಸಃ । ಚಿತ್ । ಅಂತಾಃ ।
ಅಚೇತಿ । ಕೇತುಃ । ಉಷಸಃ । ಪುರಸ್ತಾತ್ । ಶ್ರಿಯೇ । ದಿವಃ । ದುಹಿತುಃ । ಜಾಯಮಾನಃ ॥ ೨ ॥

### ಸಾಯಣಭಾಷ್ಯಂ

**ಅಸ್ಮೇ ಅಸ್ಮಾಭಿಃ ಸಮಿಧಾನಃ ಸಮಿಧ್ಯಮಾನಃ ಸನ್ನಗ್ನಿರಶೋಚಿ । ದೀಪ್ಯತೇ । ತಮಸಶ್ಚಿತ್ತಮಸೋಽಪ್ಯಂತಾಃ ಪರ್ಯಂತಾಃ ಪ್ರದೇಶಾ ಉಪೋ ಅದೃಶ್ರನ್ । ಉಪದೃಶ್ಯಂತೇ ಸರ್ವೈಃ । ಕೇತುಃ ಸರ್ವಸ್ಯ ಪ್ರಜ್ಞಾಪಕಃ ಸೂರ್ಯೋ ದಿವೋ ದುಹಿತುರುಷಸಃ ಪುರಸ್ತಾತ್ಪೂರ್ವಸ್ಯಾಂ ದಿಶಿ ಶ್ರಿಯೇ ಶೋಭಾಯೈ ಜಾಯಮಾನಃ ಸನ್ನಚೇತಿ । ಜ್ಞಾಯತೇ । ಯಸ್ಮಾದೇವಂ ತಸ್ಮಾದ್ಯುವಯೋರಾಗಮನಸಮಯಃ । ಅತ ಆಗಚ್ಛತಮಿತಿ ಶೇಷಃ ॥**

### ಪ್ರತಿಪದಾರ್ಥ

**ಅಸ್ಮೇ**—ನಮ್ಮಿಂದ । **ಸಮಿಧಾನಃ**—ಚೆನ್ನಾಗಿ ಹೊತ್ತಿಸಲ್ಪಟ್ಟ । **ಅಗ್ನಿಃ**—ಅಗ್ನಿಯು । **ಅಶೋಚಿ**—ಪ್ರಕಾಶಿಸುತ್ತಿದ್ದಾನೆ । **ತಮಸಶ್ಚಿತ್**—ಅಂಧಕಾರದಿಂದ ಆವೃತವಾದ । **ಅಂತಾಃ**—ಆಕಾಶದ ಅಂಚುಗಳೂ ಸಹ ।

**ಉಪೋ ಅದೃಶ್ರನ್**—ಸಮೀಪದಲ್ಲಿರುವ ಜನರಿಂದ ಕಾಣಲ್ಪಡುತ್ತವೆ। **ಕೇತುಃ**—ಸಕಲ ಜಗತ್ತಿಗೂ ಪ್ರಜ್ಞಾಪಕನಾದ ಸೂರ್ಯನು । **ದಿವಃ ದುಹಿತುಃ**—ಸ್ವರ್ಗದ ಅಥವಾ ಅಂತರಿಕ್ಷದ ಪುತ್ರಿಯೆನಿಸಿದ । **ಉಷಸಃ**—ಉಷೋದೇವಿಯ। **ಪುರಸ್ತಾತ್**—ಪೂರ್ವಭಾಗದಲ್ಲಿ ಎಂದರೆ ಪೂರ್ವದಿಕ್ಕಿನಲ್ಲಿ। **ಶ್ರಿಯೇ**—ಪ್ರಕಾಶಿಸುವುದಕ್ಕಾಗಿ। **ಜಾಯಮಾನಃ**—ಉದಯಿಸಿದವನಾಗಿ। **ಅಚೇತಿ**—ಸರ್ವರಿಂದಲೂ ತಿಳಿಯಲ್ಪಡುತ್ತಾನೆ.

ಭಾವಾರ್ಥ

ಈದಿನ ಪ್ರಾತಃಕಾಲದಲ್ಲಿ ಯಜ್ಞಾರ್ಥವಾಗಿ ನಮ್ಮಿಂದ ಹೊತ್ತಿಸಲ್ಪಟ್ಟ ಅಗ್ನಿಯು ಜಾಜ್ವಲ್ಯಮಾನವಾಗಿ ಬೆಳಗುತ್ತಿದಾನೆ. ಇದುವರೆಗೂ (ರಾತ್ರಿಯಲ್ಲಿ) ಅಂಧಕಾರ (ಕತ್ತಲಿನಿಂದ) ಆವೃತವಾಗಿದ್ದ ಆಕಾಶದ ಸುತ್ತಲೂ ಬೆಳಕು ಹರಿಯುತ್ತಿರುವುದರಿಂದ ಸಕಲಲೋಕಗಳ ಪ್ರಜ್ಞಾಪಕನಾದ ಸೂರ್ಯನು, ಸ್ವರ್ಗಪುತ್ರಿಯಾದ ಉಷಾದೇವಿಯನ್ನು ಹಿಂಬಾಲಿಸುತ್ತಾ ಪೂರ್ವದಿಕ್ಕಿನಲ್ಲಿ ಉದಯಿಸುತ್ತಿರುವುದನ್ನು ಸಕಲಜನರೂ ನೋಡುತ್ತಾರೆ.

English Translation

Kindled by us, Agni blazes, the extremities of the darkness are seen nigh at hand, the banner (of the sun) is perceived rising with the glory on the east of the dawn, the daughter of heaven.

ಸಂಹಿತಾಪಾಠಃ

ಅಭಿ ವಾಂ ನೂನಮಶ್ವಿನಾ ಸುಹೋತಾ ಸ್ತೋಮೈಃ ಸಿಷಕ್ತಿ ನಾಸತ್ಯಾ ವಿವಕ್ವಾನ್ ।
ಪೂರ್ವೀಭಿರ್ಯಾತಂ ಪಥ್ಯಾಭಿರರ್ವಾಕ್ಸ್ವರ್ವಿದಾ ವಸುಮತಾ ರಥೇನ ॥ ೩ ॥

ಪದಪಾಠಃ

ಅಭಿ । ವಾಂ । ನೂನಂ । ಅಶ್ವಿನಾ । ಸುऽಹೋತಾ । ಸ್ತೋಮೈಃ । ಸಿಸಕ್ತಿ । ನಾಸತ್ಯಾ । ವಿವಕ್ವಾನ್ ।
ಪೂರ್ವೀಭಿಃ । ಯಾತಂ । ಪಥ್ಯಾಭಿಃ । ಅರ್ವಾಕ್ । ಸ್ವಃऽವಿದಾ । ವಸುऽಮತಾ । ರಥೇನ ॥ ೩ ॥

ಸಾಯಣಭಾಷ್ಯಂ

ಹೇ ಅಶ್ವಿನಾ ವಾಂ ಯುವಾಂ ಸುಹೋತಾ ಸುಷ್ಠು ದೇವಾನಾಂ ಸ್ತೋತಾ ವಿವಕ್ವಾನ್ ಸ್ತುತೀನಾಂ ವಕ್ತಾಹಂ ಹೇ ನಾಸತ್ಯಾ ಸತ್ಯಭೂತೌ । ಇದಮಶ್ವಿನಾವಿತ್ಯತ್ರ ಯೋಜ್ಯಂ । ಸ್ತೋಮೈಃ ಸಿಷಕ್ತಿ । ಸೇವತೇ । ಅತೋऽರ್ವಾಗಸ್ಮದಭಿಮುಖಂ ಪೂರ್ವೀಭಿಃ ಪಥ್ಯಾಭಿಃ ಪೂರ್ವಪುರುಷೈರ್ಮಾರ್ಗೈಃ ಸ್ವರ್ವಿದಾ ಸ್ವರ್ಗಮುದಕಂ ವಾ ಜಾನತಾ ಸ್ಮರಣವತಾ ವಾ ವಸುಮತಾ ಧನವತಾ ವಾ ರಥೇನ ಯಾತಂ । ಗಚ್ಛತಂ ॥

### ಪ್ರತಿಪದಾರ್ಥ

**ನಾಸತ್ಯಾ** — ಸತ್ಯಸ್ವರೂಪರಾದ | **ಅಶ್ವಿನಾ** — ಎಲೈ ಅಶ್ವಿನೀದೇವತೆಗಳೇ | **ವಾಂ** — ನಿಮ್ಮನ್ನು | **ಸುಹೋತಾ**—ದೇವತೆಗಳನ್ನು ಆಹ್ವಾನಮಾಡಿ ಸ್ತುತಿಸುತ್ತಿರುವವನೂ | **ವಿವಕ್ವಾನ್**—ಸ್ತೋತ್ರಗಳನ್ನು ಪಠಿಸುತ್ತಿರುವವನೂ ಆದ ನಾನು | **ಸ್ತೋಮೈಃ**—ಸ್ತೋತ್ರಗಳಿಂದ | **ಸಿಷಕ್ತಿ**—ಸೇವಿಸುತ್ತೇನೆ. ( ಆದ್ದರಿಂದ ನೀವು ) **ಅರ್ವಾಕ್**—ನಮಗಭಿಮುಖವಾಗಿ | **ಪೂರ್ವೀಭಿಃ**—ಹಿಂದಿನಕಾಲದಿಂದಲೂ ಪ್ರಸಿದ್ಧವಾದ| **ಪಥ್ಯಾಭಿಃ**—ಮಾರ್ಗಗಳಿಂದ ಹೊರಟು | **ಸ್ವರ್ವಿದಾ**—ವೃಷ್ಟಿಪ್ರದವಾದುದೂ | **ವಸುಮತಾ**—ಧನಯುಕ್ತವಾದುದೂ ಆದ | **ರಥೇನ**—ರಥದಿಂದ | **ಯಾತಂ**—ಹೊರಟುಬನ್ನಿರಿ.

### ಭಾವಾರ್ಥ

ಸತ್ಯಸ್ವರೂಪರಾದ ಎಲೈ ಅಶ್ವಿನೀದೇವತೆಗಳೇ, ದೇವತೆಗಳಾದ ನಿಮ್ಮನ್ನು ಆಹ್ವಾನಮಾಡುತ್ತಿರುವ ನಾನು ನಿಮ್ಮನ್ನು ಸ್ತೋತ್ರಗಳಿಂದ ಸ್ತುತಿಸಿ ಸೇವಿಸುತ್ತೇನೆ. ಆದ್ದರಿಂದ ನೀವು ನಮಗಭಿಮುಖವಾಗಿ ಎಂದರೆ ನಮ್ಮ ಯಜ್ಞಭೂಮಿಗಭಿಮುಖವಾಗಿ ಪುರಾತನವಾದ ಮಾರ್ಗಗಳಿಂದ ಹೊರಟು ವೃಷ್ಟಿಪ್ರದವಾದುದೂ ಧನಯುಕ್ತವಾದುದೂ ಆದ ನಿಮ್ಮ ರಥದಲ್ಲಿ ಕುಳಿತು ಹೊರಟುಬನ್ನಿರಿ

### English Translation

Verily, Aswins, the pious priest repeating (your praises) glorifies you, Nasatyas, with hymns come therefore by formerly-trodden paths to our presence with your chariot, familiar with heaven, laden with treasure.

### ಸಂಹಿತಾಪಾಠಃ

ಅರ್ವಾಗ್ವಾಂ ನೂನಮಶ್ವಿನಾ ಯುವಾಕುರ್ಹುವೇ ಯದ್ವಾಂ ಸುತೇ
ಮಾಧ್ವೀ ವಸೂಯುಃ ।
ಆ ವಾಂ ವಹಂತು ಸ್ಥವಿರಾಸೋ ಅಶ್ವಾಃ ಪಿಬಾಥೋ ಅಸ್ಮೇ ಸುಷುತಾ
ಮಧೂನಿ ॥ ೪ ॥

### ಪದಪಾಠಃ

ಅರ್ವಾಕ್ | ವಾಂ | ನೂನಂ | ಅಶ್ವಿನಾ | ಯುವಾಕುಃ | ಹುವೇ | ಯತ್ | ವಾಂ | ಸುತೇ | ಮಾಧ್ವೀ ಇತಿ | ವಸುಽಯುಃ |

ಆ | ವಾಂ | ವಹಂತು | ಸ್ಥವಿರಾಸಃ | ಅಶ್ವಾಃ | ಪಿಬಾಥಃ | ಅಸ್ಮೇ ಇತಿ | ಸುಽಸುತಾ | ಮಧೂನಿ ॥ ೪ ॥

ಸಾಯಣಭಾಷ್ಯಂ

**ಹೇ ಅಶ್ವಿನಾಶ್ವಿನೌ ಅವೋ ರಕ್ಷಿತ್ರೋರ್ಯುವಾಭ್ಯಾಂ ಯುವಾಕುರ್ಯುವಾಂ ಕಾಮಯಮಾನೋಽಹಂ ನೂನಮದ್ಯ ಸ್ವಭೂತೋ ಭವಾಮೀತಿ ಶೇಷಃ । ಯದ್ಯಸ್ಮಾತ್ ಹೇ ಮಾಧ್ವೀ ಮಧುರಸ್ಯ ಸೋಮಸ್ಯಾರ್ಹೌ ಮಧುವಿದ್ಯಾಸಂಬಂಧಿನೌ ವಾ ವಾಂ ಯುವಾಂ ಸುತೇಽಭಿಷುತೇ ಸೋಮೇ ವಸೂಯುರ್ವಸುಕಾಮೋ ಹುವೇ ಸ್ತೌಮಿ ಅತೋ ವಾಂ ಸ್ವಭೂತಃ । ವಾಂ ಯುವಾಮಾ ವಹಂತು । ಕೇ । ಸ್ಥವಿರಾಸಃ ಸ್ಥೂಲಾಃ ಪ್ರವೃದ್ಧಾ ಅಶ್ವಾಃ । ಏತಯೋರತಿಪ್ರವೃದ್ಧತ್ವಾಚ್ಛೀಘ್ರಗತೇರಪೇಕ್ಷಿತತ್ವಾಚ್ಚ ಸ್ಥವಿರೈರೇವ ಭಾವ್ಯಂ । ಆಗಮನಾನಂತರಮಸ್ಮೇ ಅಸ್ಮಾಭಿಃ ಸುಷುತಾ ಸುಷ್ಠ್ವಭಿಷುತಾನಿ ಮಧೂನಿ ಮಧುರರಸಾನ್ ಪಿಬಾಥಃ । ಪಿಬತಂ ॥**

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿದೀದೇವತೆಗಳೇ । **ಅವೋಃ**—ರಕ್ಷಣೆಯನ್ನು ನೀಡುವ ನಿಮ್ಮ। **ಯುವಾಕುಃ**—ರಕ್ಷಣೆಯನ್ನು ಬಯಸುವ ನಾನು । **ನೂನಂ**—ಈಗ ನಿಮ್ಮವನಾಗಿದೇನೆ । **ಯತ್**—ಏತಕ್ಕೆಂದರೆ । **ಮಾಧ್ವೀ**—ಮಧುರವಾದ ಸೋಮರಸದ ಪಾನಕ್ಕೆ ಅರ್ಹರಾದ ಅಥವಾ ಮಧುವಿದ್ಯೆಯನ್ನರಿತಿರುವ ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮನ್ನು । **ಸುತೇ**—ಸೋಮವು ಹಿಂಡಲ್ಪಟ್ಟಿರುವ ಈ ಸಮಯದಲ್ಲಿ । **ವಸೂಯುಃ**—ಧನಾಪೇಕ್ಷಿಯಾದ ನಾನು । **ಹುವೇ**—ಪ್ರಾರ್ಥಿಸಿ ಕರೆಯುತ್ತೇನೆ । **ಸ್ಥವಿರಾಸಃ**—ಸ್ಥೂಲಾಕಾರವುಳ್ಳ (ಧಷ್ಟಪುಷ್ಟವಾದ) । **ಅಶ್ವಾಃ**—ನಿಮ್ಮ ಕುದುರೆಗಳು । **ವಾಂ**—ನಿಮ್ಮನ್ನು । **ಆವಹಂತು**—(ನಮ್ಮಲ್ಲಿಗೆ) ಕರೆತರಲಿ (ಅನಂತರ ನೀವು) । **ಅಸ್ಮೇ**—ನಮ್ಮಿಂದ । **ಸುಷುತಾ**— ಚೆನ್ನಾಗಿ ಹಿಂಡಲ್ಪಟ್ಟ । **ಮಧೂನಿ**— ಮಧುರೋಪೇತವಾದ ಸೋಮರಸಗಳನ್ನು **ಪಿಬಾಥಃ**— ಪಾನಮಾಡಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಕ್ಷಣೆಯನ್ನು ಬಯಸುತ್ತಿರುವ ನಾನು ಸಕಲರಿಗೂ ರಕ್ಷಣೆಯನ್ನು ನೀಡುವ ನಿಮ್ಮವನಾಗಿದ್ದೇನೆ. ಆದ್ದರಿಂದಲೇ ಮಧುರವಾದ ಸೋಮರಸದ ಪಾನಕ್ಕೆ ಅರ್ಹರಾದ ಅಥವಾ ಮಧುವಿದ್ಯೆಯನ್ನರಿತ ಎಲೈ ಅಶ್ವಿನೀದೇವತೆಗಳೇ, ಧನಾಪೇಕ್ಷಿಯಾದ ನಾನು ಸೋಮರಸವು ಹಿಂಡಲ್ಪಟ್ಟಿರುವ ಈ ಸಮಯದಲ್ಲಿ ನಿಮ್ಮನ್ನು ಪ್ರಾರ್ಥಿಸಿ ಕರೆಯುತ್ತೇನೆ. ಸ್ಥೂಲಾಕಾರವುಳ್ಳವೂ, ಶೀಘ್ರಗಾಮಿಗಳೂ ಆದ ನಿಮ್ಮ ಕುದುರೆಗಳು ನಿಮ್ಮನ್ನು ನಮ್ಮ ಈ ಯಜ್ಞಭೂಮಿಗೆ ಕರೆತರಲಿ. ಅನಂತರ ನೀವು ನಮ್ಮಿಂದ ವಿಧ್ಯುಕ್ತವಾಗಿ ಹಿಂಡಲ್ಪಟ್ಟ ಈ ಮಧುರವಾದ ಸೋಮರಸವನ್ನು ಪಾನಮಾಡಿ.

English Translation

Relying on you, Aswins, as protectors, desirous of wealth, Madhwas, I invoke you when the Soma is effused : may your stout horse bring you (hither) : drink the sweet juice poured out by us.

ಸಂಹಿತಾಪಾಠಃ

ಪ್ರಾಚೀಮು ದೇವಾಶ್ವಿನಾ ಧಿಯಂ ಮೇಽಮೃಧ್ರಾಂ ಸಾತಯೇ ಕೃತಂ ವಸೂಯುಂ ।

ವಿಶ್ವಾ ಅವಿಷ್ಟಂ ವಾಜ ಆ ಪುರಂಧೀಸ್ತಾ ನಃ ಶಕ್ತಂ ಶಚೀಪತೀ ಶಚೀಭಿಃ ॥

ಪದಪಾಠಃ

ಪ್ರಾಚೀಂ । ಊಂ ಇತಿ । ದೇವಾ । ಅಶ್ವಿನಾ । ಧಿಯಂ । ಮೇ । ಅಮೃಧ್ರಾಂ । ಸಾತಯೇ । ಕೃತಂ । ವಸುಽಯುಂ ।

ವಿಶ್ವಾಃ । ಅವಿಷ್ಟಂ । ವಾಜೇ । ಆ । ಪುರಂಽಧೀಃ । ತಾ । ನಃ । ಶಕ್ತಂ । ಶಚೀಪತೀ ಇತಿ ಶಚೀಽಪತೀ । ಶಚೀಭಿಃ ॥ ೫ ॥

ಸಾಯಣಭಾಷ್ಯಂ

ಹೇ ಅಶ್ವಿನಾಶ್ವಿನೌ ದೇವಾ ದೇವೌ ಯುವಾಂ ಪ್ರಾಚೀಮೃಜ್ವೀಮಮೃಧ್ರಾಮಹಿಂಸಿತಾಂ ವಸೂಯುಂ ಧನಮಿಚ್ಛಂತೀಂ ಮೇ ಮಮ ಧಿಯಂ ಬುದ್ಧಿಂ ಸ್ತುತಿಂ ಕರ್ಮ ವಾ ಸಾತಯೇ ಲಾಭಾಯೋಚಿತಾಂ ಕೃತಂ । ಕುರುತಂ । ಕಿಂಚ ವಾಜ ಆ ಸಂಗ್ರಾಮೇಽಪಿ ವಿಶ್ವಾಃ ಪುರಂಧೀರಸ್ಮದೀಯಾ ಬುದ್ಧೀರವಿಷ್ಟಂ । ರಕ್ಷತಂ । ಹೇ ಶಚೀಪತೀ । ಶಚೀತಿ ಕರ್ಮನಾಮ । ಕರ್ಮಣಾಂ ಪಾಲಕೌ ತಾ ತೌ ಯುವಾಂ ಶಚೀಭಿರಸ್ಮದೀಯೈಃ ಸ್ತುತ್ಯಾದಿರೂಪೈಃ ಕರ್ಮಭಿರ್ನೋಽಸ್ಮಾಞ್ಛಕ್ತಂ । ಪ್ರಯಚ್ಛತಂ ಧನಮಿತಿ ಶೇಷಃ॥

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ದೇವಾ**—ದೇವತಾತ್ಮರಾದ ನೀವು । **ಪ್ರಾಚೀಂ**—ಸತ್ಯಾತ್ಮಕವಾದುದೂ ಎಂದರೆ ಭಕ್ತಿಯಿಂದ ಅರ್ಪಿತವಾದುದೂ । **ಅಮೃಧ್ರಾಂ**—ಅಹಿಂಸಿತವಾದುದೂ । **ವಸೂಯುಂ**—ಧನವನ್ನು ಅಪೇಕ್ಷಿಸುವುದೂ ಆದ । **ಮೇ ಧಿಯಂ**—ಈ ಸ್ತೋತ್ರವನ್ನು ಅಥವಾ ಕರ್ಮವನ್ನು । **ಸಾತಯೇ**—ಫಲಪ್ರದವನ್ನಾಗಿ । **ಕೃತಂ**—ಮಾಡಿರಿ (ಮತ್ತು) । **ವಾಜೇ ಆ**—ಯುದ್ಧದಲ್ಲಿಯೂ ಕೂಡ । **ವಿಶ್ವಾ**—ಸಮಸ್ತವಾದ **ಪುರಂಧೀಃ**—ನಮ್ಮ ಬುದ್ಧಿಗಳನ್ನು । **ಅವಿಷ್ಟಂ**—ರಕ್ಷಿಸಿರಿ । **ಶಚೀಪತೀ**—ಯಜ್ಞಾದಿ ಕರ್ಮಗಳಿಗೆ ಪಾಲಕರಾದ । **ತಾ**—ಆ ನೀವು । **ಶಚೀಭಿಃ**—ನಾವು ಮಾಡುವ ಸ್ತುತ್ಯಾದಿರೂಪವಾದ ಕರ್ಮಗಳಿಂದ । **ನಃ**—ನಮ್ಮನ್ನು । **ಶಕ್ತಂ**—ಧನಯುಕ್ತರಾಗುವಂತೆ ಮಾಡಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ದೇವತಾತ್ಮರಾದ ನೀವು ಸತ್ಯಾತ್ಮಕವಾದುದೂ ವಿಘ್ನರಹಿತವಾದುದೂ ಧನವನ್ನು ಅಪೇಕ್ಷಿಸುವುದೂ ಆದ ಈ ನಮ್ಮ ಸ್ತೋತ್ರವನ್ನು ಫಲಪ್ರದವನ್ನಾಗಿ ಮಾಡಿರಿ, ಮತ್ತು ಯುದ್ಧದಲ್ಲಿಯೂ ಸಹ ನಮ್ಮ ಬುದ್ಧಿಯು ನಮಗೆ ಸಹಾಯಕವಾಗಿರುವಂತೆ ಮಾಡಿ ನಮ್ಮನ್ನು ರಕ್ಷಿಸಿರಿ ಯಜ್ಞಾದಿ ಕರ್ಮಗಳಿಗೆ ಪಾಲಕರಾದ ನೀವು ನಮ್ಮ ಸ್ತುತಿರೂಪವಾದ ಕರ್ಮಗಳಿಂದ ಸಂತುಷ್ಟರಾಗಿ ನಮಗೆ ಧನಾದಿಗಳನ್ನು ಕೊಡಿರಿ.

## English Translation

Divine Ashwins, render my sincere and undisturbed adoration, offered for the sake of riches, (efficacious) for their acquisition : preserve all my

faculties in (the time of) battle: protectors of pious acts, (influenced) by our acts, bestow upon us (wealth).

ಸಂಹಿತಾಪಾಠಃ

ಅವಿಷ್ಟಂ ಧೀಷ್ವಶ್ವಿನಾ ನ ಆಸು ಪ್ರಜಾವದ್ರೇತೋ ಅಹ್ರಯಂ ನೋ ಅಸ್ತು ।
ಆ ವಾಂ ತೋಕೇ ತನಯೇ ತೂತುಜಾನಾಃ ಸುರತ್ನಾಸೋ ದೇವವೀತಿಂ
ಗಮೇಮ ॥ ೬ ॥

ಪದಪಾಠಃ

ಅವಿಷ್ಟಂ । ಧೀಷು । ಅಶ್ವಿನಾ । ನಃ । ಆಸು । ಪ್ರಜಾऽವತ್ । ರೇತಃ । ಅಹ್ರಯಂ । ನಃ । ಅಸ್ತು ।
ಆ । ವಾಂ । ತೋಕೇ । ತನಯೇ । ತೂತುಜಾನಾಃ । ಸುऽರತ್ನಾಸಃ । ದೇವऽವೀತಿಂ । ಗಮೇಮ ॥ ೬ ॥

ಸಾಯಣಭಾಷ್ಯಂ

ಹೇ ಅಶ್ವಿನಾಶ್ವಿನೌ ನೋಽಸ್ಮಾನಾಸು ಧೀಷ್ವೇಷು ಕರ್ಮಸ್ವವಿಷ್ಟಂ । ರಕ್ಷತಂ । ನೋಽಸ್ಮಭ್ಯಮಹ್ರಯಮಕ್ಷೀಣಂ ಪ್ರಜಾವತ್ಪುತ್ರಾದ್ಯುಪೇತಂ ಪುತ್ರೋತ್ಪಾದನಸಮರ್ಥಂ ರೇತೋಽಸ್ತು । ವಾಂ ಯುವಯೋರನುಗ್ರಹಾಲ್ಲಬ್ಧೇ ತೋಕೇ ಪುತ್ರೇ ತನಯೇ ತತ್ಪುತ್ರಾದೌ ಚ ತೂತುಜಾನಾ ಅಭಿಮತಂ ಧನಂ ಪ್ರಯಚ್ಛಂತಃ ಸುರತ್ನಾಸಃ ಶೋಭನಧನಾಶ್ಚ ಸಂತೋ ದೇವವೀತಿಂ ದೇವಾನಾಂ ವೀತಿಃ ಪ್ರಾಪ್ತಿರ್ಯಸ್ಮಿಂಸ್ತಾದೃಶಂ ಯಜ್ಞಮಾ ಗಮೇಮ । ಆಗಚ್ಛೇಮ ॥

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ನಃ**—ನಮ್ಮನ್ನು । **ಆಸು ಧೀಷು**—ಈ ಕರ್ಮಕಾಲಗಳಲ್ಲಿ । **ಅವಿಷ್ಟಂ**—ರಕ್ಷಿಸಿರಿ. । **ನಃ**—ನಮಗೆ । **ಅಹ್ರಯಂ**—ನಾಶರಹಿತವೂ । **ಪ್ರಜಾವತ್**—ಪುತ್ರಾದಿಗಳಿಂದ ಕೂಡಿದುದೂ ಆದ । **ರೇತಃ**—ಸಂಪತ್ತು । **ಅಸ್ತು**—ಒದಗಲಿ. । **ವಾಂ**—ನಮ್ಮ ಅನುಗ್ರಹದಿಂದ ಪ್ರಾಪ್ತವಾದ । **ತೋಕೇ**—ಪುತ್ರರಿಗೂ । **ತನಯೇ**—ಪೌತ್ರರಿಗೂ । **ತೂತುಜಾನಾಃ**—ಅಪೇಕ್ಷಿತವಾದ ಧನಗಳನ್ನು ಹಂಚುತ್ತಲೂ । **ಸುರತ್ನಾಸಃ**—ಉತ್ತಮವಾದ ಧನವುಳ್ಳವರಾಗಿಯೂ । **ದೇವವೀತಿಂ**—ದೇವಪೂಜಾಕಾರ್ಯವಾದ ಯಜ್ಞವನ್ನು । **ಆ ಗಮೇಮ**—ನಾವು ನೆರವೇರಿಸುವಂತಾಗಲಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಮ್ಮನ್ನು ಈ ಕರ್ಮಕಾಲದಲ್ಲಿ ರಕ್ಷಿಸಿರಿ. ನಮಗೆ ನಾಶರಹಿತವೂ, ಪುತ್ರಾದಿಗಳಿಂದ ಕೂಡಿದುದೂ ಆದ ಸಂಪತ್ತು ಒದಗಲಿ. ನಿಮ್ಮ ಅನುಗ್ರಹದಿಂದ ಪ್ರಾಪ್ತರಾದ ನಮ್ಮ ಪುತ್ರರಿಗೂ ಪೌತ್ರಾದಿಗಳಿಗೂ ಧನವನ್ನು ಹಂಚುತ್ತಲೂ, ಉತ್ತಮವಾದ ಧನವುಳ್ಳವರಾಗಿಯೂ ಸಹ ದೇವಪೂಜಾಕಾರ್ಯವಾದ ಯಜ್ಞವನ್ನು ನಾವು ನೆರವೇರಿಸುವಂತಾಗಲಿ.

## English Translation

Protect us, Aswins, in these pious acts, may our procreative power fail not but (through your favour) possessing sons and grandsons, distributing desired riches and enjoying ample wealth, may we accomplish the worship of the gods

ಸಂಹಿತಾಪಾಠಃ

ಏಷ ಸ್ಯ ವಾಂ ಪೂರ್ವಗತ್ವೇವ ಸಖ್ಯೇ ನಿಧಿರ್ಹಿತೋ ಮಾಧ್ವೀ ರಾತೋ ಅಸ್ಮೇ ।
ಅಹೇಳತಾ ಮನಸಾ ಯಾತಮರ್ವಾಗಶ್ನಂತಾ ಹವ್ಯಂ ಮಾನುಷೀಷು ವಿಕ್ಷು॥

ಪದಪಾಠಃ

ಏಷಃ । ಸ್ಯಃ । ವಾಂ । ಪೂರ್ವಗತ್ವಾಽಇವ । ಸಖ್ಯೇ । ನಿಽಧಿಃ । ಹಿತಃ । ಮಾಧ್ವೀ ಇತಿ । ರಾತಃ । ಅಸ್ಮೇ ಇತಿ ।
ಅಹೇಳತಾ । ಮನಸಾ । ಆ । ಯಾತಂ । ಅರ್ವಾಕ್ । ಅಶ್ನಂತಾ । ಹವ್ಯಂ । ಮಾನುಷೀಷು । ವಿಕ್ಷು ॥೭॥

ಸಾಯಣಭಾಷ್ಯಂ

ಏಷ ಪುರತೋ ದೀಯಮಾನಃ ಸ್ಯ ಸ ಯುವಯೋಃ ಪ್ರಿಯತ್ವೇನ ಪ್ರಸಿದ್ಧಃ ಸೋಮೋ ಹೇ ಮಾಧ್ವೀ ಮಧುಪ್ರಿಯಾವಶ್ವಿನೌ ವಾಂ ಯುವಯೋಃ ಪುರತೋ ನಿಧಿರ್ನಿಧಿಸ್ಥಾನೀಯೋ ಹಿತಃ ಸ್ಥಾಪಿತೋಽಸ್ಮೇ ಅಸ್ಮಾಭೀ ರಾತೋ ದತ್ತಃ ಸಂಕಲ್ಪಿತಃ ಸಂನಿಹಿತಃ । ಕಿಮಿವ । ಸಖ್ಯೇ ಸಖಿತ್ವಾರ್ಥಂ ಪೂರ್ವಗತ್ವೇವ ಪುರತೋ ಗಂತಾ ದೂತ ಇವ । ಸ ಯಥಾ ಪ್ರಿಯಂ ಜನಯನ್ ಸ್ವಾಮಿನಃ ಪುರತೋ ವರ್ತತ ತದ್ವದಿತ್ಯರ್ಥಃ । ಯಸ್ಮಾದೇವಂ ತಸ್ಮಾದಹೇಳತಾಕ್ರುಧ್ಯತಾ ಮನಸಾನುಗ್ರಹಯುಕ್ತೇನ ಚೇತಸಾರ್ವಾಗಸ್ಮದಭಿಮುಖಮಾ ಯಾತಂ । ಆಗಚ್ಛತಂ । ಅಶ್ನಂತಾ ಹವ್ಯಂ ಹವಿಃ ಸೋಮಾದಿಕಮಶ್ನಂತಾವಭ್ಯವಹರಂತೌ । ಕುತ್ರ । ಮಾನುಷೀಷು ವಿಕ್ಷು ಮನುಷ್ಯರೂಪಾಸು ಪ್ರಜಾಸು ವರ್ತಮಾನಂ ॥

ಪ್ರತಿಪದಾರ್ಥ

**ಮಾಧ್ವೀ**—ಮಧುರವಾದ ಸೋಮವನ್ನು ಅಪೇಕ್ಷಿಸುವ ಎಲೈ ಅಶ್ವಿನೀದೇವತೆಗಳೇ । **ಸ್ಯಃ**—ಪ್ರಸಿದ್ಧವಾದ । **ಏಷಃ**—ಈ ಸೋಮವು । **ಅಸ್ಮೇ**—ನಮ್ಮಿಂದ । **ರಾತಃ**—ಅರ್ಪಿತವಾಗಿ । **ಸಖ್ಯೇ**—ಸ್ನೇಹವನ್ನು ಸಂಪಾದಿಸಲು । **ಪೂರ್ವಗತ್ವೇವ**—ರಾಜನ ಮುಂಭಾಗದಲ್ಲಿ ದೂತನು ಅರ್ಪಿಸುವ ನಿಧಿಯಂತೆ । **ವಾಂ**—ನಿಮ್ಮ ಮುಂದೆ । **ನಿಧಿಃ**—ನಿಧಿರೂಪದಲ್ಲಿ । **ಹಿತಃ**—ಅರ್ಪಿತವಾಗಿದೆ । **ಮಾನುಷೀಷು**—ಮಾನವರಾದ । **ವಿಕ್ಷು**—ಯಜಮಾನರ ನಡುವೆ ।

**ಹವ್ಯಂ**—ಹವಿಸ್ಸನ್ನು | **ಅಶ್ನಂತಾ**—ಸ್ವೀಕರಿಸುತ್ತ | **ಅಹೇಳತಾ**—ಕೋಪಗೊಳ್ಳದಿರುವ | **ಮನಸಾ**—ಮನಸ್ಸಿನೊಡನೆ | **ಅರ್ವಾಕ್**—ನಮಗಭಿಮುಖವಾಗಿ | **ಆ ಯಾತಂ**—ಬನ್ನಿರಿ.

ಭಾವಾರ್ಥ

ಮಧುರವಾದ ಸೋಮವನ್ನು ಅಪೇಕ್ಷಿಸುವ ಎಲೈ ಅಶ್ವಿನೀದೇವತೆಗಳೇ, ಪ್ರಸಿದ್ಧವಾದ ಈ ಸೋಮವು ನಮ್ಮಿಂದ ಅರ್ಪಿತವಾಗಿ, ಸ್ನೇಹವನ್ನು ಸಂಪಾದಿಸಲು ರಾಜನ ಮುಂಭಾಗದಲ್ಲಿ ದೂತನು ಅರ್ಪಿಸುವ ನಿಧಿಯಂತೆ ನಿಮ್ಮ ಮುಂದೆ ಹವಿಸ್ಸಿನ ರೂಪದಲ್ಲಿ ಅರ್ಪಿತವಾಗಿದೆ. ಮಾನವರಾದ ಯಜಮಾನರ ಹವಿಸ್ಸನ್ನು ಸ್ವೀಕರಿಸುತ್ತ ಕೋಪಗೊಳ್ಳದಿರುವ ಮನಸ್ಸಿನಿಂದ ನಮಗಭಿಮುಖವಾಗಿ ಬನ್ನಿರಿ

English Translation

This treasure given by us has been placed, Madhwis, before you, like (an envoy) who has come to the presence (of a prince) for (acquiring his) friendship come to our presence with benevolent thoughts, accepting the oblations offered amongst human beings.

ಸಂಹಿತಾಪಾಠಃ

ಏಕಸ್ಮಿನ್ಯೋಗೇ ಭುರಣಾ ಸಮಾನೇ ಪರಿ ವಾಂ ಸಪ್ತ ಸ್ರವತೋ ರಥೋ ಗಾತ್ ।
ನ ವಾಯಂತಿ ಸುಭ್ವೋ ದೇವಯುಕ್ತಾ ಯೇ ವಾಂ ಧೂರ್ಷು ತರಣಯೋ ವಹಂತಿ ॥ ೮ ॥

ಪದಪಾಠಃ

ಏಕಸ್ಮಿನ್ | ಯೋಗೇ | ಭುರಣಾ | ಸಮಾನೇ | ಪರಿ | ವಾಂ | ಸಪ್ತ | ಸ್ರವತಃ | ರಥಃ | ಗಾತ್ |
ನ | ವಾಯಂತಿ | ಸುऽಭ್ವಃ | ದೇವऽಯುಕ್ತಾಃ | ಯೇ | ವಾಂ | ಧೂಃऽಸು | ತರಣಯಃ | ವಹಂತಿ ॥

ಸಾಯಣಭಾಷ್ಯಂ

ಹೇ ಭುರಣಾ ಸರ್ವಸ್ಯ ಭರ್ತಾರೌ ಯುವಯೋರೇಕಸ್ಮಿನ್ ಸಮಾನ ಉಭಯಸಾಧಾರಣೇ ಯೋಗೇಽಸ್ಮದ್ವಿಷಯೇ ಸತಿ ವಾಂ ಯುವಯೋ ರಥಃ ಸಪ್ತ ಸ್ರವತಃ ಸರ್ಪಣಸ್ವಭಾವಾಃ ಸಪ್ತಸಂಖ್ಯಾಕಾ ವಾ ಗಂಗಾದ್ಯಾಃ ಪರಿ ಗಾತ್ | ಪರಿಗಚ್ಛತಿ | ಶೀಘ್ರಮಾಗಚ್ಛತೀತ್ಯರ್ಥಃ | ತದ್ರಥಾನುಕೂಲಾಃ ಸುಭ್ವಃ ಸುಭವನಾ ದೇವಯುಕ್ತಾ ದೇವಾಭ್ಯಾಂ ಯುವಾಭ್ಯಾಂ ಯುಕ್ತಾ ಅಶ್ವಾಃ ಶೀಘ್ರಗಮನೇ ನ ವಾಯಂತಿ | ನ ಶುಷ್ಯಂತಿ | ನ ಶ್ರಾಮ್ಯಂತೀ | ಯೇಽಶ್ವಾ ವಾಂ ಧೂರ್ಷು ರಥಸ್ಯ ತರಣಯಸ್ತಾರಕಾಃ ಶೀಘ್ರಗಂತಾರೋ ವಹಂತಿ ಯುವಾಂ ತೇ ನ ವಾಯಂತೀತಿ॥

ಪ್ರತಿಪದಾರ್ಥ

**ಭುರಣಾ** —ಲೋಕಗಳನ್ನೆಲ್ಲಾ ಭರಿಸುವ ಎಲೈ ಅಶ್ವಿನೀದೇವತೆಗಳೇ | **ಏಕಸ್ಮಿನ್ ಸಮಾನೇ**—ಒಂದೇ ಕಾರ್ಯದಲ್ಲಿ ನಿರತರಾಗಿ | **ಯೋಗೇ**—ಒಟ್ಟುಗೂಡಿರುವಾಗ | **ವಾಂ**—ನಿಮ್ಮ | **ರಥಂ**—ರಥವು | **ಸ್ರವತಃ ಸಪ್ತ**—ಗಂಗಾದಿ ಏಳು ನದಿಗಳನ್ನೂ | **ಪರಿ ಗಾತ್**—ದಾಟಿಸಿ ಕರೆತರುತ್ತದೆ | **ವಾಂ**—ನಿಮ್ಮನ್ನು | **ಧೂರ್ಷು**—ರಥಗಳಲ್ಲಿ | **ತರಣಯಃ**—ಶೀಘ್ರಗಾಮಿಗಳಾದ | **ಯೇ**—ಯಾವ ಅಶ್ವಗಳು | **ವಹಂತಿ**—ವಹಿಸುವವೋ ಅಂತಹ | **ಸುಭ್ವಃ**—ಶ್ರೇಷ್ಠವೂ | **ದೇವಯುಕ್ತಾಃ**—ದೇವತಾತ್ಮರಾದ ನಿಮ್ಮನ್ನು ವಹಿಸುವವೂ ಆದ ಅಶ್ವಗಳು | **ನ ವಾಯಂತಿ**—ಆಯಾಸಗೊಳ್ಳುವುದಿಲ್ಲ.

ಭಾವಾರ್ಥ

ಲೋಕಗಳನ್ನೆಲ್ಲ ಭರಿಸುವ ಎಲೈ ಅಶ್ವಿನೀದೇವತೆಗಳೇ, ಒಂದೇ ಕಾರ್ಯದಲ್ಲಿ ನಿರತರಾಗಿ ಒಟ್ಟುಗೂಡಿರುವಾಗ ನಿಮ್ಮನ್ನು ನಿಮ್ಮ ರಥವು ಗಂಗಾದಿ ಸಪ್ತನದಿಗಳನ್ನೂ ದಾಟಿಸಿ ಕರೆತರುತ್ತದೆ. ಶೀಘ್ರಗಾಮಿಗಳಾದ ಯಾವ ಅಶ್ವಗಳು ನಿಮ್ಮನ್ನು ರಥಗಳಲ್ಲಿ ವಹಿಸುವುವೋ ಅಂತಹ ಶ್ರೇಷ್ಠವೂ, ದೇವತಾತ್ಮರಾದ ನಿಮ್ಮನ್ನು ವಹಿಸುವುವೂ ಆದ ಆ ಅಶ್ವಗಳು ಆಯಾಸಗೊಳ್ಳುವುದಿಲ್ಲ.

## English Translation.

Nourishers of all, the chariot of you two who are associated in a common purpose, traverses the seven flowing (streams) the excellent horses harnessed by the gods, who bear you rapidly, careering in the car, are never wearied

ಸಂಹಿತಾಪಾಠಃ

ಅಸಶ್ಚತಾ ಮಘವದ್ಭ್ಯೋ ಹಿ ಭೂತಂ ಯೇ ರಾಯಾ ಮಘದೇಯಂ ಜುನಂತಿ |
ಪ್ರ ಯೇ ಬಂಧುಂ ಸೂನೃತಾಭಿಸ್ತಿರಂತೇ ಗವ್ಯಾ ಪೃಂಚಂತೋ ಅಶ್ವ್ಯಾ ಮಘಾನಿ ॥ ೯ ॥

ಪದಪಾಠಃ

ಅಸಶ್ಚತಾ | ಮಘವತ್ಽಭ್ಯಃ | ಹಿ | ಭೂತಂ | ಯೇ | ರಾಯಾ | ಮಘಽದೇಯಂ | ಜುನಂತಿ |
ಪ್ರ | ಯೇ | ಬಂಧುಂ | ಸೂನೃತಾಭಿಃ | ತಿರಂತೇ | ಗವ್ಯಾ | ಪೃಂಚಂತಃ | ಅಶ್ವ್ಯಾ | ಮಘಾನಿ ॥ ೯ ॥

ಸಾಯಣಭಾಷ್ಯಂ

**ಅಸಶ್ಚತಾ ಕುತ್ರಾಪ್ಯಸಜ್ಯಮಾನೌ ಯುವಾಂ ಮಘವದ್ಭ್ಯೋ ಧನವದ್ಭ್ಯೋ ಹವಿಷ್ಮದ್ಭ್ಯೋ ಯಜಮಾನೇಭ್ಯಸ್ತೇಷಾಮರ್ಥಾಯ ಭೂತಂ ಹಿ | ಭವತಂ | ತೇಭ್ಯ ಏವಾನುರಕ್ತೌ ಭವತಂ | ಅನು-**

ಗ್ರಾಹ್ಯಾ ಏವ ವಿಶೇಷ್ಯಂತೇ । ಯೇ ರಾಯಾ ಧನೇನ ನಿಮಿತ್ತೇನ ರಾಯಾ ಯುಕ್ತಾ ವಾ ಮಘದೇಯಂ ದಾತವ್ಯಂ ಮಘಂ ಧನಂ ಹವಿರ್ಲಕ್ಷಣಂ ವಾ ಜುನಂತಿ ಪ್ರೇರಯಂತಿ ಯಚ್ಛಂತಿ । ಯೇ ಚ ಬಂಧುಂ । ಸ್ನೇಹೇನ ಬಧ್ನಾತೀತಿ ಬಂಧುಃ । ತಂ ಸ್ವಸಂಬಂಧಿನಂ । ಅಥವಾ ಫಲೇನ ಬಧ್ನಾತೀತಿ ಬಂಧುರಧ್ವರ್ಯ್ವಾದಿಃ । ತಂ ಸೂನೃತಾಭಿಃ ಪ್ರಿಯಸತ್ಯಾತ್ಮಿಕಾಭಿರ್ವಾಗ್ಭಿಃ ಪ್ರ ತಿರಂತೇ ಪ್ರವರ್ಧಯಂತಿ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ । ಕಿಂ ಕುರ್ವಂತಃ । ಗವ್ಯಾ ಗೋರೂಪಾಣ್ಯಶ್ವ್ಯಾಶ್ವರೂಪಾಣಿ ಚ ಮಘಾನಿ ಧನಾನಿ ಪೃಂಚಂತೋಽರ್ಥಿಭ್ಯಃ ಪ್ರಯಚ್ಛಂತಃ । ತೇಭ್ಯೋ ಮಘವದ್ಭ್ಯೋ ಭೂತಮಿತಿ ॥

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ಯೇ**—ಯಾರು । **ರಾಯಾ**—ಧನಯುಕ್ತರಾಗಿ । **ಮಘದೇಯಂ**—ಅರ್ಪಣೆಗೆ ಯೋಗ್ಯವಾದಹವಿಸ್ಸನ್ನು । **ಜುನಂತಿ**—ಅರ್ಪಿಸುವರೋ । **ಯೇ**—ಯಾರು । **ಗವ್ಯಾ**—ಗೋಯುಕ್ತವೂ । **ಅಶ್ವ್ಯಾ**—ಅಶ್ವಯುಕ್ತವೂ ಆದ । **ಮಘಾನಿ**—ಧನಗಳನ್ನು । **ಪೃಂಚಂತಃ**—ಹಂಚುತ್ತಾ । **ಬಂಧುಂ**—ತಮಗೆ ಸೇರಿದ ಪರಿವಾರವನ್ನು । **ಸೂನೃತಾಭಿಃ**—ಉತ್ತಮವಾದ ವಾಕ್ಯಗಳಿಂದ । **ಪ್ರ ತಿರಂತೇ**—ಪುಷ್ಟಿಗೊಳಿಸುವರೋ ಅಂತಹ । **ಮಘವದ್ಭ್ಯಃ**—ಹವಿರ್ಯುಕ್ತರಾದ ಯಜಮಾನರಿಗಾಗಿ । **ಅಸಶ್ಚತಾ**—ಆಲಸ್ಯವಿಲ್ಲದ ಮನಸ್ಸಿನಿಂದ ಕೂಡಿ । **ಭೂತಂ ಹಿ**—ಅವರ ರಕ್ಷಕರಾಗಿರಿ

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಧನಯುಕ್ತರಾದ ಯಾರು ಅರ್ಪಣೆಗೆ ಯೋಗ್ಯವಾದ ಹವಿಸ್ಸನ್ನು ನಿಮಗೆ ಅರ್ಪಿಸುವರೋ, ಯಾರು ಗೋಯುಕ್ತವೂ ಅಶ್ವಯುಕ್ತವೂ ಆದ ಧನಗಳನ್ನು ಹಂಚುತ್ತ ತಮಗೆ ಸೇರಿದ ಬಂಧುವರ್ಗವನ್ನು ಉತ್ತಮವಾದ ಆದರವಾಕ್ಯಗಳನ್ನು ಹೇಳಿ ಪುಷ್ಟಿಗೊಳಿಸುವರೋ ಅಂತಹ ಹವಿರ್ಯುಕ್ತರಾದ ಯಜಮಾನರಿಗೆ ಆಲಸ್ಯವಿಲ್ಲದ ಮನಸ್ಸಿನಿಂದಕೂಡಿ ಅವರ ರಕ್ಷಕರಾಗಿರಿ

English Translation

Be propitious to those who are affluent (in oblations), who offer the wealth that is to be offered for the sake of riches they who encourage a kinsman with kind commendations, distributing wealth of cattle and of horses

ಸಂಹಿತಾಪಾಠಃ

ನೂ ಮೇ ಹವಮಾ ಶೃಣುತಂ ಯುವಾನಾ ಯಾಸಿಷ್ಟಂ ವರ್ತಿರಶ್ವಿನಾವಿರಾವತ್ ।
ಧತ್ತಂ ರತ್ನಾನಿ ಜರತಂ ಚ ಸೂರೀನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

ಪದಪಾಠಃ

ನು । ಮೇ । ಹವಂ । ಆ । ಶೃಣುತಂ । ಯುವಾನಾ । ಯಾಸಿಷ್ಟಂ । ವರ್ತಿಃ । ಅಶ್ವಿನೌ । ಇರಾಽವತ್ ।
ಧತ್ತಂ । ರತ್ನಾನಿ । ಜರತಂ । ಚ । ಸೂರೀನ್ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೧೦ ॥

ಸಾಯಣಭಾಷ್ಯಂ

ಹೇ ಯುವಾನಾ ನಿತ್ಯಯೌವನೌ ಸ್ವದ್ಯ ಯುವಾಂ ಮೇ ಹವಮಸ್ಮದೀಯಾಂ ಸ್ತುತಿಮಾ ಶೃಣುತಂ । ಶ್ರುತ್ವಾ ಚ ಹೇ ಅಶ್ವಿನೌ ಇರಾವದ್ಧವಿರ್ಯುಕ್ತಂ ವರ್ತಿರ್ಗೃಹಂ ಯಾಸಿಷ್ಟಂ । ಆಗಚ್ಛತಂ । ಆಗತ್ಯ ಚ ರತ್ನಾನಿ ರಮಣೀಯಾನಿ ಧನಾನಿ ದತ್ತಂ । ಧತ್ತಂ । ಸೂರೀನ್ ಸ್ತೋತೄಞ್ಜರತಂ । ವರ್ಧಯತಂ ॥ ಧಾತೂನಾಮನೇಕಾರ್ಥತ್ವಾತ್ ॥ ಶಿಷ್ಟಂ ಸ್ಪಷ್ಟಂ ॥

ಪ್ರತಿಪದಾರ್ಥ

**ಯುವಾನಾ**—ನಿತ್ಯತರುಣರಾದ । **ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ । **ನು**—ಈಗ । **ಮೇ**—ನನ್ನ **ಹವಂ**—ಸ್ತುತಿಯನ್ನು । **ಆ ಶೃಣುತಂ**—ಕೇಳಿರಿ । **ಇರಾವತ್**—ಹವಿಸ್ಸಿನಿಂದ ಕೂಡಿದ । **ವರ್ತಿಃ**—ನಮ್ಮ ಗೃಹವನ್ನು । **ಯಾಸಿಷ್ಟಂ**—ಪ್ರವೇಶಿಸಿರಿ । **ರತ್ನಾನಿ**—ರಮಣೀಯವಾದ ಧನಗಳನ್ನು । **ಧತ್ತಂ**—ಕೊಡಿರಿ । **ಸೂರೀನ್**—ಸ್ತುತಿಕರ್ತರನ್ನು । **ಜರತಂ**—ಪುಷ್ಟಿಗೊಳಿಸಿರಿ । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಮಂಗಳ ಸಾಧನಗಳಿಂದ । **ಪಾತ**—ರಕ್ಷಿಸಿರಿ.

ಭಾವಾರ್ಥ

ನಿತ್ಯತರುಣರಾದ ಎಲೈ ಅಶ್ವಿನೀದೇವತೆಗಳೇ, ನನ್ನ ಸ್ತುತಿಯನ್ನು ಈಗ ಕೇಳಿರಿ. ಹವಿಸ್ಸಿನಿಂದ ಕೂಡಿದ ನಮ್ಮ ಗೃಹವನ್ನು ಪ್ರವೇಶಿಸಿರಿ. ನಮಗೆ ರಮಣೀಯವಾದ ಧನಗಳನ್ನು ಕೊಡಿರಿ. ಸ್ತುತಿಕರ್ತರನ್ನು ಪುಷ್ಟಿಗೊಳಿಸಿರಿ. ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Ever youthful Aswins, hear to-day my invocation come Ashwins, to the dwelling where the oblation is prepared grant wealth (to the offerer), elevate the worshipper and do you ever cherish us with blessings

———

# ಅರವತ್ತೆಂಟನೆಯ ಸೂಕ್ತವು

ಸಾಯಣಭಾಷ್ಯಂ

**ಆ ಶುಭ್ರಾ ಯಾತಮಿತಿ ನವರ್ಚಂ ತ್ರಯೋದಶಂ ಸೂಕ್ತಂ ವಸಿಷ್ಠಸ್ಯಾರ್ಷಮಾಶ್ವಿನಂ । ಆದಿತಃ ಸಪ್ತ ವಿರಾಜೋಽಷ್ಟಮೀನವಮ್ಯೌ ತ್ರಿಷ್ಟುಭೌ । ಅನುಕ್ರಮ್ಯತೇ ಚ । ಆ ಶುಭ್ರಾ ನವ ಸಪ್ತಾದ್ಯಾ ವಿರಾಜ ಇತಿ । ಸೂಕ್ತವಿನಿಯೋಗೋ ಲೈಂಗಿಕಃ ॥**

**ಅನುವಾದವು—ಆ ಶುಭ್ರಾ ಯಾತಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಅಶ್ವಿನೀದೇವತೆಗಳು ದೇವತೆಯು, ಈ ಸೂಕ್ತದ ಮೊದಲಿನ ಏಳು ಋಕ್ಕುಗಳು ವಿರಾಟ್‌ಛಂದಸ್ಕವು, ಎಂಟು ಮತ್ತು ಒಂಭತ್ತನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು ಅನುಕ್ರಮಣಿಕೆಯಲ್ಲಿ—**ಆ ಶುಭ್ರಾ ನವ ಸಪ್ತಾದ್ಯಾ ವಿರಾಜಃ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು

## ಸೂಕ್ತ—೬೮

ಮಂಡಲ—೭ ॥ ಅನುವಾಕ—೪ ॥ ಸೂಕ್ತ—೬೮ ॥
ಅಷ್ಟಕ—೫ ॥ ಅಧ್ಯಾಯ—೫ ॥ ವರ್ಗ—೧೪, ೧೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
ಋಷಿಃ—ವಸಿಷ್ಠಃ ॥
ದೇವತಾ—ಅಶ್ವಿನಾ ॥
ಛಂದಃ—೧–೭, ವಿರಾಟ್ । ೮, ೯ ತ್ರಿಷ್ಟುಪ್ ।

ಸಂಹಿತಾಪಾಠಃ

ಆ ಶುಭ್ರಾ ಯಾತಮಶ್ವಿನಾ ಸ್ವಶ್ವಾ ಗಿರೋ ದಸ್ರಾ ಜುಜುಷಾಣಾ ಯುವಾ-
ಕೋಃ ।
ಹವ್ಯಾನಿ ಚ ಪ್ರತಿಭೃತಾ ವೀತಂ ನಃ ॥ ೧ ॥

ಪದಪಾಠಃ

ಆ । ಶುಭ್ರಾ । ಯಾತಂ । ಅಶ್ವಿನಾ । ಸುಽಅಶ್ವಾ । ಗಿರಃ । ದಸ್ರಾ । ಜುಜುಷಾಣಾ । ಯುವಾಕೋಃ ।
ಹವ್ಯಾನಿ । ಚ । ಪ್ರತಿಽಭೃತಾ । ವೀತಂ । ನಃ ॥ ೧ ॥

ಸಾಯಣಭಾಷ್ಯಂ

**ಹೇ ಶುಭ್ರಾ ದೀಪ್ತೌ ಸ್ವಶ್ವಾ ಶೋಭನಾಶ್ವೌ ಹೇ ಅಶ್ವಿನಾಶ್ವಿನೌ ಆ ಯಾತಂ । ಅಸ್ಮದ್ಯಜ್ಞಮಾಗಚ್ಛತಂ । ದಸ್ರಾ ಶತ್ರೂಣಾಮುಪಕ್ಷಪಯಿತಾರೌ ಯುವಾಂ ಯುವಾಕೋರ್ಯುವಾಂ ಕಾಮಯಮಾನಸ್ಯ ಮಮ ಗಿರಃ ಸ್ತುತೀರ್ಜುಜುಷಾಣಾ ಸೇವಮಾನೌ ಭವತಮಿತಿ ಶೇಷಃ । ನ ಕೇವಲಂ ಸ್ತುತಿಂ ಕಿಂತು ನೋಽಸ್ಮದೀಯಾನಿ ಪ್ರತಿಭೃತಾ ಸಂಭೃತಾನಿ ಹವ್ಯಾನಿ ಹವೀಂಷಿ ಚ ವೀತಂ ಭಕ್ಷಯತಂ ॥**

ಪ್ರತಿಪದಾರ್ಥ

**ಶುಭ್ರಾ**—ಪ್ರಕಾಶಮಾನರೂ | **ಸ್ವಶ್ವಾ**—ಉತ್ತಮವಾದ ಅಶ್ವವುಳ್ಳವರೂ ಆದ | **ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ | **ಆಯಾತಂ**—ನಮ್ಮಲ್ಲಿಗೆ ಬನ್ನಿರಿ | **ದಸ್ರಾ**—ಶತ್ರುನಾಶಕರಾದ ನೀವು | **ಯುವಾಕೋಃ**—ನಿಮ್ಮ ಸೇವೆಯನ್ನಪೇಕ್ಷಿಸುವ ನನ್ನ | **ಗಿರಃ**—ಸ್ತುತಿಗಳನ್ನು | **ಜುಜುಷಾಣಾ**—ಸೇವಿಸುತ್ತ | **ನಃ**—ನಮ್ಮಿಂದ **ಪ್ರತಿಭೃತಾ**—ಸಂಪಾದಿತವಾದ | **ಹವ್ಯಾನಿ ಚ**—ಹವಿಸ್ಸುಗಳನ್ನೂ | **ವೀತಂ**—ಭಕ್ಷಿಸಿರಿ

ಭಾವಾರ್ಥ

ಪ್ರಕಾಶಮಾನರೂ, ಉತ್ತಮವಾದ ಅಶ್ವವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ನಮ್ಮಲ್ಲಿಗೆ ಬನ್ನಿರಿ. ಶತ್ರುನಾಶಕರಾದ ನೀವು ನಿಮ್ಮ ಸೇವೆಯನ್ನಪೇಕ್ಷಿಸುವ ನನ್ನ ಸ್ತುತಿಗಳನ್ನು ಸೇವಿಸುತ್ತ ನಮ್ಮಿಂದ ಸಂಪಾದಿತವಾದ ಹವಿಸ್ಸುಗಳನ್ನು ಭಕ್ಷಿಸಿರಿ

English Translation

Illustrious Aswins, lords of handsome horses, come hither, propitiated, Dasras, by the praises of your adorer, and partake of our consecrated oblations.

ಸಂಹಿತಾಪಾಠಃ

ಪ್ರ ವಾಮಂಧಾಂಸಿ ಮದ್ಯಾನ್ಯಸ್ಥುರರಂ ಗಂತಂ ಹವಿಷೋ ವೀತಯೇ ಮೇ |

ತಿರೋ ಅರ್ಯೋ ಹವನಾನಿ ಶ್ರುತಂ ನಃ ॥ ೨ ॥

ಪದಪಾಠಃ

ಪ್ರ | ವಾಂ | ಅಂಧಾಂಸಿ | ಮದ್ಯಾನಿ | ಅಸ್ಥುಃ | ಅರಂ | ಗಂತಂ | ಹವಿಷಃ | ವೀತಯೇ | ಮೇ |

ತಿರಃ | ಅರ್ಯಃ | ಹವನಾನಿ | ಶ್ರುತಂ | ನಃ ॥ ೨ ॥

ಸಾಯಣಭಾಷ್ಯಂ

ಪ್ರ ವಾಮಂಧಾಂಸೀತ್ಯೇಷಾಶ್ವಿನಶಸ್ತ್ರಯಾಜ್ಯಾ | ಸೂತ್ರಿತಂ ಚ | ಪ್ರ ವಾಮಂಧಾಂಸಿ ಮದ್ಯಾನ್ಯಸ್ಥುರಭಾ ಪಿಬತಮಶ್ವಿನಾ | ಆ-೬ ೫ | ಇತಿ ||

ಹೇ ಅಶ್ವಿನೌ ವಾಂ ಯುವಾಭ್ಯಾಂ ಮದ್ಯಾನಿ ಮದಜನಕಾನ್ಯಂಧಾಂಸಿ ಸೋಮಲಕ್ಷಣಾನ್ಯನ್ನಾನಿ ಪ್ರಾಸ್ಥುಃ | ಪ್ರಾಸ್ಥಿಷತ | ಗೃಹೀತಾನ್ಯಾಸನ್ನಿತ್ಯರ್ಥಃ | ಅತೋ ಯುವಾಂ ಮೇ ಮಮ ಹವಿಷೋ ವೀತಯೇ ಪಾನಾಯಾರಮತ್ಯರ್ಥಂ ಶೀಘ್ರಂ ಗಂತಂ | ಆಗಚ್ಛತಂ | ಅರ್ಯೋಽರೇರಸ್ಮದ್ವಿರೋಧಿನೋ ಹವನಾನಿ ತಿರಸ್ತಿರಸ್ಕೃತ್ಯ ನಃ | ಅಸ್ಮದಾಹ್ವಾನಮಿತ್ಯರ್ಥಃ | ತಚ್ಛ್ರುತಂ | ಶೃಣುತಂ || ಶ್ರುತಮಿತ್ಯಸ್ಯ ಶಾಖ್ಯಾದಿತ್ವಾದನಿಘಾತಃ ||

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ವಾಂ**—ನಿಮಗಾಗಿ | **ಮದ್ಯಾನಿ**—ಹರ್ಷಕಾರಕಗಳಾದ | **ಅಂಧಾಂಸಿ**—ಸೋಮರೂಪವಾದ ಅನ್ನಗಳು | **ಪ್ರ ಅಸ್ಥುಃ**—ಸ್ಥಾಪಿತವಾಗಿವೆ. | **ಮೇ**—ನನ್ನ | **ಹವಿಷಃ**—ಹವಿಸ್ಸುಗಳನ್ನು | **ವೀತಯೇ**—ಪಾನಮಾಡುವುದಕ್ಕಾಗಿ | **ಅರಂ**—ಶೀಘ್ರವಾಗಿ | **ಗಂತಂ**—ಬನ್ನಿರಿ. | **ಅರ್ಯಃ**—ನಮ್ಮ ಶತ್ರುವಿನ | **ಹವನಾನಿ**—ಆಹ್ವಾನಗಳನ್ನು | **ತಿರಃ**—ತಿರಸ್ಕರಿಸಿರಿ | **ನಃ**—ನಮ್ಮ ಆಹ್ವಾನವನ್ನು | **ಶ್ರುತಂ**--ಕೇಳಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಿಮಗಾಗಿ ಹರ್ಷಕಾರಕವಾದ ಸೋಮವು ಸ್ಥಾಪಿತವಾಗಿದೆ. ನನ್ನ ಹವಿಸ್ಸುಗಳನ್ನು (ಸೋಮರಸಗಳನ್ನು) ಪಾನಮಾಡುವುದಕ್ಕಾಗಿ ಶೀಘ್ರವಾಗಿ ಬನ್ನಿರಿ ನಿಮ್ಮ ಶತ್ರುವಿನ ಆಹ್ವಾನಗಳನ್ನು ತಿರಸ್ಕರಿಸಿರಿ. ನಮ್ಮ ಆಹ್ವಾನವನ್ನು ಮಾತ್ರ ಕೇಳಿರಿ

English Translation

The exhilarating viands have been prepared for you come quickly to partake of my oblation· disregarding the invocations of an adversary, listen to ours

ವಿಶೇಷವಿಷಯಗಳು

**ಪ್ರ ವಾಮಂಧಾಂಸಿ** ಎಂಬ ಈ ಋಕ್ಕನ್ನು ಆಶ್ವಿನಶಸ್ತ್ರಮಂತ್ರಗಳಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರ ವಾಮಂಧಾಂಸಿ ಮದ್ಯಾನ್ಯಸ್ಥುರುಭಾ ಪಿಬತಮಶ್ವಿನಾ** ಎಂಬ ಸೂತ್ರದಿಂದ ( ೮ ೬-೫ ) ವಿವೃತವಾಗಿರುವುದು

ಸಂಹಿತಾಪಾಠಃ

ಪ್ರ ವಾಂ ರಥೋ ಮನೋಜವಾ ಇಯರ್ತಿ ತಿರೋ ರಜಾಂಸ್ಯಶ್ವಿನಾ ಶತೋತಿಃ।

ಅಸ್ಮಭ್ಯಂ ಸೂರ್ಯಾವಸೂ ಇಯಾನಃ ॥ ೩ ॥

ಪದಪಾಠಃ

ಪ್ರ । ವಾಂ । ರಥಃ । ಮನಃऽಜವಾಃ । ಇಯರ್ತಿ । ತಿರಃ । ರಜಾಂಸಿ । ಅಶ್ವಿನಾ । ಶತऽಊತಿಃ ।

ಅಸ್ಮಭ್ಯಂ । ಸೂರ್ಯಾವಸೂ ಇತಿ । ಇಯಾನಃ ॥ ೩ ॥

ಸಾಯಣಭಾಷ್ಯಂ

**ಹೇ ಸೂರ್ಯಾವಸೂ ಸೂರ್ಯಾಯಾಃ ಸಹ ರಥೇ ವಸಂತೌ ವಾಂ ಯುವಯೋ ರಥೋऽಸ್ಮಭ್ಯಮಸ್ಮದರ್ಥಮಿಯಾನೋ ಯಾಚ್ಯಮಾನಃ ಸನ್ನಿಯರ್ತಿ। ಆಗಚ್ಛತ್ಯಸ್ಮದ್ಯಜ್ಞಂ। ಅಥವಾ ವಾಂ**

ಪ್ರೇರಯತಿ ಗಮನಾಯ । ಕೀದೃಶೋ ರಥಃ । ಮನೋಜವಾ ಮನೋವೇಗಃ ಶತೋತಿರಪರಿಮಿತಾಸ್ಮದ್ವಿಷಯರಕ್ಷಣಃ । ಕಿಂ ಕುರ್ವನ್ । ರಜಾಂಸಿ ಲೋಕಾಂಸ್ತಿರಸ್ತಿರಸ್ಕೃತ್ಯಾತಿಕ್ರಮ್ಯೇಯರ್ತೀತಿ ॥

ಪ್ರತಿಪದಾರ್ಥ

**ಸೂರ್ಯಾವಸೂ**—ಸೂರ್ಯೆಯೊಂದಿಗೆ ರಥದಲ್ಲಿ ಕುಳಿತಿರುವ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ । **ಮನೋಜವಾಃ**—ಮನೋವೇಗವುಳ್ಳದ್ದೂ । **ಶತೋತಿಃ**—ಅನೇಕ ವಿಧವಾದ ರಕ್ಷಣೆಯುಳ್ಳದ್ದೂ ಆದ । **ರಥಃ**—ರಥವು । **ರಜಾಂಸಿ**—ಲೋಕಗಳನ್ನೆಲ್ಲಾ । **ತಿರಃ**—ದಾಟಿಕೊಂಡು । **ಅಸ್ಮಭ್ಯಂ**—ನಮಗಾಗಿ । **ಇಯಾನಃ**—ಪ್ರಾರ್ಥಿಸಲ್ಪಟ್ಟು । **ಪ್ರ ಇಯರ್ತಿ**—ಬರುತ್ತದೆ (ನಿಮ್ಮನ್ನು ಕರೆತರುತ್ತದೆ)

ಭಾವಾರ್ಥ

ಸೂರ್ಯೆಯೊಂದಿಗೆ ರಥದಲ್ಲಿ ಕುಳಿತಿರುವ ಎಲೈ ಅಶ್ವಿನೀದೇವತೆಗಳೇ, ಮನೋವೇಗವುಳ್ಳದ್ದೂ, ಅನೇಕವಿಧವಾದ ರಕ್ಷಣೆಯುಳ್ಳದ್ದೂ ಆದ ನಿಮ್ಮ ರಥವು ಲೋಕಗಳನ್ನೆಲ್ಲ ದಾಟಿಕೊಂಡು ನಮಗಾಗಿ ಪ್ರಾರ್ಥಿಸಲ್ಪಟ್ಟು ಬರುತ್ತದೆ. ನಿಮ್ಮನ್ನು ಕರೆತರುತ್ತದೆ

English Translation

Your chariot, Ashwins, in which you ride with Surya, hastens towards us at our solicitation, traversing the regions as swift as thought, and laden with a hundred blessings

ಸಂಹಿತಾಪಾಠಃ

ಅಯಂ ಹ ಯದ್ವಾಂ ದೇವಯಾ ಉ ಅದ್ರಿರೂರ್ಧ್ವೋ ವಿವಕ್ತಿ ಸೋಮ-
ಸುದ್ಯುವಭ್ಯಾಂ ।
ಆ ವಲ್ಗೂ ವಿಪ್ರೋ ವವೃತೀತ ಹವ್ಯೈಃ ॥ ೪ ॥

ಪದಪಾಠಃ

ಅಯಂ । ಹ । ಯತ್ । ವಾಂ । ದೇವऽಯಾಃ । ಊಂ ಇತಿ । ಅದ್ರಿಃ । ಊರ್ಧ್ವಃ । ವಿವಕ್ತಿ । ಸೋಮಽ-
ಸುತ್ । ಯುವऽಭ್ಯಾಂ ।
ಆ । ವಲ್ಗೂ ಇತಿ । ವಿಪ್ರಃ । ವವೃತೀತ । ಹವ್ಯೈಃ ॥ ೪ ॥

ಸಾಯಣಭಾಷ್ಯಂ

ಯದ್ಯದಾ ವಾಂ ಯುವಾಂ ಪ್ರತಿ ದೇವಯಾ ದೇವೌ ಯುವಾಂ ಕಾಮಯಮಾನಃ । ಉ ಇತಿ ಪೂರಣಃ । ಅಯಮದ್ರಿರಭಿಷವಗ್ರಾವಾ ಸೋಮಸುತ್ ಸೋಮಮಭಿಷುಣ್ವನ್ ಯುವಭ್ಯಾಂ । ಯುವಾಭ್ಯಾಮರ್ಥಾಯಾಭಿಷುಣ್ವನ್ನಿತಿ ಸಂಬಂಧಃ । ಏವಂ ಕುರ್ವನ್ನೂರ್ಧ್ವ ಉನ್ನತಃ ಸನ್ ವಿವಕ್ತಿ ಉಚ್ಚೈಃ ಶಬ್ದಯತಿ ತದಾನೀಂ ವಲ್ಗೂ ಸುಂದರೌ ಯುವಾಂ ವಿಪ್ರೋ ಮೇಧಾವೀ ಯಜಮಾನೋ ಹವ್ಯೈರ್ಹವಿರ್ಭಿರಾ ವವೃತೀತ । ಆವರ್ತಯತಿ ॥

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ಯತ್**—ಯಾವಾಗ । **ವಾಂ**—ನಿಮ್ಮನ್ನುದ್ದೇಶಿಸಿ । **ದೇವಯಾಃ**—ದೇವತೆಗಳಾದ ನಿಮ್ಮನ್ನಪೇಕ್ಷಿಸುವ। **ಅಯಂ ಅದ್ರಿಃ**—ಈ ಹಿಂಡುವ ಕಲ್ಲು । **ಯುವಭ್ಯಾಂ**—ನಿಮಗಾಗಿ । **ಸೋಮಸುತ್**—ಸೋಮವನ್ನು ಹಿಂಡುತ್ತ । **ಊರ್ಧ್ವಃ**—ಮೇಲಕ್ಕೆದ್ದು । **ವಿವಕ್ತಿ**—ಶಬ್ದಮಾಡುವುದೋ ಆಗ । **ವಲ್ಗೂ**—ಸುಂದರ ರೂಪರಾದ ನಿಮ್ಮನ್ನು । **ವಿಪ್ರಃ**—ಮೇಧಾವಿಯಾದ ಯಜಮಾನನು । **ಹವ್ಯೈಃ**—ಹವಿಸ್ಸುಗಳಿಂದ । **ಆ ವವೃತೀತ**—ಹಿಂತಿರುಗುವಂತೆ ಮಾಡುತ್ತಾನೆ

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಯಾವಾಗ ನಿಮ್ಮನ್ನುದ್ದೇಶಿಸಿ ದೇವತೆಗಳಾದ ನಿಮ್ಮನ್ನಪೇಕ್ಷಿಸುವ ಈ ಹಿಂಡುವ ಕಲ್ಲು ನಿಮಗಾಗಿ ಸೋಮವನ್ನು ಹಿಂಡುತ್ತ ಮೇಲಕ್ಕೆದ್ದು ಶಬ್ದಮಾಡುವುದೋ ಆಗ ಸುಂದರರೂಪವಾದ ನಿಮ್ಮನ್ನು ಮೇಧಾವಿಯಾದ ಯಜಮಾನನು ಹವಿಸ್ಸುಗಳಿಂದ ಹಿಂತಿರುಗುವಂತೆ ಮಾಡುತ್ತಾನೆ

English Translation

When the stone, seeking to propitiate you two divinities, is raised aloft and loudly sounds, expressing for you the Soma juice, then the pious worshipper brings you back, beautiful divinities, by his oblations.

ಸಂಹಿತಾಪಾಠಃ

ಚಿತ್ರಂ ಹ ಯದ್ವಾಂ ಭೋಜನಂ ನ್ವಸ್ತಿ ನ್ಯತ್ರಯೇ ಮಹಿಷ್ವಂತಂ ಯುಯೋತಂ ।
ಯೋ ವಾಮೋಮಾನಂ ದಧತೇ ಪ್ರಿಯಃ ಸನ್ ॥ ೫ ॥

ಪದಪಾಠಃ

ಚಿತ್ರಂ । ಹ । ಯತ್ । ವಾಂ । ಭೋಜನಂ । ನು । ಅಸ್ತಿ । ನಿ । ಅತ್ರಯೇ । ಮಹಿಷ್ವಂತಂ । ಯುಯೋತಂ ।

ಯಃ । ವಾಂ । ಓಮಾನಂ । ದಧತೇ । ಪ್ರಿಯಃ । ಸನ್ ॥ ೫ ॥

ಸಾಯಣಭಾಷ್ಯಂ

ಹೇ ಅಶ್ವಿನೌ ವಾಂ ಯುವಯೋಶ್ಚಿತ್ರಂ ಚಾಯನೀಯಂ ಯದ್ಭೋಜನಂ ಧನಮಸ್ತಿ ಹ ಅಸ್ತಿ ಖಲು । ನ್ಯಿತಿ ಪೂರಣಃ । ತದಸ್ಮಭ್ಯಂ ದತ್ತಮಿತ್ಯರ್ಥಃ । ಅಥ ತಯೋಃ ಸ್ತುತಿಃ । ಅತ್ರಯ ಏತನ್ನಾಮಕಾದೃಷೇಃ । ಪಂಚಮ್ಯರ್ಥೇ ಚತುರ್ಥೀ । ತಸ್ಮಾನ್ಮಹಿಷ್ವಂತಮಪ್ರಬೀಸಂ ನಿ ಯುಯೋತಂ । ಪೃಥಕ್ಕುರುತಂ । ಯೋಽತ್ರಿಃ ಪ್ರಿಯಃ ಸನ್ ಸ್ತೋತೃತ್ವಾದ್ಯುವಾಭ್ಯಾಂ ಪ್ರಿಯಭೂತಃ ಸನ್ ಯುವಾಭ್ಯಾಮೇವ ಕೃತಮೋಮಾನಂ ರಕ್ಷಣಂ ಸುಖಂ ದಧತೇ ಧಾರಯತಿ ॥

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ವಾಂ**— ನಿಮಗೆ ಸೇರಿದ । **ಚಿತ್ರಂ**— ಆಕರ್ಷಕವಾದ । **ಯತ್ ಭೋಜನಂ**— ಯಾವ ಭೋಗಯೋಗ್ಯವಾದ ಧನವು । **ಅಸ್ತಿ ಹ**— ಇರುವುದೋ ಅದನ್ನು ನಮಗೆ ಕೊಡಿರಿ । **ಯಃ**— ಯಾವ ಅತ್ರಿಯು । **ಪ್ರಿಯಃ ಸನ್**— ನಿಮ್ಮ ಪ್ರೀತಿಗೆ ಪಾತ್ರನಾಗಿ । **ವಾಂ ಓಮಾನಂ**— ನಿಮ್ಮ ರಕ್ಷಣವನ್ನು । **ದಧತೇ**— ಹೊಂದಿರುವನೋ ಅಂತಹ । **ಅತ್ರಯೇ**— ಅತ್ರಿಯಿಂದ । **ಮಹಿಷ್ವಂತಂ**— ಅತ್ಯಧಿಕವಾದ ಬಂಧನವನ್ನು **ನಿ ಯುಯೋತಂ**— ಬೇರೆಮಾಡಿದಿರಿ

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಿಮಗೆ ಸೇರಿದ ಆಕರ್ಷಕವಾದ ಯಾವ ಭೋಗಯೋಗ್ಯವಾದ ಧನವಿರುವುದೋ ಅದನ್ನು ನಮಗೆ ಕೊಡಿರಿ ಯಾವ ಅತ್ರಿಯು ನಿಮ್ಮ ಪ್ರೀತಿಗೆ ಪಾತ್ರನಾಗಿ ನಿಮ್ಮ ರಕ್ಷಣವನ್ನು ಹೊಂದಿದ್ದನೋ ಅಂತಹ ಅತ್ರಿಯನ್ನು ಬಂಧನದಿಂದ ಬಿಡಿಸಿದಿರಿ

## English Translation

Wonderful, verily, is the wealth that is yours you have liberated from the cave Atri, who is dear to you, and enjoys your protectiun

ಸಂಹಿತಾಪಾಠಃ

ಉತ ತ್ಯದ್ವಾಂ ಜುರತೇ ಅಶ್ವಿನಾ ಭೂಚ್ಚ್ಯವಾನಾಯ ಪ್ರತೀತ್ಯಂ ಹವಿರ್ದೇ।
ಅಧಿ ಯದ್ವರ್ಪ ಇತಊತಿ ಧತ್ಥಃ ॥ ೬ ॥

ಪದಪಾಠಃ

ಉತ । ತ್ಯತ್ । ವಾಂ । ಜುರತೇ । ಅಶ್ವಿನಾ । ಭೂತ್ । ಚ್ಯವಾನಾಯ । ಪ್ರತೀತ್ಯಂ । ಹವಿಃಽದೇ ।
ಅಧಿ । ಯತ್ । ವರ್ಪಃ । ಇತಃಽಊತಿ । ಧತ್ಥಃ ॥ ೬ ॥

ಸಾಯಣಭಾಷ್ಯಂ

ಉತಾಪಿ ಚ ಹೇ ಅಶ್ವಿನಾಶ್ವಿನೌ ವಾಂ ಯುವಯೋಃ ಕರ್ಮ ಕುರ್ವತೇ ಜುರತೇ ಜೂರ್ಣಾಯ ಹವಿರ್ದೇ ಹವಿರ್ದಾತ್ರೇ ಚ್ಯವಾನಾಯೈತನ್ನಾಮಕಾಯ ಮಹರ್ಷಯೇ ತ್ಯತ್ತತ್ಪ್ರತೀತ್ಯಂ ಪ್ರತಿಗಮನಂ ತಸ್ಯ ರೂಪಸ್ಯ ಪ್ರತ್ಯಾಪ್ತ್ಯೈ ಭೂತ್ । ಅಭೂತ್ । ಕಿಂ ತದಿತಿ । ಯದ್ವರ್ಪೋ ರೂಪಮಿತಊತೀತೋ-ಗಮನಾಖ್ಯಂ ಮೃತ್ಯೋಃ ಸಕಾಶಾದಿತಃಪ್ರಾಪ್ತಿರೂಪಮಧಿ ದಧ್ಥಃ ಅಧ್ಯಧತ್ತಂ । ಯುವಂ ಚ್ಯವಾನ-ಮಶ್ವಿನಾ ಜರಂತಂ ಪುನರ್ಯುವಾನಂ ಚಕ್ರಥುಃ ಶಚೀಭಿಃ । ಋ ೧ ೧೧೭-೧೩ । ಇತ್ಯಾದಿಷು ಚ್ಯವಾನಸ್ಯ ಯುವಯೋರ್ನವೀಕರಣಂ ಪ್ರಸಿದ್ಧಂ ॥

ಪ್ರತಿಪದಾರ್ಥ

**ಉತ**—ಮತ್ತು । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ । **ತ್ಯತ್**—ಪ್ರಸಿದ್ಧವಾದ ಕರ್ಮವು । **ಜುರತೇ**—ಸ್ತುತಿಕರ್ತನೂ । **ಹವಿರ್ದೇ**—ಹವಿಸ್ಸನ್ನು ಅರ್ಪಿಸುವವನೂ ಆದ । **ಚ್ಯವಾನಾಯ**—ಚ್ಯವಾನನೆಂಬ ಮಹರ್ಷಿಗೆ । **ಪ್ರತೀತ್ಯಂ**—ಅವನ ಯೌವನವನ್ನು ಹಿಂತಿರುಗಿಸಿಕೊಡುವ ಶಕ್ತಿಯುಳ್ಳದ್ದಾಗಿ **ಭೂತ್**—ಆಯಿತು । **ಯದ್ವರ್ಪಃ**—ಅವನ ಅದೇ ಸೌಂದರ್ಯವು । **ಇತಊತಿ**—ಮೃತ್ಯುವಿನಿಂದ ಹಿಂತಿರುಗುವಿಕೆಯನ್ನು । **ಅಧಿ ಧತ್ಥಃ**—ಹೊಂದಿತು.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಪ್ರಸಿದ್ಧವಾದ ಕರ್ಮವು ಸ್ತುತಿಕರ್ತನೂ, ಹವಿಸ್ಸನ್ನು ಅರ್ಪಿಸುವವನೂ ಆದ ಚ್ಯವಾನನೆಂಬ ಮಹರ್ಷಿಗೆ ಅವನ ಯೌವನವನ್ನು ಹಿಂತಿರುಗಿಸಿಕೊಡುವ ಶಕ್ತಿಯುಳ್ಳದ್ದಾಗಿ ಆಯಿತು. ಅವನ ಅದೇ ಸೌಂದರ್ಯವು ಮೃತ್ಯುವಿನ ಬಾಯಿಂದ ತಪ್ಪಿಸಿಕೊಂಡಿತು.

## English Translation

Such was your benevolence, Ashwins, to Chyavana, praising and offering oblations, that you in requital rescued his body from departure

ಸಂಹಿತಾಪಾಠಃ

ಉತ ತ್ಯಂ ಭುಜ್ಯುಮಶ್ವಿನಾ ಸಖಾಯೋ ಮಧ್ಯೇ ಜಹುರ್ದುರೇವಾಸಃ ಸ-
ಮುದ್ರೇ ।
ನಿರೀಂ ಪರ್ಷದರಾವಾ ಯೋ ಯುವಾಕುಃ ॥ ೭ ॥

ಪದಪಾಠಃ

ಉತ । ತ್ಯಂ । ಭುಜ್ಯುಂ । ಅಶ್ವಿನಾ । ಸಖಾಯಃ । ಮಧ್ಯೇ । ಜಹುಃ । ದುಃऽಏವಾಸಃ । ಸಮುದ್ರೇ । ನಿಃ । ಈಂ । ಪರ್ಷತ್ । ಅರಾವಾ । ಯಃ । ಯುವಾಕುಃ ॥ ೭ ॥

### ಸಾಯಣಭಾಷ್ಯಂ

ಉತಾಪಿ ಚ ತ್ಯಂ ತಂ ಭುಜ್ಯುಮೇತನ್ನಾಮಾನಂ ಸಮುದ್ರೇ ಮಧ್ಯೇ ಸಮುದ್ರೋದಕಸ್ಯ ಮಧ್ಯೇ ಸಖಾಯೋ ಭುಜ್ಯುಸಖಿಭೂತಾ ದುರೇವಾಸೋ ದುಷ್ಟಗಮನಾ ಜಹುಃ । ತ್ಯಕ್ತವಂತಃ । ಈಮೇನಂ ಸಮುದ್ರಮಧ್ಯೇ ಕ್ಷಿಪ್ತಂ ನಿಃ ಪರ್ಷತ್ । ನಿರಪಾರಯತಂ । ಯೋ ಭುಜ್ಯುರ್ಯುವಾಕುರ್ಯುವಾಂ ಕಾಮಯಿತಾಽರಾವಾರಣವಾನಭಿಗಂತಾ ಚ ತಮೇನಂ ನಿರಪಾರಯತಂ । ಅತ್ರಾಶ್ವಿನೇಷು ಸೂಕ್ತೇಷು ಕಥಾಃ ಸೂಚ್ಯಂತೇ । ಅತ್ರಿಭುಜ್ಯ್ವಾದೀನಾಮಗ್ನಿಜಲಾಧಿಭ್ಯೋ ರಕ್ಷಣರೂಪಾಸ್ತಾಃ ಸರ್ವಾ ಮಹತಾ ಪ್ರಪಂಚೇನಾಸ್ಮಾಭಿರ್ನಾಸತ್ಯಾಭ್ಯಾಂ ಬರ್ಹಿರಿವ । ಋ ೧ ೧೧೬.೧ । ಇತ್ಯತ್ರ ಪ್ರಪಂಚಿತಾಃ । ತಾಸ್ತತ್ರ ದ್ರಷ್ಟವ್ಯಾಃ ॥

### ಪ್ರತಿಪದಾರ್ಥ

**ಉತ**—ಮತ್ತು । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯಃ**—ಯಾವ ಭುಜ್ಯುವು । **ಯುವಾಕುಃ**—ನಿಮ್ಮ ಸೇವೆಯನ್ನಪೇಕ್ಷಿಸುತ್ತಿದ್ದನೋ । **ಅರಾವಾ**—ನಿಮ್ಮಲ್ಲೇ ಭಕ್ತಿಯಿಂದಿದ್ದನೋ । **ತ್ಯಂ ಭುಜ್ಯುಂ**—ಆ ಭುಜ್ಯುವನ್ನು । **ಸಮುದ್ರೇ ಮಧ್ಯೇ**—ಸಮುದ್ರ ಮಧ್ಯದಲ್ಲಿ । **ಸಖಾಯಃ**—ಅವನ ಮಿತ್ರರಂತಿದ್ದು । **ದುರೇವಾಸಃ**—ಅವನಿಗೆ ಕೇಡನ್ನು ಬಯಸಿದವರು । **ಜಹುಃ**—ಎಸೆದರೋ ಆಗ । **ಈಂ**—ಅವನನ್ನು । **ನಿಃ ಪರ್ಷತ್**—ಪೂರ್ಣವಾಗಿ ರಕ್ಷಿಸಿರಿ

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಯಾವ ಭುಜ್ಯುವು ನಿಮ್ಮ ಸೇವೆಯನ್ನಪೇಕ್ಷಿಸುತ್ತಿದ್ದನೋ, ಮತ್ತು ನಿಮ್ಮಲ್ಲೇ ಭಕ್ತಿಯಿಂದಿದ್ದನೋ, ಆ ಭುಜ್ಯುವನ್ನು ಅವನ ಮಿತ್ರರಂತಿದ್ದ ಶತ್ರುಗಳು ಸಮುದ್ರಮಧ್ಯದಲ್ಲಿ ಎಸೆದಾಗ ಅವನನ್ನು ನೀವು ಪೂರ್ಣವಾಗಿ ರಕ್ಷಿಸಿದಿರಿ

### English Translation

When faithless friends had abandoned Bhujyu in the midst of the ocean, you brought him to shore, devoted to and relying upon you

### ಸಂಹಿತಾಪಾಠಃ

ವೃಕಾಯ ಚಿಜ್ಜಸಮಾನಾಯ ಶಕ್ತಮುತ ಶ್ರುತಂ ಶಯವೇ ಹೂಯಮಾನಾ ।
ಯಾವಘ್ನ್ಯಾಮಪಿನ್ವತಮಪೋ ನ ಸ್ತರ್ಯಂ ಚಿಚ್ಛಕ್ತ್ಯಶ್ವಿನಾ ಶಚೀಭಿಃ ॥

### ಪದಪಾಠಃ

ವೃಕಾಯ । ಚಿತ್ । ಜಸಮಾನಾಯ । ಶಕ್ತಂ । ಉತ । ಶ್ರುತಂ । ಶಯವೇ । ಹೂಯಮಾನಾ ।
ಯಾ । ಅಘ್ನ್ಯಾಂ । ಅಪಿನ್ವತಂ । ಅಪಃ । ನ । ಸ್ತರ್ಯಂ । ಚಿತ್ । ಶಕ್ತೀ । ಅಶ್ವಿನಾ । ಶಚೀಭಿಃ ॥ ೮ ॥

ಸಾಯಣಭಾಷ್ಯಂ

ವೃಕಾಯ ಧನಾದಾತ್ರೇ । ಅಭಿಲಷತ ಇತ್ಯರ್ಥಃ । ಚಿದಿತಿ ಪೂರಣಃ । ಅಥವಾ ಪರೇಭ್ಯೋ ಧನಾನಿ ಪ್ರಯಚ್ಛತೇ । ಯದ್ವಾ । ವೃಕಾಯ ವೃಕವದ್ಧಿಂಸಕಾಯ । ಏತನ್ನಾಮಕಾಯ ಜಸಮಾನಾಯ ಕರ್ಮಭಿರುಪಕ್ಷೀಯಮಾಣಾಯರ್ಷಯೇ ಶಕ್ತಂ । ಅಭಿಮತಂ ಧನಮದತ್ತಂ ॥ ಶಕೇರ್ದಾನಾರ್ಥಸ್ಯ ಲುಙ್ಯೇತದ್ರೂಪಂ । ಅಡಭಾವಶ್ಛಾಂದಸಃ ॥ ಉತಾಪಿ ಚ ಶಯವ ಏತನ್ನಾಮಕಾಯರ್ಷಯೇ ಹೂಯಮಾನಾಹೂಯಮಾನೌ ಯುವಾಂ ಶ್ರುತಂ । ಅಶೃಣುತಂ । ಯೌ ಯುವಾಮಘ್ನ್ಯಾಂ ಗಾಮಪಿನ್ವತಂ ಅಪೂರಯತಂ ಕ್ಷೀರೇಣ ಅಪೋ ನಾದ್ಭಿರಿವ ನದೀಂ । ತಾಂ ಯಥೋದಕೇನ ಪೂರಯತಸ್ತದ್ವತ್ । ಕೀದೃಶೀಮಘ್ನ್ಯಾಂ । ಸ್ತರ್ಯಂ ಚಿತ್ ಸ್ತರೀಮಪಿ ನಿವೃತ್ತಪ್ರಸವಾಂ ವೃದ್ಧಾಮಪಿ ಶಕ್ತೀ ಶಕ್ತ್ಯಾ ಸಾಮರ್ಥ್ಯೇನ ದೋಹನಲಕ್ಷಣೇನ ಯುಕ್ತಾಂ ಕೃತ್ವಾ ಶಚೀಭಿರ್ಯುಷ್ಮದೀಯೈಃ ಕರ್ಮಭಿರ್ಹೇ ಅಶ್ವಿನಾವಿತಿ । ಶಯವೇ ಚಿನ್ನಾಸತ್ಯಾ ಶಚೀಭಿರ್ಜಸುರಯೇ ಸ್ತರ್ಯಂ ಪಿಪ್ಯಥುರ್ಗಾಂ । ಋ ೧-೧೧೬-೨೨ । ಇತ್ಯಾದಿ ಹ್ಯುಕ್ತಂ ॥

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಜಸಮಾನಾಯ**—ಕರ್ಮದಿಂದ ಶ್ರಾಂತನಾಗಿದ್ದ । **ವೃಕಾಯ ಚಿತ್**—ವೃಕನೆಂಬ ಋಷಿಗೂ । **ಶಕ್ತಂ**—ಅವನು ಇಚ್ಛಿಸಿದ ಧನವನ್ನು ಕೊಟ್ಟಿರಿ । **ಉತ**—ಮತ್ತು । **ಶಯವೇ**—ಶಯುವಿಗಾಗಿ । **ಹೂಯಮಾನಾ**—ಪ್ರಾರ್ಥಿತರಾದಾಗ । **ಶ್ರುತಂ**—ಆ ಆಹ್ವಾನವನ್ನು ಕೇಳಿದಿರಿ । **ಅಪೋ ನ**—ನದಿಯನ್ನು ಉದಕದಿಂದ ತುಂಬುವಂತೆ । **ಯೌ**—ನೀವು । **ಸ್ತರ್ಯಂಚಿತ್**—ಮುದಿಯಾಗಿದ್ದರೂ ಸಹ । **ಶಕ್ತೀ**—ಕರೆಯುವ ಸಾಮರ್ಥ್ಯವುಳ್ಳದ್ದನ್ನಾಗಿ ಮಾಡಿ । **ಶಚೀಭಿಃ**—ನಿಮ್ಮ ಕರ್ಮಗಳಿಂದ । **ಅಘ್ನ್ಯಾಂ**—ಗೋವನ್ನು **ಅಪಿನ್ವತಂ**—ಕ್ಷೀರದಿಂದ ತುಂಬಿದಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಕರ್ಮದಿಂದ ಬಳಲಿದ್ದ ವೃಕನೆಂಬ ಋಷಿಗೂ ಅವನು ಇಚ್ಛಿಸಿದ ಧನವನ್ನು ಕೊಟ್ಟಿರಿ. ಶಯುವಿಗಾಗಿ ಪ್ರಾರ್ಥಿತರಾದಾಗ ಆ ಆಹ್ವಾನವನ್ನು ಕೇಳಿದಿರಿ. ನದಿಯನ್ನು ಉದಕದಿಂದ ತುಂಬುವಂತೆ, ಮುದಿಯಾದ ಗೋವನ್ನೂ ಸಹ ಕರೆಯುವ ಸಾಮರ್ಥ್ಯವುಳ್ಳದ್ದನ್ನಾಗಿ ಮಾಡಿ ನಿಮ್ಮ ಕರ್ಮಗಳಿಂದ ಅದನ್ನು ಕ್ಷೀರದಿಂದ ತುಂಬಿದಿರಿ.

## English Translation

You have granted (his desires) to Vrika, exhausted by his devotions : when called upon you have listened to Sayu ; you have filled the barren cow (with milk) as (a river)with water : you have (endowed her) with strength, Ashwins, by your deeds.

ಸಂಹಿತಾಪಾಠಃ

ಏಷ ಸ್ಯ ಕಾರುರ್ಜರತೇ ಸೂಕ್ತೈರಗ್ರೇ ಬುಧಾನ ಉಷಸಾಂ ಸುಮನ್ಮಾ ।

ಇಷಾ ತಂ ವರ್ಧದಘ್ನ್ಯಾ ಪಯೋಭಿರ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ||

ಪದಪಾಠಃ

ಏಷಃ | ಸ್ಯಃ | ಕಾರುಃ | ಜರತೇ | ಸುಽಉಕ್ತೈಃ | ಅಗ್ರೇ | ಬುಧಾನಃ | ಉಷಸಾಂ | ಸುಽಮನ್ಮಾ |

ಇಷಾ | ತಂ | ವರ್ಧತ್ | ಅಘ್ನ್ಯಾ | ಪಯಃಽಭಿಃ | ಯೂಯಂ | ಪಾತ | ಸ್ವಸ್ತಿಽಭಿಃ | ಸದಾ | ನಃ ||

ಸಾಯಣಭಾಷ್ಯಂ

ಏಷ ಸ್ತೋತಾ ಸ್ಯ ಸ ಪ್ರಸಿದ್ಧೋ ವಸಿಷ್ಠಃ ಕಾರುಃ ಸ್ತೋತೋಷಸಾಮಗ್ರೇ ಪ್ರಾತಃಸವನೇ ಬುಧಾನೋ ಬುಧ್ಯಮಾನಃ ಸುಮನ್ಮಾ ಶೋಭನಮತಿಃ ಸುಷ್ಟುತಿರ್ವಾ ಸೂಕ್ತೈರ್ಜರತೇ | ಸ್ತೌತಿ | ತಮಿಷಾನ್ನೇನ ವರ್ಧತ್ | ವರ್ಧಯತಂ || ವಚನವ್ಯತ್ಯಯಃ || ಅಘ್ನ್ಯಾಹಂತವ್ಯಾ ಗೌಶ್ಚ ವರ್ಧತ್ | ವರ್ಧಯತು | ಅಥವೈಕಮೇವ ವಾಕ್ಯಂ | ಅಘ್ನ್ಯಾ ಗೌರ್ವಸಿಷ್ಠಸ್ಯ ಪ್ರತಿನಿಯತಾಗ್ನಿಹೋತ್ರಾರ್ಥಾ ಗೌರಿಷಾನ್ನೇನ | ಘೃತಾದಿನೇತ್ಯರ್ಥಃ | ಪಯೋಭಿಶ್ಚ ತಂ ವಸಿಷ್ಠಂ ವರ್ಧತ್ | ವರ್ಧಯತು | ಏವಮಾತ್ಮಾನಂ ಪರೋಕ್ಷೇಣ ನಿರ್ದಿದೇಶ | ಶಿಷ್ಟಂ ಸ್ಪಷ್ಟಂ ||

ಪ್ರತಿಪದಾರ್ಥ

ಸ್ಯಃ — ಪ್ರಸಿದ್ಧನೂ | ಕಾರುಃ — ಸ್ತುತಿಕರ್ತನೂ ಆದ | ಏಷಃ — ಈ ವಸಿಷ್ಠನು | ಉಷಸಾಂ ಅಗ್ರೇ — ಪ್ರಾತಃಸವನಕಾಲದಲ್ಲಿ | ಬುಧಾನಃ — ಎಚ್ಚರಗೊಂಡು | ಸುಮನ್ಮಾ — ಉತ್ತಮವಾದ ಬುದ್ಧಿಯುಳ್ಳವನಾಗಿ ಸೂಕ್ತೈಃ — ಉತ್ತಮವಾದ ಸ್ತುತಿಗಳಿಂದ | ಜರತೇ — ಪ್ರಶಂಸಿಸುತ್ತಾನೆ | ತಂ — ಅವನನ್ನು | ಇಷಾ — ಅನ್ನದಿಂದ ವರ್ಧತ್ — ಪುಷ್ಟಿಗೊಳಿಸಿರಿ | ಅಘ್ನ್ಯಾ — ಗೋವೂ ಸಹ | ಪಯೋಭಿಃ — ತನ್ನ ಕ್ಷೀರಗಳಿಂದ ಅವನನ್ನು ಪುಷ್ಟಿಗೊಳಿಸಲಿ | ಯೂಯಂ — ನೀವು | ನಃ — ನಮ್ಮನ್ನು | ಸದಾ — ಯಾವಾಗಲೂ | ಸ್ವಸ್ತಿಭಿಃ — ಕಲ್ಯಾಣಗಳಿಂದ ಪಾತ — ರಕ್ಷಿಸಿರಿ

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಸ್ತುತಿಕರ್ತನಾದ ಈ ವಸಿಷ್ಠನು ಪ್ರಾತಃಸವನಕಾಲದಲ್ಲಿ ಎಚ್ಚರಗೊಂಡು ಉತ್ತಮವಾದ ಬುದ್ಧಿಯುಳ್ಳವನಾಗಿ ಉತ್ತಮವಾದ ಸ್ತುತಿಗಳಿಂದ ಪ್ರಶಂಸಿಸುತ್ತಾನೆ. ಅವನನ್ನು ಅನ್ನದಿಂದ ಪುಷ್ಟಿಗೊಳಿಸಿರಿ. ಅವನನ್ನು ಗೋವೂ ಸಹ ತನ್ನ ಕ್ಷೀರಗಳಿಂದ ಪುಷ್ಟಿಗೊಳಿಸಲಿ. ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

This your devoted worshipper, waking before the dawn, praises you with hymns: nourish him with food, and let the cow (nourish him) with her milk and do you ever cherish us with blessings.

# ಅರವತ್ತೊಂಭತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಆ ವಾಂ ರಥ ಇತ್ಯಷ್ಟರ್ಚಂ ಚತುರ್ದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಾಶ್ವಿನಂ । ಅನುಕ್ರಮ್ಯತೇ ಚ। ಆ ವಾಂ ರಥೋಽಷ್ಟಾವಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ವಿನಿಯೋಗ ಉಕ್ತಃ॥**

**ಅನುವಾದವು— ಆ ವಾಂ ರಥಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು ಇದರಲ್ಲಿ ಎಂಟು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಅಶ್ವಿನೀದೇವತೆಗಳು ದೇವತೆಯು, ತ್ರಿಷ್ಟುಪ್‌ಛಂದಸ್ಸು ಅನುಕ್ರಮಣಿಕೆಯಲ್ಲಿ— **ಆ ವಾಂ ರಥೋಽಷ್ಟೌ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ

## ಸೂಕ್ತ—೬೯

ಮಂಡಲ—೭ ॥ ಅನುವಾಕ—೪ ॥ ಸೂಕ್ತ—೬೯ ॥
ಅಷ್ಟಕ—೫ ॥ ಅಧ್ಯಾಯ—೫ ॥ ವರ್ಗ—೧೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿಃ—ವಸಿಷ್ಠಃ ॥
ದೇವತಾ—ಅಶ್ವಿನೌ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ಆ ವಾಂ ರಥೋ ರೋದಸೀ ಬದ್ಬಧಾನೋ ಹಿರಣ್ಯಯೋ ವೃಷಭಿರ್ಯಾತ್ವಶ್ವೈಃ ।**
**ಘೃತವರ್ತನಿಃ ಪವಿಭೀ ರುಚಾನ ಇಷಾಂ ವೋಳ್ಹಾ ನೃಪತಿರ್ವಾಜಿನೀವಾನ್॥**

ಪದಪಾಠಃ

**ಆ । ವಾಂ । ರಥಃ । ರೋದಸೀ ಇತಿ । ಬದ್ಬಧಾನಃ । ಹಿರಣ್ಯಯಃ । ವೃಷಽಭಿಃ । ಯಾತು । ಅಶ್ವೈಃ ।**
**ಘೃತಽವರ್ತನಿಃ । ಪವಿಽಭಿಃ । ರುಚಾನಃ । ಇಷಾಂ । ವೋಳ್ಹಾ । ನೃಽಪತಿಃ । ವಾಜಿನೀಽವಾನ್ ॥ ೧ ॥**

ಸಾಯಣಭಾಷ್ಯಂ

**ಹೇ ಅಶ್ವಿನೌ ವಾಂ ರಥೋ ವೃಷಭಿರ್ಯುವಭಿರಶ್ವೈರ್ಯುಕ್ತಃ ಸನ್ನಾ ಯಾತು । ಯಜ್ಞಮಸ್ಮದೀಯಂ । ಕೀದೃಶೋ ರಥಃ । ರಥೋ ವಿಶೇಷ್ಯತೇ । ರೋದಸೀ ದ್ಯಾವಾಪೃಥಿವ್ಯೌ ಬದ್ಬಧಾನೋ ಬಾಧಮಾನೋ ಹಿರಣ್ಮಯೋ ಹಿರಣ್ಮಯೋ ಘೃತವರ್ತನಿರ್ಘೃತಮುದಕಂ ವರ್ತನ್ಯಾಂ ಯಸ್ಯ ತಾದೃಶಃ ಪವಿಭೀ ರಥನೇಮಿಭಿರ್ಮಧುಪಾತ್ರೈರ್ವಾ ರುಚಾನೋ ದೀಪ್ಯಮಾನ ಇಷಾಂ ವೋಳ್ಹಾ ಯಜಮಾ-**

**ಸ್ವೈರ್ದತ್ತಾನಾಂ ಹವಿಷಾಂ ವಾಹಕೋ ದಾತವ್ಯಾನಾಂ ವಾನ್ನಾನಾಂ ವೋಳ್ಹಾ ನೃಪತಿರ್ನೃಣಾಂ ಯಜಮಾನಾನಾಂ ಸ್ವಾಮೀ ವಾಜಿನೀವಾನನ್ನವಾನ್ ||**

### ಪ್ರತಿಪದಾರ್ಥ

( ಎಲೈ ಅಶ್ವಿನೀದೇವತೆಗಳೇ ) **ರೋದಸೀ**—ದ್ಯಾವಾಪೃಥಿವಿಗಳನ್ನು | **ಬದ್ಬಧಾನಃ**—ಆವರಿಸುವುದೂ **ಹಿರಣ್ಯಯಃ**—ಸುವರ್ಣನಿರ್ಮಿತವಾದುದೂ | **ಘೃತವರ್ತನಿಃ**—ಉದಕವನ್ನು ಹೊಂದಿರುವುದೂ | **ಪವಿಭಿಃ**—ತನ್ನ ನೇಮಿಗಳಿಂದ | **ರುಜಾನಃ**—ಪ್ರಕಾಶಿಸುವುದೂ | **ಇಷಾಂ**—ಅನ್ನವನ್ನು | **ವೋಳ್ಹಾ**—ವಹಿಸುವುದೂ **ನೃಪತಿಃ**—ಯಜಮಾನರಿಗೆ ಪ್ರಭುವಾದುದೂ | **ವಾಜಿನೀವಾನ್**—ಅನ್ನಯುಕ್ತವಾದುದೂ ಆದ | **ವಾಂ**—ನಿಮ್ಮ | **ರಥಃ**—ರಥವು | **ವೃಷಭಿಃ**—ತಾರುಣ್ಯವುಳ್ಳ | **ಅಶ್ವೈಃ**—ಅಶ್ವಗಳೊಡಗೂಡಿ | **ಆ ಯಾತು**—ಬರಲಿ

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ದ್ಯಾವಾಪೃಥಿವಿಗಳನ್ನು ಆವರಿಸುವುದೂ, ಸುವರ್ಣನಿರ್ಮಿತವಾದುದೂ, ಉದಕವನ್ನು ಹೊಂದಿರುವುದೂ ತನ್ನ ನೇಮಿಗಳಿಂದ ಪ್ರಕಾಶಿಸುವುದೂ, ಅನ್ನವನ್ನು ವಹಿಸುವುದೂ, ಯಜಮಾನರಿಗೆ ಪ್ರಭುವಾದುದೂ, ಅನ್ನಯುಕ್ತವಾದುದೂ ಆದ ನಿಮ್ಮ ರಥವು ತಾರುಣ್ಯವುಳ್ಳ ಅಶ್ವಗಳೊಡಗೂಡಿ ಬರಲಿ

### English Translation

May your golden chariot, drawn by your vigorous horses, blocking up heaven and earth, come to us, following the track of the waters, radiant with (glowing) wheels laden with viands, the protector of men, the receptacle of food.

### ಸಂಹಿತಾಪಾಠಃ

ಸ ಪಪ್ರಥಾನೋ ಅಭಿ ಪಂಚ ಭೂಮಾ ತ್ರಿವಂಧುರೋ ಮನಸಾ ಯಾತು
ಯುಕ್ತಃ |
ವಿಶೋ ಯೇನ ಗಚ್ಛಥೋ ದೇವಯಂತೀಃ ಕುತ್ರಾ ಚಿದ್ಯಾಮಮಶ್ವಿನಾ
ದಧಾನಾ || ೨ ||

### ಪದಪಾಠಃ

**ಸಃ | ಪಪ್ರಥಾನಃ | ಅಭಿ | ಪಂಚ | ಭೂಮ | ತ್ರಿಽವಂಧುರಃ | ಮನಸಾ | ಆ | ಯಾತು | ಯುಕ್ತಃ |**

**ವಿಶಃ | ಯೇನ | ಗಚ್ಛಥಃ | ದೇವಽಯಂತೀಃ | ಕುತ್ರ | ಚಿತ್ | ಯಾಮಂ | ಅಶ್ವಿನಾ | ದಧಾನಾ || ೨ ||**

ಸಾಯಣಭಾಷ್ಯಂ

ಸ ರಥಃ ಪಂಚ ಭೂಮ ಭೂತಾನಿ ಸರ್ವಪ್ರಾಣಿನಃ ಪಪ್ರಥಾನಃ ಪ್ರಥಮಾನಸ್ತ್ರಿವಂಧುರಃ। ವಂಧುರಮುಚ್ಚಾವಚಂ ಸಾರಥ್ಯವಸ್ಥಾನಂ ಕಾಷ್ಠಮಯಂ । ತಾದೃಶೈಸ್ತ್ರಿಭಿರ್ಯುಕ್ತೋ ಮನಸಾಸ್ಮತ್ಸ್ತುತ್ಯಾ ಯುಕ್ತೋಭ್ಯಾ ಯಾತು । ಯೇನ ರಥೇನ ದೇವಯಂತೀರ್ವಿಶೋ ಯಜಮಾನಾನ್ಪ್ರತಿ ಗಚ್ಛಥಃ । ಹೇ ಅಶ್ವಿನಾಶ್ವಿನೌ ಕುತ್ರ ಚಿದ್ಯತ್ರ ಕ್ವಾಪಿ ಯಾಮಂ ಗಮನಂ ದಧಾನಾ ಧಾರಯಂತೌ ಯೇನ ವಿಶೋ ಗಚ್ಛಥಃ ಸ ಯಾತ್ವಿತಿ ॥

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ। **ಕುತ್ರಚಿತ್**—ಯಾವ ಪ್ರದೇಶಕ್ಕಾದರೂ। **ಯಾಮಂ**—ನಿಮ್ಮ ಸಂಚಾರವನ್ನು । **ದಧಾನಾ**—ಸರಿಹೊಂದಿಸತಕ್ಕ । **ಯೇನ**—ಯಾವ ರಥದಿಂದ । **ದೇವಯಂತೀಃ**—ದೇವತೆಗಳನ್ನಿಚ್ಛಿಸುವ । **ವಿಶಃ**—ಯಜಮಾನರಲ್ಲಿಗೆ । **ಗಚ್ಛಥಃ**—ಹೋಗುವಿರೋ । **ಸಃ**—ಅದೇ ರಥವು । **ಪಂಚ ಭೂಮ** —ಪಂಚವಿಧವಾದ ಭೂತಗಳಲ್ಲಿಯೂ। **ಪಪ್ರಥಾನಃ**—ಪ್ರಸಿದ್ಧವಾದುದಾಗಿಯೂ। **ತ್ರಿವಂಧುರಃ**—ಮೂರು ಆಸನಗಳುಳ್ಳದ್ದಾಗಿಯೂ । **ಮನಸಾ**—ಧ್ಯಾನಾತ್ಮಕವಾದ ಸ್ತುತಿಯೊಡನೆ । **ಯುಕ್ತಃ**—ಕೂಡಿ। **ಅಭಿ ಆ ಯಾತು**—ನಮ್ಮಲ್ಲಿಗೆ ಬರಲಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಯಾವ ಪ್ರದೇಶಕ್ಕಾದರೂ ನಿಮ್ಮ ನಿಮ್ಮ ಸಂಚಾರವನ್ನು ಸರಿಹೊಂದಿಸತಕ್ಕ ಯಾವ ರಥದೊಡನೆ ನೀವು ದೇವತೆಗಳನ್ನಿಚ್ಛಿಸುವ ಯಜಮಾನರಲ್ಲಿಗೆ ಹೋಗುವಿರೋ ಅದೇ ರಥವು ಪಂಚವಿಧವಾದ ಭೂತಗಳಲ್ಲಿಯೂ ಪ್ರಸಿದ್ಧವಾದುದಾಗಿಯೂ, ಮೂರು ಆಸನಗಳುಳ್ಳದ್ದಾಗಿಯೂ, ಧ್ಯಾನಾತ್ಮಕವಾದ ಸ್ತುತಿಯೊಡನೆ ಕೂಡಿ ನಮ್ಮಲ್ಲಿಗೆ ಬರಲಿ.

## English Translation

Renowned among the five orders of beings, furnished with three benches, harnessed at will, may it come hither : that (vehicle) wherewith you repair to devout mortals, whithersoever, Aswins, directing your course.

ಸಂಹಿತಾಪಾಠಃ

ಸ್ವಶ್ವಾ ಯಶಸಾ ಯಾತಮರ್ವಾಗ್ದಸ್ರಾ ನಿಧಿಂ ಮಧುಮಂತಂ ಪಿಬಾಥಃ ।
ವಿ ವಾಂ ರಥೋ ವಧ್ವಾ೩ ಯಾದಮಾನೋಽನ್ತಾನ್ದಿವೋ ಬಾಧತೇ ವರ್ತನಿಭ್ಯಾಂ ॥ ೩ ॥

ಪದಪಾಠಃ

ಸುಽಅಶ್ವಾ । ಯಶಸಾ । ಆ । ಯಾತಂ । ಅರ್ವಾಕ್ । ದಸ್ರಾ । ನಿಽಧಿಂ । ಮಧುಽಮಂತಂ । ಪಿಬಾಥಃ ।

ವಿ । ವಾಂ । ರಥಃ । ವಧ್ವಾ । ಯಾದಮಾನಃ । ಅಂತಾನ್ । ದಿವಃ । ಬಾಧತೇ । ವರ್ತನಿऽಭ್ಯಾಂ ॥ ೩ ॥

ಸಾಯಣಭಾಷ್ಯಂ

ಹೇ ದೇವೌ ಸ್ವಶ್ವಾ ಶೋಭನಾಶ್ವೇನ ಯಶಸಾ ಚಾರ್ವಾಗಸ್ಮದಭಿಮುಖಂ ಯಾತಂ । ಆಗಚ್ಛತಂ। ಹೇ ದಸ್ರಾ ಶತ್ರೂಣಾಮುಪಕ್ಷಪಯಿತಾರೌ ಮಧುಮಂತಂ ಮಧುರರಸೋಪೇತಂ ನಿಧಿಂ ನಿಧಿವನ್ನಿಹಿತಂ ಸೋಮಂ ಪಿಬಾಥಃ । ಪಿಬತಂ । ವಾಂ ಯುವಯೋ ರಥೋ ವಧ್ವಾ ಸೂರ್ಯಯಾ ಸಹ ಯಾದಮಾನೋ ಗಂತವ್ಯಾನ್ಪ್ರತಿ ಗಚ್ಛನ್ । ಗಮಯನ್ನಿತ್ಯರ್ಥಃ । ಏವಂ ಕುರ್ವನ್ ವರ್ತನಿಭ್ಯಾಂ ಸ್ವಚಕ್ರಾಭ್ಯಾಂ ದಿವೋಽಂತಾನ್ ಪರ್ಯಂತಪ್ರದೇಶಾನ್ ಬಾಧತೇ । ಶೀಘ್ರಗಮನೇನ ಪೀಡಯತಿ ॥

ಪ್ರತಿಪದಾರ್ಥ

**ಸ್ವಶ್ವಾ**—ಉತ್ತಮವಾದ ಅಶ್ವವುಳ್ಳ ಎಲೈ ಅಶ್ವಿನೀದೇವತೆಗಳೇ । **ಯಶಸಾ**—ಉತ್ತಮವಾದ ಯಶಸ್ಸಿನಿಂದ ಕೂಡಿ । **ಅರ್ವಾಕ್**—ನಮಗಭಿಮುಖವಾಗಿ । **ಯಾತಂ**—ಬನ್ನಿರಿ । **ದಸ್ರಾ**— ಶತ್ರುನಾಶಕರಾದ ಎಲೈ ಅಶ್ವಿನೀ ದೇವತೆಗಳೇ । **ಮಧುಮಂತಂ**—ರುಚಿಕರವಾದುದೂ ।**ನಿಧಿಂ**—ನಿಧಿಯಂತೆ ಸ್ಥಾಪಿತವಾದುದೂ ಆದ ಸೋಮವನ್ನು **ಪಿಬಾಥಃ**—ಪಾನಮಾಡಿರಿ । **ವಾಂ**—ನಿಮ್ಮ । **ರಥಃ**—ರಥವು । **ವಧ್ವಾ**—ಸೂರ್ಯೆಯೊಡನೆ ಕೂಡಿ । **ಯಾದಮಾನಃ**—ಎಲ್ಲಾ ಪ್ರದೇಶಗಳಲ್ಲೂ ಸಂಚರಿಸುತ್ತಾ । **ವರ್ತನಿಭ್ಯಾಂ**—ತನ್ನ ಚಕ್ರಗಳೊಡನೆ । **ದಿವಃ ಅಂತಾನ್**—ಅಂತರಿಕ್ಷಪ್ರದೇಶಗಳನ್ನು । **ಭಾಧತೇ**—ಆಕ್ರಮಿಸುತ್ತದ

ಭಾವಾರ್ಥ

ಉತ್ತಮವಾದ ಅಶ್ವವುಳ್ಳ ಎಲೈ ಅಶ್ವಿನೀದೇವತೆಗಳೇ, ಉತ್ತಮವಾದ ಯಶಸ್ಸಿನಿಂದ ಕೂಡಿ ನಮಗಭಿಮುಖವಾಗಿ ಬನ್ನಿರಿ ಶತ್ರುನಾಶಕರಾದ ಎಲೈ ಅಶ್ವಿನೀದೇವತೆಗಳೇ, ರುಚಿಕರವಾದುದೂ, ನಿಧಿಯಂತೆ ಸ್ಥಾಪಿತವಾದುದೂ ಆದ ಸೋಮವನ್ನು ಪಾನಮಾಡಿರಿ ನಿಮ್ಮ ರಥವು ಸೂರ್ಯೆಯೊಡನೆ ಕೂಡಿ ಎಲ್ಲ ಪ್ರದೇಶಗಳಲ್ಲೂ ಸಂಚರಿಸುತ್ತ ತನ್ನ ಚಕ್ರಗಳೊಡನೆ ಅಂತರಿಕ್ಷಪ್ರದೇಶಗಳನ್ನು ಆಕ್ರಮಿಸುತ್ತದೆ (ಅತಿಕ್ರಮಿಸುತ್ತದೆ)

English Translation

Well-horsed and celebrated, come Aswins, to our presence drink, Dasras, the sweet pledge · your chariot, conveying you, with your spouse, furrows with its two wheels the extremities of the sky

ಸಂಹಿತಾಪಾಠಃ

ಯುವೋಃ ಶ್ರಿಯಂ ಪರಿ ಯೋಷಾವೃಣೀತ ಸೂರೋ ದುಹಿತಾ ಪರಿತಕ್ಮ್ಯಾಯಾಂ ।
ಯದ್ದೇವಯಂತಮವಥಃ ಶಚೀಭಿಃ ಪರಿ ಘ್ರಂಸಮೋಮನಾ ವಾಂ ವಯೋ ಗಾತ್ ॥ ೪ ॥

ಪದಪಾಠಃ

ಯುವೋಃ । ಶ್ರಿಯಂ । ಪರಿ । ಯೋಷಾ । ಅವೃಣೀತ । ಸೂರಃ । ದುಹಿತಾ । ಪರಿऽತಕ್ಮ್ಯಾಯಾಂ ।

ಯತ್ । ದೇವऽಯಂತಂ । ಅವಥಃ । ಶಚೀಭಿಃ । ಪರಿ । ಘ್ರಂಸಂ । ಓಮನಾ । ವಾಂ । ವಯಃ । ಗಾತ್ ॥

ಸಾಯಣಭಾಷ್ಯಂ

ಯುವೋರ್ಯುವಯೋಃ ಶ್ರಿಯಂ । ಶ್ರಯತ ಇತಿ ಶ್ರೀ ರಥಃ । ತಂ ಸೇವಾಮೇವ ವಾ ಯೋಷಾ ಸರ್ವದಾ ಮಿಶ್ರಯಂತೀ ಯೋಷಿತ್ ಸೂರಃ ಸೂರ್ಯಸ್ಯ ದುಹಿತಾ ಪರ್ಯವೃಣೀತ । ಕದಾ । ಪರಿತಕ್ಮ್ಯಾಯಾಂ ರಾತ್ರೌ ಪರಿತಸ್ತಕನವತಿ ಸಂಗ್ರಾಮೇ ಯಜ್ಞೇ ವಾ ಗಂತವ್ಯೇ । ಕಿಂ ಚ ಯದ್ಯದಾ ದೇವಯಂತಂ ದೇವಕಾಮಂ ಯಜಮಾನಂ ಯಜ್ಞಂ ವಾ ಶಚೀಭಿರ್ಯುವಯೋರ್ಗಮನಾದಿಲಕ್ಷಣೈಃ ಕರ್ಮಭಿರವಥಃ ರಕ್ಷಥಃ ತದಾನೀಂ ಘ್ರಂಸಂ ದೀಪ್ತಂ ವಯೋऽನ್ನಂ ಸೋಮಾದಿಲಕ್ಷಣಮೋಮನಾವನೇನ ರಕ್ಷಣೇನ ನಿಮಿತ್ತೇನ ವಾಂ ಪರಿ ಗಾತ್ । ಪರ್ಯಗಾತ್ ॥

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ಯುವೋಃ**—ನಿಮ್ಮ । **ಶ್ರಿಯಂ**—ರಥವನ್ನು । **ಯೋಷಾ**—ಸರ್ವದಾ ನಿಮ್ಮೊಡನಿರುವ । **ಸೂರಃ ದುಹಿತಾ**—ಸೂರ್ಯಪುತ್ರಿಯು । **ಪರಿತಕ್ಮ್ಯಾಯಾಂ**—ರಾತ್ರಿವೇಳೆಯಲ್ಲಿ । **ಪರಿ ಅವೃಣೀತ**—ಆಶ್ರಯಿಸಿದಳು । **ಯತ್**—ಯಾವಾಗ । **ದೇವಯಂತಂ**—ದೇವತೆಗಳನ್ನಿಚ್ಛಿಸುವ ಯಜಮಾನನನ್ನು **ಶಚೀಭಿಃ**—ನಿಮ್ಮ ಕರ್ಮಗಳಿಂದ । **ಅವಥಃ**—ನೀವು ರಕ್ಷಿಸುವಿರೋ ಆಗ । **ಘ್ರಂಸಂ**—ಪ್ರಕಾಶಯುತವಾದ । **ವಯಃ**—ಸೋಮರೂಪವಾದ ಅನ್ನವು । **ಓಮನಾ**—ನಿಮ್ಮರಕ್ಷಣೆಯ ನಿಮಿತ್ತವಾಗಿ । **ವಾಂ ಪರಿ**—ನಿಮ್ಮ ಸುತ್ತಲೂ **ಗಾತ್**—ಪ್ರವಹಿಸುತ್ತದೆ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥವನ್ನು ಸರ್ವದಾ ನಿಮ್ಮೊಡನಿರುವ ಸೂರ್ಯಪುತ್ರಿಯು ರಾತ್ರಿವೇಳೆಯಲ್ಲಿ ಆಶ್ರಯಿಸಿದಳು. ಯಾವಾಗ ದೇವತೆಗಳನ್ನಿಚ್ಛಿಸುವ ಯಜಮಾನನನ್ನು ನಿಮ್ಮ ಕರ್ಮಗಳಿಂದ ನೀವು ರಕ್ಷಿಸುವಿರೋ ಆಗ ಪ್ರಕಾಶಯುತವಾದ ಸೋಮಾನ್ನವು ನಿಮ್ಮಿಂದ ಲಭಿಸುವ ರಕ್ಷಣೆಯ ನಿಮಿತ್ತವಾಗಿ ನಿಮ್ಮ ಸುತ್ತಲೂ ಪ್ರವಹಿಸುತ್ತದೆ.

English Translation

The daughter of Surya made choice of your chariot at the approach of night : you defend the devout worshipper by your deeds, when the resplendent (sacrificial) food proceeds to you to secure your protection.

ವಿಶೇಷವಿಷಯಗಳು

**ಓಮನಾ**—ಈ ಶಬ್ದಕ್ಕೆ ಯಾಸ್ಕರು ಅರ್ಥವಿವರಣೆ ಮಾಡುತ್ತಾ—**ಪರಿಘ್ರಂಸಮೋಮನಾ ವಾಂ ವಯೋऽಗಾತ್ । ಪರ್ಯಗಾದ್ವಾಂ ಘ್ರಂಸಮಹರವನಾಯಾನ್ನಂ ।** (ನಿ. ೬-೪) ಎಂದು ನಿರ್ವಚನವನ್ನು ಹೇಳಿದಾರೆ. **ಓಮನಾ** ಎಂದರೆ **ಅವನಾಯ** ರಕ್ಷಣಾರ್ಥವಾಗಿ ಎಂದರ್ಥವು. ಎಂದರೆ ಹವೀರೂಪವಾದ ಅನ್ನದಿಂದ

ನಿಮ್ಮನ್ನು ತೃಪ್ತಿಪಡಿಸುವುದಕ್ಕಾಗಿ ಎಂದಭಿಪ್ರಾಯವು. ನಿರುಕ್ತ ವ್ಯಾಖ್ಯಾಕಾರರಾದ ದುರ್ಗಾಚಾರ್ಯರು **ಕೇಚಿದತ್ರ ಅವನೇನಾನ್ನಂ ಇತ್ಯೇವಮಧೀಯತೇ ಭಾಷ್ಯಂ । ತೇಷಾಂ ಯೋಜನಾ ಅವನೇನ ತರ್ಪಣೇನ ಭವತೋ ನಿಮಿತ್ತಭೂತೇನ ಪರ್ಯಗಾತ್ ಅನ್ನಂ ಇತಿ । ಪುನರಪಿ ಕೇಚಿತ್—ಅನೇನಾನ್ನಂ ಇತ್ಯೇವಮಧೀಯತೇ ಭಾಷ್ಯಂ । ತೇಷಾಂ ಅನೇನ ಮಂತ್ರೇಣ ಅನ್ನಂ ಪರಿಗಚ್ಛಂತೀತಿ ಯೋಜನಾ ಸ್ಯಾದಿತಿ ।** ಎಂದು ಹೇಳಿದ್ದಾರೆ. ಎಂದರೆ ಕೆಲವರ ಅಭಿಪ್ರಾಯದಲ್ಲಿ ಅವನಶಬ್ದಕ್ಕೆ ಅನ್ನವೆಂದರ್ಥವು-ಏಕೆಂದರೆ, ಅನ್ನವು ಹಸಿವಿನ ಬಾಧೆಯಿಂದ ರಕ್ಷಣೆಯನ್ನು ಕೊಡುವುದರಿಂದ ಅನ್ನಶಬ್ದವನ್ನು ಅವನಶಬ್ದದಿಂದ ಸೂಚಿಸಲಾಗಿದೆ ಇದಲ್ಲದೆ ಈ ಮಂತ್ರದಲ್ಲಿ ಹೇಳಿರುವ ಅರ್ಥಕ್ಕನುಸಾರವಾಗಿ ಅನ್ನವೆಂಬ ಅರ್ಥವೇ ಯುಕ್ತವಾಗಿರುವುದು ಎಂದು ಮತ್ತೆ ಕೆಲವರು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ ಎಂದು ಈ ವಿಷಯದಲ್ಲಿ ಮತಭೇದಗಳನ್ನು ತಿಳಿಸಿದಾರ

### ಸಂಹಿತಾಪಾಠಃ

ಯೋ ಹ ಸ್ಯ ವಾಂ ರಥಿರಾ ವಸ್ತ ಉಸ್ರಾ ರಥೋ ಯುಜಾನಃ ಪರಿಯಾತಿ ವರ್ತಿಃ ।

ತೇನ ನಃ ಶಂ ಯೋರುಷಸೋ ವ್ಯುಷ್ಟೌ ನ್ಯಶ್ವಿನಾ ವಹತಂ ಯಜ್ಞೇ ಅಸ್ಮಿನ್ ॥

### ಪದಪಾಠಃ

ಯಃ । ಹ । ಸ್ಯಃ । ವಾಂ । ರಥಿರಾ । ವಸ್ತೇ । ಉಸ್ರಾಃ । ರಥಃ । ಯುಜಾನಃ । ಪರಿಽಯಾತಿ । ವರ್ತಿಃ ।

ತೇನ । ನಃ । ಶಂ । ಯೋಃ । ಉಷಸಃ । ವಿಽಉಷ್ಟೌ । ನಿ । ಅಶ್ವಿನಾ । ವಹತಂ । ಯಜ್ಞೇ । ಅಸ್ಮಿನ್ ॥

### ಸಾಯಣಭಾಷ್ಯಂ

**ಯೋ ರಥಃ । ಹೇತಿ ಪೂರಣಃ । ಸ್ಯ ಸ ಪ್ರಸಿದ್ಧೋ ರಥೋ ಹೇ ರಥಿರಾ ರಥಿನೌ ॥ ಮತ್ವರ್ಥೀಯೋ ರಃ॥ ಉಸ್ರಾಸ್ತೇಜಾಂಸಿ ವಸ್ತೇ ಆಚ್ಛಾದಯತಿ। ಯಶ್ಚ ರಥೋ ಯುಜಾನೋಽಶ್ವೈರ್ಯುಕ್ತಃ ಸನ್ವರ್ತಿರ್ಮಾರ್ಗಂ ಯಜಮಾನಗೃಹಂ ವಾ ಪರಿಯಾತಿ ಪರಿಗಚ್ಛತಿ । ತೇನ ರಥೇನ ಹೇ ಅಶ್ವಿನಾಶ್ವಿನೌ ನೋಽಸ್ಮಾಕಮಸ್ಮಿನ್ಯಜ್ಞ ಉಷಸೋ ವ್ಯುಷ್ಟೌ ಪ್ರಾತಃಕಾಲೇ ಶಂ ಶಮನಾಯ ಪಾಪಾನಾಂ ಯೋರ್ಮಿಶ್ರಣಾಯ ಚ ಸುಖಾನಾಂ ನಿ ವಹತಂ । ನಿತರಾಂ ಪ್ರಾಪ್ನುತಂ ॥**

### ಪ್ರತಿಪದಾರ್ಥ

**ರಥಿರಾ**—ರಥವನ್ನು ಆಶ್ರಯಿಸುವ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯಃ**—ಯಾವ ನಿಮ್ಮ ರಥವು । **ಸ್ಯಃ**—ಪ್ರಸಿದ್ಧವಾಗಿದ್ದು । **ಉಸ್ರಾಃ**—ತೇಜಸ್ಸುಗಳನ್ನು । **ವಸ್ತೇ**—ಹೊದ್ದುಕೊಂಡಿರುವುದೋ । **ರಥಃ**—ಯಾವ ರಥವು । **ಯುಜಾನಃ**—ಅಶ್ವಗಳೊಡನೆ ಯುಕ್ತವಾಗಿ । **ವರ್ತಿಃ**—ತನ್ನ ಮಾರ್ಗಗಳಲ್ಲಿ । **ಪರಿಯಾತಿ**—ಸುತ್ತಲೂ ಸಂಚರಿಸುವುದೋ । **ತೇನ**—ಆ ರಥದೊಡನೆ । **ನಃ**—ನಮ್ಮ । **ಅಸ್ಮಿನ್ ಯಜ್ಞೇ**—ಈ ಯಜ್ಞದಲ್ಲಿ

**ಉಷಸಃ ವ್ಯುಷ್ಟೌ**—ಉಷಸ್ಸಿನ ಆವಿರ್ಭಾವ ಕಾಲದಲ್ಲೇ । **ನಃ**—ನಮ್ಮ । **ಶಂ**—ಪಾಪಶಮನಕ್ಕಾಗಿಯೂ **ಯೋಃ**—ಸುಖಲಾಭಕ್ಕಾಗಿಯೂ । **ನಿ ವಹತಂ**—ಅತಿಶಯವಾಗಿ ಬನ್ನಿರಿ.

**ಭಾವಾರ್ಥ**

ರಥವನ್ನು ಹತ್ತಿ ಕುಳಿತಿರುವ ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಥವು ಪ್ರಸಿದ್ಧವಾಗಿದ್ದು ತೇಜಸ್ಸಿನಿಂದ ಆಚ್ಛಾದಿತವಾಗಿರುವುದೋ, ಯಾವ ರಥವು ಅಶ್ವಗಳೊಡನೆ ಯುಕ್ತವಾಗಿ ತನ್ನ ಮಾರ್ಗಗಳಲ್ಲಿ ಸಂಚರಿಸುವುದೋ ಆ ರಥದೊಡನೆ ನಮ್ಮ ಈ ಯಜ್ಞದಲ್ಲಿ ಉಷಸ್ಸಿನ ಆವಿರ್ಭಾವಕಾಲದಲ್ಲೇ (ಪ್ರಾತಃಕಾಲದಲ್ಲಿ) ನಮ್ಮ ಪಾಪಶಮನಕ್ಕಾಗಿಯೂ, ಸುಖಲಾಭಕ್ಕಾಗಿಯೂ ಬನ್ನಿರಿ.

## English Translation

Riders in the chariot, Aswins, come for our purification and welfare to this our sacrifice, at the dawn of day, with that chariot which is clothed in radiance, and which, when harnessed, traverses its (appointed) road

**ಸಂಹಿತಾಪಾಠಃ**

ನರಾ ಗೌರೇವ ವಿದ್ಯುತಂ ತೃಷಾಣಾಸ್ಮಾಕಮದ್ಯ ಸವನೋಪ ಯಾತಂ ।
ಪುರುತ್ರಾ ಹಿ ವಾಂ ಮತಿಭಿರ್ಹವಂತೇ ಮಾ ವಾಮನ್ಯೇ ನಿ ಯಮನ್ದೇವಯಂತಃ ॥ ೬ ॥

**ಪದಪಾಠಃ**

ನರಾ । ಗೌರಾಽಇವ । ವಿಽದ್ಯುತಂ । ತೃಷಾಣಾ । ಅಸ್ಮಾಕಂ । ಅದ್ಯ । ಸವನಾ । ಉಪ । ಯಾತಂ ।
ಪುರುಽತ್ರಾ । ಹಿ । ವಾಂ । ಮತಿಽಭಿಃ । ಹವಂತೇ । ಮಾ । ವಾಂ । ಅನ್ಯೇ । ನಿ । ಯಮನ್ । ದೇವಽಯಂತಃ

**ಸಾಯಣಭಾಷ್ಯಂ**

**ಹೇ ನರಾ ನೇತಾರಾವಶ್ವಿನೌ ಗೌರೇವ ಗೌರಾ ಮೃಗೀವ ವಿದ್ಯುತಂ ವಿಶೇಷೇಣ ದೀಪ್ಯಮಾನಂ ಸೋಮಂ ಪ್ರತಿ ತೃಷಾಣಾ ತೃಷ್ಣಾಯುಕ್ತಾವದ್ಯಾಸ್ಮಾಕಂ ಸವನಾ ಸವನಾನ್ಯುಪ ಯಾತಂ । ಉಪಾಗಚ್ಛತಂ । ಪುರುತ್ರಾ ಬಹುಷು ಯಜ್ಞೇಷು ವಾಂ ಯುವಾಂ ಯಜಮಾನಾ ಮತಿಭಿಃ ಸ್ತುತಿಭಿರ್ಹವಂತೇ ಹಿ । ಸ್ತುವಂತಿ । ಅತೋ ವಾಂ ಯುವಾಮನ್ಯೇ ಯಷ್ಟಾರೋ ದೇವಯಂತೋ ದೇವೌ ಕಾಮಯಮಾನಾ ವಾಂ ಯುವಾಂ ಮಾ ನಿ ಯಮನ್ । ಮಾ ನಿಯಚ್ಛಂತು ॥**

**ಪ್ರತಿಪದಾರ್ಥ**

**ನರಾ**—ನೇತೃಗಳಾದ ಎಲೈ ಅಶ್ವಿನೀದೇವತೆಗಳೇ । **ಗೌರೇವ**—ಬಳಲಿರುವ ಮೃಗದಂತೆ । **ತೃಷಾಣಾ**—ಸೋಮಕ್ಕಾಗಿ ಆತುರಪಡುವ ನೀವು । **ವಿದ್ಯುತಂ**—ಪ್ರಕಾಶಮಾನವಾದ ಸೋಮಕ್ಕಾಗಿ । **ಅದ್ಯ**—ಈಗ ।

**ಅಸ್ಮಾಕಂ**—ನಮ್ಮ | **ಸವನಾ**—ಯಜ್ಞಕ್ಕೆ | **ಉಪಯಾತಂ**—ಬನ್ನಿರಿ | **ಪುರುತ್ರಾ**—ಅನೇಕ ಯಜ್ಞಗಳಲ್ಲಿ **ವಾಂ**—ನಿಮ್ಮನ್ನು | **ಮತಿಭಿಃ**—ಸ್ತುತಿಪೂರ್ವಕವಾಗಿ | **ಹವಂತೇ ಹಿ**—ಯಜಮಾನರು ಕರೆಯುತ್ತಾರೆ | **ವಾಂ**—ನಿಮ್ಮನ್ನು | **ದೇವಯಂತಃ**—ದೇವತೆಗಳನ್ನಪೇಕ್ಷಿಸುವ | **ಅನ್ಯೇ**—ಇತರ ಯಜಮಾನರು | **ಮಾ ನಿ ಯಮನ್**—ನಿಮ್ಮನ್ನು ತಡೆಯದಿರಲಿ

ಭಾವಾರ್ಥ

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಬಾಯಾರಿಕೆಯಿಂದ ಬಳಲಿರುವ ಗೌರಮೃಗದಂತೆ ಸೋಮಕ್ಕಾಗಿ ಆತುರಪಡುವ ನೀವು ಪ್ರಕಾಶಮಾನವಾದ ಸೋಮಪಾನಕ್ಕಾಗಿ ಈಗ ನಮ್ಮ ಯಜ್ಞಕ್ಕೆ ಬನ್ನಿರಿ ಅನೇಕ ಯಜ್ಞಗಳಲ್ಲಿ ನಿಮ್ಮನ್ನು ಸ್ತುತಿಪೂರ್ವಕವಾಗಿ ಯಜಮಾನರು ಕರೆಯುತ್ತಾರೆ ದೇವತೆಗಳನ್ನಪೇಕ್ಷಿಸುವ ಇತರ ಯಜಮಾನರು ನಿಮ್ಮನ್ನು ತಡೆಯದಿರಲಿ

English Translation

Leaders of rite, like (thirsty) cattle, thirsting for the radiant (Soma) hasten to-day to our sacrifice in many ceremonies do the pious propitiate you with praises let not other devout worshippers detain you

ಸಂಹಿತಾಪಾಠಃ

ಯುವಂ ಭುಜ್ಯುಮವವಿದ್ಧಂ ಸಮುದ್ರ ಉದೂಹಥುರರ್ಣಸೋ ಅಸ್ರಿಧಾನೈಃ

ಪತತ್ರಿಭಿರಶ್ರಮೈರವ್ಯಥಿಭಿರ್ದಂಸನಾಭಿರಶ್ವಿನಾ ಪಾರಯಂತಾ ॥ ೭ ॥

ಪದಪಾಠಃ

ಯುವಂ | ಭುಜ್ಯುಂ | ಅವऽವಿದ್ಧಂ | ಸಮುದ್ರೇ | ಉತ್ | ಊಹಥುಃ | ಅರ್ಣಸಃ | ಅಸ್ರಿಧಾನೈಃ |

ಪತತ್ರಿऽಭಿಃ | ಅಶ್ರಮೈಃ | ಅವ್ಯಥಿऽಭಿಃ | ದಂಸನಾಭಿಃ | ಅಶ್ವಿನಾ | ಪಾರಯಂತಾ ॥ ೭ ॥

ಸಾಯಣಭಾಷ್ಯಂ

ಹೇ ಅಶ್ವಿನಾಶ್ವಿನೌ ಯುವಂ ಭುಜ್ಯುಮೇತನ್ನಾಮಕಮವವಿದ್ಧಂ ವಿಕ್ಷಿಪ್ತಂ ಸಖಿಭಿಃ ಸಮುದ್ರೇ ತನ್ಮಧ್ಯೇ ನಿಮಗ್ನಮರ್ಣಸ ಉದಕಾದುದೂಹಥುಃ | ಕಿಂ ಕುರ್ವಂತಾವಿತಿ ತದುಚ್ಯತೇ | ಅಸ್ರಿಧಾನೈ-ರಕ್ಷೀಯಮಾಣೈರಶ್ರಮೈರವ್ಯಥಿಭಿಶ್ಚ ಪತತ್ರಿಭಿಃ ಪತನವದ್ಭಿರ್ಗಮನವದ್ಭೀ ರಥೇ ನಿಯುಕ್ತೈರಶ್ವೈರ್ದಂ-ಸನಾಭಿಃ ಶಾರೀರೈಃ ಕರ್ಮಭಿಶ್ಚ ಪಾರಯಂತಾ ಪಾರಯಂತೌ ಸಮುದ್ರಮರ್ಣಸ ಉದೂಹಥುರಿತಿ | ನಾಸತ್ಯಾ ಭುಜ್ಯುಮೂಹಥುಃ ಪತಂಗೈಃ | ಋ. ೧ ೧೧೬-೪ | ಇತಿ ಹ್ಯುಕ್ತಂ ||

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ಸಮುದ್ರೇ ಅವವಿದ್ಧಂ**—ಸಮುದ್ರದಲ್ಲಿ ಎಸೆಯಲ್ಪಟ್ಟ | **ಭುಜ್ಯುಂ**—ಭುಜ್ಯುವನ್ನು | **ಅಸ್ರಿಧಾನೈಃ**—ಕ್ಷಯರಹಿತವೂ | **ಅಶ್ರಮೈಃ**—ಆಯಾಸವಿಲ್ಲದವೂ | **ಅವ್ಯಥಿಭಿಃ**—

ದುಃಖರಹಿತವೂ ಆದ | **ಪತತ್ರಿಭಿಃ**—ಅಶ್ವಗಳೊಡನೆಯೂ | **ದಂಸನಾಭಿಃ**—ನಿಮ್ಮ ಕರ್ಮಗಳ ಸಹಾಯದಿಂದಲೂ| **ಪಾರಯಂತಾ**—ದಡಕ್ಕೆ ಸೇರಿಸುತ್ತ | **ಯುವಂ**—ನೀವು | **ಅರ್ಣಸಃ**—ನೀರಿನಿಂದ ಮೇಲಕ್ಕೆ | **ಉದೂಹಥುಃ**—ಎತ್ತಿದಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಸಮುದ್ರಮಧ್ಯದಲ್ಲಿ ಎಸೆಯಲ್ಪಟ್ಟ ಭುಜ್ಯುವನ್ನು ನೀವು ನಿಮ್ಮ ಕ್ಷಯರಹಿತವೂ, ಆಯಾಸವಿಲ್ಲದವೂ, ದುಃಖರಹಿತವೂ ಆದ ಅಶ್ವಗಳೊಡನೆಯೂ ಮತ್ತು ನಿಮ್ಮ ಸಾಹಸಕರ್ಮಗಳ ಸಹಾಯದಿಂದಲೂ ದಡಕ್ಕೆ ಸೇರಿಸುತ್ತ ಅವನನ್ನು ನೀರಿನಿಂದ ಮೇಲಕ್ಕೆ ಎತ್ತಿದಿರಿ.

English Translation

You bore up Bhujyu, Aswins, from the waters, when cast into the sea bearing him to shore by your exertions with your undecaying, uuwearied, unharassed horses

ಸಂಹಿತಾಪಾಠಃ

**ನೂ ಮೇ ಹವಮಾ ಶೃಣುತಂ ಯುವಾನಾ ಯಾಸಿಷ್ಟಂ ವರ್ತಿರಶ್ವಿನಾವಿರಾವತ್ ।**
**ಧತ್ತಂ ರತ್ನಾನಿ ಜರತಂ ಚ ಸೂರೀನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥**

ಪದಪಾಠಃ

**ನು । ಮೇ । ಹವಂ । ಆ । ಶೃಣುತಂ । ಯುವಾನಾ । ಯಾಸಿಷ್ಟಂ । ವರ್ತಿಃ । ಅಶ್ವಿನಾ । ಇರಾऽವತ್ ।**
**ಧತ್ತಂ । ರತ್ನಾನಿ । ಜರತಂ । ಚ । ಸೂರೀನ್ । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥ ೧೦ ॥**

ಸಾಯಣಭಾಷ್ಯಂ

**ಹೇ ಯುವಾನಾ ನಿತ್ಯಯೌವನೌ ಸ್ವದ್ಯ ಯುವಾಂ ಮೇ ಹವಮಸ್ಮದೀಯಾಂ ಸ್ತುತಿಮಾ ಶೃಣುತಂ । ಶ್ರುತ್ವಾ ಚ ಹೇ ಅಶ್ವಿನೌ ಇರಾವದ್ಧವಿರ್ಯುಕ್ತಂ ವರ್ತಿರ್ಗೃಹಂ ಯಾಸಿಷ್ಟಂ । ಆಗಚ್ಛತಂ । ಆಗತ್ಯ ಚ ರತ್ನಾನಿ ರಮಣೀಯಾನಿ ಧನಾನಿ ಧತ್ತಂ । ದತ್ತಂ । ಸೂರೀನ್ ಸ್ತೋತೄನ್ ಜರತಂ । ವರ್ಧಯತಂ ॥ ಧಾತೂನಾಮನೇಕಾರ್ಥತ್ವಾತ್ ॥ ಶಿಷ್ಟಂ ಸ್ಪಷ್ಟಂ ॥**

ಪ್ರತಿಪದಾರ್ಥ

**ಯುವಾನಾ**—ನಿತ್ಯತರುಣರಾದ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ನು**—ಈಗ | **ಮೇ**—ನನ್ನ **ಹವಂ**—ಸ್ತುತಿಯನ್ನು | **ಆ ಶೃಣುತಂ**—ಕೇಳಿರಿ | **ಇರಾವತ್**—ಹವಿಸ್ಸಿನಿಂದ ಕೂಡಿದ | **ವರ್ತಿಃ**—ನಮ್ಮ ಗೃಹವನ್ನು | **ಯಾಸಿಷ್ಟಂ**—ಪ್ರವೇಶಿಸಿರಿ | **ರತ್ನಾನಿ**—ರಮಣೀಯವಾದ ಧನಗಳನ್ನು | **ಧತ್ತಂ**—ಕೊಡಿರಿ |

**ಸೂರೀನ್**—ಸ್ತುತಿಕರ್ತರನ್ನು । **ಜರತಂ**—ಪುಷ್ಟಿಗೊಳಿಸಿರಿ । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಮಂಗಳ ದಾನಗಳಿಂದ । **ಪಾತ**— ರಕ್ಷಿಸಿರಿ.

ಭಾವಾರ್ಥ

ನಿತ್ಯತರುಣರಾದ ಎಲೈ ಅಶ್ವಿನೀದೇವತೆಗಳೇ, ನನ್ನ ಸ್ತುತಿಯನ್ನು ಈಗ ಕೇಳಿರಿ ಹವಿಸ್ಸಿನಿಂದ ಕೂಡಿದ ನಮ್ಮ ಗೃಹವನ್ನು ಪ್ರವೇಶಿಸಿರಿ ನಮಗೆ ರಮಣೀಯವಾದ ಧನಗಳನ್ನು ಕೂಡಿರಿ ಸ್ತುತಿಕರ್ತರನ್ನು ಪುಷ್ಟಿಗೊಳಿಸಿರಿ. ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

English Translation

Ever youthful Aswins, hear to-day my invocation come Ashwins, to the dwelling where the oblation is prepared grant wealth (to the offerer) elevate the worshipper and do you ever cherish us with blessings

---

## ಎಪ್ಪತ್ತನೆಯ ಸೂಕ್ತವು

ಸಾಯಣಭಾಷ್ಯಂ

**ಆ ವಿಶ್ವವಾರೇತಿ ಸಪ್ತರ್ಚಂ ಪಂಚದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಾಶ್ವಿನಂ । ಅನುಕ್ರಮ್ಯತೇ ಚ । ಆ ವಿಶ್ವವಾರಾ ಸಪ್ತೇತಿ । ಪ್ರಾತರನುವಾಕ ಆಶ್ವಿನಶಸ್ತ್ರೇ ಚ ವಿನಿಯೋಗ ಉಕ್ತಃ ॥ ಆದ್ಯಸ್ತೃಚಸ್ತೃತೀಯೇ ಛಂದೋಮೇ ಪ್ರಉಗಶಸ್ತ್ರೇ ವಿನಿಯುಕ್ತಃ । ಆ ವಿಶ್ವವಾರಾಶ್ವಿನಾ ಗತಂ ನೋಽಯಂ ಸೋಮ ಇಂದ್ರ । ಆ ೮-೧೧ । ಇತಿ ಸೂತ್ರಿತತ್ವಾತ್ ।**

**ಅನುವಾದವು—ಆ ವಿಶ್ವವಾರಾ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಅಶ್ವಿನೀದೇವತೆಗಳು ದೇವತೆಯು, ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಆ ವಿಶ್ವವಾರಾ ಸಪ್ತ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ ಮತ್ತು ಈ ಸೂಕ್ತದ ಮೊದಲಿನ ಮೂರು ಋಕ್ಕುಗಳು ತೃತೀಯಛಂದೋಮದಲ್ಲಿ ಪ್ರಉಗಶಸ್ತ್ರಮಂತ್ರಗಳಿಗಾಗಿ ವಿನಿಯೋಗವಿರುವುವೆಂದು ಆಶ್ವಲಾಯನಶ್ರೌತಸೂತ್ರದ—**ಆ ವಿಶ್ವವಾರಾಶ್ವಿನಾ ಗತಂ ನೋಽಯಂ ಸೋಮ ಇಂದ್ರ** ಎಂಬ ಸೂತ್ರದಿಂದ (ಆ. ೮-೧೧) ವಿವೃತವಾಗಿರುವುದು.

## ಸೂಕ್ತ—೭೦

ಮಂಡಲ—೭ || ಅನುವಾಕ—೪ || ಸೂಕ್ತ—೭೦ ||
ಅಷ್ಟಕ—೫ || ಅಧ್ಯಾಯ—೫ || ವರ್ಗ—೧೭ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ||
ಋಷಿಃ—ವಸಿಷ್ಠಃ ||
ದೇವತಾ—ಅಶ್ವಿನೌ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

ಆ ವಿಶ್ವವಾರಾಶ್ವಿನಾ ಗತಂ ನಃ ಪ್ರ ತತ್ಸ್ಥಾನಮವಾಚಿ ವಾಂ ಪೃಥಿವ್ಯಾಂ ।
ಅಶ್ವೋ ನ ವಾಜೀ ಶುನಪೃಷ್ಠೋ ಅಸ್ಥಾದಾ ಯತ್ಸೇದಥುರ್ಧ್ರುವಸೇ ನ ಯೋನಿಂ || ೧ ||

ಪದಪಾಠಃ

ಆ । ವಿಶ್ವऽವಾರಾ । ಅಶ್ವಿನಾ । ಗತಂ । ನಃ । ಪ್ರ । ತತ್ । ಸ್ಥಾನಂ । ಅವಾಚಿ । ವಾಂ । ಪೃಥಿವ್ಯಾಂ ।
ಅಶ್ವಃ । ನ । ವಾಜೀ । ಶುನऽಪೃಷ್ಠಃ । ಅಸ್ಥಾತ್ । ಆ । ಯತ್ । ಸೇದಥುಃ । ಧ್ರುವಸೇ । ನ । ಯೋನಿಂ ||

ಸಾಯಣಭಾಷ್ಯಂ

ಹೇ ವಿಶ್ವವಾರಾ ಸರ್ವೈರ್ವರಣೀಯಾವಶ್ವಿನಾಶ್ವಿನೌ ನೋऽಸ್ಮಾಕಂ ಯದ್ಯಂ ಯಾಗಮಾ ಗತಂ ಆಗಚ್ಛತಂ ವಾಂ ಯುವಯೋಸ್ತತ್ಸ್ಥಾನಂ ಪೃಥಿವ್ಯಾಂ ವೇದ್ಯಾಂ ಪ್ರಾವಾಚಿ । ಪ್ರೋಚ್ಯತೇ । ತದರ್ಥಂ ಶುನಪೃಷ್ಠಃ ಸುಖಕರಪೃಷ್ಠಭಾಗಃ ।ಅತ್ಯಂತವಿಪುಲತ್ವಾದಾರೂಢಾನಾಂ ಸುಖಕರಪೃಷ್ಠಭಾಗ ಇತ್ಯರ್ಥಃ । ವಾಜೀ ವೇಗವಾನಶ್ವೋऽಸ್ಥಾತ್ । ತಿಷ್ಠತು ಯುವಯೋಃ ಸಮೀಪೇ । ಯತ್ । ಯಮಿತ್ಯರ್ಥಃ । ಯಮಶ್ವಮಾ ಸೇದಥುಃ ಆಸೀದಥಃ ಸೋऽಶ್ವಃ । ಯದ್ವಾ । ಯತ್ಸ್ಥಾನಮಾಸೀದಥಃ ತತ್ಸ್ಥಾನಮಶ್ವ ಆಶ್ರಯತ್ವಿತೋ ಗಮನಾಯ । ಸ್ಥಿತೌ ದೃಷ್ಟಾಂತಃ । ಧ್ರುವಸೇ ಧ್ರುವಾಯ ನಿವಾಸಾಯ ಯೋನಿಂ ನ ಯೋನಿಂ ಸ್ಥಾನಮಿವ ||

ಪ್ರತಿಪದಾರ್ಥ

**ವಿಶ್ವವಾರಾ**—ಸಕಲರ ಆದರಕ್ಕೆ ಪಾತ್ರರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ನಃ**—ನಮ್ಮ ಯಾಗಗೃಹಕ್ಕೆ । **ಆ ಗತಂ**—ಬನ್ನಿರಿ । **ಪೃಥಿವ್ಯಾಂ**—ಪೃಥ್ವಿಯಲ್ಲಿ । **ತತ್ ಸ್ಥಾನಂ**—ಆ ಯಾಗಪ್ರದೇಶವು **ವಾಂ**—ನಿಮಗಾಗಿಯೇ । **ಪ್ರ ಅವಾಚಿ**—ಪ್ರಸಿದ್ಧವಾಗಿದೆ । **ಧ್ರುವಸೇ**—ಶಾಶ್ವತವಾದ ವಾಸಕ್ಕಾಗಿ । **ಯೋನಿಂ ನ**—ಗೃಹವನ್ನು ಆಶ್ರಯಿಸಿರುವಂತೆ । **ಯತ್**—ಯಾವ ಅಶ್ವವನ್ನು । **ಆ ಸೇದಥುಃ**—ನೀವು ಹತ್ತಿ ಕುಳಿತುಕೊಳ್ಳುವಿರೋ ಅಂತಹ । **ಶುನಪೃಷ್ಠಃ**—ಸುಖಕರವಾದ ಪೃಷ್ಠಭಾಗವುಳ್ಳದ್ದೂ । **ವಾಜೀ**—ವೇಗಗಾಮಿಯಾದುದೂ ಆದ । **ಅಶ್ವಃ**—ಅಶ್ವವು । **ಅಸ್ಥಾತ್**—ನಿಮ್ಮ ಸಮೀಪದಲ್ಲಿ ನಿಲ್ಲಲಿ.

ಭಾವಾರ್ಥ

ಎಲ್ಲರ ಆದರಕ್ಕೂ ಪಾತ್ರರಾದ ಎಲೈ ಅಶ್ವಿನೀದೇವತೆಗಳೇ, ನಮ್ಮ ಯಾಗಗೃಹಕ್ಕೆ ಬನ್ನಿರಿ ಪೃಥ್ವಿಯಲ್ಲಿ ಆ ಯಾಗಪ್ರದೇಶವು ನಿಮಗಾಗಿಯೇ ಪ್ರಸಿದ್ಧವಾಗಿದೆ ಶಾಶ್ವತವಾದ ವಾಸಕ್ಕಾಗಿ ಗೃಹವನ್ನು ಆಶ್ರಯಿಸಿರುವಂತೆ ಯಾವ ಅಶ್ವವನ್ನು ನೀವು ಹತ್ತಿ ಕುಳಿತುಕೊಳ್ಳುವಿರೋ, ಅಂತಹ ಸುಖಕರವಾದ ಪೃಷ್ಠಭಾಗವುಳ್ಳದ್ದೂ, ವೇಗಗಾಮಿಯಾದುದೂ ಆದ ಅಶ್ವವು ನಿಮ್ಮ ಸಮೀಪದಲ್ಲಿ ನಿಲ್ಲಲಿ

## English Translation

All-adored Aswins, come to our (sacrifice), to that place on earth which has been designated yours, which, like a swift, broad-backed horse, awaits you, and on which you are seated as firmly as in a dwelling

ಸಂಹಿತಾಪಾಠಃ

ಸಿಷಕ್ತಿ ಸಾ ವಾಂ ಸುಮತಿಶ್ಚನಿಷ್ಠಾತಾಪಿ ಘರ್ಮೋ ಮನುಷೋ ದುರೋಣೇ।
ಯೋ ವಾಂ ಸಮುದ್ರಾನ್ತ್ಸರಿತಃ ಪಿಪರ್ತ್ಯೇತಗ್ವಾ ಚಿನ್ನ ಸುಯುಜಾ ಯುಜಾನಃ ॥ ೨ ॥

ಪದಪಾಠಃ

ಸಿಸಕ್ತಿ । ಸಾ । ವಾಂ । ಸುऽಮತಿಃ । ಚನಿಷ್ಠಾ । ಅತಾಪಿ । ಘರ್ಮಃ । ಮನುಷಃ । ದುರೋಣೇ ।

ಯಃ । ವಾಂ । ಸಮುದ್ರಾನ್ । ಸರಿತಃ । ಪಿಪರ್ತಿ । ಏತऽಗ್ವಾ । ಚಿತ್ । ನ । ಸುऽಯುಜಾ । ಯುಜಾನಃ

ಸಾಯಣಭಾಷ್ಯಂ

ಸಾ ಸುಮತಿರಸ್ಮಾಭಿಃ ಕ್ರಿಯಮಾಣಾ ಶೋಭನಾ ಸ್ತುತಿಶ್ಚನಿಷ್ಠಾ ಕಮನೀಯತಮಾತಿಶಯೇನಾನ್ನವತೀ ವಾ ವಾಂ ಯುವಾಂ ಸಿಷಕ್ತಿ । ಸೇವತೇ । ಕಿಂಚ ಘರ್ಮಃ ಪ್ರವರ್ಗಶ್ಚ ಮನುಷೋ ಮನುಷ್ಯಸ್ಯ ಯಜಮಾನಸ್ಯ ದುರೋಣೇ ಯಾಗಗೃಹೇऽತಾಪಿ । ತಪ್ತೋऽಭೂತ್ । ಯದ್ಘ್ರಾ ಇತ್ಯಪತತ್ತದ್ಘರ್ಮಸ್ಯ ಘರ್ಮತ್ವಂ । ತೈ. ಆ. ೫ ೧-೫ । ಇತಿ ಶ್ರುತಿಃ । ಯಜ್ಞಸ್ಯ ಶಿರಃಸ್ಥಾನೀಯತ್ವಾದಸ್ಯ । ಯೋ ಘರ್ಮೋ ವಾಂ ಯುವಾಂ । ಪ್ರಾಪ್ನುವನ್ನಿತಿ ಶೇಷಃ । ಸಮುದ್ರಾನ್ ಸರಿತಶ್ಚ ಪಿಪರ್ತಿ ಪೂರಯತಿ ವೃಷ್ಟಿದ್ವಾರಾ । ಏತಗ್ವಾ ಚಿನ್ನ । ಚಿದಿತಿ ಪೂರಣಃ । ಅಶ್ವಾವಿವ ಯಥಾ ಸುಯುಜಾ ಸುಷ್ಠು ಯುಕ್ತೌ ರಥೇ ಭವತಸ್ತದ್ವದಿತ್ಯರ್ಥಃ । ನೇತ್ಯುಪಮಾರ್ಥೇ । ತದ್ವದ್ಯುವಾಂ ಯಜ್ಞೇ ಯುಜಾನೋ ಯೋಜಯನ್ಯಜ್ಞಃ । ಸ ಏವಂ ಕರೋತಿ ॥

ಪ್ರತಿಪದಾರ್ಥ

**ಸಾ ಸುಮತಿಃ**—ನಮ್ಮಿಂದ ನಿರ್ಮಿತವಾದ ಉತ್ತಮವಾದ ಸ್ತುತಿಯು | **ಚನಿಷ್ಠಾ**—ಅತ್ಯಂತ ಆಕರ್ಷಕವಾದ ಅನ್ನಯುಕ್ತವಾಗಿ | **ವಾಂ**—ನಿಮ್ಮನ್ನು | **ಸಿಷಕ್ತಿ**—ಸೇವಿಸುತ್ತದೆ | **ಯಃ**—ಯಾವ ಪ್ರವರ್ಗ್ಯವು| **ವಾಂ**—ನಿಮ್ಮನ್ನು | **ಏತಗ್ವಾ**—ಅಶ್ವಗಳನ್ನು | **ಸುಯುಜಾ ನ**—ರಥಕ್ಕೆ ಯೋಜಿಸುವಂತೆ | **ಯುಜಾನಃ**—ಯಜ್ಞಪ್ರದೇಶಕ್ಕೆ ಸೇರಿಸುತ್ತ | **ಸಮುದ್ರಾನ್**—ಸಮುದ್ರಗಳನ್ನೂ | **ಸರಿತಃ**—ನದಿಗಳನ್ನೂ | **ಪಿಪರ್ತಿ**—ಉದಕದಿಂದ ತುಂಬುವುದೋ | **ಘರ್ಮಃ**—ಅದೇ ಪ್ರವರ್ಗ್ಯವು | **ಮನುಷಃ**—ಯಜಮಾನನ | **ದುರೋಣೇ**—ಯಾಗಗೃಹದಲ್ಲಿ | **ಅತಾಪಿ**—ತಪ್ತವಾಗಿದೆ.

ಭಾವಾರ್ಥ

ನಮ್ಮಿಂದ ನಿರ್ಮಿತವಾದ ಉತ್ತಮವಾದ ಸ್ತುತಿಯು ಅತ್ಯಂತ ಆಕರ್ಷಕವಾದ ಅನ್ನದಿಂದ ಕೂಡಿ ನಿಮ್ಮನ್ನು ಸೇವಿಸುತ್ತದೆ ಅಶ್ವಗಳನ್ನು ರಥಕ್ಕೆ ಯೋಜಿಸುವಂತೆ ಯಾವ ಪ್ರವರ್ಗ್ಯವು ನಿಮ್ಮನ್ನು ಯಜ್ಞಪ್ರದೇಶಕ್ಕೆ ಸೇರಿಸುತ್ತ ಸಮುದ್ರಗಳನ್ನೂ, ನದಿಗಳನ್ನೂ ಉದಕದಿಂದ ತುಂಬುವುದೋ ಅದೇ ಪ್ರವರ್ಗ್ಯವು ಯಜಮಾನನ ಯಾಗಗೃಹದಲ್ಲಿ ತಪ್ತವಾಗಿದೆ.

## English Translation

This excellent praise, redolent of food, propitiates you: the ewer has been heated in the dwelling of the worshipper, which reaching you, fills the ocean and the rivers (through the rain it obtains), associating you (in the rite), like two well matched horses in a chariot.

ಸಂಹಿತಾಪಾಠಃ

ಯಾನಿ ಸ್ಥಾನಾನ್ಯಶ್ವಿನಾ ದಧಾಥೇ ದಿವೋ ಯಹ್ವೀಷ್ವೋಷಧೀಷು ವಿಕ್ಷು ।
ನಿ ಪರ್ವತಸ್ಯ ಮೂರ್ಧನಿ ಸದಂತೇಷಂ ಜನಾಯ ದಾಶುಷೇ ವಹಂತಾ ॥

ಪದಪಾಠಃ

ಯಾನಿ । ಸ್ಥಾನಾನಿ । ಅಶ್ವಿನಾ । ದಧಾಥೇ ಇತಿ । ದಿವಃ । ಯಹ್ವೀಷು । ಓಷಧೀಷು । ವಿಕ್ಷು ।
ನಿ । ಪರ್ವತಸ್ಯ । ಮೂರ್ಧನಿ । ಸದಂತಾ । ಇಷಂ । ಜನಾಯ । ದಾಶುಷೇ । ವಹಂತಾ ॥ ೩ ॥

ಸಾಯಣಭಾಷ್ಯಂ

**ಹೇ ಅಶ್ವಿನಾ ಯುವಾಂ ದಿವೋ ದ್ಯುಲೋಕಾದಾಗತ್ಯ ಯಾನಿ ಸ್ಥಾನಾನಿ ದಧಾಥೇ ಕುರುಥಃ । ಕುತ್ರೇತಿ ಉಚ್ಯತೇ । ಯಹ್ವೀಷು ಮಹತೀಷ್ವೋಷಧೀಷು ವಿಕ್ಷು ಯಜಮಾನೇಷು ಚ । ತೌ ಯುವಾಂ**

ಪರ್ವತಸ್ಯ ಮೇಘಸ್ಯಾಂತರಿಕ್ಷಸ್ಯ ವಾ ಮೂರ್ಧನಿ ಸ್ಥಾನೇ ಸದಂತಾ ನಿಷಿದಂತಾವಿಷಮನ್ನಂ ದಾಶುಷೇ ಹವಿರ್ದಾತ್ರೇ ಜನಾಯ ಯಜಮಾನಾಯ ವಹಂತಾ ಪ್ರಾಪಯಂತೌ ಭವತಮಿತಿ ಶೇಷಃ ||

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ದಿವಃ**—ದ್ಯುಲೋಕದಿಂದ ಬಂದು | **ಯಹ್ವೀಷು**—ಮಹತ್ತಾದ **ಓಷಧೀಷು**—ಓಷಧಿಗಳಲ್ಲಾಗಲಿ | **ವಿಕ್ಷು**—ಯಜಮಾನಾದಿಗಳಲ್ಲಾಗಲಿ | **ಪರ್ವತಸ್ಯ**—ಅಂತರಿಕ್ಷದ | **ಮೂರ್ಧನಿ**—ಉನ್ನತಪ್ರದೇಶದಲ್ಲಾಗಲಿ | **ಯಾನಿ ಸ್ಥಾನಾನಿ**—ಯಾವ ಸ್ಥಾನಗಳನ್ನು | **ದಧಾಥೇ**—ನಿರ್ಮಿಸಿ ಕೊಳ್ಳುವಿರೋ ಆಯಾಸ್ಥಾನಗಳಲ್ಲಿ | **ನಿ ಸದಂತಾ**—ಕುಳಿತವರಾಗಿ | **ದಾಶುಷೇ**—ಹವಿಸ್ಸನ್ನು ಅರ್ಪಿಸುವ | **ಜನಾಯ**—ಯಜಮಾನನಿಗೆ | **ಇಷಂ**—ಅನ್ನವನ್ನು | **ವಹಂತಾ**—ಒದಗಿಸಿರಿ

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ದ್ಯುಲೋಕದಿಂದ ಬಂದು ಮಹತ್ತಾದ ಓಷಧಿಗಳಲ್ಲಾಗಲಿ, ಯಜಮಾನಾದಿಗಳಲ್ಲಾಗಲಿ, ಅಂತರಿಕ್ಷದ ಉನ್ನತಪ್ರದೇಶದಲ್ಲಾಗಲಿ, ಯಾವ ಸ್ಥಾನಗಳನ್ನು ನೀವು ನಿರ್ಮಿಸಿಕೊಳ್ಳುವಿರೋ, ಆಯಾ ಸ್ಥಾನಗಳಲ್ಲಿ ಕುಳಿತವರಾಗಿ ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಅನ್ನವನ್ನು ಒದಗಿಸಿರಿ.

English Translation

To whatever places you may descend, Aswins, from heaven, whether amidst the spreading plants, or amongst men, or sitting on the summit of the clouds, be the bearers of food to the man, the donor (of the oblation),

ಸಂಹಿತಾಪಾಠಃ

ಚನಿಷ್ಟಂ ದೇವಾ ಓಷಧೀಷ್ವಪ್ಸು ಯದ್ಯೋಗ್ಯಾ ಅಶ್ನವೈಥೇ ಋಷೀಣಾಂ |
ಪುರೂಣಿ ರತ್ನಾ ದಧತೌ ನ್ಯ೧ಸ್ಮೇ ಅನು ಪೂರ್ವಾಣಿ ಚಖ್ಯಥುರ್ಯುಗಾನಿ ||

ಪದಪಾಠಃ

**ಚನಿಷ್ಟಂ | ದೇವಾ | ಓಷಧೀಷು | ಅಪ್ಽಸು | ಯತ್ | ಯೋಗ್ಯಾಃ | ಅಶ್ನವೈಥೇಇತಿ | ಋಷೀಣಾಂ**

**ಪುರೂಣಿ | ರತ್ನಾ | ದಧತಾ | ನಿ | ಅಸ್ಮೇ ಇತಿ | ಅನು | ಪೂರ್ವಾಣಿ | ಚಖ್ಯಥುಃ | ಯುಗಾನಿ || ೪ ||**

ಸಾಯಣಭಾಷ್ಯಂ

**ಹೇ ದೇವಾ ದೇವೌ ಯುವಾಮೋಷಧೀಷ್ವೋಷಧಿವಿಕಾರಾಂಶ್ಚರುಪುರೋಡಾಶಾದಿಕಾನಪ್ಸು ಸೋಮರಸಾಂಶ್ಚನಿಷ್ಟಂ | ಅತ್ಯಂತಕಮನೀಯತಮಂ ಕಾಮಯೇಥಾಮಿತ್ಯರ್ಥಃ | ಯದ್ಯಸಾ-**

**ದ್ಯೋಗ್ಯಾ ಯುವಯೋರುಚಿತಾ ಓಷಧೀರಪಶ್ಚ ಋಷೀಣಾಂ ಸಂಬಂಧಿನೀರಶ್ನವೈಥೇ ವ್ಯಾಪ್ನುಥಃ ತಸ್ಮಾದಸ್ಮದೀಯಾ ಅಪಿ ಕಾಮಯೇಥಾಮಿತ್ಯರ್ಥಃ । ಯದ್ವಾ । ಋಷೀಣಾಮಸ್ಮಾಕಮಿತಿ ಪೂಜಾರ್ಥಂ ಬಹುವಚನಂ । ಯದ್ಯಸ್ಮಾದೋಷಧೀಷ್ವಪ್ಸು ಚ ಚನಿಷ್ಟಂ ಯೋಗ್ಯಾಃ ಸ್ತುತೀಶ್ಚಾಶ್ನವೈಥೇ ತಸ್ಮಾದಸ್ಮೇ ಅಸ್ಮಾಸು ಪುರೂಣಿ ಬಹೂನಿ ರತ್ನಾ ರಮಣೀಯಾನಿ ಧನಾನಿ ನಿ ದಧತೌ ಪೂರ್ವಾಣಿ ಯುಗಾನಿ ಮಿಥುನಾನಿ ಜಾಯಾಪತಿರೂಪಾಣ್ಯನು ಚಕ್ರ್ಯಥುಃ । ಖ್ಯಾತವಂತೌ । ಅನುಕೃಷ್ಟವಂತಾವನುಗ್ರಹಾರ್ಥಂ ॥**

### ಪ್ರತಿಪದಾರ್ಥ

**ದೇವಾ**—ದೇವಾತ್ಮರಾದ ಎಲೈ ಅಶ್ವಿನೀದೇವತೆಗಳೇ । **ಓಷಧೀಷು**—ಓಷಧಿವಿಕಾರಗಳಾದ ಪುರೋಡಾಶಾದಿಗಳನ್ನೂ । **ಅಪ್ಸು**—ಸೋಮರಸಗಳನ್ನೂ । **ಚನಿಷ್ಟಂ**—ನೀವು ಅಪೇಕ್ಷಿಸುತ್ತೀರಿ । **ಯತ್**—ಯಾವ ನಿಮಿತ್ತವಾಗಿ । **ಯೋಗ್ಯಾಃ**—ನಿಮಗೆ ಉಚಿತವಾದುವೂ । **ಋಷೀಣಾಂ**—ಋಷಿಗಳಿಂದ ಅರ್ಪಿತವಾದವೂ ಆದ ಓಷಧಿಗಳನ್ನೂ ಸೋಮರಸಗಳನ್ನೂ । **ಅಶ್ನವೈಥೇ**—ವ್ಯಾಪಿಸುವಿರೋ ಆದುದರಿಂದಲೇ । **ಪೂರ್ವಾಣಿ**—ಹಿಂದಿನ **ಯುಗಾನಿ**—ಯಜ್ಞಕರ್ತರಾದ ದಂಪತಿಗಳನ್ನು । **ಅನು ಚಕ್ರ್ಯಥುಃ**—ಅನುಗ್ರಹಿಸಿದಂತೆ । **ಅಸ್ಮೇ**—ನಮ್ಮಲ್ಲಿಯೂ **ಪುರೂಣಿ**—ಅತ್ಯಧಿಕವಾದ । **ರತ್ನಾ**—ಧನಗಳನ್ನೂ । **ನಿ ದಧತೌ**—ಸ್ಥಾಪಿಸಿರಿ

### ಭಾವಾರ್ಥ

ದೇವತಾತ್ಮರಾದ ಎಲೈ ಅಶ್ವಿನೀದೇವತೆಗಳೇ, ಓಷಧಿವಿಕಾರಗಳಾದ ಪುರೋಡಾಶಾದಿಗಳನ್ನೂ, ಸೋಮರಸಗಳನ್ನೂ ನೀವು ಅಪೇಕ್ಷಿಸುತ್ತೀರಿ ಯಾವ ನಿಮಿತ್ತವಾಗಿ ನಿಮಗೆ ಯೋಗ್ಯವಾದುವೂ ಋಷಿಗಳಿಂದ ಅರ್ಪಿತವಾದುವೂ ಆದ ಓಷಧಿಗಳನ್ನೂ ಮತ್ತು ಸೋಮರಸಗಳನ್ನೂ ನೀವು ವ್ಯಾಪಿಸಿರುವಿರೋ, ಆದುದರಿಂದಲೇ ಹಿಂದಿನ ಯಜ್ಞಕರ್ತರಾದ ದಂಪತಿಗಳನ್ನು ಅನುಗ್ರಹಿಸಿದಂತೆ ನಮ್ಮಲ್ಲಿಯೂ ಅತ್ಯಧಿಕವಾದ ಧನಗಳನ್ನು ಸ್ಥಾಪಿಸಿರಿ.

### English Translation

Inasmuch, divine Aswins, as you accept that which is most acceptable in the plants and the waters, and those (things) which are most suitable to you, the offerings of the Rishis, therefore, bestowing upon us ample riches, (favour us) as you have favoured former couples.

### ಸಂಹಿತಾಪಾಠಃ

ಶುಶ್ರುವಾಂಸಾ ಚಿದಶ್ವಿನಾ ಪುರೂಣ್ಯಭಿ ಬ್ರಹ್ಮಾಣಿ ಚಕ್ಷಾಥೇ ಋಷೀಣಾಂ ।
ಪ್ರತಿ ಪ್ರ ಯಾತಂ ವರಮಾ ಜನಾಯಾಸ್ಮೇ ವಾಮಸ್ತು ಸುಮತಿಶ್ಚನಿಷ್ಠಾ ॥೫॥

### ಪದಪಾಠಃ

ಶುಶ್ರುऽವಾಂಸಾ । ಚಿತ್ । ಅಶ್ವಿನಾ । ಪುರೂಣಿ । ಅಭಿ । ಬ್ರಹ್ಮಾಣಿ । ಚಕ್ಷಾಥೇ ಇತಿ । ಋಷೀಣಾಂ ।

ಪ್ರತಿ । ಪ್ರ । ಯಾತಂ । ವರಂ । ಆ । ಜನಾಯ । ಅಸ್ಮೇ ಇತಿ । ವಾಂ । ಅಸ್ತು । ಸುಽಮತಿಃ । ಚನಿಷ್ಠಾ ॥

ಸಾಯಣಭಾಷ್ಯಂ

ಹೇ ಅಶ್ವಿನಾಶ್ವಿನೌ । ಚಿದಿತಿ ಪೂರಣಃ । ಯುವಾಂ ಶುಶ್ರುವಾಂಸಾ ಶ್ರುತವಂತೌ ಸಂತೌ ಪುರೂಣಿ ಬಹೂನಿ ಬ್ರಹ್ಮಾಣಿ ಪರಿವೃಢಾನಿ ಕರ್ಮಾಣಿ ಸ್ತುತಿಲಕ್ಷಣಾನ್ಯೃಷೀಣಾಮಸ್ಮಾಕಂ ಸಂಬಂಧೀನ್ಯಭಿ ಚಕ್ಷಾಥೇ । ಅಭಿಪಶ್ಯಥೋ ಯುವಾಂ। ಅತೋ ಜನಾಯ ಜನಸ್ಯ ಯಜಮಾನಸ್ಯ ಮಮ ವರಂ ಯಜ್ಞಂ ಪ್ರತಿ ಪ್ರ ಯಾತಂ । ವಾಂ ಯುವಯೋಶ್ಚನಿಷ್ಠೋಕ್ತಲಕ್ಷಣಾ ಸುಮತಿರನುಗ್ರಹಮತಿರಸ್ಮೇ ಅಸ್ಮಾಸ್ವಸ್ತು ಭವತು ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಶುಶ್ರುವಾಂಸಾ—ನಮ್ಮ ಸ್ತುತಿಗಳನ್ನು ಕೇಳುತ್ತ । ಋಷೀಣಾಂ—ಋಷಿಗಳ । ಪುರೂಣಿ—ಅಧಿಕವಾದ । ಬ್ರಹ್ಮಾಣಿ—ಕರ್ಮಗಳನ್ನೆಲ್ಲಾ । ಅಭಿ ಚಕ್ಷಾಥೇ—ವೀಕ್ಷಿಸಿರಿ । ಜನಾಯ—ಯಜಮಾನನಾದ ನನ್ನ । ವರಂ ಪ್ರತಿ—ಯಜ್ಞವನ್ನು ಕುರಿತು । ಪ್ರ ಯಾತಂ—ಬನ್ನಿರಿ । ಚನಿಷ್ಠಾ—ಅತ್ಯುತ್ತಮವಾದ । ವಾಂ ಸುಮತಿಃ—ನಿಮ್ಮ ಅನುಗ್ರಹ ಬುದ್ಧಿಯು । ಅಸ್ಮೇ—ನಮ್ಮಲ್ಲಿ ಅಸ್ತು—ಸ್ಥಾಪಿತವಾಗಲಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಮ್ಮ ಸ್ತುತಿಗಳನ್ನು ಕೇಳುತ್ತ ಋಷಿಗಳ ಅಧಿಕವಾದ ಕರ್ಮಗಳನ್ನೆಲ್ಲ ವೀಕ್ಷಿಸಿರಿ ಯಜಮಾನನಾದ ನನ್ನ ಯಜ್ಞಕ್ಕೆ ಬನ್ನಿರಿ. ಅತ್ಯುತ್ತಮವಾದ ನಿಮ್ಮ ಅನುಗ್ರಹಬುದ್ಧಿಯು ನಮ್ಮಲ್ಲಿ ಸ್ಥಾಪಿತವಾಗಲಿ.

## English Translation

Aswins, hearing the many prayers of the Rishis, you look favourably upon (us) come to the sacrifice of this man, and may your desired favour be (shewn) him.

ಸಂಹಿತಾಪಾಠಃ

ಯೋ ವಾಂ ಯಜ್ಞೋ ನಾಸತ್ಯಾ ಹವಿಷ್ಮಾನ್ಕೃತಬ್ರಹ್ಮಾ ಸಮರ್ಯೋ೩ ಭವಾತಿ ।
ಉಪ ಪ್ರ ಯಾತಂ ವರಮಾ ವಸಿಷ್ಠಮಿಮಾ ಬ್ರಹ್ಮಾಣ್ಯೃಚ್ಯಂತೇ ಯುವಭ್ಯಾಂ

ಪದಪಾಠಃ

ಯಃ । ವಾಂ । ಯಜ್ಞಃ । ನಾಸತ್ಯಾ । ಹವಿಷ್ಮಾನ್ । ಕೃತಽಬ್ರಹ್ಮಾ । ಸಽಮರ್ಯಃ । ಭವಾತಿ ।
ಉಪ । ಪ್ರ । ಯಾತಂ । ವರಂ । ಆ । ವಸಿಷ್ಠಂ । ಇಮಾ । ಬ್ರಹ್ಮಾಣಿ । ಋಚ್ಯಂತೇ । ಯುವಽಭ್ಯಾಂ ॥

ಸಾಯಣಭಾಷ್ಯಂ

**ಹೇ ಸಾಸತ್ಯಾಶ್ವಿನೌ ವಾಂ ಯುವಯೋರ್ಯೋ ಯಜ್ಞೋ ಯಜಮಾನಃ ಸಮರ್ಯೋ ಋತ್ವಿಗ್ರೂಪೈರ್ಮರ್ತ್ಯೈಃ ಸಹಿತಃ ಸನ್ ಹವಿಷ್ಮಾನ್ ಹವಿಷಾ ಯುಕ್ತಃ ಕೃತಬ್ರಹ್ಮಾ ಕೃತಸ್ತೋತ್ರರೂಪಕರ್ಮಾ ಭವಾತಿ ಭವತಿ ತಂ ವರಂ ವರಣೀಯಂ ವಸಿಷ್ಠಮೋಪ ಪ್ರ ಯಾತಂ । ಪ್ರಕರ್ಷೇಣೋಪಾಗಚ್ಛತಂ । ಇಮೇಮಾನಿ ಬ್ರಹ್ಮಾಣಿ ಮಂತ್ರಜಾತಾನಿ ಯುವಭ್ಯಾಂ ಯುವಾಭ್ಯಾಮರ್ಥಾಯಾಗಮನಾಯರ್ಚ್ಯಂತೇ । ಸ್ತೂಯಂತೇ । ಕ್ರಿಯಂತ ಇತ್ಯರ್ಥಃ ॥**

ಪ್ರತಿಪದಾರ್ಥ

**ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮನ್ನು ಪೂಜಿಸುವ । **ಯಃ ಯಜ್ಞಃ**—ಯಾವ ಯಜಮಾನನು । **ಸಮರ್ಯಃ**—ಋತ್ವಿಕ್ಕುಗಳಿಂದ ಕೂಡಿದವನಾಗಿಯೂ । **ಹವಿಷ್ಮಾನ್**—ಹವಿರ್ಯುಕ್ತನಾಗಿಯೂ । **ಕೃತಬ್ರಹ್ಮಾ**—ಸ್ತುತಿಯನ್ನು ನಿರ್ಮಿಸುವವನಾಗಿಯೂ । **ಭವಾತಿ**—ಆಗಿರುವನೋ ಅಂತಹ । **ವರಂ**—ಉತ್ತಮನಾದ **ವಸಿಷ್ಠಂ**—ವಸಿಷ್ಠನಲ್ಲಿಗೆ । **ಆ ಉಪ ಪ್ರ ಯಾತಂ**—ಅತಿಶಯವಾಗಿ ಬನ್ನಿರಿ । **ಇಮಾ ಬ್ರಹ್ಮಾಣಿ**—ಈ ಸ್ತುತಿಗಳು **ಯುವಭ್ಯಾಂ**—ನಿಮ್ಮನ್ನುದ್ದೇಶಿಸಿಯೇ । **ಋಚ್ಯಂತೇ**—ಪಠಿತವಾಗುತ್ತವೆ

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಪೂಜಿಸುವ ಯಾವ ಯಜಮಾನನು ಋತ್ವಿಕ್ಕುಗಳಿಂದ ಕೂಡಿದವನಾಗಿಯೂ, ಹವಿರ್ಯುಕ್ತನಾಗಿಯೂ, ಸ್ತುತಿನಿರ್ಮಾಪಕನಾಗಿಯೂ ಆಗಿರುವನೋ ಅಂತಹ ಉತ್ತಮವಾದ ವಸಿಷ್ಠನಲ್ಲಿಗೆ ಅತಿಶಯವಾಗಿ ಬನ್ನಿರಿ. ಈ ಸ್ತುತಿಗಳು ನಿಮ್ಮನ್ನುದ್ದೇಶಿಸಿ ಪಠಿತವಾಗುತ್ತವೆ

## English Translation

Come, Nasatyas, to the excellent Vasishtha, the worshipper who, accompanied by the priests, is present, offering oblations and repeating praises these prayers are recited to (bring) you (hither)

ಸಂಹಿತಾಪಾಠಃ

ಇಯಂ ಮನೀಷಾ ಇಯಮಶ್ವಿನಾ ಗೀರಿಮಾಂ ಸುವೃಕ್ತಿಂ ವೃಷಣಾ ಜುಷೇಥಾಂ ।
ಇಮಾ ಬ್ರಹ್ಮಾಣಿ ಯುವಯೂನ್ಯಗ್ಮನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

ಪದಪಾಠಃ

**ಇಯಂ । ಮನೀಷಾ । ಇಯಂ । ಅಶ್ವಿನಾ । ಗೀಃ । ಇಮಾಂ । ಸುಽವೃಕ್ತಿಂ । ವೃಷಣಾ । ಜುಷೇಥಾಂ ।**

**ಇಮಾ । ಬ್ರಹ್ಮಾಣಿ । ಯುವಽಯೂನಿ । ಅಗ್ಮನ್ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥೭॥**

### ಸಾಯಣಭಾಷ್ಯಂ

**ಹೇ ಅಶ್ವಿನಾಶ್ವಿನೌ ಇಯಂ ಮನಿಷಾ ಸ್ತುತಿರ್ಯುವಯೋಃ ಕೃತೇತಿ ಶೇಷಃ। ತದೇವಾದರಾರ್ಥಂ ಪುನರುಚ್ಯತೇ । ಇಯಂ ಗೀಃ ಸ್ತುತಿಃ ಕೃತಾ । ಹೇ ವೃಷಣಾ ಕಾಮಾನಾಂ ವರ್ಷಕೌ ಇಮಾಮಸ್ಮತ್ಕೃತಾಂ ಸುವೃಕ್ತಿಂ ಶೋಭನಾಂ ಸ್ತುತಿಂ ಜುಷೇಥಾಂ । ಸೇವೇಥಾಂ । ಇಮೋಮಾನಿ ಬ್ರಹ್ಮಾಣಿ ಕರ್ಮಾಣಿ ಸ್ತುತಿರೂಪಾಣಿ ಯುವಯೂನಿ ಯುವಾಂ ಕಾಮಯಮಾನಾನಿ ಸಂತ್ವಗ್ಮನ್ । ಗಚ್ಛಂತು ಯುವಾಂ । ಯೂಯಂ ಪಾತೇತಿ ಸಿದ್ಧಂ ॥**

### ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಇಯಂ ಮನೀಷಾ**—ಈ ಸ್ತುತಿಯು ನಿಮಗಾಗಿ ಸಿದ್ಧವಾಗಿದೆ । **ಇಯಂ ಗೀಃ**—ಈ ಪ್ರಶಂಶಾವಾಕ್ಯವು ನಿರ್ಮಿತವಾಗಿದೆ। **ವೃಷಣಾ**—ಇಷ್ಟಾರ್ಥಪ್ರದವಾದ ಎಲೈ ಅಶ್ವಿನೀದೇವತೆಗಳೇ। **ಇಮಾಂ ಸುವೃಕ್ತಿಂ**—ನಮ್ಮಿಂದ ನಿರ್ಮಿತವಾದ ಈ ಸ್ತುತಿವಾಕ್ಯವನ್ನು । **ಜುಷೇಥಾಂ**—ಸೇವಿಸಿರಿ । **ಇಮಾ ಬ್ರಹ್ಮಾಣಿ**—ನಮ್ಮ ಈ ಸ್ತುತಿಕರ್ಮಗಳು । **ಯುವಯೂನಿ**—ನಿಮ್ಮ ಸೇವೆಯನ್ನಿಚ್ಛಿಸಿ । **ಅಗ್ಮನ್**—ನಿಮ್ಮನ್ನು ಬಂದು ಸೇರಲಿ । **ಯೂಯಂ**—ನೀವು । **ಸದಾ**—ಯಾವಾಗಲೂ । **ನಃ**—ನಮ್ಮನ್ನು । **ಸ್ವಸ್ತಿಭಿಃ**—ಕಲ್ಯಾಣಗಳಿಂದ **ಪಾತ**—ರಕ್ಷಿಸಿರಿ.

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಈ ಸ್ತುತಿಯು ನಿಮಗಾಗಿ ನಿರ್ಮಿತವಾಗಿ ಸಿದ್ಧವಾಗಿದೆ. ಇಷ್ಟಾರ್ಥಪ್ರದರಾದ ಎಲೈ ಅಶ್ವಿನೀದೇವತೆಗಳೇ, ನಮ್ಮಿಂದ ನಿರ್ಮಿತವಾದ ಈ ಸ್ತುತಿವಾಕ್ಯವನ್ನು ಸೇವಿಸಿರಿ ನಮ್ಮ ಈ ಸ್ತುತಿಕರ್ಮಗಳು ನಿಮ್ಮ ಸೇವೆಯನ್ನಿಚ್ಛಿಸಿ ನಿಮ್ಮನ್ನು ಬಂದು ಸೇರಲಿ ನೀವು ಯಾವಾಗಲೂ ನಮ್ಮನ್ನು ಕಲ್ಯಾಣಗಳಿಂದ ರಕ್ಷಿಸಿರಿ

### English Translation

This adoration, Aswins, this praise (is for you) be gratified, showerers (of benefits), by this laudation may these eulogies, addressed to you, reach you and do you ever cherish us with blessings

---

## ಎಪ್ಪತ್ತೊಂದನೆಯ ಸೂಕ್ತವು

### ಸಾಯಣಭಾಷ್ಯಂ

**ಪಂಚಮೋಽನುವಾಕ ಏಕೋನವಿಂಶತಿ ಸೂಕ್ತಾನಿ । ತತ್ರಾಪ ಸ್ವಸುರಿತಿ ಷಡೃಚಂ ಪ್ರಥಮಂ ಸೂಕ್ತಂ ತ್ರೈಷ್ಟುಭಮಾಶ್ವಿನಂ । ಅನುಕ್ರಮ್ಯತೇ ಚ । ಅಪ ಸ್ವಸುಃ ಷಡಿತಿ ॥ ಗತೋ ವಿನಿಯೋಗಃ ॥**

**ಅನುವಾದವು**—ಋಗ್ವೇದ ಸಂಹಿತೆಯ ಏಳನೆಯ ಮಂಡಲದ ಐದನೆಯ ಅನುವಾಕದಲ್ಲಿ ಹತ್ತೊಂಭತ್ತು **ಸೂಕ್ತ**ಗಳಿರುವವು. ಅವುಗಳಲ್ಲಿ **ಅಪಃ ಸ್ವಸುಃ** ಎಂಬ ಈ ಸೂಕ್ತವು ಮೊದಲನೆಯದು ಇದರಲ್ಲಿ ಆರು ಋಕ್ಕು **ಗಳಿರುವವು. ಈ** ಸೂಕ್ತಕ್ಕೆ ವಸಿಷ್ಠನು ಋಷಿಯು, ಅಶ್ವಿನೀದೇವತೆಗಳು ದೇವತೆಯು, ತ್ರಿಷ್ಟುಪ್ ಛಂದಸ್ಸು **ಅನುಕ್ರಮಣಿಕೆಯಲ್ಲಿ—ಅಪಃ ಸ್ವಸುಃ ಷಟ್** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೭೧

ಮಂಡಲ—೭ || ಅನುವಾಕ—೫ || ಸೂಕ್ತ—೭೧ ||
ಅಷ್ಟಕ—೫ || ಅಧ್ಯಾಯ—೫ || ವರ್ಗ—೧೮ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ||
ಋಷಿಃ—ವಸಿಷ್ಠಃ ||
ದೇವತಾ—ಅಶ್ವಿನೌ ||
ಛಂದಃ—ತ್ರಿಷ್ಟುಪ್ |

ಸಂಹಿತಾಪಾಠಃ

ಅಪ ಸ್ವಸುರುಷಸೋ ನಗ್ಜಿಹೀತೇ ರಿಣಕ್ತಿ ಕೃಷ್ಣೀರರುಷಾಯ ಪಂಥಾಂ ।
ಅಶ್ವಾಮಘಾ ಗೋಮಘಾ ವಾಂ ಹುವೇಮ ದಿವಾ ನಕ್ತಂ ಶರುಮಸ್ಮದ್ಯು-
ಯೋತಂ ॥ ೧ ||

ಪದಪಾಠಃ

ಅಪ । ಸ್ವಸುಃ । ಉಷಸಃ । ನಕ್ । ಜಿಹೀತೇ । ರಿಣಕ್ತಿ । ಕೃಷ್ಣೀಃ । ಅರುಷಾಯ । ಪಂಥಾಂ ।
ಅಶ್ವಽಮಘಾ । ಗೋಽಮಘಾ । ವಾಂ । ಹುವೇಮ । ದಿವಾ । ನಕ್ತಂ । ಶರುಂ । ಅಸ್ಮತ್ । ಯುಯೋತಂ ॥

ಸಾಯಣಭಾಷ್ಯಂ

ಸ್ವಸುಃ ಸ್ವಸೃಸ್ಥಾನೀಯಾಯಾ ಉಷಸಃ ಸಕಾಶಾನ್ನಗ್ನಕ್ತಂ ರಾತ್ರಿರಪ ಜಿಹೀತೇ । ಅಪಗಚ್ಛತಿ । ತಸ್ಯಾ ಅವಕಾಶಂ ದತ್ವಾ ಸ್ವಯಮಪಗತೇತ್ಯರ್ಥಃ । ಸ್ವಸಾ ಸ್ವಸ್ರೇ ಜ್ಯಾಯಸ್ಯೈ ಯೋನಿಮಾರೈಕ್ । ಋ. ೧-೧೨೪-೮ । ಇತ್ಯುಕ್ತಂ । ಕೃಷ್ಣೀಃ ಕೃಷ್ಣವರ್ಣಾ ರಾತ್ರಿರರುಷಾಯಾರೋಚಮಾನಾಯಾಹ್ನೇ ಸೂರ್ಯಾಯ ವಾ ಪಂಥಾಂ ಪಂಥಾನಂ ಮಾರ್ಗಂ ರಿಣಕ್ತಿ । ರೇಚಯತಿ । ಯಸ್ಮಾದೇವಂ ತಸ್ಮಾದ್ಯುವಯೋರಾಗಮನಸಮಯತ್ವಾತ್ ಹೇ ಅಶ್ವಾಮಘಾಶ್ವಧನೌ ಹೇ ಗೋಮಘಾ ಗೋಧನೌ । ಉಭಯೋಃ ಪ್ರದಾತಾರಾವಿತ್ಯರ್ಥಃ । ಈದೃಶೌ ವಾಂ ಯುವಾಂ ಹುವೇಮ । ಸ್ತುಮಃ । ಆಹ್ವಯಾಮಃ । ದಿವಾ ನಕ್ತಂ ಸರ್ವದಾ ಶರುಂ ಹಿಂಸಕಮಸ್ಮದಸ್ಮತ್ತೋ ಯುಯೋತಂ । ಪೃಥಕ್ಕುರುತಂ ॥

ಪ್ರತಿಪದಾರ್ಥ

**ಸ್ವಸುಃ**—ತನ್ನ ಸಹೋದರಿರೂಪಳಾದ । **ಉಷಸಃ**—ಉಷಸ್ಸಿನಿಂದ । **ನಕ್**—ರಾತ್ರಿಯು । **ಅಪ ಜಿಹೀತೇ**—ದೂರ ಸರಿಯುತ್ತಾಳೆ । **ಕೃಷ್ಣೀಃ**—ಕತ್ತಲೆಯಿಂದ ಕೂಡಿದ ರಾತ್ರಿಯು । **ಅರುಷಾಯ**—ಪ್ರಕಾಶಮಾನನಾದ ಸೂರ್ಯನಿಗಾಗಿ । **ಪಂಥಾಂ**—ಮಾರ್ಗವನ್ನು । **ರಿಣಕ್ತಿ**—ಸರಿಪಡಿಸುತ್ತಾಳೆ । **ಅಶ್ವಾಮಘಾ**—ಅಶ್ವರೂಪವಾದ ಧನವುಳ್ಳವರೂ । **ಗೋಮಘಾ**—ಗೋರೂಪವಾದ ಧನವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮನ್ನು । **ಹುವೇಮ**—ಪ್ರಶಂಸಿಸಿ ಕರೆಯುತ್ತೇವೆ । **ದಿವಾನಕ್ತಂ**—ಅಹೋರಾತ್ರಗಳಲ್ಲೆಲ್ಲಾ । **ಶರುಂ**—ಹಿಂಸಕನಾದ ಶತ್ರುವನ್ನು । **ಅಸ್ಮಾತ್**—ನಮ್ಮಿಂದ । **ಯುಯೋತಂ**—ಬೇರೆಮಾಡಿರಿ.

ಭಾವಾರ್ಥ

ತನ್ನ ಸಹೋದರಿರೂಪಳಾದ ಉಷಸ್ಸಿನಿಂದ ರಾತ್ರಿಯು ದೂರ ಸರಿಯುತ್ತಾಳೆ ಕಗ್ಗತ್ತಲೆಯಿಂದ ಕೂಡಿದ ರಾತ್ರಿಯು ಪ್ರಕಾಶಮಾನನಾದ ಸೂರ್ಯನಿಗಾಗಿ ಮಾರ್ಗವನ್ನು ಸರಿಪಡಿಸುತ್ತಾಳೆ ಅಶ್ವರೂಪವಾದ, ಧನವುಳ್ಳವರೂ ಗೋರೂಪವಾದ ಧನವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಪ್ರಶಂಸಿಸಿ ಕರೆಯುತ್ತೇವೆ ನಮ್ಮ ಹಿಂಸಕನಾದ ಶತ್ರುವನ್ನು ಸರ್ವಕಾಲದಲ್ಲಿಯೂ ದೂರವಾಗಿರಿಸಿರಿ

## English Translation

Night retires before the dawn, the sister (of the Ashwins) the dark night leaves the path clear for the radiant (sun) upon you, who are affluent in horses, affluent in cattle, we call day and night keep away from us the malevolent

ಸಂಹಿತಾಪಾಠಃ

ಉಪಾಯಾತಂ ದಾಶುಷೇ ಮರ್ತ್ಯಾಯ ರಥೇನ ವಾಮಶ್ವಿನಾ ವಹಂತಾ ।
ಯುಯುತಮಸ್ಮದನಿರಾಮಮೀವಾಂ ದಿವಾ ನಕ್ತಂ ಮಾಧ್ವೀ ತ್ರಾಸೀಥಾಂ ನಃ ॥ ೨ ॥

ಪದಪಾಠಃ

ಉಪ೯ಆಯಾತಂ । ದಾಶುಷೇ । ಮರ್ತ್ಯಾಯ । ರಥೇನ । ವಾಮಂ । ಅಶ್ವಿನಾ । ವಹಂತಾ ।
ಯುಯುತಂ । ಅಸ್ಮತ್ । ಅನಿರಾಂ । ಅಮೀವಾಂ । ದಿವಾ । ನಕ್ತಂ । ಮಾಧ್ವೀ ಇತಿ । ತ್ರಾಸೀಥಾಂ । ನಃ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಯುವಾಮುಪಾಯಾತಂ । ಉಪಾಗಚ್ಛತಮಸ್ಮದಾಹ್ವಾನಂ ಪ್ರತಿ । ಕಿಮರ್ಥಂ । ದಾಶುಷೇ ಹವಿಷಾಂ ದಾತ್ರೇ ಯಜಮಾನಾಯ ತದರ್ಥಂ ರಥೇನ ವಾಮಂ ವನನೀಯಂ ಧನಂ ವಹಂತಾ ವಹಂತೌ । ಅಸ್ಮದಸ್ಮತ್ತೋ ಯುಯುತಂ । ಪೃಥಕ್ಕುರುತಂ । ಕಿಂ । ಅನಿರಾಂ । ಇರಾನ್ನಂ । ತದನ್ನ-ದಾರಿದ್ರ್ಯಮಿತ್ಯರ್ಥಃ । ಅಮೀವಾಂ ರೋಗಂ ಚ । ಹೇ ಮಾಧ್ವೀ ಮಧುಮಂತೌ ಯುವಾಂ ನೋಽಸ್ಮಾನ್ ದಿವಾ ನಕ್ತಂ ಸರ್ವದಾ ತ್ರಾಸೀಥಾಂ । ರಕ್ಷತಂ ॥

ಪ್ರತಿಪದಾರ್ಥ

**ಮಾಧ್ವೀ**—ಮಧುಯುಕ್ತರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ದಾಶುಷೇ**—ಹವಿಸ್ಸನ್ನು ಅರ್ಪಿಸುವ । **ಮರ್ತ್ಯಾಯ**—ಯಜಮಾನನಿಗಾಗಿ । **ರಥೇನ**—ನಿಮ್ಮ ರಥದೊಡನೆ । **ವಾಮಾ**—ಆಕರ್ಷಕವಾದ

ಧನವನ್ನು | ವಹಂತಾ—ವಹಿಸಿಕೊಂಡು | ಉಪಾಯಾತಂ—ಬನ್ನಿರಿ | ಅಸ್ಮತ್—ನಮ್ಮಿಂದ | ಅನಿರಾಂ—ಅನ್ನರಹಿತವಾದ ದಾರಿದ್ರ್ಯವನ್ನು | **ಯುಯುತಂ**—ದೂರಮಾಡಿರಿ | **ಅಮೀವಾಂ**—ರೋಗದಿಂದ | **ನಃ**—ನಮ್ಮನ್ನು | **ದಿವಾ ನಕ್ತಂ**—ಅಹೋರಾತ್ರವೂ | **ತ್ರಾಸೀಥಾಂ**—ರಕ್ಷಿಸಿರಿ.

**ಭಾವಾರ್ಥ**

ಮಧುಯುಕ್ತರಾದ ಎಲೈ ಅಶ್ವಿನೀದೇವತೆಗಳೇ, ಹವಿಸ್ಸನ್ನು ಅರ್ಪಿಸುವ ಯಜಮಾನನಿಗಾಗಿ ನಿಮ್ಮ ರಥದಲ್ಲಿ ಆಕರ್ಷಕವಾದ ಧನವನ್ನು ವಹಿಸಿಕೊಂಡು ಬನ್ನಿರಿ ನಮ್ಮಿಂದ ದಾರಿದ್ರ್ಯವನ್ನು ದೂರಮಾಡಿರಿ ನಮ್ಮನ್ನು ಸರ್ವದಾ ರೋಗರಹಿತರಾಗಿರುವಂತೆ ಮಾಡಿ ರಕ್ಷಿಸಿರಿ.

## English Translation

Come to the mortal, the donor (of oblations), bringing desired wealth in your chariot keep afar from us famine and sickness day and night, Madhwis, protect us

**ಸಂಹಿತಾಪಾಠಃ**

**ಆ ವಾಂ ರಥಮವಮಸ್ಯಾಂ ವ್ಯುಷ್ಟೌ ಸುಮ್ನಾಯವೋ ವೃಷಣೋ ವರ್ತಯಂತು ।**
**ಸ್ಯೂಮಗಭಸ್ತಿಮೃತಯುಗ್ಭಿರಶ್ವೈರಾಶ್ವಿನಾ ವಸುಮಂತಂ ವಹೇಥಾಂ ॥ ೩ ॥**

**ಪದಪಾಠಃ**

**ಆ । ವಾಂ । ರಥಂ । ಅವಮಸ್ಯಾಂ । ವಿಽಉಷ್ಟೌ । ಸುಮ್ನಽಯವಃ । ವೃಷಣಃ । ವರ್ತಯಂತು ।**
**ಸ್ಯೂಮಽಗಭಸ್ತಿಂ । ಋತಯುಕ್ಽಭಿಃ । ಅಶ್ವೈಃ । ಆ । ಅಶ್ವಿನಾ । ವಸುಽಮಂತಂ । ವಹೇಥಾಂ ॥ ೩ ॥**

**ಸಾಯಣಭಾಷ್ಯಂ**

**ಅವಮಸ್ಯಾಮಾಸನ್ನಾಯಾಂ ವ್ಯುಷ್ಟಾವ್ಯುಚ್ಛನ ಉಷಸಿ ವಾಂ ಯುವಯೋಃ ರಥಂ ಸುಮ್ನಾಯುವಃ ಸುಖೇನ ಯೋಜಯಂತೋಽಶ್ವಾ ವೃಷಣೋ ವರ್ಷಕಾ ಯುವಾಮಾ ವರ್ತಯಂತು । ಸ್ಯೂಮಗಭಸ್ತಿಂ ಸುಖರಶ್ಮಿಂ ಮ್ಯೂತರಶ್ಮಿಂ ವಸುಮಂತಂ ಪ್ರದೇಯಧನಯುಕ್ತಂ ರಥಂ ಹೇ ಅಶ್ವಿನಾಶ್ವಿನಾವೃತಯುಗ್ಭಿರುದಕಯುಕ್ತೈರಶ್ವೈರುದಕಪ್ರದೈರಶ್ವೈರಾ ವಹೇಥಾಂ ॥**

**ಪ್ರತಿಪದಾರ್ಥ**

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ಅವಮಸ್ಯಾಂ**—ಆವಿರ್ಭವಿಸಿ ಸಮೀಪಿಸುತ್ತಿರುವ | **ವ್ಯುಷ್ಟೌ**—ಈ ಉಷಃಕಾಲದಲ್ಲಿ | **ವಾಂ**—ನಿಮ್ಮ | **ಸುಮ್ನಾಯವಃ**—ಸುಖಕಾರಕಗಳೂ | **ವೃಷಣಃ**—ಕಾರುಣ್ಯವುಳ್ಳವೂ

ಆದ [illegible] | ರಥಂ—[illegible] | ಆ ವರ್ತಯಂತು—[illegible] | ಸ್ವಾಮುಗಸ್ತಿಃ— [illegible]
ರುಗ [illegible] | ವಸುಮಂತಂ—ಧನಯುಕ್ತವಾದುದೂ ಆದ [illegible] | ಋತೆಯುಗ್ಭಿಃ—[illegible]
ಗಳನ್ನು ಹೂಡುವ | ಅಶ್ವೈಃ—ಅಶ್ವಗಳಿಂದ | ಆ ವಹೇಥಾಂ—ಹೊತ್ತುತರುವಂತ ಮಾಡಿರಿ

### ಭಾವಾರ್ಥ

[illegible] ಅಶ್ವಿನೀದೇವತೆಗಳೇ, ಉಷಸ್ಸು ಆವಿರ್ಭವಿಸಿ ಸಮೀಪಿಸುವ ಈ ಕಾಲದಲ್ಲಿ ನಿಮ್ಮ [illegible]ಗಳು, [illegible] ಅಶ್ವಗಳು ನಿಮ್ಮ ರಥವನ್ನು ಕರೆತರಲಿ ಪ್ರಕಾಶಮಾನ [illegible], ಧನಯುಕ್ತವಾದುದೂ ಆದ ನಿಮ್ಮ ರಥವನ್ನು ಉದಕಗಳನ್ನು ಹೊತ್ತಿರುವ ಅಶ್ವಗಳಿಂದ ಹೊತ್ತುತರುವಂತೆಮಾಡಿರಿ

### English Translation.

may your docile and vigorous (horses) bring hither your chariot at the approaching dawn conduct hither, Ashwins, your radianting, wealth-laden chariot, with your rain-bestowing steeds

### ಸಂಹಿತಾಪಾಠಃ

ಯೋ ವಾಂ ರಥೋ ನೃಪತೀ ಅಸ್ತಿ ವೋಳ್ಹಾ ತ್ರಿವಂಧುರೋ ವಸುಮಾ
ಉಸ್ರಯಾಮಾ ।
ಆ ನ ಏನಾ ನಾಸತ್ಯೋಪ ಯಾತಮಭಿ ಯದ್ವಾಂ ವಿಶ್ವಪ್ಸ್ನ್ಯೋ ಜಿಗಾತಿ ॥

### ಪದಪಾಠಃ

ಯಃ । ವಾಂ । ರಥಃ । ನೃಪತೀ ಇತಿ ನೃಽಪತೀ । ಅಸ್ತಿ । ವೋಳ್ಹಾ । ತ್ರಿಽವಂಧುರಃ । ವಸುಽಮಾನ್ ।
ಉಸ್ರಽಯಾಮಾ ।
ಆ । ನಃ । ಏನಾ । ನಾಽಸತ್ಯಾ । ಉಪ । ಯಾತಂ । ಅಭಿ । ಯತ್ । ವಾಂ । ವಿಶ್ವಽಪ್ಸ್ನ್ಯಃ । ಜಿಗಾತಿ ॥

### ಸಾಯಣಭಾಷ್ಯಂ

ಹೇ ನೃಪತೀ ನೃಣಾಂ ಋಜಮಾನಾನಾಂ ಪಾಲಕಾವಶ್ವಿನೌ ವಾಂ ಯುವಯೋರ್ಯೋ ರಥೋ ವೋಳ್ಹಾ ಯುವಯೋರ್ವಾಹಕೋಽಸ್ತಿ ಸರ್ವದಾ ಸಂನಿಹಿತೋ ವರ್ತತೇ । ಕೀದೃಶೋಽಸೌ । ತ್ರಿವಂಧುರಃ ಸಾರಥ್ಯಧಿಷ್ಠಾನಸ್ಥಾನತ್ರಯೋಪೇತೋ ವಸುವಾನ್ಧನವಾನುಸ್ರಯಾಮೋಽಸ್ರಂ ದಿವಸಂ ಪ್ರತಿ ಗಂತಾ । ಏನೈತೇನ ರಥೇನ ಹೇ ನಾಸತ್ಯಾಶ್ವಿನೌ ನೋಽಸ್ಮಾನುಪಾ ಯಾತಂ । ಯದ್ಯ್ರಥೋ ಯಶ್ಚ ರಥೋ ವಾಂ ವಿಶ್ವಪ್ಸ್ನ್ಯೋ ವ್ಯಾಪ್ತರೂಪೋಽಭಿ ಜಿಗಾತಿ ಅಭಿಗಚ್ಛತಿ । ಅಥವಾಹ । ಯದ್ಯಶ್ಚಾದ್ವಿಶ್ವಪ್ಸ್ನ್ಯೋ ವಸಿಷ್ಠೋ ವಾಂ ಜಿಗಾತಿ ಸ್ತೌತಿ ಅತ ಉಪಾಯಾತಂ ॥

ಪ್ರತಿಪದಾರ್ಥ

**ನೃಪತೀ**—ಯಜಮಾನರಿಗೆ ಪಾಲಕರಾದ | **ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ | **ವಾಂ**—ನಿಮ್ಮ **ಯಃ ರಥಃ**—ಯಾವ ರಥವು | **ವೋಳ್ಹಾ**—ನಿಮ್ಮನ್ನು ವಹಿಸುವುದಾಗಿ | **ಅಸ್ತಿ**—ಇರುವುದೋ ಅಂತಹುದೂ **ತ್ರಿವಂಧುರಃ**—ಮೂರು ಆಸನಗಳುಳ್ಳದ್ದೂ | **ವಸುಮಾನ್**—ಧನಯುಕ್ತವಾದುದೂ | **ಉಸ್ರಯಾವಾ**—ದಿನಾಭಿಮುಖವಾಗಿ ಸಂಚರಿಸುವುದೂ (ಮತ್ತು) | **ಯತ್**—ಯಾವ ರಥವು | **ವಿಶ್ವಪ್ಸ್ನ್ಯಃ**—ಅನೇಕ ರೂಪವುಳ್ಳದ್ದಾಗಿ | **ವಾಂ**—ನಿಮ್ಮನ್ನು | **ಅಭಿ ಜಿಗಾತಿ**—ಸಮೀಪಿಸುವುದೋ | **ಏನಾ**—ಅಂತಹ ರಥದೊಡನೆ | **ನಃ**—ನಮ್ಮಲ್ಲಿಗೆ | **ಉಪ ಆ ಯಾತಂ**—ಬನ್ನಿರಿ

ಭಾವಾರ್ಥ

ಯಜಮಾನರಿಗೆ ಪಾಲಕರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮ ಯಾವ ರಥವು ನಿಮ್ಮನ್ನು ವಹಿಸುವುದೋ ಯಾವುದು ಅನೇಕರೂಪವುಳ್ಳದ್ದಾಗಿ ನಿಮ್ಮನ್ನು ಸಮೀಪಿಸುವುದೋ ಅಂತಹುದೂ ಮತ್ತು ಮೂರು ಆಸನಗಳುಳ್ಳದ್ದೂ ಧನಯುಕ್ತವಾದುದೂ, ದಿನಾಭಿಮುಖವಾಗಿ ಸಂಚರಿಸುವುದೂ ಆಗಿರುವುದೋ ಆ ರಥದೊಡನೆ ನಮ್ಮಲ್ಲಿಗೆ ಬನ್ನಿರಿ

English Translation

With that chariot, lords of men, which is your vehicle, which has three benches, is laden with wealth, and is the precursor of day, come, Nasatyas, to us ; with that chariot wich traverses (the sky) as your all-pervading form.

ಸಂಹಿತಾಪಾಠಃ

ಯುವಂ ಚ್ಯವಾನಂ ಜರಸೋಽಮುಮುಕ್ತಂ ನಿ ಪೇದವ ಊಹಥುರಾಶು-
ಮಶ್ವಂ |
ನಿರಂಹಸಸ್ತಮಸಃ ಸ್ಪರ್ತಮತ್ರಿಂ ನಿ ಜಾಹುಷಂ ಶಿಥಿರೇ ಧಾತಮಂತಃ ||೫||

ಪದಪಾಠಃ

ಯುವಂ | ಚ್ಯವಾನಂ | ಜರಸಃ | ಅಮುಮುಕ್ತಂ | ನಿ | ಪೇದವೇ | ಊಹಥುಃ | ಆಶುಂ | ಅಶ್ವಂ |

ನಿಃ | ಅಂಹಸಃ | ತಮಸಃ | ಸ್ಪರ್ತಂ | ಅತ್ರಿಂ | ನಿ | ಜಾಹುಷಂ | ಶಿಥಿರೇ | ಧಾತಂ | ಅಂತರಿತಿ ||೫||

ಸಾಯಣಭಾಷ್ಯಂ

**ಹೇ ಅಶ್ವಿನಾ ಯುವಂ ಯುವಾಂ ಚ್ಯವಾನಂ ಜರಸೋ ಜೀರ್ಣಾದ್ರೂಪಾದಮುಮುಕ್ತಂ | ಅಮುಂಚತಂ | ಯುವಂ ಚ್ಯವಾನಮಶ್ವಿನಾ ಜರಂತಂ ಪುನರ್ಯುವಾನಂ | ಋ ೧೧೧೭೧೩ | ಇತಿ ಹ್ಯನ್ಯತ್ರ | ತಥಾ ಪೇದವ ಏತನ್ನಾಮಕಾಯ ರಾಜ್ಞ ಆಶುಂ ಶೀಘ್ರಗಾಮಿನಮಶ್ವಂ ನಿರತಿಹಥುಃ | ನ್ಯವಹತಂ ಯುದ್ಧೇ | ಯುವಂ ಶ್ವೇತಂ ಪೇದವೇ | ಋ. ೧-೧೧೮-೯ | ಇತಿ ನಿಗಮಃ | ತಥಾತ್ರಿಂ**

ಮಹರ್ಷಿಮಂಹಸ ಋಬೀಸಾದಗ್ನೇಃ ಸಕಾಶಾತ್ತಮಸಶ್ಚ ಗುಹಾಂತಃಸ್ಥಿತಾಚ್ಚ ಸಕಾಶಾನ್ನಿಷ್ಪರ್ತಂ । ನ್ಯ-ಪಾರಯತಂ । ಯುವಮ್ಯುಬೀಸಮುತ ತಪ್ತಮತ್ರಯ ಓಮನ್ವಂತಂ ಚಕ್ರಥುಃ । ಋ. ೧೦ ೩೯ ೯ । ಇತಿ ನಿಗಮಃ । ತಥಾ ಜಾಹುಷಂ ಶಿಥಿರೇ ಶಿಥಿಲೇ ಭ್ರಷ್ಟೇ ಸ್ವರಾಷ್ಟ್ರೇಽನ್ತರ್ಮಧ್ಯೇ ಪುನರ್ನಿ ಧಾತಂ। ನ್ಯಧಾತಂ । ಪರಿತಿಷ್ಟಂ ಜಾಹುಷಂ ವಿಶ್ವತಃ ಸೀಂ । ಋ ೧-೧೧೬-೨೦ । ಇತಿ ಹ್ಯುಕ್ತಂ ॥

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ಯುವಂ**— ನೀವು । **ಚ್ಯವಾನಂ**— ಚ್ಯವಾನನೆಂಬಋಷಿಯನ್ನು । **ಜರಸಃ**— ಮುಪ್ಪಿನಿಂದ । **ಅಮುಮುಕ್ತಂ**— ಪಾರುಮಾಡಿದಿರಿ । **ಪೇದವೇ**— ಪೇದುವೆಂಬ ರಾಜನಿಗೆ । **ಆಶುಂ**— ಶೀಘ್ರಗಾಮಿಯಾದ । **ಅಶ್ವಂ**— ಅಶ್ವವನ್ನು । **ನಿಃ ಊಹಥುಃ**— ಒದಗಿಸಿದಿರಿ । **ಅತ್ರಿಂ**— ಅತ್ರಿಯೆಂಬ ಋಷಿಯನ್ನು **ಅಂಹಸಃ**— ಹಿಂಸಾಕಾರಿಯಾದ ಶಾಪದಿಂದಲೂ । **ತಮಸಃ**— ಕತ್ತಲೆಯಿಂದಲೂ । ನಃ **ಸ್ಪರ್ತಂ**— ಬಿಡಿಸಿದಿರಿ । **ಜಾಹುಷಂ**— ಜಾಹುಷನೆಂಬ ರಾಜನನ್ನು । **ಶಿಥಿರೇ**— ಛಿದ್ರಿತವಾದ ಅವನ ದೇಶದ । **ಅಂತಃ**— ಮಧ್ಯಭಾಗದಲ್ಲಿ । **ನಿಃ ಧಾತಂ**— ಪುನಃ ಸ್ಥಾಪಿಸಿದಿರಿ

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನೀವು ಚ್ಯವಾನನೆಂಬ ಋಷಿಯನ್ನು ಮುಪ್ಪಿನಿಂದ ಪಾರುಮಾಡಿದಿರಿ ಪೇದುವೆಂಬ ರಾಜನಿಗೆ ಯುದ್ಧದಲ್ಲಿ ಶೀಘ್ರಗಾಮಿಯಾದ ಅಶ್ವವನ್ನು ಒದಗಿಸಿದಿರಿ. ಅತ್ರಿಯೆಂಬ ಋಷಿಯನ್ನು ಹಿಂಸಾಕಾರಿಯಾದ ಶಾಪದಿಂದಲೂ ಕತ್ತಲೆಯಿಂದಲೂ ಬಿಡಿಸಿದಿರಿ. ಜಾಹುವೆಂಬ ರಾಜನನ್ನು ಛಿದ್ರಿತವಾಗಿದ್ದ ಅವನ ರಾಜ್ಯದಲ್ಲಿ ಪುನಃ ಸ್ಥಾಪಿಸಿದಿರಿ

## English Translation

You exempted Chyavana from decay : you mounted Pedu upon a swift charger you extricated Atri from torture and darkness : you replaced Jahusha in his rebellious kingdom.

ಸಂಹಿತಾಪಾಠಃ

ಇಯಂ ಮನೀಷಾ ಇಯಮಶ್ವಿನಾ ಗೀರಿಮಾಂ ಸುವೃಕ್ತಿಂ ವೃಷಣಾ ಜುಷೇ-
ಥಾಂ ।
ಇಮಾ ಬ್ರಹ್ಮಾಣಿ ಯುವಯೂನ್ಯಗ್ಮನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

ಪದಪಾಠಃ

ಇಯಂ । ಮನೀಷಾ । ಇಯಂ । ಅಶ್ವಿನಾ । ಗೀಃ । ಇಮಾಂ । ಸುಽವೃಕ್ತಿಂ । ವೃಷಣಾ । ಜುಷೇಥಾಂ ।

ಇಮಾ । ಬ್ರಹ್ಮಾಣಿ । ಯುವಽಯೂನಿ । ಅಗ್ಮನ್ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥೭॥

ಸಾಯಣಭಾಷ್ಯಂ

**ಹೇ ಅಶ್ವಿನಾಶ್ವಿನೌ ಇಯಂ ಮನೀಷಾ ಸ್ತುತಿರ್ಯುವಯೋಃ ಕೃತೇತಿ ಶೇಷಃ । ತದೇವಾದರಾರ್ಥಂ ಪುನರುಚ್ಯತೇ । ಇಯಂ ಗೀಃ ಸ್ತುತಿಃ ಕೃತಾ । ಹೇ ವೃಷಣಾ ಕಾಮಾನಾಂ ವರ್ಷಕೌ ಇಮಾಮಸ್ಮತ್ಕೃತಾಂ ಸುವೃಕ್ತಿಂ ಜುಷೇಥಾಂ । ಸೇವೇಥಾಂ । ಇಮೇಮಾನಿ ಬ್ರಹ್ಮಾಣಿ ಕರ್ಮಾಣಿ ಸ್ತುತಿರೂಪಾಣಿ ಯುವಯೂನಿ ಯುವಾಂ ಕಾಮಯಮಾನಾನಿ ಸಂತ್ಯಗ್ಮನ್ । ಗಚ್ಛಂತು ಯುವಾಂ । ಯೂಯಂ ಪಾತೇತಿ ಸಿದ್ಧಂ ॥**

ಪ್ರತಿಪದಾರ್ಥ

**ವೃಷಣಾ**— ಇಷ್ಟಾರ್ಥಪ್ರದರಾದ । **ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ । **ಇಯಂ ಮನೀಷಾ**— ಈ ಸ್ತುತಿಯು ನಿಮಗಾಗಿ ನಿರ್ಮಿತವಾಗಿದೆ । **ಇಯಂ ಗೀಃ**— ಈ ಸ್ತುತಿಯು ಸಿದ್ಧವಾಗಿದೆ । **ಇಮಾಂ ಸುವೃಕ್ತಿಂ**— ಈ ಉತ್ತಮವಾದ ಸ್ತುತಿಯನ್ನು । **ಜುಷೇಥಾಂ**— ಸೇವಿಸಿರಿ । **ಇಮಾ ಬ್ರಹ್ಮಾಣಿ**— ನಮ್ಮ ಈ ಸ್ತುತಿಕರ್ಮಗಳು । **ಯುವಯೂನಿ**— ನಿಮ್ಮ ಸೇವೆಯನ್ನಿಚ್ಛಿಸಿ । **ಅಗ್ಮನ್**— ನಿಮ್ಮನ್ನು ಬಂದು ಸೇರಲಿ । **ಯೂಯಂ**— ನೀವು । **ಸದಾ**— ಯಾವಾಗಲೂ । **ನಃ**— ನಮ್ಮನ್ನು । **ಸ್ವಸ್ತಿಭಿಃ**— ಕಲ್ಯಾಣಗಳಿಂದ । **ಪಾತ**— ರಕ್ಷಿಸಿರಿ.

ಭಾವಾರ್ಥ

ಇಷ್ಟಾರ್ಥಪ್ರದರಾದ ಎಲೈ ಅಶ್ವಿನೀದೇವತೆಗಳೇ, ಈ ಸ್ತುತಿಯು ನಿಮಗಾಗಿ ನಿರ್ಮಿತವಾಗಿದೆ ಮತ್ತು ನಿಮಗೆ ಅರ್ಪಿಸಲು ಸಿದ್ಧವಾಗಿದೆ ಈ ಉತ್ತಮವಾದ ಸ್ತುತಿಯನ್ನು ಸೇವಿಸಿರಿ ನಮ್ಮ ಈ ಸ್ತುತಿಕರ್ಮಗಳು ನಿಮ್ಮ ಸೇವೆಯನಿಚ್ಛಿಸಿ ನಿಮ್ಮನ್ನು ಬಂದು ಸೇರಲಿ ನೀವು ಯಾವಾಗಲೂ ನಮ್ಮನ್ನು ಕಲ್ಯಾಣಗಳಿಂದ ರಕ್ಷಿಸಿರಿ.

English Translation

This adoration, Ashwins, this praise (is for you) be gratified, showerer (of benefits), by this laudation . may these eulogies, addressed to you, reach you and do you ever cherish us with blessings

---

## ಎಪ್ಪತ್ತೆರಡನೆಯ ಸೂಕ್ತವು

ಸಾಯಣಭಾಷ್ಯಂ

**ಆ ಗೋಮತೇತಿ ಪಂಚರ್ಚಂ ದ್ವಿತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಾಶ್ವಿನಂ । ಅನುಕ್ರಮ್ಯತೇ ಚ । ಆ ಗೋಮತಾ ಪಂಚೇತಿ ॥ ವಿನಿಯೋಗಃ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತಃ॥ ಆಶ್ವಿನೇ ಪಶಾವಾದ್ಯಾಃಶ್ಚತಸ್ರೋ ಯಾಜ್ಯಾನುವಾಕ್ಯಾಃ । ಸೂತ್ರಿತಂ ಚ । ಆ ಗೋಮತಾ ನಾಸತ್ಯಾ ರಥೇನೇತಿ ಚತಸ್ರಃ । ಆ-೩-೮ । ಇತಿ ॥**

**ಅನುವಾದವು—ಆ ಗೋಮತಾ—**ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಅಶ್ವಿನೀದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ **ಆ ಗೋಮತಾ ಪಂಚ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ ಅಶ್ವಿನೀದೇವತೆಗಳನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳನ್ನು ಯಾಜ್ಯಾ ಮತ್ತು ಅನುವಾಕ್ಯಾ ಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಆ ಗೋಮತಾ ನಾಸತ್ಯಾ ರಥೇನೇತಿ ಚತಸ್ರಃ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು

## ಸೂಕ್ತ—೭೨

ಮಂಡಲ—೭ || ಅನುವಾಕ—೫ || ಸೂಕ್ತ—೭೨ ||
ಅಷ್ಟಕ—೫ || ಅಧ್ಯಾಯ—೫ || ವರ್ಗ—೧೯ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ||
ಋಷಿಃ—ವಸಿಷ್ಠಃ ||
ದೇವತಾ—ಅಶ್ವಿನೌ ||
ಛಂದಃ—ತ್ರಿಷ್ಟುಪ್ |

ಸಂಹಿತಾಪಾಠಃ

ಆ ಗೋಮತಾ ನಾಸತ್ಯಾ ರಥೇನಾಶ್ವಾವತಾ ಪುರುಶ್ಚಂದ್ರೇಣ ಯಾತಂ |
ಅಭಿ ವಾಂ ವಿಶ್ವಾ ನಿಯುತಃ ಸಚಂತೇ ಸ್ಪಾರ್ಹಯಾ ಶ್ರಿಯಾ ತನ್ವಾ ಶುಭಾನಾ

ಪದಪಾಠಃ

ಆ | ಗೋऽಮತಾ | ನಾಸತ್ಯಾ | ರಥೇನ | ಅಶ್ವऽವತಾ | ಪುರುऽಚಂದ್ರೇಣ | ಯಾತಂ |
ಅಭಿ | ವಾಂ | ವಿಶ್ವಾಃ | ನಿऽಯುತಃ | ಸಚಂತೇ | ಸ್ಪಾರ್ಹಯಾ | ಶ್ರಿಯಾ | ತನ್ವಾ | ಶುಭಾನಾ || ೧ ||

ಸಾಯಣಭಾಷ್ಯಂ

**ಹೇ ನಾಸತ್ಯಾಶ್ವಿನೌ ಗೋಮತಾ ಗೋಯುಕ್ತೇನಾಶ್ವಾವತಾಶ್ವಯುಕ್ತೇನ | ಅಶ್ವೈರ್ವೃಷಭೈಃ ಶ್ಚೋಢೇನೇತ್ಯರ್ಥಃ | ಯದ್ವಾ | ಗೋಮತಾ ಗೋಪ್ರದೇನ | ಪುರುಶ್ಚಂದ್ರೇಣ ಬಹುಧನೇನ | ಧನಪ್ರದೇನೇತ್ಯರ್ಥಃ | ತಾದೃಶೇನ ರಥೇನಾ ಯಾತಂ | ಆಗಚ್ಛತಂ | ವಾಂ ವಿಶ್ವಾ ಬಹ್ವ್ಯೋ ನಿಯುತಃ ಸ್ತುತಯಃ ಸಚಂತೇ ಸೇವಂತೇऽಸ್ಮತ್ಪ್ರೇರಿತಾಃ | ಹೇ ಸ್ಪಾರ್ಹಯಾ ಸ್ಪೃಹಣೀಯಯಾ ಶ್ರಿಯಾ ಶೋಭಯಾ ತನ್ವಾ ಶರೀರೇಣ ಚ ಶುಭಾನಾ ದೀಪ್ಯಮಾನೌ ಯುವಾಂ ||**

ಪ್ರತಿಪದಾರ್ಥ

**ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ | **ಸ್ಪಾರ್ಹಯಾ**—ಆಕರ್ಷಕವಾದ | **ಶ್ರಿಯಾ**—ಕಾಂತಿಯಿಂದ ಕೂಡಿದ | **ತನ್ವಾ**—ಶರೀರದಿಂದ | **ಶುಭಾನಾ**—ಪ್ರಕಾಶಿಸುವ ನೀವು | **ಗೋಮತಾ**—ಗೋಯುಕ್ತವಾದುದೂ |

**ಅಶ್ವಾವತಾ**—ಅಶ್ವಗಳಿಂದ ಕೂಡಿದುದೂ | **ಪುರುಶ್ಚಂದ್ರೇಣ**—ಅಧಿಕವಾದ ಸಂಪದ್ಯುಕ್ತವಾದುದೂ ಆದ | **ರಥೇನ**—ರಥದೊಡನೆ | **ಆ ಯಾತಂ**—ಬನ್ನಿರಿ | **ವಾಂ ಅಭಿ**—ನಿಮ್ಮನ್ನು ಸುತ್ತಿ | **ವಿಶ್ವಾಃ**—ಅನೇಕವಾದ | **ನಿಯುತಃ**—ಸ್ತುತಿಗಳು | **ಸಚಂತೇ**—ಸೇವಿಸುತ್ತವೆ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಗೋಯುಕ್ತವಾದುದೂ, ಅಶ್ವಗಳಿಂದ ಕೂಡಿದುದೂ. ಅಧಿಕವಾದ ಸಂಪದ್ಯುಕ್ತವಾದುದೂ ಆದ ರಥದೊಡನೆ ಬನ್ನಿರಿ. ನೀವು ಆಕರ್ಷಕವಾದ ಕಾಂತಿಯಿಂದ ಕೂಡಿದ ಶರೀರದಿಂದ ಪ್ರಕಾಶಿಸುತ್ತಿದ್ದೀರಿ. ನಿಮ್ಮನ್ನು ಅನೇಕವಾದ ಸ್ತುತಿಗಳು ಸೇವಿಸುತ್ತವೆ.

English Translation

Come, Nasatyas, with your cattle-giving, horse-bestowing, wealth-yielding chariot : all praises gather round you, who are resplendent with admirable beauty of persons.

ಸಂಹಿತಾಪಾಠಃ

ಆ ನೋ ದೇವೇಭಿರುಪ ಯಾತಮರ್ವಾಕ್ಸಜೋಷಸಾ ನಾಸತ್ಯಾ ರಥೇನ ।
ಯುವೋರ್ಹಿ ನಃ ಸಖ್ಯಾ ಪಿತ್ರ್ಯಾಣಿ ಸಮಾನೋ ಬಂಧುರುತ ತಸ್ಯ ವಿತ್ತಂ ॥

ಪದಪಾಠಃ

ಆ । ನಃ । ದೇವೇಭಿಃ । ಉಪ । ಯಾತಂ । ಅರ್ವಾಕ್ । ಸsಜೋಷಸಾ । ನಾಸತ್ಯಾ । ರಥೇನ ।
ಯುವೋಃ । ಹಿ । ನಃ । ಸಖ್ಯಾ । ಪಿತ್ರ್ಯಾಣಿ । ಸಮಾನಃ । ಬಂಧುಃ । ಉತ । ತಸ್ಯ । ವಿತ್ತಂ ॥ ೨ ॥

ಸಾಯಣಭಾಷ್ಯಂ

ಹೇ ನಾಸತ್ಯಾಶ್ವಿನೌ ಯುವಾಂ ದೇವೇಭಿರಿತರೈರ್ದೇವೈಃ ಸಹ ಸಜೋಷಸಾ ಸಮಾನಪ್ರೀತೌ ಪರಸ್ಪರಂ ಸಂಗತೌ ನೋಽಸ್ಮಾಕಮರ್ವಾಗಭಿಮುಖಂ ರಥೇನಾ ಯಾತಂ । ಆಗಚ್ಛತಂ । ಆಗಮನೇ ಬಂಧುತ್ವಾತಿಶಯಮಾಹ । ಯುವೋರ್ಯುವಯೋರ್ನೋಽಸ್ಮಾಕಂ ಚ ಸಖ್ಯಾ ಸಖ್ಯಾನಿ ಪಿತ್ರ್ಯಾಣಿ ಪಿತೃತಃ ಪ್ರಾಪ್ತಾನಿ । ನೇದಾನೀಂ ಸ್ತುತ್ಯಾದ್ಯುಪಾಧಿನಾ ಪ್ರಾಪ್ತಾನಿ ಭವಂತೀತ್ಯರ್ಥಃ । ತದೇವಾಹ । ಉತಾಪಿ ಚ ಯುವಯೋರ್ಮಮ ಚ ಬಂಧುರ್ಬಂಧಕಃ ಪಿತಾಮಹಃ ಸಮಾನ ಏಕ ಏವ । ತಸ್ಯ ವಿತ್ತಂ ॥ ತಸ್ಯೇತಿ ಕರ್ಮಣಿ ಷಷ್ಠೀ ॥ ತಂ ಬಂಧುಂ ತದ್ಬಂಧುತ್ವಂ ವಾವಿತ್ತಂ । ಜಾನೀತಂ ॥ ವಿವಸ್ವಾನ್ವ-ರುಣಶ್ಚೋಭಾವಪಿ ಕಶ್ಯಪಾದದಿತೇರ್ಜಾತೌ ವಿವಸ್ವಾನಶ್ವಿನೋರ್ಜನಕೋ ವರುಣೋ ವಸಿಷ್ಠಸ್ಯೇತೀತ್ಯೇವಂ ಸಮಾನಬಂಧುತ್ವಂ । ತಥಾ ಚ ಬೃಹದ್ದೇವತಾಯಾಮುಕ್ತಂ ॥ ಅಭವನ್ಮಿಥುನಂ ತ್ವಷ್ಟುಃ ಸರಣ್ಯುಸ್ತ್ರಿಶಿರಾಃ

ಸಹ । ಸ ವೈ ಸರಣ್ಯ್ವಾಂ ಪ್ರಾಯಚ್ಛತ್ಸ್ವಯಮೇವ ವಿವಸ್ವತೇ ॥ ತತಃ ಸರಣ್ಯ್ವಾಂ ಜಾತೇ ತೇ ಯಮ-ಯಮ್ಯೌ ವಿವಸ್ವತಃ । ತಾವಪ್ಯುಭೌ ಯಮಾವೇವ ಹ್ಯಾಸ್ತಾಂ ಯಮ್ಯಾ ಚ ವೈ ಯಮಃ ॥ ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯೂಃ ಸದೃಶೀಂ ಸ್ತ್ರಿಯಂ । ನಿಕ್ಷಿಪ್ಯ ಮಿಥುನಂ ತಸ್ಯಾಮಶ್ವಾ ಭೂತ್ವಾ ಪ್ರಚಕ್ರಮೇ ॥ ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ । ರಾಜರ್ಷಿರಾಸೀತ್ಸ ಮನುರ್ವಿವ-ಸ್ವಾನಿವ ತೇಜಸಾ ॥ ಸ ವಿಜ್ಞಾಯ ಅಪಕ್ರಾಂತಾಂ ಸರಣ್ಯೂಮಾತ್ಮರೂಪಿಣೀಂ । ತ್ವಾಷ್ಟ್ರೀಂ ಪ್ರತಿಜಗಾ-ಮಾಶು ವಾಜೀ ಭೂತ್ವಾ ಸಲಕ್ಷಣಃ ॥ ಸರಣ್ಯೂಸ್ತು ವಿವಸ್ವಂತಂ ವಿಜ್ಞಾಯ ಹಯರೂಪಿಣಂ । ಮೈಥು ನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ ॥ ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ । ಉಪಾಜಿಘ್ರಚ್ಚ ಸಾ ತ್ವಶ್ವಾ ತಚ್ಛುಕ್ರಂ ಗರ್ಭಕಾಮ್ಯಯಾ ॥ ಆಘ್ರಾಣಮಾತ್ರಾಚ್ಛುಕ್ರಂ ತತ್ಕುಮಾರೌ ಸಂಬಭೂವತುಃ । ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಪೀತಿ ॥

### ಪ್ರತಿಪದಾರ್ಥ

**ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ । **ದೇವೇಭಿಃ**—ಇತರ ದೇವತೆಗಳೊಡನೆ । **ಸಜೋಷಸಾ**—ಕೂಡಿದವರಾಗಿ । **ನಃ**—ನಮ್ಮ । **ಅರ್ವಾಕ್**—ಅಭಿಮುಖವಾಗಿ । **ರಥೇನ**—ರಥದೊಡನೆ । **ಉಪ ಆಯಾತಂ**—ಬನ್ನಿರಿ । **ಯುವೋಃ**—ನಿಮಗೂ । **ನಃ**—ನಮಗೂ ಇರುವ । **ಸಖ್ಯಾ**—ಮಿತ್ರತ್ವವು । **ಪಿತ್ರ್ಯಾಣಿ**—ನಮ್ಮ ಹಿಂದಿನ ತಲೆಮಾರುಗಳಿಂದಲೂ ಇರುತ್ತವೆ । **ಉತ**—ಮತ್ತು । **ಬಂಧುಃ**—ನಮ್ಮನ್ನು ಬಂಧುತ್ವದಿಂದ ಸೇರಿಸುವ ನಮ್ಮ ಹಿರಿಯರು । **ಸಮಾನಃ**—ಒಬ್ಬರೇ ಆಗಿದ್ದಾರೆ । **ತಸ್ಯ**—ಅವರ । **ವಿತ್ತಂ**—ಸಂಬಂಧವನ್ನು ತಿಳಿಯಿರಿ

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನೀವು ಇತರ ದೇವತೆಗಳೊಡನೆ ಕೂಡಿಕೊಂಡು ರಥದೊಡನೆ ನಮ್ಮಲ್ಲಿಗೆ ಬನ್ನಿರಿ। ನಿಮಗೂ ನಮಗೂ ಇರತಕ್ಕ ಮಿತ್ರತ್ವವು ನಮ್ಮ ಹಿಂದಿನವರಿಂದಲೂ ಇರುತ್ತದೆ ನಮಗೆ ಬಂಧುತ್ವವನ್ನು ಒದಗಿಸಿರುವ ನಮ್ಮ ಹಿರಿಯರು ಒಬ್ಬರೇ ಆಗಿದ್ದಾರೆ. ಅವರ ಸಂಬಂಧವನ್ನು ತಿಳಿಯಿರಿ

## English Translation

Sharing in satisfaction with the gods, come to our presence, Nasatyas, with your chariot, for the friendship (that prevails) between you and us is from our forefathers , a common ancestor (is ours) . acknowledge his affinity.

### ವಿಶೇಷವಿಷಯಗಳು

**ಬಂಧುಃ ಸಮಾನಃ**:—ಈ ಸೂಕ್ತದ ಋಷಿಯಾದ ವಸಿಷ್ಠಋಷಿಗೂ, ಅಶ್ವಿನೀ ದೇವತೆಗಳಿಗೂ ಪರಸ್ಪರ ಬಂಧುತ್ವವಿರುವುದೆಂದು ಇಲ್ಲಿ ಹೇಳಲಾಗಿದೆ. ಅದು ಹೇಗೆಂದರೆ, ಅಶ್ವಿನೀದೇವತೆಗಳ ತಂದೆಯಾದ ವಿವಸ್ವಂತನೂ, ವಸಿಷ್ಠಋಷಿಯ ತಂದೆಯಾದ ವರುಣನೂ ಅದಿತಿ ದೇವಿಯಲ್ಲಿ ಕಶ್ಯಪಋಷಿಯಿಂದ ಉತ್ಪನ್ನರಾದ ಪುತ್ರರು ಆದ್ದರಿಂದ ಇವರಿಬ್ಬರೂ ಸಹೋದರರು. ಸಹೋದರರ ಮಕ್ಕಳಾದ್ದರಿಂದ ವಸಿಷ್ಠಋಷಿಗೂ, ಅಶ್ವಿನೀದೇವತೆಗಳಿಗೂ ಪರಸ್ಪರ

ಸಂಬಂಧವಿದ್ದಂತಾಯಿತು. ಈ ವಿಷಯವನ್ನು ಸಮರ್ಥಿಸುವುದಕ್ಕಾಗಿ ಭಾಷ್ಯಕಾರರು ಬೃಹದ್ದೇವತಾಗ್ರಂಥದಲ್ಲಿ ಹೇಳಿರುವುದನ್ನು ಇಲ್ಲಿ ಉದಹರಿಸಿದ್ದಾರೆ.

**ಅಭವನ್ಮಿಥುನಂ ತ್ವಷ್ಟುಃ ಸರಣ್ಯೂಸ್ತ್ರಿಶಿರಾಃ ಸಹ ।**
**ಸ ವೈ ಸರಣ್ಯೂಂ ಪ್ರಾಯಚ್ಛತ್ ಸ್ವಯಮೇವ ವಿವಸ್ವತೇ ॥**

(ಬೃ. ದೇ. ೬ ೧೬೨)

ತ್ವಷ್ಟೃವಿಗೆ ಸರಣ್ಯೂ ಎಂಬ ಕನ್ಯೆಯೂ, ತ್ರಿಶಿರಸ್ಸೆಂಬ ಪುತ್ರನೂ ಇದ್ದರು. ಅವನು ತನ್ನ ದುಹಿತೆಯಾದ ಸರಣ್ಯೂವನ್ನು ವಿವಸ್ವಂತನಿಗೆ ವಿವಾಹ ಮಾಡಿಕೊಟ್ಟನು.

**ತತಃ ಸರಣ್ವ್ಯಾಂ ಜಜ್ಞಾತೇ ಯಮಯಮ್ಯೌ ವಿವಸ್ವತಃ ।**
**ತೌ ಚಾಪ್ಯುಭೌ ಯಮಾವೇವ ಜ್ಯಾಯಾಂಸ್ತಾಭ್ಯಾಂ ತು ವೈ ಯಮಃ ॥**

(ಬೃ ದೇ. ೬. ೧೬೨)

ಅನಂತರ ವಿವಸ್ವಂತನಿಗೆ ಪತ್ನಿಯಾದ ಸರಣ್ಯೂವಿನಲ್ಲಿ ಯಮ ಮತ್ತು ಯಮೀ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಇವರಿಬ್ಬರೂ ಒಂದಿಗೆ ಹುಟ್ಟಿದ ಅವಳಿ ಮಕ್ಕಳು. ಅವರಿಬ್ಬರಲ್ಲಿ ಯಮನೇ ಮೊದಲನೆಯವನು.

**ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯೂಃ ಸದೃಶೀಂ ಸ್ತ್ರಿಯಂ ।**
**ನಿಕ್ಷಿಪ್ಯ ಮಿಥುನಂ ತಸ್ಯಾಂ ಅಶ್ವಾ ಭೂತ್ವಾಪಚಕ್ರಮೇ ॥**

(ಬೃ. ದೇ. ೭-೧)

ತನ್ನ ಪತಿಯಾದ ವಿವಸ್ವಂತನು ಇಲ್ಲದಿರುವ ವೇಳೆಯಲ್ಲಿ ಸರಣ್ಯೂವು ತನ್ನನ್ನೇ ಹೋಲುವ ಮತ್ತೊಬ್ಬ ಸ್ತ್ರೀಯನ್ನು ನಿರ್ಮಿಸಿ ತನ್ನ ಅವಳಿ ಮಕ್ಕಳನ್ನು ಅವಳ ವಶಕ್ಕೆ ಒಪ್ಪಿಸಿ ತಾನು ಅಶ್ವರೂಪವನ್ನು ಹೊಂದಿ ಆ ಸ್ಥಾನವನ್ನು ಬಿಟ್ಟು ವಿವಸ್ವಂತನಿಗೆ ತಿಳಿಯದಂತೆ ಬೇರೆ ಜಾಗಕ್ಕೆ ಹೋಗಿ ಅದೃಶ್ಯಳಾದಳು.

**ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ ।**
**ರಾಜರ್ಷಿರಭವತ್ಸೋಽಪಿ ವಿವಸ್ವಾನಿವ ತೇಜಸಾ ॥**

(ಬೃ. ದೇ ೭ ೨)

ಆದರೆ ವಿವಸ್ವಂತನಿಗೆ ಇದರ ಅರಿವು ಇಲ್ಲದೇ, ಸರಣ್ಯೂವಿಗೆ ಪ್ರತಿನಿಧಿಯಾಗಿದ್ದ ಆ ಸ್ತ್ರೀವ್ಯಕ್ತಿಯೊಂದಿಗೆ ಸೇರಿದನು. ಅದರ ಫಲವಾಗಿ ಮನುವಿನ ಉತ್ಪತ್ತಿಯಾಯಿತು. ಮನುವೂ ಸಹ ತಂದೆಯಂತೆಯೇ ತೇಜಸ್ವಿಯಾಗಿ ದೊಡ್ಡ ರಾಜರ್ಷಿಯಾದನು. ಇವನ ಕೀರ್ತಿಯು ಸಕಲ ಲೋಕಗಳಲ್ಲಿಯೂ ಹರಡಿತು.

**ಸ ವಿಜ್ಞಾಯ ತ್ವಪಕ್ರಾಂತಾಂ ಸರಣ್ಯೂಮಶ್ವರೂಪಿಣೀಂ ।**
**ತ್ವಾಷ್ಟ್ರೀಂ ಪ್ರತಿ ಜಗಾಮಾಶು ವಾಜೀ ಭೂತ್ವಾ ಸಲಕ್ಷಣಃ ॥**

(ಬೃ. ದೇ ೭. ೩)

ಕೊನೆಯಲ್ಲಿ, ವಿವಸ್ವಂತನಿಗೆ ನಿಜವಾದ ಅರಿವುಂಟಾಯಿತು. ಸರಣ್ಯೂವು ಅಶ್ವರೂಪದಲ್ಲಿ ಹೊರಟುಹೋಗಿದ್ದಾಳೆಂದು ತಿಳಿದನಂತರ ತಾನೂ ಸಹ ಪುರುಷಾಶ್ವರೂಪವನ್ನು ಹೊಂದಿ ತ್ವಷ್ಟೃವಿನ ಪುತ್ರಿಯು ಹೋದ ಸ್ಥಳಕ್ಕೆ ಅವಳನ್ನು ಹಿಂಬಾಲಿಸಿ ಹೊರಟು ಅವಳನ್ನು ಸೇರಲು ಪ್ರಯತ್ನಿಸಿದನು.

**ಸರಣ್ಯೂಶ್ಚ ವಿವಸ್ವಂತಂ ವಿದಿತ್ವಾ ಹಯರೂಪಿಣಂ ।**
**ಮೈಥುನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ ॥**

(ಬೃ. ದೇ. ೭. ೪)

ತನ್ನನ್ನು ಹಿಂಬಾಲಿಸಿ ವಿವಸ್ವಂತನೂ ಅಶ್ವರೂಪನಾಗಿ ಬಂದುದನ್ನು ತಿಳಿದ ಸರಣ್ಯೂವು ಅವನೊಂದಿಗೆ ಸಂಭೋಗ ಸುಖವನ್ನಿಚ್ಛಿಸಿದಳು. ಆಗ ವಿವಸ್ವಂತನು ಅವಳ ಇಚ್ಛೆಯನ್ನು ನೆರವೇರಿಸಿದನು.

**ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ ।**
**ಉಪಾಜಿಘ್ರಚ್ಚ ಸಾ ತ್ವಶ್ವಾ ತಚ್ಛುಕ್ರಂ ಗರ್ಭಕಾಮ್ಯಯಾ ॥**

(ಬೃ. ದೇ ೨೫)

ಅವರ ಪರಸ್ಪರವಾದ ಉತ್ಸಾಹಕಾಲದಲ್ಲಿ ವಿವಸ್ವಂತನ ಶುಕ್ರವು ಕೆಳಕ್ಕೆ ಬಿದ್ದಿತು. ಆಗ ಸರಣ್ಯೂವು ಗರ್ಭವನ್ನು ಹೊಂದಬೇಕೆಂಬಿಚ್ಛೆಯಿಂದ ಅದನ್ನು ಆಘ್ರಾಣಿಸಿದಳು

**ಆಘ್ರಾತಮಾತ್ರಾಚ್ಛುಕ್ರಾತ್ತು ಕುಮಾರೌ ಸಂಬಭೂವತುಃ ।**
**ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಿತಿ ॥**

(ಬೃ. ದೇ ೭-೬)

ಆ ಶುಕ್ರವನ್ನು ಆಘ್ರಾಣಿಸಿದೊಡನೆಯೇ ಅವಳಿಗೆ ಗರ್ಭೋತ್ಪತ್ತಿಯುಂಟಾಗಿ ಆದರಿಂದ ನಾಸತ್ಯ ಮತ್ತು ದಸ್ರ ಎಂಬ ಇಬ್ಬರು ಯುವಕರು ಉತ್ಪನ್ನರಾದರು ಅನಂತರ ಅವರು **ಅಶ್ವಿನೀದೇವತೆಗಳು** ಎಂಬ ಹೆಸರಿನಿಂದ ಕರೆಯಲ್ಪಟ್ಟು ಇವರ ಮಹಿಮೆಯು ಲೋಕಗಳಲ್ಲೆಲ್ಲಾ ಹರಡಿತು.

ಸಂಹಿತಾಪಾಠಃ

ಉದು ಸ್ತೋಮಾಸೋ ಅಶ್ವಿನೋರಬುಧ್ರಂಜಾಮಿ ಬ್ರಹ್ಮಾಣ್ಯುಷಸಶ್ಚ ದೇ-
ವೀಃ ।
ಆವಿವಾಸನ್ರೋದಸೀ ಧಿಷ್ಣ್ಯೇಮೇ ಅಚ್ಛಾ ವಿಪ್ರೋ ನಾಸತ್ಯಾ ವಿವಕ್ತಿ ॥೩॥

ಪದಪಾಠಃ

ಉತ್ । ಊಂ ಇತಿ । ಸ್ತೋಮಾಸಃ । ಅಶ್ವಿನೋಃ । ಅಬುಧ್ರನ್ । ಜಾಮಿ । ಬ್ರಹ್ಮಾಣಿ । ಉಷಸಃ । ಚ ।
ದೇವೀಃ ।
ಆऽವಿವಾಸನ್ । ರೋದಸೀ ಇತಿ । ಧಿಷ್ಣ್ಯೇ ಇತಿ । ಇಮೇ ಇತಿ । ಅಚ್ಛ । ವಿಪ್ರಃ । ನಾಸತ್ಯಾ । ವಿವಕ್ತಿ ॥

ಸಾಯಣಭಾಷ್ಯಂ

**ಸ್ತೋಮಾಸಃ ಸೋಮಾಃ ಸ್ತವಾ ಅಶ್ವಿನಾಶ್ವಿನಾವುದ್ಬುಧ್ರನ್ । ಉತ್ಕೃಷ್ಟಂ ಬೋಧಯಂತಿ । ಉ ಇತಿ ಪೂರಣಃ । ಜಾಮಿ । ಬಂಧುನಾಮೈತತ್ । ಬಂಧುಸ್ಥಾನೀಯಾನಿ ಬ್ರಹ್ಮಾಣಿ ಪರಿವೃಢಾನಿ ಕರ್ಮಾಣಿ ದೇವೀರ್ದ್ಯೋತಮಾನಾ ಉಷಸಃ । ಚಕಾರಾದಶ್ವಿನೌ ಚ । ಅಬುಧ್ರನ್ । ವಿಪ್ರೋ ಮೇಧಾವೀ ವಸಿಷ್ಠ ಇಮೇ ರೋದಸೀ ದ್ಯಾವಾಪೃಥಿವ್ಯೌ ಧಿಷ್ಣ್ಯೇ ಧಿಷಣಾರ್ಹೇ ಸ್ತುತ್ಯೇ ಆವಿವಾಸನ್ ಪರಿಚರನ್ ನಾಸತ್ಯಾಶ್ವಿನಾವಚ್ಛಾಭಿಮುಖಂ ವಿವಕ್ತಿ । ಸ್ತೌತಿ ॥**

ಪ್ರತಿಪದಾರ್ಥ

**ಸ್ತೋಮಾಸಃ**—ಸ್ತುತಿಗಳು | **ಉದು ಅಬುಧ್ರನ್**—ಅಶ್ವಿನೀ ದೇವತೆಗಳನ್ನು ಎಚ್ಚರಗೊಳಿಸುತ್ತವೆ | **ಜಾಮಿ**—ಬಂಧುರೂಪಿಗಳಾದ | **ಬ್ರಹ್ಮಾಣಿ**—ಕರ್ಮಗಳೂ | **ದೇವೀಃ**—ಪ್ರಕಾಶಮಾನಗಳಾದ | **ಉಷಸಃ ಚ**—ಉಷಸ್ಸುಗಳೂ ಅವರನ್ನು ಎಚ್ಚರಗೊಳಿಸುತ್ತವೆ | **ವಿಪ್ರಃ**—ಮೇಧಾವಿಯಾದ ವಸಿಷ್ಠನು | **ಧಿಷ್ಣ್ಯೇ**—ಸ್ತುತಿಗೆ ಅರ್ಹರಾದ | **ಇಮೇ ರೋದಸೀ**—ಈ ದ್ಯಾವಾಪೃಥಿವಿಗಳನ್ನು | **ಆ ವಿವಾಸನ್**—ಪೂಜಿಸುತ್ತ | **ನಾಸತ್ಯಾ ಅಚ್ಛ**—ಅಶ್ವಿನೀದೇವತೆಗಳನ್ನುದ್ದೇಶಿಸಿ | **ವಿವಕ್ತಿ**— ಸ್ತುತಿಯನ್ನು ಪಠಿಸುತ್ತಾನೆ.

ಭಾವಾರ್ಥ

ಸ್ತುತಿಗಳೂ, ಬಂಧುರೂಪಿಗಳಾದ ಕರ್ಮಗಳೂ, ಪ್ರಕಾಶಮಾನಗಳಾದ ಉಷಸ್ಸುಗಳೂ ಅಶ್ವಿನೀದೇವತೆಗಳನ್ನು ಎಚ್ಚರಗೊಳಿಸುತ್ತವೆ. ಮೇಧಾವಿಗಳಾದ ವಸಿಷ್ಠನು ಸ್ತುತಿಗೆ ಅರ್ಹರಾದ ದ್ಯಾವಾಪೃಥಿವಿಗಳನ್ನು ಪೂಜಿಸುತ ಅಶ್ವಿನೀದೇವತೆಗಳನ್ನುದ್ದೇಶಿಸಿ ಸ್ತುತಿಯನ್ನು ಪಠಿಸುತ್ತಾನೆ

English Translation

Praises waken up Ashwins, kindred adorations (arouse them) and the celestial dawns · the sage, addressing these laudations to the adorable heaven and earth, glorifies the Nasatyas in their presence

ಸಂಹಿತಾಪಾಠಃ

ವಿ ಚೇದುಚ್ಛಂತ್ಯಶ್ವಿನಾ ಉಷಾಸಃ ಪ್ರ ವಾಂ ಬ್ರಹ್ಮಾಣಿ ಕಾರವೋ ಭರಂತೇ।
ಊರ್ಧ್ವಂ ಭಾನುಂ ಸವಿತಾ ದೇವೋ ಅಶ್ರೇದ್ಬೃಹದಗ್ನಯಃ ಸಮಿಧಾ ಜರಂತೇ ॥ ४ ॥

ಪದಪಾಠಃ

ವಿ | ಚ | ಇತ್ | ಉಚ್ಛಂತಿ | ಅಶ್ವಿನಾ | ಉಷಸಃ | ಪ್ರ | ವಾಂ | ಬ್ರಹ್ಮಾಣಿ | ಕಾರವಃ | ಭರಂತೇ |
ಊರ್ಧ್ವಂ | ಭಾನುಂ | ಸವಿತಾ | ದೇವಃ | ಅಶ್ರೇತ್ | ಬೃಹತ್ | ಅಗ್ನಯಃ | ಸಂऽಇಧಾ | ಜರಂತೇ |

ಸಾಯಣಭಾಷ್ಯಂ

**ಹೇ ಅಶ್ವಿನಾ ಉಷಾಸ ಉಷಸೋ ವ್ಯುಚ್ಛಂತಿ ಚೇತ್ | ತಮಾಂಸಿ ವಿವಾಸಯಂತಿ | ಚೇದಿತಿ ಪೂರಣಶ್ಚಾರ್ಥೇ ವಾ | ಸ ಚ ವಕ್ಷ್ಯಮಾಣಸೂರ್ಯಾದ್ಯಪೇಕ್ಷಕಃ || ಚೇದ್ಯೋಗಾದನಿಘಾತಃ || ಅತೋ ಯುವಯೋಃ ಸ್ತುತಿಸಮಯತ್ವಾದ್ಬ್ರಹ್ಮಾಣಿ ಸ್ತೋತ್ರಾಣಿ ಕಾರವಃ ಸ್ತೋತಾರಃ ಪ್ರ ಭರಂತೇ | ಪ್ರಕರ್ಷೇಣ ಸಂಪಾದಯಂತಿ | ಊರ್ಧ್ವಮಶ್ರೇತ್ ಆಶ್ರಯತಿ ಭಾನುಂ ತೇಜಃ ಸವಿತಾ ದೇವಃ | ಅಗ್ನಯೋಽಪಿ ಸಮಿಧಾ ಸಮಿಂಧನೇನ ಬೃಹದತಿಮಹಜ್ಜರಂತೇ | ಸ್ತುಯಂತೇ ||**

ಪ್ರತಿಪದಾರ್ಥ

**ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ | **ಉಷಸಃ ವಿ ಉಚ್ಛಂತಿ ಚೇತ್**—ಉಷಸ್ಸುಗಳು ಆವಿರ್ಭವಿಸಿ ಕತ್ತಲನ್ನು ನಾಶಮಾಡಿದೊಡನೆಯೇ | **ವಾಂ**—ನಿಮ್ಮನ್ನುದ್ದೇಶಿಸಿ | **ಕಾರವಃ**—ಸ್ತುತಿಕರ್ತರು | **ಬ್ರಹ್ಮಾಣಿ**—ಸ್ತೋತ್ರಗಳನ್ನು | **ಪ್ರ ಭರಂತೇ**—ಅತಿಶಯವಾಗಿ ಸಂಪಾದಿಸುತ್ತಾರೆ | **ದೇವಃ**—ದೇವಾತ್ಮನಾದ | **ಸವಿತಾ**—ಸವಿತೃವು | **ಊರ್ಧ್ವಂ**—ಉನ್ನತವಾಗಿ | **ಭಾನುಂ**—ತೇಜಸ್ಸನ್ನು | **ಅಶ್ರೇತ್**—ಆಶ್ರಯಿಸುತ್ತಾನೆ | **ಅಗ್ನಯಃ**—ಅಗ್ನಿಗಳೂ ಸಹ | **ಸಮಿಧಾ**—ಪ್ರಜ್ವಲಿತವಾಗುವುದರಿಂದ | **ಬೃಹತ್**—ಅಧಿಕವಾಗಿ | **ಜರಂತೇ**—ಸ್ತುತಿಸಲ್ಪಡುತ್ತವೆ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಉಷಸ್ಸುಗಳು ಆವಿರ್ಭವಿಸಿ ಕತ್ತಲನ್ನು ನಾಶಮಾಡಿದೊಡನೆಯೇ, ನಿಮ್ಮನ್ನುದ್ದೇಶಿಸಿ ಸ್ತುತಿಕರ್ತರು ಅತಿಶಯವಾಗಿ ಸ್ತೋತ್ರಗಳನ್ನು ಪಠಿಸುತ್ತಾರೆ. ದೇವಾತ್ಮಕನಾದ ಸವಿತೃವು ಉನ್ನತನಾಗಿ ತನ್ನ ತೇಜಸ್ಸನ್ನು ಪ್ರಸರಿಸುತ್ತಾನೆ. ಅಗ್ನಿಗಳೂ ಸಹ ಪ್ರಜ್ವಲಿತವಾಗುವುದರಿಂದ ಅಧಿಕವಾಗಿ ಸ್ತುತಿಸಲ್ಪಡುತ್ತವೆ

English Translation

When the dawns arise, your worshippers, Ashwins, proffer you praises, the divine Savitri casts his splendours on high the fires, with their (kindled) fuel, greatly glorify you.

ಸಂಹಿತಾಪಾಠಃ

ಆ ಪಶ್ಚಾತಾನ್ನಾಸತ್ಯಾ ಪುರಸ್ತಾದಾಶ್ವಿನಾ ಯಾತಮಧರಾದುದಕ್ತಾತ್ ।
ಆ ವಿಶ್ವತಃ ಪಾಂಚಜನ್ಯೇನ ರಾಯಾ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ॥

ಪದಪಾಠಃ

ಆ | ಪಶ್ಚಾತಾತ್ | ನಾಸತ್ಯಾ | ಆ | ಪುರಸ್ತಾತ್ | ಆ | ಅಶ್ವಿನಾ | ಯಾತಂ | ಅಧರಾತ್ | ಉದಕ್ತಾತ್ |
ಆ | ವಿಶ್ವತಃ | ಪಾಂಚಽಜನ್ಯೇನ | ರಾಯಾ | ಯೂಯಂ | ಪಾತ | ಸ್ವಸ್ತಿಭಿಃ | ಸದಾ | ನಃ ॥ ೫ ॥

ಸಾಯಣಭಾಷ್ಯಂ

ಆ ಪಶ್ಚಾತಾದಿತಿ ಪಂಚಮ್ಯಾಶ್ವಿನೇ ಪಶೌ ವಪಾಯಾ ಅನುವಾಕ್ಯಾ | ಸೂತ್ರಿತಂ ಚ | ಆ ಪಶ್ಚಾತಾನ್ನಾಸತ್ಯಾ ಪುರಸ್ತಾದಾ ಗೋಮತಾ ನಾಸತ್ಯಾ ರಥೇನ | ಆ-೩-೮ | ಇತಿ ||

ಹೇ ನಾಸತ್ಯಾಶ್ವಿನೌ ಪಶ್ಚಾತಾತ್ಪಶ್ಚಾದ್ದೇಶಾದಾ ಯಾತಂ | ತಥಾ ಪುರಸ್ತಾತ್ಪೂರ್ವಸ್ಮಾದ್ದೇಶಾತ್ ತಥಾಧರಾದಧಸ್ತನಾದ್ದೇಶ-ದಕ್ಷಿಣತ ಉದಕ್ತಾದುದಗ್ದೇಶಾತ್ | ಸರ್ವತ್ರಾ ಯಾತಮಿತಿ ಸಂಬಂಧಃ | ಕಿಂ ಬಹುನಾ ವಿಶ್ವತಃ ಸರ್ವಸ್ಮಾದ್ದೇಶಾತ್ಪಾಂಚಜನ್ಯೇನ ಪಂಚಜನಹಿತೇನ ರಾಯಾ ಧನೇನ ಸಹಾ ಯಾತಂ | ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಪಂಚಜನಾಃ ||

### ಪ್ರತಿಪದಾರ್ಥ

**ನಾಸತ್ಯಾ**—ನಾಸತ್ಯಸಂಜ್ಞಕರಾದ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ಪಶ್ಚಾತಾತ್**—ಪಶ್ಚಿಮ ಪ್ರದೇಶದಿಂದ | **ಆ ಯಾತಂ**— ಬನ್ನಿರಿ. | **ಪುರಸ್ತಾತ್**—ಪೂರ್ವಭಾಗದಿಂದಲೂ | **ಆ**—ಬನ್ನಿರಿ | **ಅಧರಾತ್**—ದಕ್ಷಿಣದಿಕ್ಕಿನಿಂದಲೂ | **ಉದಕ್ತಾತ್**—ಉತ್ತರದಿಕ್ಕಿನಿಂದಲೂ | **ಆ (ಯಾತಂ)**—ಬನ್ನಿರಿ. | **ವಿಶ್ವತಃ**—ಸಕಲ ದಿಕ್ಕುಗಳಿಂದಲೂ | **ಪಾಂಚಜನ್ಯೇನ**—ಐದುವಿಧವಾದ ಜನರಿಗೂ ಹಿತವನ್ನುಂಟುಮಾಡತಕ್ಕ | **ರಾಯಾ**—ಧನದೊಂದಿಗೆ | **ಆ (ಯಾತಂ)**—ಬನ್ನಿರಿ. | **ಯೂಯಂ**—ನೀವು | **ಸದಾ**—ಯಾವಾಗಲೂ | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ನಃ**—ನಮ್ಮನ್ನು | **ಪಾತ**—ರಕ್ಷಿಸಿರಿ.

### ಭಾವಾರ್ಥ

ನಾಸತ್ಯಸಂಜ್ಞಕರಾದ ಎಲೈ ಅಶ್ವಿನೀದೇವತೆಗಳೇ, ನೀವು ಪಶ್ಚಿಮಪ್ರದೇಶದಿಂದಲೂ, ಪೂರ್ವಪ್ರದೇಶದಿಂದಲೂ, ದಕ್ಷಿಣಭಾಗದಿಂದಲೂ, ಉತ್ತರದಿಕ್ಕಿನಿಂದಲೂ ನಮ್ಮಲ್ಲಿಗೆ ಬನ್ನಿರಿ ಐದುವಿಧವಾದ ಜನರಿಗೂ ಹಿತವನ್ನುಂಟುಮಾಡುವ ಧನದೊಂದಿಗೆ ಕೂಡಿ ಎಲ್ಲಾ ಕಡೆಗಳಿಂದಲೂ ಬನ್ನಿರಿ. ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

### English Translation.

Come, Nasatyas, from the west, from the east : (come), Aswins from the south, from the north, come from every quarter with riches beneficial for the five classes of men : and do you ever cherish us with blessings.

### ವಿಶೇಷವಿಷಯಗಳು

**ಆ ಪಶ್ಚಾತಾತ್** ಎಂಬ ಈ ಋಕ್ಕನ್ನು ಅಶ್ವಿನೀದೇವತೆಗಳನ್ನುದ್ದೇಶಿಸಿ ಮಾಡುವ ಪಶುಯಾಗದ ವಪಾಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಆ ಪಶ್ಚಾತಾನ್ನಾಸತ್ಯಾ ಪುರಸ್ತಾದಾ ಗೋಮುತಾ ನಾಸತ್ಯಾ ರಥೇನ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು

---

## ಎಪ್ಪತ್ತಮೂರನೆಯ ಸೂಕ್ತವು

### ಸಾಯಣಭಾಷ್ಯಂ

**ಅತಾರಿಷ್ಮೇತಿ ಪಂಚರ್ಚಂ ತೃತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮಾಶ್ವಿನಂ | ಅತಾರಿಷ್ಮೇತ್ಯನುಕ್ರಮಣಿಕಾ || ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ||**

**ಅನುವಾದವು**—**ಅತಾರಿಷ್ಮ**—ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಅಶ್ವಿನೀದೇವತೆಗಳು ದೇವತೆಯು, ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಅತಾರಿಷ್ಮ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೭೩

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೭೩ ॥
ಅಷ್ಟಕ—೫ ॥ ಅಧ್ಯಾಯ—೫ ॥ ವರ್ಗ—೨೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಸಿಷ್ಠಃ ॥
ದೇವತಾ—ಅಶ್ವಿನಾ ॥
ಛಂದಃ—ತ್ರಿಷ್ಟುಬ್ ।

ಸಂಹಿತಾಪಾಠಃ

ಅತಾರಿಷ್ಮ ತಮಸಸ್ಪಾರಮಸ್ಯ ಪ್ರತಿ ಸ್ತೋಮಂ ದೇವಯಂತೋ ದಧಾನಾಃ ।
ಪುರುದಂಸಾ ಪುರುತಮಾ ಪುರಾಜಾಮರ್ತ್ಯಾ ಹವತೇ ಅಶ್ವಿನಾ ಗೀಃ ॥ ೧ ॥

ಪದಪಾಠಃ

ಅತಾರಿಷ್ಮ । ತಮಸಃ । ಪಾರಂ । ಅಸ್ಯ । ಪ್ರತಿ । ಸ್ತೋಮಂ । ದೇವಽಯಂತಃ । ದಧಾನಾಃ ।
ಪುರುಽದಂಸಾ । ಪುರುಽತಮಾ । ಪುರಾಽಜಾ । ಅಮರ್ತ್ಯಾ । ಹವತೇ । ಅಶ್ವಿನಾ । ಗೀಃ ॥ ೧ ॥

ಸಾಯಣಭಾಷ್ಯಂ

ಅಸ್ಯ ತಮಸೋಽಜ್ಞಾನಸ್ಯ ತತ್ಕಾರ್ಯಸ್ಯ ಜನನಮರಣವತಃ ಸಂಸಾರದುಃಖಸ್ಯ ಅಥವಾ ಪ್ರಕೃತತ್ವಾತ್ ಪ್ರಯೋಗವಿಷಯಾಜ್ಞಾನಸ್ಯ ಪಾರಮತಾರಿಷ್ಮ । ತೀರ್ಣಾಃ ಸ್ಮ । ಕಿಂ ಕುರ್ವಂತಃ । ದೇವಯಂತೋ ದೇವಕಾಮಾಃ ಸ್ತೋಮಂ ಸ್ತುತಿಂ ಪ್ರತಿ ದಧಾನಾ ದೇವೇಷು ಕುರ್ವಾಣಾಃ । ಪುರುದಂಸಾ ಬಹುಕರ್ಮಾಣೌ ಪುರುತಮಾ ಪ್ರಭೂತತಮೌ ಪುರಾಜಾ ಪೂರ್ವಜಾತಾವತ ಏವಾಮರ್ತ್ಯಾಮರಣಧರ್ಮಾಣಾವಶ್ವಿನಾಶ್ವಿನೌ ಗೀರ್ಗಿರಿತಾ ಸ್ತೋತಾ ವಸಿಷ್ಠೋ ಹವತೇ । ಸ್ತೌತಿ । ಆಹ್ವಯತಿ ವಾ ॥

ಪ್ರತಿಪದಾರ್ಥ

**ದೇವಯಂತಃ**—ದೇವತೆಗಳನ್ನಿಚ್ಛಿಸಿದವರಾಗಿಯೂ । **ಸ್ತೋಮಂ**—ಸ್ತುತಿಯನ್ನು । **ಪ್ರತಿ ದಧಾನಾಃ**—ದೇವತೆಗಳಿಗೆ ಅರ್ಪಿಸುವವರಾಗಿಯೂ । **ಅಸ್ಯ ತಮಸಃ**—ಅಜ್ಞಾನರೂಪವಾದ ಕತ್ತಲೆಯಿಂದ ಕೂಡಿದ **ಈ** ಸಂಸಾರದ । **ಪಾರಂ**—ದಡವನ್ನು । **ಅತಾರಿಷ್ಮ**—ದಾಟಿದ್ದೇವೆ । **ಪುರುದಂಸಾ**—ಅನೇಕ ಕರ್ಮಕರ್ತರೂ **ಪುರುತಮಾ**—ಆಧಿಕ್ಯವುಳ್ಳವರೂ । **ಪುರಾಜಾ**—ಎಲ್ಲರಿಗಿಂತಲೂ ಮೊದಲು ಉತ್ಪನ್ನರಾದವರೂ । **ಅಮರ್ತ್ಯಾ**—ಮರಣಧರ್ಮರಹಿತರೂ ಆದ । **ಅಶ್ವಿನಾ**—ಅಶ್ವಿನೀದೇವತೆಗಳನ್ನು । **ಗೀಃ**—ಸ್ತುತಿಕರ್ತನಾದ ವಸಿಷ್ಠನು । **ಹವತೇ**—ಸ್ತುತಿಸಿ ಆಹ್ವಾನಮಾಡುತ್ತಾನೆ

ಭಾವಾರ್ಥ

ದೇವಕರ್ಮದಲ್ಲಿ ನಿರತರೂ, ದೇವತೆಗಳನ್ನುದ್ದೇಶಿಸಿ ಸ್ತುತಿಗಳನ್ನರ್ಪಿಸುವವರೂ ಆದ ನಾವು ಅಜ್ಞಾನರೂಪವಾದ ಕತ್ತಲೆಯಿಂದ ಕೂಡಿದ ಈ ಸಂಸಾರದ ದಡವನ್ನು ದಾಟಿದ್ದೇವೆ. ಅನೇಕ ಕರ್ಮಕರ್ತರೂ, ಆಧಿಕ್ಯವುಳ್ಳವರೂ, ಎಲ್ಲರಿಗಿಂತಲೂ ಮೊದಲು ಉತ್ಪನ್ನರಾದವರೂ, ಮರಣಧರ್ಮರಹಿತರೂ ಆದ ಅಶ್ವಿನೀದೇವತೆಗಳನ್ನು ಸ್ತುತಿಕರ್ತನಾದ ವಸಿಷ್ಠನು ಪ್ರಶಂಸಿಸುತ್ತಾನೆ.

## English Translation

Devoted to the gods, and hymning their praise, we have crossed to the opposite shore of this (state of) darkness : the worshipper invokes the Aswins, the doers of many deeds, the most mighty, the first-born, the immortal

ಸಂಹಿತಾಪಾಠಃ

ನ್ಯು ಪ್ರಿಯೋ ಮನುಷಃ ಸಾದಿ ಹೋತಾ ನಾಸತ್ಯಾ ಯೋ ಯಜತೇ ವಂದ-
ತೇ ಚ ।
ಅಶ್ನೀತಂ ಮಧ್ವೋ ಅಶ್ವಿನಾ ಉಪಾಕ ಆ ವಾಂ ವೋಚೇ ವಿದಥೇಷು ಪ್ರಯ-
ಸ್ವಾನ್ ॥ ೨ ॥

ಪದಪಾಠಃ

ನಿ । ಊಂ ಇತಿ । ಪ್ರಿಯಃ । ಮನುಷಃ । ಸಾದಿ । ಹೋತಾ । ನಾಸತ್ಯಾ । ಯಃ । ಯಜತೇ । ವಂದತೇ । ಚ ।
ಅಶ್ನೀತಂ । ಮಧ್ವಃ । ಅಶ್ವಿನೌ । ಉಪಾಕೇ । ಆ । ವಾಂ । ವೋಚೇ । ವಿದಥೇಷು । ಪ್ರಯಸ್ವಾನ್ ॥೨॥

ಸಾಯಣಭಾಷ್ಯಂ

ಪ್ರಿಯೋ ಯುವಯೋಃ ಪ್ರಿಯಭೂತೋ ಮನುಷೋ ಮಾನುಷೋ ಮನುಷಃ ಸಕಾಶಾಜ್ಜಾತೋ ವಾ ಹೋತಾ ದೇವಾನಾಮಾಹ್ವಾತಾ ಸ್ತೋತಾಯಂ ನಿಷಾದಿ । ನ್ಯಸಾದಿ । ನಿಷಣ್ಣೋ ಭವತಿ । ಯುವಯೋಃ ಕರ್ಮಣಿ ವರ್ತತ ಇತ್ಯರ್ಥಃ । ಹೇ ನಾಸತ್ಯಾಶ್ವಿನೌ ಯೋ ಯಜತೇ ಯಾಗಂ ಕರೋತಿ ವಂದತೇ ಸ್ತೌತಿ ಚ ತಸ್ಯ ಸಂಬಂಧಿನಂ ಮಧ್ವೋ ಮಧುರಂ ಸೋಮರಸಂ ಹೇ ಅಶ್ವಿನಾಶ್ವಿನೌ ಉಪಾಕೇಽಂತಿಕ ಏವ ಸಮೀಪೇ ಸ್ಥಿತ್ವೈತಾಶ್ನೀತಂ । ಪಿಬತಮಿತ್ಯರ್ಥಃ । ವಿದಥೇಷು ಯಜ್ಞೇಷು ವಾಂ ಯುವಾಂ ಪ್ರಯಸ್ವಾನನ್ನವಾನ್ಸನ್ನಾ ವೋಚೇ । ಆಹ್ವಯೇ ॥

ಪ್ರತಿಪದಾರ್ಥ

**ನಾಸತ್ಯಾ**— ನಾಸತ್ಯಸಂಜ್ಞಕರಾದ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ಪ್ರಿಯಃ**—ನಿಮ್ಮ ಪ್ರೀತಿಗೆ ಪಾತ್ರನಾದವನೂ | **ಮನುಷಃ**—ಮಾನವರೂಪನೂ ಆದ | **ಹೋತಾ**—ಹೋತೃವು | **ನಿ ಷಾದಿ**— ನಿಮ್ಮ ಪೂಜಾಸಕ್ತನಾಗಿ ಕುಳಿತಿದ್ದಾನೆ | **ಯಃ**—ಯಾರು | **ಯಜತೇ**—ಯಜ್ಞವನ್ನಾಚರಿಸುವನೋ | **ವಂದತೇ ಚ**— ನಿಮ್ಮನ್ನು ಸ್ತುತಿಸುವನೋ ಅವನ | **ಮಧ್ವಃ**—ಮಧುರವಾದ ಸೋಮರಸವನ್ನು | **ಉಪಾಕೇ**—ಅವನ ಸಮೀಪದಲ್ಲಿದ್ದು | **ಅಶ್ನೀತಂ**—ಪಾನ ಮಾಡಿರಿ | **ವಿದಥೇಷು**—ಯಜ್ಞಗಳಲ್ಲಿ | **ಪ್ರಯಸ್ವಾನ್**—ಹವಿಸ್ಸನ್ನು ಹೊಂದಿರುವ ನಾನು | **ವಾಂ**—ನಿಮ್ಮನ್ನು | **ಆ ವೋಚೇ**—ಪ್ರಶಂಸಿಸುತ್ತೇನೆ

ಭಾವಾರ್ಥ

ನಾಸತ್ಯಸಂಜ್ಞಕರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮ ಪ್ರೀತಿಗೆ ಪಾತ್ರನೂ, ಮಾನವರೂಪನೂ ಆದ ಹೋತೃವು ನಿಮ್ಮ ಪೂಜಾಸಕ್ತನಾಗಿ ಕುಳಿತಿದ್ದಾನೆ ಯಾವ ಪುರುಷನು ನಿಮ್ಮನ್ನುದ್ದೇಶಿಸಿ ಯಜ್ಞವನ್ನಾಚರಿಸುತ್ತ ನಿಮ್ಮನ್ನು ಸ್ತುತಿಸುವನೋ ಅವನ ಸಮೀಪದಲ್ಲಿದ್ದು ಅವನಿಂದ ಅರ್ಪಿತವಾದ ಸೋಮರಸವನ್ನು ಪಾನ ಮಾಡಿರಿ ಹವಿರ್ಯುಕ್ತನಾದ ನಾನು ಯಜ್ಞಗಳಲ್ಲಿ ನಿಮ್ಮನ್ನು ಪ್ರಶಂಸಿಸುತ್ತೇನೆ

English Translation

The man who is dear to you, Nasatyas, the invoker of the gods, has taken his seat, he who offers worship and repeats praise be nigh, Aswins, and partake of the libation supplied with food, I address you at sacrifices.

ಸಂಹಿತಾಪಾಠಃ

ಅಹೇಮ ಯಜ್ಞಂ ಪಥಾಮುರಾಣಾ ಇಮಾಂ ಸುವೃಕ್ತಿಂ ವೃಷಣಾ ಜುಷೇಥಾಂ |
ಶ್ರುಷ್ಟೀವೇವ ಪ್ರೇಷಿತೋ ವಾಮಬೋಧಿ ಪ್ರತಿ ಸ್ತೋಮೈರ್ಜರಮಾಣೋ ವಸಿಷ್ಠಃ || ೩ ||

ಪದಪಾಠಃ

ಅಹೇಮ | ಯಜ್ಞಂ | ಪಥಾಂ | ಉರಾಣಾಃ | ಇಮಾಂ | ಸುऽವೃಕ್ತಿಂ | ವೃಷಣಾ | ಜುಷೇಥಾಂ |
ಶ್ರುಷ್ಟೀವಾऽಇವ | ಪ್ರऽಇಷಿತಃ | ವಾಂ | ಅಬೋಧಿ | ಪ್ರತಿ | ಸ್ತೋಮೈಃ | ಜರಮಾಣಃ | ವಸಿಷ್ಠಃ ||೩||

ಸಾಯಣಭಾಷ್ಯಂ

**ಉರಾಣಾ ಉರು ಸ್ತೋತ್ರಂ ಕುರ್ವಾಣಾಃ ಸ್ತೋತಾರೋ ವಯಂ ಪಥಾಂ ಪತತಾಮಾಗಚ್ಛತಾಂ ದೇವಾನಾಮರ್ಥಾಯ ಯಜ್ಞಂ ಯಾಗಂ ತತ್ಸಾಧನಂ ಹವಿರ್ವಾಹೇಮ | ವರ್ಧಯೇಮ | ಹೇ ವೃಷಣಾ ವರ್ಷಕೌ ಕಾಮಾನಾಂ ಇಮಾಂ ಸುವೃಕ್ತಿಂ ಶೋಭನಸ್ತುತಿಂ ಜುಷೇಥಾಂ | ಸೇವೇಥಾಂ | ವಾಂ**

ಯುವಾಂ ಶ್ರುಷ್ಟೀವೇವ । ಶ್ರುಷ್ಟೀತಿ ಕ್ಷಿಪ್ರನಾಮ । ಕ್ಷಿಪ್ರಗಂತಾ ದೂತ ಇವ ಪ್ರೇಷಿತೋಽಹಮಬೋಧಿ। ಬೋಧಯತಿ ಶೀಘ್ರಂ ಗಂತವ್ಯಮಿತಿ । ಕಿಂ ಕುರ್ವನ್ ಸ್ತೋಮೈಃ ಸ್ತೋತ್ರೈಃ ಪ್ರತಿ ಜರಮಾಣಃ ಪ್ರತಿಸ್ತುವನ್ । ಕಃ । ವಸಿಷ್ಠೋಽಹಮಬೋಧೀತಿ ॥

ಪ್ರತಿಪದಾರ್ಥ

**ಉರಾಣಾಃ**—ಅಧಿಕವಾಗಿ ಸ್ತುತಿಯನ್ನು ಪಠಿಸುವ ನಾವು । **ಪಥಾಂ**—ಮಾರ್ಗದಲ್ಲಿ ಬರತಕ್ಕ ದೇವತೆಗಳಿಗಾಗಿ । **ಯಜ್ಞಂ**—ಹವಿಸ್ಸನ್ನು । **ಅಹೇಮ**—ವೃದ್ಧಿಪಡಿಸುತ್ತೇವೆ । **ವೃಷಣಾ**—ಇಷ್ಟಾರ್ಥಪ್ರದರಾದ ಎಲೈ ಅಶ್ವಿನೀದೇವತೆಗಳೇ । **ಇಮಾಂ ಸುವೃಕ್ತಿಂ**—ನನ್ನ ಈ ಉತ್ತಮವಾದ ಸ್ತುತಿಯನ್ನು । **ಜುಷೇಥಾಂ**—ಸೇವಿಸಿರಿ । **ಶ್ರುಷ್ಟೀವೇವ**—ದೂತನಂತೆ । **ಪ್ರೇಷಿತಃ**—ಕಳುಹಲ್ಪಟ್ಟ । **ವಸಿಷ್ಠಃ**—ವಸಿಷ್ಠ ಸಂಜ್ಞಕನಾದ ನಾನು । **ಸ್ತೋಮೈಃ**—ಸ್ತೋತ್ರಗಳಿಂದ । **ಪ್ರತಿ ಜರಮಾಣಃ**—ಪ್ರಶಂಸಿಸುತ್ತ । **ವಾಂ**—ನಿಮ್ಮನ್ನು । **ಅಬೋಧಿ**—ಅರಿಯುತ್ತೇನೆ

ಭಾವಾರ್ಥ

ಅಧಿಕವಾಗಿ ಸ್ತುತಿಯನ್ನು ನಿರ್ಮಿಸಿ ಪಠಿಸುವ ನಾವು ಮಾರ್ಗದಲ್ಲಿ ಬರತಕ್ಕ ದೇವತೆಗಳಿಗಾಗಿ ಹವಿಸ್ಸನ್ನು ವೃದ್ಧಿಪಡಿಸುತ್ತೇವೆ ಇಷ್ಟಾರ್ಥಪ್ರದರಾದ ಎಲೈ ಅಶ್ವಿನೀದೇವತೆಗಳೇ, ನನ್ನ ಈ ಉತ್ತಮವಾದ ಸ್ತುತಿಯನ್ನು ಸೇವಿಸಿರಿ. ನಿಮ್ಮ ಸೇವೆಗಾಗಿ ನಿಯಮಿತನಾದ ವಸಿಷ್ಠಸಂಜ್ಞಕನಾದ ನಾನು ದೂತನಂತೆ ನಿಮ್ಮನ್ನು ಪ್ರಶಂಸಿಸುತ್ತ ನಿಮ್ಮನ್ನು ಅರಿಯುತ್ತೇನೆ.

## English Translation

Praising (the gods), we prepare the sacrifice for their coming : showerers (of benefits), be propitiated by this pious laudation despatched like a swift messenger, Vasishtha arouses you, glorifying you with hymns.

ಸಂಹಿತಾಪಾಠಃ

ಉಪ ತ್ಯಾ ವಹ್ನೀ ಗಮತೋ ವಿಶಂ ನೋ ರಕ್ಷೋಹಣಾ ಸಂಭೃತಾ ವೀಳುಪಾಣೀ ।
ಸಮಂಧಾಂಸ್ಯಗ್ಮತ ಮತ್ಸರಾಣಿ ಮಾ ನೋ ಮರ್ಧಿಷ್ಟಮಾ ಗತಂ ಶಿವೇನ ॥

ಪದಪಾಠಃ

ಉಪ । ತ್ಯಾ । ವಹ್ನೀ ಇತಿ । ಗಮತಃ । ವಿಶಂ । ನಃ । ರಕ್ಷಃಽಹನಾ । ಸಂಽಭೃತಾ । ವೀಳುಪಾಣೀ ಇತಿ ವೀಳುಽಪಾಣೀ ॥

ಸಂ । ಅಂಧಾಂಸಿ । ಅಗ್ಮತ । ಮತ್ಸರಾಣಿ । ಮಾ । ನಃ । ಮರ್ಧಿಷ್ಟಂ । ಆ । ಗತಂ । ಶಿವೇನ ॥ ೪ ॥

### ಸಾಯಣಭಾಷ್ಯಂ

ತ್ಯಾ ತ್ಯೌ ತೌ ವಹ್ನೀ ಹವಿಷಾಂ ವೋಢಾರೌ ನೋಽಸ್ಮಾಕಂ ವಿಶಂ ಪ್ರಜಾಮೃತ್ವಿಜಮುಪ ಗಮತಃ । ಉಪಗಚ್ಛತಾಂ । ಕೀದೃಶೌ ತೌ । ರಕ್ಷೋಹಣಾ ರಕ್ಷಸಾಂ ಹಂತಾರೌ ಸಂಭೃತಾ ಸಮ್ಯಗ್ಭೃತೌ ಪುಷ್ಟಾಂಗೌ ವೀಳುಪಾಣೀ ದೃಢಪಾಣೀ । ಯದ್ವಾ ಅಯಮರ್ಧರ್ಚೋಽಶ್ವಪರತಯಾ ವ್ಯಾಖ್ಯೇಯಃ । ತಥಾ ಸತಿ ತೌ ರಥಸ್ಯ ವೋಢಾರೌ ದೃಢಪಾದಾವಶ್ವಿನೋರಶ್ವಾವುಪಗಚ್ಛತಾಮಿತಿ ತಸ್ಯಾರ್ಥಃ । ಅಂಧಾಂಸ್ಯನ್ನಾನಿ ಮತ್ಸರಾಣಿ ಮದಕರಾಣಿ ಸೋಮಾಃ ಸಮಗ್ಮತ । ಸಮಗಚ್ಛಂತ ಯುವಾಂ । ನೋಽಸ್ಮಾನ್ ಮಾ ಮರ್ಧಿಷ್ಟಂ । ಮಾ ಹಿಂಸ್ತಂ । ಕಿಂತು ಶಿವೇನ ಮಂಗಲೇನ ಧನೇನ ಸಾರ್ಧಮಾ ಗತಂ। ಆಗಚ್ಛತಂ ॥

### ಪ್ರತಿಪದಾರ್ಥ

**ರಕ್ಷೋಹಣಾ**—ರಾಕ್ಷಸರನ್ನು ನಾಶಮಾಡತಕ್ಕವರೂ । **ಸಂಭೃತಾ**—ಪುಷ್ಟವಾದವರೂ । **ವೀಳುಪಾಣೀ**—ದೃಢವಾದ ಪಾಣಿಗಳುಳ್ಳವರೂ । **ತ್ಯಾ**—ಪ್ರಸಿದ್ಧರೂ । **ವಹ್ನೀ**—ಹವಿಸ್ಸನ್ನು ವಹಿಸುವವರೂ ಆದ ಎಲ್ಲೈ ಅಶ್ವಿನೀದೇವತೆಗಳೇ । **ನಃ**—ನಮ್ಮ । **ವಿಶಂ**—ಪ್ರಜಾಸಮೂಹಕ್ಕ । **ಉಪ ಗಮತಃ**—ಬಂದು ಸೇರಿರಿ । **ಮತ್ಸರಾಣಿ**—ಹರ್ಷಕಾರಕವಾದ । **ಅಂಧಾಂಸಿ**—ಸೋಮರೂಪವಾದ ಅನ್ನಗಳನ್ನು । **ಸಮಗ್ಮತ**—ಹೊಂದಿರಿ । **ನಃ**—ನಮ್ಮನ್ನು । **ಮಾ ಮರ್ಧಿಷ್ಟಂ**—ಹಿಂಸಿಸಬೇಡಿರಿ । **ಶಿವೇನ**—ಮಂಗಳಕರವಾದ ಧನದೊಂದಿಗೆ । **ಆ ಗತಂ**—ಬನ್ನಿರಿ.

### ಭಾವಾರ್ಥ

ರಾಕ್ಷಸರನ್ನು ನಾಶಮಾಡತಕ್ಕವರೂ, ಪುಷ್ಟರೂ, ದೃಢವಾದ ಪಾಣಿಗಳುಳ್ಳವರೂ, ಪ್ರಸಿದ್ಧರೂ, ಹವಿಸ್ಸನ್ನು ವಹಿಸುವವರೂ ಆದ ಎಲ್ಲೈ ಅಶ್ವಿನೀದೇವತೆಗಳೇ ನಮ್ಮಲ್ಲಿಗೆ ಬಂದು ಸೇರಿರಿ. ಹರ್ಷಕಾರಕವಾದ ಸೋಮರೂಪದ ಅನ್ನಗಳನ್ನು ಹೊಂದಿರಿ (ಭಕ್ಷಿಸಿರಿ) ನಮ್ಮನ್ನು ಹಿಂಸಿಸಬೇಡಿರಿ ಮಂಗಳಕರವಾದ ಧನದೊಂದಿಗೆ ಬನ್ನಿರಿ.

### English Translation

May those two, the bearers (of oblations), approach our people, destroyers of Rakshasas, wel-nourished, strong-handad accept our exhilarating (sacrificial) viands : injure us not, but come with good fortune

### ಸಂಹಿತಾಪಾಠಃ

ಆ ಪಶ್ಚಾತಾನ್ನಾಸತ್ಯಾ ಪುರಸ್ತಾದಾಶ್ವಿನಾ ಯಾತಮಧರಾದುದಕ್ತಾತ್ ।
ಆ ವಿಶ್ವತಃ ಪಾಂಚಜನ್ಯೇನ ರಾಯಾ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ॥

### ಪದಪಾಠಃ

ಆ । ಪಶ್ಚಾತಾತ್ । ನಾಸತ್ಯಾ । ಆ । ಪುರಸ್ತಾತ್ । ಆ । ಅಶ್ವಿನಾ । ಯಾತಂ । ಅಧರಾತ್ । ಉದಕ್ತಾತ್ ।

ಆ । ವಿಶ್ವತಃ । ಪಾಂಚಽಜನ್ಯೇನ । ರಾಯಾ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೫ ॥

ಸಾಯಣಭಾಷ್ಯಂ

**ಆ ಪಶ್ಚಾತಾದಿತಿ ಪಂಚಮ್ಯಾಶ್ವಿನೇ ಪಶೌ ವಪಾಯಾ ಅನುವಾಕ್ಯಾ । ಸೂತ್ರಿತಂ ಚ । ಆ ಪಶ್ಚಾತಾನ್ನಾಸತ್ಯಾ ಪುರಸ್ತಾದಾ ಗೋಮತಾ ನಾಸತ್ಯಾ ರಥೇನ । ಆ-೩-೮ । ಇತಿ ॥**

**ಹೇ ನಾಸತ್ಯಾಶ್ವಿನೌ ಪಶ್ಚಾತಾತ್ಪಶ್ಚಾದ್ದೇಶಾದಾ ಯಾತಂ। ತಥಾ ಪುರಸ್ತಾತ್ಪೂರ್ವಸ್ಮಾದ್ದೇಶಾತ್ ತಥಾಧರಾದಧಸ್ತನಾದ್ದೇಶಾದ್ದಕ್ಷಿಣತ ಉದಕ್ತಾದುದಗ್ದೇಶಾತ್ । ಸರ್ವತ್ರಾ ಯಾತಮಿತಿ ಸಂಬಂಧಃ । ಕಿಂ ಬಹುನಾ ವಿಶ್ವತಃ ಸರ್ವಸ್ಮಾದ್ದೇಶಾತ್ಪಾಂಚಜನ್ಯೇನ ಪಂಚಜನಹಿತೇನ ರಾಯಾ ಧನೇನ ಸಹಾ ಯಾತಂ । ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಪಂಚಜನಾಃ ॥**

ಪ್ರತಿಪದಾರ್ಥ

**ನಾಸತ್ಯಾ**—ನಾಸತ್ಯಸಂಜ್ಞಕರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಪಶ್ಚಾತಾತ್**—ಪಶ್ಚಿಮಪ್ರದೇಶದಿಂದ । **ಆ ಯಾತಂ**—ಬನ್ನಿರಿ । **ಪುರಸ್ತಾತ್**—ಪೂರ್ವಭಾಗದಿಂದಲೂ । **ಆ**—ಬನ್ನಿರಿ । **ಅಧರಾತ್**—ದಕ್ಷಿಣ ದಿಕ್ಕಿನಿಂದಲೂ । **ಉದಕ್ತಾತ್**—ಉತ್ತರ ದಿಕ್ಕಿನಿಂದಲೂ । **ಆ (ಯಾತಂ)**—ಬನ್ನಿರಿ । **ವಿಶ್ವತಃ**—ಸಕಲ ದಿಕ್ಕುಗಳಿಂದಲೂ । **ಪಾಂಚಜನ್ಯೇನ**—ಐದು ವಿಧವಾದ ಜನರಿಗೂ ಹಿತವನ್ನುಂಟುಮಾಡತಕ್ಕ । **ರಾಯಾ**—ಧನದೊಂದಿಗೆ । **ಆ (ಯಾತಂ)**—ಬನ್ನಿರಿ । **ಯೂಯಂ**—ನೀವು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ನಃ**—ನಮ್ಮನ್ನು । **ಪಾತ**—ರಕ್ಷಿಸಿರಿ.

ಭಾವಾರ್ಥ

ನಾಸತ್ಯಸಂಜ್ಞಕರಾದ ಎಲೈ ಅಶ್ವಿನೀದೇವತೆಗಳೇ, ನೀವು ಪಶ್ಚಿಮಪ್ರದೇಶದಿಂದಲೂ, ಪೂರ್ವಪ್ರದೇಶದಿಂದಲೂ, ದಕ್ಷಿಣಭಾಗದಿಂದಲೂ, ಉತ್ತರದಿಕ್ಕಿನಿಂದಲೂ ನಮ್ಮಲ್ಲಿಗೆ ಬನ್ನಿರಿ. ಐದು ವಿಧವಾದ ಜನರಿಗೂ ಹಿತವನ್ನುಂಟುಮಾಡುವ ಧನದೊಂದಿಗೆ ಕೂಡಿ ಎಲ್ಲಾ ಕಡೆಗಳಿಂದಲೂ ಬನ್ನಿರಿ. ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Come, Nasatyas, from the west, from the east: (come), Ashwins, from the south, from the north, come from every quarter with riches beneficial for the five classes of men : and do you ever cherish us with blessings.

ವಿಶೇಷವಿಷಯಗಳು

**ಆ ಪಶ್ಚಾತಾತ್** ಎಂಬ ಈ ಋಕ್ಕನ್ನು ಅಶ್ವಿನೀದೇವತೆಗಳನ್ನುದ್ದೇಶಿಸಿ ಮಾಡುವ ಪಶುಯಾಗದ ವಪಾಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಆ ಪಶ್ಚಾತಾನ್ನಾಸತ್ಯಾ ಪುರಸ್ತಾದಾ ಗೋಮತಾ ನಾಸತ್ಯಾ ರಥೇನ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

———

# ಎಪ್ಪತ್ತನಾಲ್ಕನೆಯ ಸೂಕ್ತವು

ಸಾಯಣಭಾಷ್ಯಂ

ಇಮಾ ಉ ವಾಮಿತಿ ಷಳೃಚಂ ಚತುರ್ಥಂ ಸೂಕ್ತಮಾಶ್ವಿನಂ ವಸಿಷ್ಠಸ್ಯಾರ್ಷಂ | ಆದ್ಯಾತೃತೀಯಾಪಂಚಮ್ಯೋ ಬೃಹತ್ಯಃ ಶಿಷ್ಟಾಃ ಸತೋಬೃಹತ್ಯಃ | ತಥಾ ಚಾನುಕ್ರಾಂತಂ | ಇಮಾ ಉ ವಾಂ ಷಟ್ ಪ್ರಗಾಥಮಿತಿ || ಪ್ರಾತರನುವಾಕ ಆಶ್ವಿನೇ ಕ್ರತೌ ಬಾರ್ಹತೇ ಛಂದಸ್ಯಾಶ್ವಿನಶಸ್ತ್ರೇ ಚ ಸೂಕ್ತಂ | ಸೂತ್ರಿತಂ ಚ | ಇಮಾ ಉ ವಾಮಯಂ ವಾಂ | ಆ-೪-೧೫ | ಇತಿ || ದಶರಾತ್ರೇ ಪಂಚಮೇಽಹನಿ ಪ್ರಉಗಶಸ್ತ್ರ ಇಮಾ ಉ ವಾಮಿತ್ಯಯಮಾಶ್ವಿನಸ್ತೃಚಃ | ಸೂತ್ರಿತಂ ಚ | ಇಮಾ ಉ ವಾಂ ದಿವಿಷ್ಟಯಃ ಪಿಬಾ ಸುತಸ್ಯ ರಸಿನಃ | ಆ ೭.೧೨ | ಇತಿ ||

**ಅನುವಾದವು—ಇಮಾ ಉ ವಾಂ—**ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಅಶ್ವಿನೀದೇವತೆಗಳು ದೇವತೆಯು, ಈ ಸೂಕ್ತದ ಒಂದು, ಮೂರು, ಐದನೆಯ ಋಕ್ಕುಗಳು ಬೃಹತೀಛಂದಸ್ಕವು ಉಳಿದ ಋಕ್ಕುಗಳು ಸತೋಬೃಹತೀ ಛಂದಸ್ಕವು ಅನುಕ್ರಮಣಿಕೆಯಲ್ಲಿ **ಇಮಾ ಉ ವಾಂ ಷಟ್ ಪ್ರಾಗಾಥಂ** ಎಂದು ಹೇಳಿರುವುದು. ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ಬೃಹತೀಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಇಮಾ ಉ ವಾಮಯಂ ವಾಂ** ಎಂಬ ಸೂತ್ರದಿಂದ (ಆ ೪-೧೫) ವಿವೃತವಾಗಿರುವುದು ದಶರಾತ್ರವೆಂಬ ಯಾಗದ ಐದನೆಯ ದಿವಸ ಪ್ರ ಉಗಶಸ್ತ್ರ ಮಂತ್ರಪಠನ ಮಾಡುವಾಗ **ಇಮಾ ಉ ವಾಂ** ಎಂದು ಓದಲಾಗುವ ಮೂರು ಋಕ್ಕುಗಳನ್ನು ಆಶ್ವಿನತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಇಮಾ ಉ ವಾಂ ದಿವಿಷ್ಟಯಃ ಪಿಬಾ ಸುತಸ್ಯ ರಸಿನಃ** ಎಂಬ ಸೂತ್ರದಿಂದ (ಆ, ೭-೧೨) ವಿವೃತವಾಗಿರುವುದು.

## ಸೂಕ್ತ—೭೪

ಮಂಡಲ—೭ || ಅನುವಾಕ—೫ || ಸೂಕ್ತ—೭೪ ||
ಅಷ್ಟಕ—೫ || ಅಧ್ಯಾಯ—೫ || ವರ್ಗ—೨೧ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ||
ಋಷಿಃ—ವಸಿಷ್ಠಃ ||
ದೇವತಾ—ಅಶ್ವಿನೌ ||
ಛಂದಃ—೧, ೩, ೫, ಬೃಹತೀ | ೨, ೪, ೬, ಸತೋಬೃಹತೀ ||

ಸಂಹಿತಾಪಾಠಃ

ಇಮಾ ಉ ವಾಂ ದಿವಿಷ್ಟಯ ಉಸ್ರಾ ಹವಂತೇ ಅಶ್ವಿನಾ |
ಅಯಂ ವಾಮಹ್ವೇಽವಸೇ ಶಚೀವಸೂ ವಿಶಂವಿಶಂ ಹಿ ಗಚ್ಛಥಃ || ೧ ||

ಪದಪಾಠಃ

ಇಮಾಃ । ಊಂ ಇತಿ । ವಾಂ । ದಿವಿಷ್ಟಯಃ । ಉಸ್ರಾ । ಹವಂತೇ । ಅಶ್ವಿನಾ ॥

ಅಯಂ । ವಾಂ । ಅಹ್ವೇ । ಅವಸೇ । ಶಚೀವಸೂ ಇತಿ ಶಚೀऽವಸೂ । ವಿಶಂऽವಿಶಂ । ಹಿ । ಗಚ್ಛಥಃ ।

ಸಾಯಣಭಾಷ್ಯಂ

ಇಮಾ ದಿವಿಷ್ಟಯೋ ದಿವಮಿಚ್ಛಂತ್ಯಃ ಪ್ರಜಾ ಋತ್ವಿಜೋऽಪಿ । ಉ ಇತಿ ಚಾರ್ಥೇ । ಹೇ ಅಶ್ವಿನಾ ಉಸ್ರಾ ವಾಸಕೌ ವಾಂ ಹವಂತೇ । ಆಹ್ವಯಂತಿ । ಅಯಂ ವಸಿಷ್ಠೋऽಪಿ ಹೇ ಶಚೀವಸೂ ಕರ್ಮಧನೌ ವಾಂ ಯುವಾಮವಸೇऽಸ್ಮದ್ರಕ್ಷಣಾಯ ಯುವಯೋಸ್ತರ್ಪಣಾಯ ವಾಹ್ವೇ। ಆಹ್ವಯಾಮಿ। ಕಿಮರ್ಥಮೇವಂ ಪ್ರಜಾ ಅಸ್ಯಾಹ್ವಯಂತೀತ್ಯಾದರೋಕ್ತಿರಿತಿ ತತ್ರಾಹ । ಹಿ ಯಸ್ಮಾತ್ಕಾರಣಾದ್ಯುವಾಂ ವಿಶಂ ವಿಶಂ ಪ್ರಜಾಂ ಪ್ರಜಾಂ ಪ್ರತಿ ಗಚ್ಛಥಃ ॥

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ದಿವಿಷ್ಟಯಃ**—ದೇವಲೋಕವನ್ನಿಚ್ಛಿಸುವ । **ಇಮಾಃ**– ಈ ಪ್ರಜೆಗಳು । **ಉಸ್ರಾ**—ತೇಜೋಯುತರಾದ । **ವಾಂ**—ನಿಮ್ಮನ್ನು । **ಹವಂತೇ**—ಕರೆಯುತ್ತಾರೆ । **ಹಿ**—ಯಾವ ನಿಮ್ಮ ಔದಾರ್ಯದಿಂದ । **ವಿಶಂ ವಿಶಂ**—ಪ್ರತಿಯೊಬ್ಬನಲ್ಲಿಗೂ । **ಗಚ್ಛಥಃ**—ನೀವು ಹೋಗುವಿರೋ ಆದ್ದರಿಂದ । **ಶಚೀವಸೂ**—ಕರ್ಮರೂಪವಾದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ । **ಅಯಂ**—ಈ ವಸಿಷ್ಠಸಂಜ್ಞಕನಾದ ನಾನೂ ಸಹ । **ಅಹ್ವೇ**—ನಿಮ್ಮನ್ನು ಕರೆಯುತ್ತೇನೆ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ದೇವಲೋಕವನ್ನಿಚ್ಛಿಸುವ ಈ ಪ್ರಜೆಗಳು ತೇಜೋಯುತರಾದ ನಿಮ್ಮನ್ನು ಕರೆಯುತ್ತಾರೆ. ನೀವು ನಿಮ್ಮ ಔದಾರ್ಯದಿಂದ ಪ್ರತಿಯೊಬ್ಬನಲ್ಲಿಗೂ ಹೋಗುತ್ತೀರಿ ಆದುದರಿಂದಲೇ ಕರ್ಮರೂಪವಾದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ, ಈ ವಸಿಷ್ಠಸಂಜ್ಞಕನಾದ ನಾನೂ ಸಹ ನಿಮ್ಮನ್ನು ಕರೆಯುತ್ತೇನೆ

English Translation

Thease pious praises glorify you, radiant Aswins I call upon you, who are rich, in acts for preservation, for you repair to every individual.

ಸಂಹಿತಾಪಾಠಃ

ಯುವಂ ಚಿತ್ರಂ ದದಥುರ್ಭೋಜನಂ ನರಾ ಚೋದೇಥಾಂ ಸೂನೃತಾವತೇ ।

ಅರ್ವಾಗ್ರಥಂ ಸಮನಸಾ ನಿ ಯಚ್ಛತಂ ಪಿಬತಂ ಸೋಮ್ಯಂ ಮಧು ॥ ೨ ॥

ಪದಪಾಠಃ

ಯುವಂ । ಚಿತ್ರಂ । ದದಥುಃ । ಭೋಜನಂ । ನರಾ । ಚೋದೇಥಾಂ । ಸೂನೃತಾವತೇ ।

ಅರ್ವಾಕ್ । ರಥಂ । ಸಽಮನಸಾ । ನಿ । ಯಚ್ಛತಂ । ಪಿಬತಂ । ಸೋಮ್ಯಂ । ಮಧು ॥ ೨ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಯುವಂ ಯುವಾಂ ಚಿತ್ರಂ ಚಾಯನೀಯಂ ಭೋಜನಂ ಧನಂ ದದಥುಃ । ಧಾರಯೇಥೇ । ತದ್ಧನಂ ಸೂನೃತಾವತೇ ಸ್ತುತಿವತೇ ಸ್ತೋತ್ರೇ ಚೋದೇಥಾಂ । ಪ್ರೇರಯತಂ । ತದರ್ಥಂ ಸಮನಸಾ ಸಮಾನಮನಸ್ಕೌ ಸಂತೌ ರಥಂ ಯುವಯೋಃ ಸಂಬಂಧಿನಮರ್ವಾಗಸ್ಮದಭಿಮುಖಂ ನಿ ಯಚ್ಛತಂ । ನಿಯಮತಂ । ತಥಾ ಕೃತ್ವಾ ಸೋಮ್ಯಂ ಸೋಮಸಂಬಂಧಿನಂ ಮಧು ಮಧುರರಸಂ ಪಿಬತಂ ॥

ಪ್ರತಿಪದಾರ್ಥ

**ನರಾ**—ನೇತೃಗಳಾದ ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವು । **ಚಿತ್ರಂ**—ಆಕರ್ಷಕವೂ । **ಭೋಜನಂ**—ಭೋಗಕ್ಕೆ ಯೋಗ್ಯವೂ ಆದ ಧನವನ್ನು । **ದದಥುಃ**—ಹೊಂದಿದ್ದೀರಿ । **ಸೂನೃತಾವತೇ**—ಉತ್ತಮವಾದ ಸ್ತುತಿಪಾಠಕನಿಗೆ । **ಚೋದೇತಾಂ**—ಆ ಧನವನ್ನು ಕೊಡಿರಿ । **ಸಮನಸಾ**—ಒಂದೇ ಮನಸ್ಸುಳ್ಳವರಾಗಿ । **ರಥಂ**—ನಿಮ್ಮ ರಥವನ್ನು । **ಅರ್ವಾಕ್**—ನಮಗಭಿಮುಖವಾಗಿ । **ನಿ ಯಚ್ಛತಂ**—ಹೂಡಿಯಿರಿ । **ಮಧು**—ಮಧುರವಾದ । **ಸೋಮ್ಯಂ**—ಸೋಮರಸವನ್ನು । **ಪಿಬತಂ**—ಪಾನಮಾಡಿರಿ

ಭಾವಾರ್ಥ

ಮಾರ್ಗದರ್ಶಕರಾದ ಎಲೈ ಅಶ್ವಿನೀದೇವತೆಗಳೇ, ನೀವು ಆಕರ್ಷಕವೂ, ಭೋಗಕ್ಕೆ ಯೋಗ್ಯವೂ ಆದ ಧನವನ್ನು ಹೊಂದಿದ್ದೀರಿ ಉತ್ತಮವಾದ ಸ್ತುತಿಪಾಠಕನಿಗೆ ಆ ಧನವನ್ನು ಕೊಡಿರಿ ಒಂದೇ ಮನಸ್ಸುಳ್ಳವರಾಗಿ ನಿಮ್ಮ ರಥವನ್ನು ನಮಗಭಿಮುಖವಾಗಿ ಹೂಡಿಯಿರಿ ಮಧುರವಾದ ಸೋಮರಸವನ್ನು ಪಾನಮಾಡಿರಿ

## English Translation

You are possessed, leaders (of rites), of marvellous wealth, bestow it upon him who sincerely praises you alike favourably minded, direct your chariot to our presence drink the sweet Soma beverage.

ಸಂಹಿತಾಪಾಠಃ

ಆ ಯಾತಮುಪ ಭೂಷತಂ ಮಧ್ವಃ ಪಿಬತಮಶ್ವಿನಾ ।

ದುಗ್ಧಂ ಪಯೋ ವೃಷಣಾ ಜೇನ್ಯಾವಸೂ ಮಾ ನೋ ಮರ್ಧಿಷ್ಟಮಾ ಗತಂ ॥

ಪದಪಾಠಃ

ಆ । ಯಾತಂ । ಉಪ । ಭೂಷತಂ । ಮಧ್ವಃ । ಪಿಬತಂ । ಅಶ್ವಿನಾ ।

ದುಗ್ಧಂ । ಪಯಃ । ವೃಷಣಾ । ಜೇನ್ಯಾವಸೂ ಇತಿ । ಮಾ । ನಃ । ಮರ್ಧಿಷ್ಟಂ । ಆ । ಗತಂ ॥ ೩ ॥

ಸಾಯಣಭಾಷ್ಯಂ

ಹೇ ಅಶ್ವಿನಾ ಯುವಾಮಾ ಯಾತಂ । ಆಗಚ್ಛತಂ । ಆಗತ್ಯ ಚೋಪ ಸಮೀಪೇ ಭೂಷತಂ । ಭವತಂ । ಮಧ್ವೋ ಮಧುರಂ ಸೋಮರಸಂ ಪಿಬತಂ। ಪೀತ್ವಾ ಚ ಹೇ ವೃಷಣಾ ವರ್ಷಕೌ ಹೇ ಜೇನ್ಯಾವಸೂ ಜೇತವ್ಯಧನೌ । ಜಿತಧನಾವಿತ್ಯರ್ಥಃ । ಯುವಾಂ ಪಯೋ ವೃಷ್ಟ್ಯುದಕಮಂತರಿಕ್ಷಾ-ದ್ದುಗ್ಧಂ । ನೋಽಸ್ಮಾನ್ ಮಾ ಮರ್ಧಿಷ್ಟಂ । ಮಾ ಹಿಂಸ್ತಂ । ಈದೃಶಪ್ರಾರ್ಥನಾಕರಣಮೇವ ಹಿಂಸಾ । ಆ ಗತಂ । ಆಗಚ್ಛತಂ ಶೀಘ್ರಂ ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಆ ಯಾತಂ—ಬನ್ನಿರಿ । ಉಪ ಭೂಷತಂ—ನಮ್ಮ ಸಮೀಪದಲ್ಲಿರಿ । ಮಧ್ವಃ—ಮಧುರವಾದ ಸೋಮರಸವನ್ನು । ಪಿಬತಂ—ಪಾನಮಾಡಿರಿ । ವೃಷಣಾ--ಇಷ್ಟಾರ್ಥಪ್ರದರೂ । ಜೇನ್ಯಾವಸೂ—ಜಯಿಸಿದ ಧನವುಳ್ಳವರೂ ಆದ ನೀವು । ಪಯಃ—ವೃಷ್ಟಿಯನ್ನು । ದುಗ್ಧಂ—ಅಂತರಿಕ್ಷದಿಂದ ಕರೆಯಿರಿ । ನಃ—ನಮ್ಮನ್ನು । ಮಾ ಮರ್ಧಿಷ್ಟಂ—ಹಿಂಸಿಸಬೇಡಿರಿ । ಆ ಗತಂ—ದಯಮಾಡಿರಿ.

ಭಾವಾರ್ಥ

ಇಷ್ಟಾರ್ಥಪ್ರದರೂ, ಶತ್ರುಗಳಿಂದ ಜಯಿಸಿದ ಧನವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ನಮ್ಮಲ್ಲಿಗೆ ಬನ್ನಿರಿ. ಮಧುರವಾದ ಸೋಮವನ್ನು ಪಾನಮಾಡಿರಿ ಅಂತರಿಕ್ಷದಿಂದ ವೃಷ್ಟಿಯನ್ನು ಕರೆಯಿರಿ. ನಮ್ಮನ್ನು ಹಿಂಸಿಸದೇ ನಮ್ಮಲ್ಲಿಗೆ ಬನ್ನಿರಿ.

English Translation

Come, Aswins, tarry near us, drink of the sweet libation . showerers (of benefits), by whom riches are won, milk the rain (from the firmament): harm us not : come hither

ಸಂಹಿತಾಪಾಠಃ

ಅಶ್ವಾಸೋ ಯೇ ವಾಮುಪ ದಾಶುಷೋ ಗೃಹಂ ಯುವಾಂ ದೀಯಂತಿ ಬಿಭ್ರತಃ ।

ಮಕ್ಷೂಯುಭಿರ್ನರಾ ಹಯೇಭಿರಶ್ವಿನಾ ದೇವಾ ಯಾತಮಸ್ಮಯೂ ॥ ೪ ॥

ಪದಪಾಠಃ

**ಅಶ್ವಾಸಃ । ಯೇ । ವಾಂ । ಉಪ । ದಾಶುಷಃ । ಗೃಹಂ । ಯುವಾಂ । ದೀಯಂತಿ । ಬಿಭ್ರತಃ । ಮುಕ್ಷುಯುಽಭಿಃ । ನರಾ । ಹಯೇಭಿಃ । ಅಶ್ವಿನಾ । ಆ । ದೇವಾ । ಯಾತಂ । ಅಸ್ಮಯೂ ಇತ್ಯ- ಸ್ಮಽಯೂ ॥ ೪ ॥**

ಸಾಯಣಭಾಷ್ಯಂ

**ಯೇಽಶ್ವಾಸೋಽಶ್ವಾ ವಾಂ ಯುವಯೋಃ ಸ್ವಭೂತಾ ದಾಷುಷೋ ಹವಿರ್ದಾತುರ್ಗೃಹಂ ಯುವಾಂ ಬಿಭ್ರತೋ ಧಾರಯಂತೋ ದೀಯಂತಿ । ಗಮಯಂತೀತ್ಯರ್ಥಃ। ಮುಕ್ಷೂಯುಭಿಃ ಶೀಘ್ರಗಂತೃಭಿರ್ಹಯೇಭಿರ್ಹಯೈರಶ್ವೈರ್ಹೇ ನರಾ ನೇತಾರಾವಶ್ವಿನಾಶ್ವಿನೌ ದೇವಾ ದೇವೌ ಅಸ್ಮಯೂ ಅಸ್ಮಾನ್ಕಾಮಯಮಾನಾವಾ ಯಾತಂ । ಅಸ್ಮದ್ಯಜ್ಞಮಾಗಚ್ಛತಂ ॥**

ಪ್ರತಿಪದಾರ್ಥ

**ನರಾ**—ಕರ್ಮನೇತೃಗಳಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯೇ**—ಯಾವ ಅಶ್ವಗಳು । **ವಾಂ**—ನಿಮಗೆ ಸೇರಿವೆಯೋ ಆ ಅಶ್ವಗಳು । **ದಾಶುಷಃ**—ಹ ವಿಸ್ಸನ್ನು ಅರ್ಪಿಸುವ ಯಜಮಾನನ । **ಗೃಹಂ**—ಗೃಹಕ್ಕೆ **ಯುವಾಂ**—ನಿಮ್ಮನ್ನು । **ಬಿಭ್ರತಃ**—ಹೊರುತ್ತವೆ । **ದೀಯಂತಿ**—ಅಲ್ಲಿಗೆ ನಿಮ್ಮನ್ನು ಬರಮಾಡುತ್ತವೆ । **ಮುಕ್ಷೂಯುಭಿಃ**—ಶೀಘ್ರಗಾಮಿಗಳಾದ । **ಹಯೇಭಿಃ**- ಅಶ್ವಗಳೊಡನೆ । **ಅಸ್ಮಯೂ**—ನಮ್ಮಲ್ಲಿ ಪ್ರೀತಿಯುಳ್ಳವರಾಗಿ । **ಆ ಯಾತಂ**—ಬನ್ನಿರಿ

ಭಾವಾರ್ಥ

ಕರ್ಮಕ್ಕೆ ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಯಾವ ಅಶ್ವಗಳು ನಿಮಗೆ ಸೇರಿವೆಯೋ ಆ ಅಶ್ವಗಳು ಹವಿಸ್ಸನ್ನು ಅರ್ಪಿಸುವ ಯಜಮಾನನ ಗೃಹಕ್ಕೆ ನಿಮ್ಮನ್ನು ಹೊರುತ್ತವೆ ನಿಮ್ಮನ್ನು ಅಲ್ಲಿಗೆ ಬರಮಾಡುತ್ತವೆ ಶೀಘ್ರಗಾಮಿಗಳಾದ ಅಶ್ವಗಳೊಡನೆ ನಮ್ಮಲ್ಲಿ ಪ್ರೀತಿಯುಳ್ಳವರಾಗಿ ಬನ್ನಿರಿ.

English Translation

Yours are the horses that, conveying you, bring you to the dwelling of the donor (of the oblation) divine leader (of rites), favourably inclined towards us, come with your rapid steeds

ಸಂಹಿತಾಪಾಠಃ

**ಅಧಾ ಹ ಯಂತೋ ಅಶ್ವಿನಾ ಪೃಕ್ಷಃ ಸಚಂತ ಸೂರಯಃ ।**

**ತಾ ಯಂಸತೋ ಮಘವದ್ಭ್ಯೋ ಧ್ರುವಂ ಯಶಶ್ಛರ್ದಿರಸ್ಮಭ್ಯಂ ನಾಸತ್ಯಾ ॥**

ಪದಪಾಠಃ

ಅಧ । ಹ । ಯಂತಃ । ಅಶ್ವಿನಾ । ಪೃಕ್ಷಃ । ಸಚಂತ । ಸೂರಯಃ ॥

ತಾ । ಯಂಸತಃ । ಮಘವತ್ಽಭ್ಯಃ । ಧ್ರುವಂ । ಯಶಃ । ಛರ್ದಿಃ । ಅಸ್ಮಭ್ಯಂ । ನಾಸತ್ಯಾ ॥ ೫ ॥

ಸಾಯಣಭಾಷ್ಯಂ

ಅಧಾ ಹಾಪಿ ಚಾಶ್ವಿನಾಶ್ವಿನೌ ಯಂತಃ ಸ್ತುತಿಭಿರ್ಗಚ್ಛಂತೋ ಯಜಮಾನಾಃ ಸೂರಯೋ ಮೇಧಾವಿನಃ ಸ್ತೋತಾರಃ ಪೃಕ್ಷೋಽನ್ನಂ ಪ್ರಭೂತಂ ಸಚಂತ । ಸೇವಂತೇ । ಸಂಯಂತಿ ವಾ । ತಾ ತೌ ಯುವಾಂ ಮಘವದ್ಭ್ಯೋಽನ್ನವದ್ಭ್ಯೋಽಸ್ಮಭ್ಯಂ ಧ್ರುವಮವಿಚಲಿತಂ ಯಶೋಽನ್ನಂ ಯಶ ಏವ ವಾ ಛರ್ದಿರ್ಗೃಹಂ ಯಂಸತಃ । ಪ್ರಯಚ್ಛತಂ । ಹೇ ನಾಸತ್ಯಾಶ್ವಿನೌ ॥

ಪ್ರತಿಪದಾರ್ಥ

**ಅಧಾ ಹ**—ಮತ್ತು । **ನಾಸತ್ಯಾ**—ನಾಸತ್ಯಸಂಜ್ಞಕರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯಂತಃ**—ಒಟ್ಟಿಗೆ ಸೇರಿರುವ । **ಸೂರಯಃ**—ಸ್ತೋತೃಗಳು । **ಪೃಕ್ಷಃ**—ಅನ್ನವನ್ನು ಅರ್ಪಿಸಲು । **ಸಚಂತ**—ನಿಮ್ಮನ್ನು ಸಮೀಪಿಸುತ್ತಾರೆ । **ತಾ**—ನೀವು । **ಮಘವದ್ಭ್ಯಃ**—ಹವಿರ್ಯುಕ್ತರಾದ । **ಅಸ್ಮಭ್ಯಂ**—ನಮಗೆ । **ಧ್ರುವಂ**—ನಾಶರಹಿತವಾದ । **ಯಶಃ**—ಯಶಸ್ಸನ್ನೂ । **ಛರ್ದಿಃ**—ಗೃಹವನ್ನೂ । **ಯಂಸತಃ**—ಒದಗಿಸಿರಿ.

ಭಾವಾರ್ಥ

ನಾಸತ್ಯಸಂಜ್ಞಕರಾದ ಎಲೈ ಅಶ್ವಿನೀದೇವತೆಗಳೇ, ಒಟ್ಟಿಗೆ ಸೇರಿರುವ ಸ್ತೋತೃಗಳೂ, ಯಜಮಾನರೂ ನಿಮಗೆ ಅನ್ನವನ್ನು ಅರ್ಪಿಸಲು ನಿಮ್ಮನ್ನು ಸಮೀಪಿಸುತ್ತಾರೆ ನೀವು ಹವಿರ್ಯುಕ್ತರಾದ ನಮಗೆ ನಾಶರಹಿತವಾದ ಯಶಸ್ಸನ್ನೂ, ಗೃಹವನ್ನೂ ಒದಗಿಸಿರಿ.

English Translation

The pious worshippers now approaching you unite to offer (you sacrificial) food . do you two, Nasatyas, grant to us who are affluent (in offerings) enduring fame and dwelling.

ಸಂಹಿತಾಪಾಠಃ

ಪ್ರ ಯೇ ಯಯುರವೃಕಾಸೋ ರಥಾಇವ ನೃಪಾತಾರೋ ಜನಾನಾಂ ।

ಉತ ಸ್ವೇನ ಶವಸಾ ಶೂಶುವುರ್ನರ ಉತ ಕ್ಷಿಯಂತಿ ಸುಕ್ಷಿತಿಂ ॥ ೬ ॥

ಪದಪಾಠಃ

ಪ್ರ । ಯೇ । ಯಯುಃ । ಅವೃಕಾಸಃ । ರಥಾಃऽಇವ । ನೃऽಪಾತಾರಃ । ಜನಾನಾಂ ॥

ಉತ । ಸ್ವೇನ । ಶವಸಾ । ಶೂಶುವುಃ । ನರಃ । ಉತ । ಕ್ಷಿಯಂತಿ । ಸುऽಕ್ಷಿತಿಂ ॥ ೬ ॥

ಸಾಯಣಭಾಷ್ಯಂ

ಯೇ ಯಜಮಾನಾ ಅವೃಕಾಸಃ ಪರಕೀಯಧನಸ್ಯಾನಾದಾತಾರೋ ಜನಾನಾಂ ಮನುಷ್ಯಾಣಾಂ ಮಧ್ಯೇ ನೃಪಾತಾರ ಋತ್ವಿಗ್ರೂಪಾಣಾಂ ನೃಣಾಂ ರಕ್ಷಿತಾರಃ ಸಂತೋ ಯಯುಃ ಯುವಾಂ ಪ್ರಾಪ್ನುವಂತಿ ಹವಿರ್ಭಿಃ । ಪ್ರಾಪ್ತೌ ದೃಷ್ಟಾಂತಃ । ರಥಾ ಇವ ವ್ರೀಹ್ಯಾದಿಪೂರ್ಣಾ ರಥಾ ಯಥಾ ಪ್ರಾಪ್ನುವಂತಿ ಸ್ವಾಮಿಗೃಹಂ । ಉತೇತ್ಯಯಮುತ್ತರವಾಕ್ಯಾಪೇಕ್ಷಃ । ಅಪಿ ಚ ತೇ ನರೋ ಯಜಮಾನಾಃ ಸ್ವೇನ ಶವಸಾ ಸ್ವೀಯೇನ ಬಲೇನ ಶೂಶುವುಃ । ವರ್ಧಂತೇ । ಉತಾಪಿ ಚ ಸುಕ್ಷಿತಿಂ ಸುನಿವಾಸಂ ಕ್ಷಿಯಂತಿ । ಗಚ್ಛಂತಿ । ಪ್ರಾಪ್ನುವಂತಿ ॥

ಪ್ರತಿಪದಾರ್ಥ

**ಯೇ**—ಯಾವ ಯಜಮಾನರು । **ಅವೃಕಾಸಃ**—ಹಿಂಸಾರಹಿತರಾಗಿ । **ಜನನಾಂ**—ಮಾನವರ ನಡುವೆ । **ನೃಪಾತಾರಃ**—ಋಷಿಗಳ ರಕ್ಷಕರಾಗಿದ್ದು । **ರಥಾ ಇವ**—ಧಾನ್ಯದಿಂದ ತುಂಬಿದ ಗಾಡಿಗಳು ಯಜಮಾನನ ಗೃಹವನ್ನು ಸೇರುವಂತೆ । **ಪ್ರ ಯಯುಃ**—ನಿಮ್ಮನ್ನು ಸೇವಿಸಲು ಸಮಾಪಿಸುವರೋ । **ನರಃ**—ಅದೇ ಯಜಮಾನರು । **ಸ್ವೇನ ಶವಸಾ**—ತಮ್ಮ ಸ್ವಶಕ್ತಿಯಿಂದಲೇ । **ಶೂಶುವುಃ**—ಪುಷ್ಟಿಯನ್ನು ಹೊಂದುತ್ತಾರೆ । **ಉತ**—ಮತ್ತು । **ಸುಕ್ಷಿತಿಂ**—ಉತ್ತಮವಾದ ವಾಸಕ್ಕ ಯೋಗ್ಯವಾದ ಗೃಹವನ್ನು । **ಕ್ಷಿಯಂತಿ**—ಹೊಂದುತ್ತಾರೆ ।

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಯಾವ ಯಜಮಾನರು ಹಿಂಸಾರಹಿತರಾಗಿ ಮಾನವರ ನಡುವೆ ಋಷಿಗಳಿಗೆಲ್ಲ ರಕ್ಷಕರಾಗಿದ್ದು ಧಾನ್ಯದಿಂದ ತುಂಬಿದ ಗಾಡಿಗಳು ಯಜಮಾನನ ಗೃಹವನ್ನು ಸೇರುವಂತೆ ನಿಮ್ಮನ್ನು ಸೇವಿಸಲು ಸಮಾಪಿಸುವರೋ ಅದೇ ಯಜಮಾನರು ತಮ್ಮ ಸ್ವಶಕ್ತಿಯಿಂದಲೇ ಪುಷ್ಟಿಯನ್ನು ಹೊಂದುತ್ತಾರೆ ಮತ್ತು ಉತ್ತಮವಾದ ವಾಸಕ್ಕೆ ಯೋಗ್ಯವಾದ ಗೃಹವನ್ನು ಹೊಂದುತ್ತಾರೆ.

## English Translation

Those worshippers, the benefactors of men, doing injury to none who repair to you, like waggons (to the farm), either prosper by their own strength, or inhabit an excellent abode

---

*

# ಎಪ್ಪತ್ತೈದನೆಯ ಸೂಕ್ತವು

ಸಾಯಣಭಾಷ್ಯಂ

ವ್ಯುಷಾ ಆವ ಇತ್ಯಷ್ಟರ್ಚಂ ಪಂಚಮಂ ಸೂಕ್ತಂ ವಸಿಷ್ಠಸ್ಯಾರ್ಷಂ । ಅತ್ರಾನುಕ್ರಮಣಿಕಾ । ವ್ಯುಷಾ ಅಷ್ಟಾವುಷಸ್ಯಂ ತು ವಾ ಇತಿ । ತು ವಾ ಇತ್ಯುಕ್ತತ್ವಾತ್ತುಹ್ಯಾದಿಪರಿಭಾಷಯೇದಮಾದೀನಿ ಸಪ್ತ ಸೂಕ್ತಾನ್ಯುಷೋದೇವತ್ಯಾನಿ ॥ ಪ್ರಾತರನುವಾಕ ಉಷಸ್ಯೇ ಕ್ರತೌ ತ್ರೈಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚೇದಮಾದೀನಿ ಷಟ್ ಸೂಕ್ತಾನಿ । ತಥಾ ಚ ಸೂತ್ರ್ಯತೇ । ವ್ಯುಷಾ ಆವೋ ದಿವಿಜಾ ಇತಿ ಷಡಿತಿ ತ್ರೈಷ್ಟುಭಂ । ಆ ೪-೧೪ । ಇತಿ ॥ ಋಗ್ವಿಧಾನ ಆಖ್ಯಾತೋ ವಿನಿಯೋಗೋಽತ್ರ ಲಿಖ್ಯತೇ । ರಾತ್ರ್ಯಾ ಅಪರಕಾಲೇ ಯ ಉತ್ಥಾಯ ಪ್ರಯತಃ ಶುಚಿಃ । ವ್ಯುಷಾ ಇತ್ಯುಪತಿಷ್ಠೇತ ಷಡ್ಭಿಃ ಸೂಕ್ತೈಃ ಕೃತಾಂಜಲಿಃ ॥ ಪ್ರಾಪ್ನುಯಾತ್ಸ ಹಿರಣ್ಯಾನಿ ನಾನಾರೂಪಂ ಧನಂ ಬಹು । ಗಾ ಅಶ್ವಾನ್ಪುರುಷಾನ್ಧಾನ್ಯಂ ಸ್ತ್ರಿಯೋ ವಾಸಾಂಸ್ಯಜಾವಿಕಂ । ಋಗ್ವಿ-೨ ೨೮ । ಇತಿ ॥

**ಅನುವಾದವು—ವ್ಯುಷಾ ಆವಃ**—ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಅನುಕ್ರಮಣಿಕೆಯಲ್ಲಿ **ವ್ಯುಷಾ ಅಷ್ಟಾವುಷಸ್ಯಂ ತು ವೈ** ಎಂದು ಹೇಳಿರುವುದರಿಂದ ಈ ಸೂಕ್ತದಿಂದ ಮುಂದಿನ ಏಳು ಸೂಕ್ತಗಳು ಉಷೋದೇವತಾಕವು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಉಷಸ್ಯಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದಿಂದ ಮುಂದಿನ ಆರು ಸೂಕ್ತಗಳ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ವ್ಯುಷ್ಯಾ ಆವೋ ದಿವಿಜಾ ಇತಿ ಷಡಿತಿ ತ್ರೈಷ್ಟುಭಂ** ಎಂಬ **ಸೂತ್ರದಿಂದ** (ಆ ೪-೧೪) ವಿವೃತವಾಗಿರುವುದು ಋಗ್ವಿಧಾನವೆಂಬ ಗ್ರಂಥದಲ್ಲಿ ಈ ಸೂಕ್ತದ ವಿನಿಯೋಗವಿಚಾರದಲ್ಲಿ ಈ ರೀತಿ ಹೇಳಿದೆ:—

**ವ್ಯುಷಾ ಇತ್ಯುಪತಿಷ್ಠೇತ ಷಡ್ಭಿಃ ಸೂಕ್ತೈಃ ಕೃತಾಂಜಲಿಃ ।**
**ಪ್ರಾಪ್ನುಯಾತ್ಸ ಹಿರಣ್ಯಾನಿ ನಾನಾರೂಪಂ ಧನಂ ಬಹು ।**
**ಗಾ ಅಶ್ವಾನ್ ಪುರುಷಾನ್ ಧಾನ್ಯಂ ಸ್ತ್ರಿಯೋ ವಾಸಾಂಸ್ಯಜಾವಿಕಂ ॥**

(ಋಗ್ವಿಧಾನ. ೩೧೭-೧೮)

ವ್ಯುಷಾ ಎಂದು ಮೊದಲಾಗುವ ಆರು ಸೂಕ್ತಗಳಿಂದ ಕೃತಾಂಜಲಿಬದ್ಧನಾಗಿ ಪ್ರಾರ್ಥಿಸುವವನಿಗೆ ನಾನಾ ರೂಪದಲ್ಲಿರುವ ಧನಗಳು, ಸುವರ್ಣ, ಗೋವುಗಳು, ಅಶ್ವಗಳು, ಭೃತ್ಯರು, ಧಾನ್ಯ, ಸುಂದರ ಸ್ತ್ರೀಯರು, ಉತ್ತಮ ವಸ್ತ್ರಗಳು, ಆಡು, ಕುರಿ ಮೊದಲಾದ ಪಶುಸಂಪತ್ತು ಇವೆಲ್ಲವೂ ಲಭಿಸುವುವು ಎಂದು ಹೇಳಿದೆ.

## ಸೂಕ್ತ—೭೫

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೭೫ ॥
ಅಷ್ಟಕ—೫ ॥ ಅಧ್ಯಾಯ—೫ ॥ ವರ್ಗ—೨೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿಃ—ವಸಿಷ್ಠಃ ॥
ದೇವತಾ—ಉಷಾಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ವ್ಯು೧ಷಾ ಆವೋ ದಿವಿಜಾ ಋತೇನಾವಿಷ್ಕೃಣ್ವಾನಾ ಮಹಿಮಾನಮಾಗಾತ್।
ಅಪ ದ್ರುಹಸ್ತಮ ಆವರಜುಷ್ಟಮಂಗಿರಸ್ತಮಾ ಪಥ್ಯಾ ಅಜೀಗಃ ॥ ೧ ॥

ಪದಪಾಠಃ

ವಿ । ಉಷಾಃ । ಆವಃ । ದಿವಿऽಜಾಃ । ಋತೇನ । ಆವಿಃऽಕೃಣ್ವಾನಾ । ಮಹಿಮಾನಂ । ಆ । ಅಗಾತ್ ॥
ಅಪ । ದ್ರುಹಃ । ತಮಃ । ಆವಃ । ಅಜುಷ್ಟಂ । ಅಂಗಿರಃऽತಮಾ । ಪಥ್ಯಾಃ । ಅಜೀಗರಿತಿ ॥ ೧ ॥

ಸಾಯಣಭಾಷ್ಯಂ

ಇಯಮುಷಾ ದಿವಿಜಾ ದಿವ್ಯಂತರಿಕ್ಷೇ ಪ್ರಾದುರ್ಭೂತಾ ಸತೀ ವ್ಯಾವಃ। ವ್ಯೌಚ್ಛತ್। ವಿಭಾನಂ ಕೃತವತೀತ್ಯರ್ಥಃ ॥ ವಸಿರ್ನಿವಾಸವಾಚ್ಯತ್ರ ವಿಪೂರ್ವೋ ವ್ಯುಚ್ಛನೇ ಭವೇತ್। ಛಂದಸ್ಯಪಿ ದೃಶ್ಯತ ಇತ್ಯಾಟ್। ದೃಶಿಗ್ರಹಣಸ್ಯ ವಿಧ್ಯಂತರೋಪಸಂಗ್ರಹಣಾರ್ಥತ್ವಾದನಜಾದೇರಪ್ಯಡಾಗಮಃ। ಹಲ್‌ಙ್ಯಾಬ್ಭ್ಯ ಇತಿ ಲೋಪಃ ॥ ಸೈವೋಷಾ ಋತೇನ ತೇಜಸಾ ಮಹಿಮಾನಂ ಸ್ವಮಹತ್ತ್ವಮಾವಿಷ್ಕೃಣ್ವಾನಾಗಾತ್। ಆಗತವತೀ। ಆಗತ್ಯ ಚ ದ್ರುಹೋऽಸ್ಮದ್ದ್ರೋಗ್ಧ್ರನಜುಷ್ಟಂ ಸರ್ವೇಷಾಮಪ್ರಿಯಂ ತಮಶ್ಚಾಪಾವಃ। ಅಪವೃಣೋತಿ। ಕಿಂಚಾಂಗಿರಸ್ತಮಾ। ಅಂಗೇರ್ಗತ್ಯರ್ಥಾದಂಗಿರಾಃ। ಗಂತೃತಮಾ ಪಥ್ಯಾಃ ಪದವೀರಜೀಗಃ। ಉದ್ಗಿರತಿ। ಪ್ರಾಣಿನಾಂ ವ್ಯವಹಾರಾಯ ಪ್ರಕಾಶಯತೀತ್ಯರ್ಥಃ॥

ಪ್ರತಿಪದಾರ್ಥ

**ಉಷಾಃ**—ಉಷೋದೇವಿಯು। **ದಿವಿಜಾಃ**—ದ್ಯುಲೋಕದಲ್ಲಿ ಉತ್ಪನ್ನಳಾಗಿ। **ವಿ ಆವಃ**—ಪ್ರಕಾಶಿಸುತ್ತಿದ್ದಾಳೆ। **ಋತೇನ**—ತನ್ನ ತೇಜಸ್ಸಿನಿಂದ। **ಮಹಿಮಾನಂ**—ತನ್ನ ಮಹತ್ವವನ್ನು। **ಆವಿಷ್ಕೃಣ್ವಾನಾ**—ಪ್ರಕಾಶಪಡಿಸುತ್ತ। **ಆಗಾತ್**—ಬರುತ್ತಿದ್ದಾಳೆ। **ದ್ರುಹಃ**—ನಮಗೆ ಕೇಡುಬಯಸುವವರನ್ನೂ। **ಅಜುಷ್ಟಂ**—ಎಲ್ಲರಿಗೂ ಅಪ್ರಿಯವಾದ। **ತಮಃ**—ಕತ್ತಲೆಯನ್ನೂ। **ಅಪ ಆವಃ**—ದೂರಮಾಡುತ್ತಾಳೆ। **ಅಂಗಿರಸ್ತಮಾ**—ಉತ್ತಮವಾದ ಸಂಚಾರಕ್ಕೆ ಯೋಗ್ಯವಾದ। **ಪಂಥಾಃ**—ಮಾರ್ಗಗಳನ್ನು। **ಅಜೀಗಃ**—ಸರಿಪಡಿಸುತ್ತಾಳೆ.

ಭಾವಾರ್ಥ

ಉಷೋದೇವಿಯು ದ್ಯುಲೋಕದಲ್ಲಿ (ಅಂತರಿಕ್ಷದಲ್ಲಿ) ಉತ್ಪನ್ನಳಾಗಿ ಪ್ರಕಾಶಿಸುತ್ತಾಳೆ. ತನ್ನ ತೇಜಸ್ಸಿನಿಂದ ತನ್ನ ಮಹತ್ವವನ್ನು ಪ್ರಕಾಶಪಡಿಸುತ್ತ ಬರುತ್ತಿದ್ದಾಳೆ. ನಮಗೆ ಕೇಡುಬಯಸುವವರನ್ನೂ ಮತ್ತು ಸಕಲರಿಗೂ ಅಪ್ರಿಯವಾದ ಕತ್ತಲೆಯನ್ನೂ ದೂರಮಾಡುತ್ತಾಳೆ. ಉತ್ತಮವಾದ ಸಂಚಾರಕ್ಕೆ ಯೋಗ್ಯವಾದ ಮಾರ್ಗಗಳನ್ನು ಸರಿಪಡಿಸುತ್ತಾಳೆ.

## English Translation

The Dawn, the daughter of heaven, has risen : she comes, manifesting her magnificence in light · she scatters our foes as well as the odious darkness, and relumes the paths that are to be trodden (by living beings).

ಸಂಹಿತಾಪಾಠಃ

ಮಹೇ ನೋ ಅದ್ಯ ಸುವಿತಾಯ ಬೋಧ್ಯುಷೋ ಮಹೇ ಸೌಭಗಾಯ ಪ್ರ ಯಂಧಿ ।
ಚಿತ್ರಂ ರಯಿಂ ಯಶಸಂ ಧೇಹ್ಯಸ್ಮೇ ದೇವಿ ಮರ್ತೇಷು ಮಾನುಷಿ ಶ್ರವಸ್ಯುಂ॥

ಪದಪಾಠಃ

ಮಹೇ । ನಃ । ಅದ್ಯ । ಸುವಿತಾಯ । ಬೋಧಿ । ಉಷಃ । ಮಹೇ । ಸೌಭಗಾಯ । ಪ್ರ । ಯಂಧಿ ॥
ಚಿತ್ರಂ । ರಯಿಂ । ಯಶಸಂ । ಧೇಹಿ । ಅಸ್ಮೇ ಇತಿ । ದೇವಿ । ಮರ್ತೇಷು । ಮಾನುಷಿ । ಶ್ರವಸ್ಯುಂ ॥೨॥

ಸಾಯಣಭಾಷ್ಯಂ

ಅದ್ಯ ನೋಽಸ್ಮಾಕಂ ಮಹೇ ಮಹತೇ ಸುವಿತಾಯ ಸುಖಪ್ರಾಪ್ತಯೇ ಸುಖಗಮನಾಯ ವಾ ಬೋಧಿ। ಭವ। ಕಿಂಚ ಹೇ ಉಷಃ ಮಹೇ ಮಹತೇ ಸೌಭಗಾಯ ಸೌಭಾಗ್ಯಾಯ ಪ್ರ ಯಂಧಿ। ಪ್ರಯಚ್ಛಾಸ್ಮಾನ್ । ಕಿಂಚ ಚಿತ್ರಂ ಚಾಯನೀಯಂ ಯಶಸಂ ಯಶೋಯುಕ್ತಂ ರಯಿಂ ಧನಂ ಧೇಹಿ ಧಾರಯಾಸ್ಮೇ ಅಸ್ಮಾಸು । ಹೇ ಮಾನುಷಿ ಮನುಷ್ಯಹಿತೇ ದೇವಿ ಮರ್ತೇಷ್ವಸ್ಮಾಸು ಶ್ರವಸ್ಯುಮನ್ನವಂತಂ ಪುತ್ರಂ ಧೇಹೀತ್ಯನುಷಂಗಃ ॥

ಪ್ರತಿಪದಾರ್ಥ

**ಉಷಃ**—ಎಲೈ ಉಷೋದೇವಿಯೇ । **ಅದ್ಯ**—ಇಂದು । **ನಃ**—ನಮಗೆ । **ಮಹೇ**—ಮಹತ್ತಾದ । **ಸುವಿತಾಯ**—ಸುಖಪ್ರಾಪ್ತಿಗಾಗಿ । **ಬೋಧಿ**—ಗಮನಿಸು । **ಮಹೇ**—ಮಹತ್ತಾದ । **ಸೌಭಗಾಯ**—ಕಲ್ಯಾಣಕ್ಕಾಗಿಯೂ। **ಪ್ರಯಂಧಿ**—ಪ್ರೇರಿಸು। **ಅಸ್ಮೇ**-ನಮ್ಮಲ್ಲಿ । **ಚಿತ್ರಂ**—ಆಕರ್ಷಕವೂ। **ಯಶಸಂ**-ಯಶೋಯುಕ್ತವೂ ಆದ। **ರಯಿಂ**—ಧನವನ್ನು । **ಧೇಹಿ**—ಸ್ಥಾಪಿಸು । **ಮಾನುಷಿ ದೇವಿ**—ಮಾನವರಿಗೆ ಹಿತಕಾರಿಣಿಯಾದ ಎಲೈ ಉಷೋದೇವಿಯೇ । **ಮರ್ತೇಷು**—ಮಾನವರಾದ ನಮಗೆ । **ಶ್ರವಸ್ಯುಂ**—ಅನ್ನಯುಕ್ತರಾದ ಪುತ್ರಾದಿಗಳನ್ನು ಒದಗಿಸು

ಭಾವಾರ್ಥ

ಎಲೈ ಉಷೋದೇವಿಯೇ, ಇಂದು ನಮಗೆ ಮಹತ್ತಾದ ಸುಖಪ್ರಾಪ್ತಿಗಾಗಿ ಪ್ರಯತ್ನಿಸು. ಮಹತ್ತಾದ ಕಲ್ಯಾಣವನ್ನು ಒದಗಿಸು ನಮ್ಮಲ್ಲಿ ಆಕರ್ಷಕವೂ ಯಶೋಯುಕ್ತವೂ ಆದ ಧನವನ್ನು ಸ್ಥಾಪಿಸು ಮಾನವರಿಗೆ ಹಿತಕಾರಿಣಿಯಾದ ಎಲೈ ಉಷೋದೇವಿಯೇ, ಮಾನವರಾದ ನಮಗೆ ಅನ್ನಯುಕ್ತರಾದ ಪುತ್ರಾದಿಗಳನ್ನು ಒದಗಿಸು

## English Translation

Be unto us to-day the cause of great felicity : bestow, Ushas, (what is promotive) of great prosperity : give us wonderful riches and reputation : grant, divine benefactress of men, to mortals flourishing male posterity.

॥ ಸಂಹಿತಾಪಾಠಃ ॥

ಏತೇ ತ್ಯೇ ಭಾನವೋ ದರ್ಶತಾಯಾಶ್ಚಿತ್ರಾ ಉಷಸೋ ಅಮೃತಾಸ ಆಗುಃ ।
ಜನಯಂತೋ ದೈವ್ಯಾನಿ ವ್ರತಾನ್ಯಾಪೃಣಂತೋ ಅಂತರಿಕ್ಷಾ ವ್ಯಸ್ಥುಃ ॥೨॥

॥ ಪದಪಾಠಃ ॥

ಏತೇ । ತ್ಯೇ । ಭಾನವಃ । ದರ್ಶತಾಯಾಃ । ಚಿತ್ರಾಃ । ಉಷಸಃ । ಅಮೃತಾಸಃ । ಆ । ಅಗುಃ ।
ಜನಯಂತಃ । ದೈವ್ಯಾನಿ । ವ್ರತಾನಿ । ಆಽಪೃಣಂತಃ । ಅಂತರಿಕ್ಷಾ । ವಿ । ಅಸ್ಥುಃ ॥ ೨ ॥

॥ ಸಾಯಣಭಾಷ್ಯಂ ॥

ದರ್ಶತಾಯಾ ದರ್ಶನೀಯಾಯಾ ಪ್ರಕಾಶಯುಕ್ತಾಯಾ ಉಷಸ ಏತೇ ಪುರೋ ದೃಶ್ಯಮಾನಾಸ್ತ್ಯೇ ತೇ ಪ್ರಸಿದ್ಧಾಶ್ಚಿತ್ರಾಃ ಪೂಜ್ಯಾ ಆಶ್ಚರ್ಯಭೂತಾ ವಾ ಅಮೃತಾಸೋಽಮರಣಾ ಅನಶ್ವರಾ ಭಾನವೋ ರಶ್ಮಯ ಆಗುಃ । ಆಗಚ್ಛಂತಿ । ಕಿಂ ಕುರ್ವಂತಃ । ದೈವ್ಯಾನಿ ದೇವಾನಾಂ ಸಂಬಂಧೀನಿ ವ್ರತಾನಿ ಕರ್ಮಾಣಿ ಜನಯಂತ ಉತ್ಪಾದಯಂತಃ । ತದನುಕೂಲಪ್ರಕಾಶಪ್ರದಾನಾತ್ತದುತ್ಪಾದಕತ್ವಮೇಷಾಂ । ಅಂತರಿಕ್ಷಾಂತರಿಕ್ಷಾಣ್ಯಾಪೃಣಂತ ಆಪೂರಯಂತಃ । ಏಕಸ್ಯೈವಾಂತರಿಕ್ಷಸ್ಯ ವಾಯುಮೇಘಪಕ್ಷಿಣಾಮಾಲಂಬನೋಪಾಧಿನಾ ತ್ರಿವಿಧತ್ವಂ । ಅತೋ ಬಹುವಚನಮುಪಪನ್ನಂ । ಏವಂ ಕುರ್ವತೋ ಭಾನವೋ ವ್ಯಸ್ಥುಃ । ವಿವಿಧಂ ತಿಷ್ಠಂತಿ । ಸರಂತಿ ॥

॥ ಪ್ರತಿಪದಾರ್ಥ ॥

**ದರ್ಶತಾಯಾಃ**—ಸುಂದರರೂಪವಾದ । **ಉಷಸಃ**—ಉಷೋದೇವಿಯ । **ಏತೇ**—ಎಲ್ಲರಿಗೂ ಗೋಚರವಾಗುವುವೂ । **ತ್ಯೇ**—ಪ್ರಸಿದ್ಧವೂ । **ಚಿತ್ರಾಃ**—ಆಕರ್ಷಕವಾದವೂ । **ಅಮೃತಾಸಃ**—ನಾಶರಹಿತವೂ ಆದ । **ಭಾನವಃ**—ರಶ್ಮಿಗಳು । **ದೈವ್ಯಾನಿ**—ದೇವಸಂಬಂಧವಾದ । **ವ್ರತಾನಿ**—ಕರ್ಮಬುದ್ಧಿಗಳನ್ನು । **ಜನಯಂತಃ**—ಉತ್ಪನ್ನಮಾಡುತ್ತ । **ಆಗುಃ**—ಪ್ರಸರಿಸಿ ಬರುತ್ತಿವೆ । **ಅಂತರಿಕ್ಷಾ**—ಅಂತರಿಕ್ಷಗಳನ್ನು । **ಆ ಪೃಣಂತಃ**—ವ್ಯಾಪಿಸಿ ತುಂಬುತ್ತ । **ವ್ಯಸ್ಥುಃ**—ಅನೇಕ ರೂಪಗಳಲ್ಲಿ ಸ್ಥಾಪಿತವಾಗಿವೆ

॥ ಭಾವಾರ್ಥ ॥

ಸುಂದರರೂಪವಾದ ಉಷೋದೇವಿಯ ಎಲ್ಲರಿಗೂ ಗೋಚರವಾಗುವುವೂ, ಪ್ರಸಿದ್ಧವೂ, ಆಕರ್ಷಕವೂ, ನಾಶರಹಿತವೂ ಆದ ರಶ್ಮಿಗಳು ದೇವತಾಕಾರ್ಯರೂಪವಾದ ಬುದ್ಧಿಗಳನ್ನು ಉತ್ಪನ್ನಮಾಡುತ್ತ ಪ್ರಸರಿಸಿ ಬರುತ್ತಿವೆ ಅಂತರಿಕ್ಷಗಳನ್ನೆಲ್ಲ ವ್ಯಾಪಿಸಿ ತುಂಬುತ್ತ ಅನೇಕ ರೂಪಗಳಲ್ಲಿ ಸ್ಥಾಪಿತವಾಗಿವೆ

## English Translation

These wonderful, immortal rays of the beautiful Dawn appear, giving birth to the pious rites of divine worship, and filling the firmament, they spread around

॥ ಸಂಹಿತಾಪಾಠಃ ॥

ಏಷಾ ಸ್ಯಾ ಯುಜಾನಾ ಪರಾಕಾತ್ಪಂಚ ಕ್ಷಿತೀಃ ಪರಿ ಸದ್ಯೋ ಜಿಗಾತಿ ।
ಅಭಿಪಶ್ಯಂತೀ ವಯುನಾ ಜನಾನಾಂ ದಿವೋ ದುಹಿತಾ ಭುವನಸ್ಯ ಪತ್ನೀ ॥೪॥

। ಪದಪಾಠಃ ।

ಏಷಾ । ಸ್ಯಾ । ಯುಜಾನಾ । ಪರಾಕಾತ್ । ಪಂಚ । ಕ್ಷಿತೀಃ । ಪರಿ । ಸದ್ಯಃ । ಜಿಗಾತಿ ।
ಅಭಿಽಪಶ್ಯಂತೀ । ವಯುನಾ । ಜನಾನಾಂ । ದಿವಃ । ದುಹಿತಾ । ಭುವನಸ್ಯ । ಪತ್ನೀ ॥ ೪ ॥

॥ ಸಾಯಣಭಾಷ್ಯಂ ॥

ಏಷಾ ಸ್ಯಾ ಸೋಷಾಃ ಪರಾಕಾದ್ದೂರದೇಶಾದ್ದೂರೇ ಸ್ಥಿತಾಪಿ ಯುಜಾನೋದ್ಯೋಗಂ ಕುರ್ವಾಣಾ ಪ್ರಕಾಶಾಯ ಪಂಚ ಕ್ಷಿತೀರ್ನಿಷಾದಪಂಚಮಾಂಶ್ಚತುರೋ ವರ್ಣಾನ್ ಸದ್ಯಃ ಪರಿ ಜಿಗಾತಿ । ಕಿಂ । ಕುರ್ವತೀ । ಜನಾನಾಂ ಪ್ರಾಣಿನಾಂ ವಯುನಾ ಪ್ರಜ್ಞಾನಾನ್ಯಭಿಪಶ್ಯಂತೀ ಸಾಕ್ಷಿತ್ವೇನಾವಲೋಕಯಂತೀ । ಕೀದೃಶೀ ಸಾ । ದಿವೋ ದುಹಿತಾ ದುಹಿತೃಸ್ಥಾನೀಯಾ ಭುವನಸ್ಯ ಭೂತಜಾತಸ್ಯ ಪತ್ನೀ ಪಾಲಯಿತ್ರೀ । ಪರಿ ಜಿಗಾತೀತ್ಯನ್ವಯಃ ॥

। ಪ್ರತಿಪದಾರ್ಥ ।

ದಿವಃ—ಅಂತರಿಕ್ಷದ । ದುಹಿತಾ—ಪುತ್ರಿಯೂ । ಭುವನಸ್ಯ—ಸಕಲ ಲೋಕಗಳಿಗೂ । ಪತ್ನೀ—ಪಾಲಕಳೂ । ಸ್ಯಾ—ಪ್ರಸಿದ್ಧಳೂ ಆದ । ಏಷಾ—ಈ ಉಷೋದೇವಿಯು । ಜನಾನಾಂ—ಮಾನವರ । ವಯುನಾ—ಬುದ್ಧಿಗಳನ್ನು । ಅಭಿಪಶ್ಯಂತಿ—ಸೂಕ್ಷ್ಮವಾಗಿ ನೋಡುತ್ತ । ಪರಾಕಾತ್—ಅತ್ಯಂತ ದೂರದೇಶದಿಂದಲೂ । ಯುಜಾನಾ—ಪ್ರಕಾಶಪಡಿಸಲು ಪ್ರಯತ್ನಿಸಿ । ಪಂಚಕ್ಷಿತೀಃ—ನಿಷಾದಾದಿ ಪಂಚವಿಧವಾದ ಜನರ ಸಮೀಪಕ್ಕೆ । ಸದ್ಯಃ—ಒಡನೆಯೇ । ಪರಿ ಜಿಗಾತಿ—ಸಮೀಪಿಸಿ ಬರುತ್ತಾಳೆ.

। ಭಾವಾರ್ಥ ॥

ಅಂತರಿಕ್ಷದ ಪುತ್ರಿಯೂ, ಸಕಲ ಲೋಕಗಳಿಗೂ ಪಾಲಕಳೂ, ಪ್ರಸಿದ್ಧಳೂ ಆದ ಉಷೋದೇವಿಯು ಮಾನವರ ಬುದ್ಧಿಗಳನ್ನು ಸೂಕ್ಷ್ಮವಾಗಿ ನೋಡುತ್ತ ಅತ್ಯಂತ ದೂರದೇಶದಿಂದಲೂ ಪ್ರಕಾಶಪಡಿಸಲು ಪ್ರಯತ್ನಿಸಿ ನಿಷಾದಾದಿ ಪಂಚವಿಧವಾದ ಜನರ ಸಮೀಪಕ್ಕೂ ಒಡನೆಯೇ ಸಮೀಪಿಸಿ ಬರುತ್ತಾಳೆ.

English Translation

Exerting herself, she approaches rapidly from afar (to give light) to the five classes of men, witnessing the thoughts of men, the daughter of heaven, the benefactress of living beings.

॥ ಸಂಹಿತಾಪಾಠಃ ॥

ವಾಜಿನೀವತೀ ಸೂರ್ಯಸ್ಯ ಯೋಷಾ ಚಿತ್ರಾಮಘಾ ರಾಯ ಈಶೇ ವಸೂನಾಂ ।
ಋಷಿಷ್ಟುತಾ ಜರಯಂತೀ ಮಘೋನ್ಯುಷಾ ಉಚ್ಛತಿ ವಹ್ನಿಭಿರ್ಗೃಣಾನಾ

॥ ಪದಪಾಠಃ ॥

ವಾಜಿನೀಽವತೀ । ಸೂರ್ಯಸ್ಯ । ಯೋಷಾ । ಚಿತ್ರಽಮಘಾ । ರಾಯಃ । ಈಶೇ । ವಸೂನಾಂ ।
ಋಷಿಽಸ್ತುತಾ । ಜರಯಂತೀ । ಮಘೋನೀ । ಉಷಾಃ । ಉಚ್ಛತಿ । ವಹ್ನಿಽಭಿಃ । ಗೃಣಾನಾ ॥ ೫ ॥

॥ ಸಾಯಣಭಾಷ್ಯಂ ॥

ವಾಜಿನೀವತೀ ಬಹ್ವನ್ನಾ । ಯದ್ಯಪ್ಯುಷೋನಾಮ್ನ್ಯೇತತ್ ತಥಾಪಿ ಚಿತ್ರಾಮಘೇತ್ಯಸ್ಯಾಪ್ಯುಷೋನಾಮಕಸ್ಯ ಪೃಥಗ್ವಿದ್ಯಮಾನತ್ವಾದತ್ರೈಕೋ ಯೋಗರೂಢೋಽವಗಂತವ್ಯಃ ಸೂರ್ಯಸ್ಯ ಯೋಷಾ ಯೋಷಿಚ್ಚಿತ್ರಾಮಘಾ ವಿಚಿತ್ರಧನಾ ವಿಚಿತ್ರರಶ್ಮ್ಯಾಖ್ಯಧನಾ ವಾ ರಾಯೋ ಧನಸ್ಯಾವಶಿಷ್ಟಸ್ಯ ತ ವಸೂನಾಂ ದೇವಮನುಷ್ಯಾದಿಸರ್ವಾಶ್ರಯಾಣಾಂ ಧನಾನಾಂ ಚೇಶೇ । ಈಷ್ಟೇ । ಅಥವಾ ವಸವೋ ವಾಸಕಾ ರಶ್ಮಯ । ತೇಷಾಮಪೀಷ್ಟೇ । ಋಷಿಷ್ಟುತಾ ಋಷಿಭಿಃ ಸ್ತುತಾ ಜರಯಂತೀ ಪ್ರಾಣಿಜಾತಾನಿ ಉಷಾಃ ಖಲು ಪುನ ಪುನರಾವರ್ತಮಾನಾ ಪ್ರಾಣಿನಾಮಾಯುಃ ಕ್ಷಪಯತಿ ಮಘೋನೀ ಧನವತ್ಯುಷ ವಹ್ನಿಭಿಃ ಕರ್ಮವೋಢೃಭಿರ್ಯಜಮಾನೈರ್ಗೃಣಾನಾ ಸ್ತೂಯಮಾನೋಚ್ಛತಿ । ವಿಭಾನಂ ಕರೋತಿ ॥

॥ ಪ್ರತಿಪದಾರ್ಥ ॥

ವಾಜಿನೀವತೀ—ಅನ್ನವಂತಳೂ । ಸೂರ್ಯಸ್ಯ—ಸೂರ್ಯನ । ಯೋಷಾ—ಪತ್ನಿಯೂ । ಚಿತ್ರಾಮಘಾ-ಅನೇಕವಿಧವಾದ ಧನವುಳ್ಳವಳೂ ಆದ ಉಷೋದೇವಿಯು । ರಾಯಃ—ಧನಕ್ಕೂ । ವಸೂನಾಂ—ಜಗತ್ತನ್ನು ಆವರಿಸುವ ರಶ್ಮಿಗಳಿಗೂ । ಈಶೇ—ಒಡೆಯಳಾಗಿದ್ದಾಳೆ । ಋಷಿಷ್ಟುತಾ—ಋಷಿಗಳಿಂದ ಪ್ರಶಂಸಿತಳೂ ಜರಯಂತೀ—ಪ್ರಾಣಿಗಳನ್ನು ಕ್ಷಯಿಸುವಂತೆ ಮಾಡುವವಳೂ । ಮಘೋನೀ—ಸಂಪದ್ಯುಕ್ತಳೂ ಆದ ಉಷಾಃ—ಉಷೋದೇವಿಯು । ವಹ್ನಿಭಿಃ—ಕರ್ಮವಾಹಕರಾದ ಯಜಮಾನರಿಂದ । ಗೃಣಾನಾ—ಪ್ರಶಂಸಿಳಾಗಿ । ಉಚ್ಛತಿ—ಪ್ರಕಾಶಿಸುತ್ತಾಳೆ

॥ ಭಾವಾರ್ಥ ॥

ಅನ್ನವಂತಳೂ, ಸೂರ್ಯನ ಪತ್ನಿಯೂ, ಅನೇಕವಿಧವಾದ ಧನವುಳ್ಳವಳೂ ಆದ ಉಷೋದೇವಿಯು ಧನಕು ಜಗತ್ತನ್ನು ಆವರಿಸುವ ರಶ್ಮಿಗಳಿಗೂ ಒಡೆಯಳಾಗಿದ್ದಾಳೆ ಋಷಿಗಳಿಂದ ಪ್ರಶಂಸಿತಳೂ ಪ್ರಾಣಿಗಳನ್ನು ಕ್ಷಯಿಸುವಂತೆ ಮಾಡುವವಳೂ, ಸಂಪದ್ಯುಕ್ತಳೂ ಆದ ಉಷೋದೇವಿಯು ಕರ್ಮವಾಹಕರಾದ ಯಜಮಾನರಿಂದ ಪ್ರಶಂಸಿಳಾಗಿ ಪ್ರಕಾಶಿಸುತ್ತಾಳೆ

## English Translation

The bride of Surya, the distributress of food, the possessor of, wonderful health, she rules over treasures (of every kind) of riches hymned by the Rishis, the waster away of life, the mistress of opulence, she rises, glorified by the offerers (of oblations).

॥ ಸಂಹಿತಾಪಾಠಃ ॥

ಪ್ರತಿ ದ್ಯುತಾನಾಮರುಷಾಸೋ ಅಶ್ವಾಶ್ಚಿತ್ರಾ ಅದೃಶ್ರನ್ನುಷಸಂ ವಹಂತಃ ।
ಯಾತಿ ಶುಭ್ರಾ ವಿಶ್ವಪಿಶಾ ರಥೇನ ದಧಾತಿ ರತ್ನಂ ವಿಧತೇ ಜನಾಯ ॥ ೬ ॥

॥ ಪದಪಾಠಃ ॥

ಪ್ರತಿ । ದ್ಯುತಾನಾಂ । ಅರುಷಾಸಃ । ಅಶ್ವಾಃ । ಚಿತ್ರಾಃ । ಅದೃಶ್ರನ್ । ಉಷಸಂ । ವಹಂತಃ ॥
ಯಾತಿ । ಶುಭ್ರಾ । ವಿಶ್ವSಪಿಶಾ । ರಥೇನ । ದಧಾತಿ । ರತ್ನಂ । ವಿಧತೇ । ಜನಾಯ ॥

॥ ಸಾಯಣಭಾಷ್ಯಂ ॥

ದ್ಯುತಾನಾಂ ದ್ಯೋತಮಾನಾಮುಷಸಂ ವಹಂತೋ ಧಾರಯಂತೋಽರುಷಾಸ ಆರೋಚಮಾನಾಶ್ಚಿತ್ರಾಶ್ಚಾಯನೀಯಾ ಅಶ್ವಾಃ ಪ್ರತ್ಯದೃಶ್ರನ್ । ಪ್ರತಿದೃಶ್ಯಂತೇ । ಸಾ ಚೋಷಾಃ ಶುಭ್ರಾ ದೀಪ್ಯಮಾನಾ ವಿಶ್ವಪಿಶಾ ಬಹುರೂಪೇಣ ರಥೇನ ಯಾತಿ । ಸರ್ವತ್ರ ಗಚ್ಛತಿ । ವಿಧತೇ ಪರಿಚರತೇ ಜನಾಯ ರತ್ನಂ ರಮಣೀಯಂ ಧನಂ ದಧಾತಿ । ದದಾತಿ ಚ ॥

॥ ಪ್ರತಿಪದಾರ್ಥ ॥

**ದ್ಯುತಾನಾಂ**—ಪ್ರಕಾಶಮಾನಳಾದ । **ಉಷಸಂ**—ಉಷೋದೇವಿಯನ್ನು । **ವಹಂತಃ**—ವಹಿಸಿರುವುವೂ । **ಅರುಷಾಸಃ**—ಕಾಂತಿಯುತವಾದವೂ । **ಚಿತ್ರಾಃ**—ಆಕರ್ಷಕವಾದವೂ ಆದ । **ಅಶ್ವಾಃ**—ಅಶ್ವಗಳು । **ಪ್ರತ್ಯದೃಶ್ರನ್**—ಗೋಚರವಾಗುತ್ತಿವೆ । **ಶುಭ್ರಾ**—ತೇಜೋಯುತಳಾದ ಉಷಸ್ಸು । **ವಿಶ್ವಪಿಶಾ**—ಅನೇಕ ರೂಪವುಳ್ಳ । **ರಥೇನ**—ರಥದೊಡನೆ । **ಯಾತಿ**—ಸರ್ವತ್ರ ಸಂಚರಿಸುತ್ತಾಳೆ । **ವಿಧತೇ**—ತನ್ನನ್ನು ಪೂಜಿಸುವ । **ಜನಾಯ**—ಯಜಮಾನರಿಗೆ । **ರತ್ನಂ**—ರಮಣೀಯವಾದ ಧನವನ್ನು । **ದಧಾತಿ**—ಕೊಡುತ್ತಾಳೆ.

॥ ಭಾವಾರ್ಥ ॥

ಪ್ರಕಾಶಮಾನಳಾದ ಉಷೋದೇವಿಯನ್ನು ವಹಿಸಿರುವುವೂ, ಕಾಂತಿಯುತವಾದವೂ, ಆಕರ್ಷಕವಾದವೂ ಆದ ಅಶ್ವಗಳು ಗೋಚರವಾಗುತ್ತಿವೆ. ತೇಜೋಯುತಳಾದ ಉಷಸ್ಸು ಅನೇಕರೂಪವುಳ್ಳ ರಥದೊಡನೆ ಸರ್ವತ್ರ ಸಂಚರಿಸುತ್ತಾಳೆ ತನ್ನನ್ನು ಪೂಜಿಸುವ ಯಜಮಾನರಿಗೆ ರಮಣೀಯವಾದ ಧನವನ್ನು ಕೊಡುತ್ತಾಳೆ

## English Translation

The bright and wondrous steeds, conveying the resplendent Ushas, are visible she advances, radiant in her every way-moving chariot she bestows wealth upon the man who practises sacred rites

॥ ಸಂಹಿತಾಪಾಠಃ ॥

ಸತ್ಯಾ ಸತ್ಯೇಭಿರ್ಮಹತೀ ಮಹದ್ಭಿರ್ದೇವೀ ದೇವೇಭಿರ್ಯಜತಾ ಯಜತ್ರೈಃ ।
ರುಜದ್ದೃಳ್ಹಾನಿ ದದದುಸ್ರಿಯಾಣಾಂ ಪ್ರತಿ ಗಾವ ಉಷಸಂ ವಾವಶಂತ ॥೭॥

॥ ಪದಪಾಠಃ ॥

ಸತ್ಯಾ । ಸತ್ಯೇಭಿಃ । ಮಹತೀ । ಮಹತ್ऽಭಿಃ । ದೇವೀ । ದೇವೇಭಿಃ । ಯಜತಾ । ಯಜತ್ರೈಃ ।
ರುಜತ್ । ದೃಳ್ಹಾನಿ । ದದತ್ । ಉಸ್ರಿಯಾಣಾಂ । ಪ್ರತಿ । ಗಾವಃ । ಉಷಸಂ । ವಾವಶಂತ ॥ ೭ ॥

॥ ಸಾಯಣಭಾಷ್ಯಂ ॥

ಸತ್ಯಾನ್ಯೈರಬಾಧ್ಯಾ ಮಹತೀ ಪೂಜನೀಯಾ ಪ್ರವೃದ್ಧಾ ವಾ ಗುಣೈರ್ದೇವೀ ದ್ಯೋತಮಾನಾ ಯಜತಾ ಯಜನೀಯೋಷಾಃ ಸತ್ಯೇಭಿಃ ಸತ್ಯೈರ್ಮಹದ್ಭಿರ್ದೇವೈರ್ಯಜತ್ರೈರುಕ್ತಲಕ್ಷಣೈಃ ಕಿರಣೈರ್ನಿಪಾತಭಾಗ್ಭಿರನ್ಯೈರ್ದೇವೈರ್ವಾ ಸಹಿತಾ ಸತೀ ದೃಳ್ಹಾನ್ಯತ್ಯಂತಂ ಸ್ಥಿರಾಣಿ ತಮಾಂಸಿ ರುಜತ್ । ಭಿನತ್ತಿ । ಉಸ್ರಿಯಾಣಾಂ । ಗೋನಾಮೈತತ್ । ಉತ್ಸ್ರಾವಿಣ ಆಸಾಂ ಭೋಗಾ ಇತಿ ತದ್ವ್ಯುತ್ಪತ್ತಿಃ । ತಾಸಾಂ ಸಂಚಾರಾಯ ದದತ್ । ದದಾತಿ । ಸಾಮರ್ಥ್ಯಾತ್ಪ್ರಕಾಶಮಿತ್ಯರ್ಥಃ । ಅಥವೋಸ್ರಿಯಾ ಗಾ ದದತ್ । ದದಾತಿ ಸ್ತೋತೃಭ್ಯಃ । ಕಿಂ ಚ ಗಾವಃ । ಉಪಲಕ್ಷಣಮೇತತ್ । ಸರ್ವೇಽಪಿ ತಮೋಽವರುದ್ಧಾಃ ಪ್ರಾಣಿನ ಉಷಸಂ ವಾವಶಂತ । ಉಶಂತಿ । ಕಾಮಯಂತೇ । ವಿಶೇಷೇಣ ಗವಾಂ ಪ್ರಭಾತೇ ಸಂಚಾರಾರ್ಥಮುಷಸೋಽಪೇಕ್ಷಿತತ್ವಾತ್ತಾಸಾಂ ಪ್ರಾಧಾನ್ಯೇನೋಕ್ತಿಃ ॥

॥ ಪ್ರತಿಪದಾರ್ಥ ॥

**ದೇವೇಭಿಃ**— ಪ್ರಕಾಶಮಾನರಲ್ಲಿ । **ದೇವೀ**—ಅತ್ಯಂತ ಪ್ರಕಾಶಮಾನಳೂ । **ಸತ್ಯೇಭಿಃ**—ಸತ್ಯಾತ್ಮಕವಾದ ತತ್ವಗಳೊಂದಿಗೆ । **ಸತ್ಯಾ**—ಸತ್ಯಸ್ವರೂಪಳೂ । **ಮಹದ್ಭಿಃ**—ಮಹದ್ಗುಣವುಳ್ಳ ದೇವತೆಗಳಲ್ಲಿ । **ಮಹತೀ**—ಮಹತ್ವವುಳ್ಳವಳೂ । **ಯಜತ್ರೈಃ**— ಯಜ್ಞಾರ್ಹರೊಂದಿಗ । **ಯಜತಾ**—ಪೂಜ್ಯಳೂ ಆದ ಉಷೋ

ದೇವಿಯು । ದೃಳ್ಹಾನಿ—ಅತ್ಯಂತ ಗಭೀರವಾದ ತಮಸ್ಸನ್ನು । ರುಜತ್-ನಾಶಮಾಡುತ್ತಾಳೆ । ಉಸ್ರಿಯಾಣಾಂ-ಗೋವುಗಳಿಗೆ । ದದತ್—ಪ್ರಕಾಶವನ್ನು ಕೊಡುತ್ತಾಳೆ । ಗಾವಃ—ಸಕಲ ಪ್ರಾಣಿಗಳೂ । ಉಷಸಂ—ಉಷಸ್ಸಿನ ಪ್ರಕಾಶವನ್ನು । ವಾವಶಂತ—ಅಪೇಕ್ಷಿಸುತ್ತವೆ

। ಭಾವಾರ್ಥ ।

ಪ್ರಕಾಶಮಾನರಾದ ದೇವತೆಗಳಲ್ಲಿ ಅತ್ಯಂತ ಪ್ರಕಾಶಮಾನಳೂ, ಸತ್ಯಾತ್ಮಕನಾದ ತತ್ತ್ವಗಳಲ್ಲಿ ಸತ್ಯಸ್ವರೂಪಳೂ, ಮಹದ್ಗುಣವುಳ್ಳ ದೇವತೆಗಳಲ್ಲಿ ಮಹತ್ವವುಳ್ಳವಳೂ, ಯಜ್ಞಾರ್ಹರಲ್ಲಿ ಪೂಜ್ಯಳೂ ಆದ ಉಷೋದೇವಿಯು ಅತ್ಯಂತ ಗಭೀರವಾದ ಕತ್ತಲೆಯನ್ನು ನಾಶಮಾಡುತ್ತಾಳೆ ಗೋವುಗಳಿಗೆ ಪ್ರಕಾಶವನ್ನು ಕೊಡುತ್ತಾಳೆ ಸಕಲ ಪ್ರಾಣಿಗಳೂ ಉಷಸ್ಸಿನ ಪ್ರಕಾಶವನ್ನು ಅಪೇಕ್ಷಿಸುತ್ತವೆ

English Translation

True with the truthful, great with the great, divine with the deities, adorable with the aborable, she disperses the solid (glooms), she displays (the pastures) of the cattle all creatures, the cattle especially, are longing for the dawn.

। ಸಂಹಿತಾಪಾಠಃ ।

ನೂ ನೋ ಗೋಮದ್ವೀರವದ್ಧೇಹಿ ರತ್ನಮುಷೋ ಅಶ್ವಾವತ್ಪುರುಭೋಜೋ ಅಸ್ಮೇ ।

ಮಾ ನೋ ಬರ್ಹಿಃ ಪುರುಷತಾ ನಿದೇ ಕರ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೮ ॥

। ಪದಪಾಠಃ ।

ನು । ನಃ । ಗೋಽಮತ್ । ವೀರಽವತ್ । ಧೇಹಿ । ರತ್ನಂ । ಉಷಃ । ಅಶ್ವಽವತ್ । ಪುರುಽಭೋಜಃ । ಅಸ್ಮೇ ಇತಿ ।

ಮಾ । ನಃ । ಬರ್ಹಿಃ । ಪುರುಷತಾ । ನಿದೇ । ಕಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥೫॥

। ಸಾಯಣಭಾಷ್ಯಂ ।

ಹೇ ಉಷಃ ನು ನೋಽಸ್ಮಭ್ಯಂ ಗೋಮದ್ಬಹುಭಿರ್ಗೋಭಿರ್ಯುಕ್ತಂ ವೀರವದ್ವೀರೈಃ ಪುತ್ರೈರುಪೇತಂ ರತ್ನಂ ರಮಣೀಯಂ ಧನಂ ಪುರುಭೋಜೋ ಬಹ್ವನ್ನಂ ಚಾಸ್ಮೇ ಅಸ್ಮಾಸು ಧೇಹಿ । ದೇಹಿ ।

**ಪಾದಭೇದಾದಸ್ಮೇ ಇತಿ ಪುನರಭಿಧಾನಂ । ನೋಽಸ್ಮಾಕಂ ಬರ್ಹಿರ್ಯಜ್ಞಂ ಪುರುಷತಾ ಪುರುಷತಾಯಾಂ ಪುರುಷಸಮೂಹೇಷು । ಅಸ್ಮತ್ಸದೃಶೇಷ್ವಿತ್ಯರ್ಥಃ । ನಿದೇ ನಿಂದಾಯೈ ಮಾ ಕಃ । ಮಾ ಕಾರ್ಷೀಃ । ಯಥಾ ತೇ ನಿಂದಂತಿ ತಥಾ ಮಾ ಕುರ್ವಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಉಷಃ**—ಎಲೈ ಉಷೋದೇವಿಯೇ । **ನು**—ಈಗ । **ನಃ**—ನಮಗೆ ಬೇಕಾದ । **ಅಶ್ವವತ್**—ಅಶ್ವಯುಕ್ತವಾದುದೂ । **ಗೋಮತ್**—ಗೋಯುಕ್ತವಾದುದೂ । **ವೀರವತ್**—ವೀರಪುತ್ರರಿಂದ ಕೂಡಿದುದೂ ಆದ **ರತ್ನಂ**—ಧನವನ್ನೂ । **ಪುರುಭೋಜಂ**—ಪ್ರಭೂತವಾದ ಅನ್ನವನ್ನೂ ಒದಗಿಸಿ । **ಅಸ್ಮೇ**—ನಮ್ಮಲ್ಲಿ । **ಧೇಹಿ**—ಸ್ಥಾಪಿಸು । **ನಃ**—ನಮ್ಮ । **ಬರ್ಹಿಃ**—ಯಜ್ಞವನ್ನು । **ಪುರುಷತಾ**—ಮಾನವರ ನಡುವೆ । **ನಿದೇ**—ನಿಂದೆಗೆ ಪಾತ್ರವಾದುದನ್ನಾಗಿ । **ಮಾ ಕಃ**—ಮಾಡಬೇಡ ಎಲೈ ದೇವತೆಗಳೇ । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಈಗ ನಮಗೆ ಬೇಕಾದ ಅಶ್ವಯುಕ್ತವಾದುದೂ, ವೀರಪುತ್ರರಿಂದ ಕೂಡಿದುದೂ ಆದ ಧನವನ್ನೂ ಪ್ರಭೂತವಾದ ಅನ್ನವನ್ನೂ ಒದಗಿಸಿ ನಮ್ಮಲ್ಲಿ ಸ್ಥಾಪಿಸು ನಮ್ಮ ಯಜ್ಞವನ್ನು ಮಾನವರ ನಡುವೆ ನಿಂದೆಗೆ ಪಾತ್ರವಾದುದನ್ನಾಗಿ ಮಾಡಬೇಡ ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ

English Translation

Bestow upon us, Ushas, wealth, comprising cattle and horses abundant food, and male offspring let not our sacrifice incur reproach among men, and do you, (gods), ever cherish us with blessings.

## ಎಪ್ಪತ್ತಾರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಉದು ಜ್ಯೋತಿರಿತಿ ಸಪ್ತರ್ಚಂ ಷಷ್ಠಂ ಸೂಕ್ತಂ ತ್ರೈಷ್ಟುಭಮುಷಸ್ಯಂ । ತಥಾ ಚಾನುಕ್ರಾಂತಂ ಉದು ಸಪ್ತೇತಿ । ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥**

ಅನುವಾದವು—**ಉದು ಜ್ಯೋತಿಃ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಆರನೆಯ ಸೂಕ್ತವು ಇದರಲ್ಲಿ ಏಳು ಋಕ್ಕುಗಳಿರುವವು ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಉಷಸ್ಸು ದೇವತೆಯು, ತ್ರಿಷ್ಟುಪ್-ಛಂದಸ್ಸು ಅನುಕ್ರಮಣಿಕೆಯಲ್ಲಿ—**ಉದು ಸಪ್ತ** ಎಂದು ಹೇಳಿರುವುದು ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ

## ಸೂಕ್ತ—೭೬

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೭೬ ॥
ಅಷ್ಟಕ—೫ ॥ ಅಧ್ಯಾಯ—೫ ॥ ವರ್ಗ—೨೩ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ।
ಋಷಿಃ—ವಸಿಷ್ಠಃ ॥
ದೇವತಾ—ಉಷಾಃ ।
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಉದು ಜ್ಯೋತಿರಮೃತಂ ವಿಶ್ವಜನ್ಯಂ ವಿಶ್ವಾನರಃ ಸವಿತಾ ದೇವೋ ಅಶ್ರೇತ್ ।
ಕ್ರತ್ವಾ ದೇವಾನಾಮಜನಿಷ್ಟ ಚಕ್ಷುರಾವಿರಕರ್ಭುವನಂ ವಿಶ್ವಮುಷಾಃ ॥ ೧ ॥

॥ ಪದಪಾಠಃ ॥

ಉತ್ । ಊಂ ಇತಿ । ಜ್ಯೋತಿಃ । ಅಮೃತಂ । ವಿಶ್ವಽಜನ್ಯಂ । ವಿಶ್ವಾನರಃ । ಸವಿತಾ । ದೇವಃ । ಅಶ್ರೇತ್ ।
ಕ್ರತ್ವಾ । ದೇವಾನಾಂ । ಅಜನಿಷ್ಟ । ಚಕ್ಷುಃ । ಆವಿಃ । ಅಕಃ । ಭುವನಂ । ವಿಶ್ವಂ । ಉಷಾಃ ॥ ೧ ॥

॥ ಸಾಯಣಭಾಷ್ಯಂ ॥

ಅಮೃತಮಮೃತತ್ವಸಾಧಕಮವಿನಾಶಿ ವಾ ವಿಶ್ವಜನ್ಯಂ ವಿಶ್ವೇಷಾಂ ಜನಾನಾಂ ಹಿತಕರಂ ಜ್ಯೋತಿರ್ವಿಶ್ವಾನರಃ ಸರ್ವೇಷಾಂ ನೇತಾ ಸವಿತಾ ದೇವ ಉದಶ್ರೇತ್ । ಊರ್ಧ್ವಂ ಶ್ರಯತಿ । ದೇವಾನಾಂ ವ್ಯವಹರ್ತೄಣಾಂ ಸ್ತೋತೄಣಾಂ ವಾ ಯಜಮಾನಾನಾಂ ಕ್ರತ್ವಾ ಕರ್ಮಣಾ ನಿಮಿತ್ತೇನ । ಯಾಗಾನುಷ್ಠಾನಾರ್ಥಮಿತ್ಯರ್ಥಃ । ತದರ್ಥಂ ಯದ್ವಾ ದೇವಾನಾಂ ಚಕ್ಷುಶ್ಚಕ್ಷುಃ ಸ್ಥಾನೀಯಮೌಷಸಂ ತೇಜಃ ಕ್ರತ್ವಾ ಕರ್ಮಣಾ ನಿಮಿತ್ತೇನಾಜನಿಷ್ಟ । ಪ್ರಾದುರಭೂತ್ । ಉತ್ಪನ್ನಾ ಚೋಷಾ ವಿಶ್ವಂ ಸರ್ವಂ ಭುವನಂ ಭೂತಜಾತಮಾವಿರಕಃ । ಪ್ರಾದುರಕಃ । ಅಕರೋತ್ । ಸಮಸ್ತಂ ಜಗದಾವಿಷ್ಕೃತವತೀ ॥

॥ ಪ್ರತಿಪದಾರ್ಥ ॥

**ವಿಶ್ವಾನರಃ**—ಸಕಲರಿಗೂ ಮಾರ್ಗದರ್ಶಕನೂ । **ದೇವಃ**—ದೇವತಾತ್ಮನೂ ಆದ । **ಸವಿತಾ**—ಸವಿತೃವು । **ಅಮೃತಂ**—ನಾಶರಹಿತವೂ । **ವಿಶ್ವಜನ್ಯಂ**—ಎಲ್ಲರಿಗೂ ಹಿತಕರವಾದುದೂ ಆದ । **ಜ್ಯೋತಿಃ**—ತನ್ನ ತೇಜಸ್ಸನ್ನು । **ಉದಶ್ರೇತ್**—ಊರ್ಧ್ವಮುಖವಾಗಿ ಪ್ರಸರಿಸುತ್ತಾನೆ । **ದೇವಾನಾಂ**—ದೇವತೆಗಳ । **ಚಕ್ಷುಃ**—ಕಣ್ಣುಗಳು । **ಕ್ರತ್ವಾ**—ಕರ್ಮನಿಮಿತ್ತವಾಗಿ । **ಅಜನಿಷ್ಟ**—ಪ್ರಾದುರ್ಭೂತವಾಗಿವೆ । **ಉಷಾಃ**—ಉಷೋದೇವಿಯು । **ವಿಶ್ವಂ-ಭುವನಂ**—ಸಕಲ ಲೋಕಗಳನ್ನೂ । **ಆವಿಃ ಅಕಃ**—ಗೋಚರವಾಗುವಂತೆ ಮಾಡಿದ್ದಾಳೆ

॥ ಭಾವಾರ್ಥ ॥

ಸಕಲರಿಗೂ ಮಾರ್ಗದರ್ಶಕನೂ, ದೇವತಾತ್ಮನೂ ಆದ ಸವಿತೃವು ನಾಶರಹಿತವೂ, ಎಲ್ಲರಿಗೂ ಹಿತಕರವಾದುದೂ ಆದ ತನ್ನ ತೇಜಸ್ಸನ್ನು ಊರ್ಧ್ವಾಭಿಮುಖವಾಗಿ ಪ್ರಸರಿಸುತ್ತಾನೆ ದೇವತೆಗಳ ಕಣ್ಣುಗಳು ಕರ್ಮನಿಮಿತ್ತವಾಗಿ ಪ್ರಾದುರ್ಭೂತವಾಗಿವೆ ಉಷೋದೇವಿಯು ಸಕಲಲೋಕಗಳನ್ನೂ ಗೋಚರವಾಗುವಂತೆ ಮಾಡಿದ್ದಾಳೆ

## English Translation

The divine Savitri, the leader of all, sends upwards the immortal, all-benefiting light the eye of the gods has been manifested for (the celebration of) religious rites the dawn has made all creatures visible

॥ ಸಂಹಿತಾಪಾಠಃ ॥

ಪ್ರ ಮೇ ಪಂಥಾ ದೇವಯಾನಾ ಅದೃಶ್ರನ್ನಮರ್ಧಂತೋ ವಸುಭಿರಿಷ್ಕೃತಾಸಃ ।
ಅಭೂದು ಕೇತುರುಷಸಃ ಪುರಸ್ತಾತ್ಪ್ರತೀಚ್ಯಾಗಾದಧಿ ಹರ್ಮ್ಯೇಭ್ಯಃ ॥೨॥

॥ ಪದಪಾಠಃ ॥

ಪ್ರ । ಮೇ । ಪಂಥಾಃ । ದೇವಽಯಾನಾಃ । ಅದೃಶ್ರನ್ । ಅಮರ್ಧಂತಃ । ವಸುಽಭಿಃ । ಇಷ್ಕೃತಾಸಃ ॥
ಅಭೂತ್ । ಊಂ ಇತಿ । ಕೇತುಃ । ಉಷಸಃ । ಪುರಸ್ತಾತ್ । ಪ್ರತೀಚೀ । ಆ । ಅಗಾತ್ । ಅಧಿ । ಹರ್ಮ್ಯೇಭ್ಯಃ ॥ ೨ ॥

॥ ಸಾಯಣಭಾಷ್ಯಂ ॥

ಮೇ ಮಯಾ ದೇವಯಾನಾ ದೇವಪ್ರಾಪಕಾಃ ಪಂಥಾಃ ಪಂಥಾನಃ ಪ್ರಾದೃಶ್ರನ್ । ಪ್ರದೃಶ್ಯಂತೇ । ಕೀದೃಶಾಃ ಪಂಥಾನಃ । ಅಮರ್ಧಂತೋಽಹಿಂಸಂತೋ ವಸುಭಿಸ್ತೇಜೋಭಿರಿಷ್ಕೃತಾಃ ಸಂಸ್ಕೃತಾಃ । ಪುರಸ್ತಾತ್ ಪೂರ್ವಸ್ಯಾಂ ದಿಶ್ಯುಷಸಃ ಕೇತುಃ ಪ್ರಜ್ಞಾಪಕಂ ತೇಜೋಽಭೂತ್ । ಅಚೇತಿ । ಜ್ಞಾಯತೇ । ಸೋಷಾಶ್ಚ ಪ್ರತೀಚೀ ಪ್ರತ್ಯಗಂಚನಾಸ್ಮದಭಿಮುಖೀ ಹರ್ಮ್ಯೇಭ್ಯೋಽಧ್ಯುಚ್ಛ್ರಿತೇಭ್ಯಃ ಪ್ರದೇಶೇಭ್ಯಃ । ಹರ್ಮ್ಯಶಬ್ದ ಉನ್ನತಪ್ರದೇಶೋಪಲಕ್ಷಕಃ । ಆಗಾತ್ । ಆಗಚ್ಛತಿ ॥

॥ ಪ್ರತಿಪದಾರ್ಥ ॥

**ಅಮರ್ಧಂತಃ**—ಹಿಂಸಾರಹಿತವಾದುವೂ । **ವಸುಭಿಃ**—ತೇಜಸ್ಸುಗಳಿಂದ । **ಇಷ್ಕೃತಾಸಃ**—ಪೂರ್ಣವಾದವೂ । **ದೇವಯಾನಾಃ**—ದೇವತೆಗಳನ್ನು ಕರೆತರುವುವೂ ಆದ । **ಪಂಥಾಃ**—ಮಾರ್ಗಗಳು । **ಮೇ**—

ನನ್ನಿಂದ । **ಪ್ರ ಅದೃಶ್ರನ್**—ನೋಡಲ್ಪಡುತ್ತಿವೆ । **ಪುರಸ್ತಾತ್**—ಪೂರ್ವದಿಕ್ಕಿನಲ್ಲಿ । **ಉಷಸಃ**—ಉಷಸ್ಸಿನ । **ಕೇತುಃ**—ಪ್ರಜ್ಞಾಪಕವಾದ ತೇಜಸ್ಸು । **ಅಭೂತ್**—ಗೋಚರವಾಗಿದೆ । **ಪ್ರತೀಚೀ**—ಪಶ್ಚಿಮದಿಕ್ಕಿನಲ್ಲಿ । **ಹರ್ಮ್ಯೇಭ್ಯಃ ಅಧಿ**—ಉನ್ನತವಾದ ಪ್ರದೇಶಗಳಲ್ಲಿ । **ಆಗಾತ್**—ಹಾದು ಬರುತ್ತದೆ

। ಭಾವಾರ್ಥ ।

ಹಿಂಸಾರಹಿತವೂ, ತೇಜಸ್ಸುಗಳಿಂದ ಪೂರ್ಣವಾದವೂ, ದೇವತೆಗಳನ್ನು ಕರೆತರುವುವೂ ಆದ ಮಾರ್ಗಗಳು ನನ್ನಿಂದ ನೋಡಲ್ಪಡುತ್ತಿವೆ ಉಷಸ್ಸಿನ ಧ್ವಜದಂತಿರುವ ತೇಜಸ್ಸು ಪೂರ್ವದಿಕ್ಕಿನಲ್ಲಿ ಗೋಚರವಾಗಿದೆ ಪಶ್ಚಿಮ ದಿಕ್ಕಿನಲ್ಲಿ ಉನ್ನತವಾದ ಪ್ರದೇಶಗಳಲ್ಲಿ ಹಾದು ಬರುತ್ತವೆ

## English Translation

The paths that lead to the gods are beheld by me, innocuous and glorious with light the banner of Ushas is displayed in the east, she comes to the west, rising above high places

। ಸಂಹಿತಾಪಾಠಃ ।

ತಾನೀದಹಾನಿ ಬಹುಲಾನ್ಯಾಸನ್ಯಾ ಪ್ರಾಚೀನಮುದಿತಾ ಸೂರ್ಯಸ್ಯ ।
ಯತಃ ಪರಿ ಜಾರಇವಾಚರಂತ್ಯುಷೋ ದದೃಕ್ಷೇ ನ ಪುನರ್ಯತೀವ ॥ ೩ ॥

। ಪದಪಾಠಃ ।

ತಾನಿ । ಇತ್ । ಅಹಾನಿ । ಬಹುಲಾನಿ । ಆಸನ್ । ಯಾ । ಪ್ರಾಚೀನಂ । ಉತ್ಽಇತಾ । ಸೂರ್ಯಸ್ಯ ।
ಯತಃ । ಪರಿ । ಜಾರಃಽಇವ । ಆಽಚರಂತೀ । ಉಷಃ । ದದೃಕ್ಷೇ । ನ । ಪುನಃ । ಯತೀಽಇವ ॥ ೩ ॥

। ಸಾಯಣಭಾಷ್ಯಂ ।

ಹೇ ಉಷಃ ತಾನೀತ್ತಾನ್ಯೇವ ತವ ತೇಜಾಂಸಿ ಬಹುಲಾನ್ಯಹಾನ್ಯಾಸನ್ । ಉಷಃಪ್ರಕಾಶಯುಕ್ತಸ್ಯೈವ ಕಾಲಸ್ಯಾಹಃಶಬ್ದವ್ಯವಹಾರಾತ್ । ತಾನೀತ್ಯುಕ್ತಂ ಕಾನೀತ್ಯಾಹ । ಯಾ ಯಾನಿ ಸೂರ್ಯಸ್ಯೋದಿತೋದಿತಾವುದಯೇ ಸತಿ ಪ್ರಾಚೀನಂ ತಸ್ಯ ಪ್ರಾಗ್ದೇಶಂ ಪ್ರತ್ಯುದಯಂತಿ । ಯದ್ವಾ । ಸೂರ್ಯಸ್ಯ ಪ್ರಾಚೀನೇ ದೇಶೇ ಯಾ ಯಾನ್ಯುದಿತೋದಿತಾನಿ ತಾನೀತ್ಯರ್ಥಃ । ಹೇ ಉಷಃ ಯತೋ ಯೈಸ್ತೇಜೋಭಿಃ ಪರಿ ದದೃಕ್ಷೇ ದೃಶ್ಯಸೇ ತ್ವಂ । ಜಾರ ಇವ ಪತ್ಯಾಪಿವಾಚರಂತೀ ಸಮೀಪೇ ಸಂಚರಂತೀ ಸಾಧ್ವೀ ನಾರೀವ ಜಾರೇ ರಾತ್ರೇರ್ಜರಯಿತರಿ ಸೂರ್ಯೇ ಸಂಚರಂತೀ ತ್ವಂ ದೃಶ್ಯಸೇ । ಯಥಾ ಲೋಕೇ ದುಷ್ಟಂ ಭ್ರಮಣಶೀಲಮಪಿ ಪತಿಮತ್ಯಜ್ಯೈವ ಸಾಧ್ವೀ ಸಂಚರತಿ ತದ್ವತ್ ತಮವಿಮುಂಚತೀ ತ್ವಮಿ-

ತ್ಯರ್ಥಃ । ನ ಪುನರ್ಯಾತೀವ ಯತೀ ಪತಿಂ ಪರಿತ್ಯಜ್ಯೇತಸ್ತತಃ ಸಂಚರಂತೀ ವ್ಯಭಿಚಾರಿಣೀವ ಸೂರ್ಯ-ಮಪರಿತ್ಯಜಂತೀ ತ್ವಂ । ಪುನರಿತ್ಯಯಂ ನೈಲಕ್ಷಣ್ಯದ್ಯೋತನಾರ್ಥಃ । ಏವಂ ಯೈಸ್ತೇಜೋಭಿರ್ಯುಕ್ತಾ ಪರಿದೃಶ್ಯಸೇ ತಾನ್ಯೇವಾಹಾನ್ಯಾಸನ್ನಿತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ಉಷಃ**--ಎಲೈ ಉಷೋದೇವಿಯೇ । **ಯಾ**—ಯಾವ ನಿನ್ನ ತೇಜಸ್ಸುಗಳು । **ಸೂರ್ಯಸ್ಯ**—ಸೂರ್ಯನ । **ಉದಿತಾ**—ಉದಯಕಾಲದಲ್ಲಿ । **ಪ್ರಾಚೀನಂ**—ಪೂರ್ವದಿಕ್ಕನ್ನು ಆಶ್ರಯಿಸುವುವೋ । **ತಾನೀತ್**—ಅದೇ ತೇಜಸ್ಸುಗಳು । **ಬಹುಲಾನಿ ಅಹಾನಿ**—ಅನೇಕ ದಿವಸಗಳಲ್ಲಿ । **ಆಸನ್**—ಆವಿರ್ಭೂತವಾಗಿವೆ । **ಜಾರಇವ ಆಚರಂತೀ**—ಸಾಧ್ವಿಯು ಪತಿಪುರುಷನಲ್ಲಿ ವ್ಯವಹರಿಸುವಂತೆ । **ಯತಃ**—ನಿನ್ನ ಅದೇ ತೇಜಸ್ಸುಗಳಿಂದ । **ಪರಿದದೃಶೇ**—ಸೂರ್ಯನ ಸುತ್ತಲೂ ಗೋಚರಳಾಗುತ್ತೀಯೆ । **ನ ಪುನಃ ಯತೀವ**—ಪತಿಯನ್ನು ತ್ಯಜಿಸಿ ಬೇರೆ ಗಮನವುಳ್ಳ ಸ್ತ್ರೀಯಂತೆ ವ್ಯವಹರಿಸುವುದಿಲ್ಲ

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಯಾವ ನಿನ್ನ ತೇಜಸ್ಸುಗಳು ಸೂರ್ಯನ ಉದಯ ಕಾಲದಲ್ಲಿ ಪೂರ್ವದಿಕ್ಕನ್ನು ಆಶ್ರಯಿಸುವುವೋ ಅದೇ ತೇಜಸ್ಸುಗಳು ಅನೇಕ ದಿವಸಗಳಲ್ಲಿ ಆವಿರ್ಭೂತವಾಗಿವೆ ಸಾಧ್ವಿಯು ತನ್ನ ಪತಿಯಲ್ಲಿ ವ್ಯವಹರಿಸುವಂತೆ ನಿನ್ನ ಅದೇ ತೇಜಸ್ಸುಗಳೊಡಗೂಡಿ ಸೂರ್ಯನ ಸುತ್ತಲೂ ಗೋಚರಳಾಗುತ್ತೀಯೆ ಪತಿಯನ್ನು ತ್ಯಜಿಸಿ ಬೇರೆ ಪುರುಷನಲ್ಲಿ ಗಮನವುಳ್ಳ ದುಷ್ಟಸ್ತ್ರೀಯಂತೆ ವ್ಯವಹರಿಸುವುದಿಲ್ಲ

## English Translation

Many are the days that have dawned before the rising of the sun, on which you, Ushas, have been beheld like a wife repairing to an inconstant husband, and not like one deserting him

॥ ಸಂಹಿತಾಪಾಠಃ ॥

ತ ಇದ್ದೇವಾನಾಂ ಸಧಮಾದ ಆಸನ್ನೃತಾವಾನಃ ಕವಯಃ ಪೂರ್ವ್ಯಾಸಃ ।
ಗೂಳ್ಹಂ ಜ್ಯೋತಿಃ ಪಿತರೋ ಅನ್ವವಿಂದನ್ಸತ್ಯಮಂತ್ರಾ ಅಜನಯನ್ನು-
ಷಾಸಂ ॥ ೪ ॥

॥ ಪದಪಾಠಃ ॥

ತೇ । ಇತ್ । ದೇವಾನಾಂ । ಸಧಽಮಾದಃ । ಆಸನ್ । ಋತಽವಾನಃ । ಕವಯಃ । ಪೂರ್ವ್ಯಾಸಃ । ಗೂಳ್ಹಂ । ಜ್ಯೋತಿಃ । ಪಿತರಃ । ಅನು । ಅವಿಂದನ್ । ಸತ್ಯಽಮಂತ್ರಾಃ । ಅಜನಯನ್ । ಉಷಸಂ ॥೪॥

